ಇಲ್ಲದವನೂ, ಸ್ವರೂಪನಾಶ, ದೇಹನಾಶ, ದುಃಖಪ್ರಾಪ್ತಿ, ಅಪೂರ್ಣತೆ ಎಂಬ ನಾಲ್ಕು ವಿಧ ನಾಶಗಳಿಲ್ಲದವನೂ, ಆದ ಶ್ರೀಹರಿಯನ್ನು ಸದಾ ಸ್ವೇಚ್ಛೆಯಿಂದಲೇ ಧ್ಯಾನಿಸುವೆವು.

**ವಿಶೇಷಾಂಶ ||** (1) ಲೋಕದಲ್ಲಿ ನಾನಾವಿಧಗಳಾದ ಸಾಂಸಾರಿಕ ದುಃಖಗಳ ಅನುಭವವನ್ನು ಹೊಂದಿ ಶಮದಮಾದಿಸಂಪನ್ನರಾದ ಅಧಿಕಾರಿಗಳಿಗೆ ಸಂಪೂರ್ಣ ಅನಿಷ್ಟವನ್ನು ಹೋಗಲಾಡಿಸಿ ಇಷ್ಟಪ್ರಾಪ್ತಿಯಾಗಲಿಕ್ಕೆ ಸಾಧನವಾದ ಭಗವತ್ಸ್ವರೂಪವನ್ನು ಇದ್ದಹಾಗೆ ತಿಳಿಸುವುದಕ್ಕಾಗಿ ಛಾಂದೋಗ್ಯೋಪನಿಷತ್ತು ಉಂಟಾಗಿದೆ (2) ಅದಕ್ಕೆ ಅದ್ವೈತಿಗಳು ತಮ್ಮ ಇಚ್ಛಾನುಸಾರ ಅರ್ಥಮಾಡಿದ ಕಾರಣ ಅದು ಭಗವತ್ಸ್ವರೂಪವನ್ನು ಸರಿಯಾಗಿ ತಿಳಿಸಲಿಕ್ಕೆ ಸಮರ್ಥವಾಗಲಾರದೆಂದು ಶ್ರೀಮದಾಚಾರ್ಯರು ತಿಳಿದು ಯೋಗ್ಯವಾದ ಅರ್ಥವನ್ನು ಮಾಡಲು ಎಣಿಸಿ ತನಗೆ ಯಾವ ವಿಘ್ನಗಳು ಇಲ್ಲದಿದ್ದರೂ ಪ್ರತಿಯೊಬ್ಬರೂ ಕಾರ್ಯಾರಂಭದಲ್ಲಿ ಮಂಗಲಮಾಡಬೇಕೆಂದು ತಿಳಿಸಿಕೊಡುವುದಕ್ಕಾಗಿ ಶ್ರೀಹರಿಯ ಉಪಾಸನೆಯೆಂಬ ಮಂಗಲವನ್ನು ಗ್ರಂಥದ ಬುಡದಲ್ಲಿ ಮಾಡಿರುವರು. || ೧ ||

**ಪೀಠಿಕೆ**—(1) ದೇವತೆ, ಋಷಿ, ಛಂದಸ್ಸು ಇವುಗಳನ್ನು ತಿಳಿಯದೆ ಉಪನಿಷತ್ತನ್ನು ಓದಿದರೆ ಅರಿಷ್ಟವಿದ್ದ ಕಾರಣ ಅವುಗಳನ್ನು ತಿಳಿಸುತ್ತಾರೆ. ಗದ್ಯರೂಪವಾಗಿರುವುದರಿಂದ ಇದಕ್ಕೆ ಛಂದಸ್ಸು ಇಲ್ಲ. (2) ಈ ಉಪನಿಷತ್ತಿಗೆ ಹಯಗ್ರೀವರೂಪಿ ಶ್ರೀಹರಿಯು ಮುಖ್ಯ ಋಷಿಯು. (ಮೊದಲು ಮಂತ್ರವನ್ನು ಕಂಡುಹಿಡಿದವನು) ಲಕ್ಷ್ಮೀದೇವಿಯು ಅಮುಖ್ಯವಾಗಿ ಮಂತ್ರವನ್ನು ಕಂಡುಹಿಡಿದವಳು. ಶೇಷಶಾಯಿಯಾದ ಶ್ರೀಹರಿಯು ದೇವತೆಯೂ ಎನ್ನುತ್ತಾರೆ—

**ಭಾ. ||** ಹಯಗ್ರೀವಮುಖೋದ್ಗೀರ್ಣಗೀರ್ಭಿರ್ದೇವೀ ರಮಾಪತಿಂ । ಅಸ್ತು-ವದ್ವಿಸ್ತೃತಗುಣಂ ಭೋಗಿಪ್ರಸ್ತರಶಾಯಿನಂ || ೨ ||

**ಅ ||** ಲಕ್ಷ್ಮೀ ದೇವಿಯು ಹಯಗ್ರೀವದೇವರ ಮುಖದಿಂದ ಹೊರಟಿರುವ ವಚನಗಳಿಂದ ಬಹುಗುಣಗಳುಳ್ಳವನೂ, ಶೇಷನೆಂಬ ಹಾಸಿಗೆಯಲ್ಲಿ ಮಲಗಿಕೊಂಡಿರುವವನೂ, (ಅಂದರೆ ಶೇಷಶಾಯಿಯೂ) ಲಕ್ಷ್ಮೀಪತಿಯೂ ಆದ ಶ್ರೀಪರಮಾತ್ಮನನ್ನು ಸ್ತೋತ್ರಮಾಡಿದಳು. || ೨ ||

## ೧ನೇ ಖಂಡವು.

**ಉಪನಿಷತ್ ||** ಹರಿಃ ಓಂ || ಆಪ್ಯಾಯಂತು ಮಮಾಂಗಾನಿ ವಾಕ್ ಪ್ರಾಣಶ್ಚಕ್ಷುಃ ಶ್ರೋತ್ರಮಥೋ ಬಲಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೌಪನಿಷದಂ ಮಾಹಂ ಬ್ರಹ್ಮ ನಿರಾಕುರ್ಯಾಂ ಮಾ ಮಾ ಬ್ರಹ್ಮ ನಿರಾ-ಕರೋದನಿರಾಕರಣಮಸ್ತ್ವನಿರಾಕರಣಂ ಮೇ ಅಸ್ತು ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು ತೇ ಮಯಿ ಸಂತು || ಓಂ ಶಾಂತಿಃ ಶಾಂತಿಃ ಶಾಂತಿಃ || ಓಮಿತ್ಯೇತದಕ್ಷರಮುದ್ಗೀಥಮುಪಾಸೀತೋಮಿತಿ ಹ್ಯು-ದ್ಗಾಯತಿ ತಸ್ಯೋಪವ್ಯಾಖ್ಯಾನಂ || ೧ ||

**ಅ ||** ಉದ್ಗಾತನೆಂಬ ಋತ್ವಿಜನು ಶ್ರೀಹರಿಯನ್ನುದ್ದೇಶಿಸಿ ಓಂ ಎಂದು ಉಚ್ಚರಿಸಿ ಉತ್ಕೃಷ್ಟಗಾನ ಮಾಡುತ್ತಾನೆ. ಆದಕಾರಣ ಓಂ ಎಂದು ಹೆಸರುಳ್ಳವನೂ, ನಿಯಾಮಕನಾಗಿ ಜಗತ್ತಿನಲ್ಲಿ ಪ್ರವೇಶಮಾಡಿ

ದವನೂ ಮತ್ತು ಸರ್ವಜ್ಞನೂ, ಸರ್ವರ ಹೃದಯದಲ್ಲಿರುವವನೂ, ನಾಶವಿಲ್ಲದವನೂ, ಸರ್ವೋತ್ತಮನೂ, ಎಲ್ಲಾ ವೇದಗಳಲ್ಲಿ ಸ್ತುತಿಸಲ್ಪಡುವವನೂ, ಸರ್ವಾಶ್ರಯನೂ ಆದ ಶ್ರೀಹರಿಯನ್ನು ಉಪಾಸನಾಮಾಡಬೇಕು. (ಅಂದರೆ, ಹರಿಯನ್ನು ಸ್ತುತಿಸುವ ಶಾಸ್ತ್ರಗಳ ಶ್ರವಣ, ಮನನ, ಧ್ಯಾನಗಳನ್ನು ಮಾಡಬೇಕು.) ಸರ್ವೋತ್ತಮನೆಂದು ವೇದಗಳು ಹೇಳುವುದರಿಂದ ಓಂ ಎನ್ನಿಸಿಕೊಂಡ ಶ್ರೀಹರಿಯು ಸರ್ವರಿಂದಲೂ ಉತ್ತಮನೆಂದು ಸ್ಪಷ್ಟವಾಗಿ ಹೇಳುತ್ತೇವೆ. ಅಥವಾ ಅಕ್ಷರ ಎನ್ನಿಸಿಕೊಂಡ ಶ್ರೀಹರಿಯ ಗುಣಗಳನ್ನು ಹೇಳುವ ಪ್ರಣವಕ್ಕೆ ಶ್ರೀಹರಿಯು ಸರ್ವೋತ್ತನೆಂದು ಅರ್ಥ ಹೇಳಿದ್ದೂ ಯುಕ್ತವು.

ವಿ || (1) * ಉದ್ಗೀಥವೆಂಬ ಸಾಮಶ್ರುತಿಪಾದ್ಯನೂ, ಓಂ ಎಂಬ ಪ್ರಣವಪ್ರತಿಪಾದ್ಯನೂ ಆದ ಶ್ರೀಹರಿಯ ಉಪಾಸನೆಯನ್ನು ಆದಿಯಲ್ಲಿ ಹೇಳಿದರು. (2) **ದೇವ ಸವಿತಃ ಪ್ರಸುವ । ಯಜ್ಞಂ ಪ್ರಸುವ । ಯಜ್ಞಪತಿಂ ಭಗಾಯ** ಇದು ಮೊದಲಾದ ೧ನೇ ೨ನೇ ಅಧ್ಯಾಯಗಳಲ್ಲಿ ಅಂತಃಕರಣ ಶುದ್ಧಿಯಾಗಿ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಸಿದ್ಧಿಸುವುದಕ್ಕಾಗಿ ಕರ್ಮಸ್ವರೂಪವನ್ನು ಹೇಳಿರುವರು. **ಓಮಿತ್ಯೇತದಕ್ಷರಂ** ಇತ್ಯಾದಿ ೩ನೇ ಅಧ್ಯಾಯ ಮೊದಲುಗೊಂಡು ಸಂಪೂರ್ಣ ಉಪನಿಷತ್ತಿನಿಂದ ಕರ್ಮಗಳಿಂದ ಅಂತಃಕರಣವನ್ನು ಶುದ್ಧಪಡಿಸಿಕೊಂಡು ವೈರಾಗ್ಯವನ್ನು ಹೊಂದಿರುವ ಅಧಿಕಾರಿಗಳನ್ನುದ್ದೇಶಿಸಿ ಬ್ರಹ್ಮಸ್ವರೂಪವನ್ನು ಹೇಳುತ್ತಾರೆ. (3) ೧ನೇ ೨ನೇ ಅಧ್ಯಾಯಗಳಲ್ಲಿ ಕರ್ಮಗಳ ವಿಷಯಗಳನ್ನು ಹೇಳುವುದರಿಂದಲೂ, ಬೇರೆ ಬಾಷ್ಯಕಾರರು ಅವುಗಳಿಗೆ ಅರ್ಥ ಬರೆಯದಿರುವ ಪ್ರಯುಕ್ತ ವಿವಾದವಿಲ್ಲದಿರುವುದರಿಂದಲೂ ಆ ಎರಡು ಅಧ್ಯಾಯಗಳನ್ನು ಬಿಟ್ಟು ೩ನೇ ಅಧ್ಯಾಯ ಮೊದಲುಗೊಂಡು ಶ್ರೀಮದಾಚಾರ್ಯರು ಅರ್ಥ ಬರದಿರುವರು. || ೧ ||

ಭಾ. || (೧) **ಓಮಿತಿನಾಮಕಮಕ್ಷರಂ ಸರ್ವಸನ್ನಿಹಿತತ್ವಾದೇತತ್ । ಉಚ್ಚತ್ವಾತ್ ಗೀತತ್ವಾತ್ಸರ್ವಸ್ಥಾನತ್ವಾಚ್ಚೋದ್ಗೀಥಂ ಭಗವಂತಮುಪಾಸೀತ || (೨) ಉಕ್ತಂ ಚ ಮಹಾಸಂಹಿತಾಯಾಂ । ಹಯಗ್ರೀವೋದ್ಗೀತವಾಕ್ಯೈ ರಮಾದೇವೀ ರಮಾಪತಿಂ । ಓಮಿತ್ಯೇತನ್ಮುಖ್ಯೈರ್ದೇವಮಸ್ತುವತ್ಸಾಮವೇದಗೈಃ || ಇತಿ || (೩) ಓಂನಾಮಾನಮುಪಾಸೀತ ತದರ್ಥಗುಣಪೂರ್ವಕಂ । ಓತತ್ವಾದವನಾನ್ನಾನಾದಧಿಕೋಚ್ಚತ್ವಕಾರಣಾತ್ || ಆನಂದಾದೋಜಸಶ್ಚೈವ ಭರಣಾದೋಮುದಾಹೃತಃ । ಇತಿ ಸಮನ್ವಯೇ || (೪) ಓತಮಸ್ಮಿನ್ ಜಗತ್ಸರ್ವಮತ್ಯುಚ್ಚಶ್ಚಾಖಿಲೈರ್ಗುಣೈಃ । ಇತ್ಯೋಮಿತಿ ಸದೋಪಾಸ್ಯಃ ಸೋಽಕ್ಷಯಃ(ರಃ) ಪುರುಷೋತ್ತಮಃ** || ೧ ||

ಅ || (1) ಶ್ರೀಹರಿಯು ಓಂ ಎಂದೂ, ಅಕ್ಷರನೆಂದೂ, ಸರ್ವತ್ರವ್ಯಾಪಿಸಿಕೊಂಡಿರುವುದರಿಂದ ಏತತ್ ಎಂದೂ ಅನ್ನಿಸಿಕೊಳ್ಳುತ್ತಾನೆ ಸರ್ವೋತ್ತಮನಾದುದರಿಂದ ಉತ್, ವೇದಗಳಿಂದ ಗಾನಮಾಡಲ್ಪಡುವುದರಿಂದ ಗೀ, ಸರ್ವರಿಗೆ ಆಶ್ರಯನಾದುದುದರಿಂದ ಥ, ಹೀಗೆ ಉದ್ಗೀಥ ಎನ್ನಿಸಿಕೊಳ್ಳುವ ಶ್ರೀಹರಿಯನ್ನು ಧ್ಯಾನಿಸಬೇಕು (2) ಈ ವಿಷಯವನ್ನು ನಾವು ಮಾತ್ರ ಹೇಳಿದ್ದಲ್ಲ. ಮಹಾಸಂಹಿತೆಯಲ್ಲಿಯೂ ಹೇಳಿದೆ. ಲಕ್ಷ್ಮೀದೇವಿಯು ಕ್ರೀಡಾದಿಗುಣಗಳಿಂದ ಕೂಡಿದ ಶ್ರೀಹರಿಯನ್ನು ಸಾಮವೇದದಲ್ಲಿರತಕ್ಕ, **ಓಮಿತ್ಯೇತದಕ್ಷರಂ** ಎಂಬುದೇ ಮೊದಲಾಗಿಯುಳ್ಳ, ಹಯಗ್ರೀವದೇವರ ಮುಖದಿಂದ ಹೊರಟಿರುವ ವಾಕ್ಯ(ಮಾತು)ಗಳಿಂದ ಸ್ತೋತ್ರಮಾಡಿದಳು. (3) ಓಂ ಎನ್ನುವುದರ ಅರ್ಥಭೂತಗಳಾದ ಗುಣಗಳನ್ನು ತಿಳಿದುಕೊಂಡು ಓಂ ಎಂದು ಹೆಸರುಳ್ಳ ಶ್ರೀಹರಿಯನ್ನು ಧ್ಯಾನಿಸಬೇಕು. ಸರ್ವಗುಣಪರಿಪೂರ್ಣನು ಸರ್ವರನ್ನು ರಕ್ಷಿಸು

* ಪ್ರಸ್ತಾವ, ಪ್ರತಿಹಾರ, ಉದ್ಗೀಥ, ಉಪದ್ರವ, ನಿಧನ ಎಂದು ಸಾಮದಲ್ಲಿ ಐದು ಅಂಶಗಳು.

ವವನು, ಜ್ಞಾನಸ್ವರೂಪನು, ಸರ್ವೋತ್ತಮನು, ಸರ್ವಜಗತ್ತನ್ನು ಸೃಷ್ಟಿಸುವವನು, ಆನಂದಸ್ವರೂಪನು, ಶಾಂತಿಸ್ವರೂಪನು ಸರ್ವರನ್ನು ಪೋಷಿಸುವವನು, ಆದಕಾರಣ ಶ್ರೀಹರಿಯು ಓಂ ಎಂದು ಹೇಳಿಸಿಕೊಳ್ಳು ತ್ತಾನೆ, ಎಂದು ಸಮನ್ವಯವೆಂಬ ಗ್ರಂಥದಲ್ಲಿ ಇದೆ. (4) ಇಡೀ ಜಗತ್ತು ಶ್ರೀಹರಿಯನ್ನು ಆಶ್ರಯಿಸಿ ಕೊಂಡಿದೆ ಶ್ರೀಹರಿಯು ಸರ್ವಗುಣಗಳಿಂದ ಪರಿಪೂರ್ಣನು. ಆದಕಾರಣ ನಾಶವಿಲ್ಲದಿರುವ ಪುರು ಷೋತ್ತಮನನ್ನು ಸದಾ ಓಂ ಎಂದು ಉಪಾಸನೆಮಾಡಬೇಕು. ॥ ೧ ॥

**ಭಾ. ॥ (೧) ಉಚ್ಚತ್ವಾದ್ಗೀಯಮಾನತ್ವಾತ್ ಸ್ಥಾನಾದುದ್ಗೀಥ ಉಚ್ಯತೇ । ಓಮಿ- ತ್ಯೇನಂ ಸಮುದ್ದಿ(ಮಾದಿ)ಶ್ಯ ಹ್ಯುದ್ಗಾತಾ ಗಾಯತಿ ಸ್ಫುಟಂ ॥ (೨) ವಿಷ್ಣೋರೋಮಿತಿ ನಾಮ್ನೋಽಸ್ಯ ವ್ಯಾಖ್ಯಾನಮಧಿಕೋಚ್ಚತಾ । ಅಕಾರೇಣಾಧಿಕಂ ಪ್ರೋಕ್ತಮುಕಾರೇಣೋ- ಚ್ಚಮುಚ್ಯತೇ ॥ ತಥಾ ಮಿತಂ ಸರ್ವವೇದೈರ್ಮಕಾರೇಣಾಭಿಧೀಯತೇ । ಅಧಿಕೋಚ್ಚಮಿತಿ ಜ್ಞಾತಮೋಮಿತ್ಯಸ್ಯಾರ್ಥ ಈರಿತಃ ॥ ೧ ॥ ॥ ೨ ॥**

ಅ ॥ (೧) ಉದ್ಗಾತನೆಂಬ ಋತ್ವಿಜನು ಓಂ ಎಂದು ಉಚ್ಚರಿಸಿ ಶ್ರೀಹರಿಯನ್ನು ಚೆನ್ನಾಗಿ ಸ್ಪಷ್ಟ ವಾಗಿ ಗಾನಮಾಡುತ್ತಾನೆ. (೨) ಶ್ರೀಹರಿಯು ಸರ್ವೋತ್ತಮನೆಂಬುದು ಶ್ರೀ ವಿಷ್ಣುವಿನ ಓಂ ಎಂಬ ನಾಮದ ಅರ್ಥವು. (ಇದು ಒಂಕಾರದ ಅರ್ಥವು ಹೇಗೆ ಆಗುವುದೆಂದರೆ,) ಓಂ ಎಂಬಲ್ಲಿದ್ದ, ಅಕಾರದಿಂದ ಸರ್ವಾಧಿಕನೆಂದೂ, ಉಕಾರದಿಂದ ಸರ್ವೋತ್ತಮನೆಂದೂ, ಮಕಾರದಿಂದ ಹಾಗೆ ಸರ್ವೋತ್ತಮನೆಂಬು ವುದು ವೇದಗಳಿಂದ ತಿಳಿಯಲ್ಪಡುತ್ತಾನೆ (ಅಂದರೆ ವೇದಗಳಲ್ಲಿ ಹಾಗೆ ಹೇಳಿದೆ ಎಂದೂ) ಹೀಗೆ ಓಂ ಎನ್ನು ವುದಕ್ಕೆ ಸರ್ವೋತ್ತಮನೆಂದು ತಿಳಿಯಲ್ಪಡುವವನು ಎಂದು ಅರ್ಥವು. ॥ ೧ ॥ ॥ ೨ ॥

ಟೀ—ಬ್ರಹ್ಮಾದಿದೇವತೆಗಳಲ್ಲಿ ತಾರತಮ್ಯ ತಿಳಿದುಕೊಂಡು ಶ್ರೀಹರಿಯು ಸರ್ವೋತ್ತಮನು ಎಂದು ತಿಳಿದರೇನೇ ಮೋಕ್ಷವು ಲಭಿಸುವುದರಿಂದ ಅಂತಹ ನೀಚೋಚ್ಚಭಾವವನ್ನು ಹೇಳುತ್ತಾ ಶ್ರೀಹರಿಯೇ ಸರ್ವೋತ್ತಮನೆನ್ನುತ್ತಾರೆ—

**ಉ. ॥ ಏಷಾಂ ಭೂತಾನಾಂ ಪೃಥಿವೀ ರಸಃ ಪೃಥಿವ್ಯಾ ಆಪೋ ರಸೋ- ಽಪಾಮೋಷಧಯೋ ರಸ ಓಷಧೀನಾಂ ಪುರುಷೋ ರಸಃ ಪುರುಷಸ್ಯ ವಾ- ಗ್ರಸೋ ವಾಚ ಋಗ್ರಸ ಋಚಃ ಸಾಮ ರಸಃ ಸಾಮ್ನ ಉದ್ಗೀಥೋ ರಸಃ ಸ ಏಷ ರಸಾನಾಂ ರಸತಮಃ ಪರಮಃ ಪರಾರ್ಧ್ಯೋಽಷ್ಟಮೋ ಯ ಉ- ದ್ಗೀಥಃ ॥ ೨ ॥**

ಅ ॥ ಪಂಚಭೂತಾಭಿಮಾನಿಗಳಾದ ಋಭ್ವಾದಿ ದೇವತೆಗಳಿಗಿಂತ ಪೃಥಿವಿಗೆ ಅಭಿಮಾನಿನಿಯಾದ ಧರಾದೇವಿಯು ಸರ್ವಗುಣಗಳೂ ಹೆಚ್ಚು ಇದ್ದವಳು. ಆ ಧರಾದೇವಿಗಿಂತ ಜಲಾಭಿಮಾನಿಯಾದ ವರುಣನು ಶ್ರೇಷ್ಠನು. ವರುಣನಿಗಿಂತ ಪಕ್ವಫಲಗಳುಳ್ಳ ವೃಕ್ಷಗಳಿಗೆ ಅಭಿಮಾನಿಯಾದ ಚಂದ್ರನು ಶ್ರೇಷ್ಠನು. ಚಂದ್ರನಿಗಿಂತ ಪುಂಸ್ತ್ವಕ್ಕೆ ಅಭಿಮಾನಿಯಾದ ಸದಾಶಿವನು ಶ್ರೇಷ್ಠನು, ಅವನಿಗಿಂತ ವಾಗಭಿ ಮಾನಿನಿಯಾದ ಸರಸ್ವತಿಯು ಶ್ರೇಷ್ಠಳು. ಅವಳಿಗಿಂತ ಋಗ್ವೇದಕ್ಕೆ ಅಭಿಮಾನಿನಿಯಾದ *ಸರಸ್ವತಿಯು

* ಸರಸ್ವತಿಗೆ ಚತುರ್ಮುಖನ ಸಂಯೋಗವಿಶೇಷವಿರುವಾಗ ಅವಳು ಋಗಭಿಮಾನಿನಿಯು. ಅದಿಲ್ಲದಿರುವಾಗ ವಾಗಭಿ ಮಾನಿನಿಯು. ಹೀಗೆ ಬೇರೆಬೇರೆ ಅವಸ್ಥೆಗಳಿಂದ ಸರಸ್ವತಿಗೇನೇ ಉತ್ತಮತ್ವ ಅಧಮತ್ವಗಳನ್ನು ಹೇಳಿದ್ದು

ಶ್ರೇಷ್ಠಳು. ಅವಳಿಗಿಂತ ಸಾಮವೇದಕ್ಕೆ ಅಭಿಮಾನಿಯಾದ ಮುಖ್ಯಪ್ರಾಣನು ಶ್ರೇಷ್ಠನು. ಅವನಿಗಿಂತ ಉದ್ಗೀಥ ಎನ್ನಿಸಿಕೊಂಡ ಶ್ರೀನಾರಾಯಣನು ಶ್ರೇಷ್ಠನು. ಪೃಥಿವಿಗಿಂತ ಎಂಟನೆಯವನಾಗಿ ಹೇಳಲ್ಪಟ್ಟ ಉದ್ಗೀಥ ಎನ್ನಿಸಿಕೊಂಡ ಶ್ರೀಹರಿಯು ಶ್ರೇಷ್ಠರಾದ ಧರಾದಿ ದೇವತೆಗಳಿಗಿಂತ ಅತಿಶ್ರೇಷ್ಠನು, ಉತ್ತಮೋತ್ತಮನು. ಅತಿಶಯ ಉತ್ತಮಗಳಾದ ನಿರವಧಿಕ ಪೂರ್ಣಗುಣಗಳುಳ್ಳವನು.

ವಿ —(1) ವಾಗಾದಿಗಳಿಗಿಂತ ಮುಖ್ಯಪ್ರಾಣನಿಗೆ ಶ್ರೇಷ್ಠತ್ವವಿದ್ದಂತೆ ಮುಖ್ಯಪ್ರಾಣನಿಂದ ಶ್ರೀಹರಿಗೆ ಶ್ರೇಷ್ಠತ್ವವಲ್ಲ, ಮತ್ತೆ ಪರಮಪರಾರ್ಧರಸತಮಳಾದ (ಉತ್ತಮೋತ್ತಮಳಾದ) ಲಕ್ಷ್ಮೀದೇವಿಗಿಂತಲೂ ಶ್ರೀಹರಿಯು ಸಂಖ್ಯೆಯಿಲ್ಲದೆ ಅವಧಿಯಿಲ್ಲದೆ ಉತ್ತಮನೆಂದು ತಿಳಿಯಬೇಕೆಂಬ ಅಭಿಪ್ರಾಯದಿಂದ ಪರಾರ್ಧ್ಯಃ ಎಂದು ಹೇಳಿದ್ದು. (2) ಏವಂಚ ಲೋಕದಲ್ಲಿ † ಪರಾರ್ಧ ಪರ್ಯಂತವೇ ಸಂಖ್ಯೆ ಹೇಳಿದ್ದು. ಆ ಮೇಲೆ ಸಂಖ್ಯಾವ್ಯವಹಾರವೇ ಇಲ್ಲ. ಆದಕಾರಣ ಶ್ರೀಹರಿಯು ಸರ್ವಥಾ ಸಂಖ್ಯೆಗೆ ಗೋಚರನು ಆಗಲಾರನೆಂಬ ಅಭಿಪ್ರಾಯದಿಂದ ಪರಾರ್ಧ್ಯಃ ಎಂದು ಹೇಳಿದ್ದು. ‖ ೨ ‖

**ಭಾ. ‖ (೧) ತದೇತತ್ಪರಮತ್ವಂ ತು ಯಥಾಕ್ರಮಮುದೀರ್ಯತೇ । ದೇವತಾನುಕ್ರಮಜ್ಞಾಶ್ಚ ವಿಷ್ಣೋಃ ಪರಮತಾವಿದಃ । ಏಕಾಂತಿನಸ್ತೇ ವಿಜ್ಞೇಯಾಃ ‖ (೨) ಯಥಾಕ್ರಮಪರಾಸ್ತಥಾ । ಅಸ್ಮಾದಸಾವುಚ್ಚ ಇತಿ ಕ್ರಮಸ್ಯಾಂತಗತಂ ಹರಿಂ । ಏಕಮೇವ ತು ಯೇ ವಿದ್ಯುಸ್ತೇ ಹ್ಯೇಕಾಂತಿನ ಈರಿತಾಃ ‖ (೩) ಏವಂ ಯಥಾಕ್ರಮಜ್ಞಾಶ್ಚ ಸದೈಕಾಂತಪರಾಯಣಾಃ । ಪ್ರವಿಶಂತಿ ಪರಂ ದೇವಂ ನಾರಾಯಣಮನಾಮಯಂ ‖ (೪) ಉಚ್ಚಕ್ರಮಾಂತಗತ್ವೇನ ಕುರ್ಯುಃ ಪೂಜಾಂ ಹರೇಃ ಸದಾ । ಲಕ್ಷ್ಮ್ಯಾದೇಃ ಕ್ರಮಶಃ ಪೂಜಾಂ ಜ್ಞಾತ್ವಾ ಭಾಗವತಾ ಇತಿ । ಸ್ವತಂತ್ರಪೂಜ್ಯತಾಬುದ್ಧ್ಯಾ ನ ದದ್ಯುಃ ಕಿಂ ಚ ಕಸ್ಯಚಿತ್ ‖ ೧ ‖**

ಅ ‖ (೧) ಏಷಾಂ ಭೂತಾನಾಂ ಇತ್ಯಾದಿಗಳಿಂದ ದೇವತೆಗಳ ತಾರತಮ್ಯ ಕ್ರಮವನ್ನನುಸರಿಸಿ ಓಂಕಾರದ ಅರ್ಥವು ಉತ್ತಮೋತ್ತಮತ್ವವೆಂದು ಹೇಳಲ್ಪಡುತ್ತದೆ. (ವಿಷ್ಣುವು ಸರ್ವೋತ್ತಮನೆಂದೇ ಹೇಳಿದರೆ ಸಾಕು. ದೇವತೆಗಳ ತಾರತಮ್ಯವನ್ನು ಏಕೆ ಹೇಳುವುದು? ಎಂದರೆ—) ಬ್ರಹ್ಮಾದಿ ದೇವತೆಗಳಲ್ಲಿ ನೀಚೋಚ್ಚಭಾವವನ್ನು ತಿಳಿದು ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದವರು ಏಕಾಂತಭಕ್ತರು ಎನ್ನಿಸಿಕೊಳ್ಳುತ್ತಾರೆ. (೨) ತಾರತಮ್ಯ ಜ್ಞಾನದಲ್ಲಿ ಮುಖ್ಯತಾತ್ಪರ್ಯವಿರಬೇಕಾಗಿರುವುದರಿಂದ, ಇವನಿಗಿಂತ ಇವನು ಉತ್ತಮನು, ಎಂಬ ತಾರತಮ್ಯದ ಅಂತ್ಯದಲ್ಲಿರುವವನು ಶ್ರೀಹರಿಯು ಒಬ್ಬನೇ ಎಂದು ತಿಳಿಯುವವರು ‡ ಏಕಾಂತಿಗಳು ಎನ್ನಿಸಿಕೊಳ್ಳುತ್ತಾರೆ. (೩) ಹೀಗೆ ತಾರತಮ್ಯವನ್ನು ತಿಳಿದು ಸದಾ ಶ್ರೀಹರಿಯನ್ನೇ ಮುಖ್ಯವಾಗಿ ಆಶ್ರಯಿಸಿಕೊಂಡಿರುವವರು ಸರ್ವೋತ್ತಮನೂ ನಿರ್ದೋಷನೂ ಆದ ಶ್ರೀನಾರಾಯಣನನ್ನು ಹೊಂದುತ್ತಾರೆ. (ಅಂದರೆ ಮೋಕ್ಷಕ್ಕೆ ಹೋಗುತ್ತಾರೆ.) (೪) ಶ್ರೀಹರಿಯು ಉತ್ತಮರಲ್ಲಿ ಕೊನೆಯವನು (ಅಂದರೆ ಸರ್ವೋತ್ತಮನು) ಎಂದು ತಿಳಿದು ಸದಾ ಶ್ರೀಹರಿಗೆ ಪೂಜೆಯನ್ನು ಮಾಡಬೇಕು. ಲಕ್ಷ್ಮೀ ಮೊದಲಾದವರು ಭಗವದ್ಭಕ್ತರು ಎಂದು ತಿಳಿದುಕೊಂಡು ತಾರತಮ್ಯ ಕ್ರಮ

---

† ಏಕಂ ದಶ ಶತಂ ಚೈವ ಸಹಸ್ರಮಯುತಂ ತಥಾ । ಲಕ್ಷಂ ಚ ನಿಯುತಂ ಚೈವ ಕೋಟಿರರ್ಬುದಮೇವ ಚ ‖ ವೃಂದಂ ಖರ್ವೋ ನಿಖರ್ವಶ್ಚ ಶಂಖಃ ಪದ್ಮಶ್ಚ ಸಾಗರಃ ‖ ಅಂತ್ಯಂ ಮಧ್ಯಂ ಪರಾರ್ಧಂ ಚ ದಶವೃದ್ಧ್ಯಾ ಯಥಾಕ್ರಮಂ ‖

‡ ಏಕ ಏವ ಅಂತೇ ವರ್ತತೇ = ಕೊನೆಗೆ ಇರುವವನು ಶ್ರೀಹರಿಯು ಒಬ್ಬನೇ. ಏಕಾಂತಃ ಏಷಾಮಸ್ತಿ ಎಂಬ ವ್ಯುತ್ಪತ್ತಿಯಿಂದ ಚೆನ್ನಾಗಿ ಶ್ರೀಹರಿಯನ್ನು ತಿಳಿದುಕೊಂಡವರು.

ದಿಂದಲೇ ಅವರಿಗೆ ಪೂಜೆ ಮಾಡಬೇಕು. ಅವರನ್ನು ಸ್ವತಂತ್ರವಾಗಿ ಪೂಜಿಸಬಹುದು, ಎಂಬ ಬುದ್ಧಿಯಿಂದ ಯಾವಾಗಲೂ ಯಾರಿಗೂ ಪೂಜೆ ಮಾಡಬಾರದು. (ಮತ್ತೆ ಅವರೆಲ್ಲರೂ ಶ್ರೀಹರಿಯ ಪರಿವಾರರು ಸೇವಕರು ಎಂಬ ಭಾವನೆಯಿಂದಲೇ ಅವರನ್ನು ಪೂಜಿಸಬೇಕು.) ॥ ೧ ॥

ಪೀ—ದೇವತೆಗಳನ್ನು ಸರ್ವೋತ್ತಮರೆಂದು ಪೂಜಿಸಬಾರದು. ಅಪ್ರಧಾನವಾಗಿ ಪೂಜಿಸಬಹುದೆಂದಾದರೆ—**ವಿಪ್ರಕ್ಷತ್ರಿಯವಿಟ್‌ಶೂದ್ರವರ್ಣಭೇದೇನ ಸರ್ವಶಃ । ಮನವೋ ಮಾನವಾಶ್ಚೈವ ಸಂಪೂಜ್ಯಾಃ ನೈವ ದೇವತಾಃ** ಎಂಬ ವಚನವು ಹೇಗೆ ಕೂಡುತ್ತದೆ ಎಂದರೆ—

**ಭಾ. ॥ (೧) ಬ್ರಹ್ಮಾದ್ಯಾ ಮನುಸಂಜ್ಞಾ ಯೇ (ಮನಸಾ ಜಾತಾಯೇ) ವರ್ಣತ್ವೇನೋದಿತಾಃ ಶ್ರುತೌ । ಮಾನವಾಖ್ಯಾಶ್ಚ ಮುನಯಸ್ತಾನ್ಯಜಂತಿ ನ ಚೇತರಾನ್ ॥ (೨) ಪಿತೃತ್ವೇನ ಗುರುತ್ವೇನ ಸಾಕ್ಷಾದ್ಭಾಗವತತ್ವತಃ ॥ (೩) ಅಪಭ್ರಷ್ಟಾ ಅದೇವಾಶ್ಚ ಬ್ರಹ್ಮಾದ್ಯಾಖ್ಯಾಯುತಾ ಅಪಿ । ದೇವಸಂಜ್ಞಾಶ್ಚ ದೀನತ್ವಾತ್ಪೂಜಯೇಯುರ್ನ ತಾನ್ ಕ್ವಚಿತ್॥ (೪) ಯದ್ಭಾಗವತಬುದ್ಧ್ಯೈವ ದತ್ತಂ ಬ್ರಹ್ಮಾದಯಃ ಸುರಾಃ । ವೈದಿಕಾಃ ಪ್ರತಿಗೃಹ್ಣೀಯುರಪಭ್ರಷ್ಟಾಸ್ತಥೇತರತ್ ॥ (೫) ಯಥಾಕ್ರಮಪರಿಜ್ಞಾನಾದೇಕಾಂತಿತ್ವಾಚ್ಚ ಕೇವಲಂ। ಅಚ್ಛಿದ್ರತ್ವಾಚ್ಚ ನಿಯತೋ ಮೋಕ್ಷೋಽನ್ಯತ್ತು ವಿಡಂಬನಂ ॥ ೨ ॥**

ಅ ॥ (೧) ವೇದದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂದು ಹೇಳಲ್ಪಟ್ಟ *ಮನುಗಳು ಬ್ರಹ್ಮರುದ್ರಾದಿ ದೇವತೆಗಳೇ. ಅವರ ಪುತ್ರರಾದ ಮರೀಚ್ಯಾದಿ ಋಷಿಗಳು ಮಾನವರು ಎನ್ನಿಸಿಕೊಳ್ಳುತ್ತಾರೆ. ಅಂತಹ ಮನು ಮತ್ತು ಮನುಪುತ್ರರನ್ನು ಪೂಜಿಸುತ್ತಾರೆ. ಅಪಭ್ರಷ್ಟ ದೇವತೆಗಳನ್ನು ಪೂಜಿಸುವುದಿಲ್ಲ. (೨) (ಬ್ರಹ್ಮಾದಿಗಳನ್ನು ದೇವತೆಗಳೆಂದು ಪೂಜಿಸುತ್ತಿರಲಿಲ್ಲ ಮತ್ತೆ) § ಪಿತೃಗಳೆಂದೂ, ಗುರುಗಳೆಂದೂ, ಸಾಕ್ಷಾತ್ ಭಗವದ್ಭಕ್ತರೆಂದೂ ಪೂಜಿಸುತ್ತಿದ್ದರು. (೩) (**ನ ಚೇತರಾನ್** ಎಂದು ಹೇಳಿದ್ದನ್ನು ವಿವರಿಸುತ್ತಾರೆ.) ಅಪಭ್ರಷ್ಟ ದೇವತೆಗಳಿಗೆ (ಅಸುರಾದಿಗಳಿಗೆ) ‡ ಬ್ರಹ್ಮ ರುದ್ರ ಮೊದಲಾದ ನಾಮಗಳಿದ್ದರೂ ಅವರು ವಸ್ತುತಃ ದೇವತೆಗಳಲ್ಲ. ಸರ್ವದಾ ದುಃಖದಿಂದ ಕೂಡಿರುವವರಾದುದರಿಂದ ಅಸುರಾದಿಗಳಿಗೂ ದೇವ ಎಂಬ ನಾಮವಿದೆ. ಸರ್ವಥಾ ಅವರನ್ನು ಎಲ್ಲಿಯೂ ಪೂಜಿಸಬಾರದು. (೪) (ದೇವತೆಗಳಿಗೂ ಅಸುರರಿಗೂ ಬ್ರಹ್ಮಾದಿ ನಾಮಗಳಿದ್ದರೆ **ಬ್ರಹ್ಮಾದಿಭ್ಯಃ ಸ್ವಾಹಾ** ಎಂದು ಹೇಳಿ ಬ್ರಹ್ಮಾದಿಗಳಿಗೆ ಹವಿಸ್ಸನ್ನು ಕೊಡುವಾಗ ಅಸುರರಿಗೂ ಪ್ರಾಪ್ತಿಯಾಗುವುದರಿಂದ ಯಾಗಾದಿಗಳಲ್ಲಿ ಪ್ರಯತ್ನವು ಆಗುವುದು ಹೇಗೆ? ಎಂದರೆ —) ವೇದಗಳಲ್ಲಿ ಹೇಳಲ್ಪಟ್ಟ ಬ್ರಹ್ಮ ರುದ್ರ ಮೊದಲಾದ ದೇವತೆಗಳು ಭಗವದ್ಭಕ್ತರು, ಎಂಬ ಬುದ್ಧಿಯಿಂದಲೇ ಯಾಜ್ಞಿಕಾದಿಗಳು ಕೊಟ್ಟ ಹವಿಸ್ಸನ್ನು ಸ್ವೀಕರಿಸುತ್ತಾರೆ. ಅಪಭ್ರಷ್ಟ ದೇವತೆಗಳು (ಅಸುರಾದಿಗಳು) ಅಯೋಗ್ಯ ರೀತಿಯಿಂದ ಕೊಟ್ಟ ಹವಿಸ್ಸು ಮೊದಲಾದುದನ್ನು ಹೊಂದುತ್ತಾರೆ. (೫) (ಕೆಲವರಿಗೆ ತಾರತಮ್ಯಜ್ಞಾನ ಏಕಾಂತಿತ್ವ ಇವೆರಡಿದ್ದರೂ ಮೋಕ್ಷವು ದೊರೆಯದಿರುವುದರಿಂದ

---

* ಮನವೋ ಬೋಧವೈಶೇಷ್ಯಾದ್ದೇವಾಃ ಬ್ರಹ್ಮಾದಯಃ ಸ್ಮೃತಾಃ । ವಿಪ್ರಾದಿವರ್ಣಭೇದೇನ ಚತ್ವಾರೋ ಬಹುಧೋಽಪಿತೇ । ಮರೀಚಾದ್ಯಾಸ್ತು ತತ್ಪುತ್ರಾಃ ಮಾನವಾಃ ನಾಮತಃ ಸ್ಮೃತಾಃ ॥

§ ದೇವತಾತ್ವೇನ ಚೇಜ್ಯಃ ಸಃ ಬ್ರಹ್ಮಾದ್ಯಾ ಮನುನಾಮಕಾಃ । ವಕ್ತೃತ್ವೇನ ಪಿತೃತ್ವೇನ ಕಾರಿತ್ವೇನೈವ ಚಾದರಾತ್ ॥ ಇಜ್ಯಂತೇ ದೇವತಾಃ ಸರ್ವಾಃ ನ ತು ದೇವತಯಾ ಕ್ವಚಿತ್ ॥ ಅನನ್ಯಯಾಜಿನಸ್ತೇ ತು ತಸ್ಮಾತ್ಕಾರ್ತಯುಗಾ ಜನಾಃ ॥

‡ ದೇವಾದಿ ಶಬ್ದಗಳು ಅಸುರಾದಿಗಳಿಗೂ ಇವೆ. ಅದಕಾರಣ ಮನುಶಬ್ದವೇ ದೇವತೆಗಳಿಗೆ ಮುಖ್ಯವು. ಅದಕಾರಣ ದೇವತೆಗಳಲ್ಲಿ ಮನುಶಬ್ದವನ್ನೇ ಪ್ರಯೋಗಿಸಿರುವರು.

ಅವೆರಡು ಮೋಕ್ಷಕ್ಕೆ ಸಾಧನವೆಂದು ಹೇಳಿದ್ದು ಅಯುಕ್ತವೆಂದರೆ—) ಮಧ್ಯದಲ್ಲಿ ತಡೆಯಿಲ್ಲದೆ ಸರ್ವದಾ ಇರತಕ್ಕ ದೇವತೆಗಳ ತಾರತಮ್ಯಜ್ಞಾನ, ಶ್ರೀಹರಿಯೇ ಮುಖ್ಯತಃ ಆಶ್ರಯನೆಂಬ ಜ್ಞಾನ ಇವುಗಳಿಂದ ಮೋಕ್ಷವು ನಿಶ್ಚಯವಾಗಿಯೂ ಆಗುತ್ತದೆ. ಅವೆರಡೂ ಸರ್ವದಾ ಇಲ್ಲದೆ ಕೆಲವು ವೇಳೆ ಮಾತ್ರ ಇದ್ದರೆ ಅವುಗಳಿಂದ ಮೋಕ್ಷವು ದೊರೆಯಲಾರದು. ॥ ೨ ॥

ಪೀ—ಹೀಗೆ ತಾರತಮ್ಯಜ್ಞಾನ ಇದ್ದು ಸರ್ವದಾ ಏಕಾಂತಿತ್ವವು ಮೋಕ್ಷಕ್ಕೆ ಸಾಧನವೆಂದು ಒಂದನ್ನು ಹೇಳಿ ಇನ್ನೊಂದು ಮೋಕ್ಷಸಾಧನವನ್ನು ಹೇಳುತ್ತಾರೆ—

**ಭಾ. ॥ (೧) ವಿಷ್ಣೌ ಭಕ್ತಿರ್ವಿಶೇಷೇಣ ಮೋಕ್ಷಾವಾಪ್ತೌ ಹಿ ಕಾರಣಂ । ತದ್ಭಕ್ತೇಷು ಕ್ರಮೇಣೈವ ರಮಾದ್ಯೇಷು ತ್ವನಂತರಂ ॥ (೨) ತೃತೀಯಮಪಿ ವೈರಾಗ್ಯಂ ನ ಚಾ(ವಾಽ)-ನ್ಯನ್ಮೋಕ್ಷಕಾರಣಂ ॥ (೩) ಏತತ್ಸಾಧನತಾಹೇತೋಸ್ತದನ್ಯದ್ಧಿ ವಿಧೀಯತೇ । ಅತೋಽ-ನ್ಯತ್ಸ(ಸ)ರ್ವಕೃಚ್ಚಾಪಿ ಗಚ್ಛೇದೇವಾಧರಂ ತಮಃ ॥ (೪) ಅಸ್ಮಿನ್ಸುನಿಶ್ಚಿತೋ ನಿತ್ಯಂ ಮೋಕ್ಷ್ಯೇವಾನ್ಯೋಽಜ್ಞಕೋಽಪಿ ಸನ್ ॥ ೩ ॥**

ಅ ॥ (೧) ವಿಷ್ಣುವು ಸರ್ವೋತ್ತಮನೆಂದು ತಿಳಿದು ಆತನಲ್ಲಿ ಪರಮಭಕ್ತಿಯು ಇದ್ದರೆ ಮಾತ್ರ ಅದರಿಂದ ಮೋಕ್ಷವನ್ನು ಹೊಂದುವರು. ವಿಷ್ಣುವಿನ ನಂತರ ರಮಾದೇವಿ ಮೊದಲಾದ ವಿಷ್ಣುಭಕ್ತರಲ್ಲಿಯೂ ತಾರತಮ್ಯಕ್ರಮದಿಂದಲೇ ಭಕ್ತಿಯನ್ನು ಮಾಡಿದಲ್ಲಿ ಮೋಕ್ಷವು ಲಭಿಸುವುದು. (೨) ವೈರಾಗ್ಯದಿಂದಲೂ ಮೋಕ್ಷವು ಲಭಿಸುವುದು. ಆದರೆ ವೈರಾಗ್ಯವು ಜ್ಞಾನ ಭಕ್ತಿಗಳಿಗೆ ಸರಿಯಲ್ಲ. ಮತ್ತೆ ಜ್ಞಾನ ಭಕ್ತಿಗಳು ಹುಟ್ಟಲಿಕ್ಕೆ ಸಾಧನವು, ಎಂದು ತೋರಿಸುವುದಕ್ಕಾಗಿ ತೃತೀಯಂ ಅಪ್ರಧಾನ ಕಾರಣವೆಂದು ಹೇಳಿದ್ದು. ಇವು ಹೊರತು ಬೇರೆ ಯಾವುದೂ ಮೋಕ್ಷಕ್ಕೆ ಕಾರಣವಿಲ್ಲ. (೩) ಜ್ಞಾನ ಭಕ್ತಿಗಳು ಹುಟ್ಟಬೇಕೆಂಬ ಉದ್ದೇಶದಿಂದಲೇ (ಮೋಕ್ಷವನ್ನು ಬಯಸುವವನಿಗೆ) ಯಾಗ, ತೀರ್ಥಸ್ನಾನ ಮೊದಲಾದವುಗಳನ್ನು ಮಾಡಬೇಕೆಂದು ಹೇಳಿದ್ದು. ಆದಕಾರಣ ಜ್ಞಾನ ಭಕ್ತಿಗಳಿಲ್ಲದೆ ಎಂತಹ ಕರ್ಮಗಳನ್ನು ಮಾಡಿದರೂ ಮೋಕ್ಷವು ಸರ್ವಥಾ ಲಭಿಸಲಾರದು. ಮಾತ್ರವಲ್ಲದೆ ಅಧರವೆಂಬ ನಿತ್ಯ ನರಕವನ್ನು ಹೊಂದುವನು. (೪) ಬೇರೆ ಎಲ್ಲಾ ಕರ್ಮಗಳನ್ನು ಮಾಡದಿದ್ದರೂ ನಿತ್ಯದಲ್ಲಿಯೂ ಜ್ಞಾನ, ಭಕ್ತಿ, ಇವುಗಳಲ್ಲಿ ಆಸಕ್ತರಾದ ಜ್ಞಾನಯೋಗಿಗಳಾದ ಸನಕಾದಿಗಳು ಮೋಕ್ಷವನ್ನು ಹೊಂದಿಯೇ ಹೊಂದಿರುವರು. ॥ ೩ ॥

**ಭಾ. ॥ (೧) ಅತಸ್ತೇಷಾಂ ಕ್ರಮಂ ವಕ್ಷ್ಯೇ ದೇವಾನಾಂ ಯಃ ಶ್ರುತೌ ಶ್ರುತಃ । ಪೃಥಿವೀ ಸರ್ವಭೂತೇಭ್ಯಃ ಸದಾ ಸರ್ವಗುಣೈರ್ವರಾ ॥ (೨) ರಸಃ ಸಾರೋ ವರಶ್ಚೇತಿ ಶಬ್ದಾ ಏಕಾರ್ಥವಾಚಕಾಃ । ಪೃಥಿವ್ಯಾ ವರುಣಃ ಶ್ರೇಷ್ಠಸ್ತಸ್ಮಾದೋಷಧಿದೇವತಾ । ಸೋ-ಮಸ್ತಸ್ಮಾತ್ತು ಪುರುಷೋ ರುದ್ರೋ ಯತ್ಪ್ರಾಂಸ್ಯದೇವತಾ ॥ (೩) ತಸ್ಮಾತ್ಸರಸ್ವತೀ ವಾಗ್ನಿ ಶ್ರೇಷ್ಠಾಽಸ್ಯಾ ಋಕ್ಸ್ವರೂಪಿಣೀ । ಸೈವ ಶ್ರೇಷ್ಠಾ ತತೋ ವಾಯುರ್ವರಿಷ್ಠಃ ಸಾಮನಾ-ಮಕಃ । ಸಮತ್ವಾತ್ಸರ್ವಭೂತೇಷು ಸಾಮ ಸಾಮ್ನಾಂ ಚ ದೇವತಾ ॥ (೪) ತತಃ ಶ್ರೇಷ್ಠ-ತಮೋ ವಿಷ್ಣುಃ ಶ್ರೇಷ್ಠಶ್ರೇಷ್ಠತಮಃ ಸದಾ । ಶ್ರೇಷ್ಠಾಚ್ಛ್ರೇಷ್ಠತಮಾಚ್ಚಾಪಿ ಪರಮಾತ್ ಪರಮೋ ವಿಭುಃ ॥ ಪರಮಾರ್ಥಯುತತ್ವಾಚ್ಚ ಪರಾರ್ಧ್ಯ ಇತಿ ಕೀರ್ತಿತಃ । ಇತಿ ಸಾರ-ನಿರ್ಣಯೇ ॥ ೪ ॥**

ಅ || (೧) ದೇವತಾತಾರತಮ್ಯ ಜ್ಞಾನವು ಮೋಕ್ಷಕ್ಕೆ ಕಾರಣವಾಗಿರುವುದರಿಂದ ವೇದಗಳಲ್ಲಿ ಹೇಳಿದಂತೆ ದೇವತೆಗಳ ತಾರತಮ್ಯ ಕ್ರಮವನ್ನು ಹೇಳುವೆನು. ಧರಾದೇವಿಗೆ ಸದಾ ಋಭ್ವಾದಿದೇವತೆಗಳಿಗಿಂತ ಎಲ್ಲಾ ಗುಣಗಳೂ ಹೆಚ್ಚು ಇರುತ್ತವೆ. (೨) ರಸಃ ಸಾರಃ ವರಃ ಈ ಶಬ್ದಗಳಿಗೆ ಶ್ರೇಷ್ಠವೆಂಬ ಸರಿಸಮಾನವಾದ ಒಂದು ಅರ್ಥವು. ಧರಾದೇವಿಗಿಂತ ವರುಣನೂ, ವರುಣನಿಗಿಂತ ವನಸ್ಪತಿಗಳಿಗೆ ಅಭಿಮಾನಿಯಾದ ಚಂದ್ರನೂ, ಚಂದ್ರನಿಗಿಂತ ಪುರುಷರ ಪುಂಸ್ತ್ವಕ್ಕೆ ದೇವತೆಯಾದ ಸದಾಶಿವನೂ ಶ್ರೇಷ್ಠನು. (೩) ಸದಾಶಿವನಿಗಿಂತ ಸಮಸ್ತ ವೇದಗಳಿಗೆ ಅಭಿಮಾನಿನಿಯಾದ ಸರಸ್ವತಿಯೂ, ಆವಳಿಗಿಂತ ಋಕ್ಕಿಗೆ ಅಭಿಮಾನಿನಿಯಾದ ಸರಸ್ವತಿಯೂ ಶ್ರೇಷ್ಠಳು. ಅವಳಿಗಿಂತ ಸಮಸ್ತ ಪ್ರಾಣಿಗಳಲ್ಲಿ ಸಮನಾದುದರಿಂದಲೂ ಸಾಮುಗಳಿಗೆ ಅಭಿಮಾನಿಯಾದುದರಿಂದಲೂ ಸಾಮ ಎನ್ನಿಸಿಕೊಂಡ ಮುಖ್ಯವಾಯುವು ಶ್ರೇಷ್ಠನು. (೪) ಆ ವಾಯುವಿಗಿಂತ ವಿಷ್ಣುವು ಮುಖ್ಯ ಶ್ರೇಷ್ಠನು. ಶ್ರೇಷ್ಠರಾದ ವಾಯ್ವಾದಿಗಳಿಗಿಂತ ಮುಖ್ಯ ಶ್ರೇಷ್ಠನು. ರುದ್ರಾದಿಗಳಿಂದ ಸರಸ್ವತೀ ಭಾರತಿಯರೂ, ಅವರಿಂದ ಬ್ರಹ್ಮವಾಯುಗಳೂ, ಇವರಿಂದ ಲಕ್ಷ್ಮೀದೇವಿಯೂ ಉತ್ತಮಳು. ಇವರೆಲ್ಲರಿಂದಲೂ ಶ್ರೀಹರಿಯು ಉತ್ತಮೋತ್ತಮನು. ಸರ್ವತ್ರ ವ್ಯಾಪ್ತನು. ಅತ್ಯುತ್ತಮವಾದ ನಿರವಧಿಕವಾದ ಸಮೃದ್ಧಿಯಿಂದ ಕೂಡಿರುವವನು; ಆದಕಾರಣ ಪರಾರ್ಧ್ಯಃ ಎನ್ನಿಸಿಕೊಳ್ಳುತ್ತಾನೆ, ಎಂದು ಸಾಽನಿರ್ಣಯದಲ್ಲಿದೆ. || ೪ ||

ಹೀ —ಪರಾರ್ಧ್ಯ ಶಬ್ದವನ್ನು ತಾನು ವ್ಯಾಖ್ಯಾನ ಮಾಡುತ್ತಾರೆ—

**ಭಾ. || (೧) ಅತಿಶಯೇನ ಪರಮರ್ಧಿಗುಣಃ ಪರಮಃ ಪರಾರ್ಧ್ಯಃ । ಉತ್ತಮೇಭ್ಯೋಽಪ್ಯತಿಪರಮೋತ್ತಮೋತ್ತಮೋ ರಸಾನಾಂ ರಸತಮಃ ಪರಮಃ ಪರಾರ್ಧ್ಯಃ । ರಸಾನಾಂ ಸಕಾಶಾದಪಿ ಪರಮಪರಾರ್ಧ್ಯ(ರಮರ್ಧ)ರಸತಮ ಇತ್ಯರ್ಥಃ || (೨) ಪ್ರಾಣಾದೀನಾಂ ಭೂತಾದಿಭ್ಯಃ ಶ್ರೇಷ್ಠತ್ವವದಸ್ಯ ಶ್ರೇಷ್ಠತ್ವಂ ನ ಭವತಿ, ಕಿಂತು ಮಹಾನ್ವಿಶೇಷ ಇತಿ ಜ್ಞಾಪಯಿತುಂ ರಸಾನಾಂ ರಸತಮ ಇತ್ಯಾದಿಬಹುವಿಶೇಷಣಂ || (೩) ಭೂತೇಭ್ಯಃ ಪೃಥಿವ್ಯಾ ರಸತ್ವಂ ತೇಭ್ಯೋ ವರುಣಸ್ಯ ರಸತರತ್ವಂ ಸೋಮಸ್ಯ ರಸತಮತ್ವಂ ರುದ್ರಸ್ಯ ಪರಮ (ಚ ರಸ) ರಸತಮತ್ವಂ ವಾಚಃ ಪರಮಪರ (ಪರಮರ್ದ್ಧ) ರಸತಮತ್ವಂ ಪ್ರಾಣಸ್ಯ ಪರಮಪರಾ (ರ) ರ್ಧರಸತಮತ್ವಂ || (೪) ಅಯಂ ತು ಭಗವಾನ್ ಪ್ರಾಣಾದಪಿ ಪರಮಪರಾ (ರ) ರ್ಧರಸತಮಮಾತ್ರೇಣ ಭವತಿ । ಕಿಂತು ಪ್ರಾಣಸ್ಯಾಪಿ ರಸಭೂತಾಯಾ ರಮಾಯಾ ಅಪಿ ಪರಮಪರಾರ್ಧ್ಯರಸತಮಃ । ಅಸ್ಮಾದಪ್ಯತಿಶಯೇನ ಪರಮಿತ್ಯಸಂಖ್ಯಾಗೋಚರತ್ವೇನ ಪರಾರ್ಧೇನ (ರ್ಧ್ಯೇನ) ಜ್ಞೇಯಂ ಹಿ ಪರಾರ್ಧ್ಯಂ || ೫ ||**

ಅ || (೧) ಸರ್ವೋತ್ತಮನಾದ ಶ್ರೀಹರಿಯು ಅತಿಶಯವಾಗಿ ಅತ್ಯುತ್ತಮವಾದ ಸಮೃದ್ಧಿಯೇ ಗುಣವಾಗಿ ಉಳ್ಳವನಾದುದರಿಂದ ಪರಾರ್ಧ್ಯಃ ಎನ್ನಿಸಿಕೊಳ್ಳುತ್ತಾನೆ. ಉತ್ತಮರಿಂದಲೂ ಯಾರು ಅತ್ಯುತ್ತಮನೋ, ಅವನಿಗಿಂತಲೂ ಯಾವನು ಉತ್ತಮನೋ, ಆತನಿಗಿಂತಲೂ ಶ್ರೇಷ್ಠನಾದವನು ರಸಾನಾಂ *ರಸತಮಃ ಪರಮಃ ಪರಾರ್ಧ್ಯಃ ಎನ್ನಿಸುತ್ತಾನೆ. (ಹೀಗೆ ಅರ್ಥವಾಗುವುದು ಹೇಗೆ? ಎಂದರೆ ವಾಕ್ಯವನ್ನು ಕೂಡಿಸುವ ರೀತಿಯನ್ನು ಹೇಳುತ್ತಾರೆ) ಉತ್ತಮರಿಗಿಂತಲೂ ‡ ಪರಮಪರಾರ್ಧ್ಯ ರಸತಮನು, (ಹೀಗೆ ವಿಶಿಷ್ಟವಾಗಿಯೇ ಇಟ್ಟುಕೊಳ್ಳಬೇಕು. ಪ್ರತ್ಯೇಕ ವಿಶೇಷಣಗಳಲ್ಲ.) ಅದಕ್ಕೆ ಅತ್ಯಂತವಾಗಿ ಉತ್ತಮೋತ್ತ

---

* ರಸಃ, ರಸತರಃ, ರಸತಮಃ, ಪರಮರಸತಮಃ ಹೀಗೆ ನಾಲ್ಕು ತರಗತಿ

‡ ಪರಮಪರಾರ್ಧ್ಯಃ ಎಂಬುವಲ್ಲಿಯೂ ಪರಮರ್ಧಃ, ಪರಮಪರರ್ಧಃ, ಪರಮಪರಾರ್ಧಃ, ಪರಮಪರಾರ್ಧ್ಯಃ ಎಂದು ನಾಲ್ಕು ತರಗತಿಗಳು.

ಮೋತ್ತಮನು ಎಂಬ ಅರ್ಥವು ಯುಕ್ತವು. (೨) ಭೂತಾಭಿಮಾನಿ ದೇವಾದಿಗಳಿಂದ ಪ್ರಾಣಾದಿಗಳು ಶ್ರೇಷ್ಠರು ಎಂದು ಹೇಳಿದಂತೆಯೇ ಶ್ರೀಹರಿಯು ಶ್ರೇಷ್ಠನೆಂದು ಅಲ್ಲ, ಶ್ರೀಹರಿಯ ಶ್ರೇಷ್ಠತೆಯಲ್ಲಿ ಅನ್ಯರಿಂದ ಮಹಾ ವಿಶೇಷವಿದೆ, ಎಂದು ತಿಳಿಸಿಕೊಡುವುದಕ್ಕಾಗಿ ರಸಾನಾಂ ರಸತಮಃ ಇದು ಮೊದಲಾದ ಬಹು ವಿಶೇಷಣಗಳನ್ನು ಹೇಳಿದ್ದು. (೩) (ಈಗ ಪರಮಪರಾರ್ಧ್ಯರಸತಮಃ ಎಂಬುದಕ್ಕೆ ಅಕ್ಷರಾರ್ಥ ಹೇಳುತ್ತಾರೆ—) ಭೂತಾಭಿಮಾನಿಗಳಿಂದ ಪೃಥಿವ್ಯಭಿಮಾನಿಗೆ ರಸತ್ವ (ಶ್ರೇಷ್ಠತ್ವ)ವು. ಪೃಥಿವಿಗಿಂತ ವರುಣನಿಗೆ ರಸತರತ್ವ (ಅತಿಶ್ರೇಷ್ಠತ್ವ)ವು. ವರುಣನಿಗಿಂತ ಚಂದ್ರನಿಗೆ ರಸತಮತ್ವವು. ಚಂದ್ರನಿಗಿಂತ ರುದ್ರನಿಗೆ ಪರಮ ರಸತಮತ್ವವು ರುದ್ರನಿಗಿಂತ ಸರಸ್ವತಿಗೆ, ಪರಮರ್ಧ ರಸತಮತ್ವವು. ಸರಸ್ವತಿಗಿಂತ ಪ್ರಾಣನಿಗೆ ಪರಮಪರರ್ಧ ರಸತಮತ್ವವು. (೪) ಈ ಶ್ರೀಹರಿಯಾದರೂ ಮುಖ್ಯಪ್ರಾಣನಿಗಿಂತಲೂ ಪರಮ ಪರಾರ್ಧ ರಸತಮ ಮಾತ್ರನು ಆಗುವುದಲ್ಲ, ಮತ್ತೆ ಪ್ರಾಣನಿಗಿಂತಲೂ ಶ್ರೇಷ್ಠಳಾದ, (ಪರಮಪರಾರ್ಧ ರಸತಮ ಎನ್ನಿಸಿಕೊಂಡ) ಲಕ್ಷ್ಮೀದೇವಿಯಿಂದಲೂ ಶ್ರೀಹರಿಯು ಪರಮಪರಾರ್ಧ್ಯರಸತಮನು (ಪರಾರ್ಧ್ಯ ಶಬ್ದಾರ್ಥವನ್ನು ಹೇಳುತ್ತಾರೆ—) ತನಗಿಂತಲೂ (ಲಕ್ಷ್ಮೀದೇವಿಗಿಂತಲೂ) ಅತಿಶಯವಾಗಿ ಉತ್ತಮನು, ಹೀಗೆ ಯಾವ * ಸಂಖ್ಯೆಗೂ ವಿಷಯನಾಗದೆ ಪರಾರ್ಧ ಎನ್ನಿಸಿಕೊಂಡ ಲಕ್ಷ್ಮೀದೇವಿಯಿಂದ (ಯ) ತಿಳಿಯಲ್ಪಡುವ ಶ್ರೀಹರಿಯು ಪರಾರ್ಧ್ಯನೆನಿಸುತ್ತಾನೆ. ॥ ೫ ॥

**ಭಾ. ॥ (೧) ಋಗ್ರೂಪಾಯಾ ವಾಚಃ ಪೃಥಕ್ ಪರತ್ವಾಂಗೀಕಾರೇಽಪಿ ಭೂತೇಭ್ಯಃ ಪ್ರಾಣಸ್ಯ ಪರಮಪರಾರ್ಧರಸತಮತ್ವಮೇವ । ನ ತು ಪರಮಪರಾರ್ಧಿ(ರ್ಧ್ಯ) ರಸತಮತ್ವಮ್ ॥ (೨) ಪರಸ್ಮಾದಪಿ ಆ ಸಮಂತಾದೃದ್ಧಂ ಹಿ ಪರಾರ್ಧಂ । (ತೇನೋತ್ತಮತ್ವೇನ-ಜ್ಞೇಯಂ ಪರಾರ್ಧಿ) ॥ (೩) ತೇನಾಸಂಖ್ಯಾಗೋಚರತ್ವೇನ ಜ್ಞೇಯಂ ಪರಾರ್ಧ್ಯಂ ಪರಾ-ರ್ಧೋತ್ತಮಂ ಪರಾರ್ಧಿತೇನಾಸಂಖ್ಯಾಗೋಚರತ್ವೇನ ಜ್ಞೇಯಂ ಪರಾರ್ಧ್ಯಮಿತ್ಯತಃ ಪರಾರ್ಧಿತ್ವಂ ಶ್ರಿಯೋ ಭವತಿ । ಶ್ರಿಯೋಽಪಿ ಪರಾರ್ಧ್ಯೋ ಭಗವಾನ್ । ಅತೋ ರಸಾ-ನಾಂ ರಸತಮಃ ಪರಮಃ ಪರಾರ್ಧ್ಯಃ ॥ ೨ ॥ ॥ ೬ ॥**

ಅ ॥ (೧) ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಸರಸ್ವತಿಯಿಂದ ಋಗಭಿಮಾನಿನಿಯಾದ ಸರಸ್ವತಿಗೆ ಉತ್ತಮತ್ವವನ್ನು ಹೇಳಿದರೂ ಭೂತಾಭಿಮಾನಿ ದೇವತೆಗಳಿಗಿಂತ ಪ್ರಾಣನಿಗೆ ಪರಮಪರಾರ್ಧರಸತಮತ್ವವೇ. ಪರಮಪರರ್ಧಿರಸಮತ್ವವಲ್ಲ. ಅದು ಲಕ್ಷ್ಮೀದೇವಿಗೆ, (೨) ಉತ್ತಮನಾದ ಮುಖ್ಯಪ್ರಾಣನಿಂದಲೂ ಚೆನ್ನಾಗಿ ಸಮೃದ್ಧಳಾದ ಲಕ್ಷ್ಮೀದೇವಿಯು ಪರಾರ್ಧಳು. ಆ ಲಕ್ಷ್ಮೀದೇವಿಗೂ ಗಣನೆ ಮಾಡಲಿಕ್ಕೆ ಸಾಧ್ಯವಿಲ್ಲದ ಗುಣಗಳು ಇವೆ ಎಂದು ತಿಳಿಯಲ್ಪಡುವವನು ಪರಾರ್ಧ್ಯನು. ಪರಾರ್ಧ ಎನ್ನಿಸಿಕೊಂಡ ಮುಖ್ಯಪ್ರಾಣನಿಂದ ಉತ್ತಮಳಾದ ಲಕ್ಷ್ಮೀದೇವಿಯು ಪರಾರ್ಧಿಯು ಎನ್ನಿಸುತ್ತಾಳೆ. (೩) ಆ ಲಕ್ಷ್ಮೀದೇವಿಯಿಂದಲೂ ಎಣಿಸಲಿಕ್ಕೆ ಅಸಾಧ್ಯಗಳಾದ ಗುಣಗಳು ಇವೆ ಎಂದು ತಿಳಿಯಲ್ಪಡುವ ಶ್ರೀಹರಿಯು ಪರಾರ್ಧ್ಯನು, ಆದಕಾರಣ ಲಕ್ಷ್ಮೀದೇವಿಯು ಪರಾರ್ಧಿಯೆನ್ನಿಸುತ್ತಾಳೆ. ಲಕ್ಷ್ಮೀದೇವಿಯಿಂದಲೂ ಗಣನೆ ಮಾಡಲಿಕ್ಕೆ ಅಸಾಧ್ಯಗಳಾದ ಗುಣಗಳು ಇದ್ದುದರಿಂದ ಶ್ರೀಹರಿಯು ಪರಾಧ್ಯನು. ಆದಕಾರಣ ಶ್ರೀಹರಿಯು ರಸಾನಾಂ ರಸತಮಃ ಪರಮಃ ಪರಾರ್ಧ್ಯಃ ಎನ್ನಿಸುತ್ತಾನೆ ॥ ೨ ॥ ॥ ೬ ॥

**ಟೀ**—ನೀಚೋಚ್ಚಭಾವದಿಂದ ಹೇಳಲ್ಪಟ್ಟ ಪೃಥಿವ್ಯಾದ್ಯಭಿಮಾನಿ ದೇವತೆಗಳು ಪ್ರಸಿದ್ಧರಾದುದರಿಂದ

* ಸರಸ್ವತಿಗಿಂತ ಪ್ರಾಣನಿಗೆ ಇಷ್ಟು ಹೆಚ್ಚು ಗುಣಗಳು ಎಂದು ಹೇಳಿದಂತೆ ಶ್ರೀಹರಿಯ ಗುಣಗಳಿಗೆ ಸಂಖ್ಯೆಯೇ ಇಲ್ಲದಿರುವುದರಿಂದ ಲಕ್ಷ್ಮೀದೇವಿಯಿಂದ ಶ್ರೀಹರಿಗೆ ಇಷ್ಟು ಗುಣಗಳು ಹೆಚ್ಚು ಎಂದು ಹೇಳಲಿಕ್ಕಾಗುವುದಿಲ್ಲ

ಆ ವಿಷಯದಲ್ಲಿ ಪ್ರಶ್ನಿಸದೆ ಋಗಾದಿಗಳು ಅಪ್ರಸಿದ್ಧಗಳಾಗಿರುವುದರಿಂದಲೂ ಅವುಗಳ ಜ್ಞಾನವು ಉತ್ತಮ ಫಲಕ್ಕೆ ಕಾರಣವಾಗಿರುವುದರಿಂದಲೂ ಅದನ್ನು ಪ್ರಶ್ನಿಸುತ್ತಾರೆ—

**ಉ. ॥ ಕತಮಾ ಕತಮಾ ಋಕ್ಕತಮತ್ಕತಮತ್ಸಾಮ ಕತಮಃ ಕತಮ ಉದ್ಗೀಥ ಇತಿ ವಿಮೃಷ್ಟಂ ಭವತಿ ವಾಗೇವ ಋಕ್ ಪ್ರಾಣಃ ಸಾಮೋಮಿ-ತ್ಯೇತದಕ್ಷರಮುದ್ಗೀಥಃ ॥ ೩ ॥**

ಅ ॥ ಋಕ್, ಸಾಮ, ಉದ್ಗೀಥವೆಂದರೆ ಯಾವುವು? ಎಂದು *ವಿಚಾರವು ಮಾಡಲ್ಪಡುತ್ತದೆ. ಸಮಸ್ತ ವೇದಗಳಿಗೆ ಅಭಿಮಾನಿನಿಯಾದ ಸರಸ್ವತಿಯೇ ಪ್ರಾಣನಿಂದೊಡಗೂಡಿದವಳಾಗಿ ಋಕ್ಕಿಗೆ ಅಭಿಮಾನಿನಿಯಾಗಿ ಋಕ್ ಎನ್ನಿಸುತ್ತಾಳೆ. ಮುಖ್ಯಪ್ರಾಣನು ಸಮಸ್ತ ಭೂತಗಳಲ್ಲಿ ಸಮನಾದುದರಿಂದಲೂ ಸಾಮಾಭಿಮಾನಿನಿಯಾದುದರಿಂದಲೂ ಸಾಮ ಎನ್ನಿಸುತ್ತಾನೆ. ಓಂ ಎನ್ನಿಸಿಕೊಂಡ ಸರ್ವರ ಹೃದಯದಲ್ಲಿರುವ ನಾಶರಹಿತನಾದ ಶ್ರೀಹರಿಯೇ ಉದ್ಗೀಥನೆನ್ನಿಸುತ್ತಾನೆ. ॥ ೩ ॥

**ಭಾ. ॥ (೧) ಪೃಥಿವ್ಯಾಃ ಸೋಮವರುಣಯೋಶ್ಚೌಷಧ್ಯಬ್ದೇವತಾತ್ವೇನ ರುದ್ರಸ್ಯ ಚ ಲಿಂಗದೇವತಾತ್ವೇನ ಪ್ರಸಿದ್ಧೇಃ ಋಗಾದೀನಾಮೇವ ವಿಮರ್ಶಃ ಕ್ರಿಯತೇ ಕತಮಾ ಕತ-ಮರ್ಗಿತ್ಯಾದಿನಾ । ತಜ್ಜ್ಞಾನಸ್ಯ ವಿಶಿಷ್ಟಫಲತ್ವಾಚ್ಚ ॥ (೨) ವಾಚಶ್ಚ ಸರಸ್ವತೀತ್ವೇನ ಪ್ರಸಿದ್ಧೇರ್ವಾಗೃಚೋರೈಕ್ಯಾಚ್ಚ ನ ವಿಮರ್ಶಃ ಕೃತಃ ॥ (೩) ವಿಶೇಷಾತ್ಪ್ರಾಣಸಂಯುಕ್ತಾ ವಾಗೃಗಿತ್ಯಭಿಧೀಯತೇ । ಋ ಗತಾವಿತಿ ಧಾತೋರ್ಹಿ ಋಕ್ತ್ವಂ ಸರ್ಗಾಭಿಮಾನಿನೀ ॥ (೪) ವಿಶೇಷಸಂಯೋಗಹೀನಾ ಯದಾ ಸೈವ ಸರಸ್ವತೀ । ತದಾಸ್ಯಾ ಅವರಾ ಸೈವ ಪ್ರಾಣ ಸಂಯೋಗಿನೀ ಮತಾ ॥ ೧ ॥**

ಅ ॥ (೧) ಪೃಥಿವಿಗೆ (ಪೃಥಿವೀ ದೇವತೆಯೆಂದೂ) ಚಂದ್ರನಿಗೆ ವನಸ್ಪತಿ ದೇವತೆಯೆಂದೂ, ವರುಣನಿಗೆ ಜಲದೇವತೆಯೆಂದೂ ರುದ್ರನಿಗೆ ಪುರುಷರ ಗುಹ್ಯೇಂದ್ರಿಯ ದೇವತೆಯೆಂದೂ ಪ್ರಸಿದ್ಧಿಯಿದ್ದುದರಿಂದಲೂ ಋಗಾದಿಗಳ ಜ್ಞಾನಕ್ಕೆ ಅತ್ಯುತ್ತಮ ಫಲವಿದ್ದುದರಿಂದಲೂ ಕತಮಾ ಕತಮರ್ಕ್ ಇತ್ಯಾದಿಗಳಿಂದ ಋಗಾದಿಗಳ ವಿಚಾರವನ್ನೇ ಮಾಡಿರುತ್ತಾರೆ (೨) ವಾಗಭಿಮಾನಿನಿಯು ಸರಸ್ವತಿಯು ಎಂದು ಪ್ರಸಿದ್ಧಿಯಿದ್ದುದರಿಂದಲೂ ವಾಗೇವರ್ಕ್ ಎಂದು ವಾಕ್ ಋಕ್‌ಗಳಿಗೆ ಐಕ್ಯವನ್ನು ಹೇಳಿದುದರಿಂದಲೂ (ಋಕ್ ಯಾವುದೆಂದು ಋಗ್ವಿಚಾರ ಮಾಡುವಾಗ ವಾಕ್ ವಿಚಾರವೂ ಮಾಡಿದಂತೆ ಆಗುವುದರಿಂದ ಪ್ರತ್ಯೇಕವಾಗಿ) ವಾಗ್ವಿಚಾರವನ್ನು ಮಾಡಲಿಲ್ಲ. (೩) ವಿಶೇಷವಾಗಿ ಮುಖ್ಯಪ್ರಾಣನಿಂದೊಡಗೂಡಿದಾಗ ಸರಸ್ವತಿಗೆ ಋಕ್ ಎಂದು ಹೆಸರು (ಋಕ್ ಎನ್ನುವುದಕ್ಕೆ ಹೀಗೆ ಅರ್ಥವಾಗುವುದು ಹೇಗೆ ಎಂದರೆ—) ಋ ಗತೌ ಎಂಬ ಧಾತ್ವರ್ಥದಿಂದ ಋಕ್ ಎಂಬ ಶಬ್ದದ ಅರ್ಥವು ಋಕ್ತ್ವವು, ಗತತ್ವವು, ಸಂಯುಕ್ತತ್ವವು ಅಂದರೆ—ವಿಶೇಷವಾಗಿ ಪ್ರಾಣನಿಂದಲೇ ಸಂಬಂಧವನ್ನು ಹೊಂದಿರುವುದು ಋಕ್ ಶಬ್ದದ ಅರ್ಥವು. (ಪ್ರಕಾರಾಂತರದಿಂದಲೂ ಸರಸ್ವತಿಗೆ ಋಕ್ ಎಂಬ ಹೆಸರು ಇದೆ ಎನ್ನುತ್ತಾರೆ—) ಸರಸ್ವತಿಯು ಸೃಷ್ಟಿಗೆ ಅಭಿಮಾನಿನಿಯಾದುದರಿಂದಲೂ ಋಕ್ ಎನ್ನಿಸುತ್ತಾಳೆ. (೪) ವಾಗಭಿಮಾನಿನಿಯಾದ ಸರಸ್ವತಿಗೆ ಮುಖ್ಯಪ್ರಾಣನ ವಿಶೇಷ ಸಂಯೋಗವು ಯಾವಾಗ ಇಲ್ಲವೋ ಆಗ ಅವಳು ಪ್ರಾಣನ ಸಂಯೋಗವಿಶೇಷವಿರುವ ಋಗಭಿಮಾನಿನಿಯಾದ ಸರಸ್ವತಿಗಿಂತ ಅಧಮಳೆನ್ನಿಸುತ್ತಾಳೆ. ॥ ೧ ॥

* ಋಗಾದಿಗಳ ಸ್ವರೂಪವನ್ನು ತಿಳಿದುಕೊಳ್ಳಲಿಕ್ಕೆ ಅತಿ ಲವಲವಿಕೆ ಇದೆ ಎಂದು ತಿಳಿಸುವುದಕ್ಕಾಗಿ ಕತಮಾ ಇತ್ಯಾದಿಗಳನ್ನು ಎರಡು ಸಲ ಹೇಳಿದ್ದು.

ಪೀ—ವಾಗಭಿಮಾನಿನಿಯೂ ಋಗಭಿಮಾನಿನಿಯೂ ಒಬ್ಬಳೇ ಎಂದಾದರೆ—ವಾಚಃ ಋಗ್ರಸಃ ಎಂದು ವಾಕಿನಿಂದ ಋಕ್ ಶ್ರೇಷ್ಠವು ಎಂದು ಹೇಳಿದ್ದು ಕೂಡಲಾರದು. ಭೇದವಿದೆ ಎಂದಾದರೆ ವಾಗೇ-ವರ್ಕ್ ಎಂದು ಅಭೇದ ಹೇಳಿದ್ದು ಕೂಡಲಾರದು ಎಂದರೆ—

**ಭಾ. ॥ (೧) ಪ್ರಾಣ(ಪ್ರಣಿ) ಯೋಗವಿಯೋಗಾಭ್ಯಾಂ ಸೈಷೈಕಾಽಪಿ ವಿಭಿದ್ಯತೇ । ವಾಗೇವರ್ಕ್ತ್ಯಚ್ಛ್ರುತೌ ಪ್ರೋಕ್ತಾ ॥ (೨) ಪ್ರಾಣಃ ಸಾಮೇತಿ ಕೀರ್ತಿತಃ । ಅಕ್ಷಯಾದ್ಗ(ದ್ರ)ತಿರೂಪತ್ವಾದಕ್ಷೇಷು ರಮಣಾದಪಿ । ಅಕ್ಷರಂ ಭಗವಾನ್ವಿಷ್ಣುಃ ॥ (೩) ಓಮಿ(ಮು)ತ್ಯುಚ್ಚತ್ವಹೇತುತಃ । ಇತಿಶಬ್ದೋಽನ್ಯಥಾಭಾವನಿವೃತ್ತ್ಯರ್ಥ ಉದಾಹೃತಃ ॥ (೪) ಏವಮುತ್ಯುಚ್ಚ ಏವಾಸೌ ಸರ್ವೈದ್ಯೈತದ್ಧೃದಿ ಸ್ಥಿತಃ (ತೇಃ) । ಉದ್ಗೀಯಮಾನ ಉದ್ಗೀಥೋ ಭಗವಾನ್ ಪುರುಷೋತ್ತಮಃ ॥ ೩ ॥ ॥ ೨ ॥**

ಅ ॥ (೧) ವಾಗಭಿಮಾನಿನಿಯೂ ಋಗಭಿಮಾನಿನಿಯೂ ಸರಸ್ವತಿಯೊಬ್ಬಳೇ ಆದುದರಿಂದ ವಾಗೇ ವರ್ಕ್ ಎಂದು ವೇದದಲ್ಲಿ ಭೇದವಿಲ್ಲವೆಂದು ಹೇಳಿದ್ದು. ಒಬ್ಬಳೇ ಆದರೂ ಕೆಲವು ವೇಳೆ ಪ್ರಾಣನ ಸಂಬಂಧ ವಿಶೇಷವಿದೆ. ಕೆಲವು ವೇಳೆ ಇಲ್ಲ ಇದರಿಂದ ಭೇದವಿದ್ದಪ್ರಯುಕ್ತ ವಾಚಃ ಋಗ್ರಸಃ ಎಂದು ಭೇದ ಹೇಳಿದ್ದು. (೨) ಪ್ರಾಣನು ಸಾಮ ಎನ್ನಿಸುತ್ತಾನೆ ಶ್ರೀಹರಿಯು ನಾಶವಿಲ್ಲದ ಸುಖಸ್ವರೂಪನಾದುದರಿಂದ ಅಥವಾ ಇಂದ್ರಿಯಗಳಲ್ಲಿ ಕ್ರೀಡಿಸಿಕೊಂಡಿರುವುದರಿಂದ ಅಕ್ಷರನೆನಿಸುತ್ತಾನೆ. (೩) ವಿಷ್ಣುವು ಸರ್ವೋತ್ತಮನಾದುದರಿಂದ ಓಂ ಎನ್ನಿಸುತ್ತಾನೆ. ಓಮಿತಿ ಎಂಬುವಲ್ಲಿದ್ದ ಇತಿಶಬ್ದವು ವ್ಯತ್ಯಾಸವಿಲ್ಲ ಎಂಬ ಅರ್ಥವನ್ನು ಹೇಳುತ್ತದೆ. (ಅಂದರೆ ವಿಷ್ಣುವಿನ ಗುಣಗಳಿಗೆ ಯಾವಾಗಲೂ ಸರ್ವಥಾ ವ್ಯತ್ಯಾಸವೇ ಇಲ್ಲ. ಒಂದೇ ರೀತಿಯಾಗಿ ಇರುವವನು.) ಎಂದರ್ಥವು. (೪) ಹಿಂದೆ ಹೇಳಿದ ಪ್ರಕಾರ ಶ್ರೀಹರಿಯು ಸರ್ವದಾ ಸರ್ವೋತ್ತಮನೇ ಆಗಿರುತ್ತಾನೆ. ಸರ್ವರ ಹೃದಯದಲ್ಲಿ ಇದ್ದು ಸರ್ವೋತ್ತಮನೆಂದು ಸರ್ವರಿಂದಲೂ ಗಾನಮಾಡಲ್ಪಡುವವನಾದುದರಿಂದ ಉದ್ಗೀಥನು ॥ ೩ ॥ ॥ ೨ ॥

ಪೀ—ಮಹಾಮಹಿಮೆಯುಳ್ಳ ಸರಸ್ವತೀ ಪ್ರಾಣರು ಮುಕ್ತಿಯಲ್ಲಿಯೂ ತಮಗಿಂತಲೂ ಹೆಚ್ಚು ಮಹಿಮೆಯುಳ್ಳ ಶ್ರೀಹರಿಯನ್ನು ಆಶ್ರಯಿಸುತ್ತಿರುತ್ತಾರೆ, ಎನ್ನುತ್ತಾರೆ—

**ಉ. ॥ ತದ್ವಾ ಏತನ್ಮಿಥುನಂ ಯದ್ವಾಕ್ಚ ಪ್ರಾಣಶ್ಚ ಋಕ್ಚ ಸಾಮ ಚ ತದೇತನ್ಮಿಥುನಮೋಮಿತ್ಯೇತಸ್ಮಿನ್ನಕ್ಷರೇ ಸಂಸೃಜ್ಯತೇ ॥ ೪ ॥**

ಅ ॥ *ವಾಕ್‌ಪ್ರಾಣರು, ಋಕ್‌ಸಾಮರು, ಇವರು ನಿತ್ಯದಲ್ಲಿಯೂ ದಂಪತಿಗಳಾಗಿ ವಿಯೋಗವಿಲ್ಲದೇನೇ ಇರುತ್ತಾರೆ. ಈ ದಂಪತಿಗಳು ಓಂ ಎನ್ನಿಸಿಕೊಂಡ ಸರ್ವರ ಹೃದಯದಲ್ಲಿರುವ ಅಕ್ಷರನೆನಿಸಿಕೊಂಡ ಶ್ರೀಹರಿಯ ಸಮೀಪದಲ್ಲಿ ಮೋಕ್ಷದಶೆಯಲ್ಲಿ ಇರುತ್ತಾರೆ.

ವಿ ॥ ಶೇಷಾದಿಗಳಿಗೆ ಮುಕ್ತಿಯಲ್ಲಿ ಶ್ರೀಹರಿಯ ಸಂಬಂಧವಿದೆ. ಆದರೂ ಪ್ರಾಣನನ್ನು ಪ್ರವೇಶಿಸಿ ಪ್ರಾಣನ ಪ್ರಸಾದದಿಂದಲೇ ಅವರಿಗೆ ಶ್ರೀಹರಿಯಲ್ಲಿ ಪ್ರವೇಶವು, ಸಾಕ್ಷಾತ್ತಲ್ಲ ಸರಸ್ವತೀ ಬ್ರಹ್ಮರಿಗಾದರೂ ಇತರರ ಅನುಗ್ರಹವಿಲ್ಲದೇನೇ ಸಾಕ್ಷಾತ್ತಾಗಿಯೇ ಶ್ರೀಹರಿಯಲ್ಲಿ ಪ್ರವೇಶವು ಆದಕಾರಣ ಸರಸ್ವತೀ ಬ್ರಹ್ಮರಿಗೆ ಇತರರಿಗಿಂತ ಸಂಬಂಧವನ್ನು ಹೇಳಿದ್ದು. ॥ ೪ ॥

* ಭಾರತೀ ಪ್ರಾಣರಿಗೇನೇ ಅವಸ್ಥಾಭೇದದಿಂದ ವಾಕ್ಪ್ರಾಣ, ಋಕ್ಸಾಮ ಎಂದು ಪ್ರತ್ಯೇಕ ಉಕ್ತಿಯು.

**ಪೀ—ಮೋಕ್ಷವಾದ ಮೇಲೆ ವಾಕ್ಪ್ರಾಣರಿಗೆ ಅಲ್ಲಿ ಯಾವ ವಿಶೇಷವೆಂದರೆ—**

**ಉ. || ಯದಾ ವೈ ಮಿಥುನೌ ಸಮಾಗಚ್ಛತ ಆಪಯತೋ ವೈ ತಾವನ್ಯೋನ್ಯಸ್ಯ ಕಾಮಮಾಪಯಿತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನಕ್ಷರಮುದ್ಗೀಥಮುಪಾಸ್ತೇ || ೫ ||**

**ಅ ||** ವಾಕ್ಪ್ರಾಣಾದಿ ರೂಪರಾದ ದಂಪತಿಗಳು ಯಾವಾಗ ಶ್ರೀಹರಿಯನ್ನು ಹೊಂದುತ್ತಾರೋ ಆಗ ವಾಕ್ಪ್ರಾಣರು ತಾವು ಮಾತ್ರ ಅಭೀಷ್ಟವನ್ನು ಹೊಂದುವುದಲ್ಲದೆ ಅನ್ಯರಿಗೂ ಅಭೀಷ್ಟವನ್ನು ಹೊಂದಿಸುವರು. (ಉಪಾಸಕನಿಗೆ ಫಲ ಹೇಳುತ್ತಾರೆ—) ಯಾವ ಅಧಿಕಾರಿಯು ನಾಶರಹಿತನೂ ಸರ್ವರ ಹೃದಯದಲ್ಲಿರುವವನೂ ಆದ ಉದ್ಗೀಥನೆನಿಸಿಕೊಂಡ ಶ್ರೀಹರಿಯು ಹಿಂದೆ ಹೇಳಿದ ಪ್ರಕಾರ ಮೋಕ್ಷದಲ್ಲಿ ವಾಕ್ಪ್ರಾಣರಿಗೆ ಆಶ್ರಯನೆಂದೂ ಅವರಿಗೆ ಅಭೀಷ್ಟವನ್ನು ಕೊಡತಕ್ಕವನೆಂದೂ ಆತನನ್ನು ತಿಳಿದು ಉಪಾಸನೆ ಮಾಡುತ್ತಾನೋ, ಆತನು ಎಲ್ಲಾ ಅಭೀಷ್ಟಗಳನ್ನು ಹೊಂದುತ್ತಾನೆ. ಪ್ರಸಿದ್ಧ. || ೫ ||

**ಪೀ—**ಶ್ರೀಹರಿಗೆ ಓಂ ಎಂಬ ನಾಮವಿದೆ, ಎಂಬುವಲ್ಲಿ **ಓಮಿತಿ ಹ್ಯುದ್ಗಾಯತಿ** ಎಂಬ ಯುಕ್ತಿಯನ್ನು ಮೊದಲು ಹೇಳಿಯದೆ. ಈಗ ಯುಕ್ತ್ಯಂತರದಿಂದ ಅದನ್ನೇ ಸಾಧಿಸುತ್ತಾರೆ —

**ಉ. || ತದ್ವಾ ಏತದನುಜ್ಞಾಕ್ಷರಂ ಯದ್ಧಿ ಕಿಂಚಾನುಜಾನಾತ್ಯೋಮಿತ್ಯೇವ ತದಾ ಹ್ಯೇಷೋ ಏವ ಸಮೃದ್ಧಿರ್ಯದನುಜ್ಞಾ ಸಮರ್ಧಯಿತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾನಕ್ಷರಮುದ್ಗೀಥಮುಪಾಸ್ತೇ || ೬ ||**

**ಅ ||** ಓಂ ಎಂಬ ಅಕ್ಷರವು ಅನುಜ್ಞೆಯನ್ನು ಕೊಡತಕ್ಕುದೇ. (ಹೇಗೆಂದರೆ) ನಾನು ಇದನ್ನು ಮಾಡುತ್ತೇನೆ, ತಾವು ಅದಕ್ಕೆ ಅನುಜ್ಞೆ ಕೊಡಬೇಕೆಂದು ಕೇಳಿದರೆ ತಿಳಿದವನು ನೀನು ಮಾಡತಕ್ಕುದನ್ನು ಶ್ರೀಹರಿಯು ಹಾಗೆಯೇ ಮಾಡಲಿ, ಎಂದು ಅನುಜ್ಞೆ ಕೊಡುವ ವಿಷಯದಲ್ಲಿ ಓಂ ಎಂಬ ಅಕ್ಷರವನ್ನೇ ಹೇಳುತ್ತಾನೆ. ಆದಕಾರಣ ಶ್ರೀಹರಿಗೆ ಓಂ ಎಂಬ ಹೆಸರು. (ಶ್ರೀಹರಿಗೆ ಓಂ ಎಂಬ ಹೆಸರು ಇಲ್ಲವಾದರೆ ಹಾಗೆ ಅನುಜ್ಞೆ ಕೊಡಲಿಕ್ಕೆ ಓಂ ಎಂದು ಹೇಳುವುದು ಕೂಡದೆ ಹೋಗಬೇಕಾಗುವುದು.) (ಓಂ ಎಂಬುವುದಕ್ಕೆ ಶ್ರೀಹರಿಯು ಅನುಜ್ಞೆ ಕೊಡತಕ್ಕವನೆಂದರ್ಥವು ಎಂದು ಸಮರ್ಥಿಸಿ ಈಗ ಸರ್ವಗುಣಸಂಪೂರ್ಣತ್ವವೂ ಓಂ ಎಂಬುದಕ್ಕೆ ಅರ್ಥವೆನ್ನುತ್ತಾರೆ—) ಓಂ ಎಂಬ ಅನುಜ್ಞೆ ಕೊಡತಕ್ಕ ಅಕ್ಷರವು ಸಮೃದ್ಧಿಯೆಂಬ ಅರ್ಥವನ್ನು ಹೇಳುತ್ತದೆ (ಶ್ರೀಹರಿಯು ನಿನ್ನ ಅಭೀಷ್ಟವನ್ನು ಪೂರ್ಣೀಕರಿಸಲಿ, ಎಂದು ಅನುಜ್ಞೆ ಕೊಡಲಿಕ್ಕೆ ತಿಳಿದವನು ಓಂ ಎಂದೇ ಹೇಳುತ್ತಾನೆ. (ಓಂ ಎಂಬುದಕ್ಕೆ ಸಮೃದ್ಧಿಯೆಂಬ ಅರ್ಥವಿಲ್ಲವಾದರೆ ಶ್ರೀಹರಿಯು ಸಮೃದ್ಧಿ ಮಾಡಲಿ ಎಂಬ ಅರ್ಥದಲ್ಲಿ ಓಂ ಎಂದು ಹೇಳುತ್ತಿರಲಿಲ್ಲ) (ಇದನ್ನು ತಿಳಿದವರಿಗೆ ಫಲ ಹೇಳುತ್ತಾರೆ—) ಭಗವಂತನಿಗೆ ಪರಿಪೂರ್ಣ ಎಂದು ಅರ್ಥವುಳ್ಳ ಓಂ ಎಂಬ ಹೆಸರು ಇದೆ, ಎಂದು ತಿಳಿದು ಶ್ರೀಹರಿಯನ್ನು ಉಪಾಸನೆ ಮಾಡುವವನು ಮುಕ್ತನಾಗಿ ಎಲ್ಲಾ ಅಭೀಷ್ಟಗಳನ್ನು ಹೊಂದಲಿಕ್ಕೆ ಸಮರ್ಥನಾಗುತ್ತಾನೆ || ೬ ||

**ಭಾ. || (೧) ತಸ್ಮಾದೋಮಿತ್ಯನುಜ್ಞಾನಂ ಕುರ್ವಂತ್ಯೇತೇ ಜನಾಃ ಸದಾ | ತ್ವದುಕ್ತಂ ತತ್ತಥಾ ಕುರ್ಯಾದ್ಭಗವಾನೇವ ಕೇಶವಃ | ಇತ್ಯಭಿಪ್ರಾಯತಃ ಶಬ್ದಃ ಪ್ರವೃತ್ತಃ ಸ**

ಪುರಾತನ್ಯೈಃ ॥ (೨) ತದೇತದಜ್ಞೈಸ್ತು ಜನ್ಯೈಃ ಸ್ವಾನುಜ್ಞೇತಿ ಪ್ರತೀ(ದೀ)ಯತೇ । ಓಮಿತ್ಯ-ಯಂ ಪೂರ್ಣವಾಚೀ ಸಮೃದ್ಧಿರ್ಹ್ಯೋಮಿತೀರಿತಾ ॥ (೩) ಸಮೃದ್ಧಸ್ತೇ ಹಿ ಕಾಮೋಽಯ-ಮಿತ್ಯನುಜ್ಞಾಽಥವಾ ಭವೇತ್ । ಅತಃ ಸಮೃದ್ಧಿವಾಚೀ ಸ್ಯಾದ್ಧರೇರೋಂಶಬ್ದ ಈರಿತಃ ॥ (೪) ಇತಿ ವಾ ದೀಯತೇಽನುಜ್ಞಾ ಹರಿಸ್ತ್ವವ ಸಮೃದ್ಧಿದಃ ॥ ೪,೫,೬ ॥　　॥ ೧ ॥

ಅ ॥ (೧) ಓಂ ಎಂಬ ನಾಮವು ಶ್ರೀಹರಿಯನ್ನು ಹೇಳುವುದರಿಂದಲೇ ಅಭಿಜ್ಞರು ಸದಾ ಓಂ ಎಂದು ಅನುಜ್ಞೆ ಕೊಡುತ್ತಾರೆ. ಶ್ರೀಭಗವಂತನು ನೀನು ಹೇಳಿದುದನ್ನು ಹಾಗೆ ನಿಶ್ಚಯವಾಗಿಯೂ ಮಾಡುವನು. (ಆದಕಾರಣ ಓಂ ಶಬ್ದವು ಭಗವಂತನನ್ನು ಹೇಳುತ್ತದೆ.) ಈ ಅಭಿಪ್ರಾಯದಿಂದಲೇ ಲೋಕದಲ್ಲಿ ಓಂ ಎಂಬ ಶಬ್ದವು ಬಳಕೆಯಲ್ಲಿದೆ. (೨) ಓಂ ಎಂಬ ಶಬ್ದವನ್ನು ಅಜ್ಞಜನರು ತಾವು ಅನುಜ್ಞೆ ಕೂಡುವುದೆಂದು ತಿಳಿಯುವರು. (೩) ಓಂ ಎಂಬ ಶಬ್ದವು ಪೂರ್ಣ ಎಂಬ ಅರ್ಥವನ್ನು ಹೇಳುತ್ತದೆ. ಸರ್ವಸಮೃದ್ಧಿಯು ಓಂ ಎನ್ನಿಸುತ್ತದೆ. ಅಥವಾ ಈ ನಿನ್ನ ಅಭೀಷ್ಟವು ಅತಿ ಸಮೃದ್ಧವಾಗಲಿ ಎಂಬ ಅಭಿಪ್ರಾಯದಿಂದ ಓಂಕಾರವು. ಆದಕಾರಣ ಓಂ ಶಬ್ದವು ಶ್ರೀಹರಿಗೆ ಗುಣ ಸಮೃದ್ಧಿಯೆಂಬ ಅರ್ಥವನ್ನು ಹೇಳುತ್ತದೆ. (೪) ಓಂ ಶಬ್ದಕ್ಕೆ ಸಮೃದ್ಧಿಯೆಂದು ಮಾತ್ರ ಅರ್ಥವಾಗಬೇಕು. ಶ್ರೀಹರಿಯ ಗುಣಗಳ ಸಮೃದ್ಧಿ ಎಂಬ ಅರ್ಥವನ್ನು ಓಂಕಾರವು ಹೇಳುತ್ತದೆ ಎಂಬುದು ಹೇಗೆಕೂಡುತ್ತದೆ? ಎಂದರೆ— ಶ್ರೀಹರಿಯು ನಿನಗೆ ಸಮೃದ್ಧಿಯನ್ನು ಕೊಡಲಿ, ಎಂದು ಅನುಜ್ಞೆ ಕೊಡುವುದರಿಂದ ಓಂಕಾರವು ಶ್ರೀಹರಿಗೆ ಗುಣಗಳ ಸಮೃದ್ಧಿಯೆಂಬ ಅರ್ಥವನ್ನು ಹೇಳುತ್ತದೆಂದು ಸಿದ್ಧಿಸುತ್ತದೆ.　　॥ ೬ ॥

ಪೀ—ಸುಲಭದಿಂದ ಜ್ಞಾನವಾಗುತ್ತದೆಂಬ ಉದ್ದೇಶದಿಂದ ೬ನೇ ಮಂತ್ರಕ್ಕೆ ಮೊದಲು ಅರ್ಥಹೇಳಿ ಈಗ ೪ನೇ ಮಂತ್ರಕ್ಕೆ ಅರ್ಥಹೇಳುತ್ತಾರೆ—

ಭಾ. ॥ ವಾಕ್ಪ್ರಾಣೌ ದಂಪತೀ ಚಾಪಿ ಸಂಸೃಜ್ಯೇತೇ ಜನಾರ್ದನೇ । ಮುಕ್ತ್ವಾ ತು ತತ್ಪ್ರಸಾದೇನ ಸಂಸೃಜ್ಯಂತೇ ತತಃ ಪರೇ । ತದ್ದ್ವಾರೇಣೈವ ಸಾಕ್ಷಾತ್ತು ಪ್ರಾಣಃ ಸಂಸೃ-ಜ್ಯತೇ ಹರೌ ॥ ೪ ॥　　॥ ೧ ॥

ಅ ॥ ಸರಸ್ವತೀ ಚತುರ್ಮುಖರೆಂಬ ದಂಪತಿಗಳು ಮೋಕ್ಷದಲ್ಲಿ ಶ್ರೀಹರಿಯಲ್ಲಿ ಸೇರುತ್ತಾರೆ. ಬೇರೆ ಗರುಡಾದಿ ದೇವತೆಗಳು ವಾಕ್ಪ್ರಾಣರ ಅನುಗ್ರಹದಿಂದಲೇ ಅವರ ಮೂಲಕ ಶ್ರೀಹರಿಯಲ್ಲಿ ಸೇರುತ್ತಾರೆ. ಚತುರ್ಮುಖನು ಬೇರೆ ದೇವತೆಗಳ ಅಪೇಕ್ಷೆಯಿಲ್ಲದೇನೇ ಶ್ರೀಹರಿಯನ್ನು ಸೇರುತ್ತಾನೆ. ॥ ೪ ॥　॥ ೧ ॥

ಪೀ—ಓಂ ಎಂಬುದು ಸಮಸ್ತ ವೇದಾರ್ಥವನ್ನು ತಿಳಿಸುತ್ತದೆ ಎನ್ನುತ್ತಾರೆ—

ಉ. ॥ ತೇನೇಯಂ ತ್ರಯೀ ವಿದ್ಯಾ ವರ್ತತ ಓಮಿತ್ಯಾಶ್ರಾವಯತ್ಯೋ-ಮಿತಿ ಶꣳಸತ್ಯೋಮಿತ್ಯುದ್ಗಾಯತ್ಯೇತಸ್ಯೈವಾಕ್ಷರಸ್ಯಾಪಚಿತ್ಯೈ ಮಹಿಮ್ನಾ ರಸೇನ ತೇನೋಭೌ ಕುರುತೋ ಯಶ್ಚೈತದೇವಂ ವೇದ ಯಶ್ಚ ನ ವೇದ॥೭॥

ಅ ॥ ಓಂಕಾರದಿಂದ ಹೇಳಲ್ಪಡತಕ್ಕ ವಿಷ್ಣುವಿನಿಂದ, ಋಗ್ಯಜುಸ್ಸಾಮರೂಪವಾದ ವಿದ್ಯೆಯು ಉಂಟಾಗಿದೆ. ಈ ಶ್ರೀಹರಿಯ ಪೂಜೆಗೋಸ್ಕರವೇ *ಋಗಾದಿ ವೇದವು ಓಂ ಎಂದು ಹೇಳಿಕೊಂಡೇ

* ವೇದಗಳನ್ನು ಪಠನಮಾಡುವುದರ ಮೊದಲು ಓಂ ಎಂಬುದನ್ನು ಸರ್ವರೂ ಉಚ್ಚರಿಸಬೇಕು.

ವೇದಾರ್ಥವನ್ನು ಹೇಳುತ್ತದೆ. ಶಾಸ್ತ್ರರೂಪವಾದ ಮಂತ್ರರಾಶಿಯು ಓಂ ಎಂದು ಹೇಳಿಕೊಂಡು ವೇದಾರ್ಥವನ್ನು ಹೇಳುತ್ತವೆ. ಸಾಮವೇದವೂ ಕೂಡ ವೇದಾರ್ಥವನ್ನೇ ಗಾನಮಾಡುತ್ತದೆ. ಅಥವಾ ಅಧ್ವರ್ಯುವು ಓಂ ಎಂದು ಹೇಳಿ ಆಶ್ರಾವಮಂತ್ರವನ್ನೂ, ಹೋತನು ಶಂಸನ ಮಂತ್ರವನ್ನೂ, ಉದ್ಗಾತನು ಉದ್ಗಾನ ಮಂತ್ರವನ್ನೂ ಹೇಳುತ್ತಾನೆ. (ಓಂ ಎಂದು ಹೆಸರುಳ್ಳ ಶ್ರೀಹರಿಯು ಸರ್ವೋತ್ತಮನು ಮತ್ತು ಸರ್ವವೇದಗಳಿಗೆ ಅರ್ಥಭೂತನೆಂದು ಹೇಳಿ ಸರ್ವಪ್ರವರ್ತಕನೂ, ಆಗಿದ್ದಾನೆ, ಎನ್ನುತ್ತಾರೆ—) ಪೂರ್ಣನೂ, ಸರ್ವೋತ್ತಮನೂ, ಸರ್ವವೇದಪ್ರಸಿದ್ಧನೂ ಆದ ಓಂ ಎಂದು ಹೆಸರುಳ್ಳ ಶ್ರೀಹರಿಯಿಂದ ಪ್ರೇರಿತರಾಗಿ, ಭಗವತ್ಸ್ವರೂಪವನ್ನು ಹಿಂದೆ ಹೇಳಿದ ಪ್ರಕಾರ ತಿಳಿದವರೂ ತಿಳಿಯದಿದ್ದವರೂ ಇಬ್ಬರೂ ಕರ್ಮ ಮಾಡುತ್ತಾರೆ. ॥ ೭ ॥

**ಭಾ. ॥ ತೇನೈವ ವಿಷ್ಣುನೇಯಂ ಚ ತ್ರಯೀ ವಿದ್ಯಾ ಪ್ರವರ್ತತೇ । ಓಮಿತ್ಯುಕ್ತ್ವಾ ಹಿ ತದ್ವ್ಯಾಖ್ಯಾ ಸರ್ವೈರ್ಮಂತ್ರೈಃ ಪ್ರವರ್ತತೇ॥ ಓಂನಾಮಕಸ್ಯ ಪೂಜಾರ್ಥಂ ವಿಷ್ಣೋರೇವ ಸದೈವ ಹಿ । ಮಹಿಮ್ನಾ ಸಾರಭೂತೇನ ವಿಷ್ಣುನಾ ಜ್ಞೋಽಜ್ಞ ಏವ ಚ ॥ ಕುರುತ್ಯೇ ಕರ್ಮ ॥ ೭ ॥ ॥ ೧ ॥**

ಅ ॥ ಪ್ರಣವದ ಅರ್ಥಭೂತನಾದ ವಿಷ್ಣುವಿನಿಂದಲೇ ವೇದತ್ರಯವು ಹೊರಟಿದೆ. (ಅಂದರೆ ಪ್ರಣವದ ಅರ್ಥವೇ ಸರ್ವವೇದಾರ್ಥವು.) ಓಂ ಎಂದು ಹೆಸರುಳ್ಳ ವಿಷ್ಣುವಿನ ಪೂಜೆಗೋಸ್ಕರವೇ ಆಶ್ರವಣ ಮೊದಲಾದ ಸಮಸ್ತ ಮಂತ್ರಗಳಿಂದ ಓಂ ಎಂದು ಹೇಳಿ ವೇದಾರ್ಥವು ಹೇಳಲ್ಪಡುತ್ತದೆ. ಸರ್ವಗುಣ ಪೂರ್ಣನೂ ಸರ್ವೋತ್ತಮನೂ ಆದ ಶ್ರೀ ವಿಷ್ಣುವಿನಿಂದಲೇ ಪ್ರೇರಿತರಾಗಿ ತಿಳಿದವರೂ ತಿಳಿಯದಿದ್ದವರೂ ಕರ್ಮ ಮಾಡುತ್ತಾರೆ. ॥ ೭ ॥ ॥ ೧ ॥

ಪೀ—ಎಲ್ಲಾ ಜನರೂ ಶ್ರೀಹರಿಯ ಪ್ರೇರಣೆಯಿಂದಲೇ ಕರ್ಮಮಾಡುತ್ತಾರೆಂದು ಹೇಳದೆ ಜ್ಞಾನಿಗಳು ಅಜ್ಞಾನಿಗಳು ಎಂದು ವಿಭಾಗ ಮಾಡಲಿಕ್ಕೆ ಏನು ಕಾರಣವು? ಎಂದರೆ—

**ಉ. ॥ ನಾನಾ ತು ವಿದ್ಯಾ ಚಾವಿದ್ಯಾ ಚ ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತೀತಿ ಖಲ್ವೇತಸ್ಯೈವಾಕ್ಷರಸ್ಯೋಪವ್ಯಾಖ್ಯಾನಂ ಭವತಿ । ಅಥ ಯ ಏವಾಯಂ ಮುಖ್ಯಪ್ರಾಣಸ್ತಮುದ್ಗೀಥಮುಪಾಸೀತ ತಸ್ಯೇತರೈಃ ಪ್ರಾಣೈರುಪವ್ಯಾಖ್ಯಾನಂ ಭವತಿ ॥ ಇತಿ ಪ್ರಥಮಃ ಖಂಡಃ ॥ ೧ ॥ ॥ ೮ ॥**

ಅ ॥ ವಿದ್ಯೆ ಅವಿದ್ಯೆಗಳು ವಿಲಕ್ಷಣ ಫಲಗಳನ್ನು ಹೊಂದಿಸಿಕೊಡುತ್ತವೆ. (ಆದಕಾರಣ ಜ್ಞಾನಿ ಅಜ್ಞಾನಿ ಎಂದು ಪ್ರತ್ಯೇಕ ಹೇಳಿದ್ದು.) (ವಿದ್ಯಾಫಲವನ್ನು ತೋರಿಸುತ್ತಾರೆ—) ಶ್ರದ್ಧೆಯಿದ್ದು ತನಗೆ ಯೋಗ್ಯವಾದ ಜ್ಞಾನದಿಂದಲೇ ಯಾವ ಕರ್ಮಮಾಡುತ್ತಾನೋ, ಅದೇವೇ ಅನಂತ ಫಲವನ್ನು ಕೊಡುತ್ತದೆ. (ಅಂದರೆ ಅದೇವೇ ಕರ್ಮ ಅಪರೋಕ್ಷ ಜ್ಞಾನದಿಂದ ಮೊದಲಿನದ್ದಾದರೆ ಶ್ರೀಹರಿಯು ಪ್ರತ್ಯಕ್ಷನಾಗಿ ಮೋಕ್ಷಕ್ಕೆ ಕಾರಣವಾಗುತ್ತದೆ. ಭಗವಂತನ ಸಾಕ್ಷಾತ್ಕಾರವಾದ ಮೇಲೆ ಕರ್ಮ ಮಾಡಿದ್ದಾದರೆ ಮೋಕ್ಷದಲ್ಲಿ ಅತಿಶಯ ಫಲವನ್ನು ಹುಟ್ಟಿಸುತ್ತದೆ.) ಹಿಂದೆ ಹೇಳಿದ ಪ್ರಕಾರ ಅಕ್ಷರನೆನಿಸಿಕೊಂಡ ಶ್ರೀಹರಿಯನ್ನು ಹೇಳತಕ್ಕ ಓಂ ಎಂಬುದರ ಅರ್ಥವು. ಓಂ ಎನ್ನಿಸಿಕೊಂಡ ಶ್ರೀಹರಿಯನ್ನು ಉಪಾಸನಾ ಮಾಡಬೇಕೆಂದು ಹೇಳಿದ ಮೇಲೆ ಉಪಾಸನೆಗೆ ಆಶ್ರಯವು ಹೇಳಲ್ಪಡುತ್ತದೆ.

ಮುಖ್ಯಪ್ರಾಣನಲ್ಲಿ ಶ್ರೀಹರಿಯನ್ನು ಧ್ಯಾನಿಸಬೇಕು. ಆ ಮುಖ್ಯಪ್ರಾಣನು ನಾಸಿಕ್ಯ ಪ್ರಾಣಾದಿಗಳಿಂದ ಉತ್ತಮನು. ॥ ೮ ॥

**ಭಾ. ॥ (೧) ನಾಜ್ಞಸ್ಯ ಮುಕ್ತಿರ್ಜ್ಞಸ್ಯ ಭವೇತ್ತು ಸಾ । ಸ್ವಯೋಗ್ಯಂ ತು ಪರಿಜ್ಞಾನಂ ಯತ್ತತ್ಸ್ಯೋಪನಿಷತ್ಸ್ಮೃತಂ ॥ (೨) ಅಕ್ಷರಂ ಭಗವಾನ್ವಿಷ್ಣುಸ್ತಸ್ಯೋಪಪ್ರಣವಃ ಸ್ಮೃತಃ । ಉಪವ್ಯಾಖ್ಯಾ ತು ತದ್ವ್ಯಾಖ್ಯೇತ್ಯೇವಮಾಹ ಶ್ರುತಿಃ ಪರಾ ॥ ಇತಿ ತಾರ್ಕ್ಷ್ಯೇ ॥ (೩) ಪರರ್ಧಂ ಪರಮಾದುಚ್ಚಂ ಪರಾರ್ಧಂ ತ್ವತತೋಽಧಿಕಂ । ತತೋಽಧಿಕಂ ಪರಾರ್ಧಿಃ ಸ್ಯಾತ್ಪರಾರ್ಧ್ಯಮಿತಿ ತತ್ಪರಂ ॥ (೪) ಪರತಃ ಪರಮಾಚ್ಚೈವ ಪರಾರ್ಧೋವಾಯುರೀರಿತಃ । ಪರಾರ್ಧಿನೀ ಶ್ರೀರುದ್ದಿಷ್ಟಾ ಪರಾರ್ಧ್ಯೋಭಗವಾನ್ ಹರಿಃ ॥ ಇತಿ ಶಬ್ದನಿರ್ಣಯೇ ॥ ೮ ॥ ಇತಿ ಪ್ರಥಮಃ ಖಂಡಃ ॥ ೩-೧ ॥ ॥ ೧ ॥**

ಅ ॥ (೧) ಅಜ್ಞಾನಿಗೆ ಮುಕ್ತಿಯಾಗುವುದಿಲ್ಲ. ಜ್ಞಾನಿಗೇನೇ ಮುಕ್ತಿಯಾಗುವುದು. ಜ್ಞಾನಿಯಾದವನಿಗೆ ತನಗೆ ಯೋಗ್ಯವಾದ ಯಾವ ಜ್ಞಾನವಿದೆಯೋ ಅದು ಉಪನಿಷತ್ ಎನ್ನಿಸುತ್ತದೆ. (೨) ಭಗವಂತನು ಅಕ್ಷರ ಎನ್ನಿಸುತ್ತಾನೆ. ಓಂ ಎಂಬುದು ವಿಷ್ಣುವಿನ ಗುಣಗಳನ್ನು ಹೇಳತಕ್ಕದು. ಪ್ರಣವದ ಅರ್ಥವೇ ವೇದವು. ಹೀಗೆ ವೇದವು ಹೇಳುತ್ತದೆ, ಎಂದು ತಾರ್ಕ್ಷ್ಯ ಗ್ರಂಥದಲ್ಲಿ ಇದೆ. (೩) ಗರುಡಾದಿಗಳಿಂದ ವಾಗಭಿಮಾನಿನಿಯಾದ ಸರಸ್ವತಿಯೂ, ಅವಳಿಂದ ಋಗಭಿಮಾನಿನಿಯಾದ ಸರಸ್ವತಿಯೂ, ಅವಳಿಂದ ವಾಯುವೂ, ಅವನಿಗಿಂತ ಲಕ್ಷ್ಮೀದೇವಿಯೂ, ಅವಳಿಗಿಂತ ಶ್ರೀನಾರಾಯಣನೂ ಉತ್ತಮನು. (೪) ಮುಖ್ಯಪ್ರಾಣನು ಪರಾರ್ಧನೆಂದೂ ಲಕ್ಷ್ಮೀದೇವಿಯು ಪರಾರ್ಧಿನೀ ಎಂದೂ, ವಿಷ್ಣುವು ಪರಾರ್ಧ್ಯನೆಂದೂ ಅನ್ನಿಸಿಕೊಳ್ಳುತ್ತಾರೆ, ಎಂದು ಶಬ್ದನಿರ್ಣಯ ಗ್ರಂಥದಲ್ಲಿ ಹೇಳಿದೆ. ॥ ೮ ॥ ॥ ೩-೧ ॥ ॥ ೧ ॥

**ಒಂದನೇ ಖಂಡವು ಮುಗಿಯಿತು.**

---

## ೨ನೇ ಖಂಡವು

**ಪೀ**--ಆ ಉದ್ಗೀಥನಿಗೆ ವಾಯುದೇವರೇ ಮುಖ್ಯ ಪ್ರತಿಮೆಯಾದುದರಿಂದ ಅವರಲ್ಲಿ ಧ್ಯಾನಿಸಬೇಕೆಂದು ಹೇಳುತ್ತಾರೆ--

**ಉ. ॥ ದೇವಾಸುರಾ ಹ ವೈ ಯತ್ರ ಸಂಯೇತಿರ ಉಭಯೇ ಪ್ರಾಜಾಪತ್ಯಾಸ್ತದ್ಧ ದೇವಾ ಉದ್ಗೀಥಮಾಜಹ್ರುರನೇನೈನಾನಭಿಭವಿಷ್ಯಾಮ ಇತಿ ॥೧॥**

ಅ ॥ ಕಶ್ಯಪಪ್ರಜಾಪತಿಯ ಮಕ್ಕಳಾದ ದೇವತೆಗಳು, ಅಸುರರು ಎಂಬ ಎರಡು ವರ್ಗದವರು ಯುದ್ಧಮಾಡಲಿಕ್ಕೆ ಸನ್ನದ್ಧರಾದರು (ಅಸುರರ ಸಂಖ್ಯೆಯು ಅಧಿಕವಾದುದರಿಂದಲೂ ರುದ್ರದೇವರ ವರಬಲವಿದ್ದುದರಿಂದಲೂ ಅಸುರರಿಂದ ಪರಾಜಯ ಹೊಂದಿದ) ದೇವತೆಗಳು ಉದ್ಗೀಥನೆನ್ನಿಸಿಕೊಂಡ ಶ್ರೀಹರಿಯನ್ನು ಉಪಾಸನೆಮಾಡಿ ಆತನ ಅನುಗ್ರಹಬಲದಿಂದ ಅಸುರರನ್ನು ಗೆಲ್ಲುವೆವು, ಎಂಬ ಬುದ್ಧಿಯಿಂದ ಶ್ರೀಹರಿಯು ತಮಗೆ ಅಭೀಷ್ಟ ಕೊಡುವಂತೆ ಮಾಡಿಕೊಂಡರು. ॥ ೧ ॥

ಪೀ—ದೇವತೆಗಳು ಹೀಗೆ ನಿರ್ಣಯಮಾಡಿ ಉದ್ಗೀಥಾಖ್ಯ ವಿಷ್ಣುವನ್ನು ವಾಯುವಿನಲ್ಲಿ ಉಪಾಸನೆ ಮಾಡಿ ಅಭೀಷ್ಟವನ್ನು ಹೊಂದಿದರು ಎಂದು ಹೇಳುವುದಕ್ಕಾಗಿ ಉಪಾಸನಾ ಸ್ಥಾನಗಳನ್ನು ಹೇಳುತ್ತಾರೆ—

**ಉ. || ತೇ ಹ ನಾಸಿಕ್ಯಂ ಪ್ರಾಣಮುದ್ಗೀಥಮುಪಾಸಾಂಚಕ್ರಿರೇ ತꣳ ಹಾಸುರಾಃ ಪಾಪ್ಮನಾ ವಿದಧುಸ್ತಸ್ಮಾತ್ತೇನೋಭಯಂ ಜಿಘ್ರತಿ ಸುರಭಿ ಚ ದುರ್ಗಂಧಿ ಚ ಪಾಪ್ಮನಾ ಹ್ಯೇಷ ವಿದ್ಧಃ || ೨ ||**

ಅ || ದೇವತೆಗಳು ಮೂಗಿಗೆ ಅಭಿಮಾನಿಯಾದ ಮುಖ್ಯವಾಯುವಿನ ಮಗನಾದ ಪ್ರಾಣನಲ್ಲಿ ಶ್ರೀಹರಿಯನ್ನು ಉಪಾಸನಾಮಾಡಿದರು. ಉದ್ಗೀಥೋಪಾಸನೆಯಿಂದ ದೇವತೆಗಳು ನಮ್ಮನ್ನು ಗೆಲ್ಲುತ್ತಾರೆಂದು ಅಸುರರು ತಿಳಿದು ಉದ್ಗೀಥೋಪಾಸನೆಗೆ ಪ್ರತಿಮಾಭೂತನಾದ ನಾಸಿಕ್ಯಪ್ರಾಣನಿಗೆ ಪಾಪವನ್ನು ಹೊಂದಿಸಿಕೊಟ್ಟರು. (ಶಕ್ತಿಯಿಲ್ಲದಹಾಗೆ ಮಾಡಿದರು.) ನಾಸಿಕ್ಯಪ್ರಾಣನು ಪಾಪಗ್ರಸ್ತನಾದುದರಿಂದಲೇ ಅವನಿಗೆ ಅಭಿಮತವಾದ ಮೂಗಿನಿಂದ ಜೀವನು ಸುಗಂಧವನ್ನೂ ದುರ್ಗಂಧವನ್ನೂ ಸ್ವೀಕರಿಸುತ್ತಾನೆ. || ೨ ||

**ಉ. || ಅಥ ಹ ವಾಚಮುದ್ಗೀಥಮುಪಾಸಾಂಚಕ್ರಿರೇ ತಾꣳ ಹಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತಥೋಭಯಂ ವದತಿ ಸತ್ಯಂ ಚಾನೃತಂ ಚ ಪಾಪ್ಮನಾ ಹ್ಯೇಷಾ ವಿದ್ಧಾ || ೩ ||**

ಅ || *ನಾಸಿಕ್ಯಪ್ರಾಣನು ಪಾಪಗ್ರಸ್ತನಾದ ಮೇಲೆ, ವಾಗಭಿಮಾನಿಯಾದ ವಹ್ನಿಯಲ್ಲಿ........|| ೩ ||

**ಉ. || ಅಥ ಹ ಚಕ್ಷುರುದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯಂ ಪಶ್ಯತಿ ದರ್ಶನೀಯಂ ಚಾದರ್ಶನೀಯಂ ಚ ಪಾಪ್ಮನಾ ಹ್ಯೇತದ್ವಿದ್ಧಂ || ೪ ||**

ಅ || ............ಕಣ್ಣಿಗೆ ಅಭಿಮಾನಿಯಾದ ಸೂರ್ಯನಲ್ಲಿ........ನೋಡಲಿಕ್ಕೆ ಯೋಗ್ಯವಾದುದನ್ನೂ ನೋಡಲಿಕ್ಕೆ ಯೋಗ್ಯವಾಗದಿರುವುದನ್ನೂ............ || ೪ ||

**ಉ. || ಅಥ ಹ ಶ್ರೋತ್ರಮುದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯꣳ ಶೃಣೋತಿ ಶ್ರವಣೀಯಂ ಚಾಶ್ರವಣೀಯಂ ಚ ಪಾಪ್ಮನಾ ಹ್ಯೇತದ್ವಿದ್ಧಂ || ೫ ||**

ಅ || ........ಕಿವಿಗೆ ಅಭಿಮಾನಿಯಾದ ಚಂದ್ರನಲ್ಲಿ............ || ೫ ||

**ಉ. || ಅಥ ಹ ಮನಃ ಉದ್ಗೀಥಮುಪಾಸಾಂಚಕ್ರಿರೇ ತದ್ಧಾಸುರಾಃ ಪಾಪ್ಮನಾ ವಿವಿಧುಸ್ತಸ್ಮಾತ್ತೇನೋಭಯಂ ಸಂಕಲ್ಪಯತೇ ಸಂಕಲ್ಪನೀಯಂ ಚಾಸಂಕಲ್ಪನೀಯಂ ಚ ಪಾಪ್ಮನಾ ಹ್ಯೇತದ್ವಿದ್ಧಂ || ೬ ||**

---

* ಮುಂದಿನ ಐದು ಮಂತ್ರಗಳಲ್ಲಿಯೂ ಹೀಗೆಯೇ ಅರ್ಥಮಾಡಬೇಕು.

ಅ || ........ಮನಸ್ಸಿಗೆ ಅಭಿಮಾನಿಯಾದ ರುದ್ರ, ಅಹಂಕಾರಕ್ಕೆ ಅಭಿಮಾನಿಯಾದ ಶೇಷ, ಚಿತ್ತಕ್ಕೆ ಅಭಿಮಾನಿಯಾದ ಗರುಡ ಇವರಲ್ಲಿ............ || ೬ ||

**ಉ. || ಅಥ ಹ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥಮು- ಪಾಸಾಂಚಕ್ರಿರೇ ತꣳ ಹಾಸುರಾ ಋತ್ವಾ ವಿದಧ್ವಸುರ್ಯಥಾಽಶ್ಮಾನಮಾ- ಖಣಮೃತ್ವಾ ವಿಧ್ವꣳಸೇತ್ಯೇವಂ || ೭ ||**

ಅ || ಇಂದ್ರಿಯಾಭಿಮಾನಿಗಳಾದ ಎಲ್ಲಾ ದೇವತೆಗಳೂ ಪಾಪಗ್ರಸ್ತರಾದ ಮೇಲೆ (ಅವರು ಮುಖ್ಯ ಪ್ರತಿಮೆಯರಲ್ಲ, ಎಂದು ಪ್ರಕಟೀಕರಿಸಿ) ಸಾಮ ಎನ್ನಿಸಿಕೊಂಡ ಮುಖ್ಯಪ್ರಾಣನಲ್ಲಿ ಶ್ರೀಹರಿಯನ್ನು ಉಪಾಸನೆ ಮಾಡಿದರು. (ಮಣ್ಣಿನ ಹೆಂಟೆಯು) ಸರ್ವಥಾ ಪುಡಿಮಾಡಲಿಕ್ಕೆ ಅಶಕ್ಯವಾದ ಬಂಡೆಕಲ್ಲಿನಿಂದ ಹೇಗೆ ಪುಡಿಪುಡಿಯಾಗುತ್ತದೋ, ಹೀಗೆಯೇ ಅಸುರರು ಮುಖ್ಯಪ್ರಾಣನಿಂದ ದೇಶಭ್ರಷ್ಟರಾಗಿ ಓಡಿ ಹೋದರು. || ೭ ||

ಪೀ—ಮುಖ್ಯಪ್ರಾಣನನ್ನು ಹೀಗೆ ಉಪಾಸನೆ ಮಾಡಿದವನಿಗೆ ಫಲ ಹೇಳುತ್ತಾರೆ—

**ಉ. || ಸ ಯಥಾಽಶ್ಮಾನಮಾಖಣಮೃತ್ವಾ ವಿಧ್ವꣳಸತ ಏವಂ ಹೈವ ಸ ವಿಧ್ವꣳಸತೇ ಯ ಏವಂವಿದಿ ಪಾಪಂ ಕಾಮಯತೇ ಯಶ್ಚೈನಮಭಿದಾಸತಿ ಸ ಏಷೋಽಶ್ಮಾಖಣಃ || ೮ ||**

ಅ || ಮುಖ್ಯಪ್ರಾಣನಿಂದ ಅಸುರಸಮೂಹವು ದೇಶಭ್ರಷ್ಟವಾಗಿ ಓಡಿಹೋದಂತೆಯೇ, ಪಾಪಗ್ರಸ್ತನಾಗದಿರುವುದರಿಂದ ಮುಖ್ಯಪ್ರಾಣನು ಶ್ರೀಹರಿಗೆ ಮುಖ್ಯಪ್ರತಿಮೆಯು ಎಂದು ಉಪಾಸನಾಮಾಡಿದವನಿಗೆ ಕೆಡಕು ಎಣಿಸುವವನೂ ಉಪಾಸಕನನ್ನು ಕೊಲ್ಲಬಯಸುವವನೂ ನುಚ್ಚುನೂರಾಗಿ ಹೋಗುತ್ತಾನೆ. ಹೀಗೆ ಪ್ರಾಣನ ಮಹಿಮೆಯನ್ನು ತಿಳಿದವನು ಆಖಣಾಶ್ಮ ಎನ್ನಿಸುತ್ತಾನೆ. || ೮ ||

ಪೀ -ಪ್ರಾಣಜ್ಞಾನಿಗೆ ಫಲಾಂತರವನ್ನು ಹೇಳುತ್ತಾರೆ—

**ಉ. || ನೈವೈತೇನ ಸುರಭಿ ನ ದುರ್ಗಂಧಿ ವಿಜಾನಾತ್ಯಪಹತಪಾಪ್ಮಾ ಹ್ಯೇಷ ತೇನ ಯದಶ್ನಾತಿ ಯತ್ಪಿಬತಿ ತೇನೇತರಾನ್ ಪ್ರಾಣಾನವತ್ಯೇತಮು ಏವಾಂತತೋ ವಿತ್ತ್ವೋತ್ಕ್ರಾಮತಿ ವ್ಯಾದದಾತ್ಯೇವಾಂತತ ಇತಿ || ೯ ||**

ಅ || ಪ್ರಾಣನ ಮಹಿಮೆಯ ಜ್ಞಾನದಿಂದ ಸುಗಂಧ ದುರ್ಗಂಧ ಎಂದು ಎರಡು ವಿಧವಾದುದನ್ನು ತಿಳಿಯುವುದೇ ಇಲ್ಲ. ಕೇವಲ ಸುಗಂಧವಿರುವುದನ್ನೇ ಸ್ವೀಕರಿಸುತ್ತಾನೆ. ಆ ಜ್ಞಾನದಿಂದ ಪ್ರಾಣಜ್ಞಾನಿಯು ಪಾಪಲೇಶವೂ ಇಲ್ಲದವನಾಗುತ್ತಾನೆ. ಪ್ರಾಣನು ಎಲ್ಲಾ ಪ್ರಾಣಿಗಳ ಶರೀರದಲ್ಲಿದ್ದು ಯಾವುದನ್ನು ಉಣ್ಣುತ್ತಾನೋ ಕುಡಿಯುತ್ತಾನೋ, ಅದರಿಂದ ಇಂದ್ರಿಯಾಭಿಮಾನಿ ದೇವತೆಗಳನ್ನು ರಕ್ಷಿಸುತ್ತಾನೆ. ಆದಕಾರಣ ಇಂದ್ರಿಯಾಭಿಮಾನಿ ದೇವತೆಗಳಿಂದ ವಾಯುವು ಶ್ರೇಷ್ಠನು. ಮುಖ್ಯಪ್ರಾಣನೇ ಸರ್ವ ಜೀವೋತ್ತಮನೆಂದು ತಿಳಿದವನು ಮುಕ್ತನಾಗುತ್ತಾನೆ. (ಮುಕ್ತಿಗೆ ಕಾರಣವಾದ ಜ್ಞಾನವನ್ನು ಭಕ್ತರಿಗೆ ಕೊಡುವವನಾದುದರಿಂದಲೂ ಶ್ರೇಷ್ಠನು) ಮುಖ್ಯಪ್ರಾಣನ ಪ್ರಸಾದದಿಂದ ವಿಷ್ಣುವೇ ಸರ್ವೋತ್ತಮನೆಂದು ಅಧಿಕಾರಿಯು ತಿಳಿಯುತ್ತಾನೆ. || ೮ ||

ಪೀ—ದೇವತೆಗಳು ಮಾತ್ರ ಉಪಾಸನೆ ಮಾಡಿದರೆಂದಲ್ಲ. ಋಷಿಗಳೂ ಕೂಡ ಉದ್ಗೀಥನನ್ನು ಉಪಾಸನೆ ಮಾಡಿ ತಂತಮ್ಮ ನಾಮಗಳನ್ನು ಹೊಂದಿದರೆನ್ನುತ್ತಾರೆ—

**ಉ. ॥ ತಂ ಹಾಂಗಿರಾ ಉದ್ಗೀಥಮುಪಾಸಾಂಚಕ್ರ ಏತಮು ಏವಾಂ-ಗಿರಸಂ ಮನ್ಯಂತೇಽಂಗಾನಾಂ ಯದ್ರಸಸ್ತೇನ ॥ ೧೦ ॥**

ಅ ॥ ಅಂಗಿರಾ ಎಂಬ ಋಷಿಯು ಮುಖ್ಯಪ್ರಾಣನಲ್ಲಿ ಉದ್ಗೀಥನೆಂಬ ಶ್ರೀಹರಿಯನ್ನುಪಾಸನೆ ಮಾಡಿದನು. (ಬೇರೆ ಋಷಿಗಳೂ ಆತನನ್ನು ಉಪಾಸನೆಮಾಡಿದರು.) ಮುಖ್ಯಪ್ರಾಣನು ಎಲ್ಲಾ ಪ್ರಾಣಿಗಳ ಶರೀರಗಳಿಗೆ ಪ್ರೇರಕನು. ಆದುದರಿಂದ ಮುಖ್ಯಪ್ರಾಣನಿಗೇನೇ ಮುಖ್ಯವಾಗಿ ಅಂಗಿರಃ ಮೊದಲಾದ ನಾಮಗಳು. (ಆತನ ಅನುಗ್ರಹದಿಂದಲೇ ಋಷಿಗಳು ತಮ್ಮತಮ್ಮ ಅಭೀಷ್ಟಸಿದ್ಧಿಯನ್ನು ಮಾತ್ರ ಹೊಂದಿದ್ದಲ್ಲ. ಮತ್ತೆ ತಮ್ಮತಮ್ಮ ನಾಮಗಳನ್ನೂ ಹೊಂದಿದರು.) ॥ ೧೦ ॥

ಪೀ—ಋಷಿಗಳು ಮಾತ್ರವಲ್ಲ, ದೇವತೆಗಳೂ ಕೂಡ ಉಪಾಸನೆಮಾಡಿಯೇ ತಮ್ಮತಮ್ಮ ನಾಮಗಳನ್ನು ಹೊಂದಿದರೆನ್ನುತ್ತಾರೆ—

**ಉ. ॥ ತಂ ಹ ಬೃಹಸ್ಪತಿರುದ್ಗೀಥಮುಪಾಸಾಂಚಕ್ರ ಏತಮು ಏವ ಬೃಹಸ್ಪತಿಂ ಮನ್ಯಂತೇ ವಾಗ್ಘಿ ಬೃಹತೀ ತಸ್ಯಾ ಏಷ ಪತಿಸ್ತೇನ ॥ ೧೧ ॥**

ಅ ॥ ಬೃಹಸ್ಪತಿಯೂ (ಬೇರೆ ದೇವತೆಗಳೂ) ಮುಖ್ಯಪ್ರಾಣನಲ್ಲಿ ಶ್ರೀಹರಿಯನ್ನುಪಾಸನೆಮಾಡಿ ಆತನ ಅನುಗ್ರಹದಿಂದಲೇ ಬೃಹಸ್ಪತ್ಯಾದಿ ನಾಮಗಳನ್ನು ಹೊಂದಿರುವರು. ವಾಗಭಿಮಾನಿನಿಯಾದ ಸರಸ್ವತಿಯು ಸ್ತ್ರೀಯರ ಗುಣಗಳಿಂದ ಪೂರ್ಣಳಾದ ಪ್ರಯುಕ್ತ ಬೃಹತೀ ಎನ್ನಿಸುತ್ತಾಳೆ. ಅವಳಿಗೆ ಪತಿಯಾದುದರಿಂದ ವಾಯುದೇವರಿಗೇನೇ ಮುಖ್ಯವಾಗಿ ಬೃಹಸ್ಪತಿಯೆಂದು ಹೆಸರು. (ಬೇರೆ ದೇವತೆಗಳಿಗೆ ಆತನ ಅನುಗ್ರಹದಿಂದಲೇ ಆಯಾಯ ನಾಮಗಳು.) ॥ ೧೧ ॥

**ಉ. ॥ ತಂ ಹಾಯಾಸ್ಯ ಉದ್ಗೀಥಮುಪಾಸಾಂಚಕ್ರ ಏತಮು ಏವಾ-ಯಾಸ್ಯಂ ಮನ್ಯಂತ ಆಸ್ಯಾದ್ಯದಯತೇ ತೇನ ॥ ೧೨ ॥**

ಅ ॥ ಅಯಾಸ್ಯ ಋಷಿಯೂ............ವಾಯುದೇವರು ಮುಖದಲ್ಲಿ ಪ್ರವೇಶಿಸಿ ಪ್ರೇರಿಸುತ್ತಾರೆ. ಅಥವಾ ಉಸಿರಾಡುವ ಮೂಲಕ ಮುಖದಿಂದ ಹೊರಡುತ್ತಾರೆ. ಆದಕಾರಣ ವಾಯುವಿಗೆ ಅಯಾಸ್ಯನೆಂದು ಹೆಸರು. ॥ ೧೨ ॥

**ಉ. ॥ ತಂ ಹ ಬಕೋ ದಾಲ್ಭ್ಯೋ ವಿದಾಂಚಕಾರ ಸ ಹ ನೈಮಿಶೀ-ಯಾನಾಮುದ್ಗಾತಾ ಬಭೂವ ಸ ಹ ಸ್ಮೈಭ್ಯಃ ಕಾಮಾನಾಗಾಯತಿ ॥ ೧೩ ॥**

ಅ ॥ ದಲ್ಭರಮಗನಾದ ಬಕನೆಂಬ ಋಷಿಯು ಮುಖ್ಯಪ್ರಾಣನನ್ನು ತಿಳಿದನು. ಆದಕಾರಣ ಬಕನು ನೈಮಿಷ ದೇಶದಲ್ಲಿರುವ ಋಷಿಗಳ ಯಾಗದಲ್ಲಿ ಉದ್ಗಾತನೆಂಬ ಗಾನಮಾಡುವ ಋತ್ವಿಜನು ಆದನು. ಆ ಬಕನು ಮುಖ್ಯಪ್ರಾಣನನ್ನು ತಿಳಿದು ಋಷಿಗಳ ಅಭೀಷ್ಟಕ್ಕಾಗಿ ಗಾನಮಾಡಿದುದರಿಂದ ಅವರು ತಂತಮಗೆ ಯೋಗ್ಯಗಳಾದ ಇಷ್ಟಗಳನ್ನು ಹೊಂದಿರುವರು.

ವಿ ‖ ಯಾಗಕ್ಕೆ ಬರತಕ್ಕ ವಿಘ್ನಗಳನ್ನು ಪರಿಹರಿಸಲಿಕ್ಕೂ ಯಜಮಾನನಿಗೆ ಇಷ್ಟವನ್ನು ಕೊಡ ಲಿಕ್ಕೂ ವಾಯುದೇವರಿಗೇನೇ ಶಕ್ತಿಯಿರುವುದರಿಂದ ವಾಯುದೇವರನ್ನೇ ಯಾಗದಲ್ಲಿ ಉದ್ಗಾತರನ್ನಾಗಿ ಮಾಡಬೇಕು. ಅವರು ಸಿಗದಿದ್ದರೆ ವಾಯುವಿನ ಜ್ಞಾನವುಳ್ಳವನನ್ನು ಉದ್ಗಾತನನ್ನಾಗಿ ಮಾಡಬೇಕು. ‖ ೧೩ ‖

**ಉ. ‖ ಆಗಾತಾ ಹ ವೈ ಕಾಮಾನಾಂ ಭವತಿ ಯ ಏತದೇವಂ ವಿದ್ವಾ-ನಕ್ಷರಮುದ್ಗೀಥಮುಪಾಸ್ತ ಇತ್ಯಧ್ಯಾತ್ಮಂ ‖ ಇತಿ ದ್ವಿತೀಯಃ ಖಂಡಃ ‖೩-೨‖**

ಅ ‖ ಹಿಂದೆ ಹೇಳಿದ ಪ್ರಕಾರ ಪ್ರಾಣನ ಮಹಿಮೆಯನ್ನೂ ಪ್ರಾಣನಿಗಿಂತಲೂ ಶ್ರೀಹರಿಗೆ ಹೆಚ್ಚು ಮಹಿಮೆಯಿದೆ ಎಂದೂ ತಿಳಿದು ಉದ್ಗೀಥನನ್ನುಪಾಸನೆ ಮಾಡಿದವನೂ ಗಾನದಿಂದ ಎಲ್ಲಾ ಇಷ್ಟಗಳನ್ನು ಹೊಂದುತ್ತಾನೆ. ಹೀಗೆ ದೇಹದಲ್ಲಿ ಪ್ರಾಣಾದಿಗಳಲ್ಲಿರತಕ್ಕ ಉದ್ಗೀಥೋಪಾಸನೆಯ ಮಹಿಮೆಯನ್ನು ಹೇಳಿರುವರು. ‖ ೧೪ ‖

**ಭಾ. ‖ (೧) ಉದ್ಗೀಥಾಖ್ಯಸ್ಯ ವಿಷ್ಣೋರ್ವಿಶಿಷ್ಟಪ್ರತಿಮಾ ವಾಯುರೇವ । ಅತಸ್ತಸ್ಯ ಸರ್ವೋತ್ತಮತ್ವಜ್ಞಾನಪೂರ್ವಕಂ ತಸ್ಮಿಂಸ್ತತೋಽಪ್ಯುತ್ತಮತ್ವೇನೋಪಾಸಿತ ಏವ ಭಗ-ವಾನ್ ಸಮ್ಯಕ್ ಫಲಂ ದದಾತೀತಿ ದರ್ಶಯತಿ ‖ (೨) ವಾಯೌ ಮುಖ್ಯಧಿಯೇತಿ ಚೇತಿ ಭಗವದ್ವಚನಂ ‖ (೩) ಯಸ್ಮಾದ್ವಾಯೌ ಸ್ಮೃತೋ ವಿಷ್ಣುರ್ವಾಯೋರ್ಮುಖ್ಯತಯಾಽ-ಖಿಲಾತ್ । ಸ್ವಸ್ಯ ಮುಖ್ಯತಯಾ ತಸ್ಮಾತ್ಪರಾಂ ತುಷ್ಟಿಂ ಗಮಿಷ್ಯತಿ ‖ (೪) ಅತೋ ವಿಚಾ-ರ್ಯ ಸಕಲೈರ್ದೇವೈಃ ಪ್ರಾಣೇ ಜನಾರ್ದನಃ । ಉಪಾಸಿತೋ ದೈತ್ಯಜಯಕಾರಣಾತ್ ಪಾಪವರ್ಜಿತೇ ‖ ೧ ‖**

ಅ ‖ (೧) ಉದ್ಗೀಥ ಎನ್ನಿಸಿಕೊಂಡ ವಿಷ್ಣುವಿಗೆ ಮುಖ್ಯಪ್ರಾಣನೇ (ಅಧಿಕಾರಿಗಳ ವರ್ಗದಲ್ಲಿ) ಮುಖ್ಯ ಪ್ರತಿಮೆಯು. ಆದಕಾರಣ ವಾಯುದೇವರು ಸರ್ವಜೀವೋತ್ತಮರು, ಎಂದು ತಿಳಿದು ಅವ ರಿಂದಲೂ ವಿಷ್ಣುವು ಅತ್ಯುತ್ತಮನು ಎಂದು ಉಪಾಸನೆಮಾಡಿದರೇನೇ ವಿಷ್ಣುವು ಬೇಕಾದ ಫಲವನ್ನು ಕೊಡುತ್ತಾನೆಂದು (ವೇದಪುರುಷನು ದೇವಾಸುರಾಃ ಎಂಬ ಖಂಡದಿಂದ) ತೋರಿಸುತ್ತಾನೆ. (೨) (ವಿಷ್ಣು ವಿಗೆ ಮುಖ್ಯಪ್ರಾಣನೇ ಮುಖ್ಯ ಪ್ರತಿಮೆಯು ಎಂಬುವಲ್ಲಿ ಪ್ರಮಾಣ ಹೇಳುತ್ತಾರೆ---) ವಾಯುವು *ಸರ್ವ ಜೀವೋತ್ತಮನು ಎಂದು ತಿಳಿದುಕೊಂಡು ನನ್ನನ್ನು ಪೂಜಿಸಬೇಕು, ಎಂದು ಭಗವದ್ವಚನವೂ ಕೂಡ ಹಿಂದೆ ಹೇಳಿದ ಅರ್ಥವನ್ನು ತೋರಿಸುತ್ತದೆ. (೩) ಈ ಅರ್ಥವನ್ನು ಪ್ರಮಾಣದಿಂದ ದೃಢೀಕರಿಸುತ್ತಾರೆ---) ಇಡೀ ಜಗತ್ತಿನಿಂದ ವಾಯುವು ಶ್ರೇಷ್ಠನು, ವಾಯುವಿನಿಂದಲೂ ಶ್ರೀಹರಿಯು ಮುಖ್ಯನು. ಆದಕಾರಣ ವಾಯುವಿನಲ್ಲಿ ವಿಷ್ಣುವು ಇದ್ದಾನೆಂದು ತಿಳಿದರೇನೇ ವಿಷ್ಣುವು ಪರಮಸಂತೋಷವನ್ನು ಹೊಂದುವನು. (೪) ಆದಕಾರಣ ದೇವತೆಗಳು ತಿಳಿದವರೇ ಆದರೂ ವಿಚಾರಮಾಡಿ (ವಾಯುವು ಸರ್ವಜೀವೋತ್ತಮ ನೆಂದು ನಿರ್ಣಯಿಸಿಕೊಡುವುದಕ್ಕಾಗಿ) ದೈತ್ಯರನ್ನು ಗೆದ್ದಪ್ರಯುಕ್ತ ಪಾಪವಿಲ್ಲದಿರುವ ಪ್ರಾಣನಲ್ಲಿ ಶ್ರೀಹರಿ ಯನ್ನು ಉಪಾಸನೆ ಮಾಡಿದರು. ‖ ೧ ‖

* (1) ವಾಯುವು ವಿಷ್ಣುವಿಗೆ ಮುಖ್ಯಪ್ರತಿಮೆಯಾದುದರಿಂದ ವಾಯುವು ಸರ್ವ ಜೀವೋತ್ತಮನೆಂಬ ಜ್ಞಾನವು ವಿಷ್ಣು ವಿನ ಪೂಜೆಯಾಗುವುದು (2) ಸರ್ವದೇವೋತ್ತಮೋ ವಾಯುರಿತಿ ಜ್ಞಾನಾನ್ನಚಾಪರಂ । ಪ್ರಿಯಮಸ್ತಿ ಹರೇಃ ಕಿಂಚಿತ್ತದಾ ವಾಯೋಃ ಹರೇರ್ವಿದಃ ‖ ಎಂದು ಇದೆ.

**ಪೀ---ತೇ ಹಾಸುರಾಃ ಪಾಪ್ಮನಾ ವಿವಿಧುಃ** ಎಂಬ ೨ನೇ ಮಂತ್ರ ಮೊದಲುಗೊಂಡು ೫ ಮಂತ್ರಗಳಿಗೆ ಅರ್ಥ ಹೇಳುತ್ತಾರೆ—

**ಭಾ. ॥ (೧) ವಾಯುಪುತ್ರಂ ಚ ನಾಸಿಕ್ಯಮಗ್ನಿಂ ವಾಗಾತ್ಮಕಂ ತಥಾ । ಸೋಮಂ ಶ್ರೋತ್ರಾತ್ಮಕಂ ಚೈವ ಸೂರ್ಯಂ ಚಕ್ಷುಃಸ್ವರೂಪಿಣಂ ॥ ರುದ್ರಂ ಮನಃಸ್ವರೂಪಂ ಚ ಶೇಷಂ ಚಾಹಂಸ್ವರೂಪಿಣಂ । ಚಿತ್ತಾತ್ಮಕಂ ಚ ಗರುಡಂ ಪಾಪೇನ ವಿವಿಧುಃ ಸುರಾನ್ ॥ (೨) ಅಸುರಾಸ್ತೈರ್ಯತೋ ವಿದ್ಧಾಸ್ತಸ್ಮಾತ್ತೇ ದೋಷಯೋಗಿನಃ ॥ (೩) ಮುಖ್ಯವಾಯೌ ಯದಾ ದೇವಾಃ ಶರೀರಸ್ಥೇ ಚ ಸೂರ್ಯಗೇ । ವಿಷ್ಣುಮುದ್ಗೀಥನಾಮಾನಂ ತದಾ ತಂ ಚ ವಿದಧ್ವಸುಃ । ಯದಾ ವಿದಧ್ವಸುಃ ಪ್ರಾಣಂ ವಿಧ್ವಸ್ತಾಸ್ತೇ ತದಾಽಸುರಾಃ ॥ (೪) ಅಖನ್ಯಾಶ್ಮಾನಮೇವಾಽಪ್ಯ ಲೋಷ್ಟೋ ವಿಧ್ವಂಸತೇ ಯಥಾ । ಪ್ರತಿಮಾಂ ಶ್ರೇಯಸೀಂ ಪ್ರಾಪ್ಯ ವಿಷ್ಣೋಃ ಪ್ರಾಣಂ ತಥಾಽಸುರಾಃ ॥ ೨ ॥**

ಅ ॥ (೧) (ದೇವತೆಗಳು ನಾಸಿಕ್ಯ ಪ್ರಾಣಾದಿಗಳಲ್ಲಿ ಉದ್ಗೀಥನೆನಿಸಿಕೊಂಡ ವಿಷ್ಣುವನ್ನುಪಾಸನೆ ಮಾಡಿದಾಗ) ಅಸುರರು ನಾಸಿಕಾಭಿಮಾನಿಯಾದ ವಾಯುಪುತ್ರನಾದ ಪ್ರಾಣ, ವಚನಕ್ಕೆ ಅಧಿಪತಿಯಾದ ಅಗ್ನಿ, ಕಿವಿಗೆ ಅಧಿಪತಿಯಾದ ಚಂದ್ರ, ಕಣ್ಣಿಗೆ ಅಧಿಪತಿಯಾದ ಸೂರ್ಯ, ಮನಸ್ಸಿಗೆ ಅಧಿಪತಿಯಾದ ರುದ್ರ, ಅಹಂಕಾರಕ್ಕೆ ಅಧಿಪತಿಯಾದ ಶೇಷ, ಚಿತ್ತಕ್ಕೆ ಅಧಿಪತಿಯಾದ ಗರುಡ ಹೀಗೆ ಎಲ್ಲಾ ದೇವತೆಗಳನ್ನು ಪಾಪದಿಂದ ಕೂಡಿದವರನ್ನಾಗಿ ಮಾಡಿದರು (೨) (**ತಸ್ಮಾತ್ತೇ ನೋಭಯಂ ಜಿಘ್ರತಿ** ಇದು ಮೊದಲಾದ ೫ ವಾಕ್ಯಗಳಿಗೆ ಅರ್ಥ ಹೇಳುತ್ತಾರೆ -) ಈ ದೇವತೆಗಳು ಪಾಪಸಂಬದ್ಧರಾದ ಪ್ರಯುಕ್ತ ದೋಷವುಳ್ಳವರು. (೩) ದೇವತೆಗಳು ಶರೀರ ಮತ್ತು ಸೂರ್ಯ ಇವರಲ್ಲಿರತಕ್ಕ ಮುಖ್ಯವಾಯುವಿನಲ್ಲಿ ಉದ್ಗೀಥಾಖ್ಯ ವಿಷ್ಣುವನ್ನು ಉಪಾಸನೆಮಾಡಿದಾಗ ಅಸುರರು ಆ ಮುಖ್ಯಪ್ರಾಣನನ್ನು ಕೆಡಿಸಲು ಪ್ರಯತ್ನಿಸಿದರು. ಆಗ ಆ ಮುಖ್ಯಪ್ರಾಣನಿಂದಲೇ ಅಸುರರು ನುಚ್ಚುನೂರಾದರು. (೪) ಹೇಗೆ ಮಣ್ಣಿನ ಹೆಂಟೆಯು ದೊಡ್ಡ ಬಂಡೆಕಲ್ಲಿಗೆ ತಗಲಿ ಪುಡಿಪುಡಿಯಾಗುತ್ತದೋ, ಹಾಗೆಯೇ ಅಸುರರು ವಿಷ್ಣುವಿಗೆ ಮುಖ್ಯಪ್ರಿಯನೂ ಪ್ರತಿಮಾಸ್ಥಾನೀಯನೂ ಆದ ಮುಖ್ಯಪ್ರಾಣನಿಂದ ಬಳಲಿ ಓಡಿಹೋದರು. ॥ ೨ ॥

**ಭಾ. ॥ (೧) ತಸ್ಮಾದಾದಿತ್ಯಸಂಸ್ಥೇ ವಾ ಶರೀರಸ್ಥೇಽಪಿ ಚಾ(ವಾ)ನಿಲೇ । ಬಲಜ್ಞಾನಾತ್ಮಕೇ ದಿವ್ಯಾಕೃತಿಮತ್ಯುಜ್ಜ್ವಲಾತ್ಮನಿ । ಸರ್ವದೇವೋತ್ತಮಂ ವಿಷ್ಣುಮುಪಾಸೀತ ತತೋಽಧಿಕಂ ॥ (೨) ಅಸ್ಯೋಪಾಸನಯಾ ದೇವಾಸ್ಸರ್ವೇ ನಾಮಾನಿ ಭೇಜಿರೇ । ಇಂದ್ರೋ ಬೃಹಸ್ಪತಿಃ ಶಂಭುರಿತ್ಯಾದ್ಯಾಃ ಪ್ರಾಣಗಾ ಯತಃ । ಪ್ರಾಣಸ್ಯ ನಾಮಶಬ್ದಾಶ್ಚ ಮುಖ್ಯತೋ ವಿಷ್ಣುಸಂಸ್ಥಿತಾಃ ॥ ಇತಿ ಪ್ರಧ್ಯಾನೇ ॥ ೩ ॥**

ಅ ॥ (೧) ದೇವತೆಗಳು ಹೀಗೆ ಉಪಾಸನೆಮಾಡಿದುದರಿಂದ ಅನ್ಯರೂ ಕೂಡ ಆದಿತ್ಯನಲ್ಲಿಯೂ ಶರೀರದಲ್ಲಿಯೂ ಇರುವ, ಬಲಜ್ಞಾನಸ್ವರೂಪನಾದ, ದಿವ್ಯಾಕಾರವುಳ್ಳ, ವಾಯುವಿನಲ್ಲಿ ಎಲ್ಲಾ ದೇವತೆಗಳಿಂದಲೂ ಉತ್ತಮನಾದ ವಿಷ್ಣುವನ್ನು ಸರ್ವಶ್ರೇಷ್ಠನನ್ನಾಗಿ ಉಪಾಸನೆಮಾಡಬೇಕು. (೨) ಈ ಶ್ರೀಹರಿಯ ಉಪಾಸನೆಯಿಂದಲೇ ದೇವತೆಗಳೂ ಋಷಿಗಳೂ ತಂತಮ್ಮ ನಾಮಗಳನ್ನು ಹೊಂದಿದರು ಇಂದ್ರ, ಬೃಹಸ್ಪತಿ, ಶಂಭು ಮೊದಲಾದ ದೇವತಾವಾಚಕ ಶಬ್ದಗಳೂ, ಅಂಗಿರ ವಸಿಷ್ಠ ಮೊದಲಾದ

ಋಷಿವಾಚಕ ಶಬ್ದಗಳೂ ಕೂಡ ಪ್ರಾಣನಿಗೆ ವಾಚಕಗಳು. ಮುಖ್ಯಪ್ರಾಣನನ್ನು ಹೇಳುವ ಎಲ್ಲಾ ಶಬ್ದಗಳೂ ಮುಖ್ಯವಾಗಿ ವಿಷ್ಣುವನ್ನೇ ಹೇಳತಕ್ಕವುಗಳು, ಎಂದು ಪ್ರಧ್ಯಾನವೆಂಬ ಗ್ರಂಥದಲ್ಲಿದೆ. ॥ ೩ ॥

**ಭಾ. ॥ (೧) ಉದ್ಗೀಥಾಖ್ಯಂ ಪರಂ ವಿಷ್ಣುಮುಪಾಸ್ಯಾಽಜಹ್ರುರಂಜಸಾ । ತಥಾಽಪಿ ಪ್ರಾಣ ಏವಾಸೌ ಪ್ರೀತಿಮಾಗಾದುಪಾಸಿತಃ ॥ ಇತಿ ಚ ॥ (೨) ಪ್ರಾಣಂ ಪ್ರಾಪ್ಯೈವ ವಿಧ್ವಸ್ತಾ ಯಥಾ ಸರ್ವೇಽಸುರಾಸ್ತಥಾ । ತದುಪಾಸಕಸ್ಯ ಯಶ್ಚಾಪಿ ಪ್ರತೀಪಂ ದಾತುಮಿಚ್ಛತಿ ॥ ಇತಿ ಚ ॥ (೩) ಏತಂ ವಿದಿತ್ವಾ ಸಂಸಾರಾನ್ಮುಕ್ತಿಮೇಷ್ಯತ್ಯಸಂಶಯಂ । ವಿಷ್ಣುಮಪ್ಯಂತತೋ ವೇತ್ತಿ ಪ್ರಾಣವೇತ್ತಾ ಯತಃ ಸ್ಫುಟಂ ॥ ೪ ॥**

ಅ ॥ (೧) ಯದ್ಯಪಿ ದೇವತೆಗಳು ಉದ್ಗೀಥನೆನಿಸಿಕೊಂಡ ಸರ್ವೋತ್ತಮನಾದ ವಿಷ್ಣುವನ್ನುಪಾಸನೆ ಮಾಡಿಯೇ ಚೆನ್ನಾಗಿ ಅಭೀಷ್ಟಕೊಡುವಂತೆ ಮಾಡಿಕೊಂಡರು. (ಬಲಾತ್ಕಾರದಿಂದ ಅಲ್ಲ.) ಆದರೂ ಪ್ರಾಣನಲ್ಲಿಯೇ ಉಪಾಸನೆ ಮಾಡಿದರೆ ಶ್ರೀಹರಿಯು ಸಂತೋಷವನ್ನು ಹೊಂದುವನು. (೨) ಹೇಗೆ ಎಲ್ಲಾ ಅಸುರರು ಮುಖ್ಯಪ್ರಾಣನನ್ನು ಹೊಂದಿಯೇ ಸೋತು ಓಡಿಹೋದರೋ, ಹಾಗೆಯೇ ಪ್ರಾಣೋಪಾಸಕನಿಗೆ ವಿರೋಧವನ್ನು ಮಾಡಬಯಸಿದವನೂ ನಾಶಹೊಂದುತ್ತಾನೆ. (೩) ಈ ಮುಖ್ಯಪ್ರಾಣನನ್ನು ತಿಳಿದವನು ಸಂಸಾರದಿಂದ ಬಿಡುಗಡೆ ಹೊಂದಿ ನಿಶ್ಚಯವಾಗಿಯೂ ಮೋಕ್ಷವನ್ನು ಹೊಂದುತ್ತಾನೆ. ಚೆನ್ನಾಗಿ ಪ್ರಾಣನನ್ನು ತಿಳಿದು ಆತನ ಅನುಗ್ರಹದಿಂದ ಕೊನೆಗೆ ವಿಷ್ಣುವನ್ನೂ ತಿಳಿಯುತ್ತಾನೆ. ॥ ೪ ॥

**ಭಾ. ॥ (೧) ವೀತಿ ವಿಷ್ಣುಃ ಸಮುದ್ದಿಷ್ಟೋ ವಿಶಿಷ್ಟತ್ವಾತ್ತು ಸರ್ವತಃ । ಆದದಾತ್ಯೇವ ತಂ ಪ್ರಾಣವೇತ್ತಾಽಂತೇ ತತ್ಪ್ರಸಾದತಃ ॥ (೨) ಪ್ರಾಣಾತ್ಪರಂ ತು ಯೋ ವಿಷ್ಣುಂ ಜೀವಾಂಶ್ಚೈವಾವರಾಂಸ್ತತಃ । ಯೋ ವಿದುಸ್ತೇ ವಿದುಃ ಪ್ರಾಣಂ ನಾನ್ಯಥಾ ತು ಕಥಂಚನ ॥ ಇತಿ ಚ ॥ (೩) ಪ್ರಾಣ ಉದ್ಗೀಥ ಇತ್ಯಾದ್ಯಾಃ ನಾಮಬ್ರಹ್ಮಾದಿಕಾಸ್ತಥಾ । ಸಪ್ತಮ್ಯರ್ಥಾಃ ಸಮುದ್ದಿಷ್ಟಾಃ ಸಪ್ತಸು ಪ್ರಥಮಾ ಯತಃ । ಪ್ರಾಣಮುದ್ಗೀಥಮಿತ್ಯಾದ್ಯಾ ದ್ವಿತೀಯಾ ಸಪ್ತಮೀ ಮತಾ ॥ ಇತಿ ಚ ॥ ೧....೧೪ ॥ ಇತಿ ದ್ವಿತೀಯಃ ಖಂಡಃ ॥ ೩—೨ ॥ ॥ ೫ ॥**

ಅ ॥ (೨) ವಿಷ್ಣುವು ಸರ್ವೋತ್ತಮನಾದುದರಿಂದ ವಿ ಎನ್ನಿಸುತ್ತಾನೆ. (೨) ಪ್ರಾಣಜ್ಞಾನಿಯು ಆತನ ಅನುಗ್ರಹದಿಂದ ಪ್ರಾಣನನ್ನು ತಿಳಿದಮೇಲೆ ವಿಷ್ಣುವನ್ನು ತಿಳಿಯುತ್ತಾನೆ. ಯಾರು ಪ್ರಾಣನಿಂದ ವಿಷ್ಣುವು ಉತ್ತಮನೆಂದೂ, ಜೀವರು ಅಧಮರೆಂದೂ, ಅಂದರೆ ಪ್ರಾಣನು ವಿಷ್ಣುವಿನಿಂದ ಅಧಮನೆಂದೂ ಜೀವರಿಂದುತ್ತಮನೆಂದೂ ತಿಳಿದವರೇ ಪ್ರಾಣನನ್ನು ತಿಳಿಯುತ್ತಾರೆ. ಇದು ಸರ್ವಥಾ ವ್ಯತ್ಯಾಸವಾಗಲಾರದು. (೩) **ಪ್ರಾಣ ಉದ್ಗೀಥಃ** ಇದುಮೊದಲಾದ ವಾಕ್ಯಗಳಲ್ಲಿರತಕ್ಕ **ಪ್ರಾಣಃ** ಇದುಮೊದಲಾದ ಪ್ರಥಮಾವಿಭಕ್ತಿಗಳೂ, **ನಾಮಬ್ರಹ್ಮೇತ್ಯುಪಾಸೀತ** ಇದುಮೊದಲಾದ ವಾಕ್ಯಗಳಲ್ಲಿರತಕ್ಕ **ನಾಮ** ಇತ್ಯಾದಿ ಪ್ರಥಮಾವಿಭಕ್ತಿಗಳೂ ಸಪ್ತಮೀವಿಭಕ್ತಿಯ ಅರ್ಥವುಳ್ಳವುಗಳು. ಪ್ರಥಮಾವಿಭಕ್ತಿಗೆ ಏಳು ವಿಭಕ್ತಿಯ ಅರ್ಥವೂ ಇದೆ. **ಪ್ರಾಣಮುದ್ಗೀಥಂ** ಇದುಮೊದಲಾದ ವಾಕ್ಯಗಳಲ್ಲಿರತಕ್ಕ **ಪ್ರಾಣಂ** ಮೊದಲಾದ ದ್ವಿತೀಯಾ ವಿಭಕ್ತಿಯು ಸಪ್ತಮೀ ವಿಭಕ್ತಿಯ ಅರ್ಥದಲ್ಲಿದೆ. ॥ ೫ ॥

ಎರಡನೇ ಖಂಡವು ಮುಗಿಯಿತು.

## ೩ನೇ ಖಂಡವು

**ಉ. ॥ ಅಥಾಧಿದೈವತಂ ಯ ಏವಾಸೌ ತಪತಿ ತಮುದ್ಗೀಥಮುಪಾಸೀತೋದ್ಯನ್ವಾ ಏಷ ಪ್ರಜಾಭ್ಯ ಉದ್ಗಾಯತ್ಯುದ್ಯಂಸ್ತಮೋ ಭಯಮಪಹಂತ್ಯಪಹಂತಾ ಹ ವೈ ಭಯಸ್ಯ ತಮಸೋ ಭವತಿ ಯ ಏವಂ ವೇದ ॥ ೧ ॥**

ಅ ॥ ಅಧ್ಯಾತ್ಮ (ದೇಹ) ದಲ್ಲಿದ್ದ ಮುಖ್ಯಪ್ರಾಣನಲ್ಲಿ ಉದ್ಗೀಥೋಪಾಸನೆಯನ್ನು ಹೇಳಿದ ಮೇಲೆ ಅಧಿದೈವತ (ಆದಿತ್ಯ) ದಲ್ಲಿದ್ದ ಮುಖ್ಯವಾಯುವಿನಲ್ಲಿ ಉದ್ಗೀಥನ ಉಪಾಸನೆಯು ಹೇಳಲ್ಪಡುತ್ತದೆ ಸೂರ್ಯಮಂಡಲದಲ್ಲಿದ್ದ ಮುಖ್ಯಪ್ರಾಣನು ಪ್ರಕಾಶಿಸುತ್ತಾನೆ. ಅವನಲ್ಲಿ ಶ್ರೀಹರಿಯನ್ನುಪಾಸನೆಮಾಡಬೇಕು. ಆದಿತ್ಯನಲ್ಲಿದ್ದ ಮುಖ್ಯಪಾಣನಿಗೆ ಸ್ವತಃ ಉದಯ ಅಸ್ತಮಾನಗಳಿಲ್ಲದಿದ್ದರೂ ಆತನು ಪ್ರಜೆಗಳಿಗೋಸ್ಕರವೇ ಉದಯಿಸುತ್ತಾ ಶ್ರೀಹರಿಯನ್ನು ಗಾನಮಾಡುತ್ತಾನೆ. ಉದಯಿಸುವವನಾಗಿಯೇ ಒಳಗೂ ಹೊರಗೂ ಇರುವ ತಮಸ್ಸುಗಳನ್ನೂ ಅಥವಾ ಅಂಧಕಾರವನ್ನು ಅದರಿಂದುಂಟಾಗತಕ್ಕ ಪ್ರಾಣಿಗಳ ಭಯವನ್ನೂ ಮುಖ್ಯಪ್ರಾಣನು ಪರಿಹರಿಸುತ್ತಾನೆ. ಹೀಗೆ ಪ್ರಾಣಜ್ಞಾನಿಗೆ ಹೊರಗಿನ ಮತ್ತು ಒಳಗಿನ ಅಜ್ಞಾನವು ನಾಶವಾಗುತ್ತದೆ. ಅಥವಾ ಅಜ್ಞಾನ, ಅಜ್ಞಾನಕೃತ ಭಯಗಳು ನಾಶವಾಗುವುವು. ॥ ೧ ॥

**ಭಾ. ॥ (೧) ಆದಿತ್ಯಸಂಸ್ಥಿತೋ ನಿತ್ಯಂ ಪ್ರಾಣಸ್ತಪತಿ ನಾಪರಃ । ಪ್ರಕಾಶನಂ ಚ ತಪನಂ ಕಾಷ್ಠವತ್ಸೂರ್ಯಗಂ ಭವೇತ್ ॥ (೨) ಸೂರ್ಯಮಂಡಲಗೋ ವಾಯುರುದಯಾಸ್ತಮಯೋಜ್ಝಿತಃ । ಅಪಿ ಪ್ರಜಾಭ್ಯ ಉದ್ಯಂಶ್ಚೈವೋದ್ಗಾಯತಿ ಜನಾರ್ದನಂ ॥೧॥೧॥**

ಅ ॥ (೧) ಸೂರ್ಯಮಂಡಲದಲ್ಲಿದ್ದ ಪ್ರಾಣನೇ ನಿತ್ಯದಲ್ಲಿಯೂ ಪ್ರಕಾಶಿಸುತ್ತಾನೆ. ಕೇವಲ ಆದಿತ್ಯನಲ್ಲ. ವಸ್ತುತಃ ಕಟ್ಟಿಗೆಯು ಸುಡುವುದಲ್ಲ. ಅಗ್ನಿಯ ಸಂಬಂಧದಿಂದಲೇ ಸುಡುವುದು. ಹಾಗೆಯೇ ಸೂರ್ಯನಲ್ಲಿ ಮುಖ್ಯಪ್ರಾಣನು ಅಂತರ್ಗತನಾಗಿರುವುದರಿಂದ ಪ್ರಕಾಶವೂ ಸುಡುವಿಕೆಯೂ ಇರುವುದು. (೨) ಸೂರ್ಯಮಂಡಲದಲ್ಲಿದ್ದ ವಾಯುವಿಗೆ ಉದಯ ಅಸ್ತಮಾನಗಳಿಲ್ಲದಿದ್ದರೂ ಆತನು ಪ್ರಜೆಗಳಿಗೋಸ್ಕರವೇ ಉದಯಾಸ್ತಮಾನಗಳನ್ನು ಮಾಡುತ್ತಿರುತ್ತಾನೆ. ॥ ೧ ॥ ॥ ೧ ॥

**ಉ. ॥ ಸಮಾನ ಉ ಏವಾಯಂ ಚಾಸೌ ಚೋಷ್ಣೋಽಯಮುಷ್ಣೋಽಸೌ ಸ್ವರ ಇತೀಮಮಾಚಕ್ಷತೇ ಸ್ವರ ಇತಿ ಪ್ರತ್ಯಾಸ್ವರ ಇತ್ಯಮುಂ ತಸ್ಮಾದ್ವಾ ಏತಮಿಮಮಮುಂ ಚೋದ್ಗೀಥಮುಪಾಸೀತ ॥ ೨ ॥**

ಅ ॥ ದೇಹದಲ್ಲಿಯೂ ಆದಿತ್ಯಮಂಡಲದಲ್ಲಿಯೂ ಔಷ್ಣ್ಯವು ಸಮಾನವಾಗಿರುವುದರಿಂದ ದೇಹದಲ್ಲಿರತಕ್ಕ ಮುಖ್ಯಪ್ರಾಣನೂ, ಆದಿತ್ಯನಲ್ಲಿರತಕ್ಕ ಮುಖ್ಯಪ್ರಾಣನೂ ಸಮಾನನೇ. ದೇಹದಲ್ಲಿದ್ದ ವಾಯುವನ್ನು ಪ್ರಾಜ್ಞರು ಸ್ವರಃ ಎನ್ನುತ್ತಾರೆ. ಪ್ರತಿಪುರುಷರಿಗೂ ಅಭಿಮುಖವಾಗಿರತಕ್ಕ ಸೂರ್ಯಮಂಡಲದಲ್ಲಿ ಸರ್ವಸ್ವತಂತ್ರನಾದ ವಿಷ್ಣುವಿನ ವಿಶೇಷಜ್ಞಾನವಿದ್ದು ಸೂರ್ಯಮಂಡಲದಲ್ಲಿರತಕ್ಕ ವಾಯುವನ್ನು ಪ್ರತ್ಯಾಸ್ವರಃ ಎನ್ನುತ್ತಾರೆ. ದೇಹದಲ್ಲಿಯೂ ಸೂರ್ಯ ಮಂಡಲದಲ್ಲಿಯೂ ಇರತಕ್ಕ ವಾಯುಗಳಿಗೆ ಉಷ್ಣತ್ವಾದಿಗಳಿಂದ ಸಾಮ್ಯವಿದ್ದಪ್ರಯುಕ್ತ ದೇಹದಲ್ಲಿರತಕ್ಕ ವಾಯುವಿನಲ್ಲಿಯೂ ಸೂರ್ಯನಲ್ಲಿರತಕ್ಕ ವಾಯುವಿನಲ್ಲಿಯೂ ಉದ್ಗೀಥನನ್ನು ಉಪಾಸನೆ ಮಾಡಬೇಕು. ॥ ೨ ॥

**ಭಾ. || (೧) ಆದಿತ್ಯಮಂಡಲಸ್ಥಶ್ಚ ಸರ್ವಪ್ರಾಣಿಗತಸ್ತಥಾ | ವಾಯುಸ್ಸಮಾನ ಏವಾಯಮುಷ್ಣೋಽಸಾವಪಿ ಚ ಸ್ಫುಟಂ || (೨) ತಸ್ಮಾದಸ್ಮಿನ್ನಮುಷ್ಮಿನ್ವಾಽಪ್ಯುದ್ಗೀಥಾಖ್ಯಂ ಜನಾರ್ದನಂ | ಉಪಾಸೀತ ವಿಮೋಕ್ಷಾಯ ಸರ್ವಕಾಮಾಪ್ತಯೇ ತಥಾ || ಇತಿಚ|| (೩) ಕೇಶವಃ ಸ್ವಃ ಸ್ವತಂತ್ರತ್ವಾತ್ತದ್ರತೇರ್ಮಾರುತಃ ಸ್ವರಃ | ಶರೀರಸ್ಥಶ್ಚ ಸೂರ್ಯಸ್ಥಃ ಪ್ರತಿಪತ್ತ್ಯಾ ಸಮಂತತಃ | ಮಾಂ ಪ್ರತೀತ್ಯತ ಏವಾಸೌ ಪ್ರತ್ಯಾಸ್ವರ ಉದಾಹೃತಃ ||೨||೧||**

ಅ || (೧) ಆದಿತ್ಯಮಂಡಲದಲ್ಲಿರತಕ್ಕ ವಾಯುವಿನಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿರತಕ್ಕ ವಾಯುವಿನಲ್ಲಿಯೂ ಸ್ಪಷ್ಟವಾಗಿ ಔಷ್ಣ್ಯವು ತೋರಿದುದರಿಂದ ಇಬ್ಬರೂ ಸಮಾನರೇ. (೨) ಆದಕಾರಣ ಮೋಕ್ಷಸಿಗುವುದಕ್ಕಾಗಿಯೂ ಐಹಿಕ ಎಲ್ಲಾ ಅಭೀಷ್ಟಗಳನ್ನು ಹೊಂದುವುದಕ್ಕಾಗಿಯೂ ದೇಹದಲ್ಲಿರತಕ್ಕ ವಾಯುವಿನಲ್ಲಿಯೂ ಸೂರ್ಯನಲ್ಲಿರರಕ್ಕ ವಾಯುವಿನಲ್ಲಿಯೂ ಉದ್ಗೀಥನೆನಿಸಿಕೊಂಡ ಶ್ರೀಹರಿಯನ್ನು ಉಪಾಸನೆ ಮಾಡಬೇಕು (೩) ಶ್ರೀಹರಿಯು ಸರ್ವಸ್ವತಂತ್ರನಾದುದರಿಂದ ಸ್ವಃ ಎನ್ನಿಸುತ್ತಾನೆ. ಶ್ರೀಹರಿಯ ವಿಶೇಷ ಜ್ಞಾನವಿರುವವನಾದುದರಿಂದ ದೇಹದಲ್ಲಿದ್ದ ಮುಖ್ಯಪ್ರಾಣನು ಸ್ವರಃ ಎನ್ನಿಸುತ್ತಾನೆ. ಸೂರ್ಯನಲ್ಲಿದ್ದ ಮುಖ್ಯಪ್ರಾಣನು ಪ್ರತಿಯೊಬ್ಬರಿಗೂ ತಮತಮಗೆ ಅಭಿಮುಖವಾಗಿಯೇ ಇದ್ದಾನೆಂದು ಕಾಣುವುದರಿಂದಲೂ ವಿಷ್ಣುವಿನ ವಿಶೇಷಜ್ಞಾನವುಳ್ಳವನಾದುದರಿಂದಲೂ ಪ್ರತ್ಯಾಸ್ವರಃ ಎನ್ನಿಸುತ್ತಾನೆ ||೨|| ||೧||

**ಉ. || ಅಥ ಖಲು ವ್ಯಾನಮೇವೋದ್ಗೀಥಮುಪಾಸೀತ ಯದ್ವೈ ಪ್ರಾಣಿತಿ ಸ ಪ್ರಾಣೋ ಯದಪಾನಿತಿ ಸೋಽಪಾನೋಽಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನೋ ಯೋ ವ್ಯಾನಃ ಸಾ ವಾಕ್ತಸ್ಮಾದಪ್ರಾಣನ್ನನಪಾನನ್ವಾಚಮಭಿವ್ಯಾಹರತಿ || ೩ ||**

ಅ || ವ್ಯಾನ ಎಂಬ ಮುಖ್ಯಪ್ರಾಣನಲ್ಲಿಯೇ, ಉದ್ಗೀಥನೆನಿಸಿಕೊಂಡ ಶ್ರೀಹರಿಯನ್ನುಪಾಸನೆ ಮಾಡಬೇಕು. ಉಸಿರಾಟವನ್ನು ಮಾಡಿಸುವವನು ಪ್ರಾಣ (ಶೇಷ)ನು ಮಲಾದಿಗಳನ್ನು ಶರೀರದಿಂದ ಹೊರಪಡಿಸುವವನು ಅಪಾನ (ಗರುಡ)ನು. ಪ್ರಾಣ ಅಪಾನರನ್ನು ಕೂಡಿಸುವವನು ವ್ಯಾನನು. ಇವನೇ ವಾಗಿಂದ್ರಿಯದಲ್ಲಿರುವವನು. ವಾಕ್ ಎಂದು ಹೆಸರುಳ್ಳವನು, ಮಾತನಾಡಿಸುವವನು. ವ್ಯಾನನಲ್ಲಿದ್ದ ವಿಷ್ಣುವು ವಾಕ್ ಎಂದು ಹೆಸರುಳ್ಳವನು, ವಾಗಿಂದ್ರಿಯಕ್ಕೆ ಪ್ರವರ್ತಕನು, ಮತ್ತು ಶರೀರದೊಳಗೆ ಇರುವವನು. ವ್ಯಾನನು ವಾಗಿಂದ್ರಿಯಕ್ಕೆ ಪ್ರವರ್ತಕನಾದುದರಿಂದಲೇ. ಪ್ರಾಣ ಅಪಾನರ ವ್ಯಾಪಾರವಿಲ್ಲದೆ ಪ್ರಾಣ ಅಪಾನರ ವ್ಯಾಪಾರವನ್ನು ತಡೆದು ಮಾತನಾಡುತ್ತಾನೆ. (ಆದಕಾರಣ ಪ್ರಾಣ ಅಪಾನರು ಮಾತನಾಡಿಸುವವರಲ್ಲ. ವ್ಯಾನನೇ.) || ೩ ||

**ಉ || ಯಾ ವಾಕ್ ಸರ್ಕ್ತಸ್ಮಾದಪ್ರಾಣನ್ನನಪಾನನ್ನೃಚಮಭಿವ್ಯಾಹರತಿ ಯತ್ ಋಕ್ಸಾಮ ತಸ್ಮಾದಪ್ರಾಣನ್ನನಪಾನನ್ಸಾಮ ಗಾಯತಿ ಯತ್ಸಾಮ ಸ ಉದ್ಗೀಥಸ್ತಸ್ಮಾದಪ್ರಾಣನ್ನನಪಾನನ್ನುದ್ಗಾಯತಿ || ೪ ||**

ಅ || ವಾಕ್ ಎಂದು ಹೆಸರುಳ್ಳ, ವಾಗಿಂದ್ರಿಯದಲ್ಲಿರುವ ವಾಗಿಂದ್ರಿಯಕ್ಕೆ ಪ್ರವರ್ತಕನಾದ ವ್ಯಾನನಿಗೆ ಋಕ್ ಎಂದು ಹೆಸರು ಋಕ್ಕಿನಲ್ಲಿ ಇರುವವನು ಋಕ್ಪ್ರವರ್ತಕನು. ಆ ವ್ಯಾನನಲ್ಲಿದ್ದ ವಿಷ್ಣುವು ಋಕ್ಪ್ರವರ್ತಕನಾದ ವ್ಯಾನನಲ್ಲಿರುವವನು. ಆದಕಾರಣ ಪ್ರಾಣಾಪಾನರ ವ್ಯಾಪಾರ ತಡೆದು

# ೩ನೇ ಖಂಡವು

**ಉ. ॥ ಅಥಾಧಿದೈವತಂ ಯ ಏವಾಸೌ ತಪತಿ ತಮುದ್ಗೀಥಮುಪಾಸೀತೋದ್ಯನ್ವಾ ಏಷ ಪ್ರಜಾಭ್ಯ ಉದ್ಗಾಯತ್ಯುದ್ಯಂಸ್ತಮೋ ಭಯಮಪಹಂತ್ಯಪಹಂತಾ ಹ ವೈ ಭಯಸ್ಯ ತಮಸೋ ಭವತಿ ಯ ಏವಂ ವೇದ ॥ ೧ ॥**

ಅ ॥ ಅಧ್ಯಾತ್ಮ (ದೇಹ) ದಲ್ಲಿದ್ದ ಮುಖ್ಯಪ್ರಾಣನಲ್ಲಿ ಉದ್ಗೀಥೋಪಾಸನೆಯನ್ನು ಹೇಳಿದ ಮೇಲೆ ಅಧಿದೈವತ (ಆದಿತ್ಯ) ದಲ್ಲಿದ್ದ ಮುಖ್ಯವಾಯುವಿನಲ್ಲಿ ಉದ್ಗೀಥನ ಉಪಾಸನೆಯು ಹೇಳಲ್ಪಡುತ್ತದೆ ಸೂರ್ಯಮಂಡಲದಲ್ಲಿದ್ದ ಮುಖ್ಯಪ್ರಾಣನು ಪ್ರಕಾಶಿಸುತ್ತಾನೆ. ಅವನಲ್ಲಿ ಶ್ರೀಹರಿಯನ್ನುಪಾಸನೆಮಾಡ ಬೇಕು. ಆದಿತ್ಯನಲ್ಲಿದ್ದ ಮುಖ್ಯಪಾಣನಿಗೆ ಸ್ವತಃ ಉದಯ ಅಸ್ತಮಾನಗಳಿಲ್ಲದಿದ್ದರೂ ಆತನು ಪ್ರಜೆಗಳಿಗೋಸ್ಕರವೇ ಉದಯಿಸುತ್ತಾ ಶ್ರೀಹರಿಯನ್ನು ಗಾನಮಾಡುತ್ತಾನೆ. ಉದಯಿಸುವವನಾಗಿಯೇ ಒಳಗೂ ಹೊರಗೂ ಇರುವ ತಮಸ್ಸುಗಳನ್ನೂ ಅಥವಾ ಅಂಧಕಾರವನ್ನು ಅದರಿಂದುಂಟಾಗತಕ್ಕ ಪ್ರಾಣಿಗಳ ಭಯವನ್ನೂ ಮುಖ್ಯಪ್ರಾಣನು ಪರಿಹರಿಸುತ್ತಾನೆ. ಹೀಗೆ ಪ್ರಾಣಜ್ಞಾನಿಗೆ ಹೊರಗಿನ ಮತ್ತು ಒಳಗಿನ ಅಜ್ಞಾನವು ನಾಶವಾಗುತ್ತದೆ. ಅಥವಾ ಅಜ್ಞಾನ, ಅಜ್ಞಾನಕೃತ ಭಯಗಳು ನಾಶವಾಗುವುವು. ॥ ೧ ॥

**ಭಾ. ॥ (೧) ಆದಿತ್ಯಸಂಸ್ಥಿತೋ ನಿತ್ಯಂ ಪ್ರಾಣಸ್ತಪತಿ ನಾಪರಃ । ಪ್ರಕಾಶನಂ ಚ ತಪನಂ ಕಾಷ್ಠವತ್ಸೂರ್ಯಗಂ ಭವೇತ್ ॥ (೨) ಸೂರ್ಯಮಂಡಲಗೋ ವಾಯುರುದಯಾಸ್ತಮಯೋಜ್ಝಿತಃ । ಅಪಿ ಪ್ರಜಾಭ್ಯ ಉದ್ಯಂಶ್ಚೈವೋದ್ಗಾಯತಿ ಜನಾರ್ದನಂ ॥೧॥೧॥**

ಅ ॥ (೧) ಸೂರ್ಯಮಂಡಲದಲ್ಲಿದ್ದ ಪ್ರಾಣನೇ ನಿತ್ಯದಲ್ಲಿಯೂ ಪ್ರಕಾಶಿಸುತ್ತಾನೆ. ಕೇವಲ ಆದಿತ್ಯನಲ್ಲ. ವಸ್ತುತಃ ಕಟ್ಟಿಗೆಯು ಸುಡುವುದಲ್ಲ. ಅಗ್ನಿಯ ಸಂಬಂಧದಿಂದಲೇ ಸುಡುವುದು. ಹಾಗೆಯೇ ಸೂರ್ಯನಲ್ಲಿ ಮುಖ್ಯಪ್ರಾಣನು ಅಂತರ್ಗತನಾಗಿರುವುದರಿಂದ ಪ್ರಕಾಶವೂ ಸುಡುವಿಕೆಯೂ ಇರುವುದು. (೨) ಸೂರ್ಯಮಂಡಲದಲ್ಲಿದ್ದ ವಾಯುವಿಗೆ ಉದಯ ಅಸ್ತಮಾನಗಳಿಲ್ಲದಿದ್ದರೂ ಆತನು ಪ್ರಜೆಗಳಿಗೋಸ್ಕರವೇ ಉದಯಾಸ್ತಮಾನಗಳನ್ನು ಮಾಡುತ್ತಿರುತ್ತಾನೆ. ॥ ೧ ॥ ॥ ೧ ॥

**ಉ. ॥ ಸಮಾನ ಉ ಏವಾಯಂ ಚಾಸೌ ಚೋಷ್ಣೋಽಯಮುಷ್ಣೋಽಸೌ ಸ್ವರ ಇತೀಮಮಾಚಕ್ಷತೇ ಸ್ವರ ಇತಿ ಪ್ರತ್ಯಾಸ್ವರ ಇತ್ಯಮುಂ ತಸ್ಮಾದ್ವಾ ಏತಮಿಮಮಮುಂ ಚೋದ್ಗೀಥಮುಪಾಸೀತ ॥ ೨ ॥**

ಅ ॥ ದೇಹದಲ್ಲಿಯೂ ಆದಿತ್ಯಮಂಡಲದಲ್ಲಿಯೂ ಔಷ್ಣ್ಯವು ಸಮಾನವಾಗಿರುವುದರಿಂದ ದೇಹದಲ್ಲಿರತಕ್ಕ ಮುಖ್ಯಪ್ರಾಣನೂ, ಆದಿತ್ಯನಲ್ಲಿರತಕ್ಕ ಮುಖ್ಯಪ್ರಾಣನೂ ಸಮಾನನೇ. ದೇಹದಲ್ಲಿದ್ದ ವಾಯುವನ್ನು ಪ್ರಾಜ್ಞರು ಸ್ವರಃ ಎನ್ನುತ್ತಾರೆ. ಪ್ರತಿಪುರುಷರಿಗೂ ಅಭಿಮುಖವಾಗಿರತಕ್ಕ ಸೂರ್ಯಮಂಡಲದಲ್ಲಿ ಸರ್ವಸ್ವತಂತ್ರನಾದ ವಿಷ್ಣುವಿನ ವಿಶೇಷಜ್ಞಾನವಿದ್ದು ಸೂರ್ಯಮಂಡಲದಲ್ಲಿರತಕ್ಕ ವಾಯುವನ್ನು ಪ್ರತ್ಯಾಸ್ವರಃ ಎನ್ನುತ್ತಾರೆ. ದೇಹದಲ್ಲಿಯೂ ಸೂರ್ಯ ಮಂಡಲದಲ್ಲಿಯೂ ಇರತಕ್ಕ ವಾಯುಗಳಿಗೆ ಉಷ್ಣತ್ವಾದಿಗಳಿಂದ ಸಾಮ್ಯವಿದ್ದ ಪ್ರಯುಕ್ತ ದೇಹದಲ್ಲಿರತಕ್ಕ ವಾಯುವಿನಲ್ಲಿಯೂ ಸೂರ್ಯನಲ್ಲಿರತಕ್ಕ ವಾಯುವಿನಲ್ಲಿಯೂ ಉದ್ಗೀಥನನ್ನು ಉಪಾಸನೆ ಮಾಡಬೇಕು. ॥ ೨ ॥

**ಭಾ. ॥ (೧) ಆದಿತ್ಯಮಂಡಲಸ್ಥಶ್ಚ ಸರ್ವಪ್ರಾಣಿಗತಸ್ತಥಾ । ವಾಯುಸ್ಸಮಾನ ಏವಾಯಮುಷ್ಣೋಽಸಾವಪಿ ಚ ಸ್ಫುಟಂ ॥ (೨) ತಸ್ಮಾದಸ್ಮಿನ್ನಮುಷ್ಮಿನ್ವಾಽಪ್ಯುದ್ಗೀಥಾಖ್ಯಂ ಜನಾರ್ದನಂ । ಉಪಾಸೀತ ವಿಮೋಕ್ಷಾಯ ಸರ್ವಕಾಮಾಪ್ತಯೇ ತಥಾ ॥ ಇತಿಚ॥ (೩) ಕೇಶವಃ ಸ್ವಃ ಸ್ವತಂತ್ರತ್ವಾತ್ತದ್ರತೇರ್ಮಾರುತಃ ಸ್ವರಃ । ಶರೀರಸ್ಥಶ್ಚ ಸೂರ್ಯಸ್ಥಃ ಪ್ರತಿಪತ್ತ್ಯಾ ಸಮಂತತಃ । ಮಾಂ ಪ್ರತೀತ್ಯೇತ ಏವಾಸೌ ಪ್ರತ್ಯಾಸ್ವರ ಉದಾಹೃತಃ ॥೨॥೧॥**

ಅ ॥ (೧) ಆದಿತ್ಯಮಂಡಲದಲ್ಲಿರತಕ್ಕ ವಾಯುವಿನಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿರತಕ್ಕ ವಾಯುವಿನಲ್ಲಿಯೂ ಸ್ಪಷ್ಟವಾಗಿ ಔಷ್ಣ್ಯವು ತೋರಿದುದರಿಂದ ಇಬ್ಬರೂ ಸಮಾನರೇ. (೨) ಆದಕಾರಣ ಮೋಕ್ಷಸಿಗುವುದಕ್ಕಾಗಿಯೂ ಐಹಿಕ ಎಲ್ಲಾ ಅಭೀಷ್ಟಗಳನ್ನು ಹೊಂದುವುದಕ್ಕಾಗಿಯೂ ದೇಹದಲ್ಲಿರತಕ್ಕ ವಾಯುವಿನಲ್ಲಿಯೂ ಸೂರ್ಯನಲ್ಲಿರರಕ್ಕ ವಾಯುವಿನಲ್ಲಿಯೂ ಉದ್ಗೀಥನೆನಿಸಿಕೊಂಡ ಶ್ರೀಹರಿಯನ್ನು ಉಪಾಸನೆ ಮಾಡಬೇಕು (೩) ಶ್ರೀಹರಿಯು ಸರ್ವಸ್ವತಂತ್ರನಾದುದರಿಂದ ಸ್ವಃ ಎನ್ನಿಸುತ್ತಾನೆ. ಶ್ರೀಹರಿಯ ವಿಶೇಷ ಜ್ಞಾನವಿರುವವನಾದುದರಿಂದ ದೇಹದಲ್ಲಿದ್ದ ಮುಖ್ಯಪ್ರಾಣನು ಸ್ವರಃ ಎನ್ನಿಸುತ್ತಾನೆ. ಸೂರ್ಯನಲ್ಲಿದ್ದ ಮುಖ್ಯಪ್ರಾಣನು ಪ್ರತಿಯೊಬ್ಬರಿಗೂ ತಮತಮಗೆ ಅಭಿಮುಖವಾಗಿಯೇ ಇದ್ದಾನೆಂದು ಕಾಣುವುದರಿಂದಲೂ ವಿಷ್ಣುವಿನ ವಿಶೇಷಜ್ಞಾನವುಳ್ಳವನಾದುದರಿಂದಲೂ ಪ್ರತ್ಯಾಸ್ವರಃ ಎನ್ನಿಸುತ್ತಾನೆ ॥ ೨ ॥ ॥ ೧ ॥

**ಉ. ॥ ಅಥ ಖಲು ವ್ಯಾನಮೇವೋದ್ಗೀಥಮುಪಾಸೀತ ಯದ್ವೈ ಪ್ರಾಣಿತಿ ಸ ಪ್ರಾಣೋ ಯದಪಾನಿತಿ ಸೋಽಪಾನೋಽಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನೋ ಯೋ ವ್ಯಾನಃ ಸಾ ವಾಕ್ತಸ್ಮಾದಪ್ರಾಣನ್ನನಪಾನನ್ವಾಚಮಭಿವ್ಯಾಹರತಿ ॥ ೩ ॥**

ಅ ॥ ವ್ಯಾನ ಎಂಬ ಮುಖ್ಯಪ್ರಾಣನಲ್ಲಿಯೇ, ಉದ್ಗೀಥನೆನಿಸಿಕೊಂಡ ಶ್ರೀಹರಿಯನ್ನುಪಾಸನೆ ಮಾಡಬೇಕು. ಉಸಿರಾಟವನ್ನು ಮಾಡಿಸುವವನು ಪ್ರಾಣ (ಶೇಷ)ನು ಮಲಾದಿಗಳನ್ನು ಶರೀರದಿಂದ ಹೊರಪಡಿಸುವವನು ಅಪಾನ (ಗರುಡ)ನು. ಪ್ರಾಣ ಅಪಾನರನ್ನು ಕೂಡಿಸುವವನು ವ್ಯಾನನು. ಇವನೇ ವಾಗಿಂದ್ರಿಯದಲ್ಲಿರುವವನು. ವಾಕ್ ಎಂದು ಹೆಸರುಳ್ಳವನು, ಮಾತನಾಡಿಸುವವನು. ವ್ಯಾನನಲ್ಲಿದ್ದ ವಿಷ್ಣುವು ವಾಕ್ ಎಂದು ಹೆಸರುಳ್ಳವನು, ವಾಗಿಂದ್ರಿಯಕ್ಕೆ ಪ್ರವರ್ತಕನು, ಮತ್ತು ಶರೀರದೊಳಗೆ ಇರುವವನು. ವ್ಯಾನನು ವಾಗಿಂದ್ರಿಯಕ್ಕೆ ಪ್ರವರ್ತಕನಾದುದರಿಂದಲೇ. ಪ್ರಾಣ ಅಪಾನರ ವ್ಯಾಪಾರವಿಲ್ಲದೆ ಪ್ರಾಣ ಅಪಾನರ ವ್ಯಾಪಾರವನ್ನು ತಡೆದು ಮಾತನಾಡುತ್ತಾನೆ. (ಆದಕಾರಣ ಪ್ರಾಣ ಅಪಾನರು ಮಾತನಾಡಿಸುವವರಲ್ಲ. ವ್ಯಾನನೇ.) ॥ ೩ ॥

**ಉ ॥ ಯಾ ವಾಕ್ ಸರ್ಕ್ತಸ್ಮಾದಪ್ರಾಣನ್ನನಪಾನನ್ನೃಚಮಭಿವ್ಯಾಹರತಿ ಯಾ ಋಕ್ತತ್ಸಾಮ ತಸ್ಮಾದಪ್ರಾಣನ್ನನಪಾನನ್ಸಾಮ ಗಾಯತಿ ಯತ್ಸಾಮ ಸ ಉದ್ಗೀಥಸ್ತಸ್ಮಾದಪ್ರಾಣನ್ನನಪಾನನ್ನುದ್ಗಾಯತಿ ॥ ೪ ॥**

ಅ ॥ ವಾಕ್ ಎಂದು ಹೆಸರುಳ್ಳ, ವಾಗಿಂದ್ರಿಯದಲ್ಲಿರುವ ವಾಗಿಂದ್ರಿಯಕ್ಕೆ ಪ್ರವರ್ತಕನಾದ ವ್ಯಾನನಿಗೆ ಋಕ್ ಎಂದು ಹೆಸರು ಋಕ್ಕಿನಲ್ಲಿ ಇರುವವನು ಋಕ್ಪ್ರವರ್ತಕನು. ಆ ವ್ಯಾನನಲ್ಲಿದ್ದ ವಿಷ್ಣುವು ಋಕ್ಪ್ರವರ್ತಕನಾದ ವ್ಯಾನನಲ್ಲಿರುವವನು. ಆದಕಾರಣ ಪ್ರಾಣಾಪಾನರ ವ್ಯಾಪಾರ ತಡೆದು

ಋಕ್ಕನ್ನು ಹೇಳುತ್ತಾನೆ. ಋಕ್ಕಿನಲ್ಲಿರುವ ಋಕ್ ಎಂದು ಹೆಸರುಳ್ಳ ಋಕ್ಪ್ರವರ್ತಕನಾದ ವ್ಯಾನನಿಗೆ ಸಾಮ ಎಂದು ಹೆಸರು. ಸಾಮದಲ್ಲಿ ಇರುವವನು ಸಾಮಕ್ಕೆ ಪ್ರವರ್ತಕನು, ಋಕ್ಪ್ರವರ್ತಕನಾದ ವ್ಯಾನನಲ್ಲಿದ್ದ ವಿಷ್ಣುವೇ ಸಾಮಪ್ರವರ್ತಕನಾದ ವ್ಯಾನನಲ್ಲಿರುವವನು. ಸಾಮಪ್ರವರ್ತಕನಾದ ವ್ಯಾನನು ಉದ್ಗೀಥ ಎಂಬ ಸಾಮದಲ್ಲಿರುವವನು, ಉದ್ಗೀಥನೆನಿಸಿಕೊಂಡವನು ಉದ್ಗೀಥಪ್ರವರ್ತಕನು, ಸಾಮಪ್ರವರ್ತಕನಾದ ವ್ಯಾನನಲ್ಲಿದ್ದ ವಿಷ್ಣುವೇ ಉದ್ಗೀಥಪ್ರವರ್ತಕನಾದ ವ್ಯಾನನಲ್ಲಿರುವವನು. ವ್ಯಾನಾದಿಗಳಲ್ಲಿರುವ ಶ್ರೀಹರಿಯೇ ಉದ್ಗೀಥ ಎಂಬ ಸಾಮದಲ್ಲಿದ್ದು ಉತ್ಕೃಷ್ಟಗಾನವನ್ನು ಮಾಡಿಸುವವನು. ವ್ಯಾನನು ಪ್ರಾಣಾದಿಗಳಿಂದ ಶ್ರೇಷ್ಠನಾದಪ್ರಯುಕ್ತ ವ್ಯಾನವೆಂಬ ಮುಖ್ಯ ವಾಯುವಿನಲ್ಲಿ ಉದ್ಗೀಥನನ್ನು ಉಪಾಸನೆಮಾಡಬೇಕು. ॥ ೪ ॥

**ಭಾ. ॥ (೧) ಪ್ರಾಣಾದ್ಯಾಸ್ತ್ರಿವಿಧಾಃ ಪಂಚ ಪ್ರಧಾನೋ ವಾಯುರೇವ ಚ । ಮುಖ್ಯ-ಪಂಚಕರೂಪಸ್ಸನ್ ಗರುಡೋ ಮಧ್ಯಪಂಚಕಃ ॥ (೨) ಅವಮಃ ಪಂಚಕಸ್ತ್ವನ್ಯೇ ಪ್ರಾಣಾದ್ಯಾಸ್ತಸ್ಯ ಸೂನವಃ ॥ ಇತಿ ತ್ರೇಧಾ ವಿಭಾಗೋಽಯಂ ವಿಭಾಗೋಽನ್ಯಶ್ಚತುರ್ಥಕಃ । ಪ್ರಾಣಾಪಾನೌ ಶೇಷವೀಂದ್ರೌ ತಥೋದಾನಸಮಾನಕೌ ॥ ರುದ್ರೇಂದ್ರೌ ತತ್ಪರಃ ಶ್ರೇಷ್ಠೋ ವಾಯುರ್ವ್ಯಾನ ಉದಾಹೃತಃ ॥ (೩) ತಸ್ಮಿನ್ನುದ್ಗೀಥನಾಮಾನಮುಪಾಸೀತ ಹರಿಂ ಪರಂ। ಯೋಽಸೌ ವ್ಯಾನಗತೋ ವಿಷ್ಣುಸ್ಸ ವಾಗೃಕ್ಸಾಮಗಃ ಸದಾ ॥ ಉದ್ಗೀಥೇ ಚ ಸ ಏವೈಕಃ ತಸ್ಮಾದ್ವ್ಯಾನಾದ್ಧಿ ತತ್ಕ್ರಿಯಾಃ । ಉದ್ಗೀಥನಾಮಾ ಭಗವಾನ್ ಸ್ಥಿತೋ ವ್ಯಾನಾದಿಪಂಚಕೇ ॥ ೩, ೪ ॥ ॥ ೧ ॥**

ಅ ॥ (೧) ಪ್ರಾಣ ಅಪಾನ ಮೊದಲಾದ ಐವರು ಮೂರು ವಿಧ (1) ಪ್ರಧಾನ ವಾಯುವಿನದ್ದು ಮುಖ್ಯವಾದುದು ಐದು ರೂಪಗಳು, (2) ಗರುಡನದ್ದು ಪ್ರಾಣ ಮೊದಲಾದ ಹೆಸರುಳ್ಳದ್ದು ಅಮುಖ್ಯ ಐದು ರೂಪಗಳು. (೨) (3) ನಿಕೃಷ್ಟವಾದುದು ಪ್ರಾಣಮೊದಲಾದ ಪ್ರಧಾನ ವಾಯುವಿನ ಮಕ್ಕಳದ್ದು ಐದು ರೂಪಗಳು ಹೀಗೆ ಮೂರು ವಿಧ ನಾಲ್ಕನೇದು ಬೇರೆ ವಿಭಾಗವು,ಹೇಗೆಂದರೆ— ಪ್ರಾಣ ಅಪಾನರೆಂದರೆ ಶೇಷ ಗರುಡರು, ಉದಾನ ಸಮಾನರೆಂದರೆ ರುದ್ರ ಇಂದ್ರರು ಅವರಿಂದುತ್ತಮನು ಶ್ರೇಷ್ಠನು ವ್ಯಾನವಾಯುವು (೩) ವ್ಯಾನನಲ್ಲಿ ಉದ್ಗೀಥನೆನಿಸಿಕೊಂಡ ಸರ್ವೋತ್ತಮನಾದ ಶ್ರೀಹರಿಯನ್ನುಪಾಸನೆ ಮಾಡಬೇಕು. ವ್ಯಾನನಲ್ಲಿ ಅಂತರ್ಗತನಾದ ವಿಷ್ಣುವೇ ವಾಕ್ ಋಕ್ ಸಾಮ ಉದ್ಗೀಥಸಾಮ ಇವುಗಳಲ್ಲಿ ಸದಾ ಸ್ತುತಿಸಲ್ಪಡುವವನು, ಆದಕಾರಣ ಆ ವ್ಯಾನನಿಂದಲೇ ಮಾತನಾಡುವಿಕೆ, ಋಕ್ಕನ್ನು ಹೇಳುವುದು, ಸಾಮಗಾನ, ಉದ್ಗಾನರೂಪ ಕ್ರಿಯೆಗಳು ಆಗುತ್ತವೆ. ಉದ್ಗೀಥನೆನಿಸಿಕೊಂಡ ಶ್ರೀಹರಿಯು ವ್ಯಾನ ಮತ್ತು ವಾಕ್, ಋಕ್, ಸಾಮ ಉದ್ಗೀಥಗಳಲ್ಲಿರತಕ್ಕ ನಾಲ್ಕು ವ್ಯಾನರೂಪ ಹೀಗೆ ಐದರಲ್ಲಿ ಇರುವವನು. ॥ ೩ ॥ ೪ ॥ ॥ ೧ ॥

**ಉ. ॥ ಅತೋ ಯಾನ್ಯನ್ಯಾನಿ ವೀರ್ಯವಂತಿ ಕರ್ಮಾಣಿ ಯಥಾಗ್ನೇರ್ಮಥನಮಾಜೇಃ ಸರಣಂ ದೃಢಸ್ಯ ಧನುಷ ಆಯಮನಮಪ್ರಾಣನ್ನನಪಾನಂಸ್ತಾನಿ ಕರೋತ್ಯೇತಸ್ಯ ಹೇತೋರ್ವ್ಯಾನಮೇವೋದ್ಗೀಥಮುಪಾಸೀತ॥೫॥**

ಅ ॥ ಅರಣಿ (ಬೆಂಕಿಯನ್ನು ಹುಟ್ಟಿಸುವ ಕಟ್ಟಿಗೆ) ಗಳಿಂದ ಅಗ್ನಿಯನ್ನು ಹುಟ್ಟಿಸುವುದು. ಯುದ್ಧಕ್ಕಾಗಿ ಹೋಗುವುದು, ದೃಢವಾದ ಧನುಸ್ಸನ್ನು ಬಗ್ಗಿಸುವುದು, ಮೊದಲಾದ ಮಹಾಪ್ರಯತ್ನಸಾಧ್ಯಗಳಾದ ಕರ್ಮಗಳನ್ನು ಪ್ರಾಣ ಅಪಾನರ ವ್ಯಾಪಾರವನ್ನು ನಿಲ್ಲಿಸಿಯೇ ವ್ಯಾನನು ಮಾಡಿಸುತ್ತಾನೆ.

(ಆದಕಾರಣ ವ್ಯಾನನೇ ಸರ್ವಕಾರ್ಯಗಳನ್ನು ಮಾಡಿಸುವವನಾದುದರಿಂದ ಸರ್ವೋತ್ತಮನು.) ಇದುದ ರಿಂದ ವ್ಯಾನನಲ್ಲಿಯೇ ಶ್ರೀಹರಿಯನ್ನು ಪಾಸನೆ ಮಾಡಬೇಕು. || ೫ ||

**ಭಾ. || (೧) ವೀರ್ಯವತ್ಕರ್ಮಕೃತ್ತಸ್ಮಾದ್ವ್ಯಾನ ಏವ ಹ್ಯುದಾಹೃತಃ || (೨) ತಸ್ಮಾದ್ವ್ಯಾನಗತಂ ವಿಷ್ಣುಮುಪಾಸೀತೈವ ನಿತ್ಯಶಃ | ಯದ್ಯಪ್ಯೇಕೋ ಹಿ ಭಗವಾನ್ಸರ್ವದಾ ಸರ್ವವಸ್ತುಗಃ || ಅನೂನೋದ್ರಿಕ್ತಮಹಿಮೋ ನಿರ್ವಿಶೇಷಃ ಸದೈವ ಚ | ತಥಾಽಪಿ ಶಕ್ತಿ ಕ್ರಿಯಾಭೇದಾನ್ನಾಮರೂಪಾದಿಕಂ ಪೃಥಕ್ | ಉಚ್ಯತೇ ಹ್ಯಪೃಥಕ್ತ್ವೇಽಪಿ ಪೂರ್ಣೈಶ್ವರ್ಯೈಕಹೇತುತಃ || (೩) ಅವಿಶೇಷೋಽಪಿ ಭಗವಾನ್ ಸರ್ವಶಕ್ತಿತ್ವಹೇತುತಃ| ವಿಶೇಷಹೇತುಕಂ ಸರ್ವಂ ಕರೋತ್ಯವಿಕೃತಃ ಸದಾ || ೫ || || ೧ ||**

ಅ || (೧) ಶ್ರೀಹರಿಯು ವ್ಯಾನನಲ್ಲಿದ್ದು ಪ್ರಯುಕ್ತ ವ್ಯಾನನೇ ಪ್ರಬಲ ಕರ್ಮಗಳನ್ನು ಮಾಡುವವನು. ಆದಕಾರಣ ನಿತ್ಯದಲ್ಲಿಯೂ ವ್ಯಾನನಲ್ಲಿದ್ದ ವಿಷ್ಣುವನ್ನೇ ಉಪಾಸನೆ ಮಾಡಬೇಕು. (೨) ಯದ್ಯಪಿ ಭಗವಂತನು ಸರ್ವದಾ ಸರ್ವವಸ್ತುಗಳಲ್ಲಿ ಇರುವವನು. ಆ ವಸ್ತುಗಳಲ್ಲಿರುವ ಭಗವದ್ರೂಪಗಳಿಗೆ ಭೇದವಿಲ್ಲ. ಶ್ರೀಹರಿಯು ಸರ್ವದಾ ಪೂರ್ಣವಾದ ಉತ್ಕೃಷ್ಟ ಮಹಿಮೆಯುಳ್ಳವನು, ವಿಶೇಷವಿಲ್ಲದವನು ಭಗವದ್ರೂಪಗಳಿಗೆ ಭೇದವಿಲ್ಲವಾದರೂ, ಅವರವರ ಕ್ರಿಯೆಗಳು ಬೇರೆಬೇರೆಯಾದ ಕಾರಣ ಪೂರ್ಣವಾದ ಐಶ್ವರ್ಯದ ಮಹಿಮೆಯಿಂದ ನಾಮ, ರೂಪ ಮೊದಲಾದುದು ಬೇರೆಬೇರೆ ಇದೆ. (೩) ಶ್ರೀಹರಿಗೆ ಯಾವಾಗಲೂ ದುಃಖ ಮೊದಲಾದ ವಿಕಾರಗಳಿಲ್ಲ. ಶ್ರೀಹರಿಯು ಎಲ್ಲಾ ರೂಪಗಳಲ್ಲಿಯೂ ಒಂದೇ ರೀತಿಯಾಗಿರುತ್ತಾನೆ. ಒಂದು ರೂಪಕ್ಕೆ ಸಾಮರ್ಥ್ಯ ವಿಶೇಷವದೆ. ಇನ್ನೊಂದಕ್ಕೆ ಇಲ್ಲ ಎಂದು ಸರ್ವಥಾ ಹೇಳಕೂಡದು. ಆದರೂ ಸಾಮರ್ಥ್ಯವಿಶೇಷದಿಂದೊಡಗೂಡಿದ ಕಾರ್ಯಗಳನ್ನು ಜೀವರಲ್ಲಿದ್ದು ತಾನೇ ಮಾಡುತ್ತಾನೆ. || ೫ || ೧ ||

ಪೀ---ಉದ್ಗೀಥಾಕ್ಷರದಲ್ಲಿ ಹೇಳಲ್ಪಡತಕ್ಕ ಪ್ರಾಣಾದಿಗಳಲ್ಲಿರತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ---

**ಉ. || ಅಥ ಖಲೂದ್ಗೀಥಾಕ್ಷರಾಣ್ಯುಪಾಸೀತೋದ್ಗೀಥ ಇತಿ ಪ್ರಾಣ ಏವೋತ್ಪ್ರಾಣೇನ ಹ್ಯುತ್ತಿಷ್ಠತಿ ವಾಗ್ಗೀರ್ವಾಚೋ ಹಿ ಗಿರ ಇತ್ಯಾಚಕ್ಷತೇಽನ್ನಂ ಥಮನ್ನೇ ಹೀದಂ ಸರ್ವಂ ಸ್ಥಿತಂ || ೬ ||**

ಅ || ಉದ್ಗೀಥಾಕ್ಷರದಲ್ಲಿ ಹೇಳಲ್ಪಡತಕ್ಕ ದೇವತೆಗಳಲ್ಲಿರತಕ್ಕ ಭಗವದ್ರೂಪಗಳನ್ನುಪಾಸನೆ ಮಾಡಬೇಕು. ಮುಖ್ಯಪ್ರಾಣನಿಂದಲೇ ಜಗತ್ತು ಹುಟ್ಟುವುದರಿಂದ ಪ್ರಾಣನು ಉತ್ ಎನ್ನಿಸುತ್ತಾನೆ ಮಾತುಗಳನ್ನು (ವಿದ್ವಾಂಸರು) ಗಿರಃ ಎನ್ನುತ್ತಾರೆ. ಆದಕಾರಣ ಸರಸ್ವತಿಯು ಗೀಃ ಎನ್ನಿಸುತ್ತಾಳೆ. ಅನ್ನಾಭಿಮಾನಿಯಾದ ಬ್ರಹ್ಮನಿಂದಲೇ ಸಮಸ್ತ ಪ್ರಾಣಿಗಳು ಜೀವಿಸಿಕೊಂಡು ಇರುತ್ತಾರೆ, ಆದಕಾರಣ ಅನ್ನಾಭಿಮಾನಿಯಾದ ಬ್ರಹ್ಮನು ಥಂ ಎನ್ನಿಸುತ್ತಾನೆ. || ೬ ||

**ಉ || ದ್ಯೌರೇವೋದಂತರಿಕ್ಷಂ ಗೀಃ ಪೃಥಿವೀ ಥಮಾದಿತ್ಯ ಏವೋದ್ವಾಯುರ್ಗೀರಗ್ನಿಸ್ಥಂ ಸಾಮವೇದ ಏವೋದ್ಯಜುರ್ವೇದೋ ಗೀರೃಗ್ವೇದಸ್ಥಂ ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನವಾನನ್ನಾ-**

**ದೋ ಭವತಿ ಯ ಏತಾನ್ಯೇವಂ ವಿದ್ವಾನುದ್ಗೀಥಾಕ್ಷರಾಣ್ಯುಪಾಸ್ತೇ ಉದ್ಗೀಥ ಇತಿ || ೭ ||**

ಅ || ದ್ಯುಲೋಕಾಭಿಮಾನಿಯು ಉತ್ ಎಂದೂ, ಅಂತರಿಕ್ಷಾಭಿಮಾನಿಯು ಗೀಃ ಎಂದೂ, ಪೃಥಿವ್ಯಭಿಮಾನಿಯು ಥಂ ಎಂದೂ ಅನ್ನಿಸುತ್ತಾರೆ. ಆದಿತ್ಯನೇ ಉತ್ ಎಂದೂ, ಭೂತವಾಯುವಿನ ಅಧಿಪತಿಯು ಗೀಃ ಎಂದೂ, ಅಗ್ನಿಯು ಥಂ ಎಂದೂ ಅನ್ನಿಸುತ್ತಾರೆ. ಸಾಮವೇದಾಭಿಮಾನಿಯೇ ಉತ್ ಎಂದೂ, ಯಜುರ್ವೇದಾಭಿಮಾನಿಯು ಗೀಃ ಎಂದೂ ಋಗ್ವೇದಾಭಿಮಾನಿಯು ಥಂ ಎಂದೂ ಅನ್ನಿಸುತ್ತಾರೆ. ಉತ್ ಗೀ ಥ ಎಂಬ ಉದ್ಗೀಥಾಕ್ಷರಗಳಲ್ಲಿ ಹೇಳಲ್ಪಡತಕ್ಕ ಪ್ರಾಣ ಮೊದಲಾದ ನಾಲ್ಕು ವರ್ಗಗಳಲ್ಲಿರತಕ್ಕ ಶ್ರೀಹರಿಯನ್ನುಪಾಸನೆ ಮಾಡುವವನಿಗೆ ಉದ್ಗೀಥನೆನಿಸಿಕೊಂಡ ಶ್ರೀಹರಿಯು ವೇದ ಮೊದಲಾದವುಗಳಲ್ಲಿ ಹೇಳಿದ ಮೋಕ್ಷ ಮೊದಲಾದ ವಾಗಿಂದ್ರಿಯದ ಫಲವನ್ನು ಕೊಡುತ್ತಾನೆ. ಆ ಉಪಾಸಕನು ಯಥೇಷ್ಟ ಅನ್ನವುಳ್ಳವನೂ, ಅನ್ನವನ್ನುಣ್ಣುವುದರಲ್ಲಿ ಸಮರ್ಥನೂ ಆಗುತ್ತಾನೆ. || ೭ ||

ಪೀ—ಕಾಮ್ಯಗಳು ಸಮೃದ್ಧಿಯಾಗಲಿಕ್ಕೆ ಯಾವುವು ಕಾರಣಗಳೋ ಅವುಗಳಲ್ಲಿರತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ—

**ಉ. || ಅಥ ಖಲ್ವಾಶೀಸ್ಸಮೃದ್ಧಿರುಪಸರಣಾನೀತ್ಯುಪಾಸೀತ ಯೇನ ಸಾಮ್ನಾ ಸ್ತೋಷ್ಯನ್ ಸ್ಯಾತ್ತತ್ಸಾಮೋಪಧಾವೇತ್ || ೮ ||**

ಅ || ಇಚ್ಛಿಸಲ್ಪಡತಕ್ಕ ವಸ್ತುಗಳ ಸಮೃದ್ಧಿಕಾರಣಗಳು ಹೇಳಲ್ಪಡುತ್ತವೆ. ಸಾಮಾದಿಗಳಲ್ಲಿರತಕ್ಕ ಭಗವದ್ರೂಪಗಳು ಇಷ್ಟವನ್ನು ಹೊಂದಿಸಿಕೊಟ್ಟು ಕಾಮಗಳ ಸಮೃದ್ಧಿಗೆ ಕಾರಣಗಳಾದುದರಿಂದ ಉಪಸರಣಗಳೆನ್ನಿಸುತ್ತವೆಂದು ತಿಳಿದು ಉಪಾಸನೆ ಮಾಡಬೇಕು. ಪುರುಷನು ಯಾವ ಬೃಹದ್ರಥಂತರ ಮೊದಲಾದ ಸಾಮವಿಶೇಷದಿಂದ ಸ್ತೋತ್ರ ಮಾಡುವವನಾಗುತ್ತಾನೋ, ಅಂತಹ ಸಾಮಗಳಲ್ಲಿರತಕ್ಕ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಆ ಸಾಮವನ್ನು ಗಾನಮಾಡಬೇಕು. || ೮ ||

**ಉ. || ಯಸ್ಯಾಮೃಚಿ ತಾಮೃಚಂ ಯದಾರ್ಷೇಯಂ ತಮೃಷಿಂ ಯಾಂ ದೇವತಾಮಭಿಷ್ಟೋಷ್ಯನ್ ಸ್ಯಾತ್ತಾಂ ದೇವತಾಮುಪಧಾವೇತ್ || ೯ ||**

ಅ || ಯಾವ ಋಕ್ಕಿನಲ್ಲಿ ಸೇರಿಸಿದ ಸಾಮದಿಂದ ಸ್ತೋತ್ರಮಾಡುವನೋ ಅಂತಹ ಋಕ್ಕನ್ನು ತೆಗೆದುಕೊಳ್ಳಬೇಕು. (ಅಂದರೆ ಆ ಋಕ್ಕಿನಲ್ಲಿ ಸ್ತುತಿಸಲ್ಪಡತಕ್ಕ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಆ ಋಕ್ಕಿನಲ್ಲಿ ಕೂಡಿಸಿದ ಸಾಮಗಾನ ಮಾಡಬೇಕು.) ಯಾವ ಋಷಿಯು ಕಂಡ ಸಾಮಸ್ತೋತ್ರ ಮಾಡಲಿಕ್ಕೆ ಇಷ್ಟವಾಗಿಯದೋ, ಆ ಋಷಿಯಲ್ಲಿರತಕ್ಕ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಆ ಋಷಿಯು ಕಂಡ ಸಾಮಾದಿಗಳನ್ನು ಹೇಳಬೇಕು. ಯಾವ ದೇವತೆಗಳನ್ನು ಚೆನ್ನಾಗಿ ಸ್ತುತಿಸುತ್ತಾನೋ ಆ ದೇವತೆಗಳಲ್ಲಿರತಕ್ಕ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಸ್ತುತಿಸಬೇಕು. || ೯ ||

**ಉ. || ಯೇನ ಛಂದಸಾ ಸ್ತೋಷ್ಯನ್ ಸ್ಯಾತ್ತಚ್ಛಂದ ಉಪಧಾವೇದ್ಯೇನ ಸ್ತೋಮೇನ ಸ್ತೋಷ್ಯಮಾಣಃ ಸ್ಯಾತ್ತಂ ಸ್ತೋಮಮುಪಧಾವೇತ್ || ೧೦ ||**

ಅ || ಗಾಯತ್ರೀ ಮೊದಲಾದ ಛಂದಸ್ಸಿನಿಂದ ಸ್ತುತಿಸುವಾಗ ಛಂದೋಽಭಿಮಾನಿದೇವತೆಗಳಲ್ಲಿರತಕ್ಕ ಶ್ರೀಹರಿಯನ್ನು ಸರ್ವರಿಂದಲೂ ಉತ್ತಮನೆಂದು ತಿಳಿದು ಆ ಛಂದಸ್ಸನ್ನು ಹೇಳಬೇಕು. ಗಾನವಿಶೇಷ ದಿಂದ ಅಥವಾ ವಾಕ್ಯಸಮೂಹದಿಂದ ಸ್ತುತಿಸಬೇಕೆಂದು ಇಚ್ಛಿಸುವವನು ಅದರಲ್ಲಿರತಕ್ಕ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಆ ಸಾಮದಿಂದ ಕೂಡಿದ ತ್ರಿವೃತ್ ಪಂಚದಶ ಮೊದಲಾದ ಋಗ್ವಿಶೇಷ ಸಮುದಾಯವನ್ನು ಹೇಳಬೇಕು. || ೧೦ ||

**ಉ. || ಯಾಂ ದಿಶಮಭಿಷ್ಟೋಷ್ಯನ್ಸ್ಯಾತ್ತಾಂ ದಿಶಮುಪಧಾವೇತ್ ೧೧**

ಅ || ದಿಗ್ದೇವತೆಗಳನ್ನು ಸ್ತುತಿಸುವಾಗ ಆ ದಿಕ್ಕಿನಲ್ಲಿರತಕ್ಕ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಸ್ತುತಿಸಬೇಕು || ೧೧ ||

ಪೀ—ಬೇರೆ ದೇವತೆಗಳನ್ನು ಸರ್ವೋತ್ತಮರೆಂದು ತಿಳಿದು ಉಪಾಸನೆ ಮಾಡಕೂಡದೆನ್ನುತ್ತಾರೆ—

**ಉ. || ಆತ್ಮಾನಮಂತತ ಉಪಸೃತ್ಯ ಸ್ತುವೀತ ಕಾಮಂ ಧ್ಯಾಯನ್ನಪ್ರಮತ್ತೋಽಭ್ಯಾಶೋ ಹ ಯದಸ್ಮೈ ಸ ಕಾಮಃ ಸಮೃಧ್ಯೇತ ಯತ್ಕಾಮಃ ಸ್ತುವೀತೇತಿ ಯತ್ಕಾಮಃ ಸ್ತುವೀತೇತಿ || ಇತಿ ತೃತೀಯಃ ಖಂಡಃ || ೩-೩ ||೧೨||**

ಅ || ಯಾವ ಕಾಮವನ್ನುದ್ದೇಶಿಸಿಕೊಂಡು ಪುರುಷನು ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಬೇರೆ ದೇವತೆಗಳನ್ನು ಸ್ತುತಿಸುವನೋ, ಆತನಿಗೆ ಆ ಕಾಮವು ಚೆನ್ನಾಗಿ ಪರಿಪೂರ್ಣವು ಆಗುತ್ತದೆ. ಆದಕಾರಣ ತನಗೆ ಬೇಕಾದ ಇಷ್ಟವನ್ನು ಇಚ್ಛಿಸುವವನು ಆಲಸ್ಯವಿಲ್ಲದೆ ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದು ಬೇರೆ ದೇವತೆಗಳನ್ನು ಸ್ತುತಿಸಬೇಕು. || ೧೨ ||

**ಭಾ. || (೧) ಉದ್ಗೀಥಾಕ್ಷರಗಂ ಚೈವ ಪ್ರಾಣಾದಿಷು ಚ ಸಂಸ್ಥಿತಂ | ಆಶೀಸ್ಸಮೃದ್ಧಿಹೇತುಸ್ಸ್ಯಖಿಲೇಷು ವ್ಯವಸ್ಥಿತಂ | ಏಕಮೇವ ಹರಿಂ ವೇದ ಯಃ ಸ ಸರ್ವೇಷ್ಟಮಾಪ್ನುಯಾತ್ || ಇತಿ ಚ || (೨) ಉಚ್ಛಬ್ದವಾಚ್ಯಾಃ ಪ್ರಾಣಾದ್ಯಾ ವಾಗಾದ್ಯಾ ಗೀರಿತೀರಿತಾಃ | ಅನ್ನಾದ್ಯಾಸ್ಥಮಿತಿ ಪ್ರೋಕ್ತಾಸ್ತೇಷೂದ್ಗೀಥೋ ಹರಿಃ ಸ್ಥಿತಃ || ಇತಿ ಚ || (೩) ಆತ್ಮಾನಂ ಪರಮಾತ್ಮಾನಮಂತತಃ ಸರ್ವೋತ್ತಮತ್ವೇನ ಸರ್ವತ್ರೋಪಸೃತ್ಯ || ೬, ೭, ೮, ೯, ೧೦, ೧೧, ೧೨ || ಇತಿ ತೃತೀಯಃ ಖಂಡಃ || ೩-೩ || || ೧ ||**

ಅ || (೧) ಉದ್ಗೀಥಾಕ್ಷರದಲ್ಲಿ ಸ್ತುತಿಸಲ್ಪಡುವವನೂ ಅಪೇಕ್ಷಿಸಿದ್ದನ್ನು ಕೊಡತಕ್ಕ ಸಾಮ ದೇವತಾ ಮೊದಲಾದವುಗಳಲ್ಲಿ ಇರತಕ್ಕವನೂ ಶ್ರೀಹರಿಯು ಒಬ್ಬನೇ ಎಂದು ತಿಳಿಯುವವನು ಎಲ್ಲಾ ಇಷ್ಟಗಳನ್ನು ಹೊಂದುತ್ತಾನೆ. (೨) ಪ್ರಾಣಾದಿಗಳು ಉತ್ ಎಂದೂ, ವಾಗಾದಿಗಳು ಗೀಃ ಎಂದೂ, ಅನ್ನಾದಿಗಳು ಥಂ ಎಂದೂ ಹೇಳಲ್ಪಡುತ್ತವೆ. ಅವುಗಳಲ್ಲಿ ಉದ್ಗೀಥನೆನಿಸಿಕೊಂಡ ಶ್ರೀಹರಿಯು ಇದ್ದಾನೆ. (೩) ಪರಮಾತ್ಮನನ್ನು ಕೊನೆಗೆ ಸರ್ವೋತ್ತಮನೆಂದು ಎಲ್ಲಾ ಉಪಾಸನೆಗಳಲ್ಲಿ ತಿಳಿದು (ಮೋಕ್ಷವನ ಹೊಂದುತ್ತಾನೆ.) || ೬, ೭, ೮, ೯, ೧೦, ೧೧, ೧೨ || ೩-೩ || || ೧ ||

**ಮೂರನೇ ಖಂಡವು ಮುಗಿಯಿತು.**

## ೪ನೇ ಖಂಡವು

ಪೀ—ಉದ್ಗೀಥದ ಏಕದೇಶವಾದ ಪ್ರಣವದ ಉಪಾಸನೆಗೆ ಫಲ ಹೇಳುತ್ತಾರೆ—

**ಉ. ॥ ಓಮಿತ್ಯೇತದಕ್ಷರಮುದ್ಗೀಥಮುಪಾಸೀತೋಮಿತಿ ಹ್ಯುದ್ಗಾಯತಿ ತಸ್ಯೋಪವ್ಯಾಖ್ಯಾನಂ ॥ ೧ ॥**

ಅ ॥ ಶ್ರೀಹರಿಯನ್ನುದ್ದೇಶಿಸಿ ಉತ್ಕೃಷ್ಟಗಾನಮಾಡುತ್ತಾನೆ. ಆದಕಾರಣ ಓಂ ಎಂದು ಹೆಸರುಳ್ಳವನೂ, ನಾಶರಹಿತನೂ, ಆದ ಉದ್ಗೀಥನೆನಿಸಿಕೊಂಡ ಶ್ರೀಹರಿಯನ್ನುಪಾಸನೆ ಮಾಡಬೇಕು. ಓಂ ಎಂದು ಹೆಸರುಳ್ಳವನೂ. ನಾಶರಹಿತನೂ ಆದ ಶ್ರೀಹರಿಯನ್ನು ಹೇಳುವ ಓಂ ಎಂಬುದರ ಅರ್ಥಭೂತನಾದ ಶ್ರೀಹರಿಯ ಉಪಾಸನೆಯಿಂದ ಮೋಕ್ಷವು ಸಿಗುತ್ತದೆ ಎಂಬುದನ್ನು ಪೂರ್ವದಲ್ಲಿ ನಡೆದ ಕಥೆಯನ್ನು ವಿವರಿಸಿ ಹೇಳುತ್ತೇವೆ. ॥ ೧ ॥

**ಉ. ॥ ದೇವಾ ವೈ ಮೃತ್ಯೋರ್ಬಿಭ್ಯತಸ್ತ್ರಯೀಂ ವಿದ್ಯಾಂ ಪ್ರಾವಿಶꣳಸ್ತೇ ಛಂದೋಭಿರಾಚ್ಛಾದಯನ್ಯದೇಭಿರಾಚ್ಛಾದಯꣳಸ್ತಚ್ಛಂದಸಾಂ ಛಂದಸ್ತ್ವಂ ॥ ೨ ॥**

ಅ ॥ ಸಂಹರಿಸುವುದರಿಂದ ಮೃತ್ಯು ಎನ್ನಿಸಿಕೊಂಡ ದುರ್ಗಾದೇವಿಗೆ ದೇವತೆಗಳು ಹೆದರಿದವರಾಗಿ ವೇದವಿದ್ಯೆಯನ್ನು ಮರೆಹೊಕ್ಕಿದರು. (ಅಂದರೆ ಪ್ರಣವ ಬಿಟ್ಟು ಕೇವಲ ಋಗಾದಿವೇದಗಳನ್ನು ಅಧ್ಯಯನ ಮಾಡುತ್ತಾ ವೇದಾಭಿಮಾನಿಗಳಾದ ದೇವತೆಗಳಲ್ಲಿ ಶ್ರೀಹರಿಯ ಉಪಾಸನಾದಿಗಳನ್ನು ಮಾಡಿದರು.) ಆ ದೇವತೆಗಳು ವೇದಗಳಲ್ಲಿ ಶ್ರೀಹರಿಯನ್ನುಪಾಸನೆ ಮಾಡಿದುದರಿಂದ ತಮ್ಮನ್ನು ಮರೆಮಾಡಿಕೊಂಡರು. ವೇದಗಳಿಂದ ತಮ್ಮನ್ನು ಮರೆಮಾಡಿಕೊಂಡದ್ದರಿಂದಲೇ ವೇದಗಳಿಗೆ ಛಂದಃ ಎಂಬ ಹೆಸರು ॥ ೨ ॥

**ಉ. ॥ ತಾನು ತತ್ರ ಮೃತ್ಯುರ್ಯಥಾ ಮತ್ಸ್ಯಮುದಕೇ ಪರಿಪಶ್ಯೇದೇವಂ ಪರ್ಯಪಶ್ಯದೃಚಿ ಸಾಮ್ನಿ ಯಜುಷಿ ತೇऽನುವಿತ್ತ್ವೋರ್ಧ್ವಾ ಋಚಃ ಸಾಮ್ನೋ ಯಜುಷಃ ಸ್ವರಮೇವ ಪ್ರಾವಿಶನ್ ॥ ೩ ॥**

ಅ ॥ ಪಕ್ಷಿವಿಶೇಷವು ನೀರಿನಲ್ಲಿದ್ದ ಮೀನನ್ನು ತಿನ್ನಲಿಕ್ಕೆ ನೋಡಿದಂತೆಯೇ ಮಾರಕಳಾದ ದುರ್ಗಾದೇವಿಯು ಋಕ್ ಸಾಮ ಯಜುರ್ವೇದವಿದ್ಯೆಗಳಲ್ಲಿ ಹೊಕ್ಕಿದ ದೇವತೆಗಳನ್ನು ನೋಡಿದಳು. ಉತ್ತಮರಾದ ಆ ದೇವತೆಗಳು ದುರ್ಗಾದೇವಿಯು ನಮ್ಮನ್ನು ನೋಡಿದಳೆಂದು ತಿಳಿದು ಹೆದರಿ ಋಗಾದಿಗಳನ್ನು ಬಿಟ್ಟು ಸ್ವರ ಎಂದು ಹೆಸರುಳ್ಳ ವಾಯುವಿನಲ್ಲಿರುವ, ಸ್ವರ ಎಂದು ಹೆಸರುಳ್ಳ ಪ್ರಣವದಲ್ಲಿ ಸ್ತುತಿಸಲ್ಪಡತಕ್ಕ ವಿಷ್ಣುವನ್ನು ಮರೆಹೊಕ್ಕಿದರು. ॥ ೩ ॥

ಪೀ—ಇದು ಹೇಗೆ ತಿಳಿಯುತ್ತದೆ ಎಂದರೆ—

**ಉ. ॥ ಯದಾ ವಾ ಋಚಮಾಪ್ನೋತ್ಯೋಮಿತ್ಯೇವಾಭಿಸ್ವರತ್ಯೇವꣳ ಸಾಮೈವಂ ಯಜುರೇಷ ಉ ಸ್ವರೋ ಯಏತದಕ್ಷರಮೇತದಮೃತಮಭಯಂ ತತ್ಪ್ರವಿಶ್ಯ ದೇವಾ ಅಮೃತಾ ಅಭವನ್ ॥ ೪ ॥**

ಅ || ಕೇವಲ ಋಗಾದಿಗಳಿಗೆ ಮೃತ್ಯುವಿನಿಂದ ರಕ್ಷಿಸಲಿಕ್ಕೆ ಶಕ್ತಿಯಿಲ್ಲದಿರುವುದರಿಂದಲೇ ಈಗಿನವರೂ ಋಗ್ವೇದವನ್ನು ಅಧ್ಯಯನಮಾಡುವಾಗ ಓಂ ಎಂಬ ಪ್ರಣವವನ್ನು ಹೇಳಿಕೊಂಡೇ ಅಧ್ಯಯನ ಮಾಡುತ್ತಾರೆ ಹೀಗೆ ಪ್ರಣವವನ್ನು ಹೇಳಿಕೊಂಡೇ ಸಾಮವೇದವನ್ನೂ ಯಜುರ್ವೇದವನ್ನೂ ಪಠಿಸುತ್ತಾರೆ. ಸರ್ವರ ಸಮೀಪದಲ್ಲಿರುವ ನಾಶವಿಲ್ಲದಿರುವ ಪರಬ್ರಹ್ಮನೇ ಸ್ವರ ಎಂಬ ಪ್ರಣವದಿಂದ ಹೇಳಲ್ಪಡತಕ್ಕವನು ಪರಬ್ರಹ್ಮನು ನಿತ್ಯಮುಕ್ತನು ಭಯವಿಲ್ಲದವನು, ಭಜಕರಿಗೆ ಅಭಯವನ್ನು ಕೊಡುವವನು. ಹೀಗೆ ಶ್ರೀಹರಿಯನ್ನುಪಾಸನೆಮಾಡಿ ದೇವತೆಗಳು ಮುಕ್ತರೂ ಭಯರಹಿತರೂ ಆದರು. || ೪ ||

**ಉ. || ಸ ಯ ಏತದೇವಂವಿದ್ವಾನಕ್ಷರಂ ಪ್ರಣೌತ್ಯೇತದೇವಾಕ್ಷರꣳ ಸ್ವರಮಮೃತಮಭಯಂ ಪ್ರವಿಶತಿ ತತ್ಪ್ರವಿಶ್ಯ ಯದಮೃತಾ ದೇವಾಸ್ತದಮೃತೋ ಭವತಿ || ಇತಿ ಚತುರ್ಥಃ ಖಂಡಃ || ೩-೪ || || ೫ ||**

ಅ || ಈ ಅಕ್ಷರ ಎಂಬ ಪರಬ್ರಹ್ಮನನ್ನು ಪ್ರಣವದ ಅರ್ಥಭೂತನೆಂದು ಉಪಾಸನೆಮಾಡಿ ಶ್ರೀಹರಿಯು ದೇವತೆಗಳಿಗೆ ಮೋಕ್ಷಾದಿಗಳನ್ನು ಕೊಡತಕ್ಕವನೆಂದು ತಿಳಿದು ಪ್ರಣವದಿಂದ ಸ್ತೋತ್ರ ಮಾಡುವವನು ಸ್ವರಪ್ರತಿಪಾದ್ಯನಾದ ಭಯರಹಿತನಾದ ಶ್ರೀಹರಿಯನ್ನು ಹೊಂದುತ್ತಾನೆ ದೇವತೆಗಳು ಶ್ರೀಹರಿಯ ಸಮೀಪಕ್ಕೆ ಹೋಗಿ ಮೃತ್ಯುವಿನ ಭಯವಿಲ್ಲದೆ ಮುಕ್ತರಾದರು. ಹೀಗೆಯೇ ಅಧಿಕಾರಿಯೂ ದೇವತೆಗಳಂತೆಯೇ ಪರಬ್ರಹ್ಮನನ್ನು ಉಪಾಸನೆಮಾಡಿ ಮುಕ್ತನಾಗುತ್ತಾನೆ. || ೫ ||

**ಭಾ. || (೧) ಸ್ವರತೇಸ್ತು ಸ್ವರೋ ವಿಷ್ಣುಸ್ತದ್ರತೇರ್ವಾಯುರುಚ್ಯತೇ | ವಾಯುಸ್ವರೇ ಸ್ವರಂ ವಿಷ್ಣುಮೋಮಾಖ್ಯಂ ಸಮುಪಾಸಿರೇ | ದೇವಾಸ್ತೇನಾಮೃತಂ ಪ್ರಾಪ್ತಾ ಮುಕ್ತ್ಯಾಖ್ಯಂ ಮೃತ್ಯುವರ್ಜಿತಾಃ || (೨) ಮಾರಣಾನ್ಮೃತ್ಯುರಿತ್ಯುಕ್ತಾ ದುರ್ಗಾ ತದ್ಭಯತಃ ಸುರಾಃ | ಓಮಿತ್ಯುಪಾಸ್ಯ ತಂ ವಿಷ್ಣುಂ ಪರಮಾಮೃತಮಾಪಿರೇ || ಇತಿ ಸಂಧ್ಯಾನೇ || ಊರ್ಧ್ವಾ ಉತ್ತಮಾಃ || ೧, ೨, ೩, ೪, ೫ || ಇತಿ ಚತುರ್ಥಃ ಖಂಡಃ || ೩-೪ || || ೧ ||**

ಅ || (೧) ಸ್ವರಮಣನಾದುದರಿಂದಲೇ ವಿಷ್ಣುವು ಸ್ವರ ಎನಿಸುತ್ತಾನೆ. ಸರ್ವಸ್ವತಂತ್ರನಾದುದರಿಂದ ಸ್ವ ಎನ್ನಿಸಿಕೊಂಡ ವಿಷ್ಣುವಿನಲ್ಲಿ ಆಸಕ್ತಿಯಿರುವುದರಿಂದ ವಾಯುವು ಸ್ವರ ಎನ್ನಿಸುತ್ತಾನೆ. ಸ್ವರ ಎನ್ನಿಸಿಕೊಂಡ ವಾಯುವಿನಲ್ಲಿ ಓಂ ಎನ್ನಿಸಿಕೊಂಡ ಸ್ವರನಾಮಕ ವಿಷ್ಣುವನ್ನು ದೇವತೆಗಳು ಉಪಾಸನೆಮಾಡುತ್ತಾರೆ. ಆ ಉಪಾಸನೆಯಿಂದ ಮೃತ್ಯುವಿನ ಭಯವಿಲ್ಲದವರಾಗಿ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವನ್ನು ಹೊಂದುತ್ತಾರೆ (೨) ದುರ್ಗಾದೇವಿಯು ಮರಣವನ್ನು ಹೊಂದಿಸುವುದರಿಂದ ಮೃತ್ಯು ಎನ್ನಿಸುತ್ತಾಳೆ. ದೇವತೆಗಳು ದುರ್ಗಾದೇವಿಗೆ ಹೆದರಿ ಓಂ ಎಂದು ಉಪಾಸನೆಮಾಡಿ ನಿತ್ಯಮುಕ್ತನಾದ ವಿಷ್ಣುವನ್ನು ಹೊಂದಿದರು, ಎಂದು ಸಂಧ್ಯಾನ ಎಂಬ ಗ್ರಂಥದಲ್ಲಿ ಹೇಳಿದೆ. ಉತ್ತಮರಾದ ದೇವತೆಗಳು (ಮೃತ್ಯುವಿನ ಭಯವಿಲ್ಲದೆ ಮುಕ್ತರಾದರು.) || ೧, ೨, ೩. ೪, ೫ || ೩-೯ || || ೧ ||

ನಾಲ್ಕನೇ ಖಂಡವು ಮುಗಿಯಿತು.

# ೫ನೇ ಖಂಡವು

ಪೀ—ಎರಡನೇ ಖಂಡದಲ್ಲಿ ಉದ್ಗೀಥೋಪಾಸಕನಿಗೆ ಮೋಕ್ಷರೂಪ ಫಲವನ್ನು ಹೇಳಿರುತ್ತಾರೆ. ಈ ಖಂಡದಲ್ಲಿ ಅನೇಕ ಮಕ್ಕಳು ಹುಟ್ಟುತ್ತಾರೆಂಬ ಫಲ ಹೇಳುತ್ತಾರೆ—

**ಉ. ॥ ಅಥ ಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥ ಇತ್ಯಸೌ ವಾ ಆದಿತ್ಯ ಉದ್ಗೀಥ ಏಷ ಪ್ರಣವ ಓಮಿತಿ ಹ್ಯೇಷ ಸ್ವರನ್ನೇತಿ ॥ ೧ ॥**

ಅ ॥ ಶ್ರೀಹರಿಯು ಚೆನ್ನಾಗಿ ಗಾನಮಾಡಲ್ಪಡುವುದರಿಂದ ಉದ್ಗೀಥನೆನಿಸುವನು, ಸರ್ವೋತ್ಕೃಷ್ಟನು, ಸರ್ವರಿಗೆ ಪ್ರೇರಕನು, ಸರ್ವಾಶ್ರಯನು ಇವುಗಳಿಂದ ಪ್ರಣವ ಎಂದು ಹೆಸರುಳ್ಳವನಾಗಿ ಪ್ರಣವ ಎನ್ನಿಸಿಕೊಂಡ ವಾಯುವಿನಲ್ಲಿರುವವನು. ಪ್ರಣವ ಎಂಬ ವಾಯುವಿನಲ್ಲಿದ್ದವನೇ ಉದ್ಗೀಥನೆನಿಸುತ್ತಾನೆ, ಎಂಬುದು ಪ್ರಸಿದ್ಧವು. ಆದಿತ್ಯನಲ್ಲಿರತಕ್ಕ ಉದ್ಗೀಥನೆನಿಸಿಕೊಂಡ ಶ್ರೀಹರಿಯು ಆದಿತ್ಯನಲ್ಲಿರುವ ಪ್ರಣವ ಎನ್ನಿಸಿಕೊಂಡ ಮುಖ್ಯವಾಯುವಿನಲ್ಲಿ ಇರುವವನು. ಆದಿತ್ಯನಿಗೆ ನಿಯಾಮಕನಾದ ವಾಯುವಿನಲ್ಲಿರುವ ಉದ್ಗೀಥನೆಂಬ ಶ್ರೀಹರಿಯು (ಇತರಜನರೂ ಹೀಗೆಯೇ ಮಾಡಬೇಕೆಂದು ತಿಳಿಸಿಕೊಡುವುದಕ್ಕಾಗಿ ತನ್ನನ್ನು) ಓಂ ಎಂದು ಜಪಿಸುತ್ತಾ ಸಂಚರಿಸುತ್ತಾನೆ. ಪ್ರಸಿದ್ಧವು. ॥ ೧ ॥

**ಭಾ. ॥ (೧) ಆದಿತ್ಯಸಂಸ್ಥಿತೋ ವಾಯುಃ ಪ್ರಣವಸ್ತದ್ಗತೋ ಹರಿಃ । ಪ್ರಕೃಷ್ಟತ್ವಾಚ್ಚ ನೇತೃತ್ವಾದ್ಗತಿತ್ವಾದಖಿಲಸ್ಯ ಚ ॥ (೨) ಉದ್ಗೀಥ ಉಚ್ಚೈರ್ಗೇಯತ್ವಾತ್ಸ ಏವ ಪುರುಷೋತ್ತಮಃ ॥ ೧ ॥ ॥ ೧ ॥**

ಅ ॥ (೧) ಆದಿತ್ಯನಲ್ಲಿರುವವನು ವಾಯುವು. ಆ ವಾಯುವಿನಲ್ಲಿದ್ದ ಶ್ರೀಹರಿಯು ಸರ್ವೋತ್ಕೃಷ್ಟನಾದುದರಿಂದಲೂ, ಸರ್ವರಿಗೆ ಪ್ರೇರಕನಾದುದರಿಂದಲೂ, ಸರ್ವರಿಗೆ ಆಶ್ರಯನಾದುದರಿಂದಲೂ ಪ್ರಣವ ಎನ್ನಿಸುತ್ತಾನೆ. (೨) ಪುರುಷೋತ್ತಮನಾದ ಆ ಶ್ರೀಹರಿಯೇ ಚೆನ್ನಾಗಿ ಗಾನಮಾಡಲ್ಪಡುವುದರಿಂದ ಉದ್ಗೀಥನೆನಿಸುತ್ತಾನೆ. ॥ ೧ ॥ ॥ ೧ ॥

ಪೀ—ಆದಿತ್ಯನಿಗೆ ನಿಯಾಮಕನಾದ ವಾಯುವಿನಲ್ಲಿರತಕ್ಕ ಶ್ರೀಹರಿಯನ್ನು ಉಪಾಸನೆಮಾಡಿದರೆ ಒಬ್ಬ ಮಗನು ಹುಟ್ಟುತ್ತಾನೆ. ಸೂರ್ಯನ ಕಿರಣಗಳಲ್ಲಿರತಕ್ಕ ವಾಯುವಿನಲ್ಲಿರತಕ್ಕ ಶ್ರೀಹರಿಯನ್ನು ಪಾಸನೆ ಮಾಡಿದರೆ ಬಹು ಮಕ್ಕಳು ಹುಟ್ಟುತ್ತಾರೆ, ಎಂಬುವಲ್ಲಿ ವಿಶ್ವಾಸ ಹುಟ್ಟುವುದಕ್ಕಾಗಿ ಕಥೆ ಹೇಳುತ್ತಾರೆ—

**ಉ. ॥ ಏತಮು ಏವಾಹಮಭ್ಯಗಾಸಿಷಂ ತಸ್ಮಾನ್ಮಮ ತ್ವಮೇಕೋಽಸೀತಿ ಹ ಕೌಷೀತಕಿಃ ಪುತ್ರಮುವಾಚ ರಶ್ಮೀꣳಸ್ತ್ವಂ ಪರ್ಯಾವರ್ತಯತಾದ್ಬಹವೋ ವೈ ತೇ ಭವಿಷ್ಯಂತೀತ್ಯಧಿದೈವತಂ ॥ ೨ ॥**

ಅ ॥ ಸೂರ್ಯನಿಗೆ ನಿಯಾಮಕನಾದ ಮುಖ್ಯಪ್ರಾಣನಲ್ಲಿರುವ, ಓಂ ಎಂದು ಜಪಿಸುತ್ತಿರುವ ಉದ್ಗೀಥನೆನಿಸಿಕೊಂಡ ಶ್ರೀಹರಿಯನ್ನೇ ಗಾನದಿಂದ ಸ್ತುತಿಸಿದೆನು. ಆದಕಾರಣ ಒಬ್ಬನನ್ನು ಉಪಾಸನೆ ಮಾಡಿದುದರಿಂದ ನನಗೆ ನೀನು ಒಬ್ಬ ಮಗನಾಗಿರುತ್ತಿ, ಎಂದು ಕೌಷೀತಕಿ ಎಂಬ ಮುನಿಯು ಮಗನಿಗೆ

ಹೇಳಿದನು. ಎಲೋ ಮಗನೇ ರಶ್ಮಿಗಳಲ್ಲಿರತಕ್ಕ ವಾಯುವಿನೊಳಗಿರುವ ಭಗವದ್ರೂಪಗಳನ್ನು ಉಪಾಸನೆ ಮಾಡು. ಹೀಗೆ ಧ್ಯಾನಿಸತಕ್ಕ ನಿನಗೆ ಬಹುಮಕ್ಕಳು ಹುಟ್ಟುವರು. ಕೊನೆಗೆ ಮೋಕ್ಷವೂ ಲಭಿಸುವುದು, ಎಂದು ಮಗನಿಗೆ ಹೇಳಿದನು. ಹೀಗೆ ಮಕ್ಕಳನ್ನುದ್ದೇಶಿಸಿಕೊಂಡಿರುವ ಉಪಾಸನೆಯು ಹೇಳಲ್ಪಟ್ಟಿತು. ‖ ೨ ‖

**ಉ. ‖ ಅಥಾಧ್ಯಾತ್ಮಂ ಯ ಏವಾಯಂ ಮುಖ್ಯಪ್ರಾಣಸ್ತಮುದ್ಗೀಥಮುಪಾಸೀತೋಮಿತಿ ಹ್ಯೇಷ ಸ್ವರನ್ನೇತಿ ‖ ೩ ‖**

ಅ ‖ ಈಗ ದೇಹದಲ್ಲಿದ್ದ ಮುಖ್ಯಪ್ರಾಣನ ಉಪಾಸನೆಯ ಫಲವು ಹೇಳಲ್ಪಡುತ್ತದೆ. ಶರೀರದಲ್ಲಿ ಯಾವ ಮುಖ್ಯಪ್ರಾಣನೋ ಆತನಲ್ಲಿ ಉದ್ಗೀಥನೆಂಬ ಶ್ರೀಹರಿಯನ್ನುಪಾಸನೆಮಾಡುತ್ತಾ ಗಾನದಿಂದ ಸ್ತೋತ್ರಮಾಡಿದೆನು. ಪ್ರಾಣನಲ್ಲಿದ್ದ ವಿಷ್ಣುವು ಓಂ ಎಂದು ಜಪಿಸುತ್ತಾ ಸಂಚರಿಸುತ್ತಾನೆ. ‖ ೩ ‖

**ಉ. ‖ ಏತಮು ಏವಾಹಮಭ್ಯಗಾಸಿಷಂ ತಸ್ಮಾನ್ಮಮ ತ್ವಮೇಕೋಽಸೀತಿ ಹ ಕೌಷೀತಕಿಃ ಪುತ್ರಮುವಾಚ ಪ್ರಾಣಾಂಸ್ತ್ವಂ ಭೂಮಾನಮಭಿಗಾಯತಾದ್ಬಹವೋ ವೈ ತೇ ಭವಿಷ್ಯಂತೀತಿ ‖ ೪ ‖**

ಅ ‖ ಶರೀರದಲ್ಲಿ ಯಾವ ಪ್ರಾಣನೋ, ಆ ಪ್ರಾಣನಲ್ಲಿರುವ ಉದ್ಗೀಥನೆಂಬ ಶ್ರೀಹರಿಯನ್ನು ಗಾನದಿಂದ ಸ್ತುತಿಸಿದೆನು, ಆದಕಾರಣ ನನಗೆ ನೀನೊಬ್ಬನು ಮಗನಾಗಿರುತ್ತಿ, ಎಂದು ಕೌಷೀತಕಿಯು ಮಗನೊಡನೆ ಹೇಳಿದನು. ಎಲೋ ಮಗನೇ ನಿನಗೆ ಬಹುಮಕ್ಕಳು ಹುಟ್ಟಬೇಕೆಂದು ಅಭಿಪ್ರಾಯವಿದ್ದರೆ ಇಂದ್ರಿಯಗಳೊಳಗೆ ಇರುವ ಮುಖ್ಯಪ್ರಾಣನಲ್ಲಿ ಅಂತರ್ಗತನಾದ ಗುಣಪೂರ್ಣನಾದ ಶ್ರೀಹರಿಯನ್ನು ಚೆನ್ನಾಗಿ ಗಾನಮಾಡು ಎಂದನು. ‖ ೪ ‖

**ಉ ‖ ಅಥ ಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥ ಇತಿ ಹೋತೃಷದನಾದ್ಧೈವಾಪಿ ದುರುದ್ಗೀತಮನುಸಮಾಹರತೀತ್ಯನುಸಮಾಹರತೀತಿ ‖ ಇತಿ ಪಂಚಮಃ ಖಂಡಃ ‖ ೩-೫ ‖ ‖ ೫ ‖**

ಅ ‖ ಉದ್ಗೀಥನೆನಿಸಿಕೊಂಡ ಶ್ರೀಹರಿಯೇ ಪ್ರಣವ ಎನ್ನಿಸುತ್ತಾನೆ. ಪ್ರಣವ ಎನ್ನಿಸಿಕೊಂಡವನೇ ಉದ್ಗೀಥನೆನಿಸುತ್ತಾನೆ, ಎಂದು ಹೋತೃಷದನ ಎಂಬ ಅಗ್ನಿಯಲ್ಲಿರತಕ್ಕ ಶ್ರೀಹರಿಯನ್ನು ಉಪಾಸನಾಮಾಡಿಯೇ ಪ್ರಮಾದದಿಂದುಂಟಾಗತಕ್ಕ ಸ್ವರಾದಿಗಳಿಲ್ಲದ ಉದ್ಗಾನವನ್ನು ತನ್ನ ಇಷ್ಟಕ್ಕೆ ಕಾರಣವನ್ನಾಗಿಯೇ ಮಾಡಿಕೊಳ್ಳುತ್ತಾನೆ. ‖ ೫ ‖

**ಭಾ. ‖ (೧) ಸ ಏವ ಪ್ರಾಣಗೋ ದೇಹೇ ಓಮಿತ್ಯೇವ ಸದಾ ಜಪನ್ । ಏತ್ಯೇಷ ಭಗವಾನ್ವಿಷ್ಣುರ್ಧ್ಯಾಯನ್ನೇಕಂ ತಮಕ್ಷರಂ । ಏಕಪುತ್ರೋ ಮುಕ್ತಿಮೇತಿ ‖ (೨) ಧ್ಯಾಯನ್ಪ್ರಾಣೇಷು ರಶ್ಮಿಷು । ಬಹುಪುತ್ರೋ ವಿಮುಕ್ತಃ ಸ್ಯಾತ್ತಸ್ಮಾದ್ಧ್ಯಾಯೇತ್ತಥಾ ಪರಂ ‖ ಇತಿ ಚ ‖ (೩) ಪ್ರಾಣಸ್ಥಂ ಭೂಮಾನಮಭಿಗಾಯ ದುರುದ್ಗೀತಮನುಸಮಾಹರತಿ। ಅನುರೂಪಮೇವ ಕರೋತಿ । ಹೋತೃಸದನಸ್ಥಮಗ್ನಿಸ್ಥಂ ಭಗವಂತಂ ಧ್ಯಾತ್ವಾ ‖ (೪) ಅನ್ಯಥಾ**

**ಗಾನಜಂ ದೋಷಮಗ್ನೌ ಧ್ಯಾತ್ವಾ ಹರಿಂ ಪರಂ । ಅಪಾಕರೋತಿ ತಸ್ಮಾತ್ತಂ ಧ್ಯಾಯೇ-ದೇವಾಗ್ನಿಗಂ ಸದಾ ॥ ಇತಿ ತ್ರೈವಿದ್ಯೇ ॥ ೨,೩,೪,೫ ॥ ಇತಿ ಪಂಚಮಃ ಖಂಡಃ ॥೩–೫॥**

ಅ ॥ (೧) ದೇಹದಲ್ಲಿರತಕ್ಕ ಪ್ರಾಣಾಂತರ್ಗತನಾದ ಶ್ರೀಹರಿಯೇ (ಪ್ರಣವ ಎಂದೂ ಉದ್ಗೀಥ ಎಂದೂ ಅನ್ನಿಸುತ್ತಾನೆ.) ಶ್ರೀಹರಿಯು (ಬೇರೆ ಜನರ ಶಿಕ್ಷೆಗಾಗಿ) ಓಂ ಎಂದೇ ಯಾವಾಗಲೂ ತನ್ನನ್ನೇ ಜಪಿಸುತ್ತಾ ಸಂಚರಿಸುತ್ತಾನೆ. ನಾಶರಹಿತವಾದ ಒಂದು ಭಗವದ್ರೂಪವನ್ನು ಧ್ಯಾನಿಸುವವನು ಒಬ್ಬ ಮಗನುಳ್ಳವನಾಗಿ ಮೋಕ್ಷವನ್ನು ಹೊಂದುತ್ತಾನೆ. (೨) ಸೂರ್ಯನ ಕಿರಣಗಳಲ್ಲಿ ಯಾವ ಮುಖ್ಯ ವಾಯುರೂಪಗಳೋ ಅವುಗಳಲ್ಲಿರತಕ್ಕ ಭಗವದ್ರೂಪಗಳನ್ನು ಧ್ಯಾನಿಸುವವನು ಬಹುಮಕ್ಕಳುಗಳುಳ್ಳವನಾಗಿ ಮೋಕ್ಷವನ್ನು ಹೊಂದುವನು. ಆದಕಾರಣ ಹಾಗೆಯೇ ಶ್ರೀಹರಿಯನ್ನು ಧ್ಯಾನಿಸಬೇಕು. (ಅಂದರೆ ಸೂರ್ಯ, ಕಿರಣ, ದೇಹ. ಇಂದ್ರಿಯಗಳಲ್ಲಿ ಮುಖ್ಯಪ್ರಾಣರೂಪಗಳೂ ಅವುಗಳಲ್ಲಿ ಸರ್ವೋತ್ತಮನಾದ ಶ್ರೀಹರಿಯೂ ಇದ್ದಾನೆಂದು ಧ್ಯಾನಿಸಬೇಕು.) (೩) ಇಂದ್ರಿಯಗಳಲ್ಲಿರತಕ್ಕ ಗುಣಪೂರ್ಣನಾದ ಶ್ರೀಹರಿಯನ್ನು ಗಾನಮಾಡು. ಸ್ವರಾದಿಗಳಿಲ್ಲದ ಗಾನವನ್ನು ಅನುರೂಪವನ್ನಾಗಿಯೇ ಮಾಡುತ್ತಾನೆ. ಅಂದರೆ, ಹೋತೃ (ಹೋಮಿಸುವವ) ಗಳಿಗೆ ಆಶ್ರಯವಾದ ಅಗ್ನಿಯಲ್ಲಿರತಕ್ಕ ಶ್ರೀಭಗವಂತನನ್ನು ಧ್ಯಾನಿಸಿ ಪ್ರತಿಕೂಲವಾಗದಿದ್ದಹಾಗೆ ಮಾಡುತ್ತಾನೆ. (೪) ವಿಪರೀತವಾದ (ಅಂದರೆ ಸ್ವರಾದಿಗಳಿಲ್ಲದ) ಗಾನದಿಂದುಂಟಾದ ದೋಷವನ್ನು ಅಗ್ನ್ಯಂತರ್ಗತವಾದ ಸರ್ವೋತ್ತಮನಾದ ಶ್ರೀಹರಿಯನ್ನು ಧ್ಯಾನಮಾಡಿ ಕಳೆದುಕೊಳ್ಳುತ್ತಾನೆ. ಆದಕಾರಣ ಸದಾ ಅಗ್ನ್ಯಂತರ್ಗತನಾದ ಶ್ರೀಹರಿಯನ್ನು ಧ್ಯಾನಿಸಬೇಕೆಂದು ತ್ರೈವಿದ್ಯ ಎಂಬ ಗ್ರಂಥದಲ್ಲಿದೆ. ॥ ೨, ೩, ೪, ೫ ॥ ೩–೫ ॥ ॥ ೧ ॥

**ಐದನೇ ಖಂಡವು ಮುಗಿಯಿತು.**

---

## ೬ನೇ ಖಂಡವು

**ಪೀ**—ಋಕ್ ಸಾಮಗಳು ಶ್ರೀಹರಿಯ ಪರಿವಾರಗಳಾದುದರಿಂದ ಅವುಗಳನ್ನುಪಾಸನೆಮಾಡುತ್ತಾ ಅವರಿಂದ ಕೂಡಿದ ಉದ್ಗೀಥನ ಉಪಾಸನೆಯನ್ನು ಹೇಳುತ್ತಾರೆ—

**ಉ. ॥ ಇಯಮೇವರ್ಗಗ್ನಿಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢꣳ ಸಾಮ ತಸ್ಮಾದೃಚ್ಯಧ್ಯೂಢꣳ ಸಾಮ ಗೀಯತೇ ಇಯಮೇವ ಸಾಽಗ್ನಿರಮಸ್ತ-ತ್ಸಾಮ ॥ ೧ ॥**

ಅ ॥ ಋಕ್ಕಿಗೆ ಅಭಿಮಾನಿನಿಯಾದ ಋಕ್ ಎಂದು ಹೆಸರುಳ್ಳ ಸರಸ್ವತಿಯು ಭೂಲೋಕದಲ್ಲಿ ಇರುವವಳು. ಸಾಮಕ್ಕೆ ಅಭಿಮಾನಿಯಾದ ಸಾಮ ಎಂದು ಹೆಸರುಳ್ಳ ವಾಯುವು ಅಗ್ನಿಯಲ್ಲಿರುವವನು. ಅಗ್ನಿಯಲ್ಲಿ ಅಂತರ್ಗತವಾದ ಅಗ್ನಿಯೆಂದು ಹೆಸರುಳ್ಳ ಸಾಮವು ಪೃಥಿವ್ಯಂತರ್ಗತವಾದ ಋಗಭಿಮಾನಿನಿಯಾದ ಸರಸ್ವತಿಯಲ್ಲಿ ಆಶ್ರಿತವಾಗಿದೆ. ಆದುದರಿಂದಲೇ ಸಾಮಗಾನ ಮಾಡುವವರಿಂದ ಋಕ್ಕನ್ನು ಆಶ್ರಯಿಸುತ್ತಿರುವ ಬಾಹ್ಯಸಾಮವು ಗಾನಮಾಡಲ್ಪಡುತ್ತದೆ. (ಹೀಗೆ ಪ್ರತ್ಯೇಕವಾಗಿ ಋಕ್ ಸಾಮರೆನ್ನಿಸಿದ ಸರಸ್ವತೀ ವಾಯುಗಳು ಪೃಥಿವ್ಯಗ್ನಿಗಳಲ್ಲಿ ಇದ್ದಾರೆಂದು ಮಹಿಮೆಯು ಹೇಳಲ್ಪಟ್ಟಿತು. ಈಗ ಸರಸ್ವತೀ ವಾಯು ಇಬ್ಬರೂ ಕೂಡಿಯೇ ಒಂದೇ ಶರೀರದಿಂದ ಅರ್ಧನಾರೀನರರೂಪರಾಗಿ ಸಾಮ ಎಂಬ ಹೆಸರುಳ್ಳವರಾಗಿ ಇರುತ್ತಾರೆ. ಅದರಲ್ಲಿ ಸಾ ಎಂಬುದು ಸರಸ್ವತೀಭಾಗವು ಅಮ ಎಂಬುದು ವಾಯು

ಭಾಗವು, ಈ ಭಾಗವೂ ಪೃಥಿವ್ಯಗ್ನಿಗಳಲ್ಲಿ ಇದೆ ಎನ್ನುತ್ತಾರೆ—) ಪೃಥಿವಿಯಲ್ಲಿರುವ ಸರಸ್ವತಿಯು ಸಾ ಎಂದೂ, ಅಗ್ನಿಯಲ್ಲಿರುವ ವಾಯುವು ಅಮ ಎಂದೂ ಅನ್ನಿಸುತ್ತಾನೆ. ಅವರಿಬ್ಬರು ಸೇರಿ ಸಾಮ ಎನ್ನಿಸುತ್ತಾರೆ. || ೧ ||

ಉ. || ಅಂತರಿಕ್ಷಮೇವರ್ಗ್ವಾಯುಃ ಸಾಮ ತದೇತದೇತಸ್ಯಾಮೃಚ್ಯ-ಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇಽಂತರಿಕ್ಷಮೇವ ಸಾ ವಾಯುರಮಸ್ತತ್ಸಾಮ || ೨ ||

ಅ || ಅಂತರಿಕ್ಷಂ=ಅಂತರಿಕ್ಷಲೋಕದಲ್ಲಿದ್ದ ಸರಸ್ವತೀದೇವಿಯು, ವಾಯುಃ=ಭೂತ (ಬಾಹ್ಯ) ವಾಯುವಿನಲ್ಲಿದ್ದ' ಪ್ರಾಣನು........ || ೨ ||

ಉ. || ದ್ಯೌರೇವ ಋಗಾದಿತ್ಯಃ ಸಾಮ ತದೇತದೇತಸ್ಯಾಮೃಚ್ಯಧ್ಯೂ-ಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ದ್ಯೌರೇವ ಸಾ ಆದಿತ್ಯೋ-ಽಮಸ್ತತ್ಸಾಮ || ೩ ||

ಅ || ದ್ಯೌಃ=ದ್ಯುಲೋಕದಲ್ಲಿದ್ದ ಸರಸ್ವತಿಯು,....ಆದಿತ್ಯಃ=ಆದಿತ್ಯನಲ್ಲಿದ್ದ ಪ್ರಾಣನು.... || ೩ ||

ಉ. || ನಕ್ಷತ್ರಾಣ್ಯೇವ ಋಕ್ಚಂದ್ರಮಾಃ ಸಾಮ ತದೇತದೇತಸ್ಯಾಮೃ-ಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ನಕ್ಷತ್ರಾಣ್ಯೇವ ಸಾ ಚಂದ್ರಮಾ ಅಮಸ್ತತ್ಸಾಮ || ೪ ||

ಅ || ನಕ್ಷತ್ರಾಣಿ=ನಕ್ಷತ್ರಗಳಲ್ಲಿರತಕ್ಕ ಸರಸ್ವತಿಯು, ಚಂದ್ರಮಾಃ=ಚಂದ್ರನಲ್ಲಿದ್ದ ಪ್ರಾಣನು.... || ೪ ||

ಉ. || ಅಥ ಯದೇತದಾದಿತ್ಯಸ್ಯ ಶುಕ್ಲಂ ಭಾಃ ಸೈವ ಋಗಥ ಯ-ನ್ನೀಲಂ ಪರಃ ಕೃಷ್ಣಂ ತತ್ಸಾಮ ತದೇತದೇತಸ್ಯಾಮೃಚ್ಯಧ್ಯೂಢಂ ಸಾಮ ತ-ಸ್ಮಾದೃಚ್ಯಧ್ಯೂಢಂ ಸಾಮ ಗೀಯತೇಽಥ ಯದೇವೈತದಾದಿತ್ಯಸ್ಯ ಶುಕ್ಲಂ ಭಾಃ ಸೈವ ಸಾಽಥ ಯನ್ನೀಲಂ ಪರಃ ಕೃಷ್ಣಂ ತದಮಸ್ತತ್ಸಾಮ || ೫ ||

ಅ || ಸೂರ್ಯನ ಬಿಳಿಪು ಪ್ರಕಾಶದಲ್ಲಿರತಕ್ಕ ಸರಸ್ವತಿಯು ಋಕ್ ಎನಿಸುತ್ತಾಳೆ ಸೂರ್ಯನ ಅತಿಕಪ್ಪಾದ ನೀಲವಾದ ತೇಜಸ್ಸಿನಲ್ಲಿರತಕ್ಕ ಪ್ರಾಣನು ಸಾಮ ಎನಿಸುತ್ತಾನೆ........ || ೫ ||

ಪೀ—ಸರಸ್ವತೀ ಪ್ರಾಣರಿಂದಲೂ ಸೇವಿಸಲ್ಪಡತಕ್ಕ ಉದ್ಗೀಥನೆಂಬ ಶ್ರೀಹರಿಯ ಮಹಿಮೆಯನ್ನು ಹೇಳುತ್ತಾರೆ—

---

* ಇದುಮೊದಲುಗೊಂಡು ನಾಲ್ಕು ವಾಕ್ಯಗಳಲ್ಲಿಯೂ ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು.

**ಉ॥ ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯ-ತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಃ ॥ ೬ ॥**

ಅ ॥ ಸೂರ್ಯನಲ್ಲಿರತಕ್ಕ ಸರಸ್ವತೀ ವಾಯುಗಳ ಒಳಗೆ ಇತರರಿಂದ ವಿಲಕ್ಷಣವಾದ ಪೂರ್ಣಾನಂದ ಸ್ವರೂಪನಾದ ಅಥವಾ ಸುವರ್ಣದಂತೆ ವರ್ಣವುಳ್ಳ ಪುರುಷನು ಜ್ಞಾನದೃಷ್ಟಿಯಿಂದ ಕಾಣಲ್ಪಡುತ್ತಾನೆ. (ಶ್ರೀಹರಿಯಂತೆಯೇ ಅವನ ಕೈಕಾಲು ಮೊದಲಾದ ಅವಯವಗಳೂ ಪೂರ್ಣ ಸುಖಸ್ವರೂಪಗಳೆನ್ನುತ್ತಾರೆ.) ಶ್ರೀಹರಿಯು ಕೇವಲ ಸುಖಸ್ವರೂಪವಾದ ಗಡ್ಡ ಉಳ್ಳವನು. ಪೂರ್ಣಾನಂದ ಸ್ವರೂಪವಾದ ಕೂದಲುಗಳುಳ್ಳವನು. ಉಗುರು ಆರಂಭಿಸಿ (ಅಥವಾ ಉಗುರುಪರ್ಯಂತ) ಎಲ್ಲಾ ಅವಯವವೂ ಪೂರ್ಣ ಸುಖಸ್ವರೂಪವು. ॥ ೬ ॥

**ಉ. ॥ ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ತಸ್ಯೋ-ದಿತಿನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತ ಉದೇತಿ ಹ ವೈ ಸರ್ವೇ-ಭ್ಯಃ ಪಾಪ್ಮಭ್ಯೋ ಯ ಏವಂ ವೇದ ॥ ೭ ॥**

ಅ ॥ ಆದಿತ್ಯಾಂತರ್ಗತರಾದ ಸರಸ್ವತೀ ವಾಯುಗಳಲ್ಲಿರುವ ಪುರುಷನಿಗೆ, ನೀರನ್ನು ಕುಡಿಯುತ್ತಿರುವ ತಾವರೆಯ ದಂಡಿನಲ್ಲಿರುವ, (ಅಂದರೆ ಬಾಡದಿರುವ) ಕೆಂಪು ಕಮಲಪುಷ್ಪದಂತೆ, ಕಣ್ಣುಗಳು ಇವೆ. (ಅಂದರೆ, ಕಮಲದಳದಂತೆಯೇ ವಿಶಾಲಗಳಾದ ಕಣ್ಣುಗಳುಳ್ಳವನು.) ಆದಿತ್ಯಾಂತರ್ಗತರಾದ ಸರಸ್ವತೀ ವಾಯುಗಳೊಳಗೆ ಇರತಕ್ಕ ಪುರುಷನು ಎಲ್ಲಾ ಪಾಪಗಳಿಂದಲೂ ಬಿಡಲ್ಪಟ್ಟವನಾದುದರಿಂದ (ಅಂದರೆ ಪಾಪ ಸಂಪರ್ಕವಿಲ್ಲದವನಾದುದರಿಂದ) ಉತ್ ಎಂದು ಗೋಪ್ಯ ನಾಮಧೇಯವು. (ಹೀಗೆ ತಿಳಿದುಕೊಂಡವನಿಗೆ ಫಲ ಹೇಳುತ್ತಾರೆ—) ಯಾವ ಪಾಪವೂ ಇಲ್ಲದವನಾದುದರಿಂದ ಶ್ರೀಹರಿಗೆ ಉತ್ ಎಂದು ಹೆಸರು, ಎಂದು ತಿಳಿದವನು ಯಾವ ಪಾಪವೂ ಇಲ್ಲದವನಾಗುತ್ತಾನೆ. ಶ್ರುತಿಸ್ಮೃತಿಪ್ರಸಿದ್ಧ. ॥ ೭ ॥

**ಉ. ॥ ತಸ್ಯ ಋಕ್ಚ ಸಾಮ ಚ ಗೇಷ್ಣೌ ತಸ್ಮಾದುದ್ಗೀಥಸ್ತಸ್ಮಾತ್ತ್ವೇ-ವೋದ್ಗಾತೈತಸ್ಯ ಹಿ ಗಾತಾ ಸ ಏಷ ಯೇ ಚಾಮುಷ್ಮಾತ್ಪರಾಂಚೋ ಲೋ-ಕಾಸ್ತೇಷಾಂ ಚೇಷ್ಟೇ ದೇವಕಾಮಾನಾಂ ಚೇತ್ಯಧಿದೈವತಂ ॥ ಇತಿ ಷಷ್ಠಃ ಖಂಡಃ ॥ ೩-೬ ॥ ॥ ೮ ॥**

ಅ ॥ ಆದಿತ್ಯಾಂತರ್ಗತರಾದ ಸರಸ್ವತೀ ವಾಯುಗಳಲ್ಲಿರತಕ್ಕ ಶ್ರೀಹರಿಗೆ ಋಗಭಿಮಾನಿನಿಯಾದ ಸರಸ್ವತಿಯೂ, ಸಾಮಾಭಿಮಾನಿಯಾದ ವಾಯುವೂ (ಋಗ್ವೇದ ಸಾಮವೇದಗಳಿಂದ) ಗಾಯನ ಮಾಡುವರು. ಸರಸ್ವತೀಪ್ರಾಣರು ಶ್ರೀಹರಿಯು ಸರ್ವೋತ್ತಮನೆಂದು ಗಾನಮಾಡುವುದರಿಂದ ಆದಿತ್ಯನಲ್ಲಿ ಅಂತರ್ಗತನಾದ ಶ್ರೀಹರಿಯು ಉದ್ಗೀಥಃ ಎನಿಸುತ್ತಾನೆ. ಸರಸ್ವತೀಪ್ರಾಣರು ಸರ್ವದಾ ಶ್ರೀಹರಿಯನ್ನು ಗಾನಮಾಡುವುದರಿಂದಲೇ ಗಾನಮಾಡುವವರೆಲ್ಲರೂ ಶ್ರೀಹರಿಯನ್ನೇ ಗಾನಮಾಡುತ್ತಾರೆಂದು ತಿಳಿಯಬೇಕು. ಪ್ರಸಿದ್ಧ. (ಆ ಶ್ರೀಹರಿಯ ಸಾಮರ್ಥ್ಯವನ್ನೇ ಹೇಳುತ್ತಾರೆ—) ಸೂರ್ಯಾಂತರ್ಗತ ಸರಸ್ವತೀ ವಾಯುಗಳಲ್ಲಿರತಕ್ಕ ಉದ್ಗೀಥನೆಂಬ ಶ್ರೀಹರಿಯು ಅಂತರಿಕ್ಷಲೋಕದಿಂದ ಮೇಲಿನ ಸ್ವರ್ಗಾದಿಲೋಕಗಳಿಗೂ ಅಂತರಿಕ್ಷಲೋಕಕ್ಕೂ ಅಧಿಪತಿಯಾಗಿರುತ್ತಾನೆ ದೇವತೆಗಳಿಗೂ ನಿಯಾಮಕನು. ದೇವತೆಗಳಿಗೆ

ಇಷ್ಟವನ್ನು ಕೊಡಲಿಕ್ಕೂ ಸಮರ್ಥನಾಗಿರುತ್ತಾನೆ ಹೀಗೆ ಋಕ್ ಸಾಮ ಉದ್ಗೀಥರ ಸ್ವರೂಪವು ಹೇಳಲ್ಪಟ್ಟಿತು || ೮ ||

**ಪೀ**—(1) ಇಯಮೇವ ಋಕ್, ಅಗ್ನಿಃ ಸಾಮ, (2) ಅಂತರಿಕ್ಷಮೇವ ಋಕ್, ವಾಯುಃ ಸಾಮ, (3) ದ್ಯೌರೇವ ಋಕ್, ಆದಿತ್ಯಃ ಸಾಮ, (4) ನಕ್ಷತ್ರಾಣ್ಯೇವ ಋಕ್, ಚಂದ್ರಮಾಃ ಸಾಮ, (5) ಅಥ ಯದೇತತ್ ಆದಿತ್ಯಸ್ಯ ಶುಕ್ಲಂ ಭಾಃ ಸೈವ ಋಕ್, ಅಥ ಯನ್ನೀಲಂ ಪರಃ ಕೃಷ್ಣಂ ತತ್ಸಾಮ, ಎಂಬ ಐದು ವಾಕ್ಯಗಳಿಗೆ ಅರ್ಥ ಹೇಳುತ್ತಾರೆ —

**ಭಾ. || (೧) ಅಗ್ನೀರಸೂರ್ಯನೀಲೇಷು ವಾಯುಸ್ಥಃ ಸಾಮದೇವತಾ | ಉರ್ವೀ-ವಿಯದ್ದ್ಯುಶುಕ್ಲೇಷು ಋಗ್ದೇವೀಸ್ಥಾ ಸರಸ್ವತೀ || (೨) ಸೇತಿ ಭಾರ್ಯಾ ಹಿ ವಾಗ್ದೇವೀ ಪ್ರಾಣೋಽಮಃ ಪತಿರೀರಿತಃ | ಏವಂ ತೌ ಸಾಮನಾಮಾನಾವುಭಾವೇತಾವುದಾಹೃತೌ || (೩) ಅತೋ ಹಿ ಸಾಮವೇದೋಽಯಂ ಋಕ್ಸಾಮಾತ್ಮಕ ಈರಿತಃ || (೪) ವಾಗಾದಿಷ್ವೇವ-ಮೇವೈತೌ ವಾಕ್ಪ್ರಾಣೌ ಸರ್ವದಾ ಸ್ಥಿತೌ || (೫) ತಯೋರಂತಃಸ್ಥಿತೋ ವಿಷ್ಣುರ್ಗಾಯಕೌ ತಸ್ಯ ತಾವುಭೌ | ಋಕ್ಸಾಮಭ್ಯಾಂ ಸ ಉನ್ನಾಮಾ ಪಾಪೋದ್ಗಶ್ಚೋಚ್ಚ ಏವ ಚ || ಇತ್ಯಾದಿ ಸತ್ತತ್ತ್ವೇ || ೧ ||**

ಅ || (೧) ಸಾಮಕ್ಕೆ ದೇವತೆಯಾದ ವಾಯುವು ಅಗ್ನಿ, ವಾಯು, ಸೂರ್ಯ, ಚಂದ್ರ, ನೀಲ (ಅತ್ಯಂತ ಕೃಷ್ಣ) ಗಳಲ್ಲಿ ಇರುತ್ತಾನೆ. ಋಗಭಿಮಾನಿನಿಯಾದ ಸರಸ್ವತಿಯು ಪೃಥಿವಿ, ಅಂತರಿಕ್ಷ, ಸ್ವರ್ಗಲೋಕ, ನಕ್ಷತ್ರ, ಬಿಳಿಪುಪ್ರಕಾಶ ಇವುಗಳಲ್ಲಿ ಇರುತ್ತಾಳೆ. (೨) **ಇಯಮೇವ ಸಾ ಅಗ್ನಿರಮಃ ತತ್ಸಾಮ** ಇದುಮೊದಲಾದ ಐದು ವಾಕ್ಯಗಳಿಗೆ ಅರ್ಥ ಹೇಳುತ್ತಾರೆ—) ವಾಗಭಿಮಾನಿನಿಯಾದ ಪ್ರಾಣನ ಹೆಂಡತಿಯಾದ ಸರಸ್ವತಿಯು ಸಾ ಎಂದೂ, ಭಾರತೀಪತಿಯಾದ ಮುಖ್ಯಪ್ರಾಣನು ಅಮಃ ಎಂದೂ ಎನಿಸುತ್ತಾರೆ ಹೀಗೆ ಈ ಭಾರತೀಪ್ರಾಣರಿಬ್ಬರು ಸಾಮ ಎನಿಸುತ್ತಾರೆ. (೩) (**ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ** ಎಂಬೀ ಐದು ವಾಕ್ಯಗಳಿಗೆ ಅರ್ಥ ಹೇಳುತ್ತಾರೆ—) ಸಾಮವೇದಕ್ಕೆ ಅಭಿಮಾನಿಯಾದ ಮುಖ್ಯಪ್ರಾಣನು ಅಗ್ನ್ಯಾದಿಗಳಲ್ಲಿಯೂ ಋಗ್ವೇದಕ್ಕೆ ಅಭಿಮಾನಿನಿಯಾದ ಸರಸ್ವತಿಯು ಪೃಥಿವೀ ಮೊದಲಾದ ಲೋಕಗಳಲ್ಲಿಯೂ, ಸಾಮವು ಋಕ್ಕಿನಲ್ಲಿಯೂ ಆಶ್ರಿತವಾಗಿದ್ದುದರಿಂದಲೇ ಸಾಮವೇದವು ಋಕ್ಸಾಮವೆನಿಸುವುದು. (೪) (**ಅಧ್ಯಾತ್ಮಂ ವಾಗೇವಋಕ್ ಪ್ರಾಣಃ ಸಾಮ** ಇದುಮೊದಲಾದ ೭ನೇ ಖಂಡದಲ್ಲಿದ್ದ ನಾಲ್ಕು ವಾಕ್ಯಗಳಿಗೆ ಅರ್ಥ ಹೇಳುತ್ತಾರೆ—) ಹೀಗೆಯೇ ಭಾರತೀಮುಖ್ಯಪ್ರಾಣರು ವಾಕ್, ಪ್ರಾಣ, ಚಕ್ಷುಸ್ಸು, ಆತ್ಮ, ಶ್ರೋತ್ರ, ಮನಸ್ಸು, ಶುಕ್ಲ, ನೀಲ ಇವುಗಳಲ್ಲಿ ಸರ್ವದಾ ಇರುತ್ತಾರೆ. (೫) (**ಯ ಏಷೋಽಂತರಾದಿತ್ಯೇ ಹಿರಣ್ಮಯಃ | ಯ ಏಷೋಽಂತರಕ್ಷಿಣಿ** ಎಂಬ ಎರಡು ವಾಕ್ಯಗಳಿಗೆ ಅರ್ಥ ಹೇಳುತ್ತಾರೆ—) ಶ್ರೀವಿಷ್ಣುವು, ಆದಿತ್ಯ, ಚಕ್ಷುಸ್ಸು, ಇವುಗಳಲ್ಲಿರತಕ್ಕ ಮುಖ್ಯಪ್ರಾಣ ಭಾರತಿಯರೊಳಗೆ ಇರುವವನು. (**ತಸ್ಯಋಕ್ಚ ಸಾಮ ಚ ಗೇಷ್ಣೌ** ಎಂಬ ವಾಕ್ಯಕ್ಕೆ ಅರ್ಥ ಹೇಳುತ್ತಾರೆ....) ಆ ಭಾರತೀಮುಖ್ಯಪ್ರಾಣರಿಬ್ಬರು ಋಗ್ವೇದ ಸಾಮವೇದಗಳಿಂದ ಆ ಶ್ರೀಹರಿಯನ್ನು ಗಾನಮಾಡುತ್ತಿರುತ್ತಾರೆ. (**ತಸ್ಯೋದಿತಿನಾಮ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ—) ಆ ಶ್ರೀಹರಿಗೆ ಯಾವ ಪಾಪವೂ ಇಲ್ಲ. ಸರ್ವೋತ್ತಮನು. ಆದುದರಿಂದ ಉತ್ ಎನ್ನಿಸುತ್ತಾನೆ, ಇದುಮೊದಲಾದ ಪ್ರಮೇಯವು ಸತ್ತತ್ತ್ವ ಎಂಬ ಗ್ರಂಥದಲ್ಲಿ ಇದೆ. || ೧ ||

**ಪೀ**—**ತಸ್ಯ ಯಥಾ ಕಪ್ಯಾಸಂ ಪುಂಡರೀಕಂ** ಎಂಬ ವಾಕ್ಯಕ್ಕೆ ಅರ್ಥ ಹೇಳುತ್ತಾರೆ—

ಭಾ. ॥ (೧) ಕಪ್ಯಾಸರಕ್ತಪದ್ಮಾಕ್ಷಃ ಸೂರ್ಯಗಶ್ಚಾಕ್ಷಿಗಶ್ಚ ಸಃ । ಗಾಯಕಸ್ತಸ್ಯ ವಿಷ್ಣೋರ್ಯಃ ಸ ಸ್ವರ್ಗ್ಯಾಂಶ್ಚ ನೃಲೋಕಗಾನ್ । ಕಾಮಾನ್ ದದ್ಯಾನ್ನರಶ್ಚೇತ್ಸ್ಯಾತ್ ಸುರಾಣಾಂ ಚ ನೃಣಾಮಪಿ ॥ ಮೋಕ್ಷದೋ ಯದಿ ವಾಯುಃ ಸ್ಯಾನ್ಮುಖ್ಯೋದ್ಗಾತಾ ತತೋಽನಿಲಃ । ಇತಿ ಚ ॥ (೨) ತಸ್ಮಾದುದ್ಗೀಥ ಉಚ್ಚೋಽಸೌ ಗಾಯತೇ ಚ । ಇತಿ ॥ ೧, ೨, ೩, ೪, ೫, ೬, ೭, ೮ ॥ ಇತಿ ಷಷ್ಠಃ ಖಂಡಃ ॥ ೩–೬ ॥ ೨ ॥

ಅ ॥ (೧) ಆ ಶ್ರೀಹರಿಯು ನೀರನ್ನು ಕುಡಿಯುತ್ತಿರುವ ನಾಳ (ತಾವರೆಯ ದಂಡು) ಸಂಬಂಧಿಯಾದ (ಅಂದರೆ ಬಾಡದಿರುವ) ಕೆಂಪು ತಾವರೆಯಂತೆ ಕಣ್ಣುಗಳುಳ್ಳವನು, ಸೂರ್ಯ ಮತ್ತು ಕಣ್ಣುಗಳಲ್ಲಿರುವವನು, ಅಂತಹ ವಿಷ್ಣುವನ್ನು ಗಾನಮಾಡುವವನು ಮನುಷ್ಯನಾಗಿದ್ದರೆ ಆತನಿಗೆ ಶ್ರೀಹರಿಯು ಸ್ವರ್ಗಲೋಕ ಭೂಲೋಕಗಳಲ್ಲಿದ್ದ ಅಭೀಷ್ಟಗಳನ್ನು ಕೊಡುತ್ತಾನೆ. ಉಪಾಸಕನು ಮುಖ್ಯಪ್ರಾಣನಾಗಿದ್ದರೆ—ಆತನು ದೇವತೆಗಳಿಗೂ ಮನುಷ್ಯರಿಗೂ ಮೋಕ್ಷವನ್ನು ಕೊಡುವವನಾಗುವನು. ಆದಕಾರಣ ಮುಖ್ಯಪ್ರಾಣನೇ ಮುಖ್ಯವಾಗಿ ಗಾನಮಾಡುವವನು. (೨) ಶ್ರೀಹರಿಗೆ ಉತ್ ಎಂದು ಹೆಸರು ಇದ್ದ ಪ್ರಯುಕ್ತವೂ ಭಾರತೀಪ್ರಾಣರು ಗಾಯಕರಾದುದರಿಂದಲೂ ಶ್ರೀಹರಿಯು ಸರ್ವೋತ್ತಮನೆಂದು ಗಾನಮಾಡಲ್ಪಡುವನಾದಕಾರಣ ಉದ್ಗೀಥನೆನಿಸುತ್ತಾನೆ ॥ ೧, ೨, ೩, ೪, ೫, ೬, ೭, ೮ ॥ ೩–೬ ॥ ॥ ೨ ॥

ಆರನೇ ಖಂಡವು ಮುಗಿಯಿತು.

## ೭ನೇ ಖಂಡವು

ಉ. ॥ ಅಥಾಧ್ಯಾತ್ಮಂ ವಾಗೇವ ಋಕ್ ಪ್ರಾಣಃ ಸಾಮ ತದೇತದೇತಸ್ಯಾಮೃಚ್ಯಧ್ಯೂಢꣳ ಸಾಮ ತಸ್ಮಾದೃಚ್ಯಧ್ಯೂಢꣳ ಸಾಮ ಗೀಯತೇ ವಾಗೇವ ಸಾ ಪ್ರಾಣೋಽಮಸ್ತತ್ಸಾಮ ॥ ೧ ॥

ಅ ॥ ಋಕ್ ಸಾಮ ಮೊದಲಾದ ದೇವತೆಗಳ ಸ್ವರೂಪವನ್ನು ಹೇಳಿ ಈಗ ದೇಹದಲ್ಲಿದ್ದ ಋಕ್ ಸಾಮರ ಸ್ವರೂಪವನ್ನು ಹೇಳುತ್ತಾ ಉದ್ಗೀಥನ ಸ್ವರೂಪವು ಹೇಳಲ್ಪಡುತ್ತದೆ, ವಾಗಿಂದ್ರಿಯದಲ್ಲಿದ್ದ ಭಾರತಿಯು ಋಕ್ಕೆಂದು ಅನ್ನಿಸುತ್ತಾಳೆ. ದೇಹದೊಳಗಣ ಇಂದ್ರಿಯಗಳಲ್ಲಿರತಕ್ಕ ಮುಖ್ಯಪ್ರಾಣನು ಅಥವಾ ಶ್ವಾಸರೂಪ ಪ್ರಾಣದಲ್ಲಿರತಕ್ಕ ಮುಖ್ಯಪ್ರಾಣನು ಸಾಮ ಎನಿಸುತ್ತಾನೆ........* ॥ ೧ ॥

ಉ. ॥ ಚಕ್ಷುರೇವ ಋಗಾತ್ಮಾ ಸಾಮ ತದೇತದಸ್ಯಾಮೃಚ್ಯಧ್ಯೂಢꣳ ಸಾಮ ತಸ್ಮಾದೃಚ್ಯಧ್ಯೂಢꣳ ಸಾಮ ಗೀಯತೇ ಚಕ್ಷುರೇವ ಸಾಽಽತ್ಮಾಮಸ್ತತ್ಸಾಮ ॥ ೨ ॥

ಅ ॥ ಕಣ್ಣಿನಲ್ಲಿದ್ದ ಸರಸ್ವತಿಯು ಋಕ್ ಎನಿಸುತ್ತಾಳೆ. ಜೀವನಲ್ಲಿದ್ದ ಪ್ರಾಣನು ಸಾಮ ಎನಿಸುತ್ತಾನೆ............ ॥ ೨ ॥

---

* ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು

ಉ. || ಶ್ರೋತ್ರಮೇವ ಋಙ್ಮನಃ ಸಾಮ ತದೇತದೇತಸ್ಯಾಮೃಚ್ಯ-ಧ್ಯೂಢꣳ ಸಾಮ ತಸ್ಮಾದೃಚ್ಯಧ್ಯೂಢꣳ ಸಾಮ ಗೀಯತೇ ಶ್ರೋತ್ರಮೇವ ಸಾ ಮನೋಽಮಸ್ತತ್ಸಾಮ || ೩ ||

ಅ || ಕಿವಿಯಲ್ಲಿದ್ದ ಸರಸ್ವತಿಯು ಋಕ್ ಎನಿಸುತ್ತಾಳೆ. ಮನಸ್ಸಿನಲ್ಲಿದ್ದ ಪ್ರಾಣನು ಸಾಮ ಎನಿಸುತ್ತಾನೆ........ || ೩ ||

ಉ. || ಅಥ ಯದೇತದಕ್ಷ್ಣಃ ಶುಕ್ಲಂ ಭಾಃ ಸೈವ ಋಗಥ ಯನ್ನೀಲಂ ಪರಃ ಕೃಷ್ಣಂ ತತ್ಸಾಮ ತದೇತದೇತಸ್ಯಾಮೃಚ್ಯಧ್ಯೂಢꣳ ಸಾಮ ತಸ್ಮಾದೃಚ್ಯ-ಧ್ಯೂಢꣳ ಸಾಮ ಗೀಯತೇ || ೪ ||

ಅ || ಕಣ್ಣಿನ ಬಿಳಿಪಿನ ಭಾಗದಲ್ಲಿರತಕ್ಕ ಸರಸ್ವತಿಯು ಋಕ್........ಕಪ್ಪಾದ ಕಣ್ಣುಗುಡ್ಡಿನಲ್ಲಿ ಇರತಕ್ಕ ಪ್ರಾಣನು ಸಾಮ ಎನಿಸುತ್ತಾನೆ........ || ೪ ||

ಪೀ — ಹೀಗೆ ದೇಹದಲ್ಲಿದ್ದ ಋಕ್ ಸಾಮ ಎನಿಸಿಕೊಂಡ ಭಾರತೀ ಮುಖ್ಯಪ್ರಾಣರ ಮಹಿಮೆಯನ್ನು ಹೇಳಿ ಈಗ ಅವರಲ್ಲಿ ಅಂತರ್ಗತನಾದ ಉದ್ಗೀಥನೆನಿಸುವ ಶ್ರೀಹರಿಯ ಮಹಿಮೆಯನ್ನು ಹೇಳುತ್ತಾರೆ—

ಉ. || ಅಥ ಯದೇವೈತದಕ್ಷ್ಣಃ ಶುಕ್ಲಂ ಭಾಃ ಸೈವ ಸಾಽಥ ಯನ್ನೀ-ಲಂ ಪರಃ ಕೃಷ್ಣಂ ತದಮಸ್ತತ್ಸಾಮಾಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಸೈವ ಋಕ್ತತ್ಸಾಮ ತದುಕ್ಥಂ ತದ್ಯಜುಸ್ತದ್ಬ್ರಹ್ಮ ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಂ ಯಾವಮುಷ್ಯ ಗೇಷ್ಣೌ ತೌ ಗೇಷ್ಣೌ ಯ-ನ್ನಾಮ ತನ್ನಾಮ || ೫ ||

ಅ || ಕಣ್ಣಿನಲ್ಲಿದ್ದ ಸರಸ್ವತೀ (ಭಾರತೀ) ಮುಖ್ಯಪ್ರಾಣರಲ್ಲಿ ಅಂತರ್ಗತನಾದ ಉದ್ಗೀಥನೆಂಬ ಶ್ರೀಹರಿಯನ್ನು (ಜ್ಞಾನಿಗಳು ಜ್ಞಾನದೃಷ್ಟಿಯಿಂದ) ಕಾಣುತ್ತಾರೆ. ಕಣ್ಣಿನಲ್ಲಿದ್ದ ಶ್ರೀಹರಿಯು ಜ್ಞಾನರೂಪನಾದುದರಿಂದ ಋಕ್, ನಿತ್ಯದಲ್ಲಿಯೂ ಲಕ್ಷ್ಮೀಸಮೇತನಾಗಿಯೇ ಇದ್ದುದರಿಂದ ಅಥವಾ ನಿತ್ಯದಲ್ಲಿಯೂ ಸರ್ವಪ್ರಾಣಿಗಳಲ್ಲಿಯೂ ಸಮನಾದುದರಿಂದ ಸಾಮ, ಸರ್ವಜಗತ್ತನ್ನು ಸೃಷ್ಟಿಮಾಡತಕ್ಕವನಾದುದರಿಂದ ಉಕ್ಥಂ. ಯಾಜ್ಞಿಕರಿಂದ ಯಾಗಮಾಡಿಸಿಕೊಳ್ಳಲ್ಪಡುವುದರಿಂದ ಯಜುಃ, ಗುಣಪರಿಪೂರ್ಣನಾದುದರಿಂದ ಬ್ರಹ್ಮಎನಿಸುತ್ತಾನೆ. ಸೂರ್ಯನೊಳಗಿರುವ ಭಾರತೀಮುಖ್ಯಪ್ರಾಣರಲ್ಲಿ ಅಂತರ್ಗತನಾದ ಶ್ರೀಹರಿಯ ಜ್ಞಾನಾನಂದಾದಿರೂಪವೇ ಕಣ್ಣಿನೊಳಗಿರುವ ಭಾರತೀಮುಖ್ಯಪ್ರಾಣರ ಅಂತರ್ಗತ ಶ್ರೀಹರಿಯ ರೂಪವು. ಋಕ್ ಸಾಮ ಎಂದು ಹೆಸರುಳ್ಳ ಭಾರತೀಮುಖ್ಯಪ್ರಾಣರು ಸೂರ್ಯನಲ್ಲಿರತಕ್ಕ ಶ್ರೀಹರಿಯನ್ನು ಗಾನಮಾಡುತ್ತಾರೆ. ಅವರೇ ಕಣ್ಣಿನಲ್ಲಿದ್ದ ಶ್ರೀಹರಿಯನ್ನು ಗಾನಮಾಡುವವರು. ಸೂರ್ಯಾಂತರ್ಗತನಾದ ಶ್ರೀಹರಿಗೆ ಇದ್ದ **ಉತ್ ಉದ್ಗೀಥಃ** ಎಂಬ ನಾಮಗಳೇ ಕಣ್ಣಿನಲ್ಲಿ ಅಂತರ್ಗತನಾದ ಶ್ರೀಹರಿಗೂ ನಾಮಧೇಯಗಳು. || ೫ ||

**ಉ. ॥ ಸ ಏಷ ಚೈತಸ್ಮಾದರ್ವಾಂಚೋ ಲೋಕಾಸ್ತೇಷಾಂ ಚೇಷ್ಟೇ ಮನುಷ್ಯಕಾಮಾನಾಂ ಚೇತಿ ತದ್ಯ ಇಮೇ ವೀಣಾಯಾಂ ಗಾಯಂತ್ಯೇತಂ ತೇ ಗಾಯಂತಿ ತಸ್ಮಾತ್ತೇ ಧನಸನಯಃ ॥ ೬ ॥**

ಅ ॥ ಕಣ್ಣಿನಲ್ಲಿರುವ ಶ್ರೀಹರಿಯು ಈ ಭೂಲೋಕದಿಂದ ಕೆಳಗಿನದ್ದಾದ ಪಾತಾಳಾದಿ ಲೋಕಗಳಿಗೂ ಈ ಲೋಕಕ್ಕೂ ಅಧಿಪತಿಯಾಗಿರುತ್ತಾನೆ. ಮತ್ತು ಮನುಷ್ಯರು ಇಚ್ಛಿಸಿದವುಗಳನ್ನೆಲ್ಲಾ ಕೊಡಲಿಕ್ಕೂ ಅವನೇ ಸಮರ್ಥನಾಗಿರುತ್ತಾನೆ. (ಭಾರತೀಪ್ರಾಣರು ಮಾತ್ರ ಅವನನ್ನು ಗಾನಮಾಡುವುದಲ್ಲ, ಮತ್ತೆ ಲೋಕದಲ್ಲಿ ಗಾಯಕರೆಲ್ಲರೂ ಅವನನ್ನೇ ಗಾನಮಾಡುತ್ತಾರೆ, ಎನ್ನುತ್ತಾರೆ---) ಶ್ರೀಹರಿಯೇ ಮನುಷ್ಯರಿಗೆ ಇಷ್ಟವನ್ನು ಕೊಡಲಿಕ್ಕೆ ಸಮರ್ಥನಾದುದರಿಂದ ಪ್ರಸಿದ್ಧರಾದ ಗಾಯಕರು (ರಾಜಾದಿಗಳ ಮುಂದುಗಡೆ) ವೀಣೆ ಬಾರಿಸಿ ಹಾಡುತ್ತಾರೆಂಬುದು ಕಣ್ಣಿನೊಳಗಿರುವ ಶ್ರೀಹರಿಯನ್ನೇ ಗಾನಮಾಡಿದಂತಾಗುವುದು. ಅದರಿಂದಲೇ ಸಂತುಷ್ಟನಾದ ರಾಜಾದಿಗಳಲ್ಲಿ ನಿಯಾಮಕನಾದ ಶ್ರೀಹರಿಯಿಂದ ಧನವನ್ನು ಗಾಯಕರು ಹೊಂದುತ್ತಾರೆ. ಏವಂಚ ರಾಜನು ಗಾಯಕರಿಗೆ ಕೊಡುವ ಪಾರಿತೋಷಕವು ರಾಜನೊಳಗಿರುವ ಶ್ರೀಹರಿಯಿಂದಲೇ ಕೊಡಲ್ಪಟ್ಟಿತೆಂದು ಭಾವಿಸಬೇಕು. (ಇಲ್ಲವಾದರೆ ರಾಜಾದಿಗಳಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಧನವು ಲಭಿಸದೆ ಹೋಗಬೇಕಾಗುವುದು.) ॥ ೬ ॥

ಪೀ—ಹಿಂದೆ ಹೇಳಿದ ಪ್ರಕಾರ ತಿಳಿದುಕೊಂಡು ಸಾಮಗಾನವನ್ನು ಮಾಡುವವನಿಗೆ ಫಲ ಹೇಳುತ್ತಾರೆ—

**ಉ. ॥ ಅಥ ಯ ಏತದೇವಂವಿದ್ವಾನ್ಸಾಮ ಗಾಯತ್ಯುಭೌ ಸಾಮ ಗಾಯತಿ ಸೋಽಮುನೈವ ಸ ಏಷ ಚಾಮುಷ್ಮಾತ್ಪರಾಂಚೋ ಲೋಕಾಸ್ತಾꣳ-ಶ್ಚಾಪ್ನೋತಿ ತದೇವ ಕಾಮಾꣳಶ್ಚ ॥ ೭ ॥**

ಅ ॥ ಯಾವ ಅಧಿಕಾರಿಯು ಆದಿತ್ಯನಿಗೆ ನಿಯಾಮಕರಾದ ಭಾರತೀಪ್ರಾಣರೊಳಗಿರುವ ಭಗವತ್ ಸ್ವರೂಪವನ್ನೂ, ದೇಹದ ಕಣ್ಣಿನಲ್ಲಿರುವ ಭಾರತೀಪ್ರಾಣರೊಳಗಿರುವ ಭಗವತ್ಸ್ವರೂಪವನ್ನೂ ಹಿಂದೆ ಹೇಳಿದ ಪ್ರಕಾರ ತಿಳಿದು ಸಾಮವನ್ನು ಗಾನಮಾಡುತ್ತಾನೋ ಅವನು ಸೂರ್ಯ, ಕಣ್ಣು, ಇವುಗಳಲ್ಲಿ ಇರುವ ಭಗವದ್ರೂಪಗಳನ್ನೇ ಗಾನಮಾಡುತ್ತಾನೆ. ಉದ್ಗಾತನು ಗಾನಮಾಡುವುದೆಂಬುದೂ ಭಗವತ್ಪ್ರೇರಣೆಯಿಂದಲೇ. ಈತನೇ ಜ್ಞಾನಪೂರ್ವಕವಾಗಿ ಶ್ರೀಹರಿಯನ್ನು ಗಾನಮಾಡುತ್ತಾ ಈ ಅಂತರಿಕ್ಷ ಲೋಕದಿಂದ ಮೇಲಿನದ್ದಾದ ಸ್ವರ್ಗಾದಿಲೋಕಗಳನ್ನೂ ವೈಕುಂಠಾದಿ ಲೋಕಗಳನ್ನು ಹೊಂದುತ್ತಾನೆ. ಮತ್ತು ಉತ್ಕೃಷ್ಟಗಾನದಿಂದ ಅವರವರಿಗೆ ಯೋಗ್ಯಗಳಾದ ಲೋಕಗಳನ್ನು ಹೊಂದಿಸಿಕೊಡುತ್ತಾನೆ. ಮತ್ತು ಸ್ವರ್ಗದಲ್ಲಿ ಸಿಗತಕ್ಕ ಅಭೀಷ್ಟಗಳನ್ನು ಹೊಂದಿಸಿಕೊಡುತ್ತಾನೆ. ಉದ್ಗಾತನು ಯೋಗ್ಯರಿಗೆ ಪರಲೋಕಾದಿಗಳನ್ನು ಹೊಂದಿಸಿಕೊಡುತ್ತಾನೆಂಬುದೂ ಆದಿತ್ಯನಲ್ಲಿ ಅಂತರ್ಗತನಾದ ಶ್ರೀಹರಿಯ ಪ್ರಸಾದದಿಂದಲೇ. (ತನ್ನ ಸಾಮರ್ಥ್ಯದಿಂದ ಅಲ್ಲ.) ॥ ೭ ॥

**ಉ. ॥ ಅಥಾನೇನೈವ ಯೇ ಚೈತಸ್ಮಾದರ್ವಾಂಚೋ ಲೋಕಾಸ್ತಾꣳ-ಶ್ಚಾಪ್ನೋತಿ ಮನುಷ್ಯಕಾಮಾꣳಶ್ಚ ತಸ್ಮಾದು ಹೈವಂವಿದುದ್ಗಾತಾ ಬ್ರೂಯಾತ್ ॥ ೮ ॥**

**ಉ. ॥ ಕಂ ತೇ ಕಾಮಮಾಗಾಯಾನೀತ್ಯೇಷ ಹ್ಯೇವ ಕಾಮಗಾನಸ್ಯೇ-ಷ್ಟೇ ಯ ಏವಂವಿದ್ವಾನ್ ಸಾಮ ಗಾಯತಿ ಸಾಮ ಗಾಯತಿ ॥ ಇತಿ ಸಪ್ತ-ಮಃ ಖಂಡಃ ॥ ೩-೭ ॥ ॥ ೯ ॥**

ಅ ॥ ಕಣ್ಣಿನಲ್ಲಿರುವ ಶ್ರೀಹರಿಯ ಅನುಗ್ರಹದಿಂದಲೇ ಭೂಲೋಕದಿಂದ ಕೆಳಗಿನ ಲೋಕಗಳನ್ನು ಹೊಂದುತ್ತಾನೆ. ಉತ್ಕೃಷ್ಟಗಾನದಿಂದ ಸಾಧಕರಿಗೆ ಹೊಂದಿಸಿಕೊಡುತ್ತಾನೆ. ಮತ್ತು ಮನುಷ್ಯರ ಇಷ್ಟಗಳನ್ನು ಹೊಂದಿಸಿಕೊಡುತ್ತಾನೆ. ಭಗವಂತನನ್ನು ಗಾನಮಾಡುವವನಿಗೆ ಸಾಮರ್ಥ್ಯಾತಿಶಯವಿದ್ದುದರಿಂದಲೇ ಹೀಗೆ ತಿಳಿದು ಗಾನಮಾಡುವವನು—ಎಲೊ ಯಜಮಾನನೇ ನಿನಗೆ ಯಾವ ಇಷ್ಟವು ಸಿಗುವುದಕ್ಕಾಗಿ ಗಾನಮಾಡಬೇಕೆಂದು ಯಜಮಾನನೊಡನೆ ಕೇಳಬೇಕು. ಹೀಗೆ ತಿಳಿದು ಸಾಮವನ್ನು ಗಾನಮಾಡುವವನೇ ಉತ್ಕೃಷ್ಟಗಾನದಿಂದ ಯಜಮಾನನಿಗೆ ಇಷ್ಟ ಕೊಡಲಿಕ್ಕೆ ಸಮರ್ಥನಾಗಿರುತ್ತಾನೆ.

ವಿ ॥ ಭಗವಂತನನ್ನು ಮುಖ್ಯವಾಗಿ ಗಾನಮಾಡುವವನು ಮುಖ್ಯಪ್ರಾಣನು. ಮನುಷ್ಯರು ಅಮುಖ್ಯರು. ಆದರಲ್ಲಿ ವಾಯುದೇವರಿಗೇನೇ ಊರ್ಧ್ವಲೋಕಾದಿಗಳನ್ನು ಹೊಂದಿಸಿಕೊಡತಕ್ಕ ಶಕ್ತಿಯು. ಮನುಷ್ಯರಿಗೆ ಸ್ವರ್ಗಭೂಲೋಕಗಳಲ್ಲಿದ್ದ ಇಷ್ಟಗಳನ್ನು ಹೊಂದಿಸಿಕೊಡತಕ್ಕ ಶಕ್ತಿಯು. ॥ ೩-೭ ॥ ೮,೯ ॥ ॥ ೯ ॥

ಪೀ—ಚಕ್ಷುರೇವ ಋಕ್, ಆತ್ಮಾ ಸಾಮ, ಎಂಬುವ ೨ನೇ ಮಂತ್ರದಲ್ಲಿದ್ದ ಆತ್ಮಶಬ್ದಾರ್ಥವನ್ನು ಹೇಳುತ್ತಾರೆ—

**ಭಾ. ॥ (೧) ಆತ್ಮಾ ಜೀವಃ । ಸರಸ್ವತೀ ಹಿ ಚಕ್ಷುಃಸ್ಥಾ ಜೀವಸ್ಥೋ ವಾಯುರೀ-ರಿತಃ(ಶ್ವರಃ) ॥ ವಿದಿತ್ವಾ ತಾವುಭೌ ದೇವೌ ತದ್ಗಂ ಧ್ಯಾಯೇದ್ಧರಿಂ ಸದಾ । ಇತಿ ಮಾನಸೇ ॥ (೨) ದೃಶ್ಯತೇ ಜ್ಞಾನದೃಷ್ಟ್ಯಾ ಯಃ ಸೂರ್ಯೇ ಚಕ್ಷುಷಿ ಚೈಕರಾಟ್ ॥ (೩) ಋಙ್ನಾ-ಮಾ ಜ್ಞಾನರೂಪತ್ವಾತ್ ಸಾಮ ನಿತ್ಯಸಮತ್ವತಃ । ಉಕ್ಥಮುತ್ಥಾಪಕತ್ವಾಚ್ಚ ಯಜು-ರ್ಯಾಜ್ಯಸ್ವರೂಪತಃ ॥ ಬ್ರಹ್ಮಾಸೌ ಗುಣಪೂರ್ಣತ್ವಾದೇವಂ ಸರ್ವಾಭಿಧಾನವಾನ್ । ಇತಿ ಚ ॥ (೪) ಯಥಾ ಬದರಿಕಾನಾಥೋ ದ್ವಾರಕಾನಾಥ ಇತ್ಯಪಿ । ಅರ್ವಾ(ವ)ಙ್ನಾಥಃ ಪರಾಙ್ನಾಥ ಇತಿ ತದ್ವದಿಹೋಚ್ಯತೇ ॥ ಸರ್ವನಾಥೋಽಪಿ ಭಗವಾನ್ ಸನ್ನಿಧಾನವಿಶೇ-ಷತಃ । ಇತಿ ಚ ॥ ೧, ೨, ೩, ೪, ೫, ೬, ೭, ೮, ೯ ॥ ಇತಿ ಸಪ್ತಮಃ ಖಂಡಃ ॥ ೩-೭ ॥**

ಅ ॥ (೧) ಆತ್ಮಾ=ಜೀವನು ಅಂದರೆ ಜೀವನಲ್ಲಿದ್ದ ಪ್ರಾಣನು. (ಈ ಅರ್ಥವನ್ನು ಇಲ್ಲಿ ಏಕೆ ಮಾಡಬೇಕೆಂದರೆ) ಕಣ್ಣಿಗೆ ನಿಯಾಮಕಳಾಗಿರುವವಳು ಸರಸ್ವತಿಯು. ಜೀವನಿಗೆ ನಿಯಾಮಕನಾಗಿರುವವನು ಮುಖ್ಯಪ್ರಾಣನು ಆ ದೇವತೆಗಳನ್ನು ತಿಳಿದು ಅವರೊಳಗಿರುವ ಶ್ರೀಹರಿಯನ್ನು ಸದಾ ಧ್ಯಾನಿಸಬೇಕು ಎಂದು ಮಾನಸ ಎಂಬ ಗ್ರಂಥದಲ್ಲಿದೆ. (೨) ಸೂರ್ಯ, ಕಣ್ಣು, ಇವುಗಳಲ್ಲಿ ಅಂತರ್ಗತನಾದ ಸರ್ವಸ್ವತಂತ್ರನಾದ ಶ್ರೀಹರಿಯನ್ನು ಜ್ಞಾನದೃಷ್ಟಿಯಿಂದಲೇ ಜ್ಞಾನಿಗಳು ಕಾಣುತ್ತಾರೆ. (ಶ್ರೀಹರಿಯು ಕಣ್ಣಿಗೆ ಗೋಚರನಲ್ಲ.) (೩) (ಋಕ್ ಸಾಮ ಇತ್ಯಾದಿಗಳ ಅರ್ಥ ಹೇಳುತ್ತಾರೆ—) ಶ್ರೀಹರಿಯು ಜ್ಞಾನರೂಪನಾದುದರಿಂದ ಋಕ್ ಎಂದೂ. ನಿತ್ಯದಲ್ಲಿಯೂ ನಿರ್ವಿಕಾರವಾಗಿ (ಒಂದೇ ರೀತಿಯಾಗಿ) ಇರುವುದರಿಂದ ಸಾಮ ಎಂದೂ, ಸರ್ವಜಗತ್ತನ್ನು ಸೃಷ್ಟಿಸತಕ್ಕವನಾದುದರಿಂದ ಉಕ್ಥಂ ಎಂದೂ, ಯಾಗಮಾಡಿಸಿಕೊಳ್ಳುವುದರಿಂದ ಯಜುಃ ಎಂದೂ, ಸರ್ವಗುಣಪರಿಪೂರ್ಣನಾದುದರಿಂದ ಬ್ರಹ್ಮ ಎಂದೂ ಎನಿಸಿಕೊಳ್ಳುತ್ತಾನೆ. ಹೀಗೆ ಶ್ರೀಹರಿಗೆ ಎಲ್ಲಾ ನಾಮಧೇಯಗಳೂ ಇವೆ. (೪) (ಶ್ರೀಹರಿಯು ಸರ್ವಲೋಕಗಳಿಗೂ ಅಧಿಪತಿ

ಯಾಗುತ್ತಿರುವಾಗ ವಿಶಿಷ್ಯ ಒಂದು ರೂಪವು ಸ್ವರ್ಗಾದಿಗಳಿಗೆ ಅಧಿಪತಿಯೆಂಬುದೂ, ಇನ್ನೊಂದು ರೂಪವು ಪಾತಾಳಾದಿಗಳಿಗೆ ಅಧಿಪತಿಯೆಂಬುದೂ ಹೇಗೆ ಸಂಗತವಾಗುತ್ತದೆ? ಎಂದರೆ—) ಶ್ರೀಹರಿಯು ನಾರಾಯಣ ವ್ಯಾಸರೂಪದಿಂದ ಬದರಿಕಾಶ್ರಮದಲ್ಲಿಯೂ ಶ್ರೀಕೃಷ್ಣರೂಪದಿಂದ ದ್ವಾರಕೆಯಲ್ಲಿಯೂ ಇದ್ದು ಬದರಿಕಾನ್ನಾಥ, ದ್ವಾರಕಾನಾಥ ಎಂದು ಹೇಳಿಸಿಕೊಳ್ಳುವಂತೆಯೇ ಇಲ್ಲಿಯೂ ಒಂದು ಭಗವನ್ಮೂರ್ತಿಯು ಪಾತಾಳಾದಿಗಳಿಗೆ ಅಧಿಪತಿಯೆಂದೂ, ಇನ್ನೊಂದು ಸ್ವರ್ಗಾದಿಗಳಿಗೆ ಅಧಿಪತಿಯೆಂದೂ ವ್ಯವಹಾರವು. ॥ ೧, ೨, ೩, ೪, ೫, ೬, ೭, ೮, ೯ ॥ ೩—೭ ॥ ॥೧॥

ಏಳನೇ ಖಂಡವು ಮುಗಿಯಿತು.

## ೮ನೇ ಖಂಡವು

ಪೀ—ಉದ್ಗೀಥನೆಂಬ ಶ್ರೀಹರಿಯು ಸರ್ವೋತ್ತಮನೆಂದು ಹೇಳಿದ್ದನ್ನು ವಿಚಾರಮಾಡಿ ಸಮರ್ಥಿಸುತ್ತಾರೆ—

**ಉ. ॥ ತ್ರಯೋ ಹೋದ್ಗೀಥೇ ಕುಶಲಾ ಬಭೂವುಃ ಶಿಲಕಃ ಶಾಲಾವತ್ಯಶ್ಚೈಕಿತಾಯನೋ ದಾಲ್ಭ್ಯಃ ಪ್ರವಾಹಣೋ ಜೈವಲಿರಿತಿ ತೇ ಹೋಚುರುದ್ಗೀಥೇ ವೈ ಕುಶಲಾಃ ಸ್ಮೋ ಹಂತೋದ್ಗೀಥೇ ಕಥಾಂ ವದಾಮ ಇತಿ ॥೧॥**

ಅ ॥ ಶಲಾವತಿಯ ಮಗನಾದ ಶಿಲಕನು, ಚಿಕಿತಾಯನನ ಮಗನಾದ ದಾಲ್ಭ್ಯನು, ಜಿಬಲನ ಮಗನಾದ ಪ್ರವಾಹಣನು ಎಂಬ ಮೂವರು ಉದ್ಗೀಥನೆಂಬ ಭಗವಂತನನ್ನು ಹೇಳುವ ಉದ್ಗೀಥ ಎಂಬ ಸಾಮವಿಶೇಷದಲ್ಲಿ ನಿಪುಣರು. ಆ ಮೂವರು ಪರಸ್ಪರವಾಗಿ ನಾವು ಉದ್ಗೀಥ ಎಂಬ ಸಾಮವಿಶೇಷದಲ್ಲಿ ಕುಶಲರಾಗಿರುತ್ತೇವೆ. ಹರ್ಷ (ನಿಮಗೆ ಅನುಮತಿಯಿದ್ದರೆ) ಉದ್ಗೀಥನ ವಿಷಯದಲ್ಲಿ ಪ್ರಶ್ನೆ ಪ್ರತ್ಯುಕ್ತಿ ರೂಪವಾದ ವಾದಕಥೆಯನ್ನು ನಾವು ಮಾಡಿಕೊಳ್ಳುವ, ಎಂದು ಹೇಳಿದರು. ॥ ೧ ॥

**ಉ. ॥ ತಥೇತಿ ಹ ಸಮುಪವಿವಿಶುಃ ಸ ಹ ಪ್ರವಾಹಣೋ ಜೈವಲಿರುವಾಚ ಭಗವಂತಾವಗ್ರೇ ವದತಾಂ ಬ್ರಾಹ್ಮಣಯೋರ್ವದತೋರ್ವಾಚಂ ಶ್ರೋಷ್ಯಾಮೀತಿ ಸ ಹ ಶಿಲಕಃ ಶಾಲಾವತ್ಯಶ್ಚೈಕಿತಾಯನಂ ದಾಲ್ಭ್ಯಮುವಾಚ ಹಂತ ತ್ವಾ ಪೃಚ್ಛಾನೀತಿ ಪೃಚ್ಛೇತಿ ಹೋವಾಚ ॥ ೨ ॥**

ಅ ॥ ಹಾಗೆಯೇ ಆಗಲಿ ಎಂದು ಹೇಳಿ ಆ ಮೂವರೂ ಒಂದು ಕಡೆ ಕುಳಿತರು. ಅವರಲ್ಲಿ ಪ್ರವಾಹಣನು ಎಲೋ ಶಿಲಕ ಚೈಕಿತಾಯನರೇ ಪೂಜ್ಯರಾದ ನೀವು ಮೊದಲು ಹೇಳಬೇಕು. ನಾನು ಬ್ರಾಹ್ಮಣರಾದ ನಿಮ್ಮಿಬ್ಬರಿಂದ ತತ್ವಕಥೆಯನ್ನು ಕೇಳುವೆನು ಎಂದು ಹೇಳಿದನು. (ಇದರಿಂದ ಪ್ರವಾಹಣನು ಕ್ಷತ್ರಿಯನೆಂದು ತಿಳಿಯುತ್ತದೆ.) ಆಗ ಪ್ರವಾಹಣನಿಂದ ಹೇಳಿಸಿಕೊಳ್ಳಲ್ಪಟ್ಟ ಶಿಲಕರು ದಾಲ್ಭ್ಯರ ಹತ್ತಿರ (ನಿಮಗೆ ಅನುಮತಿಯಿದ್ದರೆ) ನಿಮ್ಮೊಡನೆಯೇ ನಾನು ಕೇಳುತ್ತೇನೆ, ಎಂದು ಹೇಳಿದರು. ಆಗ ದಾಲ್ಭ್ಯರು ಶಿಲಕರ ಹತ್ತಿರ ಕೇಳಿರಿ ಎಂದು ಹೇಳಿದರು. ॥ ೨ ॥

ಪೀ—ಪ್ರಶ್ನೋತ್ತರ ಕ್ರಮವನ್ನು ತೋರಿಸುತ್ತಾರೆ—

ಉ. ॥ ಕಾ ಸಾಮ್ನೋ ಗತಿರಿತಿ ಸ್ವರ ಇತಿ ಹೋವಾಚ ಸ್ವರಸ್ಯ ಕಾ ಗತಿರಿತಿ ಪ್ರಾಣ ಇತಿ ಹೋವಾಚ ಪ್ರಾಣಸ್ಯ ಕಾ ಗತಿರಿತ್ಯನ್ನಮಿತಿ ಹೋವಾಚಾನ್ನಸ್ಯ ಕಾ ಗತಿರಿತ್ಯಾಪ ಇತಿ ಹೋವಾಚ ॥ ೩ ॥

ಅ ॥ ಕೆಟ್ಟ ವಸ್ತುಗಳನ್ನಾಗಲೀ ಒಳ್ಳೆಯ ವಸ್ತುಗಳನ್ನಾಗಲೀ ವ್ಯತ್ಯಾಸವಿಲ್ಲದೆ ಸಮವಾಗಿ ಸುಡುವುದರಿಂದ ಸಾಮ ಎಂದು ಹೆಸರುಳ್ಳ ಸಾಮಕ್ಕೆ ಅಭಿಮಾನಿಯಾದ ಅಗ್ನಿಗೆ ಆಶ್ರಯನು ಯಾರು? (ಅಂದರೆ— ಮೋಕ್ಷದಲ್ಲಿ ಅಗ್ನಿಯು ಯಾರನ್ನು ಹೊಂದುವನು?,* (ಎಂದು ಶಿಲಕರು ಪ್ರಶ್ನೆ ಮಾಡಿದಾಗ) ದಾಲ್ಭ್ಯರು 'ಸ್ವರ ಎಂದು ಹೆಸರುಳ್ಳ ಸ್ವರಾಭಿಮಾನಿಯಾದ ವರುಣನು' ಎಂದು ಉತ್ತರಿಸಿದರು. *ಸ್ವರಾಭಿಮಾನಿಯಾದ ಆ ವರುಣನಿಗೆ ಆಶ್ರಯನು ಯಾರು? (ಎಂಬ ಪ್ರಶ್ನೆಗೆ) ಉದಯಿಸಿ ಜಗತ್ತಿಗೆ ಪ್ರೇರಕನಾದುದರಿಂದಲೂ ಪ್ರಾಣನಿಂದ ಕೆಳಗಿನವರಿಗೆ ಅಭಿಮಾನಿಯಾದುದರಿಂದಲೂ ಪ್ರಾಣನೆನಿಸಿಕೊಂಡ ದೇಹದಲ್ಲಿದ್ದ ಪ್ರಾಣವಾಯುವಿಗೆ ಅಭಿಮಾನಿಯಾದ, ಸೂರ್ಯನು. (ಎಂದು ಪ್ರತ್ಯುತ್ತರವು) ಆ ಸೂರ್ಯನಿಗೆ ಆಶ್ರಯನು ಯಾರು? ಅನ್ನಾಭಿಮಾನಿಯಾದ ದಕ್ಷಪ್ರಜಾಪತಿಯು. ಆತನಿಗೆ ಆಶ್ರಯನು ಯಾರು? ಜಲಾಭಿಮಾನಿಯಾದ ದೇವೇಂದ್ರನು, ಎಂದು ಉತ್ತರಿಸಿದನು. ॥ ೩ ॥

ಉ. ॥ ಅಪಾಂ ಕಾ ಗತಿರಿತ್ಯಸೌ ಲೋಕ ಇತಿ ಹೋವಾಚಾಮುಷ್ಯ ಲೋಕಸ್ಯ ಕಾ ಗತಿರಿತಿ ನ ಸ್ವರ್ಗಂ ಲೋಕಮತಿನಯೇದಿತಿ ಹೋವಾಚ ಸ್ವರ್ಗಂ ವಯಂ ಲೋಕಂ ಸಾಮಾಭಿಸಂಸ್ಥಾಪಯಾಮಃ ಸ್ವರ್ಗಸಂಸ್ತಾವಂ ಹಿ ಸಾಮೇತಿ ॥ ೪ ॥

ಅ ॥ ಇಂದ್ರನಿಗೆ ಆಶ್ರಯನು ಯಾರು? ದ್ಯುಲೋಕಾಭಿಮಾನಿಯಾದ ರುದ್ರನು ಈ ರುದ್ರನಿಗೆ ಆಶ್ರಯನು ಯಾರು? ಎಂದು ಪ್ರಶ್ನೆ ಮಾಡಿದಾಗ, ಸ್ವರ್ಗಲೋಕಕ್ಕೆ ಅಧಿಪತಿಯಾದ ರುದ್ರನನ್ನು ಬಿಟ್ಟು ಮತ್ತೊಬ್ಬನು ಉತ್ತಮನು ಯಾರೆಂದು ಪ್ರಶ್ನೆ ಮಾಡಬಾರದೆಂದು ದಾಲ್ಭ್ಯರು ಹೇಳಿದರು. (ದಾಲ್ಭ್ಯರು ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದಿದ್ದರೂ ಇನ್ನಷ್ಟು ವಿಶೇಷಜ್ಞಾನವು ಹುಟ್ಟಿಸುವುದಕ್ಕಾಗಿ ರುದ್ರನು ಸರ್ವೋತ್ತಮನೆಂದು ಹೇಳಿರುವರು.) (ರುದ್ರನು ಬಿಟ್ಟು ಇನ್ನೊಬ್ಬನು ಸರ್ವೋತ್ತಮನೆಂದು ಏಕೆ ತಿಳಿಯಕೂಡದೆಂದರೆ—) ಸಾಮವೇದವು ಸ್ವರ್ಗಕ್ಕೆ ಅಧಿಪತಿಯಾದ ರುದ್ರನನ್ನು ಹೊಗಳುತ್ತದೆ. ಆದಕಾರಣ ನಾವು ಸಾಮವು ಸ್ವರ್ಗಕ್ಕೆ ಅಧಿಪತಿಯಾದ ರುದ್ರನನ್ನು ಹೇಳುತ್ತದೆಂದು ತಿಳಿಯುವೆವು ಎಂದು ದಾಲ್ಭ್ಯರು ಹೇಳಿದರು. ॥ ೪ ॥

ಉ. ॥ ತಂ ಹ ಶಿಲಕಃ ಶಾಲಾವತ್ಯಶ್ಚೈಕಿತಾಯನಂ ದಾಲ್ಭ್ಯಮುವಾಚಾಪ್ರತಿಷ್ಠಿತಂ ವೈ ಕಿಲ ತೇ ದಾಲ್ಭ್ಯ ಸಾಮ ಯಸ್ತ್ವೇತರ್ಹಿ ಬ್ರೂಯಾನ್ಮೂರ್ಧಾ ತೇ ವಿಪತಿಷ್ಯತೀತಿ ಮೂರ್ಧಾ ತೇ ವಿಪತೇದಿತಿ ॥ ೫ ॥

ಅ ॥ ಹೀಗೆ ಹೇಳಿಸಿಕೊಂಡ ಶಿಲಕರು ದಾಲ್ಭ್ಯರ ಹತ್ತಿರ ಎಲೋ ದಾಲ್ಭ್ಯರೇ ಸಾಮವೇದದಲ್ಲಿ

---

* ಹೀಗೆಯೇ ಮೇಲೆಯೂ ಪ್ರಶ್ನಪ್ರತ್ಯುತ್ತರಗಳನ್ನು ತಿಳಿದುಕೊಳ್ಳಬೇಕು.

ಹೇಳಲ್ಪಡತಕ್ಕವನೆಂದು ನಿಮ್ಮಿಂದ ತಿಳಿಯಲ್ಪಟ್ಟ ರುದ್ರನು ಕೊನೆಯವನು ಅಲ್ಲ; (ಅಂದರೆ—ಸರ್ವೋತ್ತಮನೆಂದು ಹೇಳಿದರು. ಆದಕಾರಣ ಸಾಮವು ರುದ್ರನನ್ನು ಸರ್ವೋತ್ತಮನೆಂದು ಹೇಳುತ್ತದೆಂದು ನೀವು ಹೇಳಿದರೆ ನಿಮ್ಮ ಶಿರಸ್ಸು ಕೆಳಗೆ ಬೀಳಲಿ ಎಂದು ಬ್ರಹ್ಮಜ್ಞಾನಿಯು ಹೇಳಿದರೆ—ನಿಮ್ಮ ಶಿರಸ್ಸು ನಿಶ್ಚಯವಾಗಿಯೂ ತುಂಡಾಗಿ ಕೆಳಗೆ ಬಿದ್ದೀತು. (ಆದರೆ ನನಗೆ ನಿಮ್ಮ ಮೇಲೆ ವಿಶ್ವಾಸವಿದ್ದಪ್ರಯುಕ್ತ ನಾನು ಮಾತ್ರ ಹಾಗೆ ಹೇಳುವುದಿಲ್ಲ.) ಎಂದು ಶಿಲಕರು ಹೇಳಿದರು. ॥ ೫ ॥

ಪೀ—ಹೀಗೆ ಶಿಲಕರಿಂದ ತಿರಸ್ಕರಿಸಲ್ಪಟ್ಟ ದಾಲ್ಭ್ಯರು ಹೇಳುತ್ತಾರೆ—

**ಉ. ॥ ಹಂತಾಹಮೇತದ್ಭಗವತೋ ವೇದಾನೀತಿ ವಿದ್ಧೀತಿ ಹೋವಾಚಾಮುಷ್ಯ ಲೋಕಸ್ಯ ಕಾ ಗತಿರಿತ್ಯಯಂ ಲೋಕ ಇತಿ ಹೋವಾಚಾಸ್ಯ ಲೋಕಸ್ಯ ಕಾ ಗತಿರಿತಿ ನ ಪ್ರತಿಷ್ಠಾಂ ಲೋಕಮತಿನಯೇದಿತಿ ಹೋವಾಚ ಪ್ರತಿಷ್ಠಾಂ ವಯಂ ಲೋಕಂ ಸಾಮಾಭಿಸಂಸ್ಥಾಪಯಾಮಃ ಪ್ರತಿಷ್ಠಾ ಸಂಸ್ತಾವಂ ಹಿ ಸಾಮೇತಿ ॥ ೬ ॥**

ಅ ॥ ಸಾಮವು ರುದ್ರನು ಸರ್ವೋತ್ತಮನೆಂದು ಹೇಳತಕ್ಕುದಲ್ಲವೆಂದಾದರೆ ಈ ತತ್ತ್ವವನ್ನು ಪೂಜ್ಯರಾದ ತಮ್ಮಿಂದ ನಾನು ತಿಳಿಯುವೆನೆಂದು ದಾಲ್ಭ್ಯರು ಹೇಳಿದರು. ಆಗ ಶಿಲಕರು ತತ್ತ್ವವನ್ನು ತಿಳಿಯಿರಿ ಎಂದರು. ಆಗ ದಾಲ್ಭ್ಯರು ಸ್ವರ್ಗಲೋಕಕ್ಕೆ ಅಧಿಪತಿಯಾದ ರುದ್ರನಿಗೆ ಆಶ್ರಯನು ಯಾರು? ಎಂದರೆ ಭೂಲೋಕಕ್ಕೆ ಅಧಿಪತಿಯಾದ ಬ್ರಹ್ಮನು ಎಂದು ಶಿಲಕರು ಉತ್ತರಿಸಿದರು. ಈ ಬ್ರಹ್ಮನಿಗೆ ಆಶ್ರಯನು ಯಾರೆಂದು ದಾಲ್ಭ್ಯರು ಪ್ರಶ್ನಿಸಿದಾಗ ಸರ್ವಕ್ಕೂ ಆಶ್ರಯವಾದ ಭೂಲೋಕಕ್ಕೆ ಅಧಿಪತಿಯಾದ ಚತುರ್ಮುಖನನ್ನು ಬಿಟ್ಟು ಮತ್ತೊಬ್ಬನನ್ನು ಸರ್ವೋತ್ತಮನೆಂದು ತಿಳಿಯಕೂಡದು, ಎಂದು ಶಿಲಕರು ಹೇಳಿದರು *............ ॥ ೬ ॥

**ಉ. ॥ ತಂ ಹ ಪ್ರವಾಹಣೋ ಜೈಬಲಿರುವಾಚಾಂತವದ್ವೈ ಕಿಲ ತೇ ಶಾಲಾವತ್ಯ ಸಾಮ ಯಸ್ತ್ವೇತರ್ಹಿ ಬ್ರೂಯಾನ್ಮೂರ್ಧಾ ತೇ ವಿಪತಿಷ್ಯತೀತಿ ಮೂರ್ಧಾ ತೇ ವಿಪತೇದಿತಿ ಹಂತಾಹಮೇತದ್ಭಗವತೋ ವೇದಾನೀತಿ ವಿದ್ಧೀತಿ ಹೋವಾಚ ॥ ಇತ್ಯಷ್ಟಮಃ ಖಂಡಃ ॥ ೩-೮ ॥ ॥ ೭ ॥**

ಅ ॥ ಆಗ ಪ್ರವಾಹಣರಾಜನು ಎಲೋ ಶಿಲಕರೇ ನೀವು ಸಾಮದಲ್ಲಿ ಮುಖ್ಯವಾಗಿ ಸರ್ವೋತ್ತಮನೆಂದು ಹೇಳಲ್ಪಡುವವನು ಚತುರ್ಮುಖನು ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ—ಚತುರ್ಮುಖ ಬ್ರಹ್ಮನಿಂದಲೂ ಉತ್ತಮನಾದವನು ಇನ್ನೊಬ್ಬನು ಇರುತ್ತಾನೆ ಎಂದು ಶಿಲಕರಿಗೆ ಹೇಳಿದನು ‡........ ಆಗ ಶಿಲಕರು ನಿನ್ನಿಂದ ನಾನು ತತ್ತ್ವವನ್ನು ತಿಳಿಯುತ್ತೇನೆಂದು ಹೇಳಿದಾಗ ತಿಳಿದುಕೊಳ್ಳಿರಿ ಎಂದು ಪ್ರವಾಹಣರಾಜನು ಹೇಳಿದನು. ॥ ೩—೮ ॥ ॥ ೮ ॥

ಪೀ—**ಕಾ ಸಾ ಮ್ನೋ ಗತಿಃ** ಇತ್ಯಾದಿಗಳಿಂದ ಸಾಮ, ಸ್ವರ, ಪ್ರಾಣ, ಅನ್ನ, ಅಬ್, ದ್ಯುಲೋಕಗಳನ್ನು ಹೇಳಿರುವರು. ಅವುಗಳ ಅರ್ಥಗಳನ್ನು ಹೇಳುತ್ತಾರೆ—

---

* 'ಪ್ರತಿಷ್ಠಾಂ ವಯಂ' ‡ 'ಯಸ್ತ್ವೇತರ್ಹಿ' ಇತ್ಯಾದಿಗಳಿಗೆ ಹಿಂದಿನಂತೆ ಅರ್ಥ.

**ಭಾ. ॥ (೧) ಅಗ್ನಿಃ ಸಾಮಾಭಿಮಾನೀ ಸ್ಯಾದ್ವರುಣಸ್ತು ಸ್ವರಾತ್ಮಕಃ । ಪ್ರಾಣಾವರಾಭಿಮಾನೀ ತು ಸೂರ್ಯ ಏವ ಪ್ರಕೀರ್ತಿತಃ ॥ (೨) ಅನ್ನಾಭಿಮಾನೀ ದಕ್ಷಶ್ಚ ಶಕ್ರಸ್ತ್ವಬಭಿಮಾನವಾನ್ । ದ್ಯಾ(ದ್ಯುವಾ)ತ್ಮಕಶ್ಚ ಶಿವಃ ಪ್ರೋಕ್ತಃ ಕ್ರಮೇಣೈವೋತ್ತರೋತ್ತರಾಃ ॥ ಕ್ರಮೇಣ ಮೋಕ್ಷೇ ಪ್ರಾಪ್ಯಾಶ್ಚ ಪೂರ್ವೇಷಾಮುತ್ತರೋತ್ತರಾಃ । ಇತಿ ನಿವೃತ್ತೇ ॥ (೩) ಅಗ್ನೇರ್ವಾಗಾತ್ಮಕತ್ವಾತ್ ಸ್ವರಸ್ಯೋದಕಾತ್ಮಕತ್ವಾತ್ ॥ (೪) ಆದಿತ್ಯ ಏವ ಪ್ರಾಣೋಽನ್ನಂ ವೈ ಪ್ರಜಾಪತಿಃ । ಇತಿ ಶ್ರುತೇಃ ॥ ಆಪ ಏವೇಂದ್ರೋ ದ್ಯೌರ್ವಾವ ರುದ್ರಃ ಇತ್ಯಾದೇಶ್ಚ ॥ ೧ ॥**

ಅ ॥ (೧) ಅಗ್ನಿಯು ಸಾಮಕ್ಕೂ, ವರುಣನು ಸ್ವರಕ್ಕೂ, ಸೂರ್ಯನು ಉಚ್ಛ್ವಾಸ ನಿಶ್ವಾಸ ಎಂಬ ಪ್ರಾಣವಾಯುವಿಗೂ ಅಧಿಪತಿಯು (೨) ದಕ್ಷಪ್ರಜಾಪತಿಯು ಅನ್ನಕ್ಕೂ, ದೇವೇಂದ್ರನು ನೀರಿಗೂ, ರುದ್ರನು ದ್ಯುಲೋಕಕ್ಕೂ ಅಧಿಪತಿಯು. ಕ್ರಮವಾಗಿಯೇ ಮೇಲುಮೇಲಿನವರು ಶ್ರೇಷ್ಠರೆಂದು ಹೇಳಿದೆ. ಕ್ರಮವಾಗಿ ಮೊದಲುಮೊದಲು ಹೇಳಿದವರು ಮೇಲೆಮೇಲೆ ಹೇಳಿದವರನ್ನು ಮೋಕ್ಷದಲ್ಲಿ ಹೊಂದುವರು ಎಂದು ನಿವೃತ್ತ ಎಂಬ ಗ್ರಂಥದಲ್ಲಿ ಹೇಳಿದೆ. (೩) (ಅಗ್ನಿಯು ಸಾಮಕ್ಕೆ ಅಧಿಪತಿಯು ಎಂಬುವಲ್ಲಿ ಯುಕ್ತಿಯನ್ನು ಹೇಳುತ್ತಾರೆ—) ಅಗ್ನಿಯು ವಾಗಿಂದ್ರಿಯಕ್ಕೆ ಅಧಿಪತಿಯು. ಸಾಮವೇದವು ವಾಗಿಂದ್ರಿಯದ ಅಧೀನವಾಗಿ ಪ್ರಕಟವಾಗುವುದರಿಂದ ಅಗ್ನಿಯು ಸಾಮಕ್ಕೆ ಅಧಿಪತಿಯು. ಅಥವಾ ಅಗ್ನಿಯು ವೇದವಚನಗಳಿಗೆ ಅಧಿಪತಿಯು. ಸಾಮವು ವೇದವೇ ಆಗಿರುವುದರಿಂದ ಸಾಮವೇದಕ್ಕೂ ಅಧಿಪತಿಯು. (ವರುಣನು ಸ್ವರಕ್ಕೆ ಅಧಿಪತಿಯು ಎಂಬುವಲ್ಲಿಯೂ ಯುಕ್ತಿ ಹೇಳುತ್ತಾರೆ—) ಸ್ವರವು (ವರ್ಣಗಳನ್ನು ತೋರಿಸುವ ಧ್ವನಿಯು) ಮುಖ ದೊಳಗಿನ ತಾಲು (ದವುಡೆ) ಮೊದಲಾದವುಗಳಲ್ಲಿರುವ ನೀರಿನಿಂದ ಹುಟ್ಟುತ್ತದೆ. ನೀರಿಗೆ ನಿಯಾಮಕನು ವರುಣನು. ಆದಕಾರಣ ವರುಣನು ಸ್ವರಕ್ಕೆ ಅಧಿಪತಿಯು. (೪) (ಪ್ರಾಣಶಬ್ದದಿಂದ ಸೂರ್ಯನನ್ನೂ, ಅನ್ನಶಬ್ದದಿಂದ ದಕ್ಷಪ್ರಜಾಪತಿಯನ್ನೂ ಇಟ್ಟುಕೊಳ್ಳಬೇಕೆಂಬ ವಿಷಯದಲ್ಲಿ ವೇದವೂ ಪ್ರಮಾಣವದೆ, ಎನ್ನುತ್ತಾರೆ—) ಸೂರ್ಯನೇ ಪ್ರಾಣನೆನಿಸುತ್ತಾನೆ. ದಕ್ಷಪ್ರಜಾಪತಿಯು ಅನ್ನ ಎನ್ನಿಸುತ್ತಾನೆ, ಎಂದು ವೇದವು. (ಇಂದ್ರನು ನೀರಿಗೆ ಸ್ವಾಮಿಯು. ರುದ್ರನು ಸ್ವರ್ಗಕ್ಕೆ ಅಧಿಪತಿಯು ಎಂಬುವಲ್ಲಿಯೂ ವೇದವನ್ನು ಹೇಳುತ್ತಾರೆ—) ಇಂದ್ರನು ನೀರಿಗೆ ಅಧಿಪತಿಯು. ರುದ್ರನು ಸ್ವರ್ಗಲೋಕಕ್ಕೆ ಅಧಿಪತಿಯು, ಇದುಮೊದಲಾದ ವೇದವು ಪ್ರಮಾಣವಿದೆ. ॥ ೧ ॥

ಹೀ—ಲೋಕದಲ್ಲಿ ಪಾಮರರೂ ಕೂಡ **ನ ದೈವಂ ಕೇಶವಾತ್ಪರಂ** ಶ್ರೀಕೃಷ್ಣನು ವಿನಹ ಇನ್ನೊಬ್ಬನು ಸರ್ವೋತ್ತಮನಿಲ್ಲವೆಂದು ತಿಳಿದಿರುವರು ಆದಕಾರಣ ದಾಲ್ಭ್ಯಶಿಲಕರು ರುದ್ರಚತುರ್ಮುಖರೇ ಸರ್ವೋತ್ತಮರೆಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ—

**ಭಾ. ॥ (೧) ವಿಶೇಷಜ್ಞಾನಸಂಪ್ರಾಪ್ತ್ಯೈ ಜಾನಂತೋಽಪಿ ಪರಂ ಹರಿಂ । ಬ್ರೂಯುರ್ದೇವಾಶ್ಚ ಋಷಯಸ್ತದನ್ಯಸ್ಯ ಪರಾತ್ಮತಾಂ ॥ ಇತಿ ಬ್ರಹ್ಮತರ್ಕೇ ॥ (೨) ಸ್ವರ್ಗಾಭಿಮಾನಿನಂ ರುದ್ರಂ ಪ್ರತಿ ಸಾಮಾಭಿಸಂಸ್ಥಾಪಯಾಮಃ । ತತ್ಸ್ತಾವಕಂ ಹಿ ಸಾಮ ॥ (೩) ಮೂರ್ಧಾ ತೇ ವಿಪತೇದಿತಿ ಯಃಕಶ್ಚಿದ್ ಬ್ರೂಯಾಚ್ಚೇದ್ವಿಪತಿಷ್ಯತಿ । ಬ್ರಹ್ಮೈವ ಹಿ ಪೃಥಿವ್ಯಾತ್ಮಾ ॥ ೧, ೨, ೩, ೪, ೫, ೬, ೭ ॥ ಇತ್ಯಷ್ಟಮಃ ಖಂಡಃ ॥ ೩—೮ ॥ ॥ ೨ ॥**

ಅ ॥ (೧) ದೇವತೆಗಳೂ ಋಷಿಗಳೂ ಕೂಡ ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದಿದ್ದರೂ ವಿಶೇಷಜ್ಞಾನವನ್ನು ಪ್ರಕಟಿಸುವುದಕ್ಕಾಗಿ ಶ್ರೀಹರಿಯಿಂದ ಬೇರೆಯಾದ ರುದ್ರಾದಿಗಳು ಸರ್ವೋತ್ತಮ

ರೆಂದು ಹೇಳುವರು, ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. (೨) ಸಾಮವೇದವು ಸ್ವರ್ಗಲೋಕಕ್ಕೆ ಅಧಿಪತಿಯಾದ ರುದ್ರನನ್ನು ಹೊಗಳುವ ಕಾರಣ ಸ್ವರ್ಗಾಧಿಪತಿಯಾದ ರುದ್ರನ ಮಹಿಮೆಯನ್ನು ಹೇಳುತ್ತದೆಂದು ಹೇಳುತ್ತೇವೆ. (೩) (**ಯಸ್ತ್ವೇತರ್ಹಿ ಬ್ರೂಯಾತ್ ಮೂರ್ಧಾ ತೇ ವಿಪತಿಷ್ಯತಿ ಇತ್ಯಾದಿಗಳ ಅರ್ಥ** ಹೇಳುತ್ತಾರೆ---) ನಿನ್ನ ತಲೆಯು ತುಂಡಾಗಿ ಕೆಳಗೆ ಬೀಳುವುದು ಎಂದು ಜ್ಞಾನಿಯು ಹೇಳಿದರೆ ನಿಶ್ಚಯವಾಗಿಯೂ ಕೆಳಗೆ ಬೀಳುವುದು. ಚತುರ್ಮುಖ ಬ್ರಹ್ಮನೇ ಭೂಲೋಕಕ್ಕೆ ಅಧಿಪತಿಯು. ॥ ೩---೮ ॥
॥ ೧, ೨, ೩, ೪, ೫, ೬, ೭ ॥ ॥ ೨ ॥

ಎಂಟನೇ ಖಂಡವು ಮುಗಿಯಿತು.

## ೯ನೇ ಖಂಡವು

**ಉ. ॥ ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತ್ಯಸ್ತಂ ಯಂತ್ಯಾಕಾಶೋ ಹ್ಯೇವೈಭ್ಯೋ ಜ್ಯಾಯಾನಾಕಾಶಃ ಪರಾಯಣಂ ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ ॥ ೧ ॥**

ಅ ॥ ಭೂಲೋಕಕ್ಕೆ ಅಧಿಪತಿಯಾದ ಬ್ರಹ್ಮನಿಗೆ ಆಶ್ರಯನು ಯಾರು? ಎಂದು ಶಿಲಕನು ಪ್ರಶ್ನೆ ಮಾಡಿದಾಗ ಪ್ರವಾಹಣನು ಚೆನ್ನಾಗಿ ಪ್ರಕಾಶಿಸಿಕೊಂಡಿರುವುದರಿಂದ ಆಕಾಶ ಎನಿಸಿಕೊಂಡ ವಿಷ್ಣುವು, ಎಂದು ಹೇಳಿದನು. (ಅದು ಹೇಗೆ ಕೂಡುತ್ತದೆಂದರೆ ಅವನ ಮಹಿಮೆ ಹೇಳುತ್ತಾರೆ—) ಪ್ರಸಿದ್ಧರಾದ ಬ್ರಹ್ಮರುದ್ರಾದಿಗಳೆಲ್ಲರೂ ಆಕಾಶನೆನಿಸಿಕೊಂಡ ಶ್ರೀಹರಿಯಿಂದಲೇ ಹುಟ್ಟುತ್ತಾರೆ, ನಾಶಹೊಂದುತ್ತಾರೆ, ಆತನೇ ಬ್ರಹ್ಮರುದ್ರಾದಿಗಳಿಂದ ಶ್ರೇಷ್ಠನು. ಸರ್ವರಿಗೂ ಮುಖ್ಯವಾಗಿ ಆಶ್ರಯನು ಚೆನ್ನಾಗಿ ಈತನು ಉತ್ತಮೋತ್ತಮೋತ್ತಮನು. ಚೆನ್ನಾಗಿ ಸ್ತೋತ್ರಮಾಡಿಸಿ ಕೊಳ್ಳುವವನು. ಎಲ್ಲಾ ಕಾಲಗಳಲ್ಲಿಯೂ ದೇಶಗಳಲ್ಲಿಯೂ ಇರುವವನು. ಎಲ್ಲಾ ಗುಣಗಳಿಂದ ಪರಿಪೂರ್ಣನು. ॥ ೧ ॥

ಪೀ—ಈ ರೀತಿಯಾಗಿ ಭಗವಂತನನ್ನು ಧ್ಯಾನಿಸುವವನಿಗೆ ಫಲ ಹೇಳುತ್ತಾರೆ—

**ಉ. ॥ ಪರೋವರೀಯೋ ಹಾಸ್ಯ ಭವತಿ ಪರೋವರೀಯಸೋ ಹ ಲೋಕಾನ್ಜಯತಿ ಉ ಯ ಏತಮೇವಂವಿದ್ವಾನ್ ಪರೋವರೀಯಾಂಸಮುದ್ಗೀಥಮುಪಾಸ್ತೇ ॥ ೨ ॥**

ಅ ॥ ಆಕಾಶ ಎಂದು ಹೆಸರುಳ್ಳ ಉತ್ತಮೋತ್ತಮೋತ್ತಮನಾದ ಶ್ರೀಹರಿಯು ಚತುರ್ಮುಖನಿಗೆ ಆಶ್ರಯನೆಂದು ತಿಳಿದುಕೊಂಡು ಧ್ಯಾನಿಸುವವನನ್ನು ಪರೋವರೀಯ ಎಂದು ಹೆಸರುಳ್ಳ ಶ್ರೀಹರಿಯು ರಕ್ಷಿಸುತ್ತಾನೆ. ಹಾಗೆ ಧ್ಯಾನಿಸುವವನು ಉತ್ತಮೋತ್ತಮಗಳಾದ ವಿಷ್ಣುಲೋಕಗಳನ್ನು (ಅಂದರೆ—ವೈಕುಂಠ ಅನಂತಾಸನ ಶ್ವೇತದೀಪಗಳನ್ನು) ಹೊಂದುತ್ತಾನೆ. ॥ ೨ ॥

ಪೀ—ಶ್ರೀಹರಿಯು ರಕ್ಷಿಸುತ್ತಾನೆ, ಎಂದು ಹೇಳಿದುದರಲ್ಲಿ ವಿಶ್ವಾಸವು ಹುಟ್ಟುವುದಕ್ಕಾಗಿ ಕಥೆ ಹೇಳುತ್ತಾರೆ—

ಉ. ‖ ತಂ ಹೈತಮತಿಧನ್ವಾ ಶೌನಕ ಉದರಶಾಂಡಿಲ್ಯಾಯೋಕ್ತ್ವೋ-ವಾಚ ಯಾವತ್ತ ಏನಂ ಪ್ರಜಾಯಾಮುದ್ಗೀಥಂ ವೇದಿಷ್ಯಂತೇ ಪರೋವ-ರೀಯೋ ಹೈಭ್ಯಸ್ತಾವದಸ್ಮಿಁಲ್ಲೋಕೇ ಜೀವನಂ ಭವಿಷ್ಯತಿ ತಥಾಽಮುಷ್ಮಿಁ-ಲ್ಲೋಕ ಇತಿ ಸ ಏತಮೇವಂವಿದ್ವಾನುಪಾಸ್ತೇ ಪರೋವರೀಯ ಏವ ಹಾ-ಸ್ಯಾಸ್ಮಿಁಲ್ಲೋಕೇ ಜೀವನಂ ಭವತಿ ತಥಾಽಮುಷ್ಮಿಁಲ್ಲೋಕೇ ಲೋಕ ಇತಿ ಲೋಕೇ ಲೋಕ ಇತಿ ‖ ಇತಿ ನವಮಃ ಖಂಡಃ ‖ ೩-೯ ‖ ‖ ೩ ‖

ಅ ‖ ಶುನಕನ ಮಗನಾದ ಅತಿಧನ್ವಾ ಎನ್ನುವ ಮುನಿಯು ಆಕಾಶ ಎಂದು ಹೆಸರುಳ್ಳ ಶ್ರೀಹರಿಯನ್ನು ಉದರಶಾಂಡಿಲ್ಯ ಎಂಬ ತನ್ನ ಶಿಷ್ಯನಿಗೆ ಹೇಳಿ ಫಲವನ್ನು ಹೇಳಿದನು. ಅಧಿಕಾರಿಜೀವರ ಸಮೂಹದಲ್ಲಿ ಉದ್ಗೀಥನನ್ನು ತ್ರೇತಾಯುಗದಲ್ಲಿ ತಿಳಿಯುವವರಿಗೆ ದ್ವಾಪರಾದಿಯುಗಪರ್ಯಂತ ಈ ಲೋಕದಲ್ಲಿ ಜೀವನವಾಗುವುದು ಹಾಗೆಯೇ ಪರಲೋಕದಲ್ಲಿಯೂ ಸುಖಜೀವನವಾಗುವುದು, ಎಂದು ಹೇಳಿದನು. ಹಾಗೆಯೇ ಇಂತಹ ಫಲವಿದೆ ಎಂದು ತಿಳಿದು ಉದ್ಗೀಥನನ್ನು ಧ್ಯಾನಿಸುವವನು ಶ್ರೀಹರಿಯ ಅನುಗ್ರಹದಿಂದ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಾಗಿ ಬಾಳುತ್ತಿರುತ್ತಾನೆ. ‖ ೩ ೯ ‖ ೩ ‖

ಪೀ—೯ನೇ ಖಂಡದ ೧ನೇ ಮಂತ್ರದಲ್ಲಿದ್ದ ಆಕಾಶಾದಿ ಶಬ್ದಗಳ ಅರ್ಥ ಹೇಳುತ್ತಾರೆ—

ಭಾ. ‖ (೧) ವಿಷ್ಣುರಾಕಾಶನಾಮಕಃ। ಆ ದೀಪ್ತತ್ವಾದ್ವರೀಯಾಂಶ್ಚ ಪರಮೋ ಹರಿ-ರೇವ ಹಿ ‖ ಇತಿ ಸತ್ತತ್ತ್ವೇ ‖ (೨) ಶುಭಾಶುಭಾನಾಂ ದಾಹಾದೌ ಸಾಮ್ಯಾತ್ಸಾಮಾಗ್ನಿ-ರೀರಿತಃ ‖ (೩) ಸ್ವೋ ವಿಷ್ಣುಃ ಸಾಗರೇ ರಂತಾ ವರುಣೋಽತಃ ಸ್ವರಃ ಸ್ಮೃತಃ । ಉದ-ಯಾಜ್ಜಗತ್ಪ್ರಣೇತೃತ್ವಾತ್ ಸೂರ್ಯಃ ಪ್ರಾಣ ಉದಾಹೃತಃ ‖ (೪) ಅತ್ತಾ ರುದ್ರಸ್ತದ್ವಿ-ರೋಧಾದ್ದಕ್ಷಃ ಸ್ಯಾದನ್ನನಾಮಕಃ ।' (೫) ಸ್ವೋ ವಿಷ್ಣುಸ್ತದ್ರತಿರ್ವಾಯುಸ್ತದ್ಗೋ ಮುಕ್ತೌ ಸದಾಶಿವಃ । ಅತಃ ಸ್ವರ್ಗೋ ಸುಸಂಸ್ಥತ್ವಾದಸಾವಿತಿ ಚ ಕೀರ್ತಿತಃ ‖ (೬) ಸರ್ವ ದೇವಾಂತರತ್ವಾತ್ತು ಬ್ರಹ್ಮಾಯಂ ಸಮುದಾಹೃತಃ । ಲೋಕೋ ಜ್ಞಾನಸ್ವರೂಪತ್ವಾದೇ-ತೇಷಾಂ ಪರಮೋ ಹರಿಃ ‖ ಇತಿ ಬ್ರಹ್ಮತರ್ಕೇ ‖ ೧ ‖

ಅ ‖ (೧) ಚೆನ್ನಾಗಿ ಪ್ರಕಾಶಿಸಿಕೊಂಡಿರುವುದರಿಂದ ವಿಷ್ಣುವು ಆಕಾಶನೆನಿಸುತ್ತಾನೆ. (ಪರೋವರೀಯಾನ್=) ಶ್ರೀಹರಿಯೇ ಉತ್ತಮರಲ್ಲಿಯೂ ಉತ್ತಮೋತ್ತಮನು, ಎಂದು ಸತ್ತತ್ತ್ವ ಎಂಬ ಗ್ರಂಥದಲ್ಲಿದೆ. (೨) (೬ನೇ ಖಂಡದಲ್ಲಿ ಅಗ್ನಿಃ ಸಾಮ ಇತ್ಯಾದಿಗಳಲ್ಲಿ ಅಗ್ನಿ ಮೊದಲಾದವರು ಸಾಮವೇದಾದಿಗಳಿಗೆ ಅಧಿಪತಿಗಳಾಗಿರುವುದರಿಂದ ಅವರಿಗೆ ಸಾಮ ಮೊದಲಾದ ಹೆಸರು, ಎಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ–) ಶುಭ=ಮಂಗಲಪ್ರದವಸ್ತು, ಕೆಟ್ಟವಸ್ತು ಇವುಗಳನ್ನು ಸುಡುವುವರಲ್ಲಿ ವ್ಯತ್ಯಾಸವಿಲ್ಲದೆ ಸಮನಾಗಿದ್ದ ಕಾರಣ ಅಗ್ನಿಯು ಸಾಮನೆನಿಸುತ್ತಾನೆ. (೩) (೮ನೇ ಖಂಡದ ೩ನೇ ಮಂತ್ರದಲ್ಲಿದ್ದ ಸ್ವರ ಪ್ರಾಣ ಮೊದಲಾದ ಶಬ್ದಗಳ ಅರ್ಥವನ್ನು ಹೇಳುತ್ತಾರೆ—) ಸುಖರೂಪನಾದ ಶ್ರೀವಿಷ್ಣುವು ಕ್ಷೀರಸಮುದ್ರದಲ್ಲಿ ಕ್ರೀಡಿಸಿಕೊಂಡಿರುವುದರಿಂದ ಸಮುದ್ರಕ್ಕೆ ಅಧಿಪತಿಯಾದ ವರುಣನು ಸ್ವರಃ ಎನ್ನಿಸುತ್ತಾನೆ. ಸೂರ್ಯನು ಉದಯಿಸಿ ಲೋಕದಲ್ಲಿದ್ದ ಜನರಿಗೆ ಕಾರ್ಯಗಳಲ್ಲಿ ಪ್ರವೃತ್ತಿ ಮಾಡಿಸುವುದರಿಂದ ಪ್ರಾಣನೆನಿಸುತ್ತಾನೆ. (೪) ರುದ್ರನು ಜಗತ್ತನ್ನು ಸಂಹರಿಸುವವನು, ದಕ್ಷಪ್ರಜಾಪತಿಯು ರುದ್ರನಿಗೆ ವಿರೋಧಿಯು. ಆದುರಿಂದ

ಆತನಿಗೆ ಅನ್ನ ಎಂದು ಹೆಸರು. (೫) (೮ನೇ ಖಂಡದ ೪ನೇ ಮಂತ್ರದಲ್ಲಿದ್ದ ಸ್ವರ್ಗಃ ಅಸೌ, ಲೋಕಃ ಈ ಶಬ್ದಗಳಿಗೆ ಅರ್ಥ ಹೇಳುತ್ತಾರೆ—) ಸ್ವತಂತ್ರನಾದ ವಿಷ್ಣುವು ಸ್ವಃ ಎನ್ನಿಸುತ್ತಾನೆ. ವಿಷ್ಣುವಿನಲ್ಲಿ ಸದಾ ಆಸಕ್ತಿಯಿರುವುದರಿಂದ ವಾಯುವಿಗೆ ಸ್ವಃ ಎಂದು ಹೆಸರು. ಮೋಕ್ಷದಲ್ಲಿ ಮುಖ್ಯವಾಯುವನ್ನು ಸದಾ ಆಶ್ರಯಿಸಿಕೊಂಡಿರುವುದರಿಂದ ಸದಾಶಿವನು ಸ್ವರ್ಗಃ ಎಂದೂ, ಸ್ವರ್ಗಲೋಕಕ್ಕೆ ಅಧಿಪತಿಯಾಗಿರುವುದರಿಂದ ಅಸೌ ಎಂದೂ, ಜ್ಞಾನರೂಪನಾದುದರಿಂದ ಲೋಕಃ ಎಂದೂ ಅನ್ನಿಸುತ್ತಾನೆ. (೬) (೬ನೇ ಮಂತ್ರದಲ್ಲಿದ್ದ ಅಯಂ, ಲೋಕಃ ಈ ಶಬ್ದಗಳ ಅರ್ಥ ಹೇಳುತ್ತಾರೆ—) ಬ್ರಹ್ಮನು ಎಲ್ಲಾ ದೇವತೆಗಳೊಳಗೆ ಇದ್ದು ಕಾರ್ಯಗಳನ್ನು ಮಾಡಿಸುವುದರಿಂದ ಅಯಂ ಎಂದೂ, ಜ್ಞಾನಸ್ವರೂಪನಾದುದರಿಂದ ಲೋಕಃ ಎಂದೂ ಎನಿಸುತ್ತಾನೆ. ಎಲ್ಲಾ ದೇವತೆಗಳಿಂದಲೂ ಶ್ರೀಹರಿಯೇ ಉತ್ತಮನೆಂದು ಬ್ರಹ್ಮತರ್ಕದಲ್ಲಿದೆ. ॥ ೧ ॥

ಪೀ—೮ನೇ ಖಂಡದ ೩ನೇ ಮಂತ್ರದಲ್ಲಿದ್ದ ಅಪ್ ಶಬ್ದಾರ್ಥವನ್ನು ಹೇಳುತ್ತಾರೆ—

**ಭಾ. ॥ (೧) ಆ ಪಾಲನಾದಾಪ ಇಂದ್ರಃ ॥ (೨) ಅಧಿಕಂ ವರೀಯಾನ್ ಪರೋವರೀಯಾನ್ । ತತ್ಪರೋ ವರೀಯೋಽಸ್ಯ ರಕ್ಷಕಂ ಭವತಿ ॥ (೩) ಯಾವತ್ತಃ ದ್ವಾಪರಾದಿಪರ್ಯಂತಂ ॥ ೧, ೨, ೩ ॥ ಇತಿ ನವಮಃ ಖಂಡಃ ॥ ೩-೯ ॥ ॥ ೨ ॥**

ಅ ॥ (೧) ಸರ್ವಜಗತ್ತನ್ನು ಚೆನ್ನಾಗಿ ರಕ್ಷಿಸುವುದರಿಂದ ಆಪಃ=ಇಂದ್ರನು. (೨) (೯ನೇ ಖಂಡದ ೧ನೇ ಮಂತ್ರದಲ್ಲಿದ್ದ ಪರೋವರೀಯಾನ್ ಎಂಬ ಶಬ್ದಾರ್ಥ ಹೇಳುತ್ತಾರೆ) ಅತ್ಯಧಿಕ ಶ್ರೇಷ್ಠನು ಪರೋವರೀಯಾನ್ ಎನಿಸುತ್ತಾನೆ. ಆ ಉತ್ತಮೋತ್ತಮನಾದ ಶ್ರೀಹರಿಯು ಹೀಗೆ ತಿಳಿದವನನ್ನು ಕಾಪಾಡುತ್ತಾನೆ. (೩) ೨ನೇ ಮಂತ್ರದಲ್ಲಿದ್ದ ಯಾವತ್ತಃ ಎಂಬುದಕ್ಕೆ ದ್ವಾಪರಾದಿಕಾಲಪರ್ಯಂತ ಎಂದರ್ಥವು .॥ ೧, ೨, ೩ ॥ ೩-೯ ॥ ॥ ೯ ॥

**ಒಂಭತ್ತನೇ ಖಂಡವು ಮುಗಿಯಿತು.**

## ೧೦ನೇ ಖಂಡವು

ಪೀ—ಸಾಮದೊಳಗಣ ಪ್ರಸ್ತಾವ-ಪ್ರತಿಹಾರ-ಉದ್ಗೀಥ ಎಂಬ ಸಾಮಗಳಲ್ಲಿ ವರ್ಣಿಸಲ್ಪಡುವ ಶ್ರೀಹರಿಯ ಉಪಾಸನೆಯನ್ನು ಹೇಳಲುಪಯುಕ್ತವಾದ ಕಥೆಯನ್ನು ಹೇಳುತ್ತಾರೆ—

**ಉ. ॥ ಮಟಚೀಹತೇಷು ಕುರುಷ್ವಾಟಿಕ್ಯಾ ಸಹ ಜಾಯಯೋಷಸ್ತಿರ್ಹ ಚಾಕ್ರಾಯಣ ಇಭ್ಯಗ್ರಾಮೇ ಪ್ರದ್ರಾಣಕ ಉವಾಸ ಸಹೇಭ್ಯಂ ಕುಲ್ಮಾಷಾನ್ ಖಾದಂತಂ ಬಿಭಿಕ್ಷೇ ॥ ೧ ॥**

ಅ ॥ **ಚಕ್ರಂ ಅಯನಂ ಯಸ್ಯ** ಎಂಬ ವ್ಯುತ್ಪತ್ತಿಯಿಂದ ಹೆಚ್ಚಾಗಿ ರಥಚಕ್ರದ ಸಮೀಪದಲ್ಲಿರುವ ಚಕ್ರಾಯಣನ ಮಗನಾದ ಉಷಸ್ತಿ ಎಂಬುವವನು ಕುರುದೇಶದಲ್ಲಿ ಆವಾಸಮಾಡುತ್ತಿರುವಾಗ, ಕುರುದೇಶವು ಕಲ್ಲುಮಳೆಗಳಿಂದ ಹಾಳಾಗಿ (ಅತಿವೃಷ್ಟಿಯಿಂದ ಅಲ್ಲಿ ದುರ್ಭಿಕ್ಷೆಯುಂಟಾಗಲು) ಯೌವನವನ್ನು ಹೊಂದುತ್ತಿರುವ ತನ್ನ ಹೆಂಡತಿಯಿಂದೊಡಗೂಡಿ ಮಹಾಧನಿಕನ ಗ್ರಾಮದಲ್ಲಿ ಅನ್ನಪಾನಗಳಿಗಾಗಿ ಅಲ್ಲಲ್ಲಿ

ಓಡುತ್ತಾ ಆವಾಸವಮಾಡಿಕೊಂಡಿದ್ದನು. ಆ ಉಷಸ್ತಿಯು ಅನ್ನಾರ್ಥಿಯಾಗಿ ಸಂಚರಿಸುತ್ತಾ ಅರಣ್ಯ ದಲ್ಲಿರತಕ್ಕ ಕೆಟ್ಟ ಕಾಡು ಉದ್ದುಗಳನ್ನು ತಿನ್ನುತ್ತಿರುವ ಧನಿಕನೊಡನೆ ಬೇಡಿದನು. ॥ ೧ ॥

**ಉ. ॥ ತಂ ಹೋವಾಚ ನೇತೋಽನ್ಯೇ ವಿದ್ಯಂತೇ ಯಚ್ಚ ಯೇ ಮ ಇಮ ಉಪನಿಹಿತಾ ಇತ್ಯೇತೇಷಾಂ ಮೇ ದೇಹೀತಿ ಹೋವಾಚ ತಾನಸ್ಮೈ ಪ್ರದದೌ ಹಂತಾನುಪಾನಮಿತ್ಯುಚ್ಛಿಷ್ಟಂ ವೈ ಮೇ ಪೀತಂ ಸ್ಯಾದಿತಿ ಹೋ-ವಾಚ ನ ಸ್ವಿದೇತೇಽಪ್ಯುಚ್ಛಿಷ್ಟಾ ಇತಿ ॥ ೨ ॥**

ಅ ॥ ಆ ಧನಿಕನು, (ಎಲೋ ಉಷಸ್ತಿಯೇ) ನನ್ನ ಸಮೀಪದಲ್ಲಿ ನನಗೆ ತಿನ್ನಲಿಕ್ಕಾಗಿ ಇಟ್ಟಿದ್ದ ಇಷ್ಟು ಉದ್ದಿನ ರಾಶಿ ಮಾತ್ರ ಇದೆ. ಇದಕ್ಕಿಂತ ಬೇರೆ ಇಲ್ಲವೇ ಇಲ್ಲ. (ಇವುಗಳು ತಿಂದುಳಿದವುಗಳಾದುದರಿಂದ ಕೊಡಲು ಯೋಗ್ಯಗಳಲ್ಲ.) ಎಂದು ಉಷಸ್ತಿಯೊಡನೆ ಹೇಳಿದನು. ಆಗ ಉಷಸ್ತಿಯು ಆ ಧನಿಕನೊಡನೆ ನಿನಗೆ ತಿನ್ನಲಿಕ್ಕೆ ಇಟ್ಟಿದ್ದ ಉಚ್ಛಿಷ್ಟಗಳೇ ಆದ ಈ ಉದ್ದುಗಳ ಮಧ್ಯದಲ್ಲಿ ಕೆಲವು ನನಗೆ ಕೊಡು, ಎಂದನು. ಆಗ ಧನಿಕನು ಆ ಕಾಡು ಉದ್ದುಗಳನ್ನು ಉಷಸ್ತಿಗೆ ಕೊಟ್ಟನು. ಆ ಮೇಲೆ ಉಚ್ಛಿಷ್ಟ (ಕುಡಿದುಳಿದ) ನೀರನ್ನು ಕುಡಿ, ಅಥವಾ ಕೈಯಲ್ಲಿದ್ದ ಚರ್ಮದ ಜೋಳಿಗೆಯಲ್ಲಿದ್ದ ನೀರನ್ನು ಕುಡಿ ಎಂದನು ಉಚ್ಛಿಷ್ಟವಾದ ನೀರನ್ನು ಕುಡಿಯಬೇಕೆಂದು ಪ್ರಾರ್ಥಿಸಿಕೊಳ್ಳಲ್ಪಟ್ಟ ಚಾಕ್ರಾಯಣನು ಈ ನೀರನ್ನು ನಾನು ಕುಡಿದರೆ ಎಂಜಲು ನೀರನ್ನೇ ನಾನು ಕುಡಿದಂತೆ ಆಗುವುದು. (ಆದಕಾರಣ ಕುಡಿಯಲಾರೆ) ಎಂದನು. ಆಗ ಧನಿಕನು ಈ ಕಾಡು ಉದ್ದುಗಳು ಉಚ್ಛಿಷ್ಟಗಳಲ್ಲವೋ ಏನು? (ಇವುಗಳು ಉಚ್ಛಿಷ್ಟಗಳೇ ಆಗಿವೆ ಎಂದನು. ॥ ೨ ॥

**ಉ. ॥ ನ ವಾ ಅಜೀವಿಷ್ಯಮಿಮಾನಖಾದನ್ನಿತಿ ಹೋವಾಚ ಕಾಮೋ ಮ ಉದಪಾನಮಿತಿ ಸ ಹ ಖಾದಿತ್ವಾಽತಿಶೇಷಾನ್ ಜಾಯಾಯಾ ಆಜಹಾರ ಸಾಽಗ್ರ ಏವ ಸುಭಿಕ್ಷಾ ಬಭೂವ ತಾನ್ಪ್ರತಿಗೃಹ್ಯ ನಿದಧೌ ॥ ೩ ॥**

ಅ ॥ ಆಗ ಉಷಸ್ತಿಮುನಿಯು ಹೇಳಿದನು. (ಎಲೋ ಧನಿಕನೇ) ನಿನ್ನ ಉಚ್ಛಿಷ್ಟಗಳಾದ ಕಾಡು ಉದ್ದುಗಳನ್ನು ನಾನು ತಿನ್ನದೆ ಇರುತ್ತಿದ್ದರೆ ಸರ್ವಥಾ ಬದುಕುತ್ತಿರಲಿಲ್ಲ. (ಆದಕಾರಣ ಪ್ರಾಣ ಹೋಗುವ ಕಾಲದಲ್ಲಿ ಜ್ಞಾನಿಯಾದವನಿಗೆ ದೋಷವಿಲ್ಲದಿರುವುದರಿಂದ ಅವುಗಳನ್ನು ತಿಂದೆನು.) (ಎಲ್ಲಿಡೆಯಲ್ಲಿಯೂ ಮಳೆ ಬರುವುದರಿಂದ ನೀರು ಸುಲಭವಾಗಿ ಸಿಗುವ ಕಾರಣ) ಜಲಪಾನವು ನನ್ನ ಇಚ್ಛೆಯ ಅಧೀನವು. (ವೃಥಾ ಎಂಜಲುನೀರನ್ನು ಕುಡಿದರೆ ದೋಷವು ಬರುವುದರಿಂದ ನೀರನ್ನು ನಾನು ಕುಡಿಯಲಾರೆ,) ಎಂದು ಹೇಳಿದನು. ಆ ಉಷಸ್ತಿ ಋಷಿಯು ಉದ್ದನ್ನು ಜಗಿದು ತಿಂದು ಉಳಿದವುಗಳನ್ನು ಹೆಂಡತಿಗೆ ತಂದುಕೊಟ್ಟನು. ಆ ಹೆಂಡತಿಯು ಗಂಡನು ಬರುವುದಕ್ಕಿಂತ ಮೊದಲೇ ಒಳ್ಳೇ ಭಿಕ್ಷೆಯನ್ನು ಬೇಡಿತಿಂದು ಹಸಿವೆ ಇಲ್ಲದವಳಾಗಿದ್ದಳು. ಆದಕಾರಣ ಆ ಕಾಡು ಉದ್ದುಗಳನ್ನು ಗಂಡನ ಕೈಯಿಂದ ತೆಗೆದುಕೊಂಡು ಸಂಗ್ರಹ ಮಾಡಿಟ್ಟಳು. ॥ ೩ ॥

**ಉ. ॥ ಸ ಹ ಪ್ರಾತಃ ಸಂಜಿಹಾನ ಉವಾಚ ಯದ್ಬತಾನ್ನಸ್ಯ ಲಭೇ-ಮಹಿ ಲಭೇಮಹಿ ಧನಮಾತ್ರಾಂ ರಾಜಾಽಸೌ ಯಕ್ಷ್ಯತೇ ಸ ಮಾ ಸರ್ವೈರಾ-ರ್ತ್ವಿಜ್ಯೈರ್ವೃಣೀತೇತಿ ॥ ೪ ॥**

ಅ || ಆ ಚಾಕ್ರಾಯಣ ಮುನಿಯು (ಆ ರಾತ್ರಿ ಕಳೆದು) ಬೆಳಗ್ಗೆ ಹಾಸಿಗೆಯಿಂದ ಎದ್ದೊಡನೆ (ಪ್ರತಿ ನಿತ್ಯವೂ ಆಹಾರಕ್ಕಾಗಿ ದುಃಖಿಸುತ್ತಿರುವ) ಹೆಂಡತಿಗೆ ಹೇಳಿದನು ಪ್ರಿಯಳೇ ಸ್ವಲ್ಪವಾದರೂ ಅನ್ನವು ಸಿಗುವುದಾದರೆ (ಅದನ್ನುಂಡು ಬಾಳಿ) ಹಣವನ್ನು ಗಳಿಸ್ಯೇನು. (ಅದರಿಂದ ನಮಗೆ ಸುಖಜೀವನವಾದೀತು. ನಿನ್ನ ದುಃಖ ಪರಿಹಾರವಾದೀತು.) ಅದುಕಾರಣ ದೂರದಲ್ಲಿ ಒಬ್ಬ ರಾಜನು ಯಾಗ ಮಾಡುವನು. (ಅಲ್ಲಿಗೆ ನಾನು ಹೋಗುವೆನು.) ಆ ರಾಜನು ಎಲ್ಲಾ ಋತ್ವಿಜರ ಕರ್ಮಗಳ ವಿಚಾರಕ್ಕಾಗಿ ನನ್ನನ್ನು ನಿಯಮಿಸುವನು, (ಆದಕಾರಣ ಯಾವುದಾದರೂ ಬುತ್ತಿಯು ಇದೆಯೋ?) ಎಂದು ಕೇಳಿದನು. || ೪ ||

ಉ. || ತಂ ಜಾಯೋವಾಚ ಹಂತ ಪತ ಇಮ ಏವ ಕುಲ್ಮಾಷಾ ಇತಿ ತಾನ್ ಖಾದಿತ್ವಾಽಮುಂ ಯಜ್ಞಂ ವಿತತಮೇಯಾಯ ತತ್ರೋದ್ಗಾತೄನಾಸ್ತಾವೇ ಸ್ತೋಷ್ಯಮಾಣಾನುಪೋಪ ವಿವೇಶ ಸ ಹ ಪ್ರಸ್ತೋತಾರಮುವಾಚ || ೫ ||

ಅ || ಆಗ ಹೆಂಡತಿಯು ಎಲೋ ಪ್ರಿಯರೇ ನಿನ್ನೆ ತಂದುಕೊಟ್ಟ ಉದ್ದುಗಳೇ ಇವೆ. (ಅವುಗಳನ್ನೇ ಬುತ್ತಿ ಕಟ್ಟಿಕೊಂಡು ಹೋಗಬಹುದೆಂದು ಹೇಳಿದಳು. ಆಗ) ಉಷಸ್ತಿಯು ಅವುಗಳನ್ನು ತಿಂದು ರಾಜನ ಸಮೃದ್ಧವಾದ ಯಾಗಕ್ಕೆ ಹೋದನು. ಆ ಯಾಗದಲ್ಲಿ ಆಸ್ತಾವ ಎಂಬ ಕರ್ಮದಲ್ಲಿ ಸ್ತೋತ್ರ ಮಾಡುವ ಉದ್ಗಾತೃಗಳ ಸಮೀಪದಲ್ಲಿ ಉಷಸ್ತಿಯು ಕುಳಿತುಕೊಂಡು ಪ್ರಸ್ತೋತನ ಹತ್ತಿರ ಕೇಳಿದನು. || ೫ ||

ಉ. || ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ || ೬ ||

ಅ || ಎಲೋ ಪ್ರಸ್ತೋತನೇ ಯಾವ ದೇವತೆಯು ಪ್ರಸ್ತಾವ ಎಂಬ ಸಾಮವಿಶೇಷದಲ್ಲಿ ಹೇಳಲ್ಪಡುತ್ತದೋ ಅಂತಹ ದೇವತೆಯನ್ನು ತಿಳಿಯದೆ ಹೊಗಳಿದರೆ ನಿನ್ನ ಶಿರಸ್ಸು ತುಂಡಾಗಿ ಕೆಳಗೆ ಬೀಳುವುದು, ಎಂದು ಪ್ರಸ್ತೋತನಿಗೆ ಉಷಸ್ತಿಯು ಹೇಳಿದನು. || ೬ ||

ಉ. || ಏವಮೇವೋದ್ಗಾತಾರಮುವಾಚೋದ್ಗಾತರ್ಯಾ ದೇವತೋದ್ಗೀಥಮನ್ವಾಯತ್ತಾ ತಾಂ ಚೇದವಿದ್ವಾನುದ್ಗಾಸ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ || ೭ ||

ಅ || ಹೀಗೆಯೇ ಉದ್ಗಾತನಿಗೆ ಹೇಳಿದನು........ಗಾನಮಾಡಿದರೆ........* || ೭ ||

ಉ. || ಏವಮೇವ ಪ್ರತಿಹರ್ತಾರಮುವಾಚ ಪ್ರತಿಹರ್ತರ್ಯಾ ದೇವತಾ ಪ್ರತಿಹಾರಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರತಿಹರಿಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ತೇ ಹ ಸಮಾರತಾಸ್ತೂಷ್ಣೀಮಾಸಾಂಚಕ್ರಿರೇ || ಇತಿ ದಶಮಃ ಖಂಡಃ || ೩-೧೦ || || ೮ ||

* ಹಿಂದಿನಂತೆ ಅರ್ಥವು

ಅ || ಹೀಗೆಯೇ ಪ್ರತಿಹರ್ತನ ಹತ್ತಿರವೂ ಕೇಳಬೇಕು. ಯಾವುದ ಅಂಶವಾದ ಅಕ್ಷರವನ್ನು ಹೇಳುವಿ.... ಹೀಗೆ ಚಾಕ್ರಾಯಣನಿಂದ ಹೇಳಲ್ಪಟ್ಟ ಪ್ರಸ್ತೋತೃ ಮೊದಲಾದವರಿಗೆ ಪ್ರಸ್ತಾವಾದಿ ದೇವತೆಗಳ ಜ್ಞಾನವಿಲ್ಲದಿರುವ ಕಾರಣ ಅವರು ತಂತಮ್ಮ ವ್ಯಾಪಾರಗಳನ್ನು ಬಿಟ್ಟು ಸುಮ್ಮನೆ ಕುಳಿತರು. || ೮ ||

**ಭಾ. || (೧) ಉಪಲಾ ಇಷ್ಟಕಾಃ ಸ್ಥೂಲಾ ಮಟಚೀತಿ ಪ್ರಕೀರ್ತಿತಾಃ । ಇತಿ ಶಬ್ದನಿರ್ಣಯೇ || (೨) ಆಸನ್ನಯೌವನಾ ಯೋಷಿದಾಢ(ಟ)ಕೀತ್ಯಭಿಧೀಯತೇ । ಇತಿ ಚ || (೩) ಪ್ರದ್ರವನ್ನನ್ನಪಾನಾರ್ಥಂ ಪ್ರದ್ರಾಣಕ ಇತೀರಿತಃ । ಇತಿ ಚ || ೧, ೨, ೩, ೪, ೫, ೬, ೭, ೮ || ಇತಿ ದಶಮಃ ಖಂಡಃ || ೩–೧೦ || || ೧ ||**

ಅ || (೧) ದೊಡ್ಡ ಕಲ್ಲುಮಳೆಗಳು ಮಟಚೀ ಎನ್ನಿಸುತ್ತವೆ. ಎಂದು ಶಬ್ದನಿರ್ಣಯದಲ್ಲಿದೆ. (೨) ತಾರುಣ್ಯ ಬರಲಿಕ್ಕೆ ತಯಾರಾದ ಸ್ತ್ರೀಯು ಅಟಕೀ ಎನಿಸುತ್ತಾಳೆ. (೩) ಅನ್ನಪಾನಗಳಿಗಾಗಿ ಓಡುವವನು ಪ್ರದ್ರಾಣಕನೆನಿಸುತ್ತಾನೆ || ೧, ೨ ೩, ೪, ೫, ೬, ೭, ೮, || ೩—೧೦ || || ೧ ||

**ಹತ್ತನೇ ಖಂಡವು ಮುಗಿಯಿತು.**

---

## ೧೧ನೇ ಖಂಡವು

**ಉ. || ಅಥ ಹೈನಂ ಯಜಮಾನ ಉವಾಚ ಭಗವಂತಂ ವಾ ಅಹಂ ವಿವಿದಿಷಾಣೀತ್ಯುಷಸ್ತಿರಸ್ಮಿ ಚಾಕ್ರಾಯಣ ಇತಿ ಹೋವಾಚ ಸ ಹೋವಾಚ ಭಗವಂತಂ ವಾ ಅಹಮೇಭಿಃ ಸರ್ವೈರಾರ್ತ್ವಿಜ್ಯೈಃ ಪರ್ಯೈಷಿಷಂ ಭಗವತೋ ವಾ ಅಹಮವಿತ್ತ್ಯಾಽನ್ಯಾನವೃಷಿ ಭಗವಾಂಸ್ತ್ವೇವ ಮೇ ಸರ್ವೈರಾರ್ತ್ವಿಜ್ಯೈರಿತಿ || ೧ ||**

ಅ || ಪ್ರಸ್ತೋತೃ ಮೊದಲಾದವರು ಸುಮ್ಮನೆ ಕುಳಿತ ಮೇಲೆ ರಾಜನು ಉಷಸ್ತಿಯನ್ನು ಕುರಿತು ಪೂಜ್ಯರಾದ ನೀವು ಯಾರೆಂದು ತಿಳಿಯಲಿಚ್ಛಿಸುತ್ತೇನೆ, ಎಂದನು. ಆಗ ಮುನಿಯು ಉಷಸ್ತಿಯೆಂದು ನನ್ನ ಹೆಸರು. ನಾನು ಚಕ್ರಾಯಣನ ಮಗನಾಗಿರುತ್ತೇನೆಂದನು. ಆಗ ರಾಜನು, ''ಎಲೋ ಋಷಿಗಳೇ ತಮ್ಮಂತಹವರನ್ನು ಎಲ್ಲಾ ಋತ್ವಿಜರ ಕರ್ಮಗಳನ್ನು ಮಾಡಲಿಕ್ಕೂ ಹುಡುಕುತ್ತಿದ್ದೆನು. ನೀವು ಬರುವುದು ತಿಳಿಯದಿರುವುದರಿಂದಲೇ ಬೇರೆ ಪ್ರಸ್ತೋತೃ ಮೊದಲಾದವರನ್ನು ನಿಯಮಿಸಿರುವೆನು. ಈಗ ತತ್ತ್ವವನ್ನು ಚೆನ್ನಾಗಿ ತಿಳಿದಿರುವ ನೀವು ಬಂದಿರುವುದರಿಂದ ನಿಮ್ಮನ್ನೇ ವಿಶೇಷವಾಗಿ ನಾನು ಎಲ್ಲಾ ಋತ್ವಿಜರ ಕರ್ಮಗಳಿಗಾಗಿ ನಿಯಮಿಸುವೆನು.'' ಎಂದು ಹೇಳಿದನು. || ೧ ||

**ಉ. || ತಥೇತ್ಯಥ ತರ್ಹ್ಯೇತ ಏವ ಸಮತಿಸೃಷ್ಟಾಃ ಸ್ತುವಂತಾಂ ಯಾವತ್ತ್ವೇಭ್ಯೋ ಧನಂ ದದ್ಯಾಸ್ತಾವನ್ಮಮ ದದ್ಯಾ ಇತಿ ತಥೇತಿ ಹ ಯಜಮಾನ ಉವಾಚ || ೨ ||**

ಅ || (ಆಗ ಆ ಮುನಿಯು ನಾನೇ ಎಲ್ಲಾ ಋತ್ವಿಜರ ಕರ್ಮಗಳನ್ನು ಮಾಡಿದರೆ ಬ್ರಾಹ್ಮಣರ ದ್ರೋಹವು ಬರುವುದು. ಇದನ್ನು ಒಡಂಬಡದಿದ್ದರೆ ಹಣವು ನನಗೆ ಸಿಗಲಾರದು, ಎಂದು ಮನಸ್ಸಿನಲ್ಲಿ ಆಲೋಚಿಸಿ) ಹಾಗೆಯೇ ಆಗಲಿ, ಎಂದು ಹೇಳಿ ಮರಳಿ ಹೇಳಿದನು. ಎಲೋ ರಾಜನೇ ನೀನು ಹೇಳಿದಂತೆಯೇ ಆಗಬೇಕಾದರೆ ನೀನು ಮೊದಲು ಯಾವ ಋತ್ವಿಜರನ್ನು ಯಾವ ಯಾವ ಕರ್ಮಕ್ಕಾಗಿ ಹೇಳಿರುತ್ತೀಯೋ, ಅವರವರೇ ಆಯಾಯ ಕರ್ಮಗಳನ್ನು ನಾನು ಹೇಳಿದಂತೆ ಮಾಡಬೇಕು. ಆದರೆ ನೀನು ಅವರೆಲ್ಲರಿಗೂ ಒಟ್ಟು ಎಷ್ಟು ದಕ್ಷಿಣೆ ಕೊಡುತ್ತೀಯೋ, ಅಷ್ಟು ದಕ್ಷಿಣೆಯನ್ನು ನನಗೊಬ್ಬನಿಗೆ ಕೊಡಬೇಕೆಂದು ಹೇಳಿದನು. ಆಗ ಯಜಮಾನನು ನೀವು ಹೇಳಿದಂತೆ ಆಗಲಿ, ಅಷ್ಟು ದಕ್ಷಿಣೆ ಕೊಡುತ್ತೇನೆಂದು ಹೇಳಿದನು. ಹ=ಯಾವ ಬ್ರಾಹ್ಮಣರ ಅಪರಾಧವೂ ಇಲ್ಲವೆಂದಾಯಿತೆಂದು ಸಂತೋಷವುಂಟಾಯಿತು. || ೨ ||

ಪೀ—ಆಗ ಋತ್ವಿಜರು ತಮಗೆ ಅರಿಷ್ಟವು ಬರಬಾರದೆಂಬ ಉದ್ದೇಶದಿಂದ ಪ್ರಸ್ತಾವಾದಿ ದೇವತೆಗಳನ್ನು ತಿಳಿದುಕೊಳ್ಳುವುದಕ್ಕಾಗಿ ಆ ಉಷಸ್ತಿಗಳ ಸಮಾಪಕ್ಕೆ ಬಂದು ಕ್ರಮವಾಗಿ ಕೇಳಿಕೊಂಡು ಆಯಾಯ ದೇವತೆಗಳನ್ನು ತಿಳಿದುಕೊಂಡರು ಎನ್ನುತ್ತಾರೆ—

**ಉ. || ಅಥ ಹೈನಂ ಪ್ರಸ್ತೋತೋಪಸಸಾದ ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ಕತಮಾ ಸಾ ದೇವತೇತಿ || ೩ ||**

ಅ || ಚಾಕ್ರಾಯಣ ರಾಜ ಇವರಿಬ್ಬರು ಮಾತಾಡಿಕೊಂಡಮೇಲೆ ಪ್ರಸ್ತೋತನು ಚಾಕ್ರಾಯಣರ ಸಮಾಪಕ್ಕೆ ಬಂದು ಹೇಳಿದನು. ಎಲೋ ಪೂಜ್ಯರೇ ನೀವು ಮೊದಲು ನನ್ನೊಡನೆ ಪ್ರಸ್ತಾವ ಎಂಬ ಸಾಮಕ್ಕೆ ದೇವತೆ ಯಾರೆಂದು ತಿಳಿಯದೆ ಆ ಕರ್ಮ ಮಾಡಿದರೆ ಅರಿಷ್ಟ ಉಂಟೆಂದೂ ಹೇಳಿರುವಿರಿ. ನಾನು ಅದನ್ನು ತಿಳಿಯದಿರುವುದರಿಂದ ತಾವೇ ಅದನ್ನು ಹೇಳಬೇಕು. ಪ್ರಸ್ತಾವ ಎಂಬ ಸಾಮಕ್ಕೆ ದೇವತೆಯ್ಯು ಯಾರು? ಎಂದು ಪ್ರಸ್ತೋತನು ಕೇಳಿದನು. || ೩ ||

**ಉ. || ಪ್ರಾಣ ಇತಿ ಹೋವಾಚ ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶಂತಿ ಪ್ರಾಣಮಭ್ಯುಜ್ಜಿಹತೇ ಸೈಷಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ಪ್ರಸ್ತೋಷ್ಯೋ ಮೂರ್ಧಾ ತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ || ೪ ||**

ಅ || ಆಗ ಉಷಸ್ತಿಮುನಿಯು, ಮುಖ್ಯಪ್ರಾಣರಲ್ಲಿ ಅಂತರ್ಯಾಮಿಯಾದ ಪ್ರಾಣ ಎಂದು ಹೆಸರುಳ್ಳ ವಿಷ್ಣುವು ಪ್ರಸ್ತಾವ ಎಂಬ ಸಾಮಕ್ಕೆ ದೇವತೆಯೆಂದು ಹೇಳಿದನು. (ಪ್ರಾಣಸ್ಥ ವಿಷ್ಣುವು ಪ್ರಸ್ತಾವ ದೇವತೆಯೆಂದು ಹೇಗೆ ತಿಳಿಯುತ್ತದೆಂದರೆ—) ಎಲ್ಲಾ ಜೀವರೂ ಸುಷುಪ್ತಿ (ಗಾಢನಿದ್ದೆ) ಪ್ರಳಯಗಳಲ್ಲಿ ಪ್ರಾಣಾಂತರ್ಗತ ಶ್ರೀವಿಷ್ಣುವನ್ನೇ ಹೊಂದುತ್ತಾರೆ. ಜಾಗ್ರದವಸ್ಥೆಯಲ್ಲಿ ಬಿಡುತ್ತಾರೆ. ಹೀಗೆಯೇ ಪ್ರಳಯಕಾಲಗಳಲ್ಲಿ ಶ್ರೀಹರಿಯನ್ನು ಪ್ರವೇಶಿಸುತ್ತಾರೆ. ಸೃಷ್ಟಿಕಾಲದಲ್ಲಿ ಬಿಡುತ್ತಾರೆ. ಪ್ರಾಣಸ್ಥ ವಿಷ್ಣುವಿನಿಂದಲೇ ಹುಟ್ಟುತ್ತಾರೆ. (ಇದರಿಂದ ಪ್ರಸೂಯಂತೇ ಅನೇನ ಪ್ರಸ್ತಾವಃ=ಸೃಷ್ಟಿಸುವವನು, ಎಂದರ್ಥವು.) ಪ್ರಾಣಾಂತರ್ಯಾಮಿಯಾದ ವಿಷ್ಣುವೇ ಸೃಷ್ಟಿಮಾಡತಕ್ಕವನು. ಆದಕಾರಣ ಅವನೇ ಪ್ರಸ್ತಾವ ದೇವತೆಯು. ಆ ದೇವತೆಯನ್ನು ತಿಳಿಯದೆ ಪ್ರಸ್ತಾವಾಕ್ಷರವನ್ನು ಹೇಳುತ್ತಿದ್ದರೆ ನನ್ನ ಮಾತಿನಂತೆ ನಿನ್ನ

ಶಿರಸ್ಸು ಬೀಳುತ್ತಿತ್ತು. (ನೀನು ಹಾಗೆ ಮಾಡಲಿಲ್ಲ, ಆದಕಾರಣ ಅರಿಷ್ಟವನ್ನು ಕಳೆದುಕೊಂಡಿರುವಿ.) ಎಂದು ಉಷಸ್ತಿಯು ಹೇಳಿದರು. ॥ ೪ ॥

**ಉ. ॥ ಅಥ ಹೈನಮುದ್ಗಾತೋಪಸಸಾದೋದ್ಗಾತರ್ಯಾ ದೇವತೋ-ದ್ಗೀಥಮನ್ವಾಯತ್ತಾ ತಾಂ ಚೇದವಿದ್ವಾನುದ್ಗಾಸ್ಯಸಿ ಮೂರ್ಧಾ ತೇ ವಿಪತಿ-ಷ್ಯತೀತಿ ಮಾ ಭಗವಾನವೋಚತ್ಕತಮಾ ಸಾ ದೇವತೇತ್ಯಾದಿತ್ಯ ಇತಿ ಹೋ-ವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾದಿತ್ಯಮುಚ್ಚೈಃ ಸಂತಂ ಗಾ-ಯಂತಿ ಸೈಷಾ ದೇವತೋದ್ಗೀಥಮನ್ವಾಯತ್ತಾ ತಾಂ ಚೇದವಿದ್ವಾನುದಗಾ-ಸ್ಯೋ ಮೂರ್ಧಾ ತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ ॥ ೫ ॥**

ಅ ॥ ಪ್ರಸ್ತಾವದೇವತೆಯು ನಿರ್ಣಯವಾದ ಮೇಲೆ........ಆದಿತ್ಯನಲ್ಲಿ ಅಂತರ್ಯಾಮಿಯಾದ ಆದಿತ್ಯ ನೆನಿಸಿಕೊಂಡ ಶ್ರೀವಿಷ್ಣುವು,........(ಆದಿತ್ಯಸ್ಥ ವಿಷ್ಣುವೇ ಉದ್ಗೀಥ ಎಂಬ ಸಾಮಕ್ಕೆ ದೇವತೆಯು. ಅವನೇ ಗಾನದೇವತೆಯು ಎನ್ನುತ್ತಾರೆ—) ಗಾನಮಾಡುವವರೆಲ್ಲರೂ ಆದಿತ್ಯಸ್ಥ ವಿಷ್ಣುವನ್ನೇ ಸರ್ವೋತ್ತಮ ನನ್ನಾಗಿ ಗಾನಮಾಡುತ್ತಾರೆ (ಇದರಿಂದ ಆದಿತ್ಯಸ್ಥನಾದ ಶ್ರೀವಿಷ್ಣುವು ಸಮಸ್ತ ಪ್ರಾಣಿಗಳ ಗಾನಕ್ಕೂ ವಿಷಯನಾದುದರಿಂದ ಗಾನದೇವತೆಯೆಂದುಕ್ತವಾಯಿತು.)........ ॥ ೫ ॥

**ಉ. ॥ ಅಥ ಹೈನಂ ಪ್ರತಿಹರ್ತೋಪಸಸಾದ ಪ್ರತಿಹರ್ತರ್ಯಾ ದೇವತಾ ಪ್ರತಿಹಾರಮನ್ವಾಯತ್ತಾ ತಾಂ ಚೇದವಿದ್ವಾನ್ಪ್ರತಿಹರಿಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ಮಾ ಭಗವಾನವೋಚತ್ಕತಮಾ ಸಾ ದೇವತೇತ್ಯನ್ನಮಿತಿ ಹೋ-ವಾಚ ಸರ್ವಾಣಿ ಹ ವಾ ಇಮಾನಿ ಭೂತಾನ್ಯನ್ನಮೇವ ಪ್ರತಿಹರಮಾಣಾನಿ ಜೀವಂತಿ ಸೈಷಾ ದೇವತಾ ಪ್ರತಿಹಾರಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರತ್ಯಹರಿಷ್ಯೋ ಮೂರ್ಧಾ ತೇ ವ್ಯಪತಿಷ್ಯತ್ತಥೋಕ್ತಸ್ಯ ಮಯೇತಿ ತಥೋ-ಕ್ತಸ್ಯ ಮಯೇತಿ ॥ ಇತ್ಯೇಕಾದಶಃ ಖಂಡಃ ॥ ೩-೧೧ ॥ ॥ ೬ ॥**

ಅ ॥ ........ತಿನ್ನುವ ವಸ್ತುಗಳಲ್ಲಿ ಇರುವ ಅನ್ನ ಎಂದು ಹೆಸರುಳ್ಳ ಶ್ರೀವಿಷ್ಣುವು............ (ಅನ್ನ ದಲ್ಲಿರುವ ವಿಷ್ಣುವು ಪ್ರತಿಹಾರದೇವತೆಯು. ಭೋಜನವೆಂಬ ಪ್ರತಿಹಾರಶಬ್ದಾರ್ಥವು ವಿಷ್ಣುವಿನಲ್ಲಿಯೇ ಮುಖ್ಯವೆನ್ನುತ್ತಾರೆ—) ಎಲ್ಲಾ ಪ್ರಾಣಿಗಳೂ ಅನ್ನದಲ್ಲಿದ್ದ ಶ್ರೀಹರಿಯನ್ನೇ ಉಪಜೀವಿಸಿಕೊಂಡು (ಅಂದರೆ—ಅನ್ನವನ್ನು ತಿಂದುಕೊಂಡೇ) ಬದುಕುತ್ತಾರೆ........॥ ೬ ॥ ॥ ೬ ॥

**ಭಾ. ॥ (೧) ಪ್ರಾಣಸ್ಥವಿಷ್ಣುನಾ ಸರ್ವೇ ಪ್ರಸೂಯಂತೇ ಯತಸ್ತತಃ । ಪ್ರಸ್ತಾವ-ದೇವತಾ ಸ ಸ್ಯಾತ್ಪ್ರಸ್ತಾವಸ್ತು ಜನಿರ್ಯತಃ ॥ (೨) ಆದಿತ್ಯಸಂಸ್ಥಿತೋ ವಿಷ್ಣುರ್ಯತ್ಸದಾ ಸರ್ವಗೀತಭುಕ್ । ರಾಜಾದೌ ಗೀತಮಪ್ಯಜ್ಞೈರ್ಭುಂಕ್ತೇ ಗಾನಸ್ಯ ದೇವತಾ । ಉದ್ಗೀಥ ದೇವತಾ ತಸ್ಮಾತ್ಸ ಏವ ಪುರುಷೋತ್ತಮಃ ॥ (೩) ಅನ್ನಸ್ಥೇನೈವ ಜೀವಂತಿ ಭೂತಾನ್ಯೇ-ತಾನಿ ವಿಷ್ಣುನಾ । ಪ್ರತಿಹಾರದೇವತಾಽತಃ ಸ ಪ್ರತಿಹಾರೋ ಹಿ ಭೋಜನಂ ॥ ಇತಿ ಚ ॥ ಉಚ್ಚೈಸ್ಸಂತಮುತ್ತಮಂ ಸಂತಂ ॥ ೧,೨,೩,೪,೫,೬ ॥ ಇತ್ಯೇಕಾದಶಃ ಖಂಡಃ ॥ ೩–೧೧ ॥**

ಅ || (೧) ಮುಖ್ಯಪ್ರಾಣನಲ್ಲಿ ಅಂತರ್ಗತನಾದ ಶ್ರೀವಿಷ್ಣುವಿನಿಂದಲೇ ಸರ್ವರೂ ಹುಟ್ಟುತ್ತಾರೆ. ಆದಕಾರಣ ಆ ಶ್ರೀವಿಷ್ಣುವು ಪ್ರಸ್ತಾವಕ್ಕೆ ದೇವತೆಯು. ಪ್ರಸ್ತಾವ ಎಂದರೆ— ಸೃಷ್ಟಿಮಾಡುವಿಕೆ. (೨) ಸೂರ್ಯನೊಳಗಿರುವ ಶ್ರೀವಿಷ್ಣುವು ಸದಾ ಎಲ್ಲಾ ಜನರು ಗಾನಮಾಡುವಾಗ ಆ ಗಾನರಸವನ್ನು ಅನುಭವಿಸುವವನು. ಅಜ್ಞರು ರಾಜಾದಿಗಳ ಮುಂದುಗಡೆ ಗಾಯನಮಾಡುವುದನ್ನು ಇವನೇ ಅನುಭವಿಸುವವನು. ಅದುಕಾರಣ ಗಾನಕ್ಕೆ ದೇವತೆಯು. ಆದುದರಿಂದ ಆ ಪುರುಷೋತ್ತಮನಾದ ವಿಷ್ಣುವೇ ಉದ್ಗೀಥ ಎಂಬ ಸಾಮಕ್ಕೆ ದೇವತೆಯು (೩) ಎಲ್ಲಾ ಜೀವರೂ ಅನ್ನದಲ್ಲಿದ್ದ ಶ್ರೀಹರಿಯಿಂದಲೇ ಜೀವಿಸುತ್ತಾರೆ. ಅನ್ನದಲ್ಲಿದ್ದ ಶ್ರೀವಿಷ್ಣುವು ಪ್ರತಿಹಾರಕ್ಕೆ ದೇವತೆಯು. ಪ್ರತಿಹಾರಃ=ಭೋಜನವು. (ಉಪಜೀವಿಸಿಕೊಂಡಿರುವುದು.) (೪ನೇ ಮಂತ್ರದಲ್ಲಿದ್ದ) ಉಚ್ಚೈಃಸಂತಂ=ಸರ್ವೋತ್ತಮನನ್ನಾಗಿ (ಗಾನಮಾಡುತ್ತಾರೆ.) || ೧, ೨, ೩, ೪, ೫, ೬ || || ೧ ||

**ಹನ್ನೊಂದನೇ ಖಂಡವು ಮುಗಿಯಿತು.**

---

# ೧೨ನೇ ಖಂಡವು

ಪೀ—ಉದ್ಗೀಥನನ್ನುಪಾಸನೆ ಮಾಡುವವನಿಗೆ ಪಾಪಪರಿಹಾರವಾಗಿ ಮೋಕ್ಷವು ಲಭಿಸುತ್ತದೆ. ಮೋಕ್ಷದಲ್ಲಿ ಅತಿಶಯ ಆನಂದವು ಸಿಗುತ್ತದೆ. ಅಲ್ಲದೆ ಈ ಲೋಕದಲ್ಲಿ ಅನೇಕ ಮಕ್ಕಳು ಹುಟ್ಟುತ್ತಾರೆ. ಅನ್ನಪಾನ ಮೊದಲಾದ ಫಲಗಳೂ ಸಿಗುತ್ತವೆ ಎಂದು ಮೊದಲು ಹೇಳಿದೆ. ಅದರಲ್ಲಿ ಉದ್ಗೀಥನನ್ನುಪಾಸನೆ ಮಾಡಿ ತಮ್ಮ ಇಷ್ಟವನ್ನು ಹೊಂದಿದವರು ಇದ್ದಾರೆಂದು ಹೇಳುತ್ತಾರೆ—

**ಉ. || ಅಥಾತಃ ಶೌವ ಉದ್ಗೀಥಸ್ತದ್ಧ ಬಕೋ ದಾಲ್ಭ್ಯೋ ಗ್ಲಾವೋ ವಾ ಮೈತ್ರೇಯಃ ಸ್ವಾಧ್ಯಾಯಮುದ್ವವ್ರಾಜ ತಸ್ಮೈ ಶ್ವಾ ಶ್ವೇತಃ ಪ್ರಾದುರ್ಬಭೂವ ತಮನ್ಯೇ ಶ್ವಾನ ಉಪಸಮೇತ್ಯೋಚುರನ್ನಂ ನೋ ಭಗವಾನಾಗಾಯತ್ವಶನಾಯಾಮವಾ ಇತಿ || ೧ ||**

ಅ || ಉದ್ಗೀಥೋಪಾಸನೆಗೆ ಪ್ರಯೋಜನವಿದ್ದಪ್ರಯುಕ್ತ ಶೌವ (ನಾಯಿಯಿಂದ ಹೇಳಲ್ಪಟ್ಟದ್ದು ನಾಯಿಗಳಿಂದ ಮಾಡಲ್ಪಟ್ಟದ್ದು) ಉದ್ಗೀಥವು ಹೇಳಲ್ಪಡುತ್ತದೆ. ಒಂದಾನೊಂದು ವೇಳೆ ದಲ್ಭರ ಮಗನಾದ ಬಕನೆಂಬ ಮುನಿಯನ್ನು ಮಿತ್ರಾದೇವಿಯು ತನ್ನ ಮಗನನ್ನಾಗಿ ಮಾಡಲಪೇಕ್ಷೆಯಿಂದ ಕರದಾಗ ಕಲ್ಲಿನಂತೆ ಸುಮ್ಮನೆ ಕುಳಿತಿರುವುದರಿಂದ ಆತನು ಗ್ಲಾವ ಎಂದು ಹೆಸರುಳ್ಳವನಾಗಿ ಮಿತ್ರಾದೇವಿಯು ಕರದಕಾರಣ ಮೈತ್ರೇಯನೆನಿಸಿಕೊಂಡವನು ವೇದಾಧ್ಯಯನ ಮಾಡುವುದಕ್ಕಾಗಿ ಹೊರಟುಹೋದನು. ಆಗ ಬಕಮುನಿಗೂ ದೇವತೆಗಳಿಗೂ ಅನುಗ್ರಹಿಸುವುದಕ್ಕಾಗಿ ವಾಯುದೇವರು ತಾನು ನಾಯಿಯ ರೂಪವನ್ನು ತಾಳಿಕೊಂಡು ನಾಯಿಯ ರೂಪವನ್ನು ಹೊಂದಿದ ರುದ್ರಾದಿಗಳಿಂದೊಡಗೂಡಿ ಪ್ರತ್ಯಕ್ಷರಾದರು. ನಾಯಿಯ ರೂಪವುಳ್ಳ ರುದ್ರಾದಿ ದೇವತೆಗಳೂ ಬಕಮುನಿಯೂ ನಾಯಿಯ ರೂಪವುಳ್ಳ ವಾಯುದೇವರ ಸಮೀಪಕ್ಕೆ ಬಂದು ನಮಗೆ ಅನ್ನವು ಸಿಗಲಿಕ್ಕೆ ಕಾರಣವಾದ ಉದ್ಗೀಥೋಪಾಸನೆಯನ್ನುಪದೇಶಿಸು. ನಾವು ಅಶನವನ್ನು ಇಚ್ಛಿಸುವೆವು, ಎಂದು ಹೇಳಿದರು. || ೧ ||

ಪೀ—ಪೂರ್ಣಿಮಾದಿನ ಶೌವೋದ್ಗೀಥದಿಂದ ಶ್ರೀಹರಿಯನ್ನು ಪಾಸನೆ ಮಾಡಿದರೆ ಎಲ್ಲಾ ಅಭೀಷ್ಟ ಗಳನ್ನು ಆತನು ಕೊಡುತ್ತಾನೆನ್ನುತ್ತಾರೆ—

**ಉ. ॥ ತಾಃನ್ ಹೋವಾಚೇ ಹೈವ ಮಾ ಪ್ರಾತರೂಪಸಮಾಯಾತೇತಿ ತದ್ಧ ಬಕೋ ದಾಲ್ಭ್ಯೋ ಗ್ಲಾವೋ ವಾ ಮೈತ್ರೇಯಃ ಪ್ರತಿಪಾಲಯಾಂಚ-ಕಾರ ತೇ ಹ ಯಥೈವೇದಂ ಬಹಿಷ್ಪವಮಾನೇನ ಸ್ತೋಷ್ಯಮಾಣಾಃ ಸಂರ-ಬ್ಧಾಃ ಸರ್ಪಂತೀತ್ಯೇವಮಾಸಸೃಪುಸ್ತೇ ಹ ಸಮುಪವಿಶ್ಯ ಹಿಂಚಕ್ರುರೋ೩ಮ-ದಾ೩ಮೋಂ೩ ಪಿಬಾ ಮೋಂ೩ ದೇವೋ ವರುಣಃ ಪ್ರಜಾಪತಿಃ ಸವಿತಾ೩ನ್ನ-ಮಿಹಾ೩ಹರದನ್ನಪತೇ೩ನ್ನಮಿಹಾ೩ಹರಾಹರೋಮಿತಿ ॥ ಇತಿ ದ್ವಾದಶಃ ಖಂಡಃ ॥ ೩-೧೨ ॥ ॥ ೨ ॥**

ಅ ॥ ನಾಯಿಯ ರೂಪವನ್ನು ತಾಳಿಕೊಂಡ ವಾಯುದೇವರು ಅಂತಹ ರೂಪವುಳ್ಳ ರುದ್ರಾದಿಗಳಿಗೆ ಇಲ್ಲಿಗೇನೇ ನಾಳೆಬೆಳಗ್ಗೆ ನನ್ನ ಸಮೀಪಕ್ಕೆ ಬನ್ನಿರಿ, ಎಂದು ಹೇಳಿದರು. ಆ ಮಾತನ್ನು ಕೇಳಿ ಬಕ ಮುನಿಯು ಬೆಳಗ್ಗೆ ಆ ವಾಯುದೇವರನ್ನು ನಿರೀಕ್ಷಿಸುತ್ತಿದ್ದನು ಹೇಗೆ ಬಹಿಷ್ಪವಮಾನ ಎಂಬ ಸ್ತೋತ್ರ ದಿಂದ ಋತ್ವಿಜರು ಸ್ತೋತ್ರಮಾಡುವಾಗ ಅತಿವೇಗದಿಂದ ಒಬ್ಬನು ಇನ್ನೊಬ್ಬನ ಕಚ್ಚ ಹಿಡಿದುಕೊಂಡು. ಇರುವೆಯ ಪಂಕ್ತಿಯಂತೆ ಹೋಗುವರೋ ಹಾಗೆಯೇ ಒಂದು ನಾಯಿಯು (ದೇವತೆಯು) ಬಾಯಿಯಿಂದ ಇನ್ನೊಂದು ನಾಯಿಯ ಬಾಲವನ್ನು ಕಚ್ಚಿಕೊಳ್ಳುತ್ತಾ ಈ ಕ್ರಮದಿಂದ ನಾಯಿಯ ರೂಪದಿಂದ ದೇವತೆಗಳು ಹಿಂದಿನದಿನ ಹೇಳಿದ ಸ್ಥಳಕ್ಕೆ ಬಂದರು. ಈ ಕ್ರಮದಿಂದ ನಾಯಿಯ ರೂಪರಾದ ದೇವತೆಗಳೂ ಹಿಂದಿನ ದಿನ ಹೇಳಿದ ಸ್ಥಳಕ್ಕೆ ಬಂದರು. (ಅವರು ಬಂದೊಡನೆ ಆ ವಾಯುದೇವರು **ಓಮದಾಮ** ಇದುಮೊದಲಾದ ಮಂತ್ರವನ್ನು ಅವರಿಗೆ ಉಪದೇಶಮಾಡಿದರು.) ಆಗ ಆ ದೇವತೆಗಳು ಸಮೀಪದಲ್ಲಿ ಕುಳಿತುಕೊಂಡು ವಾಯು, ವಾಯುವಿನಲ್ಲಿ ಅಂತರ್ಗತ ವಿಷ್ಣು ಇವರನ್ನುದ್ದೇಶಿಸಿ **ಹಿಂ** ಎಂದು ಹೇಳಿದರು. ಹಿಂಕಾರ **ಮಾಡಿ** ಎಲೋ ಮುಖ್ಯಪ್ರಾಣನೇ ಮುಖ್ಯಪ್ರಾಣನ ಅಂತರ್ಗತನಾದ ಶ್ರೀಹರಿಯೇ ನಾವು ಅನ್ನವನ್ನು ತಿನ್ನುವೆವು. ನೀರು ಕುಡಿಯುವೆವು. ಸರ್ವಜ್ಞನು ಗುಣಪೂರ್ಣನಾದುದರಿಂದ ಓಂ ಎನ್ನಿಸಿಕೊಂಡವನು. ಕ್ರೀಡಾದಿಗುಣ ವಿಶಿಷ್ಟನು, ಭಜಿಸಿಕೊಳ್ಳಲರ್ಹನು. ಪ್ರಜೆಗಳನ್ನು ರಕ್ಷಿಸುವವನು. ಜಗತ್ತನ್ನು ಸೃಷ್ಟಿಸುವವನು, ಇಂತಹ ವಾಯುವೂ ವಿಷ್ಣುವೂ ಕೂಡ ನಮಗೆ ಅನ್ನವನ್ನು ಕೊಡಲಿ, (ಹೀಗೆ ಪರೋಕ್ಷವಾಗಿ ಪ್ರಾರ್ಥಿಸಿ ಪ್ರತ್ಯಕ್ಷ ವಾಗಿಯೂ ಪ್ರಾರ್ಥಿಸುತ್ತಾರೆ—) ಅನ್ನಕ್ಕೆ ಅಧಿಪತಿಯಾದ ವಾಯುವೇ, ವಾಯ್ವಂತರ್ಗತ ವಿಷ್ಣುವೇ ನಮಗೆ ಅನ್ನ ಕೊಡು, ಎಂಬ ಮಂತ್ರವನ್ನು ಜಪಿಸಿದರು (ಆ ಮೇಲೆ ಅಭೀಷ್ಟವನ್ನು ಹೊಂದಿದರು.) ॥ ೩—೧೨ ॥ ॥ ೨ ॥

**ಭಾ. ॥ (೧) ದಲ್ಭಪುತ್ರೋ ಬಕೋ ಮಿತ್ರಯಾ ಪುತ್ರಾರ್ಥೇ (ರ್ಥಂ) ಸ್ವೀಕೃತೋ ಗ್ಲಾ(ಗ್ರಾ)ವವತ್ತೂಷ್ಣೀಂ ಸ್ಥಿತತ್ವಾತ್ತಯಾ ಗ್ಲಾವೇತ್ಯುಕ್ತೋ ಗ್ಲಾವನಾಮಕೋ ಜಾತಃ । ಅತ ಉಭಯಥಾಽಸ್ಯ ನಿರ್ದೇಶೋ ಭವತೀತ್ಯರ್ಥಃ ॥ (೨) ಪ್ರಸಾದಾರ್ಥಂ ಬಕಸ್ಯಾಪಿ ವಾಯುನೋಕ್ತಾಃ ಶ್ವರೂಪಿಣಾ । ಶೌವೋದ್ಗೀಥ ಇತಿ ಪ್ರೋಕ್ತೋ ರುದ್ರಾದೀನಾಂ ಶ್ವರೂ-ಪಿಣಾಂ ॥ (೩) ಉಪಾಸಿತಃ ಪೌರ್ಣಮಾಸ್ಯಾಂ ಶೌವೋದ್ಗೀಥೇನ ಕೇಶವಃ । ಸರ್ವಾಭೀ-**

**ಷ್ಟಂ ದದಾತೀತಿ ಪ್ರಾತರಿತ್ಯಾಹ ಮಾರುತಃ ॥ (೪) ಓಮದಾಮಾದಿಕಂ ಮಂತ್ರಂ ವಾಯುನೋಕ್ತಂ ತು ದೇವತಾಃ । ವಾಯುಸ್ಥವಿಷ್ಣುಮುದ್ದಿಶ್ಯ ಹಿಂಕೃತ್ಯ ಪ್ರಾಪುರೀಪ್ಸಿತಂ ॥ (೫) ದೇವೌ ವಿಷ್ಣುಶ್ಚ ವಾಯುಶ್ಚ ಸರ್ವಜ್ಞತ್ವಾತ್ ಕ್ರಮೇಣ ತು । ವರುಣೌ ವರಣೀಯತ್ವಾತ್ ಸವಿತಾರೌ ಪ್ರಸೂತಿತಃ । ಪ್ರಜಾನಾಂ ಚ ಪತೀ ತದ್ವತ್ ಕ್ರಮಾದೇವ ಪ್ರಕೀರ್ತಿತೌ ॥ ಇತಿ ಚ ॥ ೧, ೨ ॥ ಇತಿ ದ್ವಾದಶಃ ಖಂಡಃ ॥ ೩–೧೨ ॥ ॥ ೧ ॥**

ಅ ॥ (೧) ದಲ್ಭನ ಮಗನಾದ ಬಕಮುನಿಯು ಮಿತ್ರಾದೇವಿಯು ತನ್ನ ಮಗನಾಗಬೇಕೆಂಬ ಉದ್ದೇಶದಿಂದ ರಕ್ಷಿಸಿದ ಕಾರಣ ಮೈತ್ರೇಯಃ ಎನ್ನಿಸುವವನು ರಕ್ಷಿಸುತ್ತೇನೆಂದು ಹೇಳಿ ಕರೆದರೂ ಕಲ್ಲಿನಂತೆ ಸುಮ್ಮನೆ ಕುಳಿತುಕೊಳ್ಳಲು ಮಿತ್ರಾದೇವಿಯು ಗ್ಲಾವ ಎಂದು ಹೇಳಿದುದರಿಂದ ಗ್ಲಾವ ಎಂದು ಹೆಸರುಳ್ಳವನಾದನು. ಆದಕಾರಣ ಈ ಬಕಮುನಿಯನ್ನು (1) ಬಕಃದಾಲ್ಭ್ಯಃ (2) ಗ್ಲಾವಃ ಮೈತ್ರೇಯಃ, ಎಂದು ಎರಡು ಪ್ರಕಾರ ಹೇಳುವರು. (೨) ನಾಯಿಯ ರೂಪವನ್ನು ತಾಳಿಕೊಂಡ ರುದ್ರಾದಿಗಳಿಗೂ, ಬಕಮುನಿಗೂ, ಅನುಗ್ರಹಿಸುವುದಕ್ಕಾಗಿ ವಾಯುದೇವರು ನಾಯಿಯ ರೂಪವನ್ನು ಹೊಂದಿ ಹೇಳಿದ ಉದ್ಗೀಥವು ಶೌವೋದ್ಗೀಥ ಎನ್ನಿಸುತ್ತದೆ. (೩) (ಅನ್ನವನ್ನು ಬೇಡುವ ಕಾಲದಲ್ಲಿಯೇ ಉದ್ಗೀಥವನ್ನುಪದೇಶಿಸದೆ ಈ ಸ್ಥಳಕ್ಕೆ ನಾಳೆ ಬೆಳಗ್ಗೆ ಬನ್ನಿರಿ ಎಂದು ಹೇಳಲು ಕಾರಣವೇನಂದರೆ—) ಪೂರ್ಣವಾದಿನ ಶೌವೋದ್ಗೀಥದಿಂದ ಶ್ರೀಹರಿಯನ್ನು ಉಪಾಸನೆ ಮಾಡಿದರೆ ಎಲ್ಲಾ ಅಭೀಷ್ಟಗಳನ್ನು ಶ್ರೀಹರಿಯು ಕೊಡುವ ಕಾರಣ ವಾಯುದೇವರು ನಾಳೆ ಬೆಳಗ್ಯೆ ಬನ್ನಿರಿ ಎಂದರು. (೪) ಆ ದೇವತೆಗಳು ವಾಯುದೇವರು ಉಪದೇಶಿಸಿದ ಓಮದಾಮ ಇದುಮೊದಲಾದ ಮಂತ್ರವನ್ನು ವಾಯುವಿನಲ್ಲಿ ಅಂತರ್ಗತನಾದ ವಿಷ್ಣುವನ್ನುದ್ದೇಶಿಸಿ ಹಿಂ ಎಂದು ಹೇಳಿ ತಂತಮ್ಮ ಇಷ್ಟವನ್ನು ಹೊಂದಿದರು. (೫) ವಿಷ್ಣು ವಾಯು ಇಬ್ಬರೂ *ಕ್ರಮದಿಂದಲೇ ಸರ್ವಜ್ಞರಾದುದರಿಂದ ದೇವ ಎಂದೂ, ಭಕ್ತರಿಂದ ಭಜಿಸಿಕೊಳ್ಳುವುದರಿಂದ ವರುಣ ಎಂದೂ, ಜಗತ್ತನ್ನು ಸೃಷ್ಟಿಸುವುದರಿಂದ ಸವಿತಾ. ಎಂದೂ, ಪ್ರಜೆಗಳನ್ನು ರಕ್ಷಿಸುವುದರಿಂದ ಪ್ರಜಾಪತಿಯೆಂದೂ ಕ್ರಮವಾಗಿ ಹೇಳಲ್ಪಡುತ್ತಾರೆ. ॥ ೧—೨ ॥ ॥ ೩- ೧೨ ॥ ೧೨ ॥

ಹನ್ನೆರಡನೇ ಖಂಡವು ಮುಗಿಯಿತು.

---

## ೧೩ನೇ ಖಂಡವು

ಪೀ— ಸಾಮದೊಳಗಣ ಉಪಾಸನೆಯು ಪ್ರಸ್ತುತವಾಗಿರುವುದರಿಂದ ಸಾಮದೊಳಗಣ ಹಾವ್ ಇದುಮೊದಲಾದ ೧೩ ಸ್ತೋಭಾಕ್ಷರ (ಗಾನಭಾಗವನ್ನು ಮಾತ್ರ ತೋರಿಸುವುದು. ಬೇರೆ ಅರ್ಥವಿಲ್ಲದಿರುವ ಅಕ್ಷರ)ಗಳಲ್ಲಿರತಕ್ಕ ಉಪಾಸನೆ ಹೇಳುತ್ತಾರೆ—

**ಉ. ॥ ಅಯಂ ವಾವ ಲೋಕೋ ಹಾವುಕಾರೋ ವಾಯುರ್ಹಾಯಿ-ಕಾರಶ್ಚಂದ್ರಮಾ ಅಥಕಾರ ಆತ್ಮೇಹಕಾರೋಽಗ್ನಿರೀಕಾರಃ ॥ ೧ ॥**

---

* ಶ್ರೀಹರಿಯು ತನ್ನಲ್ಲಿಯೂ ಪರರಲ್ಲಿಯೂ ಇದ್ದುದೆಲ್ಲವನ್ನು ತಿಳಿದವನು. ವಾಯುದೇವರು ವಿಷ್ಣು ವಿನಃ ಬೇರೆ ಕಡೆಗಳಲ್ಲಿಯೂ ಆಲೋಚಿಸುವಾಗಲೇ ಸರ್ವವನ್ನು ತಿಳಿದುಕೊಳ್ಳುವವರು

ಅ || ಭೂಲೋಕಕ್ಕೆ ಅಭಿಮಾನಿನಿಯಾದ ಧರಾದೇವಿಯು *ಹಾವು ಎಂದು ಕರೆಯಲ್ಪಡುತ್ತಾಳೆಂದು ಉಪಾಸನೆ ಮಾಡಬೇಕು. ಮುಖ್ಯ ವಾಯುವು ಹಾಯಿಕಾರನೆಂದೂ, ಚಂದ್ರನು ಅಥಕಾರನೆಂದೂ, ವಿಷ್ಣುವು ಇಹಕಾರನೆಂದೂ, ಅಗ್ನಿಯು ಈಕಾರನೆಂದೂ ಹೇಳಲ್ಪಡುತ್ತಾನೆ || ೧ ||

**ಭಾ. || (೧) ಹೂಯತೇಽತ್ರಾಗ್ನಿಹೋತ್ರಾದಿರ್ಹಾವುಕಾರಸ್ತ್ವಿಯಂ ತತಃ || (೨) ಹೇತ್ಯಾಶ್ಚರ್ಯವದಾಯಾತಿ ಹೇತಿ ವಾ ಸುಖಕೃತ್ತ್ವತಃ | ಹಾಯಿಕಾರಸ್ತತೋ ವಾಯುಃ || (೩) ಅಥೇತ್ಯುಕ್ತಮನಂತರಂ | ಆನಂತರ್ಯಾತ್ಪ್ರಕಾಶಸ್ಯ ಸೂರ್ಯಾಚ್ಚಂದ್ರಸ್ತ(ಸ್ತ್ವ)ಥೇರಿತಃ || (೪) ಸರ್ವಸಾಮೀಪ್ಯತೋ ವಿಷ್ಣುರಿಹೇತಿ ಕಥಿತಸ್ಸದಾ || (೫) ಇಂಧನಾದಗ್ನಿರೀಕಾರಃ || ೧ || || ೧ ||**

ಅ || (೧) ಭೂಮಿಯಲ್ಲಿ ಅಗ್ನಿಹೋತ್ರ ಮೊದಲಾದುದು ಹೋಮಿಸಲ್ಪಡುವುದರಿಂದ ಭೂಲೋಕಕ್ಕೆ ಅಭಿಮಾನಿನಿಯಾದ ಧರಾದೇವಿಯು ಹಾವ್ ಎನ್ನಿಸುತ್ತಾಳೆ. ಹಾವ್ ಎಂದು ಕರೆಯಲ್ಪಡುವುದರಿಂದ ಹಾವುಕಾರಃ ಎಂದು ಉಪಾಸನೆ ಮಾಡಬೇಕು (೨) ಮುಖ್ಯಪ್ರಾಣನು ಅತ್ಯಾಶ್ಚರ್ಯಕರನಾಗಿ ಬರುವುದರಿಂದ ಅಥವಾ ಭಕ್ತರಿಗೆ ಸುಖವನ್ನುಂಟುಮಾಡುವುದರಿಂದ ಹಾಯಿಕಾರಃ ಎನ್ನಿಸುತ್ತಾನೆ. (೩) ಚಂದ್ರಪ್ರಕಾಶವು ಸೂರ್ಯಪ್ರಕಾಶದಿಂದ ಅನಂತರದ್ದಾದಪ್ರಯುಕ್ತ ಅಂದರೆ ಸೂರ್ಯಪ್ರಕಾಶದಷ್ಟು ಪ್ರಕಾಶವಿಲ್ಲವಾದ ಕಾರಣ ಚಂದ್ರನು ಅಥಕಾರಃ ಎನ್ನಿಸುತ್ತಾನೆ. (೪) ವ್ಯಾಪ್ತನಾದ ನಾರಾಯಣನು ಸರ್ವರ ಸಮೀಪದಲ್ಲಿದ್ದುದರಿಂದ ಇಹಕಾರಃ ಎನ್ನಿಸುತ್ತಾನೆ. (೫) ಅಗ್ನಿಯು ಯಾವಾಗಲೂ ಪ್ರಕಾಶಿಸಿಕೊಂಡಿರುವುದರಿಂದ ಈಕಾರಃ ಎನ್ನಿಸುತ್ತಾನೆ. || ೧ || || ೧ ||

**ಉ. || ಆದಿತ್ಯ ಊಕಾರೋ ನಿವಹ ಏಕಾರೋ ವಿಶ್ವೇದೇವಾ ಔಹೋಯಿಕಾರಃ ಪ್ರಜಾಪತಿರ್ಹಿಂಕಾರಃ ಪ್ರಾಣಃ ಸ್ವರೋಽನ್ನಂ ಯಾಯಾ ವಾಕ್ ವಿರಾಟ್ || ೨ ||**

ಅ || ಸೂರ್ಯನು ಊಕಾರನೆಂದೂ, ನಿಹವನೆನಿಸುವ ಇಂದ್ರನು ಏಕಾರನೆಂದೂ, ಎಲ್ಲಾ ದೇವತೆಗಳು ಔಹೋಯಿಕಾರರೆಂದೂ, ಬ್ರಹ್ಮನು ಹಿಂಕಾರನೆಂದೂ, ಶರೀರದಲ್ಲಿದ್ದ ಮುಖ್ಯಪ್ರಾಣನು ಸ್ವರನೆಂದೂ, ಅನ್ನಾಭಿಮಾನಿನಿಯಾದ ಸರಸ್ವತಿಯು ಯಾಯಾ ಎಂದೂ, ವಚನಗಳಿಗೆಲ್ಲಾ ಅಭಿಮಾನಿನಿಯಾದ ಲಕ್ಷ್ಮೀದೇವಿಯು ವಿರಾಟ್ ಎಂದೂ ಉಪಾಸನೆ ಮಾಡಬೇಕು. || ೨ ||

**ಭಾ. || (೧) ಊಕಾರಸ್ಸೂರ್ಯ ಉಚ್ಛ್ರಿತಃ | ನಿತರಾಮಾಹ್ವಯಂತ್ಯೇನಮಿತೀಂದ್ರೋ ನಿಹವಃ ಸ್ಮೃತಃ | ಏತೀತ್ಯೇಕಾರ ಏವಾಸೌ || (೨) ಔಹೋಯಿತ್ಯಖಿಲಾಸ್ಸುರಾಃ | ಉಚ್ಚತ್ವಾದ್ವಿಷ್ಣುರುಃ ಪ್ರೋಕ್ತೋ ಹೂಯಂತೇಽಸ್ಮಿನ್ನತೋಽಖಿಲಾಃ | ಮುಕ್ತಾವೌಹೋಯಿನಸ್ತಸ್ಮಾತ್ಸರ್ವ(ರ್ವೇ)ದೇವಾಃ ಪ್ರಕೀರ್ತಿತಾಃ (೩) ಹೀತಿ ನಿಶ್ಚಯ ಉದ್ದಿಷ್ಟೋ ನಿಶ್ಚಯಜ್ಞಾನತಃ ಸದಾ | ಬ್ರಹ್ಮಾ ಹಿಂಕಾರ ಇತ್ಯುಕ್ತೋ ವಾಯುಃ ಪ್ರಾಣಃ ಶರೀರಗಃ | ಸ್ವೇ ವಿಷ್ಣೌ ರಮಯತ್ಯೇನಂ ಜೀವಂ ತಸ್ಮಾತ್ ಸ್ವರಃ ಸ್ಮೃತಃ || (೪) ಯಯಿರ್ನಿತ್ಯಗತೇ-**

---

* ಹಾವುಕಾರಸ್ತೋಭಾಕ್ಷರವು ರಥಂತರ ಸಾಮದಲ್ಲಿಯೂ, ಹಾಯಿಕಾರ ಮೊದಲಾದ ಸ್ತೋಭಾಕ್ಷರಗಳು ವಾಮದೇವ ಮೊದಲಾದ ಸಾಮಗಳಲ್ಲಿಯೂ ಪ್ರಸಿದ್ಧಗಳಾಗಿವೆ.

**ರ್ವಾಯುಸ್ತದ್ಗಾ ಯಾಯಾ ಸರಸ್ವತೀ । ಸೈವಾನ್ನದೇವತಾ ಪ್ರೋಕ್ತಾ ಯಾತ್ರಾ ಪ್ರಾ-ಣೇನ ನೀಯತೇ ॥ (೫) ಸರ್ವನಾಗಾತ್ಮಿಕಾ ಯಾ ತು ಶ್ರೀರ್ವಿಶೇಷೇಣ ರಾಜನಾತ್ । ವಿರಾಡುಕ್ತಾ ॥ ೨ ॥ ॥ ೧ ॥**

ಅ ॥ (೧) ಬಿಸಿಲಿನಿಂದ ಸುಡುವ ಕಾರಣ ಸೂರ್ಯನು ಊಕಾರಃ ಎನ್ನಿಸುತ್ತಾನೆ. ಬೇರೆ ದೇವತೆಗಳಿಗಿಂತ ವಿಶೇಷವಾಗಿ ದೇವೇಂದ್ರನನ್ನೇ ಮುಖ್ಯವಾಗಿ ಕರೆಯುವುದರಿಂದ ದೇವೇಂದ್ರನು ನಿಹವ ಎನ್ನಿಸುತ್ತಾನೆ. ಆತನು ಸಂಚರಿಸುತ್ತಿರುವುದರಿಂದ ಏಕಾರಃ ಎನ್ನಿಸುತ್ತಾನೆ. (೨) ವಿಷ್ಣುವು ಸರ್ವೋತ್ತಮನಾದುದರಿಂದ ಉಃ ಎನ್ನಿಸುತ್ತಾನೆ. ಎಲ್ಲಾ ದೇವತೆಗಳು ಮೋಕ್ಷದಲ್ಲಿ ವಿಶೇಷವಾಗಿ ಉ ಎನ್ನಿಸಿಕೊಂಡ ವಿಷ್ಣುವಿನಲ್ಲಿ ಅಧೀನರಾಗಿರುವುದರಿಂದ ಔಹೋಯಿನ ಎನ್ನಿಸುತ್ತಾರೆ. (೩) ಹಿ ಎಂದರೆ ನಿಶ್ಚಯವು. ಬ್ರಹ್ಮನು ಸರ್ವದಾ ಯಥಾರ್ಥ ಜ್ಞಾನವುಳ್ಳವನಾದುದರಿಂದ ಹಿಂಕಾರಃ ಎನ್ನಿಸುತ್ತಾನೆ ಶರೀರದಲ್ಲಿದ್ದ ಮುಖ್ಯಪ್ರಾಣನು ಜೀವನಿಗೆ ಸುಖರೂಪನಾದ ಶ್ರೀವಿಷ್ಣುವಿನಿಂದ ಸುಖವನ್ನು ಕೊಡಿಸುವುದರಿಂದ ಸ್ವರಃ ಎನಿಸುತ್ತಾನೆ. (೪) ಸರ್ವಭಕ್ಷಕನಾದ ವಾಯುವಿನಿಂದ ಪ್ರೇರಿಸಲ್ಪಡುವ ಕಾರಣ ಅನ್ನ ಎನಿಸಿಕೊಂಡ ಅನ್ನಕ್ಕೆ ಅಭಿಮಾನಿನಿಯಾದ ಸರಸ್ವತಿಯು ಎಷ್ಟು ಹೊತ್ತಿಗೂ ಸಂಚರಿಸಿಕೊಂಡಿರುವುದರಿಂದ **ಯಯಿ** ಎನ್ನಿಸಿಕೊಂಡ ಮುಖ್ಯವಾಯುವಿನ ಆಧೀನಳಾಗಿದ್ದುದರಿಂದ **ಯಾಯಾ** ಎನ್ನಿಸುತ್ತಾಳೆ. ಅಥವಾ ಸರ್ವಪ್ರೇರಕನಾದ ಪ್ರಾಣನಿಂದ ಪ್ರೇರಿಸಲ್ಪಡುವುದರಿಂದ ಸರಸ್ವತಿಯು **ಯಾಯಾ** ಎನ್ನಿಸುತ್ತಾಳೆ (೫) ಎಲ್ಲಾ ವಚನಗಳಿಗೆ ನಿಯಾಮಕಳಾದ ಲಕ್ಷ್ಮೀದೇವಿಯು ಎಲ್ಲರಿಂದ ಹೆಚ್ಚು ಪ್ರಕಾಶಿಸಿಕೊಂಡಿರುವುದರಿಂದ ವಿರಾಟ್ ಎನ್ನಿಸುತ್ತಾಳೆ. ॥ ೨ ॥ ॥ ೧ ॥

**ಉ. ॥ ಅನಿರುಕ್ತಸ್ತ್ರಯೋದಶಸ್ತೋಭಃ ಸಂಚರೋ ಹುಷ್ಕಾರೋ ದು-ಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನವಾನನ್ನಾದೋ ಭ-ವತಿ ಯ ಏತಾಮೇವꣳ ಸಾಮ್ನಾಮುಪನಿಷದಂ ವೇದೋಪನಿಷದಂ ವೇದ ॥ ॥ ೩ ॥ ಇತಿ ತ್ರಯೋದಶಃ ಖಂಡಃ ॥ ೩–೧೩ ॥ ಇತಿ ಶ್ರೀಮಚ್ಛಾಂದೋಗ್ಯೋಪನಿಷದಿ ತೃತೀಯೋಽಧ್ಯಾಯಃ ॥ ೩ ॥**

ಅ ॥ ಹೀಗೆಯೇ ಇದ್ದಾನೆಂದು ಹೇಳಲಿಕ್ಕೆ ಅಶಕ್ಯನಾದುದರಿಂದ ಅನಿರುಕ್ತನೆಂದೂ ಸರ್ವತ್ರ ಸಂಚರಿಸುವುದರಿಂದ ಸಂಚರನೆಂದೂ ಹೆಸರುಳ್ಳ ವ್ಯಾಪ್ತನಾದ ನಾರಾಯಣನು ೧೩ನೇ ಸ್ತೋಭವಾದ ಹುಪ್‌ಕಾರನೆಂದೂ ಉಪಾಸನೆ ಮಾಡಬೇಕು. (ಹೀಗೆ ಉಪಾಸನೆ ಮಾಡಿದ್ದಕ್ಕೆ ಫಲ ಹೇಳುತ್ತಾರೆ--) ಯಾವ ಅಧಿಕಾರಿಯು ಸಾಮದ ಏಕದೇಶಗಳಾದ ಸ್ತೋಭಾಕ್ಷರಗಳ ಅರ್ಥವನ್ನು ತಿಳಿಯುತ್ತಾನೋ, ಆತನಿಗೆ ಅಂತಹ ಉಪಾಸನೆಯಿಂದ ವೇದ ಮೊದಲಾದವುಗಳ ಪಠನದಿಂದುಂಟಾದ ಫಲವು ಲಭಿಸುತ್ತದೆ. ಅಥವಾ ವಾಕ್ ಎಂದು ಹೆಸರುಳ್ಳ ಶ್ರೀಹರಿಯು ಅಂತಹ ಉಪಾಸಕನಿಗೆ ವೇದಾದಿಗಳ ಪಾರಾಯಣಾದಿಗಳಿಂದುಂಟಾದ ಫಲವನ್ನು ಕೊಡುತ್ತಾನೆ. ಉಪಾಸಕನು ಯಥೇಷ್ಟ ಅನ್ನವುಳ್ಳವನಾಗುತ್ತಾನೆ. ಅನ್ನ ಎಂದು ಹೆಸರುಳ್ಳ ಶ್ರೀಹರಿಯನ್ನು ಪಜೀವಿಸಿಕೊಂಡು ಇರುತ್ತಾನೆ. ॥ ೩—೧೩ ॥ ॥ ೭ ॥

**ಭಾ. ॥ (೧) ಅನಿರುಕ್ತಸ್ತು ವ್ಯಾಪ್ತೋ ನಾರಾಯಣಸ್ತು ಯಃ । ಆಹೂತ ಏವ ಪಾತೀತಿ ಹುಷ್ಕಾರ ಇತಿ ಕೀರ್ತಿತಃ । ಹುಬಿತ್ಯಾಕ್ರಿಯತೇ ಯಸ್ಮಾತ್‌ಹುಷ್ಕಾರಸ್ತು ಜನಾ-ರ್ದನಃ ॥ (೨) ಅನಿರುಕ್ತಸ್ತ್ವನಾಚ್ಯತ್ವಾತ್ಪರಮಃ ಪುರುಷೋ ಹರಿಃ । ಇತಿ ಮಾಹಾತ್ಮ್ಯೇ ॥**

**ಸಮ್ಯಕ್ ಚರತೀತಿ ಸ ಏವ ಸಂಚರಃ ॥ ೩ ॥ ಇತಿ ತ್ರಯೋದಶಃ ಖಂಡಃ ॥ ೩–೧೩ ॥ ೧ ॥**

ಅ ॥ (೧) ವ್ಯಾಪ್ತನಾದ ನಾರಾಯಣನು ಅನಿರುಕ್ತನು. ಭಕ್ತಿಪೂರ್ವಕವಾಗಿ ಶ್ರೀಹರಿಯನ್ನು ಧ್ಯಾನಮಾಡಿದರೇನೇ ರಕ್ಷಿಸುವುದರಿಂದ ಶ್ರೀಹರಿಯು ಹುಪ್ ಎನಿಸುತ್ತಾನೆ. ಜನಾರ್ದನನು ಹುಪ್ ಎಂದು ಕರೆಯಲ್ಪಡುವುದರಿಂದ ಹುಪ್‌ಕಾರಃ ಎನಿಸುತ್ತಾನೆ (೨) ಸಂಪೂರ್ಣವಾಗಿ ಶ್ರೀಹರಿಯ ಮಹಿಮೆಯನ್ನು ಹೇಳಲಸಾಧ್ಯವಾದುದರಿಂದ ಸರ್ವೋತ್ತಮನಾದ ಶ್ರೀಹರಿಯು ಅನಿರುಕ್ತಃ ಎನ್ನಿಸುತ್ತಾನೆ. ಶ್ರೀಹರಿಯೇ ಸರ್ವತ್ರ ಸಂಚರಿಸುವುದರಿಂದ ಸಂಚರಃ ಎನ್ನಿಸುತ್ತಾನೆ. (ಹೀಗೆ ಶ್ರೀಹರಿಯನ್ನು ಪಾಸನೆ ಮಾಡಬೇಕೆಂದು ಎಲ್ಲಾ ಕಡೆಗಳಲ್ಲಿಯೂ ಇಟ್ಟುಕೊಳ್ಳಬೇಕು.) ॥ ೩—೧೩ ॥　　॥ ೩ ॥

**ಹದಿಮೂರನೇ ಖಂಡವು ಮುಗಿಯಿತು.**

---

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಚ್ಛಾಂದೋಗ್ಯ-ಉಪನಿಷದ್ಭಾಷ್ಯೇ ತೃತೀಯೋಽಧ್ಯಾಯಃ ॥ ೩ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಮಾಡಿದ ಶ್ರೀಮತ್
ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ಮೂರನೇ ಅಧ್ಯಾಯವು ಮುಗಿಯಿತು. ॥ ೧ ॥

**ಅಶೇಷಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥**

**॥ ಓಂ ಶ್ರೀಃ ಓಂ ॥**



|| ಶ್ರೀಃ ||

# ನಾಲ್ಕನೇ ಅಧ್ಯಾಯವು

**ಓಂ || ಪ್ರದ್ಯುಮ್ನಾದಿಸ್ವರೂಪೇಣ ಹಿಂಕಾರಾದ್ಯಭಿಧಂ ಪರಂ |**
**ಸಮಸ್ತಸಾಮಗಂ ವಂದೇ ಸಾಮನಾಮಾನಮೀಶ್ವರಂ ||**

## ೧ನೇ ಖಂಡವು

**ಪೀ**—ಉದ್ಗೀಥವೆಂಬ ಸಾಮದ ಸ್ತೋಭಾಕ್ಷರದಲ್ಲಿದ್ದ ಉಪಾಸನೆಯನ್ನು ಹೇಳಿ, ಐದು, ಏಳು ಅಂಶಗಳುಳ್ಳ ಸಾಮಗಳಲ್ಲಿರತಕ್ಕ ಉಪಾಸನೆಯನ್ನು ನಾಲ್ಕನೇ ಅಧ್ಯಾಯದಲ್ಲಿ ಹೇಳುತ್ತಾರೆ—

**ಉ. || ಓಂ || ಸಮಸ್ತಸ್ಯ ಖಲು ಸಾಮ್ನ ಉಪಾಸನಂ ಸಾಧು ಯತ್ ಖಲು ಸಾಧು ತತ್ಸಾಮೇತ್ಯಾಚಕ್ಷತೇ ಯದಸಾಧು ತದಸಾಮೇತಿ || ೧ ||**

**ಅ ||** ಸರ್ವಗುಣಸಂಪೂರ್ಣನೂ, ಸಾಮ ಎಂದು ಹೆಸರುಳ್ಳವನೂ, ಸಾಮವೇದದಲ್ಲಿ ವರ್ಣಿಸಲ್ಪಡುವವನೂ ಆದ ಶ್ರೀಹರಿಯನ್ನು ಸಾಮವು ಸಾಧುವಾದ ಕಾರಣ ಧ್ಯಾನಿಸುತ್ತಿರಬೇಕು. (ಸಾಮವು ಸಾಧುವಾಗುವುದು ಹೇಗೆ? ಎಂದರೆ—) ಎಲ್ಲಾ ವಸ್ತುಗಳಿಂದ ಶ್ರೇಷ್ಠವೆಂದು ಮನಸ್ಸಿನಿಂದ ನಿಶ್ಚಯಿಸಿಕೊಳ್ಳಲಿಕ್ಕೆ ಯೋಗ್ಯವಾದುದು ಸಾಧು. ಎಲ್ಲಾ ವಸ್ತುಗಳಿಂದ ಶ್ರೇಷ್ಠವೆಂದು ತಿಳಿದುಕೊಳ್ಳುವುದು ಸಾಮ. **(ಸಾರತ್ವೇನ ಧಾರ್ಯಂ ಸಾಧು. ಸಾರತ್ವೇನ ಮೇಯಂ ಸಾಮ)** ಹೀಗೆ ಸಾಧು ಸಾಮ ಶಬ್ದಗಳಿಗೆ ಒಂದೇ ಅರ್ಥವು, ಎಂದು ಜ್ಞಾನಿಗಳು ಹೇಳುತ್ತಾರೆ. ಯಾವುದು ಸಾಧು ಅಲ್ಲವೋ, ಅದು ಸಾಮವಲ್ಲ, ಎಂದು ಹೇಳುತ್ತಾರೆ. || ೧ ||

**ಉ. || ತದುತಾಪ್ಯಾಹುಃ ಸಾಮ್ನೈನಮುಪಾಗಾದಿತಿ ಸಾಧುನೈನಮುಪಾಗಾದಿತ್ಯೇವ ತದಾಹುರಸಾಮ್ನೈನಮುಪಾಗಾದಿತ್ಯಸಾಧುನೈನಮುಪಾಗಾದಿತ್ಯೇವ ತದಾಹುಃ || ೨ ||**

**ಅ ||** ಸಾಧು ಸಾಮ ಶಬ್ದಗಳಿಗೆ ಒಂದೇ ಅರ್ಥವೆಂದು ಬೇರೆ ಜ್ಞಾನಿಗಳೂ ಹೇಳುತ್ತಾರೆ, ಸಾಮದಿಂದ (ಅನ್ಯರಿಗೆ ಬೇಸರ ಹುಟ್ಟದಂತೆ ಸಮಾಧಾನದಿಂದ) ರಾಜ, ಗುರು ಮೊದಲಾದವರ ಸಮೀಪಕ್ಕೆ ಹೋದನು,' ಎಂದು ಹೇಳುವಲ್ಲಿ ಸಾಧುವಾಗಿ ಹೋದನು ಎಂದೇ ಲೋಕದಲ್ಲಿ ಹೇಳುವರು. ಸಾಮ (ಸಮಾಧಾನ)ವಿಲ್ಲದೆ ಈತನನ್ನು ಹೊಂದಿದನೆಂಬ ಅರ್ಥದಲ್ಲಿ ಅಸಾಧುವಾಗಿ ಹೋದನೆಂದು ಲೋಕದಲ್ಲಿ ಪ್ರಯೋಗಿಸುವರು ಅಥವಾ **ಸಾಮ್ನಾ ಏನಮುಪಾಗಾತ್** ಎಂಬ ಮಂತ್ರವು ಹೇಳುವುದನ್ನೇ **ಸಾಧುನಾ ಏನಮುಪಾಗಾತ್** ಎಂಬುದು ಹೇಳುತ್ತದೆ. **ಅಸಾಮ್ನಾ ಏನಮುಪಾಗಾತ್** ಎಂಬ ಮಂತ್ರವು ಹೇಳುವುದನ್ನೇ **ಅಸಾಧುನಾ ಏನಮುಪಾಗಾತ್** ಎಂಬುದು ಹೇಳುತ್ತದೆಂದು ಜ್ಞಾನಿಗಳು ಹೇಳುತ್ತಾರೆ. || ೨ ||

**ಪೀ**—ಆ ವೃದ್ಧರೂ ಸ್ವಕಪೋಲಕಲ್ಪಿತವಾಗಿ ಹೇಳುವುದಲ್ಲ. ತಮಗಿಂತಲೂ ಹಿಂದಿನ ವೃದ್ಧರ ಸಮ್ಮತಿಯಿದೆ ಎನ್ನುತ್ತಾರೆ —

**ಉ. ॥ ಅಥೋತಾಪ್ಯಾಹುಃ ಸಾಮ ನೋ ಬತೇತಿ ಯತ್ಸಾಧು ಭವತಿ ಸಾಧು ಬತೇತ್ಯೇವ ತದಾಹುರಸಾಮ ನೋ ಬತೇತಿ ಯದಸಾಧು ಭವತ್ಯ-ಸಾಧು ಬತೇತ್ಯೇವ ತದಾಹುಃ ॥ ೩ ॥**

ಅ ॥ ಸಾಧುವಾದುದೇ ನಮಗೆ ಸಾಮವು, ಹರ್ಷ, ಹೀಗೆ ಹಿಂದಿನ ವೃದ್ಧರೂ ಹೇಳುತ್ತಾರೆ. ಅಸಾಧುವಾದುದು ಅಸಾಮವು, ಎನ್ನುತ್ತಾರೆ. ॥ ೩ ॥

ಪೀ—ಹೀಗೆ ಸಾಧು ಎಂದು ಅರ್ಥವುಳ್ಳ ಸಾಮ ಎಂಬ ನಾಮವು ಶ್ರೀಹರಿಗೆ ಇದೆ, ಎಂದು ಶ್ರೀಹರಿಯನ್ನುಪಾಸನೆ ಮಾಡುವವನಿಗೆ ಫಲ ಹೇಳುತ್ತಾರೆ—

**ಉ. ॥ ಸ ಯ ಏತದೇವಂವಿದ್ವಾನ್ಸಾಧು ಸಾಮೇತ್ಯುಪಾಸ್ತೇಽಭ್ಯಾಶೋ ಹ ಯದೇನꣳ ಸಾಧವೋ ಧರ್ಮಾ ಆ ಚ ಗಚ್ಛೇಯುರುಪ ಚ ನಮೇಯುಃ॥ ಇತಿ ಪ್ರಥಮಃ ಖಂಡಃ ॥ ೪-೧ ॥ ॥ ೪ ॥**

ಅ ॥ ಅಧಿಕಾರಿಯು ಸಾಧು ಸಾಮ ಶಬ್ದಗಳಿಗೆ ಒಂದೇ ಅರ್ಥವೆಂದು ತಿಳಿದು ಸಾಧು ಸಾಮವು ಎಂದು ಉಪಾಸನೆ ಮಾಡುತ್ತಾನೋ ಆ ಉಪಾಸಕನಿಗೆ ಶೀಘ್ರವಾಗಿ ಸಾಧು (ಯೋಗ್ಯ) ಧರ್ಮಗಳು ಬರುತ್ತವೆ. ಮೋಕ್ಷದಲ್ಲಿ ಸ್ಥಿರಗಳಾಗಿ ಇರುತ್ತವೆ. ಈ ಲೋಕದಲ್ಲಿಯೂ ಸ್ಥಿರಗಳಾಗಿ ಭೋಗ್ಯಗಳಾಗಿ ಇರುತ್ತವೆ. ॥ ೪—೧ ॥ ॥ ೪ ॥

**ಭಾ. ॥ ಹರಿಃ ಓಂ ॥ (೧) ಸಮಸ್ತಸ್ಯ ಪೂರ್ಣಸ್ಯ ಸಾಧುತ್ವಾತ್ಸಾಮನಾಮ್ನೋ ವಿ-ಷ್ಣೋರುಪಾಸನಂ ಸಾಧು ॥ (೨) ಸಾರತ್ವೇನ ಮೇಯಂ ಸಾಮ । ಸಾರತ್ವೇನ ಧಾರ್ಯಂ ಸಾಧ್ವಿತ್ಯೇಕ ಏವಾರ್ಥಃ ॥ (೩) ಸಾಧುತ್ವಾತ್ಸಾಮನಾಮಾನಂ ಸಮಸ್ತಗುಣಪೂರ್ತಿತಃ । ಸಮಸ್ತಂ ಯ ಉಪಾಸೀತ ನಾರಾಯಣಮನಾಮಯಂ ॥ ಸರ್ವಸಾಮ್ನಾಂ ದೇವತೇತಿ ಸ ಮುಕ್ತಃ ಸಾಧುಧರ್ಮಭಾಕ್ । ಇತಿ ಸಾಮಸಂಹಿತಾಯಾಂ ॥ ೧, ೨, ೩, ೪ ॥ ಇತಿ ಪ್ರಥಮಃ ಖಂಡಃ ॥ ೪—೧ ॥ ॥ ೧ ॥**

ಅ ॥ (೧) ಸಮಸ್ತಸ್ಯ ಅಂದರೆ ಸರ್ವಗುಣಪೂರ್ಣನೂ, ಸರ್ವೋತ್ತಮನಾದುದರಿಂದ ಸಾಮ ಎಂದು ಹೆಸರುಳ್ಳವನೂ, ಆದ ಶ್ರೀವಿಷ್ಣುವಿನ ಉಪಾಸನೆಯು ಶ್ರೇಷ್ಠವು (೨) ಸರ್ವಶ್ರೇಷ್ಠನೆಂದು ತಿಳಿಯಲರ್ಹನು ಸಾಮನು. ಸರ್ವಶ್ರೇಷ್ಠನೆಂದು ನಿರ್ಧರಿಸಿಕೊಳ್ಳಲ್ಪಡುವವನು ಸಾಧುವು. ಹೀಗೆ ಸಾಮ ಸಾಧುಶಬ್ದಗಳಿಗೆ ಒಂದೇ ಅರ್ಥವು (೩) ಸರ್ವಗುಣಗಳಿಂದ ಪೂರ್ಣನಾದುದರಿಂದ ಸಮಸ್ತನೆನಿಸಿಕೊಂಡವನೂ, ಸರ್ವೋತ್ತಮನಾದುದರಿಂದಲೂ ಎಲ್ಲಾ ಸಾಮಗಳಿಗೆ ದೇವತೆಯಾದುದರಿಂದಲೂ ಸಾಮನೆನಿಸಿಕೊಂಡವನೂ, ದೋಷವಿಲ್ಲದವನೂ ಆದ ಶ್ರೀನಾರಾಯಣನನ್ನು ಉಪಾಸನೆ ಮಾಡಿದವನು ಸಾಧು ಧರ್ಮಗಳನ್ನು ಹೊಂದಿದವನಾಗಿ ಮುಕ್ತನಾಗುವನು, ಎಂದು ಸಾಮಸಂಹಿತೆಯಲ್ಲಿ ಹೇಳಿದೆ. ॥ ೧, ೨, ೩, ೪ ॥ ೪—೧ ॥ ॥ ೧ ॥

ಒಂದನೇ ಖಂಡವು ಮುಗಿಯಿತು.

# ೨ನೇ ಖಂಡವು

**ಪೀ**—ಲೋಕದಲ್ಲಿ ಐದು ವಿಧ ಸಾಮದಲ್ಲಿ ಸ್ತುತಿಸಲ್ಪಡತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ—

**ಉ. ॥ ಲೋಕೇಷು ಪಂಚವಿಧಂ ಸಾಮೋಪಾಸೀತ ಪೃಥಿವೀ ಹಿಂಕಾರೋಽಗ್ನಿಃ ಪ್ರಸ್ತಾವೋಽಂತರಿಕ್ಷಮುದ್ಗೀಥ ಆದಿತ್ಯಃ ಪ್ರತಿಹಾರೋ ದ್ಯೌರ್ನಿಧನಮಿತ್ಯೂರ್ಧ್ವೇಷು ॥ ೧ ॥**

ಅ ॥ ಭೂಲೋಕ ಮೊದಲಾದ ಲೋಕಗಳಲ್ಲಿ ಐದು ರೂಪಗಳುಳ್ಳವನೂ, ಹಿಂಕಾರ ಮೊದಲಾದ ಐದು ವಿಧ ಸಾಮದಲ್ಲಿ ಸ್ತುತಿಸಲ್ಪಡತಕ್ಕವನೂ ಸಾಮನೆನಿಸಿಕೊಂಡ ಶ್ರೀಹರಿಯನ್ನು ಉಪಾಸನೆ ಮಾಡಬೇಕು. (ಅದನ್ನು ವಿವರಿಸುತ್ತಾರೆ.) (1) ಸಸ್ಯ ಮೊದಲಾದವುಗಳನ್ನು ವಿಸ್ತರಿಸುವುದರಿಂದ ಪೃಥಿವೀ ಎಂದು ಹೆಸರುಳ್ಳ ಪೃಥಿವಿಯಲ್ಲಿರತಕ್ಕ ಪ್ರದ್ಯುಮ್ನನು ಸೃಷ್ಟಿಸುವುದರಿಂದ ಹಿಂಕಾರನೆಂದು ಹೆಸರುಳ್ಳವನು. ಹಿಂಕಾರವೆಂಬ ಸಾಮದಲ್ಲಿ ಹೇಳಲ್ಪಡತಕ್ಕವನು. (2) ಸರ್ವವನ್ನು ಭಕ್ಷಿಸುವುದರಿಂದ ಅಗ್ನಿಯೆಂದು ಹೆಸರುಳ್ಳ ಅಗ್ನಿಯಲ್ಲಿರತಕ್ಕ ವಾಸುದೇವನು ಪ್ರಥಮಾವತಾರನಾದುದರಿಂದ ಪ್ರಸ್ತಾವನೆನಿಸಿಕೊಂಡವನು ಪ್ರಸ್ತಾವ ಎಂಬ ಸಾಮದಲ್ಲಿ ಸ್ತುತಿಸಲ್ಪಡತಕ್ಕವನು (3) ಶರೀರದೊಳಗೆ ಸರ್ವವನ್ನು ನೋಡುವುದರಿಂದ ಅಂತರಿಕ್ಷನೆನಿಸಿಕೊಂಡ ಅಂತರಿಕ್ಷದಲ್ಲಿರುವ ನಾರಾಯಣನು ಪ್ರಣವದಿಂದ ಗಾನಮಾಡಲ್ಪಡುವುದರಿಂದಲೂ ವಾಸುದೇವ ಮೊದಲಾದ ಮೂರ್ತಿಗಳನ್ನು ಹೊರಡಿಸುವುದರಿಂದಲೂ ಉದ್ಗೀಥನೆನಿಸಿಕೊಂಡವನು. ಉದ್ಗೀಥನೆಂಬ ಸಾಮದಲ್ಲಿ ವರ್ಣಿಸಲ್ಪಡತಕ್ಕವನು. (4) ಜನರ ಆಯುಷ್ಯವನ್ನು ತೆಗೆದುಕೊಳ್ಳುವುದರಿಂದ ಆದಿತ್ಯನೆನಿಸಿಕೊಂಡ ಆದಿತ್ಯನಲ್ಲಿರತಕ್ಕ ಅನಿರುದ್ಧನು ಜಗತ್ತನ್ನು ಆಯಾಯ ಕಾರ್ಯಗಳಲ್ಲಿ ಪ್ರೇರೇಪಿಸುವುದರಿಂದ ಪ್ರತಿಹಾರನೆನಿಸಿಕೊಂಡವನು ಪ್ರತಿಹಾರವೆಂಬ ಸಾಮದಂದ ವರ್ಣಿಸಲ್ಪಡುವವನು. (5) ಕ್ರೀಡೆಗೆ ಕಾರಣನಾದುದರಿಂದ ದ್ಯು ಎನಿಸಿಕೊಂಡ ದ್ಯುಲೋಕದಲ್ಲಿರತಕ್ಕ ಸಂಕರ್ಷಣನು ಸಂಹಾರಕನಾದುದರಿಂದ ನಿಧನನೆನಿಸಿಕೊಂಡವನು, ನಿಧನವೆಂಬ ಸಾಮದಿಂದ ಸ್ತುತಿಸಲ್ಪಡುವವನು. ಹೀಗೆ ಮೇಲುಮೇಲಿನ ಲೋಕಗಳಲ್ಲಿರತಕ್ಕ ಭಗವನ್ಮೂರ್ತಿಗಳು ಹಿಂಕಾರ ಮೊದಲಾದ ಸಾಮಗಳಿಂದ ಸ್ತುತಿಸಲ್ಪಡುವವರೆಂದು ಉಪಾಸನೆ ಮಾಡಬೇಕು. ಎಂದು ಉಕ್ತವಾಯಿತು. ॥ ೧ ॥

**ಉ. ॥ ಅಥಾವೃತ್ತೇಷು ದ್ಯೌರ್ಹಿಂಕಾರ ಆದಿತ್ಯಃ ಪ್ರಸ್ತಾವೋಽಂತರಿಕ್ಷಮುದ್ಗೀಥೋಽಗ್ನಿಃ ಪ್ರತಿಹಾರಃ ಪೃಥಿವೀ ನಿಧನಂ ॥ ೨ ॥**

ಅ ॥ ಈಗ ಹಿಂದೆ ಹೇಳಿದ ಕ್ರಮಕ್ಕೆ ವ್ಯತ್ಯಾಸವಾಗಿ ಸ್ವರ್ಗಲೋಕವನ್ನಾರಂಭಿಸಿ ಪೃಥಿವೀ ಪರ್ಯಂತ ಲೋಕಗಳಲ್ಲಿರತಕ್ಕ ಭಗವದ್ರೂಪಗಳು ಹಿಂಕಾರ ಮೊದಲಾದ ಸಾಮಗಳಿಂದ ಹೇಳಲ್ಪಡುವವುಗಳೆಂದು ಉಪಾಸನೆ ಮಾಡಬೇಕು. (ಹೇಗೆಂದರೆ) ದ್ಯುಲೋಕದಲ್ಲಿದ್ದ ಪ್ರದ್ಯುಮ್ನನು ಹಿಂಕಾರನು‡ ಆದಿತ್ಯನಲ್ಲಿದ್ದ ವಾಸುದೇವನು ಪ್ರಸ್ತಾವನು ಅಂತರಿಕ್ಷದಲ್ಲಿದ್ದ ನಾರಾಯಣನು ಉದ್ಗೀಥನು. ಅಗ್ನಿಯಲ್ಲಿದ್ದ ಅನಿರುದ್ಧನು ಪ್ರತಿಹಾರನು. ಪೃಥಿವಿಯಲ್ಲಿದ್ದ ಸಂಕರ್ಷಣನು ನಿಧನನು.

ವಿ ॥ (1) ಮೊದಲು ಪೃಥಿವ್ಯಾದಿ ಶಬ್ದಗಳಿಂದ ಪ್ರದ್ಯುಮ್ನಾದಿಗಳನ್ನು ಇಟ್ಟುಕೊಳ್ಳಬೇಕೆಂದು ಹೇಳಿದೆ. ಈಗ ಸಂಕರ್ಷಣಾದಿಗಳನ್ನು ಇಟ್ಟುಕೊಳ್ಳಬೇಕೆಂದು ಹೇಳಿದುದರಿಂದ ಪೂರ್ವೋತ್ತರ ವಿರುದ್ಧ

‡ ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು

ವಾಯಿತೆಂದರೆ—ಎಲ್ಲಾ ರೂಪಗಳೂ ಸರ್ವಗುಣಪರಿಪೂರ್ಣಗಳೇ ಆಗಿವೆ. ಆದಕಾರಣ ವಿರೋಧವಿಲ್ಲ. (2) ಮತ್ತು ಎಲ್ಲಾ ರೂಪಗಳಲ್ಲಿಯೂ ಎಲ್ಲಾ ಗುಣಗಳೂ ಇವೆ. ಆದರೆ ಕೆಲವುಕೆಲವು ಕಾಲಗಳಲ್ಲಿ ಕೆಲವುಕೆಲವು ಗುಣಗಳಿಗೆ ಕೆಲವು ರೂಪಗಳಲ್ಲಿ ಪ್ರಕಾಶವು. ಹೀಗೆ ವ್ಯವಸ್ಥೆ ಇಟ್ಟುಕೊಂಡು ವಿರೋಧವನ್ನು ಪರಿಹರಿಸಿಕೊಳ್ಳಬೇಕು. (3) ಮತ್ತು ಕೆಲವು ಅಧಿಕಾರಿಗಳು ಪೃಥಿವಿಯಲ್ಲಿ ಪ್ರದ್ಯುಮ್ನನನ್ನೂ, ಕೆಲವರು ಸಂಕರ್ಷಣನನ್ನೂ, ಧ್ಯಾನಿಸುವರು. ಹೀಗೆ ಅಧಿಕಾರಿಭೇದದಿಂದಲೂ ವಿರೋಧವನ್ನು ಪರಿಹರಿಸಿಕೊಳ್ಳಬೇಕು ॥ ೨ ॥

ಪೀ—ಹೀಗೆ ತಿಳಿದು ಉಪಾಸನೆಮಾಡುವವನಿಗೆ ಫಲ ಹೇಳುತ್ತಾರೆ—

**ಉ. ॥ ಕಲ್ಪಂತೇ ಹಾಸ್ಮೈ ಲೋಕಾ ಊರ್ಧ್ವಾಶ್ಚಾವೃತ್ತಾಶ್ಚ ಯ ಏತದೇವಂ ವಿದ್ವಾಁಲ್ಲೋಕೇಷು ಪಂಚವಿಧಁ ಸಾಮೋಪಾಸ್ತೇ ॥ ಇತಿ ದ್ವಿತೀಯಃ ಖಂಡಃ ॥ ೪-೨ ॥ ॥ ೩ ॥**

ಅ ॥ ಐದು ವಿಧ ಸಾಮದಲ್ಲಿ ಸ್ತುತಿಸಲ್ಪಡತಕ್ಕ ಪ್ರದ್ಯುಮ್ನಾದಿರೂಪವನ್ನು ತಿಳಿದು ಮೇಲಿನ ಲೋಕಗಳಲ್ಲಿಯೂ, ಕೆಳಗಿನ ಲೋಕಗಳಲ್ಲಿಯೂ ಐದುವಿಧ ಭಗವದ್ರೂಪಗಳನ್ನು ಉಪಾಸನೆ ಮಾಡುವವರಿಗೆ ಆ ಲೋಕಗಳಲ್ಲಿರುವ, ಪ್ರಕಾಶಸ್ವರೂಪರಾದ ಪ್ರದ್ಯುಮ್ನ ಮೊದಲಾದ ಹತ್ತು ಭಗವನ್ಮೂರ್ತಿಗಳು ಅಭೀಷ್ಟವನ್ನು ಕೊಡುತ್ತವೆ. ॥ ೪—೨ ॥ ॥ ೩ ॥

**ಭಾ. ॥ (೧) ನಾರಾಯಣಾಖ್ಯ ಉದ್ಗೀಥ ಉದ್ಗೇಯಃ ಪ್ರಣವೇನ ಯತ್ । ಉದ್ಗಚ್ಛಂತಿ ಯತೋಽಸ್ಮಾದ್ವಾ ವಾಸುದೇವಾದಿಮೂರ್ತಯಃ ॥ (೨) ಪ್ರಥಮಾವತಾರರೂಪತ್ವಾದ್ವಾಸುದೇವಃ ಪರಃ ಪುಮಾನ್ । ಪ್ರಸ್ತಾವಃ ॥ (೩) ನಿಧನಂ ಚಾಪಿ ಸಂಕರ್ಷಣ ಉದಾಹೃತಃ । ಸಂಕರ್ಷಣೋ ಹಿ ಸಂಹರ್ತಾ ॥ (೪) ಪ್ರದ್ಯುಮ್ನಃ ಪರಮೇಶ್ವರಃ । ಹಿಂಕಾರ ಇತಿ ಸಂಪ್ರೋಕ್ತೋ ಹೀತಿ ಸೃಷ್ಟಿರುದೀರ್ಯತೇ । ಪ್ರಸಿದ್ಧತಾ ಹಿ ಸೃಷ್ಟಿಃ ಸ್ಯಾತ್ ॥ (೫) ಅನಿರುದ್ಧಃ ಪರೋ ವಿಭುಃ ॥ ಪ್ರತಿಹಾರ ಇತಿ ಪ್ರೋಕ್ತಃ ಸ ಹಿ ಕಾರ್ಯೇಷ್ವಿದಂ ಜಗತ್ । ಪ್ರತಿ ಪ್ರತಿಹರೇನ್ನಿತ್ಯಂ ಮೂರ್ತಿಪ್ರತಿಹೃತೇಸ್ತಥಾ ॥ ೧ ॥**

ಅ ॥ (೧) ಪ್ರಣವ (ಓಮ್)ದಿಂದ ಚೆನ್ನಾಗಿ ಗಾನಮಾಡಲ್ಪಡುವುದರಿಂದಲೂ, ನಾರಾಯಣನಿಂದ ವಾಸುದೇವ ಮೊದಲಾದ ಭಗವನ್ಮೂರ್ತಿಗಳು ಪ್ರಕಟಗಳಾಗುವುದರಿಂದಲೂ ನಾರಾಯಣನು ಉದ್ಗೀಥನೆನಿಸುತ್ತಾನೆ. (೨) ಸರ್ವೋತ್ತಮನಾದ ವಾಸುದೇವನು ಪ್ರಥಮಾವತಾರ ಸ್ವರೂಪನಾದುದರಿಂದ ಪ್ರಸ್ತಾವನೆನಿಸುತ್ತಾನೆ. (೩) ಸಂಕರ್ಷಣನು ಸಂಹಾರಕನಾದುವರಿಂದ ನಿಧನನೆನ್ನಿಸುತ್ತಾನೆ. (೪)ಸರ್ವೋತ್ತಮನಾದ ಪ್ರದ್ಯುಮ್ನನು ಸೃಷ್ಟಿ ಮಾಡತಕ್ಕವನಾಮುದರಿಂದ ಹಿಂಕಾರನೆನಿಸುತ್ತಾನೆ. ಹಿ ಎಂಬುದಕ್ಕೆ ಸೃಷ್ಟಿಯೆಂಬ ಅರ್ಥವು ಪ್ರಸಿದ್ಧವು. (೫) ಸರ್ವೋತ್ತಮನಾದ ಅನಿರುದ್ಧನು ಪ್ರತಿಕಾರ್ಯಗಳಲ್ಲಿಯೂ ನಿಯಮಿಸಿ ಜಗತ್ತನ್ನು ರಕ್ಷಿಸುವುದರಿಂದಲೂ, ತನ್ನ ಮೂರ್ತಿಗಳನ್ನು ತನ್ನಲ್ಲಿ ಏಕೀಕರಿಸುವುದರಿಂದಲೂ ಪ್ರತಿಹಾರಃ ಎನಿಸುತ್ತಾನೆ. ॥ ೧ ॥

**ಪೀ**—ಹಿಂದೆ **ಹೇಳಿದ**ಪ್ರಕಾರ ಶ್ರೀಹರಿಗೆ ಹಿಂಕಾರ ಮೊದಲಾದ **ಹೆಸರು** ಯುಕ್ತವಾಗಬಹುದು. ಆದರೆ **ಪೃಥಿವೀ ಹಿಂಕಾರಃ** ಇತ್ಯಾದಿಗಳಲ್ಲಿ ಪೃಥಿವಿಯು ಹಿಂಕಾರವಾಗುತ್ತದೆ **ಹಿಂಕಾರಃ**, ಇದು ಮೊದಲಾದುದು **ಹೇಳಿದ್ದು** ಹೇಗೆ **ಕೂಡುತ್ತದೆ** ಎಂದರೆ—

**ಭಾ. ॥ (೧) ತೇ ಪೃಥಿವ್ಯಾದಿಷು ಸದಾ ತನ್ನಾಮಾನಃ ಪ್ರತಿಷ್ಠಿತಾಃ । ಪೃಥಿವೀತ್ಯಾದಿ-ಶಬ್ದಾರ್ಥಾಸ್ತೇ ಹಿ ಮುಖ್ಯತ ಈರಿತಾಃ ॥ ತತ್ಸಂಬಂಧಾತ್ತದರ್ಥತ್ವಂ ಪೃಥಿವ್ಯಾದೇರಮು-ಖ್ಯತಃ । ಪ್ರಥನಾದೇವ ಸಸ್ಯಾದೇಃ ಪೃಥಿವೀತ್ವಮುದಾಹೃತಂ ॥ (೨) ಅಗ್ನಿತ್ವಮದನಾ-ಚ್ಚೈವ ಹ್ಯಂತರೀಕ್ಷಣಯೋಗತಃ । ಅಭಾವಾದ್ವ್ಯವಧಾನಸ್ಯ ತ್ವಂತರಿಕ್ಷಮಿತೀರ್ಯತೇ ॥ ಆದಾನಾದಾಯುಷಶ್ಚೈವ (ಷಾಂ ಚೈವ) ಸ ಆದಿತ್ಯ ಉದೀರಿತಃ । ದ್ಯೌಃ ಕ್ರೀಡಾಕಾರಣತ್ವಾ-ಚ್ಚ ತತ್ಸರ್ವಂ ಹಿ ಪರೇ ಹರೌ ॥ ಇತಿ ಚ ॥ ೨ ॥**

ಅ॥ (೧) ಪ್ರದ್ಯುಮ್ನ ಮೊದಲಾದ ಭಗವದ್ರೂಪಗಳು ಸದಾ ಪ್ರಥಿವ್ಯಾದಿಗಳಲ್ಲಿ ನಿಯಾಮಕಗಳಾಗಿದ್ದು ಸಸ್ಯ ಮೊದಲಾದವುಗಳನ್ನು ಸಮೃದ್ಧಿಮಾಡುವುದರಿಂದ ಅವುಗಳಿಗೆ ಪೃಥಿವೀ ಮೊದಲಾದ ನಾಮಗಳು. ಆದಕಾರಣ ಆ ಪ್ರದ್ಯುಮ್ನಾದಿಗಳೇ ಮುಖ್ಯವಾಗಿ ಪೃಥಿವೀ ಇತ್ಯಾದಿ ನಾಮಗಳಿಂದ ಹೇಳಲ್ಪಡುತ್ತಾರೆ. ಭಗವದ್ರೂಪಗಳ ಸಂಬಂಧದಿಂದಲೇ ಪ್ರಥಿವ್ಯಾದಿಗಳಿಗೆ ಅಮುಖ್ಯವಾಗಿ ಪೃಥಿವ್ಯಾದಿ ಶಬ್ದಗಳು. ಪೃಥಿವೀ ಎಂದರೆ—ಸಸ್ಯ ಮೊದಲಾದವುಗಳನ್ನು ವೃದ್ಧಿಗೊಳಿಸುವಿಕೆ. (೨) ಶ್ರೀಹರಿಯು ಸರ್ವಭಕ್ಷಕನಾದುದರಿಂದ ಅಗ್ನಿಯೆಂದೂ, ಶರೀರದೊಳಗೆ ಇದ್ದು ತಡೆಯಿಲ್ಲದೆ ಪ್ರತ್ಯಕ್ಷವಾಗಿ ನೋಡುವುದರಿಂದ ಅಂತರಿಕ್ಷನೆಂದೂ, ಜನರ ಆಯುಷ್ಯವನ್ನೂ, ನೀರನ್ನೂ ತೆಗೆದುಕೊಳ್ಳುವುದರಿಂದ ಆದಿತ್ಯನೆಂದೂ, ಕ್ರೀಡೆಗೆ ಕಾರಣನಾದುದರಿಂದ ದ್ಯೌಃ ಎಂದೂ ಅನ್ನಿಸುತ್ತಾನೆ. ಈ ಎಲ್ಲಾ ಶಬ್ದಗಳು ಶ್ರೀಹರಿಯಲ್ಲಿ ಮುಖ್ಯಗಳು ॥ ೨ ॥

**ಭಾ. ॥ ಪಂಚಾತ್ಮಕಂ ಯೋ ಲೋಕೇಷು ಸದೋಪಾಸ್ತೇ ಹರಿಂ ಪರಂ । ಊ-ರ್ಧ್ವಾರ್ಧಃಸಂಸ್ಥಿತಾಸ್ತಸ್ಯ ಪಂಚೈವ ದಶಮೂರ್ತಯಃ ॥ ಮೋಕ್ಷಾದಿಕಮಭೀಷ್ಟಂ ಯತ್ ಕಲ್ಪಂತೇಽಸ್ಯ ಸದೈವ ಹಿ । ಇತಿ ಚ ॥ ೧, ೨, ೩ ॥ ೪—೨ ॥ ॥ ೩ ॥**

ಅ ॥ ಪ್ರದ್ಯುಮ್ನ ಮೊದಲಾದ ಐದು ರೂಪಗಳುಳ್ಳ ಶ್ರೀಹರಿಯನ್ನು ಸದಾ ಉಪಾಸನೆಮಾಡುವವನಿಗೆ ಮೇಲಿನ ಲೋಕಗಳಲ್ಲಿದ್ದ ಐದು ಭಗವದ್ರೂಪಗಳು ಕೆಳಗಿನ ಲೋಕಗಳಲ್ಲಿದ್ದ ಐದು ಭಗವದ್ರೂಪಗಳು, ಹೀಗೆ ಹತ್ತು ಭಗವನ್ಮೂರ್ತಿಗಳು ಮೋಕ್ಷ ಮೊದಲಾದ ಅಭೀಷ್ಟವನ್ನು ಕೊಡುತ್ತವೆ. ॥ ೧, ೨, ೩ ॥ ॥ ೪—೨ ॥ ॥ ೩ ॥

ಎರಡನೇ ಖಂಡವು ಮುಗಿಯಿತು.

# ೩ನೇ ಖಂಡವು

ಹೀ—ಲೋಕಗಳಲ್ಲಿ ಐದು ರೂಪವುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಬೇಕೆಂದು ಹಿಂದೆ ಹೇಳಿದರು. ಈಗ ಲೋಕವು ಉಳಿಯಬೇಕಾದರೆ ಮಳೆಯು ಆವಶ್ಯಕವಾಗಿರುವುದರಿಂದ ವೃಷ್ಟಿ (ಮಳೆ) ಯಲ್ಲಿ ಐದು ರೂಪಗಳಿಂದಿರುವ ಶ್ರೀಹರಿಯನ್ನು ಉಪಾಸನೆ ಮಾಡಬೇಕೆನ್ನುತ್ತಾರೆ—

**ಉ. ॥ ವೃಷ್ಟೌ ಪಂಚವಿಧಂ ಸಾಮೋಪಾಸೀತ ಪುರೋವಾತೋ ಹಿಂಕಾರೋ ಮೇಘೋ ಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರಃ ॥ ೧ ॥**

ಅ || ಸಾಮದಲ್ಲಿ ಸ್ತುತಿಸಲ್ಪಡತಕ್ಕ ಮಳೆಯಲ್ಲಿರುವ ಶ್ರೀಹರಿಯ ಐದು ರೂಪಗಳನ್ನುಪಾಸನೆ ಮಾಡಬೇಕು. ಪುರೋವಾತ(ಮಳೆ ಬರುವುದಕ್ಕಿಂತ ಮೊದಲಿನ ಗಾಳಿ)ದಲ್ಲಿದ್ದ ಪ್ರದ್ಯುಮ್ನನು ಹಿಂಕಾರನು. ಮೇಘಗಳ ಸಮೂಹದಲ್ಲಿರತಕ್ಕ ವಾಸುದೇವನು ಪ್ರಸ್ತಾವನು. ಮಳೆಯ ಧಾರೆಯಲ್ಲಿರತಕ್ಕ ನಾರಾಯಣನು ಉದ್ಗೀಥನು. ಮಿಂಚು ಸಿಡಿಲುಗಳಲ್ಲಿರತಕ್ಕ ಅನಿರುದ್ಧನು ಪ್ರತಿಹಾರನು. || ೧ ||

**ಉ. || ಉದ್ಗೃಹ್ಣಾತಿ ತನ್ನಿಧನಂ ವರ್ಷತಿ ಹಾಸ್ಮೈ ವರ್ಷಯತಿ ಹ ಯ ಏತದೇವಂವಿದ್ವಾನ್ ವೃಷ್ಟೌ ಪಂಚವಿಧಂ ಸಾಮೋಪಾಸ್ತೇ || ಇತಿ ತೃತೀಯಃ ಖಂಡಃ || ೪-೩ || || ೨ ||**

ಅ || ಮಳೆಯು ಕೊನೆಗೊಳ್ಳುವ ಸಮಯದಲ್ಲಿರತಕ್ಕ ಸಂಕರ್ಷಣನು ನಿಧನನು. ಹೀಗೆ ಸಾಮದಲ್ಲಿ ಸ್ತುತಿಸಲ್ಪಡತಕ್ಕ ಶ್ರೀಹರಿಯು ವೃಷ್ಟಿ ಮೊದಲಾದ ಐದು ಸ್ಥಾನಗಳಲ್ಲಿದ್ದಾನೆಂದು ತಿಳಿದು ವೃಷ್ಟಿ ಮೊದಲಾದವುಗಳಲ್ಲಿ ಐದು ರೂಪಗಳುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಿದವನಿಗೆ ಶ್ರೀಹರಿಯು ಅಭೀಷ್ಟವನ್ನು ಸುರಿಸುವನು. || ೪ — ೩ || || ೨ ||

**ಭಾ. || ಪಂಚರೂಪಂ ತು ಯೋ ವಿಷ್ಣುಂ ಪುರೋ ವಾತಾದಿಷು ಸ್ಥಿತಂ | ಉಪಾಸ್ತೇ ವೃಷ್ಟಿರಸ್ಮೈ ಸ್ಯಾದ್ವರ್ಷಯತ್ಯಸ್ಯ ಮುಕ್ತಿಗಾನ್ || ಸರ್ವಭೋಗಾಂಶ್ಚ ಭಗವಾನ್ ಪಂಚರೂಪೀ ಜನಾರ್ದನಃ | ಇತಿ ಚ || ೧, ೨ || ಇತಿ ತೃತೀಯಃ ಖಂಡಃ || ೪—೩ || || ೧ ||**

ಅ || ಪುರೋವಾತ ಮೊದಲಾದವುಗಳಲ್ಲಿರತಕ್ಕ ಐದು ರೂಪಗಳುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಿದವನಿಗೆ ಆ ಶ್ರೀಹರಿಯು ಈ ಲೋಕದಲ್ಲಿಯೂ. ಮುಕ್ತಿಯಲ್ಲಿಯೂ ಎಲ್ಲಾ ಭೋಗಗಳನ್ನು ಕೊಡುವನು || ೧, ೨ || ೪ — ೩ || || ೧ ||

**ಮೂರನೇ ಖಂಡವು ಮುಗಿಯಿತು**

## ೪ನೇ ಖಂಡವು

**ಪೀ**—ವೃಷ್ಟಿಯಲ್ಲಿ ಐದು ರೂಪಗಳುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಬೇಕೆಂದು ಹೇಳಿ ಮಳೆಯಿಂದಲೇ ನೀರು ಆಗುವುದರಿಂದ ನೀರಿನಲ್ಲಿ ಶ್ರೀಹರಿಯನ್ನುಪಾಸನೆ ಮಾಡಬೇಕೆನ್ನುತ್ತಾರೆ —

**ಉ. || ಸರ್ವಾಸ್ವಪ್ಸು ಪಂಚವಿಧಂ ಸಾಮೋಪಾಸೀತ ಮೇಘೋ ಯತ್ಸಂಪ್ಲವತೇ ಸ ಹಿಂಕಾರೋ ಯದ್ವರ್ಷತಿ ಸ ಪ್ರಸ್ತಾವೋ ಯಾಃ ಪ್ರಾಚ್ಯಃ ಸ್ಯಂದಂತೇ ಸ ಉದ್ಗೀಥೋ ಯಾಃ ಪ್ರತೀಚ್ಯಃ ಸ ಪ್ರತಿಹಾರಃ ಸಮುದ್ರೋ ನಿಧನಂ || ೧ ||**

ಅ || ನೀರಿನಲ್ಲಿರತಕ್ಕ ಐದು ರೂಪಗಳುಳ್ಳ, ಐದು ವಿಧ ಸಾಮದಲ್ಲಿ ಸ್ತುತಿಸಲ್ಪಡತಕ್ಕ ಶ್ರೀಹರಿಯನ್ನುಪಾಸನೆಮಾಡಬೇಕು. ಸಂಚರಿಸಿಕೊಂಡಿರುವ ಮೇಘದಲ್ಲಿರತಕ್ಕ ಪ್ರದ್ಯುಮ್ನನು ಹಿಂಕಾರನು. ಮಳೆ ಸುರಿಯುವುದರಲ್ಲಿರತಕ್ಕ ವಾಸುದೇವನು ಪ್ರಸ್ತಾವನು. ಪೂರ್ವಾಭಿಮುಖವಾಗಿ ಹರಿಯುವ ನದಿ

ಗಳಲ್ಲಿರತಕ್ಕ ನಾರಾಯಣನು ಉದ್ಗೀಥನು. ಪಡುಮುಖವಾಗಿ ಹರಿಯುವ ನದಿಗಳಲ್ಲಿರತಕ್ಕ ಅನಿರುದ್ಧನು ಪ್ರತಿಹಾರನು. ಸಮುದ್ರದಲ್ಲಿರತಕ್ಕ ಸಂಕರ್ಷಣನು. ನಿಧನನು. ॥ ೧ ॥

**ಉ. ॥ ನ ಹಾಪ್ಸು ಪ್ರೈತ್ಯಪ್ಸುಮಾನ್ಭವತಿ ಯ ಏತದೇವಂವಿದ್ವಾನ್ ಸರ್ವಾಸ್ವಪ್ಸು ಪಂಚವಿಧꣳ ಸಾಮೋಪಾಸ್ತೇ ॥ ಇತಿ ಚತುರ್ಥಃ ಖಂಡಃ ॥ ॥ ೨–೪ ॥ ॥ ೪ ॥**

ಅ ॥ ಶ್ರೀಹರಿಯು ಹಿಂದೆ ಹೇಳಿದ ಪ್ರಕಾರ, ಗುಣಗಳುಳ್ಳವನೆಂದು ತಿಳಿದು ನೀರಿನಲ್ಲಿ ಐದು ರೂಪಗಳುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಿದವನು ನೀರಿನಲ್ಲಿ ಮರಣ ಹೊಂದಲಾರನು. ನೀರಿನಲ್ಲಿದ್ದ ವಿಷ್ಣುವಿನ ಪೂರ್ಣಾನುಗ್ರಹವುಳ್ಳವನಾಗುತ್ತಾನೆ. ಅಂದರೆ ಮುಕ್ತನಾಗುತ್ತಾನೆ. ॥ ೪—೪ ॥ ॥ ೨ ॥

**ಭಾ. ॥ (೧) ಅಪ್ಸು ಪಂಚವಿಧೋಪಾಸೀ ಯೋ ನಾರಾಯಣವಾನ್ ಭವೇತ್ । ನ ಚಾಸ್ಯ ಮೃತಿರಪ್ಸು ಸ್ಯಾದಪ್ಸುಷದ್ಭಗವಾನ್ಹರಿಃ ॥ ಇತಿ ಚ ॥ (೨) ಅಪ್ಸು ಸ್ಥಿತನಾರಾಯಣವಾನ್ಮುಕ್ತೋ ಭವತೀತ್ಯರ್ಥಃ । ಅಪಃ ಸೂತ ಇತ್ಯಪ್ಸೂರ್ಭಗವಾನ್ । ದೀರ್ಘಲೋಪೇನಾಪ್ಸುಮಾನಿತಿ ವಾ ॥ ೧, ೨ ॥ ಇತಿ ಚತುರ್ಥಃ ಖಂಡಃ ॥ ೪–೪ ॥ ॥ ೧ ॥**

ಅ ॥ (೧) ನೀರಿನಲ್ಲಿ ಐದು ರೂಪಗಳುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಿದವನಿಗೆ ಶ್ರೀನಾರಾಯಣನ ಅನುಗ್ರಹವಾಗುತ್ತದೆ. ಈತನಿಗೆ ನೀರಿನಲ್ಲಿ ಮರಣವಾಗಲಾರದು. ಶ್ರೀಹರಿಯು ನೀರಿನಲ್ಲಿದ್ದ ಪ್ರಯುಕ್ತ ಅಪ್ಸುಮಾನ್ ಎನ್ನಿಸುತ್ತಾನೆ. (೨) ನೀರಿನಲ್ಲಿದ್ದ ನಾರಾಯಣನ ಪೂರ್ಣಾನುಗ್ರಹ ಉಳ್ಳವನಾಗುತ್ತಾನೆ. ಅಂದರೆ ಮುಕ್ತನಾಗುತ್ತಾನೆ. ನೀರನ್ನು ಸೃಷ್ಟಿಸಿದಪ್ರಯುಕ್ತ ಅಪ್ಸೂಃ=ಶ್ರೀನಾರಾಯಣನು. ಅಪ್ಸೂಃ ಎಂಬುವಲ್ಲಿದ್ದ ದೀರ್ಘಕ್ಕೆ ಲೋಪ ಬಂದು ಅಪ್ಸುಮಾನ್ ಎಂದಾಗಿದೆ. ॥ ೧ - ೨೨ ॥ ೪—೪ ॥ ॥ ೧ ॥

ನಾಲ್ಕನೇ ಖಂಡವು ಮುಗಿಯಿತು.

## ೫ನೇ ಖಂಡವು

**ಉ. ॥ ಋತುಷು §ಪಂಚವಿಧꣳ ಸಾಮೋಪಾಸೀತ ವಸಂತೋ ಹಿಂಕಾರೋ ಗ್ರೀಷ್ಮಃ ಪ್ರಸ್ತಾವೋ ವರ್ಷಾ ಉದ್ಗೀಥಃ ಶರತ್ಪ್ರತಿಹಾರೋ ಹೇಮಂತೋ ನಿಧನಂ ॥ ೧ ॥**

ಅ ॥ ಐದು ಋತುಗಳಲ್ಲಿ ಇರತಕ್ಕ ಋತು ಎಂದು ಹೆಸರುಳ್ಳ, ಐದು ರೂಪಗಳುಳ್ಳ ಶ್ರೀಹರಿಯನ್ನು ಐದು ಸಾಮಗಳಿಂದ ವರ್ಣಿಸಲ್ಪಡತಕ್ಕವನೆಂದು ಉಪಾಸನೆಮಾಡಬೇಕು. ವಸಂತಋತುವಿನಲ್ಲಿರತಕ್ಕ ವಸಂತ ಎಂದು ಹೆಸರುಳ್ಳ ಪ್ರದ್ಯುಮ್ನನು ಹಿಂಕಾರನು. ಗ್ರೀಷ್ಮಋತುವಿನಲ್ಲಿದ್ದ ಗ್ರೀಷ್ಮ ಎನ್ನಿಸಿಕೊಂಡ ವಾಸುದೇವನು ಪ್ರಸ್ತಾವನು. ವರ್ಷ ಋತುವಿನಲ್ಲಿರತಕ್ಕ ವರ್ಷ ಎನ್ನಿಸಿಕೊಂಡ ನಾರಾಯಣನು

§ ಹೇಮಂತಶಿಶಿರಗಳನ್ನು ಏಕೀಕರಿಸಿಕೊಂಡು ಐದು ಋತುಗಳೆಂದು ಹೇಳಿದ್ದು.

ಉದ್ಗೀಥನು. ಶರದೃತುವಿನಲ್ಲಿರತಕ್ಕ ಶರತ್ ಎಂದು ಹೆಸರುಳ್ಳ ಅನಿರುದ್ಧನು ಪ್ರತಿಹಾರನು. ಹೇಮಂತ ಋತುವಿನಲ್ಲಿರತಕ್ಕ ಹೇಮಂತ ಎನ್ನಿಸಿಕೊಂಡ ಸಂಕರ್ಷಣನು ನಿಧನನು ॥ ೧ ॥

**ಉ. ॥ ಕಲ್ಪಂತೇ ಹಾಸ್ಮಾ ಋತವ ಋತುವಮಾನ್ಭವತಿ ಯ ಏತದೇವಂವಿದ್ವಾನೃತುಷು ಪಂಚವಿಧಂ ಸಾಮೋಪಾಸ್ತೇ ॥ ಇತಿ ಪಂಚಮಃ ಖಂಡಃ॥ ॥ ೪ ೫ ॥ ॥ ೨ ॥**

ಅ ॥ ಹೀಗೆ ತಿಳಿದುಕೊಂಡು ಋತುಗಳಲ್ಲಿ ಐದು ರೂಪಗಳುಳ್ಳ ಶ್ರೀಹರಿಯನ್ನು ಪಾಸನೆ ಮಾಡಿದವನಿಗೆ ಋತುಗಳಲ್ಲಿರತಕ್ಕ ಐದು ರೂಪಗಳುಳ್ಳ ಶ್ರೀಹರಿಯು ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುತ್ತಾನೆ, ಋತುಗಳಲ್ಲಿರತಕ್ಕ ವಿಷ್ಣುವು ರಕ್ಷಿಸುತ್ತಿರುತ್ತಾನೆ. ॥ ೪—೫ ॥ ॥ ೨ ॥

**ಭಾ. ॥ (೧) ಹೇಮಂತಶಿಶಿರಯೋರೈಕ್ಯೇನ ಪಂಚತ್ವಂ ॥ (೨) ಋತುನಾಮಾನವೃತುಗವೃತುತ್ವಾದೃತುನಾಮಕಂ । ಇತ್ಯುಪಾಸೀತ ಯೋ ವಿಷ್ಣುಂ ಪಂಚಾತ್ಮಾನಮಮುಷ್ಯ ಹಿ ॥ ಮೋಕ್ಷಾದೀನ್ ಕಲ್ಪತೇ ಚಾಸ್ಯ ಋತುಸಂಸ್ಥೋ ಜನಾರ್ದನಃ । ರಕ್ಷ್ಯತ್ವಾತ್ತೇನ ತದ್ವಾಂಶ್ಚ ಸದೈವ ಸ್ಯಾದುಪಾಸಕಃ ॥ ಇತಿ ಚ ॥ (೩) ವಾಸಸ್ಯ ಸುಖಕಾರಿತ್ವಾದ್ವಸಂತಃ ಪುರುಷೋತ್ತಮಃ । ನೀರಾದೇರ್ಗ್ರಹಣಾದ್ಗ್ರೀಷ್ಮೋ ವರ್ಷಣಾದ್ವರ್ಷ ಉಚ್ಯತೇ ॥ ಶಂ ರಾತೀತಿ ಶರತ್ಪ್ರೋಕ್ತೋ ಹೇಮಂತೋ ಹಿಮಕಾರಣಾತ್ ॥ ಇತಿ ಚ ॥ ೧, ೨ ॥ ಇತಿ ಪಂಚಮಃ ಖಂಡಃ ॥ ೪—೫ ॥ ॥ ೧ ॥**

ಅ ॥ (೧) ಹೇಮಂತಋತು, ಶಿಶಿರಋತುಗಳಿಗೆ ಐಕ್ಯವನ್ನು ಇಟ್ಟುಕೊಂಡು ಐದು ಋತುಗಳೆಂದು ಹೇಳಿದ್ದು. (೨) ವಸಂತಾದಿ ಋತುಗಳಿಗೆ ಋತುತ್ವವನ್ನು ಕೊಡುವುದರಿಂದ ಅಥವಾ ಎಲ್ಲಾ ಶಾಸ್ತ್ರಗಳಲ್ಲಿಯೂ ಸ್ತುತಿಸಲ್ಪಡುವವನಾದುದರಿಂದ ಋತು ಎಂದು ಹೆಸರುಳ್ಳ, ಋತುಗಳಲ್ಲಿರುವ ಐದು ರೂಪಗಳುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಿದವನಿಗೆ ಋತುಗಳ ಅಭಿಮಾನಿಯಾದ ಶ್ರೀಹರಿಯು ಮೋಕ್ಷ ಮೊದಲಾದ ಪುರುಷಾರ್ಥಗಳನ್ನು ಕೊಡುತ್ತಾನೆ ಋತುಗಳಲ್ಲಿದ್ದ ಶ್ರೀಹರಿಯನ್ನುಪಾಸನೆ ಮಾಡುವವನು ಆ ಶ್ರೀಹರಿಯಿಂದ ರಕ್ಷಿಸಲ್ಪಡುವುದರಿಂದ ಋತುಮಾನ್ ಎನ್ನಿಸುತ್ತಾನೆ. (೩) ಶ್ರೀಹರಿಯು ವಾಸಮಾಡಲಿಕ್ಕೆ ಸುಖವನ್ನುಂಟುಮಾಡುವುದರಿಂದ ವಸಂತನೆಂದೂ, ನೀರು ಮೊದಲಾದುದನ್ನು ಒಣಗಿಸುವುದರಿಂದ ಗ್ರೀಷ್ಮನೆಂದೂ ಮಳೆಸುರಿಸುವುದರಿಂದ ವರ್ಷನೆಂದೂ, ಸುಖಕೊಡುವವನಾದುದರಿಂದ ಶರತ್ ಎಂದೂ, ಶೈತ್ಯವನ್ನು ಕೊಡುವನಾದುದರಿಂದ ಹೇಮಂತನೆಂದೂ ಅನ್ನಿಸುತ್ತಾನೆ. ॥ ೧. ೨ ॥ ೪—೫ ॥ ॥ ೧ ॥

**ಐದನೇ ಖಂಡವು ಮುಗಿಯಿತು.**

## ೬ನೇ ಖಂಡವು

**ಪೀ—**ಆರು ಋತುಗಳು ಸಮೃದ್ಧಗಳಾದರೆ ಪಶುಗಳೂ ಸುಖಿಗಳಾಗಿರುವುದರಿಂದ ಪಶುಗಳಲ್ಲಿ ಶ್ರೀಹರಿಯನ್ನು ಉಪಾಸನೆ ಮಾಡಬೇಕೆನ್ನುತ್ತಾರೆ—

**ಉ. ॥ ಪಶುಷು ಪಂಚವಿಧꣳ ಸಾಮೋಪಾಸೀತಾಜಾ ಹಿಂಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾಃ ಪ್ರತಿಹಾರಃ ಪುರುಷೋ ನಿಧನಂ ಭವಂತಿ ಹಾಸ್ಯ ಪಶವಃ ಪಶುಮಾನ್ಭವತಿ ॥ ೧ ॥**

**ಅ ॥** ಐದುವಿಧ ಪಶುಗಳಲ್ಲಿರತಕ್ಕ ಐದು ಸಾಮಗಳಿಂದ ವರ್ಣಿಸಲ್ಪಡತಕ್ಕ ಐದು ರೂಪಗಳುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಬೇಕು. ಆಡುಗಳು ಹಿಂಕಾರವು, ಕುರಿಗಳು ಪ್ರಸ್ತಾವವು, ಗೋವುಗಳು ಉದ್ಗೀಥವು ಕುದುರೆಗಳು ಪ್ರತಿಹಾರವು, *ಪುರುಷನು ನಿಧನನು. ॥ ೧ ॥

**ಉ. ॥ ಯ ಏತದೇವಂವಿದ್ವಾನ್ ಪಶುಷು ಪಂಚವಿಧꣳ ಸಾಮೋಪಾಸ್ತೇ ॥ ಇತಿ ಷಷ್ಠಃ ಖಂಡಃ ॥ ೪-೬ ॥ ॥ ೨ ॥**

**ಅ ॥** ಹೀಗೆ ತಿಳಿದವನಿಗೆ ಪಶುಗಳಲ್ಲಿ ಅಂತರ್ಗತನಾದ ಶ್ರೀಹರಿಯು ಪಶುಗಳ ಸಮೃದ್ಧಿಯನ್ನು ಮಾಡುತ್ತಾನೆ. ಪಶುಗಳಲ್ಲಿ ಇರುವ ಶ್ರೀಹರಿಯು ಪೂರ್ಣ ಅನುಗ್ರಹವನ್ನು ಮಾಡುತ್ತಾನೆ ॥ ೪-೬ ॥ ೨ ॥

**ಭಾ. ॥ (೧) ಪಾಲನಾತ್ಸುಖಕಾರಿ(ರೂಪ)ತ್ವಾತ್ಪಶುನಾಮಾ ಜನಾರ್ದನಃ । ಮುಕ್ತಸ್ತದ್ವಾನ್ಭವತ್ಯೇವ ಪಶುಷೂಪಾಸಕೋ ಹರೇಃ ॥ ಇತಿ ಚ ॥ (೨) ಯಜ್ಞೇನಾಂಚನಹೇತುತ್ವಾದಜಸ್ಥೋ ಭಗವಾನಜಃ । ಅವಿಸ್ಥಸ್ತ್ವವಿರೇವೋಕ್ತ ಊರ್ಣಯಾಶೀತತೋಽವನಾತ್ ॥ ಗೌಶ್ಚ ಸದ್ಗತಿಹೇತುತ್ವಾದ್ಗೋಸ್ಥಃ ಸ ಪುರುಷೋತ್ತಮಃ । ಅಶ್ವಶ್ಚೈವಾಶುಗಂತೃತ್ವಾತ್ಪುರುಷಃ ಪೂರ್ತಿಹೇತುತಃ ॥ ಇತಿ ಚ ॥ (೩) ಭವಂತಿ ಹಾಸ್ಯ ಪಶವ ಇತಿ ಪ್ರಸಿದ್ಧಪಶವ ಏವ । ಅಜಾ ಇತ್ಯಾದಿಬಹುವಚನಂ ಬಹುರೂಪತ್ವಾದ್ಭಗವತಃ ॥ ೧, ೨ ॥ ಇತಿ ಷಷ್ಠಃ ಖಂಡಃ ॥ ೪-೬ ॥ ॥ ೧ ॥**

**ಅ ॥** (೧) ಶ್ರೀಹರಿಯು ಜಗತ್ತನ್ನು ರಕ್ಷಿಸುವವನೂ ಸುಖಸ್ವರೂಪನೂ ಆದುದರಿಂದ ಪಶು ಎನ್ನಿಸುತ್ತಾನೆ. ಪಶುಗಳಲ್ಲಿ ಶ್ರೀಹರಿಯನ್ನುಪಾಸನೆಮಾಡಿದವನು ಪಶುಗಳಲ್ಲಿ ಅಂತರ್ಗತನಾದ ಶ್ರೀಹರಿಯ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ ಮುಕ್ತನಾಗುತ್ತಾನೆ. (೨) ಯಾಗದಿಂದ ಶ್ರೀಹರಿಯನ್ನು ಪೂಜಿಸಿದರೆ ಸದ್ಗತಿಯನ್ನು ಕೊಡುವುದರಿಂದ ಆಡಿನಲ್ಲಿದ್ದ ಶ್ರೀಹರಿಯು **ಅಜಃ** ಎಂದೂ. ಕಂಬಳ ಮೊದಲಾದವುಗಳಿಂದ ಶೈತ್ಯದಿಂದ ಸರ್ವರನ್ನು ಕಾಪಾಡುವ ಕಾರಣ ಕುರಿಯಲ್ಲಿದ್ದ ಶ್ರೀಹರಿಯು **ಅವಿಃ** ಎಂದೂ, ಸದ್ಗತಿಗೆ ಕಾರಣನಾದುದರಿಂದ ಗೋವುಗಳಲ್ಲಿದ್ದ ಶ್ರೀಹರಿಯು **ಗೌಃ** ಎಂದೂ, ಶೀಘ್ರ ಗಮನಶಕ್ತಿಯುಳ್ಳವನಾದುದರಿಂದ ಕುದುರೆಗಳಲ್ಲಿದ್ದ ಶ್ರೀಹರಿಯು **ಅಶ್ವಃ** ಎಂದೂ, ಇಷ್ಟಸಮೃದ್ಧಿಗೆ ಕಾರಣನಾದುದರಿಂದ ಪುರುಷರಲ್ಲಿರತಕ್ಕ ಶ್ರೀಹರಿಯು **ಪುರುಷ**ನೆಂದೂ ಅನ್ನಿಸುತ್ತಾನೆ. (೩) **ಭವಂತಿ ಹಾಸ್ಯ ಪಶವ** ಎಂಬುವಲ್ಲಿ ಪ್ರಸಿದ್ಧ ಪಶುಗಳನ್ನೇ ಇಟ್ಟುಕೊಳ್ಳಬೇಕು. (೪) (ಶ್ರೀಹರಿಯೊಬ್ಬನೇ ಆದುದರಿಂದ **ಅಜಾಃ** ಮೊದಲಾದ ಬಹುವಚನವು ಹೇಗೆ ಕೂಡುತ್ತದೆ ಎಂದರೆ—) ಶ್ರೀಹರಿಗೆ ಅನಂತಾನಂತರೂಪಗಳು ಇದ್ದ ಕಾರಣ **ಅಜಾಃ ಅವಯಃ** ಮೊದಲಾದ ಬಹುವಚನವು ಕೂಡುತ್ತದೆ. ॥ ೧, ೨ ॥ ೪—೬ ॥ ॥ ೧ ॥

**ಆರನೇ ಖಂಡವು ಮುಗಿಯಿತು.**

*ಪಶುಗಳಲ್ಲಿ ಪುರುಷನು ಸೇರದೆ ಇದ್ದ ಕಾರಣ ಪಶುಪ್ರಕರಣದಲ್ಲಿ ಪುರುಷಃ ನಿಧನಂ ಎಂದು ಹೇಳಿದ್ದು ಹೇಗೆ ಕೂಡತಕ್ಕದೆಂದರೆ—ಯಾಗ ವಿಶೇಷದಲ್ಲಿ ಪುರುಷನನ್ನೂ ಪಶುವನ್ನಾಗಿ ಮಾಡುವುದರಿಂದ ಪುರುಷೋ ನಿಧನಂ ಎಂದು ಹೇಳಿದ್ದು

## ೭ನೇ ಖಂಡವು

ಹೀ ಪಶುಗಳಲ್ಲಿ ಶ್ರೀಹರಿಯುನ್ನುಪಾಸನೆ ಮಾಡಬೇಕೆಂದು ಹೇಳಿ ಪಶುಪುರುಷರಲ್ಲಿ ಇಂದ್ರಿಯುಗಳು ಇದ್ದಕಾರಣ ಆ ಇಂದ್ರಿಯಗಳಲ್ಲಿ ಐದು ರೂಪಗಳುಳ್ಳ ಶ್ರೀಹರಿಯುನ್ನು ಉಪಾಸನೆ ಮಾಡಬೇಕೆಂದು ಈಗ ಹೇಳುತ್ತಾರೆ

**ಉ. ॥ ಪ್ರಾಣೇಷು ಪಂಚವಿಧಂ ಪರೋವರೀಯಃ ಸಾಮೋಪಾಸೀತ ಪ್ರಾಣೋ ಹಿಂಕಾರೋ ವಾಕ್ಪ್ರಸ್ತಾವಶ್ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರೋ ಮನೋ ನಿಧನಂ ಪರೋವರೀಯಾಂಸಿ ನ್ಯೈತಾನಿ ॥ ೧ ॥**

ಅ ॥ ಇಂದ್ರಿಯಗಳಲ್ಲಿ ಉತ್ತಮೋತ್ತಮನಾದ ಐದು ರೂಪಗಳುಳ್ಳ ಶ್ರೀಹರಿಯುನ್ನು ಉಪಾಸನೆ ಮಾಡಬೇಕು. ಶ್ವಾಸವಾಯುವಿನಲ್ಲಿದ್ದ ಪ್ರದ್ಯುಮ್ನನು ಹಿಂಕಾರನು, ವಾಗಿಂದ್ರಿಯದಲ್ಲಿದ್ದ ವಾಸುದೇವನು ಪ್ರಸ್ತಾವನು, ಕಣ್ಣಿನಲ್ಲಿದ್ದ ನಾರಾಯಣನ ಉದ್ಗೀಥನು, ಕಿವಿಯಲ್ಲಿದ್ದ ಅನಿರುದ್ಧನು ಪ್ರತಿಹಾರನು, ಮನಸ್ಸಿನಲ್ಲಿದ್ದ ಸಂಕರ್ಷಣನು ನಿಧನನು. ॥ ೧ ॥

**ಉ. ॥ ಪರೋವರೀಯೋ ಹಾಸ್ಯ ಭವತಿ ಪರೋವರೀಯಸೋ ಹ ಲೋಕಾನ್ ಜಯತಿ ಯ ಏತದೇವಂವಿದ್ವಾನ್ಪ್ರಾಣೇಷು ಪಂಚವಿಧಂ ಪರೋವರೀಯಃ ಸಾಮೋಪಾಸ್ತ ಇತಿ ತು ಪಂಚವಿಧಸ್ಯ ॥ ಇತಿ ಸಪ್ತಮಃ ಖಂಡಃ ॥ ॥ ೪–೭ ॥ ॥ ೨ ॥**

ಅ ॥ ಈ ಎಲ್ಲಾ ರೂಪಗಳೂ ಅತ್ಯುತ್ತಮೋತ್ತಮೋತ್ತಮಗಳು ಹೀಗೆ ತಿಳಿದುಕೊಂಡು ಇಂದ್ರಿಯಗಳಲ್ಲಿ ಐದು ರೂಪಗಳುಳ್ಳ ಶ್ರೀಹರಿಯುನ್ನ ಉಪಾಸನೆ ಮಾಡಿದವನನ್ನು ಶ್ರೀಹರಿಯು ರಕ್ಷಿಸುತ್ತಿರುತ್ತಾನೆ. ಆ ಉಪಾಸಕನು ಶ್ರೇಷ್ಠಗಳಾದ ವೈಕುಂಠ ಅನಂತಾಸನ ಶ್ವೇತದ್ವೀಪಾಖ್ಯ ಲೋಕಗಳನ್ನು ಹೊಂದುತ್ತಾನೆ ಹೀಗೆ ಐದು ರೂಪಗಳುಳ್ಳ ಶ್ರೀಹರಿಯ ಉಪಾಸನೆಯನ್ನು ಹೇಳಿರತ್ತಾರೆ ॥ ೪–೭ ॥ ೨ ॥

**ಭಾ. ॥ (೧) ಪರಸ್ಮಾದುತ್ತಮಂ ಪ್ರೋಕ್ತಂ ಪರೋ ಇತಿ ತತಃ ಪರಂ । ಪರೋವರಂ ಪರಂ ತಸ್ಮಾತ್ಪ್ರೋಕ್ತಂ ಪಾ(ಪ)ರೋವರೀಯಕಂ ॥ ಪರೋವರೀಯಾಂಸ್ಯೇತಾನಿ ವಿಷ್ಣೋ ರೂಪಾಣಿ ಸರ್ವಶಃ । ತೇಷಾಂ ವಿಶೇಷೋ ನ್ಯೈವಾಸ್ತಿ ಸದಾ ತಾನಿ ಸಮಾನಿ ಹಿ ॥ ಅತ್ಯುತ್ತಮೋತ್ತಮಾನ್ಯೇತಾನ್ಯನ್ಯಸ್ಮಾತ್ಸರ್ವತೋಽಪಿ ತು । ಇತಿ ಚ ॥ (೨) ಪ್ರಾಣೋ ನೇತೃತ್ವತೋ ವಿಷ್ಣುರ್ವಾಕ್ಸರ್ವವಚನಾತ್ಸದಾ । ಚಕ್ಷುಶ್ಚ ದರ್ಶನಾನ್ನಿತ್ಯಂ ಶ್ರೋತ್ರಂ ಶ್ರವಣಹೇತುತಃ ॥ ಮನೋ ಮಂತೃತ್ವತಶ್ಚಾಸ್ಯ ಹ್ಯೇಕ ಏವ ತು ಪಂಚಧಾ । ಇತಿ ಚ ॥ (೩) ಪರೋವರೀಯೋ ಬ್ರಹ್ಮಾಸ್ಯ ಭವತಿ ಸರ್ವಾಪೇಕ್ಷಿತದಾತೃತ್ವಾತ್ ॥ ೧, ೨ ॥ ಇತಿ ಸಪ್ತಮಃ ಖಂಡಃ ॥ ೪–೭ ॥ ॥ ೧ ॥**

ಅ ॥ (೧) ಗರುಡ ಶೇಷಾದಿಗಳಿಂದುತ್ತಮಳಾದ ಸರಸ್ವತೀ ಭಾರತಿಯರಿಂದ ಉತ್ತಮರಾದ ವಾಯುದೇವರು ಪರೋ ಎಂದೂ. ಅವರಿಂದುತ್ತಮಳಾದ ಲಕ್ಷ್ಮೀದೇವಿಯು ಪರೋವರ ಎಂದೂ, ಅವಳಿಂದು

ತ್ತಮನಾದ ಶ್ರೀಹರಿಯು ಪಾರೋವರೀಯಕನೆನ್ನಿಸುತ್ತಾನೆ. ಶ್ರೀಹರಿಯ ಎಲ್ಲಾ ರೂಪಗಳೂ ಉತ್ತಮೋತ್ತಮೋತ್ತಮಗಳು, ಅವುಗಳಿಗೆ ವ್ಯತ್ಯಾಸವಿಲ್ಲ. ಎಲ್ಲಾ ರೂಪಗಳೂ ಯಾವಾಗಲೂ ಸಮಾನಗಳೇ ಆಗಿವೆ. ಇವುಗಳು ಬೇರೆ ಎಲ್ಲಾ ವಸ್ತುಗಳಿಗಿಂತಲೂ ಎಲ್ಲರಿಗಿಂತಲೂ ಅತ್ಯುತ್ತಮೋತ್ತಮಗಳು (೨) ವಿಷ್ಣುವು ಪ್ರಮಾಣಸಿದ್ಧವಾದ ಎಲ್ಲಾ ಜಗತ್ತನ್ನು ಪ್ರೇರೇಪಿಸುವುದರಿಂದ ಪ್ರಾಣನೆಂದೂ, ಸರ್ವರಿಗೆ ಮಾತನಾಡುವ ಶಕ್ತಿಯನ್ನು ಕೊಡುವುದರಿಂದ ವಾಕ್ ಎಂದೂ, ನೋಡುವ ಶಕ್ತಿಯನ್ನು ಕೊಡುವುದರಿಂದ ಚಕ್ಷುಃ ಎಂದೂ, ಕೇಳುವ ಶಕ್ತಿಯನ್ನು ಕೊಡುವುದರಿಂದ ಶ್ರೋತ್ರನೆಂದೂ, ತಿಳಿದುಕೊಳ್ಳುವ ಶಕ್ತಿಯನ್ನು ಕೊಡುವುದರಿಂದ ಮನಃ ಎಂದೂ ಒಬ್ಬನೇ ಐದು ಶಬ್ದಗಳಿಂದ ಹೇಳಲ್ಪಡುತ್ತಾನೆ. (೩) ಸರ್ವೋತ್ತಮನಾದ ಶ್ರೀಹರಿಯು ಉಪಾಸಕನಿಗೆ ಅಪೇಕ್ಷಿಸಿದ್ದೆಲ್ಲವನ್ನೂ ಕೊಟ್ಟು ಉಪಾಸಕನನ್ನು ರಕ್ಷಿಸುತ್ತಾನೆ ॥ ೪-೭ ॥ ॥ ೧ ॥

**ಏಳನೇ ಖಂಡವು ಮುಗಿಯಿತು.**

---

## ೮ನೇ ಖಂಡವು

**ಉ. ॥ ಅಥ ಸಪ್ತವಿಧಸ್ಯ ವಾಚಿ ಸಪ್ತವಿಧꣳ ಸಾಮೋಪಾಸೀತ ಯತ್ಕಿಂಚ ವಾಚೋ ಹುಮಿತಿ ಸ ಹಿಂಕಾರೋ ಯತ್ಪ್ರೇತಿ ಸ ಪ್ರಸ್ತಾವೋ ಯದೇತಿ ಸ ಆದಿಃ ॥ ೧ ॥**

ಅ ॥ ಐದು ರೂಪಗಳುಳ್ಳ ಶ್ರೀಹರಿಯನ್ನುಪಾಸನೆ ಮಾಡಬೇಕೆಂದು ಹೇಳಿ ಈಗ ಏಳು ವಿಧ ಸಾಮಗಳಿಂದ ಸ್ತುತಿಸಲ್ಪಡತಕ್ಕ ಏಳು ರೂಪಗಳುಳ್ಳ ಶ್ರೀಹರಿಯ ಉಪಾಸನೆಯು ಹೇಳಲ್ಪಡುತ್ತದೆ. ಏಳು ವಿಧ ಶಬ್ದಸಮೂಹದಲ್ಲಿ ಇರತಕ್ಕ ಏಳು ರೂಪಗಳುಳ್ಳ ಏಳು ವಚನಗಳಿಂದ ಸ್ತುತಿಸಲ್ಪಡತಕ್ಕ ಶ್ರೀಹರಿಯನ್ನುಪಾಸನೆಮಾಡಬೇಕು. ಪ್ರದ್ಯುಮ್ನನು ಬುಡದಲ್ಲಿ ಹುಂಕಾರವುಳ್ಳ ವಾಕ್ಯದಿಂದ ತಿಳಿಯಲ್ಪಡುತ್ತಾನೆ. ವಾಸುದೇವನು ಆದಿಯಲ್ಲಿ **ಪ್ರ** ಶಬ್ದವಿರುವ ವಾಕ್ಯದಿಂದ ವರ್ಣಿಸಲ್ಪಡತಕ್ಕವನು. ಕಲ್ಪದ ಆದಿಗೆ ಕಾರಣನಾದುದರಿಂದ ಆದಿ ಎನ್ನಿಸಿಕೊಂಡ **ದಿ** ಎಂಬ ಸಾಮದಿಂದ ಸ್ತುತಿಸಲ್ಪಡತಕ್ಕ ವರಾಹರೂಪಿ ಶ್ರೀಹರಿಯು ಬುಡದಲ್ಲಿ ಆಕಾರ ಇದ್ದ ವಾಕ್ಯದಿಂದ ಸ್ತುತಿಸಲ್ಪಡತಕ್ಕವನು.

**ವಿ ॥ (1) ಹುಂ** ಎಂಬುದನ್ನು ಆರಂಭಿಸಿ **ಪ್ರ** ಶಬ್ದವು ಇರುವ ವಾಕ್ಯದ ತನಕ ಹಿಂಕಾರಾರ್ಥನಾದ ಪ್ರದ್ಯುಮ್ನನನ್ನು ಹೇಳುತ್ತದೆಂದು ಉಪಾಸನೆ ಮಾಡಬೇಕು. (2) ಹಾಗೆಯೇ **ಪ್ರ** ಎಂಬುದನ್ನು ಆರಂಭಿಸಿ **ಆ** ಎಂಬ ಅಕ್ಷರಪರ್ಯಂತ ವಾಕ್ಯವು ಪ್ರಸ್ತಾವಾರ್ಥನಾದ ವಾಸುದೇವನನ್ನು ತಿಳಿಸುತ್ತದೆಂದು ಉಪಾಸನೆ ಮಾಡಬೇಕು. ಹೀಗೆಯೇ ಮುಂದೆಯೂ ಅಭಿಪ್ರಾಯ ಇಟ್ಟುಕೊಳ್ಳಬೇಕು. ॥ ೧ ॥

**ಉ. ॥ ಯದುದಿತಿ ಸ ಉದ್ಗೀಥೋ ಯತ್ಪ್ರತೀತಿ ಸ ಪ್ರತಿಹಾರೋ ಯದುಪೇತಿ ಸ ಉಪದ್ರವೋ ಯನ್ನೀತಿ ತನ್ನಿಧನಂ ॥ ೨ ॥**

ಅ ॥ ನಾರಾಯಣನು ಬುಡದಲ್ಲಿ **ಉತ್** ಶಬ್ದವಿರುವ ವಾಕ್ಯದಿಂದಲೂ, ಅನಿರುದ್ಧನು ಬುಡದಲ್ಲಿ **ಪ್ರತಿ** ಶಬ್ದವಿರುವ ವಾಕ್ಯದಿಂದಲೂ, ದುಷ್ಟರಿಗೆ ಕೆಡಕುಮಾಡುವುದರಿಂದ ಉಪದ್ರವನೆನಿಸಿಕೊಂಡ ಉಪದ್ರವ ಎಂಬ ಸಾಮದಲ್ಲಿ ಸ್ತುತಿಸಲ್ಪಡತಕ್ಕ ನರಸಿಂಹನು ಬುಡದಲ್ಲಿ **ಉಪ** ಶಬ್ದವಿರುವ ವಾಕ್ಯದಿಂದಲೂ, ನಿಧನ ಎಂಬ ಸಾಮದಿಂದ ಸ್ತುತಿಸಲ್ಪಡತಕ್ಕ ಸಂಕರ್ಷಣನು ಬುಡದಲ್ಲಿ **ನಿ** ಶಬ್ದವಿರುವ ವಾಕ್ಯದಿಂದಲೂ ಸ್ತುತಿಸಲ್ಪಡುತ್ತಾನೆ. ॥ ೨ ॥

**ಉ. ॥ ದುಗ್ಧೇಽಸ್ಮೈ ವಾಗ್ದೋಹಂ ಯೋ ವಾಚೋ ದೋಹೋಽನ್ನವಾನನ್ನಾದೋ ಭವತಿ ಯ ಏತದೇವಂವಿದ್ವಾನ್ ವಾಚಿ ಸಪ್ತವಿಧಂ ಸಾಮೋಪಾಸ್ತೇ ॥ ಇತ್ಯಷ್ಟಮಃ ಖಂಡಃ ॥ ೪—೮ ॥ ॥ ೩ ॥**

ಅ ॥ ಹೀಗೆ ಏಳು ರೂಪಗಳುಳ್ಳ ಬ್ರಹ್ಮನು ಶಬ್ದಸಮೂಹದಲ್ಲಿ ಇದ್ದಾನೆಂದು ತಿಳಿದು ಏಳು ವಿಧ ಸಾಮವನ್ನು ಉಪಾಸನೆಮಾಡಿದವನಿಗೆ ವಾಕ್ ಎಂದು ಹೆಸರುಳ್ಳ ಶ್ರೀಹರಿಯು ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುತ್ತಾನೆ. ಮತ್ತು ಉಪಾಸಕನು ಯಥೇಷ್ಟ ಅನ್ನವುಳ್ಳವನೂ ಅನ್ನವನ್ನು ಪಭೋಗಿಸುವ ಸಾಮರ್ಥ್ಯವುಳ್ಳವನೂ ಆಗುತ್ತಾನೆ. ॥ ೪—೮ ॥ ॥ ೩ ॥

**ಪೀ**—ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ ಎಂದು ಹೆಸರುಳ್ಳ ಐದು ಭಗವನ್ಮೂರ್ತಿಗಳನ್ನು ಹೇಳಿ, ಈ ಖಂಡದಲ್ಲಿ ವಿಶೇಷವಾಗಿ ಆದಿ, ಉಪದ್ರವ, ಎಂದು ಹೆಸರುಳ್ಳ ಎರಡು ಭಗವನ್ಮೂರ್ತಿಗಳನ್ನು ಹೇಳುತ್ತಾರೆ—

**ಭಾ. ॥ (೧) ಆದಿಃ ಕಲ್ಪಾದಿಹೇತುತ್ವಾತ್ ಕ್ರೋಡಾತ್ಮಾ ಕೇಶವಃ ಸ್ವಯಂ । ದುಷ್ಟೋಪದ್ರವಕರ್ತೃತ್ವಾತ್ ನಾರಸಿಂಹ ಉಪದ್ರವಃ ॥ ಇತಿ ಚ । (೨) ಹುಂಕಾರಸಹಿತೇ ವಾಕ್ಯೇ ಪ್ರದ್ಯುಮ್ನಸ್ತು ಸದಾ ಸ್ಥಿತಃ । ಆಕಾರಯುಕ್ತೇ ವಾರಾಹೋ ವಾಸುದೇವಃ ಪ್ರಸಂಯುತೇ ॥ ನಾರಾಯಣಸ್ತಥೋದ್ಯುಕ್ತೇ ಪ್ರತಿಯುಕ್ತೇಽನಿರುದ್ಧಕಃ । ಉಪಯುಕ್ತೇ ನೃಸಿಂಹಶ್ಚ ನೀತಿ ಸಂಕರ್ಷಣಸ್ತಥಾ ॥ (೩) ಅಭಾವೇ ಯಾವದೇತೇ ಸ್ಯುಸ್ತಾವತ್ತದ್ದೈವತಂ ಸ್ಮೃತಂ ॥ (೪) ಏವಂ ಸಪ್ತವಿಧಂ ವಿಷ್ಣುಂ ಯ ಉಪಾಸ್ತೇ ಸದಾ ವಿಭುಂ (ಪರಂ) । ವಾಙ್ನಾಮಾ ಭಗವಾಂಸ್ತಸ್ಯ ಭವೇತ್ ಸರ್ವಾರ್ಥದೋಹಕೃತ್ ॥ ಇತಿ ಚ ॥ ೧,೨,೩ ॥ ಇತ್ಯಷ್ಟಮಃ ಖಂಡಃ ॥ ೪—೮ ॥ ॥ ೧ ॥**

**ಅ** ॥ (೧) ವರಾಹರೂಪಿಯಾದ ಶ್ರೀಹರಿಯು ಕಲ್ಪಾದಿಗೆ ಕಾರಣವಾದುದರಿಂದ **ಆದಿಃ** ಎಂದೂ, ನರಸಿಂಹನು ದುರ್ಜನರಿಗೆ ಉಪದ್ರವವನ್ನು ಮಾಡತಕ್ಕವನಾದುದರಿಂದ **ಉಪದ್ರವನೆಂದೂ** ಎನಿಸುತ್ತಾನೆ. (೨ ಪ್ರದ್ಯುಮ್ನನು **ಹುಂಕಾರದಿಂದ** ಕೂಡಿದ ವಾಕ್ಯದಲ್ಲಿಯೂ, ವರಾಹರೂಪಿ ಶ್ರೀಹರಿಯು **ಆಕಾರದಿಂದ** ಕೂಡಿದ ವಾಕ್ಯದಲ್ಲಿಯೂ, ವಾಸುದೇವನು **ಪ್ರ** ಶಬ್ದವಿರುವ ವಾಕ್ಯದಲ್ಲಿಯೂ ನಾರಾಯಣನು **ಉತ್** ಶಬ್ದವಿರುವ ವಾಕ್ಯದಲ್ಲಿಯೂ, ಅನಿರುದ್ಧನು **ಪ್ರತಿ** ಶಬ್ದವಿರುವ ವಾಕ್ಯದಲ್ಲಿಯೂ, ನರಸಿಂಹನು**ಉಪ** ಶಬ್ದವಿರುವ ವಾಕ್ಯದಲ್ಲಿಯೂ, ಸಂಕರ್ಷಣನು ನಿ ಶಬ್ದವಿರುವ ವಾಕ್ಯದಲ್ಲಿಯೂ ವರ್ಣಿಸಲ್ಪಡುತ್ತಾನೆ (೩) (ಹುಂಕಾರಾದಿಗಳಿಲ್ಲವಾದರೆ ಆ ವಾಕ್ಯಕ್ಕೆ ಯಾವ ದೇವತೆಯೆಂದರೆ—) **ವಾಕ್ಯದ** ಬುಡದಲ್ಲಿ ಹುಂಕಾರಾದಿಗಳಲ್ಲಿ ಯಾವುದಾದರೊಂದನ್ನು ಆರಂಭಿಸಿ ಮಧ್ಯದಲ್ಲಿ ಹುಂಕಾರಾದಿಗಳಿಲ್ಲವಾದರೆ ಅವು ಸಿಗುವಪರ್ಯಂತವಿರುವ ವಾಕ್ಯಕ್ಕೆ ಅದೇ ದೇವತೆಯೆಂದು ಇಟ್ಟುಕೊಳ್ಳಬೇಕು. (೪) ಹೀಗೆ ಏಳು ರೂಪಗಳುಳ್ಳ ವಿಷ್ಣುವನ್ನು ಪಾಸನೆ ಮಾಡಿದವನಿಗೆ ವಾಕ್ ಎನಿಸಿಕೊಂಡ ಭಗವಂತನು ಮೋಕ್ಷ ಮೊದಲಾದ ಎಲ್ಲಾ ಅಭೀಷ್ಟಗಳನ್ನು ಕೊಡುತ್ತಾನೆ. ॥ ೧, ೨, ೩ ॥ ೪—೮ ॥ ॥ ೧ ॥

**ಎಂಟನೇ ಖಂಡವು ಮುಗಿಯಿತು.**

## ೯ನೇ ಖಂಡವು

ಪೀ—ಆದಿತ್ಯನಲ್ಲಿ ಏಳು ರೂಪಗಳುಳ್ಳ ಸಾಮನೆನಿಸಿದ ಶ್ರೀಹರಿಯನ್ನು ಪಾಸನೆ ಮಾಡಬೇಕೆನ್ನುತ್ತಾರೆ—

**ಉ.॥ ಅಥ ಖಲ್ವಮುಮಾದಿತ್ಯಂ ಸಪ್ತವಿಧಂ ಸಾಮೋಪಾಸೀತ ಸರ್ವದಾ ಸಮಸ್ತೇನ ಸಾಮ ಮಾಂ ಪ್ರತಿ ಮಾಂ ಪ್ರತೀತಿ ಸರ್ವೇಣ ಸಮಸ್ತೇನ ಸಾಮ ॥ ೧ ॥**

ಅ ॥ ಆದಿತ್ಯನೊಳಗಿರುವ, ಆದಿತ್ಯನೆನಿಸಿದ, ಏಳುವಿಧ ಸಾಮಗಳಲ್ಲಿ ವರ್ಣಿಸಲ್ಪಡತಕ್ಕ, ಏಳು ರೂಪಗಳುಳ್ಳ, ಶ್ರೀಹರಿಯನ್ನು ಪಾಸನೆ ಮಾಡಬೇಕು. ಆದಿತ್ಯನಲ್ಲಿದ್ದ ವಿಷ್ಣುವು ಸರ್ವಕಾಲದಲ್ಲಿಯೂ, ಒಂದೇ ರೀತಿ ರೂಪವುಳ್ಳವನಾದುದರಿಂದಲೂ, ಪ್ರತಿಯೊಬ್ಬರಿಗೂ ನನಗೆ ಅಭಿಮುಖವಾಗಿದ್ದಾನೆಂದು *ಒಂದೇ ರೀತಿ ಕಾಣುವುದರಿಂದಲೂ ಸಾಮನೆನಿಸುತ್ತಾನೆ ॥ ೧ ॥

ಪೀ—ಸರ್ವಪ್ರಾಣಿಗೂ ಶ್ರೀಹರಿಯು ಆಶ್ರಯನೆಂದುಪಾಸನೆ ಮಾಡಬೇಕೆನ್ನುತ್ತಾರೆ—

**ಉ. ॥ ತಸ್ಮಿನ್ನಿಮಾನಿ ಸರ್ವಾಣಿ ಭೂತಾನ್ಯನ್ವಾಯತ್ತಾನೀತಿ ವಿದ್ಯಾತ್ತಸ್ಯ ಯತ್ಪುರೋದಯಾತ್ ಸ ಹಿಂಕಾರಸ್ತದಸ್ಯ ಪಶವೋऽನ್ವಾಯತ್ತಾಸ್ತಸ್ಮಾತ್ತೇ ಹಿಂಕುರ್ವಂತಿ ಹಿಂಕಾರಭಾಜಿನೋ ಹ್ಯೇತಸ್ಯ ಸಾಮ್ನಃ ॥ ೨ ॥**

ಅ ॥ ಆದಿತ್ಯನೊಳಗಿರುವ ಆದಿತ್ಯನೆನಿಸಿಕೊಂಡ ಏಳು ರೂಪಗಳುಳ್ಳ ಶ್ರೀವಿಷ್ಣುವಿನಲ್ಲಿ ಬ್ರಹ್ಮಾದಿಗಳನ್ನು ಮೊದಲುಗೊಂಡು ಪಶು ಪಕ್ಷ್ಯಾದಿ ಸರ್ವಪ್ರಾಣಿಗಳೂ ಆಶ್ರಯಿಸಿಕೊಂಡಿವೆ, ಎಂದು ಉಪಾಸನೆ ಮಾಡಬೇಕು. (ಅದನ್ನು ವಿವರಿಸುತ್ತಾರೆ—) ಹಿಮ್ ಎಂಬ ಸಾಮದಲ್ಲಿ ಸ್ತುತಿಸಲ್ಪಡತಕ್ಕ ಪ್ರದ್ಯುಮ್ನನು, ಆದಿತ್ಯನೆನಿಸಿಕೊಂಡ ಶ್ರೀಹರಿಯು ಉದಯಿಸುವುದಕ್ಕಿಂತ ಪೂರ್ವಕಾಲದಲ್ಲಿರತಕ್ಕವನು (ಸೂರ್ಯೋದಯಕ್ಕಿಂತ ಮೊದಲಿನಕಾಲಕ್ಕೆ ಅಧಿಪತಿಯು) ಸೂರ್ಯೋದಯಕ್ಕಿಂತ ಪೂರ್ವಕಾಲದಲ್ಲಿರತಕ್ಕ ಹಿಂಕಾರನೆನಿಸಿಕೊಂಡ ಪ್ರದ್ಯುಮ್ನರೂಪವನ್ನು ಪಶುಗಳು ಆಶ್ರಯಿಸಿಕೊಂಡಿವೆ ಹಿಂಕಾರಾರ್ಥನಾದ ಪ್ರದ್ಯುಮ್ನನನ್ನು ಆಶ್ರಯಿಸಿರುವುದರಿಂದ ಕಾಮಧೇನು ಮೊದಲಾದ ಪಶುಗಳು ಹಿಮ್ ಎಂದು ಶಬ್ದಮಾಡುತ್ತವೆ. ಅದನ್ನನುಸರಿಸಿ ಈಗಿನ ಪಶುಗಳೂ ಹಾಗೆಯೇ ಶಬ್ದಮಾಡುತ್ತವೆ. ॥ ೨ ॥

**ಉ. ॥ ಅಥ ಯತ್ಪ್ರಥಮೋದಿತೇ ಸ ಪ್ರಸ್ತಾವಸ್ತದಸ್ಯ ಮನುಷ್ಯಾ ಅನ್ವಾಯತ್ತಾಸ್ತಸ್ಮಾತ್ತೇ ಪ್ರಸ್ತುತಿಕಾಮಾಃ ಪ್ರಶಂಸಾಕಾಮಾಃ ಪ್ರಸ್ತಾವಭಾಜಿನೋ ಹ್ಯೇತಸ್ಯ ಸಾಮ್ನಃ ॥ ೩ ॥**

ಅ ॥ ಪ್ರಸ್ತಾವನೆನಿಸಿದ ವಾಸುದೇವನು ಸೂರ್ಯನು ಉದಯಿಸಿಕೊಂಡು ಬರುವಕಾಲಕ್ಕೆ ನಿಯಾಮಕನು. ಸೂರ್ಯನೊಳಗಿರುವ ಶ್ರೀಹರಿಯು ಪ್ರಸ್ತಾವ ಎನಿಸಿದ ವಾಸುದೇವರೂಪವನ್ನು ಮನುಷ್ಯರು

---

* ಅಭಿಮುಖವಾಗಿ ಸರ್ವರ ಕಣ್ಣಿಗೆ ಕಾಣುವುದು ಸೂರ್ಯಮಂಡಲವು ಶ್ರೀಹರಿಯು ಕಾಣುವುದಿಲ್ಲ ಆದರೆ ಮಂಡಲದಲ್ಲಿದ್ದ ಶ್ರೀಹರಿಯು ಸರ್ವರಿಗೂ ಸೂರ್ಯಮಂಡಲವು ಒಂದೇ ರೀತಿ ಕಾಣುವಂತೆ ಸಾಮ್ಯವನ್ನು ಸಂಪಾದಿಸಿಕೊಟ್ಟವನಾದ ಕಾರಣ ಸರ್ವಸಮನು, ಸಾಮನೆನಿಸುತ್ತಾನೆ

ಆಶ್ರಯಿಸಿರುತ್ತಾರೆ. ಮನುಷ್ಯರು ಸೂರ್ಯನೊಳಗಣ ಸಾಮನೆನಿಸಿದ ಶ್ರೀಹರಿಯ ಪ್ರಸ್ತಾವನೆನಿಸಿದ *ವಾಸುದೇವನೆಂಬ ಪ್ರಾರಂಭಾವತಾರವನ್ನು ಆಶ್ರಯಿಸಿದುದರಿಂದಲೇ ಜನರು ಪ್ರಾರಂಭವನ್ನು ಇಚ್ಛಿಸುವವರೂ, ಹೊಗಳುವವರೂ, ಆಗುತ್ತಾರೆ. || ೩ ||

**ಉ. || ಅಥ ಯತ್ಸಂಗವವೇಲಾಯಾಂ ಸ ಆದಿಸ್ತದಸ್ಯ ವಯಾಂಸ್ಯನ್ವಾಯತ್ತಾನಿ ತಸ್ಮಾತ್ತಾನ್ಯಂತರಿಕ್ಷೇಽನಾರಂಬಣಾನ್ಯಾದಾಯಾತ್ಮಾನಂ ಪರಿಪತಂತ್ಯಾದಿಭಾಜೀನಿ ಹ್ಯೇತಸ್ಯ ಸಾಮ್ನಃ || ೪ ||**

ಅ || ಆದಿ ಎನಿಸಿದ ವರಾಹನು ಸಂಗವಕಾಲಕ್ಕೆ ನಿಯಾಮಕನು. ಸಂಗವ (6 ಘಳಿಗೆಯಿಂದ 12ರ ಪರ್ಯಂತ) ಕಾಲಕ್ಕೆ ದೇವತೆಯಾದ ಆದಿತ್ಯನೆನಿಸಿದ ಶ್ರೀಹರಿಯು ವರಾಹರೂಪವನ್ನು ಪಕ್ಷಿಗಳು ಆಶ್ರಯಿಸುತ್ತಿವೆ. ಹಕ್ಕಿಗಳು ಸಾಮನೆನಿಸಿದ ಶ್ರೀಹರಿಯ ವರಾಹರೂಪವನ್ನಾಶ್ರಯಿಸಿದಕಾರಣ ಅಂದರೆ ವರಾಹವು ಎಲ್ಲಾ ಹಕ್ಕಿಗಳಿಗೂ ಆಶ್ರಯವಾದುದರಿಂದಲೇ ವರಾಹವನ್ನಾಶ್ರಯಿಸಿರುವ ಹಕ್ಕಿಗಳು ಆಕಾಶದಲ್ಲಿ ಆಧಾರವಿಲ್ಲದೇನೇ ತಂತಮ್ಮ ದೇಹ ಸಮೇತ ಹಾರುತ್ತಿವೆ. || ೪ ||

**ಉ. || ಅಥ ಯತ್ಸಂಪ್ರತಿ ಮಧ್ಯಂದಿನೇ ಸ ಉದ್ಗೀಥಸ್ತದಸ್ಯ ದೇವಾ ಅನ್ವಾಯತ್ತಾಸ್ತಸ್ಮಾತ್ತೇ ಸತ್ತಮಾಃ ಪ್ರಾಜಾಪತ್ಯಾನಾಮುದ್ಗೀಥಭಾಜಿನೋ ಹ್ಯೇತಸ್ಯ ಸಾಮ್ನಃ || ೫ ||**

ಅ || ಉದ್ಗೀಥನೆನಿಸಿದ ಶ್ರೀನಾರಾಯಣನು ಮಧ್ಯಾಹ್ನ (12–18ಘಳಿಗೆ ಪರ್ಯಂತ) ಕಾಲಕ್ಕೆ ನಿಯಾಮಕನು. ಆ ಶ್ರೀಹರಿಯ ರೂಪವನ್ನು ದೇವತೆಗಳು ಆಶ್ರಯಿಸಿರುತ್ತಾರೆ. ದೇವತೆಗಳು ಸಾಮನೆನಿಸಿದ ಶ್ರೀಹರಿಯ ನಾರಾಯಣಾವತಾರವು ಅನಂತಾನಂತ ಗುಣಪೂರ್ಣವೆಂದುಪಾಸನೆ ಮಾಡಿದುದರಿಂದಲೇ ಋಷಿ ಗಂಧರ್ವಾದಿಗಳಿಗಿಂತ ಉತ್ತಮರಾಗಿರುವರು. || ೫ ||

**ಉ. || ಅಥ ಯದೂರ್ಧ್ವಂ ಮಧ್ಯಂದಿನಾತ್ಪ್ರಾಗಪರಾಹ್ಣಾತ್ಸ ಪ್ರತಿಹಾರಸ್ತದಸ್ಯ ಗರ್ಭಾ ಅನ್ವಾಯತ್ತಾಸ್ತಸ್ಮಾತ್ತೇ ಪ್ರತಿಹೃತಾ ನಾವಪದ್ಯಂತೇ ಪ್ರತಿಹಾರಭಾಜಿನೋ ಹ್ಯೇತಸ್ಯ ಸಾಮ್ನಃ || ೬ ||**

ಅ || ಪ್ರತಿಹಾರನೆನಿಸಿದ ಅನಿರುದ್ಧನು ಮಧ್ಯಾಹ್ನದಮೇಲೆ ಅಪರಾಹ್ನ(18–24 ಘಳಿಗೆ ಪರ್ಯಂತ) ಕಾಲಕ್ಕೆ ಅಧಿಪತಿಯು. ಶ್ರೀಹರಿಯ ಅನಿರುದ್ಧನೆಂಬ ಆ ರೂಪವನ್ನು ಗರ್ಭದೊಳಗಣ ಪ್ರಾಣಿಗಳು ಆಶ್ರಯಿಸಿರುತ್ತಾರೆ ಪ್ರತಿಹಾರವೆಂಬ ಅನಿರುದ್ಧಾವತಾರವನ್ನು ಆಶ್ರಯಿಸಿರುವುದರಿಂದಲೇ ಗರ್ಭದೊಳಗಣ ಜೀವರು ತಂದೆಯ ಶರೀರದಿಂದ ತಾಯಿಯ ಶರೀರದೊಳಗೆ ತರಲ್ಪಟ್ಟರೂ (ಶರೀರದೊಳಗೆ) ನಾಶ ಹೊಂದದೆ ಬೆಳೆಯುವರು. || ೬ ||

**ಉ. || ಅಥ ಯದೂರ್ಧ್ವಮಪರಾಹ್ಣಾತ್ಪ್ರಾಗಸ್ತಮಯಾತ್ಸ ಉಪದ್ರವಸ್ತದಸ್ಯಾರಣ್ಯಾ ಅನ್ವಾಯತ್ತಾಸ್ತಸ್ಮಾತ್ತೇ ಪುರುಷಂ ದೃಷ್ಟ್ವಾ ಕಕ್ಷಂ ಶ್ವಭ್ರಮಿತ್ಯುಪದ್ರವಂತ್ಯುಪದ್ರವಭಾಜಿನೋ ಹ್ಯೇತಸ್ಯ ಸಾಮ್ನಃ || ೭ ||**

---

* ವಾಸುದೇವನು ಪ್ರಥಮತಃ ಅವತರಿಸಿದವನು. ಪ್ರಶಂಸೆಗೆ ದೇವತೆಯು.

ಅ ॥ ಉಪದ್ರವನೆನಿಸಿದ ನರಸಿಂಹನು ಅಪರಾಹ್ನಕ್ಕಿಂತ ಮೇಲೆ ಅಸ್ತಮಾನಕ್ಕಿಂತ (24—30 ಘಳಿಗೆ ಪರ್ಯಂತ) ಮೊದಲಿನಕಾಲಕ್ಕೆ (ಸಾಯಂಕಾಲಕ್ಕೆ) ನಿಯಾಮಕನು. ಕಾಡುಮೃಗಗಳು ಶ್ರೀಹರಿಯ ನರಸಿಂಹರೂಪವನ್ನು ಆಶ್ರಯಿಸಿಕೊಂಡಿವೆ. ಶ್ರೀಹರಿಯ ಉಪದ್ರವವೆನಿಸಿದ ನರಸಿಂಹಾವತಾರವು ಮೃಗಗಳನ್ನು ಕಾಪಾಡುವುದಕ್ಕಾಗಿ, ಅರಣ್ಯ (ಗಿಡಗಳುಪೊದರು) ಮತ್ತು ಗುಹೆ, ಇವುಗಳಲ್ಲಿ ಸದಾ ಇರುತ್ತದೆ. ಆ ಅವತಾರವನ್ನಾಶ್ರಯಿಸಿದುದರಿಂದಲೇ ಕಾಡುಮೃಗಗಳು ಮನುಷ್ಯರನ್ನು ಕಂಡು ಹೆದರಿದಾಗ ಅರಣ್ಯಗುಹೆಗಳಲ್ಲಿರತಕ್ಕ ನರಸಿಂಹನು ರಕ್ಷಕನೆಂದು ಜ್ಞಾನವಿಲ್ಲದಿದ್ದರೂ ಅರಣ್ಯಗುಹೆಗಳು ತಮ್ಮನ್ನು ಕಾಪಾಡುತ್ತವೆಂದು ತಿಳಿದು ಅಲ್ಲಿಗೆ ಓಡಿಹೋಗುತ್ತವೆ. ॥ ೭ ॥

**ಉ. ॥ ಅಥ ಯತ್ಪ್ರಥಮಾಸ್ತಮಿತೇ ತನ್ನಿಧನಂ ತದಸ್ಯ ಪಿತರೋಽನ್ವಾಯತ್ತಾಸ್ತಸ್ಮಾತ್ತನ್ನಿದಧತಿ ನಿಧನಭಾಜಿನೋ ಹ್ಯೇತಸ್ಯ ಸಾಮ್ನ ಏವಂ ಖಲ್ವಮುಮಾದಿತ್ಯꣳ ಸಪ್ತವಿಧꣳ ಸಾಮೋಪಾಸ್ತೇ ॥ ಇತಿ ನವಮಃ ಖಂಡಃ ॥೪-೯॥ ॥ ೮ ॥**

ಅ ॥ ನಿಧನವೆಂಬ ಸಾಮದಲ್ಲಿ ವರ್ಣಿಸಲ್ಪಡುವ ಸಂಕರ್ಷಣನು ಸೂರ್ಯಾಸ್ತಮಯವಾದ ಕಾಲಕ್ಕೆ ಅಧಿಪತಿಯು. ಶ್ರೀಹರಿಯ ಆ ಸಂಕರ್ಷಣರೂಪವನ್ನು ಪಿತೃಗಳು ಆಶ್ರಯಿಸಿರುತ್ತಾರೆ ಪಿತೃಗಳು ಸಂಕರ್ಷಣರೂಪವನ್ನು ಆಶ್ರಯಿಸಿದುದರಿಂದಲೇ ಪಿತೃಗಳಿಗೆ ಅಜ್ಞರು ಕೂಡ ಪಿಂಡಾದಿಗಳನ್ನು ಹಾಕುತ್ತಾರೆ. ಆದಿತ್ಯನೊಳಗಿರುವ, ಆದಿತ್ಯನೆನಿಸಿದ, ಏಳುವಿಧ ಸಾಮಗಳಲ್ಲಿ ವರ್ಣಿಸಲ್ಪಡತಕ್ಕ, ಏಳುರೂಪಗಳುಳ್ಳ, ಶ್ರೀಹರಿಯನ್ನು ಪಾಸನೆ ಮಾಡಿದವನು ಸಂಸಾರಸಾಗರದಿಂದ ಬಿಡುಗಡೆ ಹೊಂದಿದವನಾಗಿ ಮೋಕ್ಷವನ್ನು ಹೊಂದುತ್ತಾನೆ. ॥ ೪—೯ ॥ ॥ ೮ ॥

ಪೀ—೧ನೇ ಮಂತ್ರದ ಅರ್ಥಹೇಳುತ್ತಾರೆ—

**ಭಾ. ॥ (೧) ಆದಿತ್ಯಸ್ಥಂ ಪರಂ ವಿಷ್ಣುಂ ಧ್ಯಾಯೇದಾದಿತ್ಯನಾಮಕಂ । ಸಪ್ತರೂಪಂ ಸಾಮ ಚಾ(ಸಮಶ್ಚಾ)ಸೌ ಸರ್ವದಾ ಸಮರೂಪತಃ ॥ ಸರ್ವೇಷಾಂ ಮಾಂ ಪ್ರತೀತ್ಯೇವ ದೃಷ್ಟಿಸಾಮ್ಯಾಚ್ಚ ಸಾಮ ಸಃ । ದೃಷ್ಟಿಸಾಮ್ಯಂ ಮಂಡಲಸ್ಯ ವಿಷ್ಣುಸ್ತಸ್ಯ ಚ ಕಾರಣಂ ॥ (೨) ತಸ್ಮಿನ್ನಿಮಾನಿ ಭೂತಾನಿ ಸರ್ವಾಣ್ಯೇವಾಶ್ರಿತಾನಿ ಹಿ । ಉದಯಾತ್ಪೂರ್ವಮೇವಾಸೌ ಭವೇತ್ಪ್ರದ್ಯುಮ್ನನಾಮಕಃ । ಪಶ್ವಾಧಾರಸ್ತದಾತ್ಮಾಸೌ ॥ (೩) ವಾಸುದೇವಸ್ತಥೋದಯೇ । ಆಶ್ರಯಶ್ಚ ನೃಣಾಂ ತತ್ರ ॥ (೪) ವರಾಹಃ ಸಂಗವೇ ತು ಸಃ । ತತ್ರ ಪಕ್ಷ್ಯಾಶ್ರಯೋ ವಿಷ್ಣುಃ ॥ (೫) ತಥಾ ನಾರಾಯಣಾಭಿಧಃ । ಮಧ್ಯಂದಿನೇ ಸ ಆಧಾರೋ ದೇವಾನಾಂ ಚ ॥ ೧ ॥**

ಅ ॥ (೧) ಆದಿತ್ಯನೊಳಗಿರುವ, ಆದಿತ್ಯನೆನಿಸಿದ, ಏಳುರೂಪಗಳುಳ್ಳ ಶ್ರೀಹರಿಯನ್ನು ಧ್ಯಾನಿಸಬೇಕು. ಶ್ರೀಹರಿಗೆ ಸರ್ವದಾ ಏಕರೀತಿಯಾದ ರೂಪವಿರುವುದರಿಂದಲೂ ಪ್ರತಿಯೊಬ್ಬರಿಗೂ ನನಗೆ ಅಭಿಮುಖವಾಗಿ ಇದ್ದಾನೆಂದು ಒಂದೇರೀತಿ ತೋರಿಸುಕೊಳ್ಳುವುದರಿಂದಲೂ ಶ್ರೀಹರಿಯು ಸಾಮನೆನಿಸುತ್ತಾನೆ. (ಆದಿತ್ಯನೊಳಗಣ ವಿಷ್ಣುವು ಕಾಣದಿರುವುದರಿಂದ ಇದುಹೇಗೆ ಸಂಗತವಾಗುತ್ತದೆ? ಎಂದರೆ–) ಸರ್ವರಿಗೂ ಒಂದೇರೀತಿ ಕಾಣುವುದು ಸೂರ್ಯಮಂಡಲವು. ಹಾಗೆ ತೋರಲಿಕ್ಕೆ ವಿಷ್ಣುವು ಕಾರಣನು. (೨) (೨ನೇ ಮಂತ್ರಕ್ಕೆ ಅರ್ಥಹೇಳುತ್ತಾರೆ–) ಆದಿತ್ಯನೊಳಗಣ ಶ್ರೀಹರಿಯನ್ನು ಬ್ರಹ್ಮಾದಿಗಳೆಲ್ಲರೂ ಆಶ್ರಯಿಸಿ

ಕೊಂಡಿರುತ್ತಾರೆ. ಆದಿತ್ಯನೆನಿಸಿದ ಪ್ರದ್ಯುಮ್ನನು ಸೂರ್ಯೋದಯವಾಗುವುದಕ್ಕಿಂತ ಪೂರ್ವಕಾಲಕ್ಕೆ ಅಧಿಪತಿಯು. ಆ ಪ್ರದ್ಯುಮ್ನನು ಆಗ ಪಶುಗಳಿಗೆ ಆಶ್ರಯನು. (೩) (೩ನೇ ಮಂತ್ರದ ಅರ್ಥಹೇಳುತ್ತಾರೆ.–) ವಾಸುದೇವನು ಸೂರ್ಯೋದಯ ಕಾಲಕ್ಕೆ ಅಧಿಪತಿಯು. ಮನುಷ್ಯರಿಗೆ ಆಶ್ರಯನು. (೪) (೪ನೇ ಮಂತ್ರದ ಅರ್ಥಹೇಳುತ್ತಾರೆ) ವರಾಹರೂಪಿಯಾದ ಶ್ರೀಹರಿಯು ಸಂಗವಕಾಲಕ್ಕೆ ಅಧಿಪತಿಯು. ಹಕ್ಕಿಗಳಿಗೆ ಆಶ್ರಯನು. (೫) (೫ನೇ ಮಂತ್ರದ ಅರ್ಥ ಹೇಳುತ್ತಾರೆ—ಶ್ರೀನಾರಾಯಣನು ಮಧ್ಯಾಹ್ನ ಕಾಲಕ್ಕೆ ಅಧಿಪತಿಯು. ದೇವತೆಗಳಿಗೆ ಆಶ್ರಯನು || ೧ ||

ಹೀ —೬ನೇ ಮಂತ್ರದ ಅರ್ಥ ಹೇಳುತ್ತಾರೆ –

**ಭಾ. || (೧) ತತಃ ಪರಂ । ಅನಿರುದ್ಧಸ್ಸ ಆಧಾರೋ ಗರ್ಭಸ್ಥಾನಾಂ ಸದೈವ ಹಿ || (೨) ತತಃ ಪರಂ ನೃಸಿಂಹಾಖ್ಯಃ ಸ ಆರಣ್ಯಾಶ್ರಯೋ ಮತಃ || (೩) ಅಥಾಸ್ತಮಿತವೇಲಾಯಾಂ ಸ ಸಂಕರ್ಷಣ ಈರಿತಃ । ಆಶ್ರಯಃ ಸ ಪಿತೄಣಾಂ ಚ ಸಪ್ತಾತ್ಮಕಮುಪಾಸ್ಯ ತಂ । ಪ್ರಾಪ್ನೋತಿ ಪರಮಂ ಸ್ಥಾನಂ ಮುಕ್ತಃ ಸಂಸಾರಸಾಗರಾತ್ || ಇತಿ ಚ || ೨ ||**

ಅ || (೧) ಮಧ್ಯಾಹ್ನದ ಮೇಲೆ ಅಪರಾಹ್ನಪರ್ಯಂತ ಕಾಲಕ್ಕೆ ಅನಿರುದ್ಧನು ಅಧಿಪತಿಯು. ಆತನು ಗರ್ಭದಲ್ಲಿದ್ದ ಪ್ರಾಣಿಗಳಿಗೆ ಆಶ್ರಯನು. (೨) (೭ನೇ ಮಂತ್ರದ ಅರ್ಥ ಹೇಳುತ್ತಾರೆ—) ಅಪರಾಹ್ಣದ ಮೇಲೆ ಅಸ್ತಮಾನಪರ್ಯಂತ ಕಾಲಕ್ಕೆ ನೃಸಿಂಹನು ದೇವತೆಯು. ಅವನು ಕಾಡುಮೃಗಗಳಿಗೆ ಆಶ್ರಯನು. (೩) (೮ನೇ ಮಂತ್ರದ ಅರ್ಥ ಹೇಳುತ್ತಾರೆ—) ಸೂರ್ಯಾಸ್ತಮಯ ಕಾಲಕ್ಕೆ ಸಂಕರ್ಷಣನು ಅಧಿಪತಿಯು. ಆತನು ಪಿತೃಗಳಿಗೆ ಆಶ್ರಯನು. ಆದಿತ್ಯನೊಳಗಣ ಆದಿತ್ಯನೆನಿಸಿದ ಶ್ರೀಹರಿಯು ಏಳು ವಿಧ ಸಾಮಗಳಲ್ಲಿ ವರ್ಣಿಸಲ್ಪಡುವವನು. ಹೀಗೆ ಉಪಾಸಕನು ಸಂಸಾರಸಾಗರದಿಂದ ಬಿಡುಗಡೆ ಹೊಂದಿದವನಾಗಿ ಉತ್ತಮಸ್ಥಾನವಾದ ಮೋಕ್ಷವನ್ನು ಹೊಂದುತ್ತಾನೆ. || ೨ ||

ಹೀ —೨ನೇ ಮಂತ್ರದಲ್ಲಿದ್ದ ತಸ್ಮಾತ್ತೇ **ಹಿಂಕುರ್ವಂತಿ** ಎಂಬುದರ ಅರ್ಥ ಹೇಳುತ್ತಾರೆ—

**ಭಾ. || (೧) ಹಿಂಕಾರನಾಮಾಸಮಾಶ್ರಿತತ್ವಾದ್ಧಿಂಕುರ್ವಂತಿ || (೨) ಪ್ರಸ್ತಾವಾಶ್ರಯತ್ವಾತ್ಪ್ರಸ್ತುತಿಕಾಮಾಃ ಪ್ರಾರಂಭಕಾಮಾಃ । ಪ್ರಶಂಸಾಕಾಮಾಶ್ಚ । ಪ್ರಾರಂಭಾವತಾರತ್ವಾತ್ಪ್ರಶಂಸಾದೇವತಾತ್ವಾಚ್ಚ ತಸ್ಯ || (೩) ಸರ್ವಾಧಾರತ್ವಾದ್ವರಾಹಸ್ಯ ತದಾಧಾರಾಣಾಂ ಪಕ್ಷಿಣಾಮನಾಧಾರೇಣೈವ ಗಮನಂ । ನಾರಾಯಣನಾಮಾರ್ಥತ್ವೇನ ಸರ್ವಗುಣಪೂರ್ತ್ಯೋಪಾಸನಾದೇವ ಸರ್ವೋತ್ತಮಾ ದೇವಾಃ । ಇತರಮೂರ್ತೀನಾಮಪಿ ಸರ್ವಗುಣಪೂರ್ತ್ಯೋಪಾಸನೇ ನಾರಾಯಣೋಪಾಸನಮೇವ ಭವತಿ । ಸರ್ವಗುಣಪೂರ್ತ್ಯರ್ಥತ್ವಾನ್ನಾರಾಯಣಶಬ್ದಸ್ಯ || ೩ ||**

ಅ || (೧) ಹಿಂ ಎಂದು ಹೆಸರುಳ್ಳ ಪ್ರದ್ಯುಮ್ನನನ್ನು ಆಶ್ರಯಿಸಿರುವುದರಿಂದ (ಕಾಮಧೇನು ಮೊದಲಾದ ಗೋವುಗಳು) ಹಿಂ ಎಂದು ಶಬ್ದ ಮಾಡುತ್ತವೆ (೨) (2ನೇ ಮಂತ್ರದಲ್ಲಿದ್ದ **ಪ್ರಸ್ತೂತಿಕಾಮಾಃ** ಇತ್ಯಾದಿಗಳ ಅರ್ಥ ಹೇಳುತ್ತಾರೆ -) ಪ್ರಸ್ತಾವನೆನಿಸಿದ ವಾಸುದೇವನನ್ನಾಶ್ರಯಿಸಿರುವುದರಿಂದ (ಮನುಷ್ಯರು) ಪ್ರಾರಂಭಮಾಡಲಿಚ್ಛಿಸುವರು. ಹೊಗಳಲಿಚ್ಛಿಸುವರು. (ಹೇಗೆಂದರೆ—) ಪ್ರಸ್ತಾವನೆನಿಸಿದ ವಾಸುದೇವನು ಪ್ರಥಮಾವತಾರನು. ಹೊಗಳುವಿಕೆಗೆ ದೇವತೆಯು. (೩) (೪ನೇ ಮಂತ್ರದಲ್ಲಿದ್ದ

**ತಸ್ಮಾತ್ತಾನ್ಯಂತರಿಕ್ಷೇ** ಇತ್ಯಾದಿಗಳ ಅರ್ಥ ಹೇಳುತ್ತಾರೆ—) ವರಾಹನು ಎಲ್ಲಾ ಹಕ್ಕಿಗಳಿಗೂ ಆಶ್ರಯನಾದ ಕಾರಣ ವರಾಹನನ್ನಾಶ್ರಯಿಸಿಕೊಂಡಿರುವ ಹಕ್ಕಿಗಳು ಭೂಮಿ ಮೊದಲಾದ ಆಧಾರವಿಲ್ಲದೇನೇ ಆಕಾಶದಲ್ಲಿ ಹಾರುತ್ತವೆ. (೪) (೫ನೇ ಮಂತ್ರದಲ್ಲಿದ್ದ **ತಸ್ಮಾತ್ತೇ ಸತ್ತಮಾಃ** ಇತ್ಯಾದಿಗಳ ಅರ್ಥ ಹೇಳುತ್ತಾರೆ—) ಉದ್ಗೀಥನೆನಿಸಿದ ನಾರಾಯಣನು ಸರ್ವಗುಣ ಪರಿಪೂರ್ಣನೆಂದು ಉಪಾಸನೆ ಮಾಡಿದುದರಿಂದಲೇ ದೇವತೆಗಳು ಋಷಿಗಂಧರ್ವಾದಿಗಳಿಗಿಂತ ಉತ್ತಮರಾಗಿರುತ್ತಾರೆ ಬೇರೆ ಭಗವನ್ಮೂರ್ತಿಗಳು ಸರ್ವಗುಣಪರಿಪೂರ್ಣಗಳೆಂದು ಉಪಾಸನೆ ಮಾಡಿದರೂ, ಶ್ರೀನಾರಾಯಣನ ಉಪಾಸನೆಯೇ ಆಗುತ್ತದೆ. (ಹೇಗೆಂದರೆ— ಅರ= ದೋಷಗಳು. ಅವುಗಳಿಗೆ ವಿರುದ್ಧಗಳಾದ ಗುಣಗಳು, ನಾರಗಳೆನಿಸುತ್ತವೆ. ಅವುಗಳಿಗೆ ಆಶ್ರಯನೆಂಬ ಅರ್ಥದಿಂದ) ನಾರಾಯಣಶಬ್ದವು ಸರ್ವಗುಣಪರಿಪೂರ್ಣನೆಂಬ ಅರ್ಥವನ್ನು ಹೇಳುತ್ತದೆ. ॥ ೩ ॥

ಪೀ—೬ನೇ ಮಂತ್ರದಲ್ಲಿದ್ದ **ತಸ್ಮಾತ್ತೇ ಪ್ರತಿಹೃತಾ ನಾವಪದ್ಯಂತೇ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ—

**ಭಾ. ॥ (೧) ಅನಿರುದ್ಧಾಶ್ರಯತ್ವಾದ್ಗರ್ಭಾಣಾಂ ಪಿತುಃ ಶರೀರಾದನ್ಯತ್ರ ಪ್ರತಿಹೃತಾ ಅಪಿ ನ ವಿನಶ್ಯಂತಿ । ವರ್ಧಂತೇ ಚ ತತ್ರೈವ । ಅನ್ಯದ್ಧಿ ಭುಕ್ತಂ ಜೀರ್ಯತ ಏವ । ಧಾತಾ ಗರ್ಭಂ ದಧಾತು ತೇ । ಇತಿ ಚ ಶ್ರುತಿಃ ।' (೨) ಧಾತಾ ಹಿ ಭಗವಾನನಿರುದ್ಧಃ ॥ (೩) ವಿಷ್ಣು-ಸ್ತ್ವಷ್ಟಾ ಪ್ರಜಾಪತಿರ್ಧಾತಾ ಇತಿ ಚತುರ್ಮೂರ್ತಯೋ ಹ್ಯುಚ್ಯಂತೇ ॥ (೪) ಯೋನಿ-ಕ್ಲೃಪ್ತಿರ್ವಾಸುದೇವಾದ್ರೂಪಂ ಸಂಕರ್ಷಣಾದ್ಭವೇತ್ । ಆಸೇಕಕರ್ಮ ಪ್ರದ್ಯುಮ್ನಾದನಿ-ರುದ್ಧಾಚ್ಚ ಧಾರಣಂ ॥ ಇತಿ ಚ ॥ (೫) ವ್ಯಾಪ್ತೇರ್ವಿಷ್ಣುರ್ವಾಸುದೇವಸ್ತ್ವಷ್ಟಾ ತ್ವೇಷಾತ್ ದ್ವಿತೀಯಕಃ । ಪ್ರಜಾಪತಿಃ ಪ್ರಜಾಪಾತಾನ್ನಿಷೇಕಃ ಪಾತನಂ ತತಃ । ಪ್ರಜಾಪತಿಸ್ತು ಪ್ರದ್ಯುಮ್ನೋ ॥ (೬) ಧಾತಾ ಧಾರಣಕರ್ಮತಃ । ಅನಿರುದ್ಧ ಇತಿ ಪ್ರೋಕ್ತಃ ಕೃಷ್ಣರಾಮೌ ತಥಾಽಶ್ವಿನೌ ॥ ಇತಿ ಚ** ॥ ೪ ॥

**ಅ** ॥ (೧) ಗರ್ಭದಲ್ಲಿದ್ದ ಜೀವರು ಅನಿರುದ್ಧನನ್ನಾಶ್ರಯಿಸಿರುವುದರಿಂದ ತಂದೆಯ ಶರೀರದಿಂದ ತಾಯಿಯ ಶರೀರಕ್ಕೆ ಒಯ್ಯಲ್ಪಟ್ಟರೂ ನಾಶಹೊಂದದೆ ತಾಯಿಯ ಶರೀರದಲ್ಲಿಯೇ ಬೆಳೆಯುತ್ತಾರೆ. (ಗರ್ಭದೊಳಗಣ ಜೀವರು ತಾಯಿಯ ಶಕ್ತಿಯಿಂದಲೇ ನಾಶ ಹೊಂದದೆ ಬೆಳೆಯುತ್ತಾರೆ, ಎಂದು ಏಕೆ ಆಗಲಾರದು? ಅನಿರುದ್ಧನನ್ನು ಆಶ್ರಯಿಸುತ್ತಿದ್ದಾರೆಂದು ಏಕೆ ಅನ್ನಬೇಕೆಂದರೆ-) ತಾಯಿಯು ಉಂಡ, ತಾಯಿಯ ಶರೀರದೊಳಗಿರುವ ಅನ್ನ ಮೊದಲಾದುದು ಜೀರ್ಣವಾಗುವುದು ಸರ್ವರಿಗೂ ಅನುಭವಸಿದ್ಧವು. (ತಾಯಿಯ ಶಕ್ತಿಯಿಂದಲೇ ಗರ್ಭದೊಳಗಣ ಜೀವರು ನಾಶಹೊಂದುವುದಿಲ್ಲವೆಂದೆನ್ನುವುದಾದರೆ ತಾಯಿಯ ಶರೀರದೊಳಗಣ ಅನ್ನ ಮೊದಲಾದುದನ್ನು ತಾಯಿಗೆ ರಕ್ಷಿಸಲು ಸಾಧ್ಯವಿದ್ದ ಕಾರಣ ಪ್ರತಿನಿತ್ಯವೂ ಭೋಜನಾದಿಗಳಲ್ಲಿ * ಪ್ರಯಾಸವೇ ಇಲ್ಲವೆಂದಾದೀತು.) (೨) (ಗರ್ಭದೊಳಗಣ ಜೀವರು ಅನಿರುದ್ಧನನ್ನು ಆಶ್ರಯಿಸುತ್ತಿದ್ದಾರೆಂದು ಏಕೆ ಒಡಂಬಡಬೇಕೆಂದರೆ—) ಧಾತಾ=ಷಡ್ಗುಣಪರಿಪೂರ್ಣನಾದ ಅನಿರುದ್ಧನು (ಪ್ರಿಯಳೇ) ನಿನ್ನ ಗರ್ಭದೊಳಗಣ ಜೀವನನ್ನು ಧರಿಸಲಿ, ಬೆಳೆಯಿಸಲಿ, ಎಂಬ ವೇದವು ಹಿಂದೆ ಹೇಳಿದ ಅರ್ಥದಲ್ಲಿ ಪ್ರಮಾಣವು. (೩) **ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಂಶತು । ಆಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತು ತೇ ॥** ಎಂಬ ವೇದದಲ್ಲಿ

* ಒಂದು ಸಲ ಉಂಡದ್ದೇ ಜೀರ್ಣವಾಗದ ಕಾರಣ ಮತ್ತೆ ಭೋಜನವೇ ಬೇಡವಾದೀತು.

**ವಿಷ್ಣು, ತ್ವಷ್ಟಾ, ಪ್ರಜಾಪತಿ, ಧಾತಾ** ಈ ನಾಲ್ಕು ಶಬ್ದಗಳಿಂದ ಕ್ರಮವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ಭಗವನ್ಮೂರ್ತಿಗಳನ್ನು ಇಟ್ಟುಕೊಳ್ಳಬೇಕು. (೪) **(ಈ ವೇದದಲ್ಲಿ ವಿಷ್ಣು ಮೊದಲಾದ ನಾಲ್ಕು ಶಬ್ದಗಳಿಂದ ವಾಸುದೇವ ಮೊದಲಾದ ನಾಲ್ಕು ಭಗವದ್ರೂಪಗಳನ್ನು ಏತಕ್ಕೆ ಇಟ್ಟುಕೊಳ್ಳುವುದು? ಆಯಾಯ ಹೆಸರುಳ್ಳ ನಾಲ್ಕು ದೇವತೆಗಳನ್ನೇ ಏಕೆ ಇಟ್ಟುಕೊಳ್ಳಬಾರದೆಂದರೆ—)** ಪುತ್ರೋತ್ಪತ್ತಿ ಸಾಮರ್ಥ್ಯವು ಅಥವಾ ಯೋನಿಶುದ್ಧಿಯು ವಾಸುದೇವನಿಂದಲೂ, ಗರ್ಭದೊಳಗಣ ಮಕ್ಕಳ ಅಂಗವು ಸಂಕರ್ಷಣನಿಂದಲೂ, ಗರ್ಭದಿಂದ ಮಕ್ಕಳನ್ನು ಹೊರಪಡಿಸುವಿಕೆಯು ಪ್ರದ್ಯುಮ್ನನಿಂದಲೂ ಗರ್ಭಧಾರಣೆಯು ಅನಿರುದ್ಧನಿಂದಲೂ ಆಗುವುದು. (೫) **(ವಾಸುದೇವಾದಿ ಮೂರ್ತಿಗಳು ಯೋನಿಶುದ್ಧ್ಯಾದಿಗಳನ್ನು ಮಾಡತಕ್ಕವರಾದಾಗ್ಯೂ ವಿಷ್ಣುರ್ಯೋನಿಂ ಎಂಬ ವೇದದಲ್ಲಿ ವಿಷ್ಣು ಮೊದಲಾದ ಶಬ್ದಗಳಿಂದ ವಾಸುದೇವಾದಿಗಳನ್ನೇ ಇಟ್ಟುಕೊಳ್ಳಬೇಕೆಂಬುವಲ್ಲಿ ಪ್ರಮಾಣವೇನೆಂದರೆ—)** ವಾಸುದೇವನು ಸರ್ವತ್ರ ವ್ಯಾಪಿಸಿಕೊಂಡಿದ್ದ ಪ್ರಯುಕ್ತ ವಿಷ್ಣುವೆಂದೂ ಸಂಕರ್ಷಣನು ಪ್ರಕಾಶಿಸಿಕೊಂಡಿದ್ದ ಕಾರಣ ತ್ವಷ್ಟಾ ಎಂದೂ, ಪ್ರದ್ಯುಮ್ನನು ಮಕ್ಕಳನ್ನು ಗರ್ಭದಿಂದ ಹೊರಪಡಿಸುವ ಕಾರಣ ಪ್ರಜಾಪತಿಯೆಂದೂ ಅನ್ನಿಸುತ್ತಾನೆ. **(ಆಸಿಂಚತು ಪ್ರಜಾಪತಿಃ** ಎಂಬ ವೇದದಲ್ಲಿ) ತಾಯಿಯ ಶರೀರದಿಂದ ಮಕ್ಕಳನ್ನು ಹೊರಪಡಿಸುವುದೇ ಸೇಕವೆನ್ನಿಸುತ್ತದೆ. ಏವಂಚ ಪ್ರಜಾಪತಿಯೆಂದರೆ ಪ್ರದ್ಯುಮ್ನನು. (೬) ಅನಿರುದ್ಧನು ಗರ್ಭಧಾರಣೆ ಮಾಡುವುದರಿಂದ ಧಾತಾ ಎನಿಸುತ್ತಾನೆ. **ಗರ್ಭಂ ತೇ ಅಶ್ವಿನೌ ದೇವಾವಾಧತ್ತಾಂ ಪುಷ್ಕರಸ್ರಜೌ** ಎಂಬ ಮುಂದಿನ ಮಂತ್ರದಲ್ಲಿಯೂ **ಅಶ್ವಿನೌ** ಎಂಬ ಪದದಿಂದ **ಶ್ರೀಕೃಷ್ಣ** ರಾಮರನ್ನು ಇಟ್ಟುಕೊಳ್ಳಬೇಕು. ॥ ೪ ॥

ಪೀ ೬ನೇ ಮಂತ್ರದಲ್ಲಿದ್ದ **ಕಕ್ಷಂ ಶ್ವಭ್ರಂ** ಇತ್ಯಾದಿಗಳ ಅರ್ಥ ಹೇಳುತ್ತಾರೆ—

**ಭಾ. ॥ (೧) ಕಕ್ಷಶ್ವಭ್ರೇ ನೃಸಿಂಹಸ್ಯ ಸದಾಽವಸ್ಥಿತಿಕಾರಣಾತ್ । ದ್ರವಂತಿ ಕಕ್ಷಶ್ವಭ್ರಾಭ್ಯಾಂ ತದಜ್ಞಾನೇಽಪಿ ರಕ್ಷಣಾತ್ । ಮೃಗಾ ಭೀತಾ ಯತಸ್ತೇಷಾಂ ನೃಸಿಂಹಸ್ತ್ವಾಶ್ರಯಃ ಸದಾ ॥ (೨) ಪಿತೃಣಾಮಾಶ್ರಯೋ ಯಸ್ಮಾತ್ಸಂಕರ್ಷಣ ಉದಾಹೃತಃ । ಅತಸ್ತಾನ್ಪ್ರತಿ ಪಿಂಡಾದೀನ್ನಿದಧತ್ಯಜ್ಞಕಾ ಅಪಿ । ಅನ್ಯಥಾ ತನ್ಮೃತಾನಾಂ ತು ಕುತ ಏವೋಪತಿಷ್ಠತಿ ॥ ಇತಿ ಚ ॥ (೩) ನ ರೂಪಾಣಾಂ ವಿಶೇಷೋಽಸ್ತಿ ಗುಣತೋ ನಾಮತೋಽಪಿ ವಾ । ತಥಾಽಪಿ ತತ್ಪ್ರಿಯಂ ನಾಮ ನಾರಾಯಣ ಇತಿ ಸ್ಮ ಹ । ವಿಶೇಷತಃ ॥ (೪) ಸಮಸ್ತಾನಾಂ ನಾಮ್ನಾಂ ತಸ್ಯಾರ್ಥ ಏವ ತು । ವಿಜ್ಞಾಯತೇ ಗುಣೈಃ ಪೂರ್ತಿರ್ನಾಮ ಸಾಮ್ಯಂ ತದಾ ತಥಾ ॥ ಇತಿ ಚ ॥ ನಾಮ್ನೋ ನಾರಾಯಣಾಖ್ಯಸ್ಯ ಗುಣೈಃ ಪೂರ್ತಿಂ ಹಿ ॥ (೫) ದೇವತಾಃ । ವಿಜ್ಞಾಯಾರ್ಥಮುಪಾಸ್ಯೈವ ಸರ್ವಾಧಿಕ್ಯಮುವಾಪಿರೇ ॥ ಇತಿ ಚ ॥ ೧, ೨, ೩, ೪, ೫, ೬, ೭, ೮ ॥ ಇತಿ ನವಮಃ ಖಂಡಃ ॥ ೪—೯ ॥　　　　॥ ೫ ॥**

ಅ ॥ (೧) ಮನುಷ್ಯರನ್ನು ನೋಡಿದೊಡನೆ ಮೃಗಗಳು ಹೆದರುತ್ತವೆ. ಮೃಗಗಳಿಗೆ ನರಸಿಂಹನು ಯಾವಾಗಲೂ ಮುಖ್ಯವಾಗಿ ಆಶ್ರಯನು. ಆ ನರಸಿಂಹನು ಮೃಗಗಳನ್ನು ಕಾಪಾಡುವುದಕ್ಕಾಗಿ ಅರಣ್ಯ (ಗಿಡಗಳ ಪೊದರು) ಗುಹೆಗಳಲ್ಲಿ ಯಾವಾಗಲೂ ವಾಸಿಸುತ್ತಾನೆ. ‡ ನರಸಿಂಹನು ರಕ್ಷಕನೆಂದು ಮೃಗ

---

‡ ಯದ್ಯಪಿ ವನಗುಹೆಗಳೇ ರಕ್ಷಕಗಳೆಂದು ಮೃಗಗಳು ತಿಳಿದಿವೆ ಅವುಗಳಲ್ಲಿದ್ದ ನರಸಿಂಹನು ರಕ್ಷಕನೆಂದು ಮೃಗಗಳು ತಿಳಿಯಲಿಲ್ಲ ಆದರೂ ಅವುಗಳು ಜಡಗಳಾದುದರಿಂದ ವನಗುಹೆಗಳು ರಕ್ಷಿಸುತ್ತವೆಂಬುದು ಕೂಡಲಾರದಾದ ಕಾರಣ ನರಸಿಂಹನೇ ರಕ್ಷಕನು

ಗಳಿಗೆ ಜ್ಞಾನವಿಲ್ಲದಿದ್ದರೂ ಅರಣ್ಯ ಗುಹೆಗಳಿಂದ ತಮಗೆ ರಕ್ಷಣೆಯಾಗಬಹುದೆಂದು ಮೃಗಗಳು ತಿಳಿದು ಅವುಗಳ ಸಮೀಪಕ್ಕೆ ಓಡಿಹೋಗುತ್ತವೆ. (೨) (೮ನೇ ಮಂತ್ರದಲ್ಲಿದ್ದ **ತಸ್ಮಾತ್ತಾನ್ನಿದಧತಿ** ಇತ್ಯಾದಿಗಳ ಅರ್ಥ ಹೇಳುತ್ತಾರೆ—) ಪಿತೃಗಳಿಗೆ ಸಂಕರ್ಷಣನು ಆಶ್ರಯನು. ಅದುಕಾರಣ ಅವರಿಗೆ ಅಜ್ಞರೂ ಕೂಡ ಪಿಂಡ ಮೊದಲಾದವುಗಳನ್ನು ಹಾಕುತ್ತಾರೆ. ಸಂಕರ್ಷಣನು ಆಶ್ರಯನಾಗದಿದ್ದರೆ ಮಕ್ಕಳು ಕೊಟ್ಟ ಪಿಂಡ ಮೊದಲಾದುದು ಮರಣಹೊಂದಿರುವ ತಂದೆತಾಯಿ ಮೊದಲಾದವರಿಗೆ ಹೇಗೆ ದೊರಕೀತು (೩) (ಪುಟ ೭೩ ಭಾಷ್ಯದಲ್ಲಿ **ಇತರಮೂರ್ತೀನಾಂ** ಎಂಬುವಲ್ಲಿ ಬೇರೆ ಭಗವದ್ರೂಪಗಳೂ ಸರ್ವಗುಣ ಪೂರ್ಣಗಳೆಂದು ಹೇಳಿವೆ. ಆ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ ) ಭಗವದ್ರೂಪಗಳಿಗೆ ಗುಣ ದಿಂದಲೂ ನಾಮದಿಂದಲೂ ವಿಶೇಷವಿಲ್ಲ. ಆದರೂ ಶ್ರೀಹರಿಗೆ ನಾರಾಯಣ ಎಂಬುದು ವಿಶೇಷವಾಗಿ ಪ್ರಿಯವಾದ ನಾಮವು. (೪) (ಬೇರೆ ನಾಮಗಳಲ್ಲಿ ಒಂದೊಂದು ನಾಮಕ್ಕೆ ನಾರಾಯಣ ಎಂಬ ನಾಮದ ಸಾಮ್ಯವಿಲ್ಲವಾದರೂ ಸಮಸ್ತ ನಾಮಗಳಿಗೆ ನಾರಾಯಣ ನಾಮದ ಸಾಮ್ಯವು ಬರಬಹುದು ಎಂದರೆ—) ನಾರಾಯಣ ಎಂಬ ನಾಮದ ಅರ್ಥವಾದ ಗುಣಪರಿಪೂರ್ಣತ್ವವೇ ಸಮಸ್ತ ನಾಮಗಳಿಗೂ ಅರ್ಥವೆಂದು ಯಾವಾಗ ತಿಳಿಯುವುದೋ ಆಗ ಸಮಸ್ತ ನಾಮಗಳಿಗೆ ನಾರಾಯಣ ಎಂಬ ನಾಮದ ಸಾಮ್ಯವು ಬಂದೇ ಬರುವುದು. (೫) ದೇವತೆಗಳು ಇಂತಹ ಪ್ರಮೇಯವನ್ನು ತಿಳಿದು ಶ್ರೀನಾರಾಯಣನನ್ನು ಪಾಸನೆ ಮಾಡಿಯೇ ಋಷಿಗಂಧರ್ವಾದಿಗಳಿಂದುತ್ತಮರಾಗಿರುತ್ತಾರೆ. ॥ ೧... ೮ ॥ ೪--೯ ॥ ॥ ೫ ॥

ಒಂಭತ್ತನೇ ಖಂಡವು ಮುಗಿಯಿತು.

---

## ೧೦ನೇ ಖಂಡವು

**ಹೀ**—ಸಾಮನೆನಿಸಿದ ಏಳು ರೂಪಗಳುಳ್ಳ ಶ್ರೀಹರಿಯು ತನ್ನ ಎಲ್ಲಾ ರೂಪಗಳಲ್ಲಿಯೂ ಜ್ಞಾನ ಆನಂದ ಮೊದಲಾದ ಗುಣಗಳಿಂದ ಸಮಾನಿಕನು. ತನ್ನಿಂದ ಕೆಳಗಿನವರಾದ ಬ್ರಹ್ಮರುದ್ರಾದಿಗಳಿಂದ ಸಾಮ್ಯವು ಎಂದಿಗೂ ಇಲ್ಲ. ಅವರಿಗಿಂತ ಉತ್ತಮೋತ್ತಮನೆಂದು ಉಪಾಸನೆ ಮಾಡಬೇಕೆನ್ನುತ್ತಾರೆ—

**ಉ. ॥ ಅಥ ಖಲ್ವಾತ್ಮಸಮ್ಮಿತಮತಿಮೃತ್ಯು ಸಪ್ತವಿಧಂ ಸಾಮೋಪಾಸೀತ ಹಿಂಕಾರ ಇತಿ ತ್ರ್ಯಕ್ಷರಂ ಪ್ರಸ್ತಾವ ಇತಿ ತ್ರ್ಯಕ್ಷರಂ ತತ್ಸಮಂ ॥ ೧ ॥**

**ಅ ॥** ಮೂಲರೂಪದಿಂದ ಸಮಾನವೇ ಆದ ಮರಣವಿಲ್ಲದಿರುವ ಪ್ರದ್ಯುಮ್ನ, ವಾಸುದೇವ ವರಾಹ, ನಾರಾಯಣ, ಅನಿರುದ್ಧ, ನರಸಿಂಹ,ಸಂಕರ್ಷಣ ಹೀಗೆ ಏಳು ರೂಪಗಳುಳ್ಳ ಏಳು ಸಾಮಗಳಿಂದ ವರ್ಣಿಸಲ್ಪಡತಕ್ಕ, ಪರಬ್ರಹ್ಮನನ್ನೇ ಉಪಾಸನೆ ಮಾಡಬೇಕು (ಭಗವದ್ರೂಪಗಳೆಲ್ಲವೂ ಜ್ಞಾನ ಆನಂದ ಬಲಗಳಿಂದ ಸಮಾನಗಳಾಗಿವೆಂಬುದನ್ನು ತೋರಿಸುತ್ತಾರೆ—) (ಹಿಂಕಾರಃ ಎಂಬಲ್ಲಿ ಮೂರು ಅಕ್ಷರಗಳು ಕ್ರಮವಾಗಿ ಜ್ಞಾನ, ಆನಂದ, ಬಲ ಎಂಬುವುದನ್ನು ಹೇಳುತ್ತವೆ. ಹೀಗೆಯೇ ಪ್ರಸ್ತಾವ ಮೊದಲಾದ ಎಲ್ಲಾ ಪದಗಳಲ್ಲಿಯೂ ಮೂರು ಅಕ್ಷರಗಳು ಕ್ರಮವಾಗಿ ಜ್ಞಾನ, ಆನಂದ, ಬಲ ಎಂಬ ಅರ್ಥಗಳನ್ನು ಹೇಳುತ್ತವೆ, ಅವುಗಳಲ್ಲಿ ವರ್ಣಿಸಲ್ಪಡುವ ರೂಪಗಳೆಲ್ಲವೂ ಸಮಾನಗಳೇ ಆಗಿವೆ ಎನ್ನುತ್ತಾರೆ--) ಹಿಂಕಾರಃ ಎಂಬಲ್ಲಿ ಮೂರು ಅಕ್ಷರಗಳು. ಪ್ರಸ್ತಾವಃ ಎಂಬಲ್ಲಿಯೂ ಮೂರು ಅಕ್ಷರಗಳು. ಎರಡರಲ್ಲಿಯೂ ಮೂರು ಮೂರು ಅಕ್ಷರಗಳು ಇದ್ದಕಾರಣ ಎರಡು ಪದಗಳೂ ಸಮಾನಗಳೇ. (ಈ ಪದಗಳಿಂದ ಹೇಳಲ್ಪಡುವ ಪ್ರದ್ಯುಮ್ನ ವಾಸುದೇವ ರೂಪಗಳಿಗೆ ಜ್ಞಾನಾದಿಗುಣಗಳು ಸಮಾನಗಳೇ ಆಗಿವೆ ) ॥ ೧ ॥

**ಉ. ॥ ಆದಿರಿತಿ ದ್ವ್ಯಕ್ಷರಂ ಪ್ರತಿಹಾರ ಇತಿ ಚತುರಕ್ಷರಂ ತತ ಇಹೈಕಂ ತತ್ಸಮಂ ॥ ೨ ॥**

ಅ ॥ ಆದಿಃ ಎಂಬಲ್ಲಿ ಎರಡು ಅಕ್ಷರಗಳು. ಪ್ರತಿಹಾರಃ ಎಂಬಲ್ಲಿ ನಾಲ್ಕು ಅಕ್ಷರ, **ಆದಿ** ಎಂಬ ವರಾಹನಾಮದಲ್ಲಿ ಎರಡು ಅಕ್ಷರಗಳಿದ್ದರೂ **ಪ್ರತಿಹಾರ** ಎಂಬ ಅನಿರುದ್ಧ ನಾಮದಲ್ಲಿ ನಾಲ್ಕು ಅಕ್ಷರಗಳು ಇದ್ದಕಾರಣ ಆ ಪ್ರತಿಹಾರ ನಾಮದಿಂದ **ಪ್ರ** ಎಂಬ ಒಂದು ಅಕ್ಷರವನ್ನು **ಆದಿ** ಎಂಬ ನಾಮದಲ್ಲಿ **ಸೇರಿಸ** ಬೇಕು. ಆದಕಾರಣ ಎರಡು ನಾಮಗಳಲ್ಲಿಯೂ ಮೂರುಮೂರು ಅಕ್ಷರಗಳೇ ಆಗುವವು. ಶ್ರೀಹರಿಯು ತನ್ನ ಎಲ್ಲಾ ರೂಪಗಳಲ್ಲಿಯೂ ಜ್ಞಾನ ಆನಂದ ಮೊದಲಾದ ಗುಣಗಳಿಂದ ಸಮನು. (ಅದುಕಾರಣ ವರಾಹ ಅನಿರುದ್ಧ ರೂಪಗಳೆರಡೂ ಜ್ಞಾನ ಆನಂದಬಲಗಳಿಂದ ಸಮಾನಗಳೇ ಆಗಿವೆ.) ॥ ೨ ॥

**ಉ. ॥ ಉದ್ಗೀಥ ಇತಿ ತ್ರ್ಯಕ್ಷರಮುಪದ್ರವ ಇತಿ ಚತುರಕ್ಷರಂ ತ್ರಿಭಿಸ್ತ್ರಿಭಿಃ ಸಮಂ ಭವತ್ಯಕ್ಷರಮತಿಶಿಷ್ಯತೇ ತ್ರ್ಯಕ್ಷರಂ ತತ್ಸಮಂ ॥ ೩ ॥**

ಅ ॥ ಉದ್ಗೀಥಃ ಎಂಬಲ್ಲಿ ಮೂರು ಅಕ್ಷರಗಳು, ಉಪದ್ರವಃ ಎಂಬಲ್ಲಿ ನಾಲ್ಕು ಅಕ್ಷರಗಳು. ಇವು ಮೂರು ಮೂರು ಅಕ್ಷರಗಳಿಂದ ಸಮಾನಗಳು, ಅದುಕಾರಣ ಉದ್ಗೀಥ ಉಪದ್ರವವೆನಿಸಿಕೊಳ್ಳುವ ನಾರಾಯಣ ನೃಸಿಂಹ ರೂಪಗಳೂ ಜ್ಞಾನ ಆನಂದ ಬಲಗಳಿಂದ ಸಮಾನಗಳು ಉಪದ್ರವ ಎಂಬಲ್ಲಿ ವಃ ಎಂಬದೊಂದು ಅಕ್ಷರವು ಹೆಚ್ಚು ಇದೆ ಅದು ಕ್ಷೀರಾಬ್ಧಿಶಾಯಿಯಾದ ನಾರಾಯಣ ಎಂಬ ಎಂಟನೇ ರೂಪದ ನಾಮವು. ಅದರಲ್ಲಿಯೂ ವಕಾರ ಅಕಾರ ವಿಸರ್ಗ ಹೀಗೆ ಮೂರು ಅಕ್ಷರಗಳು. ಜ್ಞಾನ, ಆನಂದ, ಬಲಗಳಿಂದ ಸಮಾನಗಳೇ ಆಗಿವೆ. ॥ ೩ ॥

**ಉ. ॥ ನಿಧನಮಿತಿ ತ್ರ್ಯಕ್ಷರಂ ತತ್ಸಮೇವ ಭವತಿ ತಾನಿ ಹ ವೈತಾನಿ ದ್ವಾವಿಂಶತಿರಕ್ಷರಾಣಿ ॥ ೪ ॥**

ಅ ॥ ನಿಧನವೆಂಬಲ್ಲಿ ಮೂರು ಅಕ್ಷರಗಳು. ಆ ನಾಮವೂ ಬೇರೆ ನಾಮಗಳಿಗೆ ಸಮಾನವು. ನಿಧನನೆನಿಸಿದ ಸಂಕರ್ಷಣನೂ ಜ್ಞಾನಾದಿಗುಣಗಳಿಂದ ಬೇರೆ ಭಗವದ್ರೂಪಗಳಿಗೆ ಸಮಾನನು. (ಏಳು ರೂಪಗಳುಳ್ಳ ಶ್ರೀಹರಿಯ ಉಪಾಸನೆಯನ್ನು ಹೇಳಿ ಮತ್ತೊಂದು ಉಪಾಸನೆ ಹೇಳುತ್ತಾರೆ—) ಶ್ರೀಹರಿಯ ಏಳು ರೂಪಗಳು ಒಂದೊಂದು ಮೂರು ವಿಧವಾಗಿ ಇದ್ದು ಒಟ್ಟು ಸೇರಿ (೨೧) ಇಪ್ಪತ್ತೊಂದು. ಕ್ಷೀರಾಬ್ಧಿ ಶಾಯಿಯಾದ ಶ್ರೀನಾರಾಯಣನು (೧) ಒಂದು ಹೀಗೆ ಇಪ್ಪತ್ತೆರಡು ಭಗವನ್ಮೂರ್ತಿಗಳು ಹಿಂಕಾರ ಮೊದಲಾದ ಅಕ್ಷರಗಳು (೨೨) ಇಪ್ಪತ್ತೆರಡು ಭಗವದ್ರೂಪಗಳನ್ನು ಹೇಳುತ್ತವೆ. ಪ್ರಸಿದ್ಧ.

ವಿ ॥ ಕೇಶವಾದಿ ೧೨, ಮತ್ಸ್ಯ ಮೊದಲಾದುದು ೯. ಹೀಗೆ ೨೧. ಅದರಲ್ಲಿ ಕೇಶವಾದಿಗಳು ೧೨ ಮಾಸಗಳಿಗೆ ಅಧಿಪತಿಗಳು. ಮತ್ಸ್ಯ ಮೊದಲಾದ ಐವರು ಐದು ಋತುಗಳಿಗೆ ಅಧಿಪತಿಗಳು. ಪರಶುರಾಮ ಮೊದಲಾದವರುನಾಲ್ವರು ಪೃಥಿವೀ ಅಂತರಿಕ್ಷ ಸ್ವರ್ಗ ಸೂರ್ಯರಿಗೆ ಅಧಿಪತಿಗಳು. ॥ ೪ ॥

ಪೀ—೨೧, ೨೨ನೇ ಭಗವನ್ಮೂರ್ತಿಗಳನ್ನು ಉಪಾಸನೆ ಮಾಡಿದ್ದಕ್ಕೆ ಫಲ ಹೇಳುತ್ತಾರೆ—

**ಉ. ॥ ಏಕವಿಂಶತ್ಯಾದಿತ್ಯಮಾಪ್ನೋತ್ಯೇಕವಿಂಶೋ ವಾ ಇತೋಽಸಾವಾದಿತ್ಯೋ ದ್ವಾವಿಂಶೇನ ಪರಮಾದಿತ್ಯಾಜ್ಜಯತಿ ತನ್ನಾಕಂ ತದ್ವಿಶೋಕಂ॥೫॥**

ಅ || ನಂ ಎಂಬ ೨೧ನೇ ಅಕ್ಷರದಿಂದ ಹೇಳಲ್ಪಡುವ ಕಲ್ಕಿ ಸಂಕರ್ಷಣ ರೂಪವನ್ನುಪಾಸನೆ ಮಾಡಿದುದರಿಂದ ಆದಿತ್ಯನೊಳಗಣ ಆದಿತ್ಯನೆನಿಸಿದ ಕಲ್ಕಿ ಸಂಕರ್ಷಣ ರೂಪವನ್ನು ಹೊಂದುತ್ತಾನೆ. (೨೧ನೇ ಅಕ್ಷರದಿಂದ ಹೇಳಲ್ಪಡುವ ಕಲ್ಕಿಯೇ ಆದಿತ್ಯನೊಳಗಿರುವವನು. ಆತನನ್ನುಪಾಸನೆ ಮಾಡಿದವನು ಆ ಶ್ರೀಹರಿಯ ಸಾರೂಪ್ಯ ಮೋಕ್ಷವನ್ನು ಹೊಂದುತ್ತಾನೆ ಎನ್ನುತ್ತಾರೆ- ) ಆದಿತ್ಯನೊಳಗಣ ಕಲ್ಕಿಯು ಜೀವಶರೀರದ ಹಣೆಯಲ್ಲಿದ್ದ ಕೇಶವನನ್ನು ಮೊದಲುಗೊಂಡು ೨೧ನೆಯವನು. (ಕ್ಷೀರಾಬ್ಧಿಶಾಯಿ ಭಗವಂತನನ್ನುಪಾಸನೆ ಮಾಡಿದವನಿಗೆ ಫಲ ಹೇಳುತ್ತಾರೆ ) ವಃ ಎಂಬ ೨೨ನೇ ಅಕ್ಷರದಿಂದ ಹೇಳಲ್ಪಡುವ ಕ್ಷೀರಾಬ್ಧಿಶಾಯಿಯಾದ ಶ್ರೀಹರಿಯನ್ನುಪಾಸನೆ ಮಾಡಿದುದರಿಂದ ಆದಿತ್ಯನೊಳಗಣ ರೂಪದಿಂದ ಬೇರೆಯಾದ ಕ್ಷೀರಸಮುದ್ರದ ಮಧ್ಯದಲ್ಲಿರುವ ಶ್ವೇತದ್ವೀಪದಲ್ಲಿರತಕ್ಕ ಶ್ರೀಹರಿಯ ಸಾಮೀಪ್ಯ ಮೋಕ್ಷವನ್ನು ಉಪಾಸಕನು ಹೊಂದುತ್ತಾನೆ. ಬೇರೆ ೨೦ ಅಕ್ಷರಗಳಿಂದ ಹೇಳಲ್ಪಡುವ ೨೦ ಭಗವದ್ರೂಪಗಳ ಉಪಾಸನೆಯಿಂದ ಆಯಾಯ ರೂಪಗಳ ಸಾಮ್ಯವನ್ನು ಅಂದರೆ ಸಾರೂಪ್ಯ ಮೋಕ್ಷವನ್ನು ಹೊಂದುತ್ತಾನೆ (ಆ ೨೨ ಭಗವದ್ರೂಪಗಳ ಮಹಿಮೆ ಹೇಳುತ್ತಾರೆ—) ಆ ೨೨ ಭಗವದ್ರೂಪಗಳೂ ಪೂರ್ಣಾನಂದ ಸ್ವರೂಪಗಳು. ಭಜಕರ ದುಃಖಗಳನ್ನು ಪರಿಹರಿಸತಕ್ಕವುಗಳು. || ೫ ||

ಪೀ—ಏಳು ಭಗವದ್ರೂಪಗಳನ್ನುಪಾಸನೆ ಮಾಡಿದವನಿಗೆ ಫಲ ಹೇಳುತ್ತಾರೆ—

**ಉ. || ಆಪ್ನೋತೀಹಾದಿತಸ್ಯ ಜಯಂ ಪರೋ ಹಾಸ್ಯಾದಿತ್ಯಜಯಾಜ್ಜಯೋ ಭವತಿ ಯ ಏತದೇವಂವಿದ್ವಾನಾತ್ಮಸಮ್ಮಿತಮತಿಮೃತ್ಯು ಸಪ್ತವಿಧꣳ ಸಾಮೋಪಾಸ್ತೇ ಸಾಮೋಪಾಸ್ತೇ || ಇತಿ ದಶಮಃ ಖಂಡಃ || ೪.೧೦ || ೬ ||**

ಅ || ಜ್ಞಾನಾದಿಗುಣಗಳಿಂದ ಸಮಾನಗಳಾದ, ಮರಣವಿಲ್ಲದ ಏಳು ಭಗವದ್ರೂಪಗಳನ್ನು ಹಿಂದೆ ಹೇಳಿದ ಪ್ರಕಾರ ತಿಳಿದು ಉಪಾಸನೆಮಾಡಿದವನು ಪೃಥಿವ್ಯಾದಿಗಳಲ್ಲಿರತಕ್ಕ ಭಾರ್ಗವ (ಪರಶುರಾಮ) ಮೊದಲಾದ ಭಗವದ್ರೂಪಗಳ ಸಾರೂಪ್ಯವನ್ನು ಹೊಂದುತ್ತಾನೆ. (ಭಗವದ್ರೂಪಗಳಿಗೆ ಭೇದವಿಲ್ಲದಿರುವುದರಿಂದಲೇ) ಪರಶುರಾಮಾದಿಗಳ ಸಾರೂಪ್ಯವನ್ನು ಹೊಂದಿದವನೂ ಆದಿತ್ಯನೊಳಗಣ ಆದಿತ್ಯನೆನಿಸಿದ ಕಲ್ಕಿಸಂಕರ್ಷಣ ರೂಪದ ಸಾಮೀಪ್ಯವನ್ನು ಹೊಂದುತ್ತಾನೆ. ಆ ಆದಿತ್ಯನೆಂಬ ಭಗವದ್ರೂಪದ ಸಾರೂಪ್ಯವನ್ನು ಹೊಂದಿದುದರಿಂದ ಭಗವದ್ರೂಪಗಳಿಗೆ ಅಭೇದವಿದ್ದಪ್ರಯುಕ್ತವೇ ಉಪಾಸಕನು ಪೃಥಿವ್ಯಾದಿಗಳಲ್ಲಿರತಕ್ಕ ಭಗವದ್ರೂಪಸಾರೂಪ್ಯವನ್ನು ಹೊಂದುತ್ತಾನೆ || ೪—೧೦ || || ೬ ||

ಪೀ—೧ನೇ ಮಂತ್ರದ ಅರ್ಥ ಹೇಳುತ್ತಾರೆ—

**ಭಾ. || (೧) ಯಸ್ಯಾನ್ಯಃ ಸದೃಶೋ ನಾಸ್ತಿ ಸ್ವರೂಪಾಣಿ ಸಮಾನಿ ಚ | ಸ ಆತ್ಮಸಮ್ಮಿತೋ ವಿಷ್ಣುಃ || (೨) ಅತಿಮೃತ್ಯುರಮೃತ್ಯುತಃ | ಪ್ರದ್ಯುಮ್ನಾದಿಸ್ವರೂಪೇಣ ಸ ವಿಷ್ಣುಃ ಸಪ್ತಧಾ ಸ್ಥಿತಃ || (೩) ಸಮಾನಿ ತಾನಿ ಸರ್ವಾಣಿ ಜ್ಞಾನಾನಂದಬಲೈಸ್ತಥಾ | ಜ್ಞಾನಾದಿತ್ರಯವಾಚೀನಿ ತ್ರ್ಯಕ್ಷರಾಣ್ಯಪಿ ಸರ್ವಶಃ | ಹಿಂಕಾರಾದೀನಿ ನಾಮಾನಿ ಸರ್ವೇಷಾಮಪಿ ಸರ್ವಶಃ || ೧ ||**

ಅ || (೧) ಯಾರಿಗೆ ಸದೃಶನಾದವನು ಇನ್ನೊಬ್ಬನು ಇಲ್ಲವೋ, ಯಾರ ಸ್ವರೂಪಗಳು ಸಮಾನಗಳೇ ಆಗಿವೆಯೋ (ಅಂದರೆ—ಒಂದು ಭಗವದ್ರೂಪದಲ್ಲಿ ಬೇರೆ ಭಗವದ್ರೂಪಗಳ ಗುಣಗಳಿರುವಿಕೆ.)

ಆತನು ಆತ್ಮಸಮ್ಮಿತನು. (೨) ಮರಣವಿಲ್ಲದಿರುವುದರಿಂದ ಅತಿಮೃತ್ಯುವೆನಿಸಿಸುವವನು. ಪ್ರದ್ಯುಮ್ನ. ವಾಸುದೇವ, ವರಾಹ, ನಾರಾಯಣ, ಅನಿರುದ್ಧ ನೃಸಿಂಹ, ಸಂಕರ್ಷಣ ಎಂದು ವಿಷ್ಣುವಿಗೆ ಏಳು ರೂಪ ಗಳು. (೩)(**ತತ್ಸಮಂ** ಎಂಬ ಐದು ವಾಕ್ಯಗಳ ಅರ್ಥ ಹೇಳುತ್ತಾರೆ – ) ಎಲ್ಲಾ ರೂಪಗಳೂ ಸಮಾನಗಳು. **ಹಿಂಕಾರ ಇತಿ ತ್ರ್ಯಕ್ಷರಂ** ಇತ್ಯಾದಿಗಳ ಅರ್ಥ ಹೇಳುತ್ತಾರೆ—)ಮೂರು ಮೂರು ಅಕ್ಷರಗಳುಳ್ಳ **ಹಿಂಕಾರ** ಮೊದಲಾದ ಎಲ್ಲಾ ನಾಮಗಳೂ ಎಲ್ಲಾ ಭಗವದ್ರೂಪಗಳಿಗೂ ಜ್ಞಾನ ಆನಂದ ಬಲಗಳನ್ನು **ಹೇಳುತ್ತವೆ.** ಅದುಕಾರಣ ಅವುಗಳು ಜ್ಞಾನಾದಿಗಳಿಂದ ಸಮಾನಗಳು ಹಿಂಕಾರಾದಿ ನಾಮಗಳಲ್ಲಿ ಪ್ರತಿವರ್ಣಗಳೂ ಜ್ಞಾನಾದಿಗಳನ್ನು ಹೇಳುತ್ತವೆ. ॥ ೧ ॥

ಪೀ—ಎರಡನೇ ಮಂತ್ರದ ಅರ್ಥ ಹೇಳುತ್ತಾರೆ. ಅದರಲ್ಲಿ **ಆದಿ** ಎಂಬಲ್ಲಿ ಎರಡು ಅಕ್ಷರಗಳು. ಪ್ರತಿಹಾರ ಎಂಬಲ್ಲಿ ನಾಲ್ಕು ಅಕ್ಷರಗಳು. ಅದುಕಾರಣ ಆದಿ ಎಂಬಲ್ಲಿ ಯಾವ ಅಕ್ಷರವನ್ನು ಸೇರಿಸ ಬೇಕೆಂದರೆ—

**ಭಾ. ॥ (೧) ಆದಿನಾಮ್ನಃ ಪ್ರಕಾರಸ್ತು ಯೋಜ್ಯಃ ಸ್ಯಾತ್ಪ್ರತಿಹಾರತಃ । ತೇನ ತ್ರ್ಯಕ್ಷರಮೇವ ಸ್ಯಾನ್ನಾಮದ್ವಯಮಪಿ ಪ್ರಭೋಃ ॥ (೨) ಉಪದ್ರವೇ ತು ವಃಕಾರೋ ಯದ್ಯಪಿ ವ್ಯತಿರಿಚ್ಯತೇ । ನಾಮ ನಾರಾಯಣಸ್ಯೈವ ಸೋಽಪಿ ಕ್ಷೀರಾಬ್ಧಿಶಾಯಿನಃ ॥ ವ್ಯಂಜನಸ್ಸ್ವರಸರ್ಗೈಸ್ತು ಸೋಽಪಿ ಜ್ಞಾನಾದಿವಾಚಕಃ । ತ್ರಿವರ್ಣತ್ವಾತ್ಸಮಃ ಸೋಽಪಿ ಜ್ಞಾನಾದ್ಯೈಃ ಪುರುಷೋತ್ತಮಃ ॥ (೩) ವಃಕಾರಾರ್ಥಪರಿಜ್ಞಾನಾತ್ ಪ್ರಾಪ್ಯೋಽಬ್ಧಿಶಯನಃ ಪ್ರಭುಃ । ಏಕವಿಂಶಾರ್ಣವಿಜ್ಞಾನಾತ್ ಪ್ರಾಪ್ಯೋಽಸೌ ಸೂರ್ಯಮಂಡಲೇ ॥ ೨ ॥**

ಅ ॥ (೧) **ಪ್ರತಿಹಾರ** ಎಂಬ ನಾಮದಿಂದ **ಆದಿ** ಎಂಬ ನಾಮದಲ್ಲಿ **ಪ್ರ** ಎಂಬ ಒಂದು ಅಕ್ಷರವನ್ನು ಸೇರಿಸಿಕೊಳ್ಳಬೇಕು. ಪ್ರ ಆದಿಃ ಅಥವಾ ಆದಿಪ್ರ, ಎನ್ನುವುದೊಂದು ನಾಮವು ತಿಹಾರಃ ಎಂಬುವುದೊಂದು ನಾಮ, ಹೀಗೆ ಶ್ರೀಹರಿಯ ಎರಡು ನಾಮಗಳೂ, ಮೂರು ಅಕ್ಷರಗಳೇ ಆಗುವುವು. (೨) (**ಅಕ್ಷರಮತಿಶಿಷ್ಯತೇ** ಎಂಬ ನಾಲ್ಕನೇ ಮಂತ್ರದ ಅರ್ಥ ಹೇಳುತ್ತಾರೆ—) **ಉಪದ್ರವ** ಎಂಬಲ್ಲಿ **ವಃ** ಎಂಬುದು (ಮೂರು ಅಕ್ಷರಗಳಿಂದ) ಹೆಚ್ಚು ಇದೆ. **ವಃ** ಎಂಬುದು ಕ್ಷೀರಾಬ್ಧಿಶಾಯಿಯಾದ ನಾರಾಯಣನಿಗೇನೇ ಹೆಸರು (**ವಃ** ಎಂಬಲ್ಲಿಯೂ ಮೂರು ಅಕ್ಷರಗಳು ಇವೆ ಎನ್ನುತ್ತಾರೆ—) ವಕಾರ, ಅಕಾರ, ವಿಸರ್ಗ, ಇವುಗಳಿಂದ **ವಃ** ಎಂಬುವಲ್ಲಿಯೂ ಮೂರು ಅಕ್ಷರಗಳು (ಹಿಂಕಾರಾದಿಗಳು ಮಾತ್ರ ಅಲ್ಲ.) ವಕಾರವೂ ಕೂಡ ಜ್ಞಾನ ಆನಂದ ಬಲಗಳನ್ನು ಹೇಳುತ್ತದೆ. (ಪ್ರದ್ಯುಮ್ನಾದಿಗಳು ಮಾತ್ರ ಅಲ್ಲ.) **ವಃ** ಎನ್ನಿಸಿಕೊಂಡ ಕ್ಷೀರಾಬ್ಧಿಶಾಯಿಯಾದ ಶ್ರೀನಾರಾಯಣನು ಕೂಡ ಜ್ಞಾನ ಆನಂದ ಬಲಗಳಿಂದ ಸಮಾನಿಕನು (೩) (೫ನೇ ಮಂತ್ರದಲ್ಲಿದ್ದ **ದ್ವಾವಿಂಶೇನ ಪರಮಾದಿತ್ಯಾಜ್ಜಯತಿ** ಎಂಬುದರ ಅರ್ಥ ಹೇಳುತ್ತಾರೆ—) **ವಃ** ಎಂಬ ೨೨ನೇ ಅಕ್ಷರವನ್ನು ತಿಳಿದುದರಿಂದ ಕ್ಷೀರಾಬ್ಧಿಶಾಯಿಯಾದ ಶ್ರೀನಾರಾಯಣನನ್ನು ಹೊಂದುವರು. (**ಏಕವಿಂಶತ್ಯಾ ಆದಿತ್ಯಮಾಪ್ನೋತಿ** ಎಂಬುದರ ಅರ್ಥ ಹೇಳುತ್ತಾರೆ—) ಇಪ್ಪತ್ತೊಂದು ಅಕ್ಷರಗಳಿಂದ ವರ್ಣಿಸಲ್ಪಡುವ ಭಗವದ್ರೂಪಗಳನ್ನು ತಿಳಿದುದರಿಂದ ಸೂರ್ಯಮಂಡಲದಲ್ಲಿದ್ದ ಶ್ರೀಹರಿಯನ್ನು ಹೊಂದುವರು. ॥ ೨ ॥

ಪೀ—೬ನೇ ಮಂತ್ರದಲ್ಲಿದ್ದ **ದ್ವಾವಿಂಶತಿರಕ್ಷರಾಣಿ** ಎಂಬುದರ ಅರ್ಥ ಹೇಳುತ್ತಾರೆ—

**ಭಾ. ॥ (೧) ಸ ಏವ ಭಗವಾನ್ವಿಷ್ಣುರ್ದ್ವಾವಿಂಶದ್ರೂಪವಾನ್ಯತಃ । ತಾನ್ಯೇವ ಸಪ್ತ ರೂಪಾಣಿ ವಿಭಿದ್ಯಂತೇ ತ್ರಿಧಾ ತ್ರಿಧಾ । ಏಕಃ ಪಯೋಽಬ್ಧಿಶಯನ ಇತಿ ದ್ವಾವಿಂಶತಿಃ ಪ್ರ–**

**ಭೋಃ ॥ (೨) ಪ್ರದ್ಯುಮ್ನಾದ್ಯಾಸ್ತು ಚತ್ವಾರೋ ದ್ವಿಷಣ್ಮಾಸೇಷು ಸಂಸ್ಥಿತಾಃ । ತ್ರಿರಸ್ತ್ರಿಶಃ ಕೇಶವಾದ್ಯಾಃ ॥ (೩)ವಸಂತಾದಿಷು ಪಂಚಮಃ । ರೂಪದ್ವಯಂ ತು ಷಷ್ಠಸ್ಯ ಸ್ಥಿತಂ ಮತ್ಸ್ಯಾದಿಪಂಚಕಂ । ತೃತೀಯಂ ಪೃಥಿವೀಸಂಸ್ಥಂ ಜಾಮದಗ್ನ್ಯಾಖ್ಯಮೇವ ತತ್ । ಅಂತರಿಕ್ಷದ್ಯುಸೂರ್ಯೇಷು ಸಪ್ತಮಸ್ಯ ತ್ರಿಧಾ ತನುಃ । ರಾಮಃ ಕೃಷ್ಣಃ ಕಲ್ಕಿರಿತಿ ತಜ್ಜ್ಞಾನಾತ್ತನ್ಯನಾಪ್ಯ ಚ । ದ್ವಾವಿಂಶೇನ ಪಯೋಽಬ್ಧಿಸ್ಥಂ ಪ್ರಾಪ್ಯತೇ ರೂಪಮಕ್ಷರಂ ॥ (೫) ಏತದ್ದ್ವಾವಿಂಶಕಂ ರೂಪಂ ನಾಕಂ ಚಾಸುಖವರ್ಜನಾತ್ । ಪೂರ್ಣಾನಂದಸ್ವರೂಪತ್ವಾದ್ವಿಶೋಕಂ ಶೋಕನಾಶನಾತ್ ॥ ಇತಿ ಸಾಮಸಂಹಿತಾಯಾಂ ॥ ೩ ॥**

**ಅ** ॥ (೧) ಆ ಶ್ರೀಹರಿಯೇ ಇಪ್ಪತ್ತೆರಡು ರೂಪಗಳುಳ್ಳವನು. (**ಪ್ರದ್ಯುಮ್ನಾದಿ ಸ್ವರೂಪೇಣ ಸ ವಿಷ್ಣುಃ ಸಪ್ತಧಾಸ್ಥಿತಃ** ಎಂಬಲ್ಲಿ ೭ ರೂಪಗಳೆಂದು ಹೇಳಿದುದರಿಂದ ಇಪ್ಪತ್ತೆರಡು (೨೨) ರೂಪಗಳೆಂಬುವುದು ಹೇಗೆ ಕೂಡುತ್ತದೆಂದರೆ— ) ಆ ಏಳು ರೂಪಗಳೇ ಒಂದೊಂದು ಮೂರುಮೂರು ರೂಪಗಳಾಗುತ್ತವೆ. ಕ್ಷೀರಸಮುದ್ರಶಾಯಿಯೊಬ್ಬನು, ಹೀಗೆ ಶ್ರೀಹರಿಗೆ ೨೨ ರೂಪಗಳು. (೨) (ಆ ೨೨ ರೂಪಗಳಿಗೆ ಏನು ಹೆಸರು? ಅವುಗಳು ಎಲ್ಲಿರುತ್ತವೆಂದರೆ—**ದ್ವಾದಶ ಮಾಸಾಃ ಪಂಚರ್ತವಃ ತ್ರಯ ಇಮೇ ಲೋಕಾಃ ಅಸಾವಾದಿತ್ಯ ಏಕವಿಂಶಃ** ಎಂಬ ವೇದವನ್ನನುಸರಿಸಿ ೨೧ ಭಗವನ್ಮೂರ್ತಿಗಳನ್ನು ಹೇಳುತ್ತಾರೆ—) ಪ್ರದ್ಯುಮ್ನ, ವಾಸುದೇವ, ವರಾಹ, ನಾರಾಯಣರೆಂಬ ನಾಲ್ವರು ಪ್ರತಿಯೊಬ್ಬರೂ ಮೂರುಮೂರು ರೂಪಗಳನ್ನು ತಾಳಿ ಕೇಶವ ಮೊದಲಾದ ೧೨ ನಾಮಗಳುಳ್ಳವರಾಗಿ ೧೨ ತಿಂಗಳಿಗೆ ಅಧಿಪತಿಗಳಾಗಿರುತ್ತಾರೆ. (೩) ಅನಿರುದ್ಧನ ಮೂರು ರೂಪಗಳು, ನರಸಿಂಹನ ಎರಡು ರೂಪಗಳೂ ಹೀಗೆ ಐದು ಭಗವದ್ರೂಪಗಳು. ಮತ್ಸ್ಯ ಮೊದಲಾದ ಐದು ರೂಪಗಳಾಗಿ ವಸಂತ ಮೊದಲಾದ ಐದು ಋತುಗಳಿಗೆ ಅಧಿಪತಿಗಳಾಗಿರುತ್ತಾರೆ. ನರಸಿಂಹನ ಪರಶುರಾಮ ಎಂಬ ಮೂರನೇ ರೂಪವು ಪೃಥಿವಿಯಲ್ಲಿದ್ದು ಪೃಥಿವಿಗೆ ಅಧಿಪತಿಯು. (೪) ೭ನೇ ಸಂಕರ್ಷಣನು ರಾಮ, ಕೃಷ್ಣ, ಕಲ್ಕಿ ಎಂದು ಮೂರು ರೂಪದಿಂದ ಅಂತರಿಕ್ಷ ಸ್ವರ್ಗ ಸೂರ್ಯರಿಗೆ ನಿಯಾಮಕನಾಗಿರುತ್ತಾನೆ. ಆಯಾಯ ಭಗವದ್ರೂಪಗಳನ್ನು ತಿಳಿದುಕೊಂಡು ಆಯಾಯ ರೂಪಗಳ ಸಾಮೀಪ್ಯವನ್ನು ಹೊಂದುತ್ತಾನೆ. ೨೨ನೇ ರೂಪಜ್ಞಾನದಿಂದ (**ಯಾವಚ್ಛ್ವೇತಂ ನ ಗಚ್ಛತಿ ಯೋಗೀ ತಾವನ್ನ ಮುಕ್ತಃಸ್ಯಾತ್** ಇದುಮೊದಲಾದ ಪ್ರಮಾಣದಿಂದ) ಸರ್ವರೂ ಕ್ಷೀರಸಮುದ್ರದಲ್ಲಿರುವ ಭಗವದ್ರೂಪವನ್ನು ನೋಡಿಯೇ ಮುಕ್ತರಾಗುತ್ತಾರೆ (೫) (೫ನೇ ಮಂತ್ರದಲ್ಲಿದ್ದ **ತನ್ನಾಕಂ ತದ್ವಿಶೋಕಂ** ಎಂಬುದರ ಅರ್ಥ ಹೇಳುತ್ತಾರೆ —) ಈ ೨೨ ಭಗವದ್ರೂಪಗಳೂ ಸ್ವಲ್ಪ ದುಃಖವೂ ಇಲ್ಲದಿರುವುದರಿಂದಲೂ ಪೂರ್ಣಾನಂದ ಸ್ವರೂಪಗಳಾದುದರಿಂದಲೂ **ನಾಕಂ** ಎಂದೂ ಭಕ್ತರ ದುಃಖವನ್ನು ಪರಿಹರಿಸುವುದರಿಂದ **ವಿಶೋಕಂ** ಎಂದೂ ಅನ್ನಿಸುತ್ತವೆ, ಎಂದು ಸಾಮಸಂಹಿತೆಯಲ್ಲಿ ಹೇಳಿದೆ ॥ ೩ ॥

**ಪೀ** – ೬ನೇ ಮಂತ್ರದಲ್ಲಿದ್ದ ೧ **ಆಪ್ನೋತೀಹಾದಿತ್ಯಸ್ಯ ಜಯಂ** ೨ **ಪರೋ ಹಾಸ್ಯಾದಿತ್ಯಸ್ಯ** ಎಂಬ ಎರಡು ವಾಕ್ಯಗಳಿಗೆ ಅರ್ಥ ಹೇಳುತ್ತಾರೆ—

**ಭಾ. ॥ (೧) ಪ್ರಾಪ್ನೋತೀಹಾದಿತ್ಯಸ್ಯ ಜಯಂ । ಇಹ ಪೃಥಿವ್ಯಾದಿಷು ಸ್ಥಿತಭಗವತ್ಪ್ರಾಪ್ತಾವಪ್ಯಾದಿತ್ಯಸ್ಥ ಏವ ಪ್ರಾಪ್ಯತೇ । ಐಕ್ಯಾತ್ ॥(೨) ಪರೋ ಹಾಸ್ಯಾದಿತ್ಯಸ್ಯಜಯಾಜ್ಜಯೋ ಭವತಿ । ಆದಿತ್ಯಸ್ಥಸ್ಯಾದಿತ್ಯನಾಮ್ನೋ ಭಗವತಃ ಪ್ರಾಪ್ತ್ಯಾ ಪರೋ ಜಯಃ ರೂಪಾಂತರಪ್ರಾಪ್ತಿರಪಿ ಭವತಿ ॥ (೩) ಸ್ವರೂಪಮೇಕಂ ಪ್ರಾಪ್ತಸ್ತು ವಿಷ್ಣೋಃ ಸ್ಯಾತ್ಸರ್ವ**

**ರೂಪಗಃ। ಐಕ್ಯಾತ್ತಥಾಽಪಿ ಸಂಪ್ರಾಪ್ತಿರ್ಬಹೂಪಾಸ್ತ್ಯಾ ಸುಖಾಧಿಕೀ ॥ ಇತಿ ಚ ॥ ಜಯೋ ನಾಮ ಪ್ರಾಪ್ತಿರೇವ । ಧನಜಿತೇ ಸ್ವರ್ಜಿತೇ ಸತ್ರಾಜಿತ ಇತ್ಯಾದಿವತ್ ॥ (೪) ಕೇಶವಾದಿ-ರೂಪೇಣ ಲಲಾಟಾದಿಷು ಸ್ಥಿತೇರಿತ ಏಕವಿಂಶ ಇತ್ಯುಚ್ಯತೇ । ಚಿತ್ರಾದಿಯೋಗದಾತೃತ್ವಾ-ನ್ಮಾಸನಾಮಾ ಸ್ವಯಂ ಹರಿಃ । ಲೋಕಃ ಪ್ರಕಾಶರೂಪತ್ವಾದಾದಿತ್ಯಶ್ಚಾದನಾದಪಾಂ ॥ ಇತಿ ಚ ॥ ೧, ೨, ೩, ೪, ೫, ೬ ॥ ಇತಿ ದಶಮಃ ಖಂಡಃ ॥ ೪–೧೦ ॥ ॥ ೪ ॥**

ಅ ॥ (೧) ಆಪ್ನೋತೀಹಾದಿತ್ಯಜಯಂ ಎಂಬುದಕ್ಕೆ ಭಗವದ್ರೂಪಗಳಿಗೆ ಐಕ್ಯವಿದ್ದ ಕಾರಣ ಪೃಥಿವ್ಯಾದಿಗಳಲ್ಲಿರತಕ್ಕ ಭಾರ್ಗವ ಮೊದಲಾದ ಭಗವದ್ರೂಪಗಳ ಸಾಮೀಪ್ಯವನ್ನು ಹೊಂದಿದರೂ ಆದಿತ್ಯನಲ್ಲಿರತಕ್ಕ ಕಲ್ಕಿಸಂಕರ್ಷಣರೂಪಸಾಮೀಪ್ಯವನ್ನೇ ಉಪಾಸಕರು ಹೊಂದುತ್ತಾರೆ. (೨) **ಪರೋಹಾಸ್ಯಾದಿತ್ಯಸ್ಯ ಜಯೋಜ್ಜಯೋ ಭವತಿ** ಎಂಬುದಕ್ಕೆ ರೂಪಗಳಿಗೆ ಅಭೇದವಿದ್ದುಪ್ರಯುಕ್ತವೇ ಆದಿತ್ಯನಲ್ಲಿರತಕ್ಕ ಆದಿತ್ಯನೆನಿಸಿದ ಶ್ರೀಹರಿಯ ಸಮೀಪವನ್ನು ಹೊಂದುವುದರಿಂದ ಉಪಾಸಕನು ಪೃಥಿವ್ಯಾದಿಗಳಲ್ಲಿರತಕ್ಕ ಭಗವದ್ರೂಪಗಳ ಸಾಮ್ಯವನ್ನು ಹೊಂದುತ್ತಾನೆ. **(೩)** (ಹೇಳಿದ ಈ ಅರ್ಥದಲ್ಲಿ ಪ್ರಮಾಣ ಹೇಳುತ್ತಾರೆ—) ಭಗವದ್ರೂಪಗಳಿಗೆ ಭೇದವಿಲ್ಲದ ಕಾರಣ ಶ್ರೀಹರಿಯ ಒಂದುರೂಪದ ಸಮೀಪಕ್ಕೆ ಹೋದವನು ಎಲ್ಲಾ ಭಗವದ್ರೂಪಗಳ ಸಮೀಪಕ್ಕೆ ಹೋಗುತ್ತಾನೆ. ಆದರೂ ಅನೇಕಾವರ್ತಿ ಉಪಾಸನೆ ಮಾಡಿದುದರಿಂದ ಹೆಚ್ಚು ಸುಖವುಳ್ಳವನಾಗಿ ಒಂದು ಭಗವದ್ರೂಪದ ಸಮೀಪದಲ್ಲಿ ಹೆಚ್ಚಾಗಿ ಇರುತ್ತಾನೆ. ಇಲ್ಲಿ ಜಯವೆಂದರೆ ಪ್ರಾಪ್ತಿ=ಹೊಂದುವುದು. ಧನಜಿತೇ=ಹಣವನ್ನು ಹೊಂದಿದವನಿಗೆ, ಸ್ವರ್ಜಿತೇ=ಸ್ವರ್ಗವನ್ನು ಹೊಂದಿದವನಿಗೆ, ಸತ್ರಾಜಿತೇ=ಯಾಗವನ್ನು ಹೊಂದಿದವನಿಗೆ, ಇದುಮೊದಲಾದ ಪ್ರದೇಶಗಳಲ್ಲಿ ಜಿತ್ ಶಬ್ದಕ್ಕೆ ಪ್ರಾಪ್ತಿಯೆಂದು ಅರ್ಥವನ್ನು ಹೇಳಿದುದರಿಂದ ಇಲ್ಲಿಯೂ ಪ್ರಾಪ್ತಿಯೆಂದೇ ಅರ್ಥ ಹೇಳಬೇಕು (೪) (**ಏಕವಿಂಶೋ ವಾ ಇತೋಽಸಾವಾದಿತ್ಯಃ** ಎಂಬಲ್ಲಿ ಇತಃ ಎಂಬುದರಿಂದ ಯಾವುದನ್ನು ಇಟ್ಟುಕೊಳ್ಳಬೇಕೆಂದರೆ-) ೧೨ಮಾಸಗಳಿಗೆ ಅಧಿಪತಿಗಳಾದ ಕೇಶವ ಮೊದಲಾದ ೧೨ ಭಗವದ್ರೂಪಗಳೇ ದೇಹದ ಲಲಾಟ (ಹಣೆ) ಮೊದಲಾದವುಗಳಲ್ಲಿಯೂ ಇರುತ್ತವೆ. ಏವಂಚ **ಲಲಾಟೇ ಕೇಶವಂ ವಿಂದ್ಯಾತ್** ಎಂಬ ಸ್ಮೃತಿಯಿಂದ ಕೇಶವನು ಲಲಾಟಕ್ಕೆ ಅಧಿಪತಿಯಾದ ಕಾರಣ ಇತಃ ಎಂಬುದಕ್ಕೆ ಕೇಶವನನ್ನಾರಂಭಿಸಿ ಆದಿತ್ಯನೊಳಗಣಶ್ರೀಹರಿಯು ೨೧ನೆಯವನು, ಎನಿಸುತ್ತಾನೆ (**ದ್ವಾದಶ ಮಾಸಾಃ ಇಮೇ ಲೋಕಾಃ** ಇತ್ಯಾದಿವೇದಗಳಲ್ಲಿ **ಮಾಸ ಲೋಕ** ಆದಿತ್ಯನಾಮಗಳಿಂದ ಶ್ರೀಹರಿಯನ್ನೇ ಇಟ್ಟುಕೊಳ್ಳಬೇಕೆಂಬಲ್ಲಿ ಪ್ರಮಾಣ ಹೇಳುತ್ತಾರೆ—) ಪೂರ್ಣಚಂದ್ರನಿಗೆ ಹಸ್ತ ಚಿತ್ರೆ ಸ್ವಾತಿ ಹೀಗೆಯೇ ವಿಶಾಖಾದಿ ನಕ್ಷತ್ರಗಳ ಸಂಬಂಧವನ್ನು ಕೊಡುವುದರಿಂದ ಶ್ರೀಹರಿಯು ತಾನೇ ಮುಖ್ಯವಾಗಿ ಚೈತ್ರ ಮೊದಲಾದ ಮಾಸಗಳ ಹೆಸರುಳ್ಳವನು. ಪ್ರಕಾಶರೂಪನಾದುದರಿಂದ ಲೋಕನೆಂದೂ, ಕಿರಣಗಳಿಂದ ನೀರನ್ನು ಸೆಳೆಯುವುದರಿಂದ ಆದಿತ್ಯನೆಂದೂ ಎನಿಸುತ್ತಾನೆ.

ವಿ ॥ (1) **ಹಿಂಕಾರವನ್ನಾರಂಭಿಸಿ ನಿಧನಂ** ಎಂಬ ಪರ್ಯಂತ ಏಳರಲ್ಲಿ ಒಂದೊಂದರಲ್ಲಿ ಮೂರು ಮೂರು ಅಕ್ಷರಗಳಿದ್ದುದರಿಂದ ಒಟ್ಟುಸೇರಿ (೨೧) ಇಪ್ಪತ್ತೊಂದು ಅಕ್ಷರಗಳು. **ವಃ** ಎಂಬುದು (೨೨)ಇಪ್ಪತ್ತೆರಡನೇ ಅಕ್ಷರವು. ಹಿಂಕಾರಮೊದಲಾದ ಏಳು ಪದಗಳಿಂದ ಪ್ರದ್ಯುಮ್ನ, ವಾಸುದೇವ ವರಾಹ, ನಾರಾಯಣ, ಅನಿರುದ್ಧ, ನರಸಿಂಹ, ಸಂಕರ್ಷಣ, ಎಂಬ ೭ರೂಪಗಳು ಹೇಳಲ್ಪಡುತ್ತವೆ. ಪ್ರಥಮದ ನಾಲ್ಕು ರೂಪಗಳು ಕೇಶವನನ್ನಾರಂಭಿಸಿ ದಾಮೋದರ ಪರ್ಯಂತ ೧೨ ರೂಪಗಳಿಂದ ಪ್ರತ್ಯೇಕವಾಗಿ ಒಂದೊಂದು ರೂಪವು ಕ್ರಮವಾಗಿ ಮೂರು ಮೂರಾಗಿ **ಹಿಮ್** ಎಂಬುದನ್ನಾರಂಭಿಸಿ ಪ್ರ ಎಂಬ ಪರ್ಯಂತ ೧೨ ಅಕ್ಷರಗಳಿಂದ ವರ್ಣಿಸಲ್ಪಡುತ್ತವೆ. ಅವರು ಕೇಶವಪ್ರದ್ಯುಮ್ನ, ನಾರಾಯಣಪ್ರದ್ಯುಮ್ನ ಮಾಧವಪ್ರದ್ಯುಮ್ನ. (2) ಗೋವಿಂದವಾಸುದೇವ, ವಿಷ್ಣುವಾಸುದೇವ, ಮಧುಸೂದನವಾಸುದೇವ. (3) ತ್ರಿವಿ

ಕ್ರಮವರಾಹ, ವಾಮನವರಾಹ, ಶ್ರೀಧರವರಾಹ. (4) ಹೃಷೀಕೇಶನಾರಾಯಣ, ಪದ್ಮನಾಭನಾರಾಯಣ, ದಾಮೋದರನಾರಾಯಣ ಎಂಬ ಹೆಸರಿನಿಂದ ಚೈತ್ರ ಮೊದಲಾದ ೧೨ ಮಾಸಗಳಿಗೆ ಅಧಿಪತಿಗಳಾಗಿರುತ್ತಾರೆ. (5) ಪ್ರತಿಹಾರ ಉಪದ್ರವ ನಿಧನ ಎಂಬ ಮೂರು ಸಾಮಗಳಿಂದ ಹೇಳಲ್ಪಡತಕ್ಕ ಅನಿರುದ್ಧ,) ನರಸಿಂಹ, ಸಂಕರ್ಷಣರು ಮತ್ಸ್ಯರೂಪವನ್ನು ಆರಂಭಿಸಿ ಕಲ್ಕಿಪರ್ಯಂತ ಒಂಭತ್ತು ರೂಪಗಳಿಂದ ಒಬ್ಬೊಬ್ಬರು ಮೂರು ಮೂರು ರೂಪಗಳುಳ್ಳವರಾಗಿ ಕ್ರಮವಾಗಿ ಹಿ ಎಂಬುದನ್ನಾರಂಭಿಸಿ ನಂ ಎಂಬ ಪರ್ಯಂತ ಒಂಭತ್ತು ಅಕ್ಷರಗಳಿಂದ ಹೇಳಲ್ಪಡುತ್ತಾರೆ. ಅವು ಮತ್ಸ್ಯಾನಿರುದ್ಧ, ಕೂರ್ಮಾನಿರುದ್ಧ, ವರಾಹಾನಿರುದ್ಧ. ನರಸಿಂಹನರಸಿಂಹ, ವಾಮನನರಸಿಂಹ, ಭಾರ್ಗವನರಸಿಂಹ. ರಾಮಸಂಕರ್ಷಣ, ಕೃಷ್ಣಸಂಕರ್ಷಣ, ಕಲ್ಕಿಸಂಕರ್ಷಣ ಎಂಬ ಹೆಸರಿನಿಂದ ಐದು ಋತುಗಳು ಪೃಥಿವೀ, ಅಂತರಿಕ್ಷ, ದ್ಯು, ಸೂರ್ಯ ಇವರಲ್ಲಿ ಇರುತ್ತಾರೆ. ೧೨ ತಿಂಗಳು ೫ ಋತುಗಳು ೩ ಲೋಕಗಳು ಒಟ್ಟು ಸೇರಿ (೨೦) ಇಪ್ಪತ್ತು. ಆದಿತ್ಯನು ೨೧ನೇಯವನು. ಪಃ ಎಂಬುದು ೨೨ನೇದ್ದು. ಆ ಕ್ಷೀರಾಬ್ಧಿಶಾಯಿಯಾದ ಶ್ರೀನಾರಾಯಣನನ್ನುಪಾಸನೆ ಮಾಡಿದುದರಿಂದ ಆತನ ಲೋಕವನ್ನು ಹೊಂದುತ್ತಾನೆ ಹೀಗೆಯೇ ಆಯಾಯ ಭಗವದ್ರೂಪಗಳನ್ನುಪಾಸನೆ ಮಾಡಿದುದರಿಂದ ಆಯಾಯ ಭಗವದ್ರೂಪಗಳ ಸಾರೂಪ್ಯಾದಿಗಳನ್ನು ಹೊಂದುತ್ತಾನೆ. ‖ ೧, ೨, ೩, ೪, ೫, ೬ ‖ ‖ ೪—೧೦ ‖ ‖ ೪ ‖

ಹತ್ತನೇ ಖಂಡವು ಮುಗಿಯಿತು.

## ೧೧ನೇ ಖಂಡವು

ಪೀ— ಮೊದಲು ಸಾಮಗಳ ಹೆಸರನ್ನು ಎತ್ತಿಹೇಳದೆ ಐದು ವಿಧ, ಏಳು ವಿಧ ಸಾಮಗಳಲ್ಲಿ ಶ್ರೀಹರಿಯನ್ನುಪಾಸನೆಮಾಡಬೇಕೆಂದಿಷ್ಟು ಮಾತ್ರ ಹೇಳಿರುವರು. ಈಗ ಸಾಮವಿಶೇಷಗಳ ಹೆಸರನ್ನು ಹೇಳುತ್ತಾ ಗಾಯತ್ರ ಸಾಮದಿಂದ ಮಾಡತಕ್ಕ ಉಪಾಸನೆ ಹೇಳುತ್ತಾರೆ—

**ಉ. ‖ ಮನೋ ಹಿಂಕಾರೋ ವಾಕ್ಪ್ರಸ್ತಾವಶ್ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರಃ ಪ್ರಾಣೋ ನಿಧನಮೇತದ್ಗಾಯತ್ರಂ ಪ್ರಾಣೇಷು ಪ್ರೋತಸ್ ಸ ಯ ಏವಮೇತದ್ಗಾಯತ್ರಂ ಪ್ರಾಣೇಷು ಪ್ರೋತಂ ವೇದ ಪ್ರಾಣೀ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಮಹಾಮನಾಃ ಸ್ಯಾತ್ತದ್ವ್ರತಂ ‖ ಇತ್ಯೇಕಾದಶಃ ಖಂಡಃ ‖ ‖ ೪-೧೧ ‖ ‖ ೧ ‖**

ಅ ‖ ಹಿಂ ಎನಿಸಿಕೊಂಡ ಪ್ರದ್ಯುಮ್ನನು ಮನಃ ಎನಿಸುವನು, ಮನಸ್ಸಿನಲ್ಲಿರುವವನು. ಪ್ರಸ್ತಾವನೆನಿಸಿದ ವಾಸುದೇವನು ವಾಕ್ ಎನಿಸುವನು, ವಾಗಿಂದ್ರಿಯದಲ್ಲಿರುವವನು. ಉದ್ಗೀಥನೆನಿಸಿದ ನಾರಾಯಣನು ಚಕ್ಷುಃ ಎನಿಸುವನು, ಕಣ್ಣಿನೊಳಗೆ ಇರುವವನು. ಪ್ರತಿಹಾರನೆನಿಸಿದ ಅನಿರುದ್ಧನು ಶ್ರೋತ್ರದಲ್ಲಿರುವವನು, ಶ್ರೋತ್ರನೆನಿಸುವನು. ನಿಧನನೆನಿಸಿದ ಸಂಕರ್ಷಣನು ಪ್ರಾಣನೆನಿಸುತ್ತಾನೆ, ಪ್ರಾಣನಲ್ಲಿರುವವನು. ಪ್ರಾಣನೊಳಗಣ ವಿಷ್ಣುವನ್ನಾಶ್ರಯಿಸುತ್ತಿರುವ ಗಾಯತ್ರ ಸಾಮವು ಇಂದ್ರಿಯಗಳೊಳಗಣ ವಿಷ್ಣುರೂಪಗಳನ್ನು ಸ್ತುತಿಸುತ್ತದೆ. ವಿಷ್ಣುರೂಪಗಳಿಂದ ಪ್ರೇರಿಸಲ್ಪಡುತ್ತದೆ. ಇದನ್ನು ತಿಳಿದವನು

ಪ್ರಾಣನಲ್ಲಿದ್ದ ವಿಷ್ಣುವಿನ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ ಮೋಕ್ಷವನ್ನು ಹೊಂದುತ್ತಾನೆ. ಜ್ಞಾನಿಯಾಗಿ ವೇದವನ್ನು ಸಂಪೂರ್ಣವಾಗಿ ತಿಳಿಯುತ್ತಾನೆ. ಈ ಲೋಕದಲ್ಲಿಯೂ ಸರ್ವಜ್ಞನಾಗಿ ಬಾಳುವನು. ಒಳ್ಳೇ ಮಕ್ಕಳುಳ್ಳವನೂ ಬಹುಪಶುಗಳುಳ್ಳವನೂ, ಕೀರ್ತಿಯುಳ್ಳವನೂ ಆಗುತ್ತಾನೆ. ಗಾಯತ್ರಸಾಮಜ್ಞಾನಿಗೆ ಪ್ರಶಸ್ತಮನಸ್ಸು ಇರುವಿಕೆ ಎಂಬ ವ್ರತವಾವಶ್ಯಕವು. ॥ ೧ ॥

**ಭಾ. ॥ (೧) ಪ್ರಾಣಸಂಸ್ಥೇ ಹರೌ ಪ್ರೋತಂ ಗಾಯತ್ರಂ ಸಾಮ ಸರ್ವದಾ। ತದ್ವಾಚಕಂ ನಿಯಮ್ಯಂ ಚೇತ್ಯತಃ ಪ್ರೋತಮಿತೀರ್ಯತೇ ॥ (೨) ಪ್ರಾಣಸ್ಥವಿಷ್ಣೋಃ ಸಾಮೀಪ್ಯಾತ್ತತ್ಸ್ಥಮೇತದಿತೀರ್ಯತೇ । ಕ್ವಚಿನ್ನಿರ್ದೇಶಸಾಮೀಪ್ಯಾದ್ವಿಷ್ಣೋರೇತದಿತೀರ್ಯತೇ ॥ ಇತಿ ಚ ॥ (೩) ಪ್ರಾಣಸ್ಥವಿಷ್ಣುಲಾಲ್ಯತ್ವಾತ್ಪ್ರಾಣೇತ್ಯೇವಾಭಿಧೀಯತೇ । ಮೋಕ್ಷಸ್ತು ಸರ್ವಮಾಯುಃ ಸ್ಯಾನ್ನಿತ್ಯತ್ವಾಜ್ಜ್ಯೋಕ್ಸಮಸ್ತವಿತ್ ॥ ಇತಿ ಚ ॥ ॥ ೧ ॥ ಇತ್ಯೇಕಾದಶಃ ಖಂಡಃ ॥ ॥ ೪-೧೧ ॥ ॥ ೧ ॥**

ಅ ॥ (೧) ಪ್ರಾಣನೊಳಗಣ ಶ್ರೀಹರಿಯಲ್ಲಿ ಗಾಯತ್ರ ಸಾಮವು ಸರ್ವದಾ ಸಂಬದ್ಧವಾಗಿದೆ. ಆ ಸಾಮವು ಶ್ರೀಹರಿಯನ್ನು ಹೇಳುತ್ತದೆ. ಆ ಶ್ರೀಹರಿಯ ಅಧೀನದಲ್ಲಿರತಕ್ಕುದು. ಆದಕಾರಣ ಪ್ರೋತವೆನಿಸುತ್ತದೆ. (೨) ಪ್ರಾಣನೊಳಗಣ ಶ್ರೀಹರಿಯು **ಮನೋ ಹಿಂಕಾರಃ** ಇತ್ಯಾದಿಗಳಿಂದ ಪ್ರಸ್ತಾಪಿಸಲ್ಪಟ್ಟದ್ದರಿಂದ ಅದರಲ್ಲಿರತಕ್ಕ ಗಾಯತ್ರ ಸಾಮವೂ ಪ್ರಸ್ತಾವಿಸಲ್ಪಟ್ಟದೆ. ಅದುಕಾರಣ ಅದರಲ್ಲಿರತಕ್ಕ ಗಾಯತ್ರಸಾಮವನ್ನು **ಏತತ್** ಎಂಬುವರಿಂದ ಇಟ್ಟುಕೊಳ್ಳಬೇಕು. ಕೆಲವು ಕಡೆ ವಿಷ್ಣುವನ್ನು ವಾಕ್ಯದೊಳಗಣ ಶಬ್ದದ ಸಮೀಪದಲ್ಲಿಯೇ ಹೇಳಿದುದರಿಂದ **ಸ ಏನ್ಮೈತತ್** ಇತ್ಯಾದಿಗಳಲ್ಲಿ ಏತತ್ ಶಬ್ದದಿಂದ ವಿಷ್ಣುವನ್ನು ಇಟ್ಟುಕೊಳ್ಳಬೇಕು. (೩) ಪ್ರಾಣನೊಳಗಣ ವಿಷ್ಣುವಿನಿಂದ ಜೀವನು ಲಾಲಿಸಲ್ಪಡುವುದರಿಂದ **ಪ್ರಾಣೇ** ಎಂದೇ ಅನಿಸುತ್ತಾನೆ. ಸರ್ವಮಾಯುಃ=ಮೋಕ್ಷವು. ಜ್ಯೋಕ್=ಸಮಸ್ತವನ್ನು ತಿಳಿದವನು. ॥ ೧ ॥ ॥ ೪-೧೧ ॥ ॥ ೧ ॥

**ಹನ್ನೊಂದನೇ ಖಂಡವು ಮುಗಿಯಿತು.**

## ೧೨ನೇ ಖಂಡವು

**ಪೀ** -ರಥಂತರ ಸಾಮದಲ್ಲಿ ಹೇಳಲ್ಪಡತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ—

**ಉ. ॥ ಅಭಿಮಂಥತಿ ಸ ಹಿಂಕಾರೋ ಧೂಮೋ ಜಾಯತೇ ಸ ಪ್ರಸ್ತಾವೋ ಜ್ವಲತಿ ಸ ಉದ್ಗೀಥೋಽಂಗಾರಾ ಭವಂತಿ ಸ ಪ್ರತಿಹಾರ ಉಪಶಾಮ್ಯತಿ ತನ್ನಿಧನಂ ಸಂಶಾಮ್ಯತಿ ತನ್ನಿಧನಮೇತದ್ರಥಂತರಮಗ್ನೌ ಪ್ರೋತಮ್॥೧॥**

**ಅ ॥** ಪ್ರದ್ಯುಮ್ನನು ಅರಣಿಮಥನದಲ್ಲಿರುವವನು, ವಾಸುದೇವನು ಹುಟ್ಟತಕ್ಕ ಹೊಗೆಗೆ ಅಧಿಪತಿಯು, ನಾರಾಯಣನು ಅಗ್ನಿಜ್ವಾಲೆಗೆ ಅಧಿಪತಿಯು, ಅನಿರುದ್ಧನು ಬೆಂಕಿಗೆ ಅಧಿಪತಿಯು, ಸಂಕರ್ಷಣನು ಉಳಿದ ಬೆಂಕಿಯ ಕಿಡಿಗೂ ಸಂಪೂರ್ಣ ಅದರ ನಾಶಕ್ಕೂ ಅಧಿಪತಿಯು. ಅಗ್ನಿಯೊಳಗಣ ಶ್ರೀಹರಿಯನ್ನು ಹೇಳುವ ರಥಂತರಸಾಮವು. ಅಗ್ನಿಯೊಳಗಣ ಶ್ರೀಹರಿಯನ್ನು ಹೇಳುತ್ತದೆ. ಆ ಶ್ರೀಹರಿಯಿಂದ ಪ್ರೇರಿಸಲ್ಪಡತಕ್ಕುದು. ॥ ೧ ॥

**ಉ. ॥ ಸ ಯ ಏವಮೇತದ್ರಥಂತರಮಗ್ನೌ ಪ್ರೋತಂ ವೇದ ಬ್ರಹ್ಮವ-ರ್ಚಸ್ವ್ಯನ್ನಾದೋ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ನ ಪ್ರತ್ಯಙ್ಙಗ್ನಿಮಾಚಾಮೇನ್ನ ನಿಷ್ಠೀವೇತ್ತ-ದ್ವ್ರತಂ ॥ ಇತಿ ದ್ವಾದಶಃ ಖಂಡಃ ॥ ೪-೧೨ ॥ ॥ ೨ ॥**

ಅ ॥ ಹಿಂದೆ ಹೇಳಿದ ಪ್ರಕಾರ ತಿಳಿದವನು ಶ್ರೀವಿಷ್ಣುವಿನ ಅನುಗ್ರಹದಿಂದ ಅಭಿವೃದ್ಧವಾದ ಸ್ವರೂಪ ತೇಜಸ್ಸುಳ್ಳವನು (ಅಂದರೆ --ಮೋಕ್ಷದಲ್ಲಿ ತೇಜಃಸ್ವರೂಪನಾಗತಕ್ಕವನು) ಯಥೇಷ್ಟ ಅನ್ನವನ್ನು ಉಣ್ಣುವವನು ಆಗುತ್ತಾನೆ *............ಅಗ್ನಿಯ ಇದಿರಿನಲ್ಲಿ ಆಚಮನ ಮಾಡಬಾರದು. ಉಣ್ಣಬಾರದು. ಕಫವನ್ನು ಉಗುಳಬಾರದು. ॥ ೧೨ ॥

**ಭಾ. ॥ ಮಂಥನಾದಿಸ್ಥಿತಂ ಯಸ್ತು ತನ್ನಾಮಾನಂ ಹರಿಂ ಪರಂ । ತತ್ತತ್ಕ್ರಿಯೈಕ-ಹೇತುತ್ವಾದ್ಯೋಽಗ್ನೌ ಧ್ಯಾಯೇಜ್ಜನಾರ್ದನಂ ॥ ರಥಂತರಾಶ್ರಯಂ ಪಂಚರೂಪಂ ಸ ಚ ವಿಮುಚ್ಯತೇ । ಇತಿ ಚ ॥ ೧, ೨ ॥ ಇತಿ ದ್ವಾದಶಃ ಖಂಡಃ ॥ ೪-೧೨ ॥ ॥ ೧ ॥**

ಅ ॥ ಅಗ್ನಿಯ ಮಥನ, ಫೂತ್ಕಾರ ಮೊದಲಾದ ಕ್ರಿಯೆಗಳಿಗೆ ಕಾರಣನಾದುದರಿಂದ ಮಂಥನಾದಿಗಳಲ್ಲಿರತಕ್ಕ, ಆಯಾಯ ಹೆಸರುಳ್ಳ ರಥಂತರಸಾಮಕ್ಕೆ ಆಶ್ರಯನಾದ ಐದು ರೂಪಗಳುಳ್ಳ ಶ್ರೀಹರಿಯನ್ನು ಅಗ್ನಿಯಲ್ಲಿ ಧ್ಯಾನಿಸುವವನು ಮೋಕ್ಷವನ್ನು ಹೊಂದುತ್ತಾನೆ. ॥ ೧, ೨ ॥ ೪ ೧೨ ॥ ॥ ೧ ॥

ಹನ್ನೆರಡನೇ ಖಂಡವು ಮುಗಿಯಿತು.

## ೧೩ನೇ ಖಂಡವು

ಪೀ—ವಾಮದೇವ ಸಾಮದಲ್ಲಿರತಕ್ಕ ವಿಷ್ಣುವಿನ ಉಪಾಸನೆಯನ್ನು ಹೇಳುತ್ತಾರೆ—

**ಉ. ॥ ಉಪಮಂತ್ರಯತೇ ಸ ಹಿಂಕಾರೋ ಜ್ಞಪಯತೇ ಸ ಪ್ರಸ್ತಾ-ವಃ ಸ್ತ್ರಿಯಾ ಸಹ ಶೇತೇ ಸ ಉದ್ಗೀಥಃ ಪ್ರತಿಸ್ತ್ರೀ ಸಹ ಶೇತೇ ಸ ಪ್ರತಿಹಾರಃ ಕಾಲಂ ಗಚ್ಛತಿ ತನ್ನಿಧನಂ ಪಾರಂ ಗಚ್ಛತಿ ತನ್ನಿಧನಮೇತದ್ವಾಮದೇವ್ಯಂ ಮಿ-ಥುನೇ ಪ್ರೋತಂ ॥ ೧ ॥**

ಅ ॥ ಪ್ರದ್ಯುಮ್ನನು ಹೆಂಡತಿಯೊಡನೆ ಭೋಗಿಸಲಿಕ್ಕಾಗಿ ಮಾಡುವ ಸಂಭಾಷಣದಲ್ಲಿಯೂ, ವಾಸುದೇವನು ಅದರಿಂದಾಗುವ ಸುಖಾನುಭವದಲ್ಲಿಯೂ, ನಾರಾಯಣನು ಹೆಂಡತಿಯಿಂದೊಡಗೂಡಿ ಒಂದೇ ಹಾಸಿಗೆಯಲ್ಲಿ ಶಯನಮಾಡುವುದರಲ್ಲಿಯೂ, ಅನಿರುದ್ಧನು ಹೆಂಡತಿಯೊಡನೆ ಸಂಭೋಗಿಸುವುದರಲ್ಲಿಯೂ, ಸಂಕರ್ಷಣನು ಸಂಭೋಗ ಕೊನೆಗೊಳ್ಳುವುದರಲ್ಲಿಯೂ ನಿಯಾಮಕನಾಗಿರುತ್ತಾನೆ. ವಾಮದೇವಸಾಮವು ಮಿಥುನನೆನಿಸಿಕೊಂಡ ಶ್ರೀಹರಿಯನ್ನು ಹೊಗಳುತ್ತದೆ. ॥ ೧ ॥

* ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು

**ಉ. ॥ ಸ ಯ ಏವಮೇತದ್ವಾಮದೇವ್ಯಂ ಮಿಥುನೇ ಪ್ರೋತಂ ವೇದ ಮಿಥುನೀಭವತಿ ಮಿಥುನಾನ್ಮಿಥುನಾತ್ಪ್ರಜಾಯತೇ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ನ ಕಾಂಚನ ಪರಿಹರೇತ್ತದ್ವ್ರತಂ ॥ ಇತಿ ತ್ರಯೋದಶಃ ಖಂಡಃ ॥ ೪-೧೩ ॥ ॥ ೨ ॥**

ಅ ॥ ಹೀಗೆ ತಿಳಿದವನು ಮಿಥುನನೆನಿಸಿಕೊಂಡ ಶ್ರೀಹರಿಯಿಂದ ಲಾಲಿಸಲ್ಪಡುತ್ತಾನೆ ಉಪಾಸಕನು ಮಿಥುನವಲ್ಲಿ (ದಂಪತಿಗಳಾದ ತಮ್ಮಲ್ಲಿ) ಇದ್ದ ಶ್ರೀಹರಿಯ ಅನುಗ್ರಹದಿಂದ ಉತ್ಕೃಷ್ಟನಾಗುತ್ತಾನೆ. (ಅಂದರೆ ಅಮೋಘ ರೇತಸ್ಸುಳ್ಳವನಾಗುತ್ತಾನೆ.)........ಒಬ್ಬನು ಜನ್ಮಾಂತರದ ಕರ್ಮವಶದಿಂದ ಅನೇಕ ಹೆಂಡಂದಿಯರನ್ನು ಮದುವೆ ಮಾಡಿಕೊಂಡರೆ ಆ ಸ್ತ್ರೀಯರಲ್ಲಿ ಒಬ್ಬಳನ್ನೂ ಬಿಡಬಾರದು. ॥೪-೧೩॥ ೨ ॥

**ಭಾ. ॥ ಮಿಥುನಸ್ಥಂ ಪಂಚರೂಪಂ ಧ್ಯಾತ್ವೈವ ಪುರುಷೋತ್ತಮಂ । ಅತ್ಯಾಗೀ ಚ ಸ್ವಭಾರ್ಯಾಣಾಂ ಮುಚ್ಯತೇ ನಾತ್ರ ಸಂಶಯಃ ॥ ಇತಿ ॥ ಮಿಥೋ ನಯತೀತಿ ಮಿಥುನಂ ಭಗವಾನ್ ॥ ೧. ೨ ॥ ಇತಿ ತ್ರಯೋದಶಃ ಖಂಡಃ ॥ ೪—೧೩ ॥ ॥ ೧ ॥**

ಅ ॥ ದಂಪತಿಗಳಾದ ತಮ್ಮಲ್ಲಿ ಐದು ರೂಪಗಳುಳ್ಳ ಶ್ರೀಹರಿಯನ್ನು ಧ್ಯಾನಿಸುತ್ತಾ ತನ್ನ ಹೆಂಡಂದಿಯರನ್ನು ಬಿಡದಿದ್ದವನು ಮೋಕ್ಷ ಹೊಂದುತ್ತಾನೆ. ಸಂದೇಹವಿಲ್ಲ ಗಂಡಹೆಂಡಂದಿಯರಿಗೆ ಪರಸ್ಪರವಾಗಿ ಪ್ರೇಮವನ್ನು ಹುಟ್ಟಿಸುವುದರಿಂದ ಮಿಥುನನೆಂದರೆ ಶ್ರೀಹರಿಯು. ॥ ೧ ೨ ॥ ॥ ೪—೧೩ ॥ ॥ ೩ ॥

**ಹದಿಮೂರನೇ ಖಂಡವು ಮುಗಿಯಿತು.**

## ೧೪ನೇ ಖಂಡವು

ಪೀ -- ಬೃಹತ್ಸಾಮದಿಂದ ವರ್ಣಿಸಲ್ಪಡತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ --

**ಉ. ॥ ಉದ್ಯನ್ಹಿಂಕಾರ ಉದಿತಃ ಪ್ರಸ್ತಾವೋ ಮಧ್ಯಂದಿನ ಉದ್ಗೀಥೋಽಪರಾಹ್ಣಃ ಪ್ರತಿಹಾರೋಽಸ್ತಂ ಯನ್ನಿಧನಮೇತದ್ಬೃಹದಾದಿತ್ಯೇ ಪ್ರೋತಂ॥ ಸ ಯ ಏವಮೇತದ್ಬೃಹದಾದಿತ್ಯೇ ಪ್ರೋತಂ ವೇದ ತೇಜಸ್ವ್ಯನ್ನಾದೋ ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ತಪಂತಂ ನ ನಿಂದೇತ್ತದ್ವ್ರತಂ ॥ ಇತಿ ಚತುರ್ದಶಃ ಖಂಡಃ ॥ ೪-೧೪ ॥ ॥ ೧ ॥**

ಅ ॥ ಪ್ರದ್ಯುಮ್ನನು ಉದಯಿಸಿಕೊಂಡು ಬರುವ ಸೂರ್ಯನಲ್ಲಿಯೂ, ವಾಸುದೇವನು ಉದಯಿಸಿದ ಸೂರ್ಯನಲ್ಲಿಯೂ, ನಾರಾಯಣನು ಮಧ್ಯಾಹ್ನ ಕಾಲದ ಸೂರ್ಯನಲ್ಲಿಯೂ, ಅನಿರುದ್ಧನು ಅಪರಾಹ್ನ ಕಾಲದ ಸೂರ್ಯನಲ್ಲಿಯೂ, ಸಂಕರ್ಷಣನು ಅಸ್ತಮಾನಕಾಲದ ಸೂರ್ಯನಲ್ಲಿಯೂ ನಿಯಾಮಕನಾಗಿರುತ್ತಾನೆ. ಈ ಬೃಹತ್ಸಾಮವು ಹೀಗೆ ಐದು ವಿಧ, ಆದಿತ್ಯನೊಳಗಿರುವ ಆದಿತ್ಯನೆನಿಸಿಕೊಂಡ

ಶ್ರೀಹರಿಯನ್ನು ಹೊಗಳುತ್ತದೆ. ಶ್ರೀಹರಿಯ ಅಧೀನದಲ್ಲಿರುತ್ತದೆ. ಹೀಗೆ ತಿಳಿದವನು ಮಹಾ ಕೀರ್ತಿಶಾಲಿಯಾಗಿರುತ್ತಾನೆ.........ಬಿಸಿಲಿನಿಂದ ಸುಡತಕ್ಕ ಸೂರ್ಯನನ್ನು ನಿಂದಿಸಬಾರದು.....||೪-೧೪|| ||೧||

ಹದಿನಾಲ್ಕನೇ ಖಂಡವು ಮುಗಿಯಿತು.

## ೧೫ನೇ ಖಂಡವು

ಪೀ—ವೈರೂಪಸಾಮದಿಂದ ಸ್ತುತಿಸಲ್ಪಡತಕ್ಕ ಶ್ರೀಹರಿಯ ಉಪಾಸನೆ ಹೇಳುತ್ತಾರೆ—

**ಉ. || ಅಭ್ರಾಣಿ ಸಂಪ್ಲವಂತೇ ಸ ಹಿಂಕಾರೋ ಮೇಘೋ ಜಾಯತೇ ಸ ಪ್ರಸ್ತಾವೋ ವರ್ಷತಿ ಸ ಉದ್ಗೀಥೋ ವಿದ್ಯೋತತೇ ಸ್ತನಯತಿ ಸ ಪ್ರತಿಹಾರ ಉದ್ಗೃಹ್ಣಾತಿ ತನ್ನಿಧನಮೇತದ್ವೈರೂಪಂ ಪರ್ಜನ್ಯೇ ಪ್ರೋತಃ ಸ ಯ ಏವಮೇತದ್ವೈರೂಪಂ ಪರ್ಜನ್ಯೇ ಪ್ರೋತಂ ವೇದ ವಿರೂಪಾಂಶ್ಚ ಸುರೂಪಾಂಶ್ಚ ಪಶೂನವರುಂಧೇ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ವರ್ಷಂತಂ ನ ನಿಂದೇತ್ತದ್ವ್ರತಂ ಇತಿ ಪಂಚದಶಃ ಖಂಡಃ || ೪-೧೫ || ||೧ ||**

ಅ || ಪ್ರದ್ಯುಮ್ನನು ಅತ್ತಿತ್ತ ಮೇಘಗಳ ಸಂಚಾರಕ್ಕೂ, ವಾಸುದೇವನು ಮಳೆಗೆ ಅನುಕೂಲವಾದ ಮೇಘಕ್ಕೂ, ನಾರಾಯಣನು ಮಳೆಗೂ, ಅನಿರುದ್ಧನು ಮಿಂಚುಸಿಡಿಲುಗಳಿಗೂ, ಸಂಕರ್ಷಣನು ಮಳೆಯು ಕೊನೆಗೊಳ್ಳುವುದಕ್ಕೂ ಅಧಿಪತಿಯು. ಈ ವೈರೂಪಸಾಮವು ಪರ್ಜನ್ಯನೆನಿಸಿಕೊಂಡ ಶ್ರೀಹರಿಯ ಅಧೀನವಾಗಿದೆ.........ಹೀಗೆ ತಿಳಿದವನು ಆಡು, ಕುರಿ ಮೊದಲಾದವುಗಳನ್ನೂ ಗೋವು ಮೊದಲಾದವುಗಳನ್ನೂ ಸಮೃದ್ಧಿಯಾಗಿ ಹೊಂದುತ್ತಾನೆ. ಮಳೆ ಸುರಿಸುವ ಮೇಘವನ್ನು ನಿಂದಿಸಬಾರದು.||೪-೧೫||೧||

ಹದಿನೈದನೇ ಖಂಡವು ಮುಗಿಯಿತು.

## ೧೬ನೇ ಖಂಡವು

ಪೀ—ವೈರಾಜವೆಂಬ ಸಾಮದಲ್ಲಿ ಸ್ತುತಿಸಲ್ಪಡತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ—

**ಉ. || ವಸಂತೋ ಹಿಂಕಾರೋ ಗ್ರೀಷ್ಮಃ ಪ್ರಸ್ತಾವೋ ವರ್ಷಾ ಉದ್ಗೀಥಃ ಶರತ್ಪ್ರತಿಹಾರೋ ಹೇಮಂತೋ ನಿಧನಮೇತದ್ವೈರಾಜಮೃತುಷು ಪ್ರೋತಃ ಸ ಯ ಏವಮೇತದ್ವೈರಾಜಮೃತುಷು ಪ್ರೋತಂ ವೇದ ವಿರಾಜತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ ಸರ್ವಮಾಯುರೇತಿ ಜ್ಯೋ-**

ಗ್ಲೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಋತೂನ್ನ ನಿಂದೇತ್ತದ್ವ್ರತಂ ॥ ಇತಿ ಷೋಡಶಃ ಖಂಡಃ ॥ ೪-೧೬ ॥ ॥ ೧ ॥

ಅ ॥ ಪ್ರದ್ಯುಮ್ನನು ವಸಂತಋತುವಿಗೂ, ವಾಸುದೇವನು ಗ್ರೀಷ್ಮಋತುವಿಗೂ, ನಾರಾಯಣನು ವರ್ಷಋತುವಿಗೂ, ಅನಿರುದ್ಧನು ಶರದೃತುವಿಗೂ, ಸಂಕರ್ಷಣನು ಹೇಮಂತಋತುವಿಗೂ ಅಧಿಪತಿಯು. ಈ ವೈರಾಜಸಾಮವು ಋತುಗಳಲ್ಲಿರತಕ್ಕ ಋತುವೆನಿಸಿದ ಶ್ರೀಹರಿಯನ್ನು ಸ್ತುತಿಸುತ್ತದೆ............ಹೀಗೆ ತಿಳಿದು ಉಪಾಸನೆಮಾಡುವವನು ವಿಶೇಷವಾಗಿ ಪ್ರಕಾಶಿಸುತ್ತಾನೆ............... ಋತುಗಳನ್ನು ನಿಂದಿಸಬಾರದು.......... ॥ ೪—೧೬ ॥ ॥ ೧ ॥

ಹದಿನಾರನೇ ಖಂಡವು ಮುಗಿಯಿತು.

## ೧೭ನೇ ಖಂಡವು

ಪೀ—ಶಕ್ವರೀ ಎಂಬ ಸಾಮದಿಂದ ಸ್ತುತಿಸಲ್ಪಡತಕ್ಕ ಶ್ರೀಹರಿಯ ಉಪಾಸನೆ ಹೇಳುತ್ತಾರೆ.

ಉ. ॥ ಪೃಥಿವೀ ಹಿಂಕಾರೋಽನ್ತರಿಕ್ಷಂ ಪ್ರಸ್ತಾವೋ ದ್ಯೌರುದ್ಗೀಥೋ ದಿಶಃ ಪ್ರತಿಹಾರಃ ಸಮುದ್ರೋ ನಿಧನಮೇತಾಃ ಶಕ್ವರ್ಯೋ ಲೋಕೇಷು ಪ್ರೋತಾಃ ಸ ಯ ಏವಮೇತಾಃ ಶಕ್ವರ್ಯೋ ಲೋಕೇಷು ಪ್ರೋತಾ ವೇದ ಲೋಕೀಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ ಪ್ರಜಯಾ ಪಶುಭಿರ್ಭವತಿ ಮಹಾನ್ ಕೀರ್ತ್ಯಾ ಲೋಕಾನ್ನ ನಿಂದೇತ್ ತದ್ವ್ರತಮ್ ॥ ಇತಿ ಸಪ್ತದಶಃ ಖಂಡಃ ॥ ೪-೧೭ ॥ ॥ ೧ ॥

ಅ ॥ ಪ್ರದ್ಯುಮ್ನನು ಪೃಥಿವಿಗೂ, ವಾಸುದೇವನು ಅಂತರಿಕ್ಷಲೋಕಕ್ಕೂ, ನಾರಾಯಣನು ಸ್ವರ್ಗಲೋಕಕ್ಕೂ, ಅನಿರುದ್ಧನು ದಿಕ್ಕುಗಳಿಗೂ, ಸಂಕರ್ಷಣನು ಸಮುದ್ರಕ್ಕೂ ಅಧಿಪತಿಯು. ಶಕ್ವರೀಸಾಮವು ಲೋಕನೆನಿಸಿದ ಶ್ರೀಹರಿಯನ್ನು ಹೊಗಳುತ್ತದೆ ಹೀಗೆ ತಿಳಿದವನು ಉತ್ತಮಲೋಕವುಳ್ಳವನಾಗುತ್ತಾನೆ. ........ಲೋಕಗಳನ್ನು ನಿಂದಿಸಬಾರದು......... ॥ ೪ ೧೭ ॥ ॥ ೧ ॥

ಹದಿನೇಳನೇ ಖಂಡವು ಮುಗಿಯಿತು.

## ೧೮ನೇ ಖಂಡವು

ಪೀ—ರೇವತೀಸಾಮದಿಂದ ಸ್ತುತಿಸಲ್ಪಡತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ—

ಉ. ॥ ಅಜಾ ಹಿಂಕಾರೋಽವಯಃ ಪ್ರಸ್ತಾವೋ ಗಾವ ಉದ್ಗೀಥೋ-ಽಶ್ವಾ ಪ್ರತಿಹಾರಃ ಪುರುಷೋ ನಿಧನಮೇತಾ ರೇವತ್ಯಃ ಪಶುಷು ಪ್ರೋತಾಃ

**ಸ ಯ ಏವಮೇತಾ ರೇವತ್ಯಃ ಪಶುಷು ಪ್ರೋತಾ ವೇದ ಪಶುಮಾನ್ಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ನ ಪಶೂನ್ನ ನಿಂದೇತ್ತದ್ವ್ರತಂ || ಇತ್ಯಷ್ಟಾದಶಃ ಖಂಡಃ || ೪-೧೮ || || ೧ ||**

ಅ || ಪ್ರದ್ಯುಮ್ನನು ಆಡುಗಳಿಗೂ, ವಾಸುದೇವನು ಕುರಿಗಳಿಗೂ, ನಾರಾಯಣನು ಗೋವುಗಳಿಗೂ, ಅನಿರುದ್ಧನು ಕುದುರೆಗಳಿಗೂ, ಸಂಕರ್ಷಣನು 'ಪುರುಷನಿಗೂ ಅಧಿಪತಿಯು. ರೇವತೀಸಾಮವು ಪಶುವೆನಿಸಿದ ಶ್ರೀಹರಿಯನ್ನು ಹೊಗಳುತ್ತದೆ........ || ೪—೧೮ || || ೧ ||

ಹದಿನೆಂಟನೇ ಖಂಡವು ಮುಗಿಯಿತು.

## ೧೯ನೇ ಖಂಡವು

ಪೀ—ಯಜ್ಞಾಯಜ್ಞಿಯ ಸಾಮದಿಂದ ಸ್ತುತಿಸಲ್ಪಡತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ—

**ಉ. || ಲೋಮ ಹಿಂಕಾರಸ್ತ್ವಕ್ಪ್ರಸ್ತಾವೋ ಮಾಂಸಮುದ್ಗೀಥೋಽಸ್ಥಿ ಪ್ರತಿಹಾರೋ ಮಜ್ಜಾ ನಿಧನಮೇತದ್ಯಜ್ಞಾಯಜ್ಞೀಯಮಂಗೇಷು ಪ್ರೋತಂ ಸ ಯ ಏವಮೇತದ್ಯಜ್ಞಾಯಜ್ಞೀಯಮಂಗೇಷು ಪ್ರೋತಂ ವೇದಾಂಗೀ ಭವತಿ ನಾಂಗೇನ ವಿಹೂರ್ಛತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಸಂವತ್ಸರಂ ಮಜ್ಜ್ಞೋ ನಾಶ್ನೀಯಾತ್ತದ್ವ್ರತಂ ಮಜ್ಜ್ಞೋ ನಾಶ್ನೀಯಾದಿತಿ ವಾ || ಇತ್ಯೇಕೋನವಿಂಶಃ ಖಂಡಃ || ೧-೧೯ || || ೧ ||**

ಅ || ಪ್ರದ್ಯುಮ್ನನು (ದುರ್ಜನರನ್ನು) ನಾಶಗೊಳಿಸುವುದರಿಂದ ಲೋಮನೆನಿಸುವನು, ರೋಮಗಳಲ್ಲಿರುವವನು. ವಾಸುದೇವನು ಪ್ರಕಾಶರೂಪನಾದುದರಿಂದ ತ್ವಕ್ (ಚರ್ಮ) ಎಂದು ಹೆಸರುಳ್ಳವನು, ತ್ವಗಿಂದ್ರಿಯದಲ್ಲಿರುವವನು. ನಾರಾಯಣನು ಶ್ರೇಷ್ಠರೂಪನಾದುದರಿಂದ ಮಾಂಸನೆನಿಸುವನು, ಮಾಂಸದಲ್ಲಿರುವವನು. ಅನಿರುದ್ಧನು ಸ್ಥಿರವಾಗಿ ಕುಳಿತುಕೊಳ್ಳುವುದರಿಂದ ಅಸ್ಥಿ ಎನಿಸುವನು, ಎಲುಬಿನಲ್ಲಿರುವವನು. ಸಂಕರ್ಷಣನು ಮದವನ್ನು ಹುಟ್ಟಿಸುವುದರಿಂದ ಮಜ್ಜಾ ಎನಿಸುವನು. ಮಜ್ಜಾದಲ್ಲಿರುವವನು. ಯಜ್ಞಾಯಜ್ಞಿಯ ಸಾಮವು ಅಂಗಗಳಲ್ಲಿದ್ದುದರಿಂದ ದೇಹದ ಅವಯವಭೂತವಾದ ಅಂಗದಲ್ಲಿರತಕ್ಕ ಅಂಗವೆನಿಸಿದ ಶ್ರೀಹರಿಯನ್ನು ಸ್ತುತಿಸಿಕೊಂಡು ಇದೆ ಹೀಗೆ ತಿಳಿದವನು ದೃಢಾಂಗನಾಗುತ್ತಾನೆ. ಅಂಗಗಳಲ್ಲಿರತಕ್ಕ ಶ್ರೀಹರಿಯ ಪ್ರಸಾದದಿಂದ ಕುಟಿಲವಾದ ಅಂಗಗಳುಳ್ಳವನಾಗುವುದಿಲ್ಲ. (ಅಂದರೆ ಕೈಕಾಲುಗಳಿಲ್ಲದವನಾಗುವುದಿಲ್ಲ.) ........ ಸಂವತ್ಸರಪರ್ಯಂತ ಗುರುಕುಲದಲ್ಲಿ ಆವಾಸಮಾಡುವವನು ಸಂವತ್ಸರಪರ್ಯಂತ ಮದೋನ್ಮತ್ತನಾಗಿ ಉಣ್ಣಬಾರದು. (ವಿಹಿತವನ್ನುಣ್ಣುವಾಗಲೂ ಮದೋನ್ಮತ್ತನಾಗಿ ಇರಕೂಡದು.) ಮದವನ್ನುಂಟುಮಾಡುವ ಮಾಂಸವಿಶೇಷವನ್ನು ಯಾವಾಗಲೂ ಉಣ್ಣಬಾರದು. || ೪—೧೯ || || ೧ ||

ಹತ್ತೊಂಭತ್ತನೇ ಖಂಡವು ಮುಗಿಯಿತು.

## ೨೦ನೇ ಖಂಡವು

ಪೀ – ರಾಜನವೆಂಬ ಸಾಮದಿಂದ ಸ್ತುತಿಸಲ್ಪಡತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ-

**ಉ. ॥ ಅಗ್ನಿರ್ಹಿಂಕಾರೋ ವಾಯುಃ ಪ್ರಸ್ತಾವ ಆದಿತ್ಯ ಉದ್ಗೀಥೋ ನಕ್ಷತ್ರಾಣಿ ಪ್ರತಿಹಾರಶ್ಚಂದ್ರಮಾ ನಿಧನಮೇತದ್ರಾಜನಂ ದೇವತಾಸು ಪ್ರೋತಂ ॥ ಸ ಯ ಏವಮೇತದ್ರಾಜನಂ ದೇವತಾಸು ಪ್ರೋತಂ ವೇದೈತಾಸಾಮೇವ ದೇವತಾನಾಂ ಸಲೋಕತಾಂ ಸಾರ್ಷ್ಟಿತಾಂ ಸಾಯುಜ್ಯಂ ಗಚ್ಛತಿ ಸರ್ವಮಾಯುರೇತಿ ಜ್ಯೋಗ್ಜೀವತಿ ಮಹಾನ್ಪ್ರಜಯಾ ಪಶುಭಿರ್ಭವತಿ ಮಹಾನ್ಕೀರ್ತ್ಯಾ ಬ್ರಾಹ್ಮಣಾನ್ನ ನಿಂದೇತ್ತದ್ವ್ರತಂ॥ ಇತಿ ವಿಂಶಃ ಖಂಡಃ ॥ ೪–೨೦ ॥ ॥ ೧ ॥**

ಅ ॥ ಪ್ರದ್ಯುಮ್ನನು ಸರ್ವವನ್ನು ಭಕ್ಷಿಸುವುದರಿಂದ ಅಗ್ನಿಯೆನಿಸುವನು, ಅಗ್ನಿಯಲ್ಲಿರುವವನು. ವಾಸುದೇವನು ಸರ್ವಜ್ಞನಾದುದರಿಂದಲೂ ಭಕ್ತರ ಆಯುಷ್ಯವನ್ನು ಹೆಚ್ಚುಗೊಳಿಸುವವನಾದುದರಿಂದಲೂ ವಾಯು ಎಂದು ಹೆಸರುಳ್ಳವನು, ವಾಯುವಿನಲ್ಲಿರುವವನು. ನಾರಾಯಣನು ಆದಿತ್ಯನಲ್ಲಿರುವವನು, ಆದಿತ್ಯನೆಂದು ಹೆಸರುಳ್ಳವನು ಸರ್ವಸ್ವಾತಂತ್ರ್ಯವಿದ್ದುದರಿಂದ ಅನಿರುದ್ಧನು ನಕ್ಷತ್ರ ಎನಿಸಿಕೊಂಡವನು, ನಕ್ಷತ್ರಗಳಲ್ಲಿರುವವನು. ಸಂಕರ್ಷಣನು ಪರಮಾನಂದಸ್ವರೂಪನಾದುದರಿಂದ ಚಂದ್ರನೆಂದು ಹೆಸರುಳ್ಳವನು. ಚಂದ್ರನಲ್ಲಿರುವವನು ರಾಜನಸಾಮವು ದೇವತೆಗಳಲ್ಲಿದ್ದ ಶ್ರೀಹರಿಯನ್ನು ಸ್ತುತಿಸುತ್ತದೆ. ಇದನ್ನು ತಿಳಿದು ಉಪಾಸನೆಮಾಡಿದವನು ಸಾಲೋಕ್ಯ (ಸಮಾನಲೋಕ)ವೆಂಬ ಮೋಕ್ಷವನ್ನು ಹೊಂದುತ್ತಾನೆ. ಅವರಿಗಿಂತಲೂ ಉತ್ತಮನಾದರೆ ಸಾರ್ಷ್ಟ್ಯಮೋಕ್ಷವನ್ನೂ ಅವನಿಗಿಂತಲೂ ಶ್ರೇಷ್ಠನು ಸಾಯುಜ್ಯ (ಪರಮಾತ್ಮನೊಡನೆ ಇರುವಿಕೆ) ಮೋಕ್ಷವನ್ನೂ ಹೊಂದುತ್ತಾನೆ........(ಬ್ರಾಹ್ಮಣರಲ್ಲಿ ದೇವತಾಸನ್ನಿಧಾನವು ಹೆಚ್ಚು ಇದ್ದ ಕಾರಣ ಅವರನ್ನು ನಿಂದಿಸಿದರೆ ದೇವತೆಗಳನ್ನು ನಿಂದಿಸದಂತೆಯೇ ಆಗುವುದರಿಂದ) ಬ್ರಾಹ್ಮಣರನ್ನು ಸರ್ವಥಾ ನಿಂದಿಸಬಾರದು. ॥ ೪—೨೦ ॥ ॥ ೧ ॥

ಇಪ್ಪತ್ತನೇ ಖಂಡವು ಮುಗಿಯಿತು.

## ೨೧ನೇ ಖಂಡವು

ಪೀ—ಸರ್ವ ಎಂಬ ಸಾಮದಿಂದ ಸ್ತುತಿಸಲ್ಪಡತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳುತ್ತಾರೆ—

**ಉ. ॥ ತ್ರಯೀವಿದ್ಯಾ ಹಿಂಕಾರಸ್ತ್ರಯ ಇಮೇ ಲೋಕಾಃ ಸ ಪ್ರಸ್ತಾವೋಽಗ್ನಿರ್ವಾಯುರಾದಿತ್ಯಃ ಸ ಉದ್ಗೀಥೋ ನಕ್ಷತ್ರಾಣಿ ವಯಾಂಸಿ ಮರೀಚಯಃ ಸ ಪ್ರತಿಹಾರಃ ಸರ್ಪಾ ಗಂಧರ್ವಾಃ ಪಿತರಸ್ತನ್ನಿಧನಮೇತತ್ಸಾಮ ಸರ್ವಸ್ಮಿನ್ ಪ್ರೋತಂ ॥ ಸ ಯ ಏವಮೇತತ್ಸಾಮ ಸರ್ವಸ್ಮಿನ್ ಪ್ರೋತಂ ವೇದ ಸರ್ವಂ ಹ ಭವತಿ ॥ ೧ ॥**

ಅ || ಪ್ರದ್ಯುಮ್ನನು ಜ್ಞಾನರೂಪನಾದುದರಿಂದ ತ್ರಯೀವಿದ್ಯಾ ಎಂದು ಹೆಸರುಳ್ಳವನು, ಋಗಾದಿ ಮೂರು ವೇದವಿದ್ಯೆಗಳಿಗೆ ಅಧಿಪತಿಯು. ವಾಸುದೇವನು ಪ್ರಕಾಶರೂಪನಾದುದರಿಂದ ಲೋಕವೆಂದು ಹೆಸರುಳ್ಳವನು, ಲೋಕಗಳಿಗೆ ಅಧಿಪತಿಯು. ನಾರಾಯಣನು ಅಗ್ನಿ ವಾಯು ಆದಿತ್ಯರಲ್ಲಿರುವವನು. ಅನಿರುದ್ಧನು ನಕ್ಷತ್ರಗಳಿಗೂ, ಪಕ್ಷಿಗಳಿಗೂ, ಸೂರ್ಯಕಿರಣಗಳಿಗೂ ಅಧಿಪತಿಯು. ಸಂಕರ್ಷಣನು ಸರ್ವತ್ರ ಸಂಚರಿಸುವುದರಿಂದ ಸರ್ಪನೆಂದೂ, ಪರ್ವತವನ್ನು ಎತ್ತಿದ ಕಾರಣ ಗಂಧರ್ವನೆಂದೂ, ಸೃಷ್ಟಿಸತಕ್ಕವನಾದುದರಿಂದ ಪಿತೃ ಎಂದೂ, ಸರ್ಪಾದಿಗಳಿಗೆ ಅಧಿಪತಿಯೆಂದೂ ಅನ್ನಿಸುತ್ತಾನೆ. ಈ ಸರ್ವ ಎಂಬ ಸಾಮವು, ಆ ಸಾಮಕ್ಕೆ ಅಧಿಪತಿಯಾದ ಸರ್ವಗುಣಪೂರ್ಣನಾದ ಶ್ರೀಹರಿಯನ್ನು ಹೊಗಳುತ್ತದೆ. ಆ ಸಾಮವು ಶ್ರೀಹರಿಯ ಅಧೀನವು. ಹೀಗೆ ತಿಳಿದು ಉಪಾಸನ ಮಾಡುವವನು ತನಗೆ ಯೋಗ್ಯವಾದ ಗುಣಪೂರ್ತಿಯುಳ್ಳವನಾಗುತ್ತಾನೆ. || ೧ ||

**ಉ. || ತದೇಷ ಶ್ಲೋಕೋ ಯಾನಿ ಪಂಚಧಾ ತ್ರೀಣಿ ತ್ರೀಣಿ ತೇಭ್ಯೋ ನ ಜ್ಯಾಯಃ ಪರಮನ್ಯದಸ್ತಿ ಯಸ್ತದ್ವೇದ ಸ ವೇದ ಸರ್ವꣳ ಸರ್ವಾ ದಿಶೋ ಬಲಿಮಸ್ಮೈ ಹರಂತಿ ಸರ್ವಮಸ್ಮೀತ್ಯುಪಾಸೀತ ತದ್ವ್ರತಂ ತದ್ವ್ರತಂ || ಇತಿ ಏಕವಿಂಶಃ ಖಂಡಃ || ೪-೨೧ || || ೨ ||**

ಅ || ಹೇಳಿದ ಅರ್ಥದಲ್ಲಿ ಮುಂದೆ ಹೇಳುವ ಶ್ಲೋಕವು ಪ್ರಮಾಣವಾಗುತ್ತದೆ. ಪ್ರದ್ಯುಮ್ನ ಮೊದಲಾದ ಐದು ಭಗವದ್ರೂಪಗಳು ಪ್ರತಿಯೊಂದೂ ಋಗ್ವೇದ, ಯಜುರ್ವೇದ, ಸಾಮವೇದಗಳಿಗೆ ಮೂರು ಮೂರು ರೂಪಗಳಿಂದ ಅಧಿಪತಿಗಳಾಗಿ ಇರುತ್ತವೆ. ಆ ಭಗವದ್ರೂಪಗಳಿಂದ ಶ್ರೇಷ್ಠವಾದುದು ಇನ್ನೊಂದು ಇಲ್ಲ ಹೀಗೆ ತಿಳಿದವನು ಎಲ್ಲಾ ಪ್ರಮೇಯಗಳನ್ನು ತಿಳಿದುದರಿಂದ ತನ್ನ ಯೋಗ್ಯತಾನುಸಾರ ಪೂರ್ಣನಾಗುತ್ತಾನೆ. ಸರ್ವಶಾಸ್ತ್ರಾರ್ಥಜ್ಞಾನವುಳ್ಳವನಾಗುತ್ತಾನೆ. ಹೀಗೆ ತಿಳಿದವನಿಗೆ ಎಲ್ಲಾ ದಿಕ್ಕುಗಳಲ್ಲಿಯೂ ಇರುವ ಪ್ರಜೆಗಳು ಪೂಜಿಸುತ್ತಾರೆ, ಸರ್ವ ಎಂಬ ಸಾಮವನ್ನುಪಾಸನೆ ಮಾಡುವವನು ದುರ್ಜನರನ್ನು ನಿರಾಕರಿಸುವುದರಿಂದಲೂ ಜ್ಞಾನರೂಪನಾದುದರಿಂದಲೂ ಅಸ್ಮಿ ಎನ್ನಿಸಿಕೊಂಡ ಭಗವದ್ರೂಪವನ್ನು ಸರ್ವಗುಣಪೂರ್ಣವೆಂದು ಉಪಾಸನೆ ಮಾಡಬೇಕು. || ೪ - ೨೧ || || ೨ ||

**ಪೀ—ಉದ್ಯನ್ ಹಿಂಕಾರಃ** ಇದುಮೊದಲಾದ ಎಂಟು ಖಂಡಗಳೊಳಗಣ **ಸ ಯ ಏವಮೇತದ್ಬೃಹದಾದಿತ್ಯೇ ಪ್ರೋತಂ ವೇದ** ಇದುಮೊದಲಾದ ಎಂಟು ಫಲವಾಕ್ಯಗಳಿಗೆ ಅರ್ಥ ಹೇಳುತ್ತಾರೆ—

**ಭಾ. || (೧) ಆದಿತ್ಯನಾಮ್ನಿ ಪಂಚಾತ್ಮನ್ಯಭಿಧ್ಯಾತೇ ಜನಾರ್ದನೇ | ಪರ್ಜನ್ಯನಾಮ್ನಿ ಚತ್ವಾರ್ಯಾಖ್ಯೇ ಲೋಕಾಖ್ಯೇ ಪಶುಸಂಜ್ಞಕೇ || ಅಂಗಾ(ಶಾ)ಖ್ಯೇ ದೇವತಾಖ್ಯೇ ಚ ಸರ್ವಾಖ್ಯೇ ಚ ಪ್ರತಿಷ್ಠಿತಂ | ಬೃಹದಾದ್ಯಂ ಚ ಯೋ ವೇದ ಮುಚ್ಯತೇ ನಾತ್ರ ಸಂಶಯಃ|| (೨) ಸಮುದ್ರೇಕಾತ್ಸಮುದ್ರಸ್ತು ದೇಶನಾದ್ದಿಶ ಉಚ್ಯತೇ || (೩) ಲೋಪಕತ್ವಾಲ್ಲೋಮ ಚ ಸ್ಯಾತ್ತ್ವಮೋರೂಪಸ್ತ್ವಗುಚ್ಯತೇ | ಮಾದನಾತ್ಸ್ವರರೂಪತ್ವಾನ್ಮಾಂಸೋಽಸ್ಥಿ ಸ್ಥಾಪನಾತ್ ಸ್ಥಿರಂ | ಮದಸ್ಯ ಜನನಾನ್ಮಜ್ಜಾ ಸೋಽಂಗಮಂತಿಗತತ್ವತಃ || (೪)ವಾಯುಜ್ಞಾನಾತ್ತಥಾಽಽಯುಷ್ಟ್ವಾನ್ನಕ್ಷತ್ರಂ ಚ ಸ್ವತಂತ್ರತಃ | ಚಂದ್ರಮಾಃ ಪರಮಾನಂದಾತ್ || (೫) ತ್ರೈವಿದ್ಯೋ ಜ್ಞಾನರೂಪತಃ | ವಯಾಂಸಿ ವ್ಯಯನಾಚ್ಚೈವ ವೀತ್ಯಾಕಾಶಸ್ತಥೋಚ್ಯತೇ || ತತ್ಪ್ರಯಾಣಾದ್ವಯಃ ಪ್ರೋಕ್ತೋ ಮರೀಚಿರ್ಮಿತರುಕ್ತ್ವತಃ | ಸರ್ಪಃ ಸರ್ಪಣಹೇತುತ್ವಾತ್**

**ಗಂಧರ್ವೋ ಗೋಧರತ್ವತಃ ॥ ಪಿತಾ ಸ ಸೃಷ್ಟಿಹೇತುತ್ವಾತ್ಸರ್ವಂ ಪೂರ್ಣಗುಣತ್ವತಃ । ಏತೈರ್ನಾಮಭಿರುದ್ದಿಷ್ಟೋ ಭಗವಾನ್ಪುರುಷೋತ್ತಮಃ ॥ ಇತಿ ಚ ॥ ೧ ॥**

**ಅ** ॥ (೧) (1) ಆದಿತ್ಯನೆನಿಸಿದ, ಆದಿತ್ಯನೊಳಗಣ ಪ್ರದ್ಯುಮ್ನ ಮೊದಲಾದ ಐದು ಭಗವದ್ರೂಪಗಳನ್ನೂ (2) ಪರ್ಜನ್ಯನೆನಿಸಿದ ಪರ್ಜನ್ಯನೊಳಗಣ ಪ್ರದ್ಯುಮ್ನಾದಿಗಳನ್ನೂ, (3) ಋತು ಎನಿಸಿದ ಋತುಗಳೊಳಗಣ ಪ್ರದ್ಯುಮ್ನಾದಿರೂಪಗಳನ್ನೂ, (4) ಪ್ರಕಾಶಸ್ವರೂಪನಾದುದರಿಂದ ಲೋಕನೆನಿಸಿದ ಲೋಕಗಳೊಳಗಣ ಪ್ರದ್ಯುಮ್ನಾದಿ ಐದು ರೂಪಗಳನ್ನೂ (5) ಪಶುವೆನಿಸಿದ ಪಶುಗಳೊಳಗಣ ಪ್ರದ್ಯುಮ್ನಾದಿ ಐದು ರೂಪಗಳನ್ನೂ (6) ಅಂಗನೆನಿಸಿದ ಅಂಗಗಳೊಳಗಣ ಪ್ರದ್ಯುಮ್ನಾದಿ ರೂಪಗಳನ್ನೂ (7) ದೇವತೆಗಳೊಳಗಣ ದೇವತೆ ಎನಿಸಿದ ಪ್ರದ್ಯುಮ್ನಾದಿ ರೂಪಗಳನ್ನೂ, (8) ಸರ್ವಸಾಮದೊಳಗಣ ಸರ್ವಗುಣಪೂರ್ಣನಾದ ಪ್ರದ್ಯುಮ್ನ ಮೊದಲಾದ ಐದು ಭಗವದ್ರೂಪಗಳನ್ನೂ—ಬೃಹತ್ಸಾಮ, ವೈರೂಪಸಾಮ ಮೊದಲಾದ ಎಂಟು ಸಾಮಗಳು ಹೊಗಳುತ್ತವೆ. ಆ ಭಗವದ್ರೂಪಗಳ ಅಧೀನದಲ್ಲಿವೆಂದು ತಿಳಿದು ಉಪಾಸನೆ ಮಾಡುವವನು ಮೋಕ್ಷವನ್ನು ಹೊಂದುತ್ತಾನೆ ಸಂದೇಹವಿಲ್ಲ. (೨) (17ನೇ ಖಂಡದಲ್ಲಿದ್ದ **ಸಮುದ್ರಃ ದಿಶಃ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಶ್ರೀಹರಿಯು ಗುಣಗಳಿಂದ ಸಮೃದ್ಧನಾದ ಕಾರಣ (ಸರ್ವಗುಣಪರಿಪೂರ್ಣನಾದುದರಿಂದ) ಸಮುದ್ರನೆಂದೂ. (ಬ್ರಹ್ಮಾದಿಸರ್ವಚೇತನರಿಗೂ) ಅಪ್ಪಣೆ ಕೊಡುವವನಾದುದರಿಂದ **ದಿಶಃ** ಎಂದೂ ಅನಿಸುತ್ತಾನೆ. (೩) (19ನೇ ಖಂಡದಲ್ಲಿದ್ದ ಲೋಮ ಮೊದಲಾದ ಶಬ್ದಗಳಿಗೆ ಅರ್ಥ ಹೇಳುತ್ತಾರೆ—) ಶ್ರೀಹರಿಯು ದುರ್ಜನರನ್ನು ನಾಶಗೊಳಿಸುವುದರಿಂದ ಲೋಮನೆಂದೂ, ಪ್ರಕಾಶಸ್ವರೂಪನಾದುದರಿಂದ ತ್ವಕ್ ಎಂದೂ. ಭಕ್ತರನ್ನು ಸಂತೋಷಗೊಳಿಸಿಕೊಂಡು ಶ್ರೀಪ್ರಸ್ವರೂಪನಾದಕಾರಣ ಮಾಂಸನೆಂದೂ, ಸ್ಥಿರವಾಗಿ ಕುಳಿತುಕೊಳ್ಳುವುದರಿಂದ ಅಸ್ಥಿ ಎಂದೂ, ಹರ್ಷವನ್ನುಂಟು ಮಾಡುವುದರಿಂದ ಮಜ್ಜಾ ಎಂದೂ. ಸರ್ವರ ಸಮೀಪದಲ್ಲಿದ್ದುದರಿಂದ ಅಥವಾ ಸರ್ವಾವಯವಗಳಲ್ಲಿದ್ದುದರಿಂದ **ಅಂಗ**ನೆಂದೂ ಅನ್ನಿಸಿಕೊಳ್ಳುತ್ತಾನೆ. (೪) (20ನೇ ಖಂಡದಲ್ಲಿದ್ದ ವಾಯು ಮೊದಲಾದ ಶಬ್ದಗಳಿಗೆ ಅರ್ಥ ಹೇಳುತ್ತಾರೆ—) ಶ್ರೀಹರಿಯು ಜ್ಞಾನಸ್ವರೂಪನು. ಆಯುಷ್ಯವನ್ನು ಕೊಡುವವನು. ಅದು ಕಾರಣ ವಾಯುವೆಂದೂ. ಪ್ರಜೆಗಳಿಗೆ ನಿಯಾಮಕರಾದ ಕ್ಷತ್ರಿಯರು ಶ್ರೀಹರಿಗೆ ರಕ್ಷಕರಾಗದಿರುವುದರಿಂದ ಅಂದರೆ ಶ್ರೀಹರಿಗೆ ಸರ್ವಸ್ವಾತಂತ್ರ್ಯವಿದ್ದುದರಿಂದ ನಕ್ಷತ್ರನೆಂದೂ ಪರಮಾನಂದಸ್ವರೂಪನಾದುದರಿಂದ ಚಂದ್ರಮಾಃ ಎಂದೂ ಅನ್ನಿಸುತ್ತಾನೆ. (೫) (21ನೇ ಖಂಡದಲ್ಲಿದ್ದ ತ್ರೈವಿದ್ಯ ಮೊದಲಾದ ಶಬ್ದಗಳ ಅರ್ಥ ಹೇಳುತ್ತಾರೆ—ಶ್ರೀಹರಿಯು ಜ್ಞಾನಕ್ಕೆ ಗೋಚರನಾದುದರಿಂದ (ಅಂದರೆ ತಿಳಿಯಲ್ಪಡುವುದರಿಂದ) ತ್ರೈವಿದ್ಯನೆಂದೂ. ವಿ ಎನಿಸಿಕೊಂಡ ಆಕಾಶದಲ್ಲಿ ಸಂಚರಿಸುವುದರಿಂದ **ವಯಃ** ಎಂದೂ, ವೇದ ಮೊದಲಾದ ಪ್ರಮಾಣಗಳಲ್ಲಿ ಸಿದ್ಧವಾದ ಪ್ರಕಾಶವಿರುವುದರಿಂದ ಮರೀಚಿಯೆಂದೂ, ಸರ್ವತ್ರ ಸಂಚರಿಸುವುದರಿಂದ ಸರ್ಪನೆಂದೂ, ಭೂಮಿಯನ್ನು ಧರಿಸುವವನಾದುದರಿಂದ **ಗಂಧರ್ವ**ನೆಂದೂ, ಸರ್ವಜಗತ್ತನ್ನು ಸೃಷ್ಟಿಸುವವನಾದುದರಿಂದ ಪಿತಾ ಎಂದೂ, ಗುಣಪೂರ್ಣನಾದುದರಿಂದ ಸರ್ವಂ ಎಂದೂ ಹೀಗೆ ಈ ನಾಮಗಳಿಂದ ಹೇಳಿಸಿಕೊಳ್ಳಲ್ಪಡುತ್ತಾನೆ. ॥ ೧ ॥

ಪೀ—೨೧ನೇ ಖಂಡದಲ್ಲಿದ್ದ **ಸರ್ವಂ** ಹ ಭವತಿ ಎಂಬುದಕ್ಕೆ ಅರ್ಥ ಹೇಳುತ್ತಾರೆ—

**ಭಾ. ॥ (೧) ಯಾದೃಶ್ಯೇವೋನ್ನತಿರ್ಯೋಗ್ಯಾ ತಸ್ಯಾಃ ಸರ್ವಾತ್ಮನಾಽಽಯತಿಃ । ಸರ್ವಭಾವಸ್ತು ವಿಜ್ಞೇಯೋ ನತು ಸರ್ವಸ್ವರೂಪತಾ ॥ ಇತಿ ಚ ॥ ನಚ ಸರ್ವಸ್ವರೂಪತಾ ಪುರುಷಾರ್ಥಃ । ನಾರಕಿತ್ವಾದೇರಪಿ ಪ್ರಾಪ್ತೇಃ ॥ (೨) ನ ಚಾರ್ಥಾಂತರಕಲ್ಪನಾ ಯುಕ್ತಾ । ಪ್ರಮಾಣಾಭಾವಾತ್ ॥ (೩) ಅಸನಾನ್ನಿತಿರೂಪತ್ವಾದಸ್ಮೀತ್ಯುಕ್ತಃ ಪರೋ ಹರಿಃ । ತಂ ಸರ್ವ ಇತ್ಯುಪಾಸೀತ ಪೂರ್ಣತಾ ಸರ್ವತಾ ಸ್ಮೃತಾ ॥ ಇತಿ ಚ ॥ (೪) ಸರ್ವ-**

**ಮಸ್ಮೀತ್ಯುತ್ತಮಪುರುಷತ್ವೇ ತೇಭ್ಯೋ ನ ಜ್ಯಾಯಃ ಪರಮನ್ಯದಸ್ತೀತಿ ಜ್ಯಾಯಃಪರಶಬ್ದೌ ವ್ಯರ್ಥೌ । ಅನ್ಯಸ್ಯೈವಾಭಾವಾತ್ ॥ (೫) ಅತಸ್ತತೋಽನ್ಯದಸ್ತೀತಿ ಸಿದ್ಧಂ । ಅತಸ್ತತೋಽನ್ಯತ್ಪರಮಜ್ಯಾಯ ಏವ ನಾಸ್ತಿ । ಜ್ಯಾಯೋ ಲಕ್ಷ್ಮೀರ್ವಿದ್ಯತೇ । ಪರಮಜ್ಯಾಯಸ್ತು ಭಗವಾನೇವ ॥** ॥ ೨ ॥

**ಅ** ॥ (೧) ಎಂತಹ ಗುಣಪೂರ್ಣತ್ವವು ಮೋಕ್ಷಕ್ಕೆ ಹೋಗುವ ಜೀವನಿಗೆ ಯೋಗ್ಯವೋ ಅಂತಹ (ತನಗೆ ಯೋಗ್ಯಗಳಾದ) ಗುಣಗಳ ಪ್ರಾಪ್ತಿಯೇ ಸರ್ವಭಾವವೆನಿಸುತ್ತದೆ, ಉಪಾಸಕನು ಸರ್ವವಸ್ತುಗಳ ಸ್ವರೂಪನಾಗುತ್ತಾನೆ, ಎಂಬ ಅರ್ಥವು ಸರ್ವಥಾ ಅಯುಕ್ತವು. (ಏಕೆಂದರೆ) ಸರ್ವವಸ್ತುಗಳ ಸ್ವರೂಪಪ್ರಾಪ್ತಿಯನ್ನು ಯಾರೂ ಅಪೇಕ್ಷಿಸಲಾರರು. ಏಕೆಂದರೆ– ನರಕಾದಿಗಳಲ್ಲಿ ದುಃಖವನ್ನನುಭವಿಸುತ್ತಿರುವ ದುರ್ಜೀವಿಯ ಸ್ವರೂಪನೂ ಆಗಬೇಕಾದೀತು (೨) (ನರಕಾದಿಗಳು ಭ್ರಾಂತಿಕಲ್ಪಿತಗಳಾಗಿ ಸತ್ಯವಲ್ಲದ ಕಾರಣ ನರಕದಲ್ಲಿ ದುಃಖಿಸುತ್ತಿರುವ ಜೀವರ ಸ್ವರೂಪವು ಬರಬೇಕಾದೀತೆಂಬ ದೋಷವು ಬರಲಾರದೆಂದರೆ) ನರಕಾದಿಗಳು ಭ್ರಾಂತಿಕಲ್ಪಿತ (ಅಸತ್ಯ) ಗಳೆಂಬ ವಿಷಯದಲ್ಲಿ ಪ್ರಮಾಣವೇ ಇಲ್ಲದಿರುವುದರಿಂದ ಹಿಂದೆ ಹೇಳಿದ ದೋಷವು ಬಂದೇ ಬರುವುದು. ಆದುಕಾರಣ ನಾವು ಹೇಳಿದ ಅರ್ಥ ಹೊರತು ಬೇರೆ ಅರ್ಥವನ್ನು ಕಲ್ಪಿಸುವುದು ಯುಕ್ತವಲ್ಲ. (೩) (**ಸರ್ವಮಸ್ಮೀತ್ಯುಪಾಸೀತ** ಎಂಬ ಮುಂದಿನ ವಾಕ್ಯದಲ್ಲಿ ನಾನು ಎಲ್ಲಾ ವಸ್ತುಸ್ವರೂಪನೂ ಆಗಿರುತ್ತೇನೆಂದು ಉಪಾಸನೆ ಮಾಡಬೇಕೆಂದು ಮುಂದೆ ಹೇಳುವುದರಿಂದ **ಸರ್ವಂ ಹ ಭವತಿ** ಎಂಬ ಫಲವಾಕ್ಯದಲ್ಲಿಯೂ ಹಾಗೆಯೇ ಅರ್ಥಮಾಡಬೇಕೆಂದರೆ **ಸರ್ವಮಸ್ಮಿ** ಎಂಬ ವಾಕ್ಯಕ್ಕೂ ಹಾಗೆ ಅರ್ಥವಲ್ಲವೆನ್ನುತ್ತಾರೆ—) ದುರ್ಜನರನ್ನು ನಿರಾಕರಿಸಿದುದರಿಂದಲೂ, ಜ್ಞಾನಸ್ವರೂಪನಾದುದರಿಂದಲೂ ಶ್ರೀಹರಿಯು **ಅಸ್ಮಿ** ಎನ್ನಿಸಿಕೊಳ್ಳುತ್ತಾನೆ. ಆ ಶ್ರೀಹರಿಯನ್ನು **ಸರ್ವ** ಎಂದು ಉಪಾಸನೆ ಮಾಡಬೇಕು. ಸರ್ವತ್ವವೆಂದರೆ ಗುಣಪೂರ್ಣತ್ವವು (ಇದರಿಂದ ಅಸ್ಮಿ ಎಂದು ಹೆಸರುಳ್ಳ ಬ್ರಹ್ಮನನ್ನು ಸರ್ವಂ=ಗುಣಪೂರ್ಣನೆಂದು ಉಪಾಸನೆ ಮಾಡಬೇಕು ಎಂದರ್ಥವು.) (೪) (ಎಲ್ಲಾ ಜಗತ್ತು ಮಿಥ್ಯೆಯು (ಸುಳ್ಳು, ಬ್ರಹ್ಮ ಹೊರತು ಬೇರೆಯಿಲ್ಲ) ಎಂದು ಹೇಳಿದರೆ ಬಾಧಕ ಹೇಳುತ್ತಾರೆ—) (ಸರ್ವಜಗತ್ತೂ ಮಿಥ್ಯೆಯು) ಮತ್ತು **ಸರ್ವಮಸ್ಮಿ** ಎಂಬಲ್ಲಿ **ಅಸ್ಮಿ** ಎಂಬುದು ಉತ್ತಮಪುರುಷವು ಎಂದಂಗೀಕರಿಸಿದರೆ ೨೧ನೇ ಖಂಡದಲ್ಲಿ **ತೇಭ್ಯೋ ನ ಜ್ಯಾಯಃ ಪರಮನ್ಯದಸ್ತಿ** ಎಂಬಲ್ಲಿ **ಜ್ಯಾಯಃ ಪರಂ** ಎಂಬ ಎರಡು ಶಬ್ದಗಳು ವ್ಯರ್ಥಗಳಾಗುವವು. (ಏಕೆಂದರೆ— **ಸರ್ವಮಸ್ಮಿ** ಎಂಬುದು ಉತ್ತಮಪುರುಷವಾದುದರಿಂದ ಸರ್ವವೂ ಮಿಥ್ಯೆಯೆಂದು ಇಷ್ಟವಾಗಿದ್ದರೆ) ಬೇರೆ ವಸ್ತುವೇ ಇಲ್ಲವಾದ ಕಾರಣ (**ತೇಭ್ಯಃ ಅನ್ಯತ್ ನಾಸ್ತಿ** ಎಂದೇ ಹೇಳಬೇಕಿತ್ತು. ಉತ್ತಮ ಎಂಬ ಅರ್ಥವನ್ನು ಹೇಳುವ **ಜ್ಯಾಯಃ ಪರ** ಶಬ್ದಗಳು ವ್ಯರ್ಥಗಳಾಗುವವು.) ಏಕೆಂದರೆ **ಜ್ಯಾಯಃ** ಎಂದರೆ ಶ್ರೇಷ್ಠ ಎಂದರ್ಥ. ಹಾಗಾದರೆ ಅದಕ್ಕಿಂತ ಕನಿಷ್ಠವಸ್ತುಗಳನ್ನು ಒಪ್ಪಲೇಬೇಕು ಆದುಕಾರಣ ಭಗವದ್ರೂಪಗಳಿಂದ ಬೇರೆ ವಸ್ತುವಿದೆ ಎಂದು ಸಿದ್ಧವಾಯಿತು. (೫) (ಹಾಗಾದರೆ ದ್ವೈತಿಗಳ ಪಕ್ಷದಲ್ಲಿಯೂ **ಜ್ಯಾಯಃ ಪರ** ಈ ಎರಡು ಶಬ್ದಗಳಿಗೆ ಒಂದೇ ಅರ್ಥವಾಗಿರುವುದರಿಂದ ಅವುಗಳಲ್ಲಿ ಒಂದು ಶಬ್ದವು ವ್ಯರ್ಥವಾಗುವುದೆಂದರೆ) ಅದ್ವೈತಿಗಳ ಪಕ್ಷದಲ್ಲಿ **ಜ್ಯಾಯಃ ಪರ** ಶಬ್ದಗಳು ವ್ಯರ್ಥಗಳೇ. ದ್ವೈತಪಕ್ಷದಲ್ಲಿ ವ್ಯರ್ಥವಾಗುವುದಿಲ್ಲ. ಏಕೆಂದರೆ—ಋಗಾದಿ ವಿದ್ಯೆಗಳಿಗೆ ಅಭಿಮಾನಿನಿಯರಾದ ಸರಸ್ವತ್ಯಾದಿಗಳಿಗಿಂತ ಶ್ರೇಷ್ಠಳಾದ ಲಕ್ಷ್ಮೀದೇವಿಯು **ಜ್ಯಾಯಃ** ಎನಿಸುವಳು. ಆ ಲಕ್ಷ್ಮೀದೇವಿಯಿಂದ ಶ್ರೇಷ್ಠನಾದ ಶ್ರೀಹರಿಯು **ಪರಜ್ಯಾಯಃ** ಎನ್ನಿಸುವನು. ಉತ್ತಮೋತ್ತಮನು. ಶ್ರೀಹರಿಗೆ ಸದೃಶನಾದವನು ಇನ್ನೊಬ್ಬನು ಇಲ್ಲವೇ ಇಲ್ಲ. ಆದಕಾರಣ **ಪರಂ ಜ್ಯಾಯಃ** ಎಂಬುದು ಎರಡೂ ಆವಶ್ಯಕವು. ॥ ೨ ॥

**ಪೀ—ಜಡಪ್ರಪಂಚವು** ಮಿಥ್ಯೆಯೆಂದು **ಹೇಳುವುದು** ಅಯುಕ್ತವೆಂದು ಹೇಳಿ ಈಗ ೨೧ನೇ ಖಂಡದಲ್ಲಿದ್ದ **ಸರ್ವಮಸ್ಮೀತ್ಯುಪಾಸೀತ** ಎಂಬುದಕ್ಕೆ ಎಲ್ಲಾ ವಸ್ತುಗಳಲ್ಲಿಯೂ ಇರುವ ಚೈತನ್ಯನು

ನಾನು ಆಗಿರುತ್ತೇನೆಂದು ಉಪಾಸನೆ ಮಾಡಬೇಕು, ಎಂದು ಅದ್ವೈತಿಗಳು ಹೇಳುವ ಅರ್ಥವು ಅಯುಕ್ತವೆನ್ನುತ್ತಾರೆ—

**ಭಾ. ॥ (೧) ಜೀವೈಕ್ಯಾಂಗೀಕಾರೇ ಯಸ್ತದ್ವೇದೇತಿ ತಚ್ಛಬ್ದೋಽಪ್ಯಯುಕ್ತಃ। ತದಾ ಸ್ವಾತ್ಮಾನಂ ವೇದೇತ್ಯೇವ ಸ್ಯಾತ್ । ನಚ ಪ್ರಸಿದ್ಧಭೇದಾನುವಾದಃ । ಶ್ರುತಿಂ ವಿನಾ ತತ್ಸ್ವರೂಪಸ್ಯೈವಾಸಿದ್ಧೇಸ್ತದ್ಭೇದಸ್ಯಾತಿಶಯೇನಾಸಿದ್ಧಿಃ ॥ (೨) ಐಕ್ಯ ಈಶ್ವರಸ್ಯ ಸ್ವಜ್ಞಾನಮಸ್ತೀತಿ ನ ತದ್ರೂಪಸ್ಯ ಜೀವಸ್ಯಾಜ್ಞಾನಾದಿಕಂ ಯುಜ್ಯತೇ ॥ (೩) ಔಪಾಧಿಕಭೇದಾಂಗೀಕಾರೇಽಪ್ಯುಪಾಧಿರುಭಯೋರೈಕ್ಯಾದುಭಯೋರಪ್ಯಜ್ಞತ್ವಂ ಕುರ್ಯಾತ್ । ಉಪಾಧಿನಿಮಿತ್ತದೋಷಾಶ್ಚೋಭಯೋರಪಿ ಸ್ಯುಃ (೪) ಉಪಾಧಿಸಂಬಂಧಸ್ಯ ಸಮತ್ವಾತ್ । ಉಪಾಧಿಸಂಬಂಧಸ್ಯಾಸ್ಮಿನ್ನನ್ಯಥಾ ತಸ್ಮಿನ್ನನ್ಯಥೇತಿ ವಿಶೇಷಾರ್ಥಮಯಮಸಾವಿತಿ ಭೇದಸ್ಯೋಪಾಧಿಂ ವಿನಾ ಸ್ವತ ಏವಾಪೇಕ್ಷಿತತ್ವಾತ್ । ಅತಃ ಸ್ವತೋ ಭಿನ್ನಸ್ಯೈವೋಪಾಧಿನಾ ವಿಶೇಷೋ ಭವತಿ॥೩॥**

ಅ ॥ (೧) **ಸರ್ವಮಸ್ಮಿ** ಎಂಬ ವಾಕ್ಯವು ಉಪಾಸಕನಾದ ಜೀವನಿಗೆ ಎಲ್ಲಾ ಚೇತನರಿಂದ ಐಕ್ಯವನ್ನು ಹೇಳುತ್ತದೆಂದಂಗೀಕರಿಸಿದರೆ **ಯಸ್ತದ್ವೇದ** ಎಂಬಲ್ಲಿ **ತತ್** ಶಬ್ದವು ವ್ಯರ್ಥವು. (ಆ ಶಬ್ದದಿಂದ ಬೇರೆ ಒಂದು ವಸ್ತುವು ಉಪಾಸನೆ ಮಾಡಲ್ಪಡುವುದು ಇದೆ ಎಂದು ಸಿದ್ಧವಾಗುತ್ತದೆ) ಅಪಿ=**ತೇಭ್ಯೋ ನ ಜ್ಯಾಯಃ ಪರಮನ್ಯದಸ್ತಿ** ಎಂಬ ವಾಕ್ಯವೂ ವ್ಯರ್ಥವಾಗುವುದು. (ಈ ವಾಕ್ಯದಿಂದಲೂ ಶ್ರೀಹರಿಯ ಹೊರತು ಚೇತನರು ಇದ್ದಾರೆಂದು ತಿಳಿಯುತ್ತದೆ) ಜೀವೈಕ್ಯವೇ ಅರ್ಥವೆಂದು ಆಗಿದ್ದರೆ **ಸ್ವಾತ್ಮಾನಂ ವೇದ** ಉಪಾಸಕನು ತನ್ನ ಸ್ವರೂಪವನ್ನೇ ತಿಳಿಯುತ್ತಾನೆಂದೇ ಹೇಳಬೇಕಿತ್ತು. (**ತದ್ವೇದ** ಅದನ್ನು ತಿಳಿಯುತ್ತಾನೆಂದು ಹೇಳಿದ್ದು ಅಯುಕ್ತವಾಗುವುದು) ಜೀವರಿಗೂ ಈಶ್ವರನಿಗೂ ಇರುವ ಭೇದವು ಪ್ರತ್ಯಕ್ಷ ಅನುಮಾನಗಳಿಂದ ಸಿದ್ಧಿಸುವುದರಿಂದ **ಯಸ್ತದ್ವೇದ** ಇತ್ಯಾದಿಗಳು ಪ್ರಸಿದ್ಧವಾದ ಭೇದವನ್ನು ಹೇಳುತ್ತದೆಂದು ಹೇಳಕೂಡದು. ವೇದ ಹೊರತು ಈಶ್ವರನ ಸ್ವರೂಪವೇ ಸಿದ್ಧವಾಗದಿರುವ ಕಾರಣ ಜೀವೇಶ್ವರಭೇದವು *ಸುತರಾಂ ಸಿದ್ಧವಾಗಲಾರದು (೨) (ಜೀವರಿಗೂ ಬ್ರಹ್ಮನಿಗೂ ಐಕ್ಯವನ್ನೊಡಂಬಟ್ಟರೆ ಮರಳಿ ಬಾಧಕ ಹೇಳುತ್ತಾರೆ—) ಜೀವಬ್ರಹ್ಮರಿಗೆ ಐಕ್ಯಹೇಳಿದರೆ ಶುದ್ಧಬ್ರಹ್ಮನಿಗೆ ತನ್ನ ಸ್ವರೂಪಜ್ಞಾನವು ಇರುವ ಕಾರಣ ಆ ಶುದ್ಧಬ್ರಹ್ಮ‡ಸ್ವರೂಪನಾದ ಜೀವನಿಗೆ ಅಜ್ಞಾನ ಮೊದಲಾದುದು ಕೂಡಲಾರದು. (೩) (ಶುದ್ಧಬ್ರಹ್ಮನಿಗೆ ತನ್ನ ಜ್ಞಾನವಿದ್ದರೂ ಬ್ರಹ್ಮಸ್ವರೂಪನಾದ ಜೀವನಿಗೆ ಅಜ್ಞಾನಾದಿಗಳು

---

* ಯಾವ ವಸ್ತುಗಳದ್ದೇ ಆಗಲಿ, ಭೇದಜ್ಞಾನವು ಬರಬೇಕಾದರೆ ಧರ್ಮಿ ಪ್ರತಿಯೋಗಿಗಳ ಜ್ಞಾನವು ಅವಶ್ಯಕವು ಜೀವ (ಪ್ರತಿಯೋಗಿ) ನಿಂದ ಈಶ್ವರನು (ಧರ್ಮಿಯು)ಬೇರೆ. ಈಶ್ವರ (ಪ್ರತಿಯೋಗಿ) ನಿಂದ ಜೀವನು (ಧರ್ಮಿಯು) ಬೇರೆ ಎಂದೆನ್ನಬೇಕು. ಅದರಲ್ಲಿ ಜೀವನು ಆತ್ಮಸಾಕ್ಷಿಯಿಂದಲೇ ತಿಳಿಯಲ್ಪಡುವನು. ಈಶ್ವರನನ್ನು ಆತ್ಮಸಾಕ್ಷಿಯಿಂದ ತಿಳಿಯಲಸಾಧ್ಯವಾದುದರಿಂದ ವೇದದಿಂದಲೇ ತಿಳಿಯಬೇಕು. ವೇದಗಳನ್ನು ತಿಳಿದುಕೊಳ್ಳದೆ ಈಶ್ವರನ ಸ್ವರೂಪವೇ ಸಿದ್ಧವಾಗಲಾರದು ಜೀವೇಶ್ವರಭೇದವು ಸುತರಾಂ ಸಿದ್ಧವಾಗಲಾರದು ಆದುಕಾರಣ ಯಸ್ತದ್ವೇದ ಎಂಬ ವೇದದಿಂದಲೇ ಈಶ್ವರನೂ ಈಶ್ವರಭೇದವೂ ಸಿದ್ಧಿಸುವುದು. ಯಸ್ತದ್ವೇದ ಇತ್ಯಾದಿಗಳು ವೇದದಲ್ಲಿ ಹೇಳಿದ ಆ ಭೇದವನ್ನು ಹೇಳುವುದೆಂದಂಗೀಕರಿಸಿದರೆ ಆ ವಾಕ್ಯದಿಂದಲೇ ಅಭೇದವನ್ನು ಹೇಳತಕ್ಕ ವಾಕ್ಯಕ್ಕೆ ಬಾಧವು ಬರುವುದು

‡ ಜೀವಬ್ರಹ್ಮರಿಗೆ ಅಭೇದವೆನ್ನುವುದಾದರೆ ಶುದ್ಧಬ್ರಹ್ಮನು ತನ್ನ ಸ್ವರೂಪವನ್ನು (೧) ತಿಳಿಯುತ್ತಾನೋ ಇಲ್ಲವೋ, (೨) ತನ್ನ ಸ್ವರೂಪವಜ್ಞಾನವು ಬ್ರಹ್ಮನಿಗೆ ಇಲ್ಲವೆಂದು ಹೇಳುವುದಾದರೆ ಅವನಿಗೂ ಸಂಸಾರವು ಬರಬೇಕಾಗುವುದು ತದಾತ್ಮಾನಮೇವಾವೇತ್ ಇದುಮೊದಲಾದ ವೇದದಿಂದ ವಿರೋಧವುಕೂಡ ಬರುವುದು (೧) ತನ್ನ ಸ್ವರೂಪಜ್ಞಾನವುಂಟೆಂದು ಹೇಳುವುದಾದರೆ ಬ್ರಹ್ಮನಸ್ವರೂಪನೇ ಆದ ಜೀವನಿಗೂ ಶಾಸ್ತ್ರಶ್ರವಣಾದಿಗಳಿಲ್ಲವಾದರೂ, ಬ್ರಹ್ಮಜ್ಞಾನವಿದ್ದಕಾರಣ ಜೀವನಿಗೆ ಬ್ರಹ್ಮನ ಜ್ಞಾನವು ಇಲ್ಲವೆಂಬುದು ಕೂಡದೇ ಹೋಗುವುದು ಮತ್ತು ಅಜ್ಞಾನವಿದ್ದ ಪ್ರಯುಕ್ತ ಇರುವ ಸಂಸಾರವೂ ಬಾರದೆ ಇರಬೇಕಾದೀತು.

ಕೂಡಬಹುದು. ಸ್ವಾಭಾವಿಕವಾಗಿ ಜೀವನು ಬ್ರಹ್ಮಸ್ವರೂಪನಾದರೂ ಔಪಾಧಿಕ ಭೇದವಿದ್ದ ಕಾರಣ ಉಪಾಧಿಯಿಂದ ಜೀವನಿಗೆ ಅಜ್ಞಾನಾದಿಗಳು ಕೂಡಬಹುದು ಎಂದರೆ—) ಔಪಾಧಿಕಭೇದವನ್ನು ಒಡಂಬಟ್ಟರೂ ಜೀವಬ್ರಹ್ಮರಿಗೆ ಐಕ್ಯವಿದ್ದಕಾರಣ ಉಪಾಧಿಯು ಇಬ್ಬರಿಗೂ ಅಜ್ಞತ್ವವನ್ನು ತಂದು ಕೊಟ್ಟಿತು. ಅಂದರೆ—ಔಪಾಧಿಕಭೇದವಿದ್ದ ಕಾರಣ ಉಪಾಧಿಯು ಜೀವನಿಗೆ ಅಜ್ಞಾನವಿದೆ ಎನ್ನುವುದಾದರೆ ಜೀವಬ್ರಹ್ಮರಿಗೆ ಭೇದವಿಲ್ಲದ ಕಾರಣ §ಉಪಾಧಿಯು ಇಬ್ಬರಿಗೂ ಅಜ್ಞಾನವಿದೆ, ಎಂದು ತೋರ್ಪಡಿಸುವುದು. ಮತ್ತು ಉಪಾಧಿಯಿದ್ದ ಕಾರಣ ದುಃಖ ಮೊದಲಾದ ದೋಷಗಳು ಜೀವಬ್ರಹ್ಮರಿಬ್ಬರಿಗೂ ಬರುವುವು. (ಉಪಾಧಿಯು, ಜೀವನಲ್ಲಿ ಮಾತ್ರ ಇರುತ್ತದೆಂದರೆ) ಉಪಾಧಿಸಂಬಂಧವು ಜೀವಬ್ರಹ್ಮರಿಬ್ಬರಲ್ಲಿಯೂ ಸಮಾನವೇ. (೪) (ಕನ್ನಡಿಗೆ ಮುಖಸಂಬಂಧವಿದ್ದರೂ ಅದು ಪ್ರತಿಮುಖದಲ್ಲಿಯೇ ಮಾಲಿನ್ಯಾದಿಗಳನ್ನು ತೋರ್ಪಡಿಸುತ್ತದೆ. ಮುಖದಲ್ಲಿ ತೋರಿಸುವುದಿಲ್ಲ. ಅಂದರೆ ಉಪಾಧಿಯ ಕಾರ್ಯವು ಪ್ರತಿಬಿಂಬದಲ್ಲಿ ಕಾಣುವುದಲ್ಲದೆ ಬಿಂಬದಲ್ಲಿ ಕಾಣಲಾರದು. ಅಂತೆಯೇ ಮನಸ್ಸು ಮೊದಲಾದ ಉಪಾಧಿಯ ಕಾರ್ಯವೂ ಜೀವನಲ್ಲಿ ತೋರಬೇಕಲ್ಲದೆ ಬ್ರಹ್ಮನಲ್ಲಿ ತೋರಲಾರದು, ಎಂದರೆ—) ಉಪಾಧಿಸಂಬಂಧವು ಬ್ರಹ್ಮನಲ್ಲಿಲ್ಲದ ಅಜ್ಞಾನಾದಿಗಳನ್ನು ಜೀವಭಾಗದಲ್ಲಿಯೂ, ಜೀವಭಾಗದಲ್ಲಿಲ್ಲದ ಅಂಶವನ್ನು ಬ್ರಹ್ಮನಲ್ಲಿಯೂ ಉಂಟುಮಾಡುತ್ತದೆ, ಎಂದು ವಿಶೇಷ ಹೇಳಬೇಕಾದರೆ—ಉಪಾಧಿಯ ಅಪೇಕ್ಷೆಯಿಲ್ಲದೆ ಸ್ವಾಭಾವಿಕವಾಗಿಯೇ **ಅಯಮಸೌ** ಅಯಂ=ಪ್ರತ್ಯಕ್ಷ ಜೀವನು, ಅಸೌ=ಪ್ರತ್ಯಕ್ಷನಾಗದ ಬ್ರಹ್ಮನು, ಹೀಗೆ ಜೀವಬ್ರಹ್ಮರಿಗೆ ಭೇದವನ್ನು ಒಡಂಬಡಲೇಬೇಕು *ಉಪಾಧಿಯ ಅಪೇಕ್ಷೆಯಿಲ್ಲದೆ ಸ್ವತ ಏವ ಭೇದವು ಆವಶ್ಯಕವಾದ ಕಾರಣ ಸ್ವತಃ ಭೇದವಿದ್ದ ವಸ್ತುವಿಗೇನೇ ಉಪಾಧಿಯಿಂದ ವಿಶೇಷವುಂಟಾಗುತ್ತದೆ. (ಅಂದರೆ—ಉಪಾಧಿಯು‡ ಮೊದಲು ಇದ್ದ ಭೇದವನ್ನೇ ತಿಳಿಸುತ್ತದೆ. ಇಲ್ಲದೆ ಇದ್ದುದನ್ನು ಮಾಡುವುದಲ್ಲ.) ॥ ೩ ॥

---

§ ಉಪಾಧಿಯು=ತನ್ನಬಳಿಯ ವಸ್ತುವಿನಲ್ಲಿ ತನ್ನ ಗುಣವನ್ನು ಇಡುವುದು ಉದಾ=ಕೆಂಪುದಾಸಾಳವು ತನ್ನ ಸಮೀಪದ ಸ್ಫಟಿಕಮಣಿಯಲ್ಲಿ ತನ್ನ ಕೆಂಪನ್ನು ಬೀರುವುದು. ಹೀಗೆಯೇ ಇನ್ನೊಂದು ದೃಷ್ಟಾಂತವು ಕನ್ನಡಿಯನ್ನು ಇದಿರಿಗೆ ಇಟ್ಟುಕೊಂಡಾಗ ನಮಗೆ ಪ್ರತಿಮುಖವು ಕಾಣಿಸುವುದು ನಮ್ಮ ಮುಖವೇ ಬಿಂಬವು. ಕನ್ನಡಿಯು ಉಪಾಧಿಯು. ಪ್ರತಿಮುಖವು ಪ್ರತಿಬಿಂಬವು (ನೆರಳು.) ಶುದ್ಧಬ್ರಹ್ಮನು ಬಿಂಬದಂತಿರುವವನು. ಜೀವನು ಪ್ರತಿಬಿಂಬದಂತಿರುವವನು. ಬುದ್ಧಿ ಮನಸ್ಸು ಶರೀರ ಇಂದ್ರಿಯಾದಿಗಳು ಉಪಾಧಿಗಳು. ಬಿಂಬವು ಒಂದೆಯಾದರೂ ಕನ್ನಡಿಯ ಸಾನ್ನಿಧ್ಯವಿರುವ ಕಾರಣ ಪ್ರತಿಮುಖವು ಕಾಣಿಸುವುದು. ಅದರಂತೆ ಬುದ್ಧಿ ಮನಸ್ಸು ಮೊದಲಾದ ಉಪಾಧಿಗಳು ಇರುವುದರಿಂದ ಒಂದೇ ಬ್ರಹ್ಮನು ಅನೇಕ ಜೀವರಂತೆ ಕಾಣಿಸುವನು ಉಪಾಧಿಯಿಂದ ಕೂಡಿದ ಜೀವನಿಗೇನೇ ಅಜ್ಞಾನವು, ಎಂದರೆ ಜೀವಬ್ರಹ್ಮರಿಗೆ ಭೇದವಿಲ್ಲದಕಾರಣ ಇಬ್ಬರಿಗೂ ಅಜ್ಞಾನವು ಇರಬೇಕು.

* ಉಪಾಧಿಸಂಬಂಧವು ಜೀವಬ್ರಹ್ಮರಿಬ್ಬರಲ್ಲಿ ಸಮಾನವಾದರೂ ಉಪಾಧಿಯು ಜೀವಭಾಗದಲ್ಲಿಯೇ ತನ್ನ ಕಾರ್ಯವನ್ನು ಮಾಡುತ್ತದೆ ಬ್ರಹ್ಮಭಾಗದಲ್ಲಿ ಮಾಡುವುದಿಲ್ಲ, ಎಂದು ಹೇಳುವವನ ಹತ್ತಿರ, ಜೀವಬ್ರಹ್ಮರಿಗೆ (೧) ಐಕ್ಯವೋ, (೨) ಭೇದವೋ, ಎಂದು ಕೇಳಬೇಕು (೧) ಐಕ್ಯವೆನ್ನಕೂಡದು ಅಯಮಸೌ ಇತ್ಯಾದಿ ಭೇದವು ಉಪಾಧಿಯಿಲ್ಲದೆ ಸ್ವತಏವ ಸಿದ್ಧವಾಗುವುದು ಜೀವಬ್ರಹ್ಮರಿಗೆ ಭೇದವು ಎಂದರೆ—ಭೇದವು ಔಪಾಧಿಕವೋ, ಸ್ವಾಭಾವಿಕವೋ, ಸ್ವಾಭಾವಿಕವೆಂದೂ ಹೇಳಕೂಡದು ಏಕೆಂದರೆ ನಮ್ಮ ಇಷ್ಟಸಿದ್ಧವಾಗುವುದು. ಔಪಾಧಿಕವೆಂದರೆ=ಆತ್ಮಾಶ್ರಯಾದಿ ದೋಷಗಳು ಬರುವುದರಿಂದ ಸ್ವತಃ ಏವ ಭೇದವನ್ನು ಒಪ್ಪಲೇಬೇಕು

‡ ಜೀವಬ್ರಹ್ಮರಿಗೆ ಮುಖಪ್ರತಿಮುಖಗಳಿಗಾಗಲೀ ಸ್ವಾಭಾವಿಕಭೇದವು ಇರುವುದಾದರೆ ಉಪಾಧಿಯು ವ್ಯರ್ಥವಾಗುತ್ತಿತ್ತು. ಉಪಾಧಿಯು ಇಲ್ಲದ ಭೇದವನ್ನು ತಿಳಿಸುತ್ತದೆ. ಉದಾ=ಘಟಮಠಾದ್ಯುಪಾಧಿಯು ಸ್ವತಃ ಭೇದವಿಲ್ಲದಿರುವ ಆಕಾಶದಲ್ಲಿ ಘಟಾಕಾಶ, ಮಠಾಕಾಶ ಎಂದು ಭೇದವನ್ನು ತೋರ್ಪಡಿಸುವುದು, ಎಂದರೆ—ಆಕಾಶಾದಿಗಳಲ್ಲಿಯೂ ಘಟಾಕಾಶ ಮಠಾಕಾಶ ಎಂದು ಘಟಾದಿಗಳು ಇಲ್ಲದ ಭೇದವನ್ನು ತಿಳಿಸುತ್ತವೆಂಬುದು ಅಲ್ಲ ಸ್ವಾಭಾವಿಕವಾಗಿ ಇದ್ದ ಭೇದವನ್ನೇ ಆಕಾಶಾದಿಗಳಲ್ಲಿ ಉಪಾಧಿಯು ತಿಳಿಸುತ್ತದೆ. ಈ ವಿಷಯವೆಲ್ಲವೂ ಓಲ್ಯೂಮ್ I ಉಪಾಧಿಖಂಡನ ಪುಟ ೯೩—೧೩೦ರ ವರೆಗೆ ವಿಶದೀಕೃತವಾಗಿದೆ

**ಭಾ- || (೧) ಯಸ್ತು ಭಿನ್ನಃ ಸ್ವತಃ ಖಾದಿಸ್ತಸ್ಯ ಭೇದೋ ಹ್ಯಬುದ್ಧಿನಾಂ । ಉಪಾ- ಧಿಭಿರ್ಜ್ಞಾಪ್ಯ ಏವ ನತು ಭೇದಂ ಸ್ವಯಂ ಸೃಜೇತ್ || (೨) ಉಪಾಧಿರಪ್ಯಭಿನ್ನಸ್ಯ ಭೇದಂ ಸಾಧಯಿತುಂ ಕ್ವಚಿತ್ । ನ ಕ್ಷಮಃ ಸಿದ್ಧಭೇದಸ್ಯ ಜ್ಞಾಪಕಃಸ್ಯಾದಬುದ್ಧಿನಾಂ || ಆಕಾಶಾ ಅಪ್ಯತಸ್ತ್ವೇತೇ ಹ್ಯನಂತಾ ಅಪ್ಕಣಾದಿವತ್ । ಇತಿ ಬ್ರಹ್ಮತರ್ಕೇ || ಅತೋ ನ ಜೀ- ವೇಶಾಭೇದಃ || (೩) ನತು ದೇವಃ ಸ್ವಯಂ ಭೂತ್ವಾ ದೇವದೇವಂ ಸಮರ್ಚಯೇತ್ । ಸಮಾನವ್ಯವಹಾರೇ ಹಿ ನ ಪೂಜ್ಯಃ ಪೂಜಕೋ ಭವೇತ್ || ಇತಿಚ ಪರಮಸಂಹಿತಾಯಾಂ || ೪ ||**

ಅ || (೧) (ಆಕಾಶಾದಿಗಳಲ್ಲಿ ಘಟ ಮಠಾದ್ಯುಪಾಧಿಯು ಇದ್ದ ಭೇದವನ್ನು ತಿಳಿಸುತ್ತದೆ. ಇಲ್ಲದ ಭೇದವನ್ನು ಹುಟ್ಟಿಸುವುದಿಲ್ಲ ಎಂಬಲ್ಲಿ ತರ್ಕಶಾಸ್ತ್ರವಾಕ್ಯಪ್ರಮಾಣ ಹೇಳುತ್ತಾರೆ—) ಘಟ ಮಠಾದ್ಯಾಕಾಶವು ಬಹುಷ್ಯವಾದ ಭೂತಾಕಾಶಕ್ಕಿಂತ ಸ್ವಾಭಾವಿಕವಾಗಿಯೇ ಬೇರೆಯಾಗಿದೆ. ತಿಳಿಯದವರಿಗೆ ಘಟ ಮಠಾದ್ಯುಪಾಧಿಗಳು ಆಕಾಶಭೇದವನ್ನು ತಿಳಿಸುತ್ತವೆ. ಉಪಾಧಿಯು ಮೊದಲು ಇಲ್ಲದ ಭೇದವನ್ನು ತಾನು ಉಂಟುಮಾಡುವುದಲ್ಲ (ಪರಂತು ಇದ್ದ ಭೇದವನ್ನು ಪ್ರಕಾಶಗೊಳಿಸುವುದು) (೨) ಉಪಾಧಿಯು ಭೇದವನ್ನು ತಾನೇ ಏಕೆ ಸೃಷ್ಟಿಸುವುದಿಲ್ಲ ಎಂದರೆ—(೧) ಉಪಾಧಿಯು ಭಿನ್ನವಾದ ವಸ್ತುವಿನಲ್ಲಿ ಭೇದವನ್ನುಂಟುಮಾಡುತ್ತದೋ (೨) ಭೇದವಿಲ್ಲದಿರುವುದರಲ್ಲಿ ಭೇದವನ್ನುಂಟುಮಾಡುತ್ತದೋ?) ೧ನೇದ್ದು ಕೂಡ ಲಾರದು. ಮೊದಲು ಇದ್ದ ಭೇದವು ಉಪಾಧಿಯಿಂದ ಹುಟ್ಟುತ್ತದೆಂಬುದು ಕೂಡಲಾರದು. **ಮೊದಲೇ** ಇದ್ದ ಘಟಪಟಾದಿಗಳು ದಂಡಾದಿಗಳಿಂದ ಪುನಃ ಹುಟ್ಟುವುದಿಲ್ಲವಷ್ಟೇ. ೨ನೇದ್ದು ಅಯುಕ್ತವೆನ್ನುತ್ತಾರೆ) ಉಪಾಧಿಯು ಭೇದವಿಲ್ಲದಿರುವುದರಲ್ಲಿ ಭೇದವನ್ನು ಹುಟ್ಟಿಸಲಿಕ್ಕೆ ಎಲ್ಲಿಯೂ ಸರ್ವಥಾ ಶಕ್ತವಲ್ಲ. (ಉಪಾಧಿಯ ಸಂಬಂಧಕ್ಕಾಗಿಯೇ ಸ್ವಾಭಾವಿಕ ಭೇದವು ಆವಶ್ಯಕವು.) ಆದಕಾರಣ ಇದ್ದ ಭೇದವನ್ನೇ ಉಪಾಧಿಯು ತಿಳಿಯದವರಿಗೆ ತಿಳಿಸುತ್ತದೆ. ಅಂದರೆ—*ಭೂತಾಕಾಶದಲ್ಲಿ ಸ್ವಾಭಾವಿಕವಾಗಿಯೇ ಭೇದವಿದೆ, ಅದನ್ನು ಘಟಮಠಾದ್ಯುಪಾಧಿಗಳು ತಿಳಿಸುತ್ತವೆ ಉಪಾಧಿಗಳು ಅನಂತಗಳಾಗಿರುವುದರಿಂದ ಅವುಗಳಿಂದ ತಿಳಿಯಲ್ಪಡುವ ಆಕಾಶಗಳೂ ಅನಂತಗಳು. §(ಅವ್ಯಾಕೃತಾಕಾಶಪಕ್ಷದಲ್ಲಿ) ಆಕಾಶಪ್ರದೇಶಗಳು ನೀರಿನ ಕಣಾದಿಗಳಂತೆ ಅನಂತಗಳಾಗಿವೆ, ಎಂದು ಬ್ರಹ್ಮತರ್ಕದಲ್ಲಿದೆ. ಆದಕಾರಣ ಜೀವೇಶ್ವರರಿಗೆ ಅಭೇದವೆಂಬುದು **ಸರ್ವಮಸ್ಮಿ** ಇತ್ಯಾದಿಗಳಿಗೆ ಅರ್ಥವಲ್ಲ. (೩) (ಮತ್ತು **ಸರ್ವಮಸ್ಮಿ** ಇತ್ಯಾದಿಗಳಲ್ಲಿ ಜೀವೇಶ್ವರರಿಗೆ ಭೇದವಿಲ್ಲವೆಂಬುದು ಇಷ್ಟವಾಗಿದ್ದರೆ **ಉಪಾಸೀತ** ಎಂಬುದರಿಂದಲೇ ವಿರೋಧವು ಬರುವುದು. ಉಪಾಸ್ಯ (ಉಪಾಸಿಸಲ್ಪಡುವವನು) ಉಪಾಸಕ (ಧ್ಯಾನಿಸುವವನು) ಭಾವವು ಭೇದವಿಲ್ಲದೆ ಕೂಡಲಾರದೆಂಬ ಅಭಿಪ್ರಾಯದಿಂದ ಪ್ರಮಾಣ ಹೇಳುತ್ತಾರೆ—) ತಾನೇ ಈಶ್ವರನಾಗಿದ್ದರೆ ಈಶ್ವರನಾದ ತನ್ನನ್ನು ತಾನು ಪೂಜಿಸಿಕೊಳ್ಳಲಾರನು. ತಾನೂ ಈಶ್ವರನೂ ಸಮಾನನು ಎಂಬ ಭೇದಜ್ಞಾನವಿದ್ದರೂ ಕೂಡ ಉಪಾಸ್ಯನಾದ ಬ್ರಹ್ಮನೇ ಉಪಾಸಕನಾಗಲಾರನು. (ಅಂದರೆ—ಐಕ್ಯಜ್ಞಾನವಿರೋಣ ಉಪಾಸ್ಯ ಉಪಾಸಕಭಾವವು ಸುತರಾಂ ಕೂಡಲಾರದು.) ಎಂದು ಪರಮಸಂಹಿತೆಯಲ್ಲಿ ಹೇಳಿದೆ. || ೪ ||

ಪೀ—**ಸರ್ವಮಸ್ಮಿ** ಎಂಬುದು ಜೀವೇಶರಿಗೆ ಅಭೇದವನ್ನು ಹೇಳುತ್ತದೆಂದಂಗೀಕರಿಸಿದರೆ ಪ್ರಮಾಣ ವಿರೋಧವದೆ ಎನ್ನುತ್ತಾರೆ—

**ಭಾ.|| (೧) *ಅನನ್ಯಪ್ರೋಕ್ತೇ ಗತಿರತ್ರ ನಾಸ್ತ್ಯಣೀಯಾನ್ ಹ್ಯತರ್ಕ್ಯಮಣುಪ್ರಮಾ- ಣಾತ್ । ಪ್ರೋಕ್ತಾಽನ್ಯೇನೈವ ಸುಜ್ಞಾನಾಯ ಪ್ರೇಷ್ಠ || (೨) ಅನ್ಯದೇವ† ತದ್ವಿದಿತಾದಥೋ**

---

* ಹುಟ್ಟತಕ್ಕ ಆಕಾಶವು ಪಂಚಭೂತಗಳಲ್ಲಿ ಸೇರಿದ್ದು § ಹುಟ್ಟದಿರುವುದು ಸರ್ವತ್ರವ್ಯಾಪ್ತ.

* ಕಾಠಕ ಅ. ೧, ವ ೨, ಮ ೮, ೯. † ತಲ. ಖ. ೩ ಮ ೪.

**ಅವಿದಿತಾದಧಿ ॥ (೩) ಅನ್ಯತ್ರ§ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ಕೃತಾಕೃತಾತ್ । ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ ॥ (೪) ನಿತ್ಯೋ‡ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ ॥ ೫ ॥**

ಅ ॥ (೧) ಶ್ರೀಹರಿಯು ಬೇರೆ, ತಾನು ಬೇರೆ ಎಂದು ತಿಳಿಯದಿರುವ ಮತ್ತು ಶ್ರೀಹರಿಯೇ ತಾನು ಎಂದು ತಿಳಿದಿರುವ ಅದ್ವೈತಿಯು ಬ್ರಹ್ಮನನ್ನು ಉಪದೇಶಿಸಿದರೆ ಯಥಾರ್ಥಜ್ಞಾನವು ಸರ್ವಥಾ ಹುಟ್ಟಲಾರದು. (ಏಕೆಂದರೆ—ಹೀಗೆ ತಿಳಿದವರು ಮಿಥ್ಯಾಜ್ಞಾನಿಗಳೇ.) ಶ್ರೀಪರಬ್ರಹ್ಮನು ಬಹುಸಣ್ಣದಾಗಿರುವ ವಸ್ತುವಿನಿಂದಲೂ ಅತಿಸೂಕ್ಷ್ಮನು. (ಕಣ್ಣಿಗೆ ಕಾಣತಕ್ಕವನಲ್ಲ.) ಹೀಗೆಯೇ ಇದ್ದಾನೆಂದು ಊಹಿಸಲಿಕ್ಕೂ ಶಕ್ಯನಲ್ಲ. ಎಲೋ ನಚಿಕೇತಸನೇ ಜೀವೇಶ್ವರರಿಗೆ ಭೇದವದೆ ಎಂದು ತಿಳಿದವನಿಂದ ಉಪದೇಶಿಸಲ್ಪಟ್ಟ ಜ್ಞಾನದಿಂದ ಪರಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ. (೨) ಕಣ್ಣು ಮೊದಲಾದ ಇಂದ್ರಿಯಗಳಿಗೆ ಕಾಣದಿರುವ ಬ್ರಹ್ಮನು ತಿಳಿದ ವಸ್ತುವಿನಿಂದಲೂ, ತಿಳಿಯದಿರುವ ಮೂಲಪ್ರಕೃತಿ, ಮೂಲಪ್ರಕೃತಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯಿಂದಲೂ ಭಿನ್ನನೇ. ಸರ್ವೋತ್ತಮನು. (೩) ಪರಬ್ರಹ್ಮನು ಪುಣ್ಯಮಾಡತಕ್ಕ ಸಜ್ಜೀವನಿಂದಲೂ, ಪಾಪಿಷ್ಠರಾದ ಜೀವರಿಂದಲೂ, ಅಚೇತನ ಸಮುದಾಯಗಳಿಂದಲೂ ಭಿನ್ನನು. ಇಷ್ಟುಮಾತ್ರವಲ್ಲದೆ ಹಿಂದಿನಕಾಲದ ವಸ್ತುಗಳಿಂದಲೂ ಮುಂದಿನಕಾಲದ ವಸ್ತುಗಳಿಂದಲೂ ಭಿನ್ನನು. ಇಂತಹ ಬ್ರಹ್ಮನನ್ನು ತಾವು ತಿಳಿದಂತೆ ನನಗೆ ಉಪದೇಶಿಸಿರಿ, (ಎಂದು ಯಮದೇವರ ಹತ್ತಿರ ನಚಿಕೇತಸರ ಪ್ರಾರ್ಥನೆಯು.) (೪) ಶ್ರೀಹರಿಯು ನಾಶವಿಲ್ಲದ ನಿತ್ಯವಸ್ತುಗಳಿಗೂ ನಿತ್ಯತ್ವವನ್ನು ಕೊಡುವವನು ಜ್ಞಾನವಿರುವ ಸರ್ವಜೀವರಿಗೆ ಮುಖ್ಯವಾಗಿ ಚೈತನ್ಯವನ್ನು ಕೊಡುವವನು. ಒಬ್ಬನೇ ಎಲ್ಲಾ ಜೀವರಿಗೂ ಅಭೀಷ್ಟಗಳನ್ನು ಕೊಡುವವನು. (ಅಂತಹ ಶ್ರೀಹರಿಯನ್ನು ಪ್ರತ್ಯಕ್ಷೀಕರಿಸಿದವರಿಗೆ ಮಾತ್ರ ಮೋಕ್ಷವು ಲಭಿಸುವುದು ) ॥ ೫ ॥

ಪೀ—ಹಿಂದೆ ಹೇಳಿದ ವೇದ ಮೊದಲಾದುದೆಲ್ಲವೂ ವ್ಯಾವಹಾರಿಕ ಭೇದವನ್ನೇ ಹೇಳುತ್ತದೆಂದು ಏಕೆ ಆಗಲಾರದೆಂದರೆ—ಮೋಕ್ಷದಲ್ಲಿಯೂ ಭೇದವು ಇದೆ ಎಂಬುದನ್ನು ವೇದ ಮೊದಲಾದ ಪ್ರಮಾಣಗಳನ್ನು ಹೇಳಿ ಸಮರ್ಥಿಸುತ್ತಾರೆ—

**ಭಾ. ॥ (೧) ಯಥೋದಕಂ* ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ॥ (೨) ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ॥ (೩) ಸೋಽಶ್ನುತೇ ಸರ್ವಾನ್ ಕಾಮಾನ್ಸಹ ಬ್ರಹ್ಮಣಾ ವಿಪಶ್ಚಿತಾ ॥ (೪) ಆಧಿಪತ್ಯಮೃತೇ ಚೈವ ಭೋಗೇನ ವಿಷಯೇಣ ಚ । ಆನಂದಾದೀನೃತೇ ಮುಕ್ತಾಃ ಸರ್ವೇ ತೇ ಬ್ರಹ್ಮಣಃ ಸಮಾಃ ॥ ಇತ್ಯಾದೇಶ್ಚ ॥ ೬ ॥**

ಅ ॥ (೧) ನಿರ್ಮಲವಾದ ನೀರನ್ನು ನಿರ್ಮಲನೀರಿಗೆ ಸೇರಿಸಿದರೆ ಅದಕ್ಕೆ ಸದೃಶವಾದುದೇ ಆಗುತ್ತದೆ (ಹೊರತು ಅದೇ ಆಗುವುದಿಲ್ಲ.) ಒಂದು ಕುಡ್ತೆ ನೀರಿಗೆ ಇನ್ನೊಂದು ಕುಡ್ತೆ ನೀರು ಹಾಕಿದರೆ ಎರಡು ಕುಡ್ತೆಯಾಗುವುದಲ್ಲದೆ ಒಂದೇ ಕುಡ್ತೆ ನೀರು ಆಗುವುದಿಲ್ಲ ಅಂತೆಯೇ ಎಲ್ಲಾ ದೇವತೆಗಳಿಗೆ ಅಧಿಪತಿಯಾದ ಚತುರ್ಮುಖನು ಶ್ರೀಹರಿಯನ್ನು (ಸಾಯುಜ್ಯ ಮೋಕ್ಷವನ್ನು) ಹೊಂದಿದರೂ ಶ್ರೀಹರಿಗೆ ಸದೃಶನೇ ಆಗುತ್ತಾನೆ. ಶ್ರೀಹರಿಯೇ ಆಗುವುದಿಲ್ಲ. (೨) ಈ ಜ್ಞಾನವನ್ನು ಹೊಂದಿದವರು ನನ್ನ

§ ಕಾಠ ಅ. ೧, ವ ೨, ಮ. ೧೪ ‡ ಕಾ. ಅ ೨. ವ. ೨. ಮಾ ೧೩.

* ಕಾ ಅ ೨, ವ: ೧, ಮ. ೧೫.

ಸಮಾನರಾಗುವುದಲ್ಲದೆ ಐಕ್ಯವನ್ನು ಹೊಂದುವುದಿಲ್ಲ. (ಎಂದು ಶ್ರೀಕೃಷ್ಣನು ಗೀತೆಯಲ್ಲಿ ತನ್ನ ಪ್ರೀತಿ ಪಾತ್ರನಾದ ಅರ್ಜುನನಿಗೆ ಉಪದೇಶಿಸಿರುತ್ತಾನೆ.) (೩) ಮುಕ್ತನು ಜ್ಞಾನಿಯಾದ ಬ್ರಹ್ಮನಿಂದ ಕೂಡಿ ಕೊಂಡು ತನಗೆ ಯೋಗ್ಯಗಳಾದ ಎಲ್ಲಾ ಅಭೀಷ್ಟಗಳನ್ನು ಹೊಂದುತ್ತಾನೆ. (೪) (ಶ್ರೀಹರಿಯಲ್ಲಿರುವ ಐಶ್ವರ್ಯವನ್ನು ನೋಡುವಾಗಲೂ ಮುಕ್ತರಿಗೆ ಬ್ರಹ್ಮನಿಂದ ಅಭೇದವಲ್ಲವೆನ್ನುತ್ತಾರೆ—) ಮುಕ್ತರು ಜಗ ದ್ವ್ಯಾಪಾರ ಲಕ್ಷ್ಮ್ಯಾದಿ ವಿಷಯನಿಮಿತ್ತಕ ಭೋಗ, ಪೂರ್ಣಾನಂದ ಮೊದಲಾದವು, ಇವುಗಳನ್ನು ಹೊರತು ಮುಕ್ತರೆಲ್ಲರೂ, ಅಲ್ಪವಾದ ದುಃಖವೂ ಇಲ್ಲದಿರುವಿಕೆ ಮೊದಲಾದ ಕೆಲವು ಧರ್ಮಗಳಿಂದ ಬ್ರಹ್ಮನಿಗೆ ಸಮಾನರಾಗಿರುವರು, ಇದುಮೊದಲಾದ ಪ್ರಮಾಣಗಳು (ಮೋಕ್ಷದಲ್ಲಿಯೂ ಭೇದವನ್ನೇ ಸಾಧಿ ಸುತ್ತವೆ) ॥ ೬ ॥

ಪೀ—ತೇಭ್ಯೋ ನ ಜ್ಯಾಯಃ ಪರಮನ್ಯದಸ್ತಿ ಎಂಬ ವಾಕ್ಯವು ಭಗವಂತನನ್ನು ಹೇಳುತ್ತದೆ ಎನ್ನುತ್ತಾರೆ—

**ಭಾ. ॥ (೧) ಪ್ರದ್ಯುಮ್ನಾದೀನಿ ರೂಪಾಣಿ ತ್ರೀಣಿ ತ್ರೀಣ್ಯೇವ ಪಂಚ ಚ । ಋಗಾದಿ-ಸ್ಥಾನಭೇದೇನ ನಿತ್ಯಾಭಿನ್ನಾನಿ ಚೇಶನಾತ್ ॥ ಇತಿ ಸಾಮಸಂಹಿತಾಯಾಂ ॥ (೨) ದೃಷ್ಟ-ವಸ್ತುನೋ ಮಿಥ್ಯಾತ್ವಾಂಗೀಕಾರೇ ಚ ಯುಕ್ತ್ಯಪೇಕ್ಷಾ । ನತು ಸತ್ಯತ್ವೇ ॥ (೩) ದೃಷ್ಟಸ್ಯ ಸತ್ಯತಾಯಾಂ ತು ಯುಕ್ತಿರ್ವಾಽಯುಕ್ತಿರೇವ ವಾ । ಭೂಷಣಂ ತಸ್ಯ ಮಿಥ್ಯಾತ್ವೇ ಯು-ಕ್ತ್ಯಭಾವೋಽತಿದೂಷಣಂ ॥ ಯುಕ್ತಿಶ್ಚ ದೋಷ ಏವ ಸ್ಯಾದ್ಬಲವನ್ಮಾನವರ್ಜಿತಾ । ಇತಿ ಬ್ರಹ್ಮತರ್ಕೇ ॥ (೪) ನಚ ಶೂನ್ಯತ್ವಮಿಥ್ಯಾತ್ವಯೋಃ ಕಶ್ಚಿದ್ವಿಶೇಷಃ । ತತ್ಪ್ರಮಾಣಾಭಾ-ವಾತ್ । ಅತಃ ಸತ್ಯ ಏವ ಭೇದಃ ॥ ೭ ॥**

ಅ ॥ (೧) ಪ್ರದ್ಯುಮ್ನ ಮೊದಲಾದ ಐದು ಭಗವದ್ರೂಪಗಳು ಋಗ್ವೇದ ಮೊದಲಾದ ಮೂರು ಸ್ಥಾನದ ಭೇದದಿಂದ ಮೂರುಮೂರು ರೂಪಗಳನ್ನು ತಾಳುತ್ತವೆ. ಆ ರೂಪಗಳಿಗೆ ಸ್ವಲ್ಪವೂ ಭೇದವಿಲ್ಲ. ಮಹದೈಶ್ವರ್ಯಮಹಿಮೆಯಿಂದ ಅದು ಕೂಡುತ್ತದೆ. ಎಂದು ಸಾಮಸಂಹಿತೆಯಲ್ಲಿದೆ. (೨) (ಮೋಕ್ಷದಲ್ಲಿ ಭೇದವದೆ ಎಂದು ಹೇಳುವ ವಾಕ್ಯಗಳೆಲ್ಲವೂ ಅಮುಖ್ಯಮುಕ್ತಿಯನ್ನು ಹೇಳುವವುಗಳು. ಜೀವೇಶ್ವರರ ಭೇದವು ಸತ್ಯವು, ಎಂದು ಪ್ರತಿಪಾದಿಸತಕ್ಕ ಸ್ಪಷ್ಟಪ್ರಮಾಣವು ಯಾವುದೂ ಇಲ್ಲ. ಅವುಗಳೇ ಸತ್ಯಗಳೆಂಬ ವಿಷಯದಲ್ಲಿ ಯುಕ್ತಿಯೂ ಇಲ್ಲ. ಎಂದರೆ—) ಪ್ರಮಾಣಸಿದ್ಧವಾದ ವಸ್ತುವು ಮಿಥ್ಯೆಯು ಎಂದನ್ನಬೇಕಾ ದರೇನೇ ಯುಕ್ತಿಯು ಆವಶ್ಯಕವು. * ಆ ವಸ್ತುವ ಸತ್ಯವು ಎಂದನ್ನಬೇಕಾದರೆ ಯುಕ್ತಿಯು ಬೇಕಾಗಿಲ್ಲ. (೩) (ಆ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ—) ಕಂಡ ವಸ್ತುವು ಸತ್ಯವಾಗಿದೆ ಎಂಬುವಲ್ಲಿ ಯುಕ್ತಿಪ್ರಮಾ ಣಗಳಿದ್ದರೆ ಭೂಷಣವೇ (ಪ್ರತ್ಯಕ್ಷಸಿದ್ಧವಾದುದಕ್ಕೆ ಬೇರೆ ಪ್ರಮಾಣಗಳ ಸಾಹಾಯ್ಯ ಸಿಕ್ಕಿದರೆ ಅದು ದೃಢ ವಾಗುತ್ತದೆ.) ಯುಕ್ತಿಪ್ರಮಾಣಗಳು ಇಲ್ಲದಿದ್ದರೂ ಭೂಷಣ ಹೊರತು ದೋಷವಿಲ್ಲ. ಆದರೆ ಕಣ್ಣಿನಿಂದ ಕಂಡ ವಸ್ತುವನ್ನು ಇಲ್ಲವೆಂದೆನ್ನಬೇಕಾದರೆ ಸರಿಯಾದ ಯುಕ್ತಿಪ್ರಮಾಣಗಳು ಬೇಕು. ಪ್ರಮಾಣವಿಲ್ಲದಿದ್ದರೆ ದೋಷವು. ಜಗತ್ತು ಸುಳ್ಳು ಎಂದು ಹೇಳತಕ್ಕ ದೃಶ್ಯತ್ವ ಮೊದಲಾದ ಯುಕ್ತಿಗೆ ದೋಷವೇ ಇದೆ. ಆ ಯುಕ್ತಿಯು ಪ್ರಬಲ ಪ್ರಮಾಣಗಳಿಂದ ವಿರುದ್ಧವೂ ಆಗಿದೆ, ಎಂದು ಬ್ರಹ್ಮತರ್ಕದಲ್ಲಿದೆ. (೪) (ಈ ವಚನ ಗಳೆಲ್ಲವೂ ಮಿಥ್ಯಾಭೇದವನ್ನು ಹೇಳುತ್ತವೆ. ಮಿಥ್ಯೆಯೆಂದರೂ ಅಸತ್ ಎಂದರೂ ಒಂದೇ ಅರ್ಥವೆನ್ನು ತ್ತಾರೆ—) ಶೂನ್ಯತ್ವ(ಏನೂ ಇಲ್ಲದಿರುವಿಕೆ) ಮಿಥ್ಯಾತ್ವಗಳಿಗೆ ಏನೂ ವ್ಯತ್ಯಾಸವಿಲ್ಲ. (ಸದ್ರೂಪವಾಗ

* ಹಸಿವೆಇದ್ದವನು ಭೋಜ್ಯವಾದ ಅನ್ನವನ್ನು ಕಾಣುತ್ತಿರಲು, ಇನ್ನೊಬ್ಬನು ಇದು ಅನ್ನವಲ್ಲವೆಂದರೆ ಅನ್ನವೆಂದು ಕಾಣ ತಕ್ಕ ಇದು ಅನ್ನವಾಗದಿರುವುದು ಹೇಗೆ ಎಂದು ಅನ್ನವು ಮಿಥ್ಯೆಯು ಎಂಬಲ್ಲಿಯೇ ಪ್ರಬಲಪ್ರಮಾಣದ ಅಪೇಕ್ಷೆಯು. ಅನ್ನವು ಸತ್ಯವು ಎಂಬಲ್ಲಿ ಯಾವ ಪ್ರಮಾಣದ ಅಪೇಕ್ಷೆಯೂ ಇರುವುದಿಲ್ಲ

ದಿರುವುದು **ಅಸತ್,** ಅನಿರ್ವಚನೀಯವು ಮಿಥ್ಯೆಯು, ಹೀಗೆ ವ್ಯತ್ಯಾಸವಿದೆ ಎಂದರೆ—) ಮಿಥ್ಯಾ ಎಂಬ ಶಬ್ದದ ಅರ್ಥವು ಅನಿರ್ವಚನೀಯವು. ಅಸತ್ ಎಂಬ ಶಬ್ದಾರ್ಥದಿಂದ ಬೇರೆ ಎಂಬಲ್ಲಿ ಪ್ರಮಾಣವಿಲ್ಲ. ಅದು ಕಾರಣ ಭೇದವು ಸತ್ಯವೇ ಆಗಿದೆ. ॥ ೭ ॥

ಶಂ—ಭೇದವು ಸತ್ಯವಾಗಲಿ, ಆದರೆ ವ್ಯಾವಹಾರಿಕ ಸತ್ಯ (ಅಂದರೆ ನಡವಳಿಕೆಯಲ್ಲಿ ಮಾತ್ರ ತೋರುವ ಭೇದವು.) ಪಾರಮಾರ್ಥಿಕ ಸತ್ಯವಾದುದೇ ಮಿಥ್ಯೆಗೆ ವಿರೋಧಿಯು. ವ್ಯಾವಹಾರಿಕ ಸತ್ಯವು ಮಿಥ್ಯೆಯಾಗಬಹುದು, ಎಂದರೆ—ಭೇದವು ವ್ಯಾವಹಾರಿಕವು ಎಂದು ಹೇಳುವವರ ಮತದಲ್ಲಿ ಯಾವಾಗಲೂ ಯಾರಿಗೂ ಭೇದವು ಇಲ್ಲ, ಇರಲಿಲ್ಲ, ಮುಂದೆ ಇರುವುದಿಲ್ಲ, ಎಂಬ ಬುದ್ಧಿಯು (೧) ಇದೆಯೋ, (೨) ಇಲ್ಲವೋ, (೩) ಇಲ್ಲವೆಂದು ಹೇಳಿದರೆ –

**ಭಾ. ॥ (೧) ನಚ ಕದಾಚಿತ್ಕಸ್ಯಾಪಿ(ಜ್ಞಸ್ಯ) ನಾಸೀದಸ್ತಿ ಭವಿಷ್ಯತೀತಿ ಬುದ್ಧ್ಯಭಾವೇ ವ್ಯಾವಹಾರಿಕಸತ್ಯಮಿತ್ಯತ್ರಾಸ್ಮಾಕಂ ವಿರೋಧಃ । ತದ್ಭಾವೇ ಚ ನ ಶೂನ್ಯಾದ್ವಿಶೇಷಃ॥ (೨) ಸತ್ಯಮೇನಮನು ವಿಶ್ವೇ ಮದಂತೀತ್ಯಾದಿಶ್ರುತೇಶ್ಚ ಸತ್ಯೋ ಭೇದಃ ॥ (೩) ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ । ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥ ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ । ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ** (ಮಾಂ. ಖ. ೨ ಮ. ೯, ೧೦) **ಇತ್ಯಾದಿಶ್ರುತೇಶ್ಚ । ಪ್ರಪಂಚೋ ಭೇದಃ ಯದಿ ವಿದ್ಯೇತ ಭವೇತ ಉತ್ಪದ್ಯೇತ ತರ್ಹಿ ನಿವರ್ತೇತ । ಅತೋ ನ ಜೀವೇಶ್ವರಾದಿಭೇದ ಉತ್ಪದ್ಯತೇ । ಕಿಂತು ನಿತ್ಯ ಏವ । ಅತೋ ಮಾಯಯಾ ಭಗವತ್ಪ್ರಜ್ಞಾನೇನ ಮಾತಂ ರತಂ ಚ ಮಾತ್ರಂ। ಭಗವಾನ್ಜ್ಞಾನಾತಿ ರಮತೇ ಚಾಸ್ಮಿನ್ಭೇದ ಇತಿ। ತಚ್ಚ ಭಗವದ್ರೂಪಮದ್ವೈತಂ ಪರಮಾರ್ಥೋ ಭಗವಾಂಸ್ತದ್ರೂಪಾಪೇಕ್ಷಯಾದ್ವೈತಂ । ಯದದ್ವೈತಂ ನಾಮೋಚ್ಯತೇ ತತ್ಪರಮಾರ್ಥಭಗವದಪೇಕ್ಷಯೇತ್ಯರ್ಥಃ । ಸ್ವಗತಭೇದೋ ಭಗವತಿ ನಾಸ್ತೀತ್ಯುಕ್ತಂ । ನಚ ಕಲ್ಪನಾಮಾತ್ರೋ ಭೇದಃ । ಯದಿ ಕೇನಚಿತ್ಕಲ್ಪಿತೋ ವಿಕಲ್ಪಸ್ತಥಾಪಿ ನಿವರ್ತೇತ । ತಸ್ಮಾದುಪದೇಶಾದಯಮೇವ ವಾದಃ । ಕೇನಾಪಿ ತತ್ಪ್ರಸಾದೇನ(ದಂ) ವಿನಾಽವಿಜ್ಞಾತತ್ವಾದಜ್ಞಾತೋ ಭಗವಾಂಸ್ತದ್ಗತೋ ಭೇದೋ ನ ವಿದ್ಯತ ಇತಿ ॥**
**॥ ೮ ॥**

ಅ ॥ (೧) ಯಾವಾಗಲೂ ಯಾರಿಗೂ ಭೇದವು ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆ ಇರಲಾರದು, ಎಂಬ ಬುದ್ಧಿಯು ಇಲ್ಲವಾದರೆ—ಅಂತಹುದು ವ್ಯಾವಹಾರಿಕ ಸತ್ಯವಾಗುತ್ತದೆಂಬ ಮಾತು ನಮಗೆ ವಿರೋಧಿಯಾಗುವುದಿಲ್ಲ (೧) (ಅಂತಹ ಬುದ್ಧಿಯು ಇದೆ ಎಂದು ಹೇಳಿದರೆ—) ಅಂತಹ ಬುದ್ಧಿಯು ಇದ್ದರೆ ಶೂನ್ಯ (ಅಸತ್ತು)ದಿಂದ ವ್ಯಾವಹಾರಿಕ ಸತ್ಯಕ್ಕೆ ವ್ಯತ್ಯಾಸವಿಲ್ಲ. (ಅಂತಹ ಅಸತ್ತೇ ವ್ಯಾವಹಾರಿಕ ಸತ್ಯವು) (೨) (ಭೇದವು ಸತ್ಯವೆಂಬ ವಿಷಯದಲ್ಲಿ ಸ್ಪಷ್ಟ ವೇದವನ್ನು ಹೇಳುತ್ತಾರೆ—) ಎಲ್ಲಾ ದೇವತೆಗಳೂ ಗುಣಪೂರ್ಣನಾದ ಶ್ರೀಹರಿಯನ್ನು ಅನುಸರಿಸಿ ಸಂತೋಷಗೊಳ್ಳುತ್ತಾರೆ, ಇದು ಮೊದಲಾದ ವೇದಗಳಿಂದ ಭೇದವು ಸತ್ಯವೇ. (೩) (ಭೇದವು ಸತ್ಯವೆಂಬ ವಿಷಯದಲ್ಲಿ ಸ್ಪಷ್ಟವಾದ ವೇದವನ್ನು ಹೇಳುತ್ತಾರೆ—) (೧) **ಪ್ರಪಂಚಃ** (೨) **ವಿಕಲ್ಪಃ** ಎಂಬ ಎರಡು ವೇದಗಳಿಂದ ಭೇದವು ಸತ್ಯವೆಂದೇ ಸಿದ್ಧವಾಗುತ್ತದೆ ಅಂದರೆ—(೧) ಪ್ರಪಂಚಃ-ಭೇದವು ಯದಿ ವಿದ್ಯೇತ-ಹುಟ್ಟುವುದಾದರೆ, ನಾಶವಾಗುತ್ತಿತ್ತು. ಸಂದೇಹವಿಲ್ಲ ನಾಶವಾಗುವುದೇ ಇಲ್ಲ. ಆದಕಾರಣ ಜೀವ ಈಶ್ವರಾದಿಗಳ ಭೇದವು

ಹುಟ್ಟುವುದಿಲ್ಲ. ಮತ್ತೆ ನಿತ್ಯವು, ಯಾವಾಗಲೂ ಇರತಕ್ಕುದೇ. ಆದಕಾರಣ ದ್ವೈತಂ=ಭೇದವು. ಮಾಯಾಮಾತ್ರಂ=ಮಾಯಾ=ಶ್ರೀಭಗವಂತನ ಪ್ರಜ್ಞೆಯಿಂದ ತಿಳಿಯಲ್ಪಟ್ಟುದು. ಅಂಗೀಕರಿಸಲ್ಪಟ್ಟುದು. ಅಂದರೆ—ಶ್ರೀಹರಿಯು ಭೇದವನ್ನು ತಿಳಿದಿರುತ್ತಾನೆ. ಭೇದವನ್ನು ಒಡಂಬಟ್ಟಿರುತ್ತಾನೆ. (ಆದಕಾರಣ ದ್ವೈತ (ಭೇದ ವು ಅಜ್ಞಾನಕಲ್ಪಿತವಲ್ಲ ) (**ಮಾಯಾಮಾತ್ರಮಿದಂ ದ್ವೈತಂ** ಎಂಬುದರಿಂದ ದ್ವೈತವು ಮಿಥ್ಯೆಯೆಂದು ಹೇಳಲ್ಪಡುತ್ತದೆಂದೇ ಅರ್ಥ ಹೇಳಬೇಕು, ಏಕೆಂದರೆ—ಮುಂದಿನ ವಾಕ್ಯದಲ್ಲಿ **ಅದ್ವೈತಂ ಪರಮಾರ್ಥತಃ** ಎಂದು ಅದ್ವೈತವೇ ಪಾರಮಾರ್ಥಿಕವೆಂದು ಹೇಳಿದೆ, ಎಂದರೆ—) ಪ್ರಕೃಷ್ಟಜ್ಞಾನದಿಂದ ತಿಳಿಯಲ್ಪಟ್ಟ ಮತ್ತು ಅಂಗೀಕರಿಸಲ್ಪಟ್ಟ ಭಗವದ್ರೂಪವು, ಅದ್ವೈತಂ=ಭೇದವಿಲ್ಲದಿರುವುದು. ಹೇಗೆಂದರೆ-ಪರಮಾರ್ಥತಃ=ಸರ್ವಸ್ವತಂತ್ರವಾದ ಮತ್ಸ್ಯ ಮೊದಲಾದ ರೂಪದಿಂದ ಭಗವದ್ರೂಪಕ್ಕೆ ಅಭೇದವು. ಅದ್ವೈತ (ಅಭೇದ)ವು ಎಂದು ಹೇಳಿದ್ದು ಸ್ವತಂತ್ರನಾದ ಶ್ರೀಹರಿಯನ್ನು ಇಟ್ಟುಕೊಂಡು ಎಂದರ್ಥವು. ಅಂದರೆ—ಶ್ರೀಭಗವಂತನಿಗೂ ಅವನ ಅವತಾರ ಗುಣ ಅವಯವಾದಿಗಳಿಗೂ ಭೇದವಿಲ್ಲವೆಂದು ತಾತ್ಪರ್ಯವು ಹೊರತು ಪರಬ್ರಹ್ಮನಿಗೂ ಜೀವರಿಗೂ ಅಭೇದವು ಪಾರಮಾರ್ಥಿಕವೆಂದು ಇಲ್ಲಿ ಹೇಳಿದುದು ಅಲ್ಲ, (೨) (ಭೇದವು ಮಿಥ್ಯೆಯೆಂದು ಹೇಳಿದರೆ ಬಾಧಕವಡೆ ಎಂದು ತೋರಿಸುವುದಕ್ಕಾಗಿ, **ವಿಕಲ್ಪೋ ವಿನಿವರ್ತೇತ** ಎಂಬ ವಾಕ್ಯವು ಹೊರಟದೆ ಎನ್ನುತ್ತಾರೆ—) ಭೇದವನ್ನು ಕಲ್ಪಿಸಿದ್ದು ಮಾತ್ರ. ಅದು ವಾಸ್ತವಿಕವಲ್ಲ ಮಿಥ್ಯೆಯೇ, ಎಂದನ್ನಕೂಡದು. ಅಜ್ಞಾನಾದಿಗಳಿಂದ ಭೇದವನ್ನು ಕಲ್ಪಿಸಿದ್ದೆಂದಾದರೆ ನಾಶವಾಗುತ್ತಿತ್ತು (ಪರಂತು ನಾಶವಾಗುವುದಿಲ್ಲ, ಆದಕಾರಣ ಭೇದವನ್ನು ಕಲ್ಪಿಸಿದ್ದಲ್ಲ, ಮತ್ತೆ ಸತ್ಯವೇ ) **ಅದ್ವೈತಂ ಬುಧ್ಯತೇ** ಇದುಮೊದಲಾದ ಉಪದೇಶಗಳಿಂದ ಈ ಅರ್ಥವೇ ಹೇಳುವುದು. (**ಹೇಗೆಂದರೆ**) (**ಅಜ್ಞಾತೇ ದ್ವೈತಂ ನ ವಿದ್ಯತೇ** ಎಂಬುದಕ್ಕೆ ಅರ್ಥ ಹೇಳುತ್ತಾರೆ ) ಯಾರಿಗೂ ಶ್ರೀಹರಿಯ ಅನುಗ್ರಹವಿಲ್ಲದೆ ತಿಳಿಯಲಸಾಧ್ಯನಾದುದರಿಂದ ಅಜ್ಞಾತನು ಭಗವಂತನು. ಅವನ ಅವತಾರ ಗುಣಕ್ರಿಯಾದಿಗಳಲ್ಲಿ ಭೇದವಿಲ್ಲ. || ೮ ||

ಟೀ—ಹೀಗೆ ಪ್ರಪಂಚಃ ಇತ್ಯಾದಿ ಎರಡು ಶ್ಲೋಕಗಳಿಗೆ ತಾನು ಅರ್ಥಬರೆದು ಆ ಅರ್ಥವು ದೃಢವಾಗುವುದಕ್ಕಾಗಿ ಪ್ರಮಾಣ ಹೇಳುತ್ತಾರೆ.

**ಭಾ. || (೧) ಜೀವೇಶ್ವರಗತೋ ಜೀವೇಷ್ವಥ ಜೀವಜಡಾತ್ಮನೋಃ | ಜಡೇಶಯೋರ್ಜಡೇಷ್ವೇವಂ ಪಂಚಭೇದಃ ಪ್ರಪಂಚಕಃ || ಪ್ರಕೃಷ್ಟಮೋಕ್ಷಹೇತುತ್ವಾತ್ತಜ್ಜ್ಞಾನಂ ಪ್ರೇತಿ ಕಥ್ಯತೇ | ಪ್ರಕೃಷ್ಟಪಂಚಕತ್ವಾದ್ವಾ ಪ್ರಪಂಚೋಽಯಂ ಪ್ರಕೀರ್ತಿತಃ || (೨) ಯದ್ಯಯಂ ಸಾದಿರೇವ ಸ್ಯಾನ್ನಿವರ್ತೇತ ಕದಾಚನ | ನ ನಿವರ್ತತೇ ಯತಸ್ತೇನ ನಾಯಂ ಸಾದಿರ್ಭವೇತ್ಕ್ವಚಿತ್ || (೩) ಮಾಯೇತಿ ವಿಷ್ಣುವಿಜ್ಞಾನಂ ತನ್ಮಿತತ್ವಾಚ್ಚ ನ ಕ್ವಚಿತ್ | ಭ್ರಾಂತತ್ವಮಸ್ಯ ಯದ್ವಿಷ್ಣೋರ್ನೈವ ಭ್ರಾಂತಿಃ ಕಥಂಚನ | ರಮತೇ ಚಾತ್ರ ಯದ್ವಿಷ್ಣುರ್ನ ಹಿ ಭ್ರಾಂತೌ ರಮೇದ್ಧರಿಃ || (೪) ಪರಮಾರ್ಥೇ ಹರೌ ನೈವ ಭೇದೋಽಸ್ತಿ ಜಡಜೀವವತ್ || (೫) ಯದ್ಯಯಂ ಕಲ್ಪಿತೋ ಭೇದಃ ಕಸ್ಮಾನ್ನೈವ ನಿವರ್ತತೇ | ತಸ್ಮಾದ್ಭೂತಭವಿಷ್ಯಾಖ್ಯಭವದಾಖ್ಯಪರಾಭಿಧಾಃ || ತದನ್ಯೇ ಚೈಕ ಏವಾಸ್ಮಿನ್ನೋಂಕಾರಾಖ್ಯೇ ಜನಾರ್ದನೇ | ಅಜ್ಞಾತನಾಮಕೇ ತಸ್ಮಿನ್ನ ಭೇದೋಽಸ್ತಿ ಕಥಂಚನ || ಇತಿ ಬ್ರಹ್ಮತರ್ಕೇ:||**

**|| ೯ ||**

ಅ || (೧) ಜೀವೇಶ್ವರರಿಗೂ, ಪರಸ್ಪರಜೀವರಿಗೂ, ಜೀವಜಡಗಳಿಗೂ. ಜಡಈಶ್ವರರಿಗೂ ಪರಸ್ಪರ ಜಡಗಳಿಗೂ ಭೇದವು. ಹೀಗೆ ಐದು ಭೇದಗಳು ಪ್ರಪಂಚವೆನಿಸುತ್ತದೆ ಸರ್ವಶ್ರೇಷ್ಠವಾದ ಮೋಕ್ಷಕ್ಕೆ

ಕಾರಣವಾಗಿರುವುದರಿಂದ ಪಂಚಭೇದಜ್ಞಾನವು ಪ್ರ ಎನಿಸುತ್ತದೆ. ಅಥವಾ ಐದು ಭೇದವೂ ಉತ್ಕೃಷ್ಟವಾಗಿರುವುದರಿಂದ ಪಂಚಭೇದವು ಪ್ರ ಎನಿಸುತ್ತದೆ. (೨) ಭೇದವು ಹುಟ್ಟಿದ್ದು ಎಂದಾದರೆ ಯಾವಾಗಲಾದರೂ ನಾಶಹೊಂದೀತು. ನಾಶಹೊಂದುವುದೇ ಇಲ್ಲ. ಅದುಕಾರಣ ಭೇದವು ಎಲ್ಲಿಯೂ ಹುಟ್ಟಿದ್ದಲ್ಲವೇ ಅಲ್ಲ. (೩) (**ಮಾಯಾಮಾತ್ರಮಿದಂ ದ್ವೈತಂ** ಎಂಬುದು, ಭೇದವು ಸತ್ಯವೆಂದು ಹೇಳುತ್ತದೆನ್ನುತ್ತಾರೆ—) ವಿಷ್ಣುವಿನ ವಿಶೇಷಜ್ಞಾನವು ಮಾಯಾ ಎನಿಸುತ್ತದೆ ಐದು ಭೇದವನ್ನು ವಿಷ್ಣುವು ತಿಳಿದುಕೊಳ್ಳುವುದರಿಂದ ಸರ್ವಥಾ ಭ್ರಮೆಯು ಆಗಲಾರದು. ಏಕೆಂದರೆ ವಿಷ್ಣುವಿಗೆ ಹೇಗೂ ಭ್ರಮೆಯು ಹುಟ್ಟಲಾರದು. ವಿಷ್ಣುವು ಭೇದವನ್ನು ಅಂಗೀಕರಿಸಿರುತ್ತಾನೆ. ವಿಷ್ಣುವು (ತಿಳಿದವನಾದ ಕಾರಣ) ಅದು ಭ್ರಮೆಯೆಂದು ಒಡಂಬಡಲಾರನು. (೪) (**ಅದ್ವೈತಂ ಪರಮಾರ್ಥತಃ** ಎಂಬ ವಾಕ್ಯಕ್ಕೆ ಅರ್ಥಹೇಳುತಾರೆ—) ಜಡಶರೀರಕ್ಕೂ ಜೀವರಿಗೂ ಇದ್ದ ಭೇದದಂತೆ ಸರ್ವಸ್ವತಂತ್ರನಾದ ಶ್ರೀಹರಿಯು ಅವತಾರ ದೇಹಾದಿಗಳಿಂದ ಭೇದವಿಲ್ಲ. (೫) (ಪಂಚಭೇದವು ಮಿಥ್ಯೆಯೆಂದರೆ ಬಾಧಕವಾದ ವಿಕಲ್ಪ ಎಂಬ ವಾಕ್ಯದ ಅರ್ಥ ಹೇಳುತ್ತಾರೆ—) ಪಂಚಭೇದವೂ ಕಲ್ಪಿತವು, ವಾಸ್ತವವಲ್ಲವೆಂದಾದರೆ ಏಕೆ ನಾಶಹೊಂದುವುದಿಲ್ಲ. ಹೀಗೆ ಉಪಸಂಹಾರ (ಕೊನೆ) ವಾಕ್ಯದಲ್ಲಿ ಭೇದವು ಸತ್ಯವೆಂದೇ ನಿಶ್ಚಿತವಾಗಿರುವುದರಿಂದ ಸರ್ವಕ್ಕೂ ಅಭೇದವನ್ನು ಹೇಳುವಹಾಗೆ ತೋರುವ ಉಪಕ್ರಮ (ಬುಡದ) ವಾಕ್ಯಕ್ಕೆ ಭೂತ, ಭವಿಷ್ಯತ್, ವರ್ತಮಾನ ಶಬ್ದಗಳೂ, ತ್ರಿಕಾಲ (ಭೂತಭವಿಷ್ಯದ್ವರ್ತಮಾನ) ಅತೀತಾದಿ ಶಬ್ದಗಳೂ ಓಂಕಾರನೆನಿಸಿಕೊಂಡ ಶ್ರೀಹರಿಯೊಬ್ಬನಲ್ಲಿಯೇ ಇರುತ್ತವೆ. ಅದುಕಾರಣ ಅಜ್ಞಾತನೆಂದು ಹೆಸರುಳ್ಳ ಶ್ರೀಹರಿಯಲ್ಲಿ (ತನ್ನ ಗುಣ ಅವತಾರಾದಿಗಳಿಂದ) ಹೇಗೂ ಭೇದವು ಇಲ್ಲ, ಎಂದು ಬ್ರಹ್ಮತರ್ಕದಲ್ಲಿದೆ. ॥ ೯ ॥

ಪೀ — **ಪ್ರಪಂಚೋ ಯದಿ ವಿದ್ಯೇತ** ಎಂಬಲ್ಲಿದ್ದ ವಿದಧಾತುವಿಗೇನೇ ಉತ್ಪತ್ತಿಯೆಂದರ್ಥವೆನ್ನುತ್ತಾರೆ—

**ಭಾ. ॥ (೧) ವಿದಿಃ ಕಾದಾಚಿತ್ಕಸ್ವರೂಪಲಾಭ ಇತಿ ಚ ಧಾತುಃ । ಭಿದ್ಯೇತೇತಿವದ್ವಿದ್ಯೇತೇತಿಶಬ್ದಃ । ಪರಮಾರ್ಥತ ಇತಿ ವಿಶ್ವತಶ್ಚಕ್ಷುರಿತಿವತ್ಸಪ್ತಮ್ಯರ್ಥೇ । ಪರಮಾರ್ಥೇ ದ್ವೈತಾಭಾವ ಏವೇತ್ಯರ್ಥಃ । ಪರಮಾರ್ಥಃ ಪರಮಾತ್ಮಾಽದ್ವೈತ ಇತಿ ಪ್ರಥಮಾರ್ಥೋ ವಾ ॥ (೨) ನಹಿ ವಿದ್ಯಮಾನಂ ನಿವರ್ತತ ಇತಿ ನಿಯಮಃ । ಉತ್ಪದ್ಯಮಾನಂ ಹಿ ಪ್ರಾಯೋ ನಿವರ್ತತೇ । ಜೀವೇಶ್ವರಪ್ರಕೃತ್ಯಾದಿಕಂ ಬಹುಲಂ ಹಿ ವಿದ್ಯಮಾನಂ ನ ನಿವರ್ತತೇ ॥ (೩) ನಚ ಕಲ್ಪಿತೋ ವಿಕಲ್ಪ ಇತಿ ಪಕ್ಷೇ ಕಲ್ಪಿತೋ ಯದೀತಿ ಯದಿಶಬ್ದೋ (ನಚ ನಿವರ್ತೇತ ನ ಸಂಶಯಃ । ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದೀತ್ಯಾದಿನಾಽನಿಷ್ಟಾಪಾದನರೂಪಃ ಶಬ್ದೋ) ಯುಜ್ಯತೇ । ಕಲ್ಪಿತತ್ವಂ ಚೇಚ್ಛ್ರುತೇರಭಿಪ್ರಾಯಃ ಅವಿದ್ಯಮಾನೋಽಯಂ ಪ್ರಪಂಚೋ ವಿನಿವರ್ತತೇ ಕಲ್ಪಿತೋ ವಿಕಲ್ಪೋ ನಿವರ್ತತ ಇತ್ಯೇವ ಶಬ್ದಃ ಸ್ಯಾತ್ । ನ ತು ನಿವರ್ತೇತೇತಿ । ಅತಃ ಸತ್ಯತಾಪರ(ವಿಷಯ)ಮಿದಂ ವಾಕ್ಯಂ ಭೇದಸ್ಯ । ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ। ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ॥ ಇತಿ ನಿಂದನಾಚ್ಚ ॥ (೫) ವಿದ್ಯಾಽಽತ್ಮನಿ ಭಿದಾಬೋಧಃ । ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯೇತ್ಯಾದಿಭೇದಜ್ಞಾನಸ್ಯ ಪ್ರಶಂಸನಾಚ್ಚ । ಅತೋಽಸನಾನ್ಮಿತತ್ವಾಚ್ಚಾಸ್ಮೀತಿ ಭಗವನ್ನಾಮ್ನ್ಯೇವೈತತ್ ॥ ಇತ್ಯೇಕವಿಂಶಃ ಖಂಡಃ ॥ ೪–೧೪, ೧೫, ೧೬, ೧೭, ೧೮, ೧೯, ೨೦, ೨೧ ॥ ॥ ೧೦ ॥**

**ಅ ||** (೧) ವಿದಧಾತುವಿಗೆ ಕೆಲವು ಕಾಲದಲ್ಲಿ ಮಾತ್ರ ಇರತಕ್ಕ ಸ್ವರೂಪವನ್ನು ಹೊಂದುವುದು, ಎಂದರ್ಥವು. **ಭಿದ್ಯೇತ** ಎಂಬಲ್ಲಿ ಭಿದಿಧಾತುವಿಗೆ ಅನ್ಯೋನ್ಯಾಭಾವ ಎಂಬರ್ಥವಿದ್ದಂತೆಯೇ **ವಿದ್ಯೇತ** ಎಂಬಲ್ಲಿದ್ದ ವಿದಧಾತುವಿಗೂ ಕೆಲವು ವೇಳೆ ಮಾತ್ರ ಇರುವ ಸ್ವರೂಪಪ್ರಾಪ್ತಿಯೆಂಬ ಅರ್ಥವು. **ವಿಶ್ವತಃ ಚಕ್ಷುಃ** ಎಂಬಲ್ಲಿ ವಿಶ್ವತಃ ಎಂಬಲ್ಲಿದ್ದ ತಸಿಲ್ ಪ್ರತ್ಯಯವು ಸಪ್ತಮ್ಯರ್ಥದಲ್ಲಿ. ಅಂದರೆ— ಎಲ್ಲಾ ಅಂಗಗಳಲ್ಲಿ ಕಣ್ಣುಗಳುಳ್ಳವನು, ಎಂದು ಹೇಳಿದಂತೆಯೇ ಪರಮಾರ್ಥತಃ ಎಂಬ ತಸಿಲ್ ಪ್ರತ್ಯಯವು ಸಪ್ತಮ್ಯರ್ಥದಲ್ಲಿ. ಸರ್ವೋತ್ತಮನಾದ ಶ್ರೀಹರಿಯಲ್ಲಿ ಭೇದವಿಲ್ಲವೇ ಇಲ್ಲ ಅಥವಾ ಪರಮಾರ್ಥತಃ=ಪರಮಾತ್ಮನು ಮತ್ಸ್ಯ ಮೊದಲಾದ ರೂಪಗಳಿಂದ ಭೇದವಿಲ್ಲದವನು, ಎಂದು ಪ್ರಥಮಾವಿಭಕ್ತಿಯ ಅರ್ಥದಲ್ಲಿದೆ. (೨) (ವಿದ್ಯೇತ ಎಂಬಲ್ಲಿ ವಿದಧಾತುವಿಗೆ ಸತ್ತಾ=ಇರುವುದು ಎಂದು ಒಂದೇ ಅರ್ಥವೆಂದು ಏಕೆ ಒಡಂಬಡಬಾರದು. ಉತ್ಪತ್ತಿ=ಹುಟ್ಟುವುದು. ಎಂಬ ಅರ್ಥವನ್ನು ಏಕೆ ಇಟ್ಟುಕೊಳ್ಳುವುದು ಎಂದರೆ—) ಇದ್ದುದೆಲ್ಲವೂ ನಾಶಹೊಂದುತ್ತದೆಂದು ನಿಯಮವಿಲ್ಲ ಪ್ರಾಯಶಃ ಹುಟ್ಟಿದ್ದೆಲ್ಲವೂ ನಾಶಹೊಂದುವುದು. ಜೀವ ಈಶ್ವರ ಪ್ರಕೃತಿ ಮೊದಲಾದುದು ಇದ್ದುದೆಲ್ಲವೂ ನಾಶಹೊಂದುವುದಿಲ್ಲವಷ್ಟೆ (೩) ಭೇದವು (ಅಜ್ಞಾನಾದಿಗಳಿಂದ) ಉಂಟೆಂದು ಹೇಳಿದ್ದು ಮಾತ್ರ. ವಸ್ತುತಃ ಇಲ್ಲ, ಎಂಬ ಪಕ್ಷದಲ್ಲಿ **ಕಲ್ಪಿತೋ ಯದಿ** ಎಂಬಲ್ಲಿದ್ದ **ಯದಿ** ಶಬ್ದವು ಕೂಡಲಾರದು. ಜಗತ್ತು ಮೊದಲಾದುದು. ಕಲ್ಪಿತವು ಮಿಥ್ಯೆಯು ವಾಸ್ತವಿಕವಲ್ಲವೆಂದು (1) **ಪ್ರಪಂಚೋ ಯದಿ ವಿದ್ಯೇತ** ಇತ್ಯಾದಿಗಳಿಗೆ ಅಭಿಪ್ರಾಯವಾಗಿದ್ದರೆ. ಈ ಪ್ರಪಂಚವು ಇದ್ದಹಾಗೆ ಕಾಣುತ್ತದೆ. ವಸ್ತುತಃ ಇಲ್ಲ. ಅದು **ನಿವರ್ತತೇ**=ಮುಂದೆ ನಾಶ ಹೊಂದುವುದು. (೭) ಅಜ್ಞಾನದಿಂದ ಉಂಟೆಂದು ತೋರುವ ಭೇದವು ವಿನಿವರ್ತತೇ=ನಾಶಹೊಂದುವುದು, ಎಂದೇ ಶಬ್ದವು ಈ ಎರಡು ಪೇಪಗಳಲ್ಲಿಯೂ ಇರಬೇಕಿತ್ತು **ನಿವರ್ತೇತ** ಎಂದು ಇರಬಾರದಿತ್ತು. (**ಯದಿ** * ಮೊದಲಾದ ಶಬ್ದಗಳೂ ವ್ಯರ್ಥಗಳು ) ಬೇರೆ ಯಾವ ಅರ್ಥವೂ ಕೂಡದಿರುವುದರಿಂದ ಈ ವಾಕ್ಯವು ಪಂಚಭೇದವು ಸತ್ಯವೆಂದೇ ಹೇಳುತ್ತದೆ. (೪) (ಮತ್ತು ಪಂಚಭೇದವು ಸುಳ್ಳು ಎಂದನ್ನುವವರನ್ನು ದೂಷಿಸಿರುವುದರಿಂದಲೂ ಈ ಎರಡು ವಾಕ್ಯಗಳೂ ಭೇದವು ಸತ್ಯವೆಂದೇ ಹೇಳುತ್ತವೆನ್ನುತ್ತಾರೆ—) ಅಸುರರು ಜಗತ್ತು ಸುಳ್ಳೆಂದೂ, ಜ್ಞಾನದಿಂದ ಬಾಧಿಸಲ್ಪಡುತ್ತದೆಂದೂ, ನಿಯಾಮಕವಿಲ್ಲದಿರುವುದೆಂದೂ ಅನ್ನುತ್ತಾರೆ. ಇಂತಹ ಜ್ಞಾನವನ್ನು ಹೊಂದಿದವರು ತಮ್ಮ ಸ್ವರೂಪವನ್ನು ಸಂಪೂರ್ಣ ಹಾಳುಮಾಡಿಕೊಂಡವರು, ಅಲ್ಪಬುದ್ಧಿಯುಳ್ಳವರು, ಎಂದು ಭಗವದ್ಗೀತೆಯಲ್ಲಿ ಅವರನ್ನು ನಿಂದಿಸಿರುವರು (೫) (1) ಶ್ರೀಪರಮಾತ್ಮನು, ಜೀವ ಮೊದಲಾದವರಿಂದ ಭಿನ್ನನು, ಎಂದು ಭೇದಜ್ಞಾನವೇ ವಿದ್ಯೆ ಎನಿಸುತ್ತದೆ. (೭)ಜೀವಾದಿಗಳಿಂದ ಭಿನ್ನನೂ, ಸರ್ವರಿಂದ ಸೇವಿಸಲ್ಪಡುವವನೂ, ಸರ್ವನಿಯಾಮಕನೂ ಆದ ಶ್ರೀಹರಿಯ ಮಹಿಮೆಯನ್ನು ಯಾವಾಗ ತಿಳಿಯುತ್ತಾನೋ ಆಗ ಮೋಕ್ಷವನ್ನು ಹೊಂದುತ್ತಾನೆ. ಇದುಮೊದಲಾದವುಗಳಲ್ಲಿ ಭೇದಜ್ಞಾನವನ್ನು ಪ್ರಶಂಸನೆ ಮಾಡಿರುತ್ತಾರೆ. ಅದುಕಾರಣ ದುಷ್ಟರನ್ನು ನಿರಾಕರಿಸಿದುದರಿಂದಲೂ ಜ್ಞಾನಸ್ವರೂಪನಾದುದರಿಂದಲೂ **ಅಸ್ಮಿ** ಎಂಬುದು ಶ್ರೀಹರಿಯ ನಾಮಧೇಯವೇ. || ೧೪, ೧೫, ೧೬, ೧೭, ೧೮, ೧೯, ೨೦, ೨೧ ||

ಇಪ್ಪತ್ತೊಂದನೇ ಖಂಡವು ಮುಗಿಯಿತು.

---

***ಯದಿಶಬ್ದಸ್ತ್ವವಸ್ತುತ್ವೇ ಚಾಸ್ವಾತಂತ್ರ್ಯೇ ಚ ಸಂಶಯೇ । ಅವಸ್ತು ಶಬ್ದಶ್ಚಾಶಕ್ತೇ ಹ್ಯಲ್ಪಶಕ್ತೌ ಚ ಕೀರ್ತ್ಯತೇ ॥** ಎಂಬ ಪ್ರಮಾಣದಿಂದ ಯದಿ ಶಬ್ದಕ್ಕೆ ಶಕ್ತಿಯಿಲ್ಲದಿರುವುದು, ಅಲ್ಪಶಕ್ತಿಯಿರುವುದು, ಸ್ವಾತಂತ್ರ್ಯವಿಲ್ಲದಿರುವುದು, ಎಂದರ್ಥವು. ವಿದ್ಯೇತ=ಎಂಬುದನ್ನು ವಿದ್ಯತೇ, ಎಂದೂ ನಿವರ್ತೇತ=ಎಂಬುದನ್ನು ನಿವರ್ತತೇ, ಎಂದೂ ವ್ಯಾಖ್ಯಾನಮಾಡಿಕೊಳ್ಳಬೇಕು. ಏವಂಚ ಪ್ರಪಂಚಃ=ಜಗತ್ತು ಶಕ್ತಿಯಿಲ್ಲದಿರುವುದು, ಅಲ್ಪಶಕ್ತಿಯುಳ್ಳದ್ದು, ಅಸ್ವಾತಂತ್ರವು ಹೀಗೆ ಇದೆ. ಅದರೂ ನಾಶಹೊಂದುವುದು, ಸಂದೇಹವಿಲ್ಲ (೨) ಭೇದವನ್ನು ಇಲ್ಲಿ ಇರಲಿ ಎಂದು ಶ್ರೀಹರಿಯು ಕಲ್ಪಿಸಿದ್ದು ಎಂದಾದರೆ ಅವನಿಂದಲೇ ನಾಶಹೊಂದುತ್ತದೆ, ಎಂದರ್ಥವು. ಅದುಕಾರಣ ನಮ್ಮ ಪಕ್ಷದಲ್ಲಿ ಯದಿಶಬ್ದವು ವ್ಯರ್ಥವಾಗುವುದಿಲ್ಲ ಧಾತುವಿನ ಬದಲಾವಣೆಯು ಪರರ ಪಕ್ಷದಲ್ಲಿಯೂ ಇದೆ.

## ೨೨ನೇ ಖಂಡವು

ಪೀ—ಹಿಂದೆ ಸಾಮನೆನಿಸಿದ ಶ್ರೀಹರಿಯ ಉಪಾಸನೆಯನ್ನು ಹೇಳಿರುವರು, ಈ ಸಾಮದ ಗಾನ ಪ್ರಕಾರವನ್ನು ಹೇಳುತ್ತಾರೆ—

**ಉ. ॥ ವಿನರ್ದಿ ಸಾಮ್ನೋ ವೃಣೇ ಪಶವ್ಯಮಿತ್ಯಗ್ನೇರುದ್ಗೀಥೋಽನಿರುಕ್ತಃ ಪ್ರಜಾಪತೇರ್ನಿರುಕ್ತಃ ಸೋಮಸ್ಯ ಮೃದು ಶ್ಲಕ್ಷ್ಣಂ ವಾಯೋಃ ಶ್ಲಕ್ಷ್ಣಂ ಬಲವದಿಂದ್ರಸ್ಯ ಕ್ರೌಂಚಂ ಬೃಹಸ್ಪತೇರಪಧ್ವಾಂತಂ ವರುಣಸ್ಯ ತಾನ್ಸರ್ವಾನೇವೋಪಸೇವೇತ ವಾರುಣಂ ತ್ವೇವ ವರ್ಜಯೇತ್ ॥ ೧ ॥**

ಅ ॥ ಸಾಮನೆನಿಸಿಕೊಂಡ ಶ್ರೀಹರಿಯ ಗಾನಪ್ರಕಾರವು ವಿಶಿಷ್ಟವಾದ ಧ್ವನಿಯುಳ್ಳದ್ದು (ಒಂದೂ ಕಾಲು ವರ್ಷದ ಎತ್ತಿನ ಸ್ವರದಂತೆಯೇ, ಅಥವಾ ಮೇಘದ ಧ್ವನಿಯಂತೆ ಸ್ಥಿರವಾದ ಸ್ವರವಿರುವ ಗಾನವು) ಅಂತಹ ಸ್ವರದಿಂದೊಡಗೂಡಿರುವ ಸಾಮಗಾನವನ್ನು ಮಾಡುವೆನು. (ಅಂತಹ ಸ್ವರವೇ ಶ್ರೇಷ್ಠವಾದ ಕಾರಣ ಅಂತಹ ಸ್ವರದಿಂದಲೇ ಉದ್ಗಾತನು ಸಾಮಗಾನ ಮಾಡಬೇಕು) ಅಂತಹ ಸ್ವರದಿಂದ ಗಾನ ಮಾಡಲು ಸಾಧ್ಯವಾಗದಿದ್ದರೆ ಬೇರೆ ಸ್ವರದಿಂದ ಗಾನ ಮಾಡಬೇಕೆಂಬ ಅಭಿಪ್ರಾಯದಿಂದ ಸ್ವರದ ಪ್ರಭೇದ ಗಳನ್ನು ಹೇಳುತ್ತಾರೆ—) ಅಗ್ನಿಯ ಗಾನಪ್ರಕಾರವು ದನದ ಸ್ವರದಂತೆ ಚತುರ್ಮುಖನ ಗಾನಪ್ರಕಾರವು ಅಸದೃಶವು. ಇಪ್ಪತ್ತು ವರ್ಷಗಳಿಂದ ಕಡಿಮೆ ವಯಸ್ಸಾದ ಎತ್ತಿನ ಸ್ವರದಂತೆ ಗಂಭೀರವು. ಚಂದ್ರನ ಗಾನಪ್ರಕಾರವು ಘಂಟೆಯ ಸ್ವರದಂತಿರುವುದು ವಾಯುದೇವರ ಗಾನವುಮೃದುವಾದ ಮೇಘದ ಧ್ವನಿ ಯಂತೆ ಮನೋಹರವು. ಇಪ್ಪತ್ತು ವರ್ಷದ ಎತ್ತಿನ ಸ್ವರದಂತೆಯೇ ಗಂಭೀರವು ಇಂದ್ರದೇವರ ಧ್ವನಿಯು ದೊಡ್ಡ ಮೇಘದ ಗರ್ಜನೆಯಂತೆ. ಬೃಹಸ್ಪತ್ಯಾಚಾರ್ಯರ ಗಾಯನವು ಕ್ರೌಂಚ (ಕೊಕ್ಕರೆ) ಪಕ್ಷಿಯ ಸ್ವರದಂತೆಯೇ. ವರುಣನ ಸ್ವರವು ಒಡೆದುಹೋದ ಕಂಚಿಯಪಾತ್ರದ ಧ್ವನಿಗೆ ಸಮಾನವು (ಅಂದರೆ ಅಪ ಸ್ವರವು.) ಈ ಎಲ್ಲಾ ಸ್ವರಗಳನ್ನು ಅಂಗೀಕರಿಸಬೇಕು. ಅಂದರೆ ಈ ಎಲ್ಲಾ ಸ್ವರಗಳಿಂದಲೂ ಗಾಯನ ಮಾಡಬೇಕು. ವರುಣನದ್ದಾದ ಅಪಸ್ವರವನ್ನು ಬಿಡಬೇಕು. (ಅಂದರೆ ಹಾಗೆ ಗಾನ ಮಾಡಬಾರದು.) ॥೧॥

**ಭಾ. ॥ (೧) ಸರ್ವದಾ ಸಮತ್ವಾತ್ಸಾಮ ಭಗವಾನ್ । ತಸ್ಯೋದ್ಗಾನಪ್ರಕಾರೋ ವಿನರ್ದಿ ವೃಷಭಸ್ವರ(ನ)ವನ್ಮೇಘನರ್ದನವದ್ವಾ । ತದೇವ ವೃಣೇ । ಸರ್ವೋತ್ತಮತ್ವಾತ್॥ (೨) ವಿಷ್ಣೋಃ ಸ್ವರೋ ವೃಷಭವನ್ಮೇಘನಾದವದೇವ ವಾ । ಸ್ತ್ರೀಪಶುಸ್ವರವದ್ವಹ್ನೇರ್ಗಂಭೀರೋಽನುಪಮೋ ವಿಭೋಃ॥ ಬ್ರಹ್ಮಣಸ್ತ್ವಥ ಸೋಮಸ್ಯ ಸಾಕ್ಷಾದ್ಘಂಟಾನಿನಾದವತ್ । ಮೃದುಮೇಘಸ್ವರೋ ವಾಯೋರಿಂದ್ರಸ್ಯ ಸ್ತನಯಿತ್ನುವತ್ । ಬೃಹಸ್ಪತೇಃ ಕ್ರೌಂಚವಚ್ಚ ವರುಣಸ್ಯ ತು ವಿಸ್ವರಃ ॥ (೩) ಏಕಸ್ಯ ಪಾದವರ್ಷಸ್ಯ ಸ್ವರೋ ವಿಷ್ಣೋರುದಾಹೃತಃ । ವಾಯೋರ್ವಿಂಶತಿವರ್ಷಸ್ಯ ಬ್ರಹ್ಮಣಸ್ತು ತದಂತರಾ ॥ ಇತಿ ಚ ॥ ಗಾಯೇದೇತೈಃ ಸ್ವರೈಸ್ತಸ್ಮಾದ್ಯಥಾಶಕ್ತಿ ನ ವಿಸ್ವರಂ ॥ ೧ ॥ ॥ ೧ ॥**

ಅ ॥ (೧) ಶ್ರೀಹರಿಯು ಸರ್ವದಾ ಒಂದೇ ಪ್ರಕಾರವಿರುವವನಾದುದರಿಂದ ಸಾಮನೆನಿಸುತ್ತಾನೆ. ಆ ಶ್ರೀಹರಿಯ ಗಾನಪ್ರಕಾರವು ಉತ್ತಮ ಧ್ವನಿಯುಳ್ಳದ್ದು. ಹದಿನೈದು ತಿಂಗಳಿನ ಗುಡ್ಡದ ಧ್ವನಿಯಂತೆ, ಅಥವಾ ಮೇಘದ ಧ್ವನಿಯಂತೆ. ಎಲ್ಲಾ ಸ್ವರಗಳಿಗಿಂತಲೂ ಶ್ರೇಷ್ಠವಾಗಿರುವುದರಿಂದ ಶ್ರೀಹರಿಯ ಸ್ವರವನ್ನೇ

ತೆಗೆದುಕೊಳ್ಳುವೆನು. (೨) ಶ್ರೀಹರಿಯ ಸ್ವರವು ಎತ್ತಿನ ಸ್ವರದಂತೆ, ಅಥವಾ ಮೇಘದಧ್ವನಿಯಂತೆ. ಅಗ್ನಿಯ ಸ್ವರವು ಹೆಣ್ಣುಕರುವಿನ ಸ್ವರದಂತೆ ಗಂಭೀರವು. ವಿಭುವಾದ ಚತುರ್ಮುಖನ ಸ್ವರವು ಗಂಭೀರವು. ಚಂದ್ರನ ಸ್ವರವು ಸಾಕ್ಷಾತ್ ಘಂಟೆಯ ಧ್ವನಿಯಂತೆ ಇರತಕ್ಕದು ಮೃದುವಾದ ಮೇಘದ ಧ್ವನಿಯಂತೆ ವಾಯುವಿನ ಸ್ವರವು. ದೊಡ್ಡಸಿಡಿಲಿನ ಧ್ವನಿಯಂತೆ ಇಂದ್ರನ ಧ್ವನಿಯು ಕ್ರೌಂಚ (ಕೊಕ್ಕರೆ ಜಾತಿಯ) ಹಕ್ಕಿಯ ಸ್ವರದಂತೆ ಬೃಹಸ್ಪತ್ಯಾಚಾರ್ಯರ ಉತ್ಕೃಷ್ಟಗಾನವು. ವರುಣನ ಗಾನವು ಅಪಸ್ವರವು. (೩) (ವಿಷ್ಣು ವಾಯು ಬ್ರಹ್ಮ ಈ ಮೂವರ ಸ್ವರದಲ್ಲಿ ವ್ಯತ್ಯಾಸ ಹೇಳುತ್ತಾರೆ—) ಒಂದುವರ್ಷದ ಮೇಲೆ ಮೂರು ತಿಂಗಳಾದ ಎಳೆವಯಸ್ಸಿನ ಗುಡ್ಡದ ಧ್ವನಿಯಂತೆ ವಿಷ್ಣುವಿನ ಸ್ವರವು. ವಾಯುದೇವರ ಸ್ವರವು ಇಪ್ಪತ್ತು ವಯಸ್ಸಿನ ಎತ್ತಿನ ಸ್ವರದಂತೆ. ಚತುರ್ಮುಖನ ಗಾನವು ಇಪ್ಪತ್ತು ವರ್ಷದೊಳಗಿನ ಎತ್ತಿನ ಸ್ವರದಂತೆ. ಅದುಕಾರಣ ತಮ್ಮ ಶಕ್ತ್ಯನುಸಾರ ಈ ಸ್ವರಗಳಿಂದ ಗಾಯನವಮಾಡಬೇಕು. ಅಪಸ್ವರದಿಂದ ಗಾಯನ ಮಾಡಬಾರದು. ॥ ೧ ॥ ॥ ೧ ॥

ಪೀ—ಗಾಯನವಮಾಡುವಾಗ ಮಾಡುವ ಪ್ರಕಾರವನ್ನು ತೋರಿಸುತ್ತಾರೆ—

**ಉ. ॥ ಅಮೃತತ್ವಂ ದೇವೇಭ್ಯ ಆಗಾಯಾನೀತ್ಯಾಗಾಯೇತ್ ಸ್ವಧಾಂ ಪಿತೃಭ್ಯ ಆಶಾಂ ಮನುಷ್ಯೇಭ್ಯಸ್ತೃಣೋದಕಂ ಪಶುಭ್ಯಃ ಸ್ವರ್ಗಂ ಲೋಕಂ ಯಜಮಾನಾಯಾನ್ನಮಾತ್ಮನ ಆಗಾಯಾನೀತ್ಯೇತಾನಿ ಮನಸಾ ಧ್ಯಾಯನ್ನಪ್ರಮತ್ತಃ ಸ್ತುವೀತ ॥ ೨ ॥**

ಅ ॥ ಉದ್ಗಾತನು ಮುಖ್ಯವಾಯುವಾಗಿದ್ದರೆ ಆತನು ದೇವತೆಗಳಿಗೆ ಮೋಕ್ಷವನ್ನು ಗಾಯನದಿಂದ ಸಾಧಿಸುತ್ತೇನೆಂದು ಮನಸ್ಸಿನಿಂದ ಧ್ಯಾನಿಸುತ್ತಾ ಸಾಮಗಾಯನವಮಾಡಬೇಕು. ಬೇರೆಯವರು ಉದ್ಗಾತೃಗಳಾದರೆ ನಮ್ಮ ಹೃದಯದೊಳಗಣ ವಾಯುದೇವರು ದೇವತೆಗಳಿಗೆ ಮೋಕ್ಷವನ್ನು ಗಾಯನದಿಂದ ಸಾಧಿಸಿಕೊಡುತ್ತಾರೆಂದು ಮನಸ್ಸಿನಿಂದ ಧ್ಯಾನಿಸಿಕೊಂಡು ಸಾಮಗಾಯನ ಮಾಡಬೇಕು. (ಹೀಗೆಯೇ ಮುಂದೆಯೂ ಇಟ್ಟುಕೊಳ್ಳಬೇಕು.) ಅಥವಾ ನಾನು ದೇವತೆಗಳ ಮೋಕ್ಷಕ್ಕಾಗಿ ಗಾಯನ ಮಾಡುತ್ತೇನೆಂದು ಸಂಕಲ್ಪಮಾಡಿ ಉದ್ಗಾತನು ಗಾಯನವಮಾಡಬೇಕು ಪಿತೃಗಳಿಗೆ ಶ್ರಾದ್ಧಾದಿ ಭಾಗವು ಸಿಗುವುದಕ್ಕಾಗಿಯೂ, ಮನುಷ್ಯರಿಗೆ ಇಷ್ಟವು ಸಿಗುವುದಕ್ಕಾಗಿಯೂ, ಪಶುಗಳಿಗೆ ಹುಲ್ಲು ನೀರು ಸಿಗುವುದಕ್ಕಾಗಿಯೂ, ಯಜಮಾನನಿಗೆ ಸ್ವರ್ಗಸಿಗುವುದಕ್ಕಾಗಿಯೂ, ತನಗೆ ಅಂದರೆ ಪ್ರಾಣನೊಳಗಣ ವಿಷ್ಣುವಿಗೆ ಅನ್ನಕ್ಕಾಗಿಯೂ ಗಾಯನಮಾಡುತ್ತೇನೆಂದು ಮನಸ್ಸಿನಿಂದ ಸಂಕಲ್ಪಮಾಡಿ ಗಾಯನವಮಾಡಬೇಕು. ಹಿಂದೆ ಹೇಳಿದಂತೆ ಮನಸ್ಸಿನಿಂದ ಧ್ಯಾನಮಾಡುತ್ತಾ ಪ್ರಮಾದವಿಲ್ಲದೆ ಜಾಗರೂಕನಾಗಿ ಸಾಮದಿಂದ ಕೂಡಿದ ಋಕ್ಕುಗಳಿಂದ ಸ್ತೋತ್ರ ಮಾಡಬೇಕು. ॥ ೨ ॥

ಭಾ. ॥ (೧) ಅಧಿಕಾರೀ ಸದೌದ್ಗಾತ್ರೇ ಮುಖ್ಯತಃ ಪ್ರಾಣ ಏವ ಯತ್ । ಅತೋ ಮೋಕ್ಷಾದಿದಾನೇ ಸ ದೇವಾದೀನಾಂ ಕ್ಷಮೋ ಭವೇತ್ ॥ ಅನ್ಯೇಷಾಂ ಸ ದದಾತೀಹ ಮದ್ಧೃದಿಸ್ಥ ಇತಿ ಸ್ಮೃತಿಃ । ಕಾರ್ಯಾ ಹಿ ನಾನ್ಯಥಾ ಕುರ್ಯಾದವಮಂತಾಽನ್ಯಥಾ ಭವೇತ್ ॥ (೨) ದೇವಾನಾಂ ಮೋಕ್ಷದಾನಾದೌ ನ ಹಿ ಮಾನುಷ ಈಶ್ವರಃ । ಅತಃ ಪ್ರಾಣೋ ಹೃದಿಸ್ಥೋ ಮೇ ದದಾತೀತಿ ಸ್ಮೃತಿರ್ಭವೇತ್ ॥ (೩) ಸಂಕಲ್ಪೋಕ್ತ್ಯಾದಿಕರ್ತಾ ಚ ಪ್ರಾಣ ಏವ ಯತಃ ಸದಾ । ಆಗಾಯಾನೀತಿ ಯುಜ್ಯೇತ ತಸ್ಮಾತ್ತಸ್ಮಿನ್ಹಿ ಮುಖ್ಯತಃ ॥ (೪) ಆತ್ಮೇತಿ

**ಭಗವಾನ್ನಿಷ್ಠಃ ಪ್ರಾಣಸ್ಥಃ ಪುರುಷೋತ್ತಮಃ । ತಸ್ಮಾ ಅನ್ನಂ ಹ್ಯರ್ಥತಸ್ತು ಪ್ರಾಣಸ್ಯಾನ್ನ-ಭುಜಿರ್ಭವೇತ್ ॥ (೫) ಪ್ರಾಣಸ್ಯಾಪ್ಯಮೃತತ್ವಂ ಹಿ ಮುಖ್ಯಮೇವ ಫಲಂ ಯತಃ । ದೇ-ವಾಂತರ್ಭಾವತೋ ವಿಷ್ಣೋರ್ನಾಮೃತತ್ವಂ ಕ್ವ ಚಾದಿಮತ್ ॥ ೨ ॥ ॥ ೧ ॥**

ಅ ॥ (೧) ವಾಯುದೇವರೇ ಮುಖ್ಯವಾಗಿ ಉದ್ಗಾತನ ಗಾನ ಮೊದಲಾದ ಕರ್ಮದಲ್ಲಿ ಅಧಿಕಾರಿಗಳು. ಅದುಕಾರಣ ದೇವತೆಗಳೇ ಮೊದಲಾದವರಿಗೆ ಮೋಕ್ಷ ಮೊದಲಾದುದನ್ನು ಕೊಡಲಿಕ್ಕೆ ವಾಯುದೇವರೇ ಶಕ್ತರು ವಾಯುದೇವರಲ್ಲದ ಉದ್ಗಾತೃಗಳಿಗೆ ನಮ್ಮ ಹೃದಯದೊಳಗಣ ವಾಯುದೇವರು ಮೋಕ್ಷವನ್ನು ಕೊಡುತ್ತಾರೆಂದು ಸ್ಮರಣೆಯು ಬೇಕು. ಇದಕ್ಕೆ ವ್ಯತ್ಯಾಸವಾಗಿ ಆಲೋಚಿಸಬಾರದು. ಮಾಡಿದರೆ ಅವಮಾನಮಾಡಿದವನಾಗುವನು. (೨) ದೇವತೆಗಳಿಗೆ ಮೋಕ್ಷದಾನಾದಿಗಳನ್ನು ಮಾಡಲಿಕ್ಕೆ ಮನುಷ್ಯನಿಗೆ ಶಕ್ತಿಯಿಲ್ಲ. ಅದುಕಾರಣ ನನ್ನ ಹೃದಯದೊಳಗಣ ಮುಖ್ಯಪ್ರಾಣನು ದೇವತೆಗಳಿಗೆ ಮೋಕ್ಷಾದಿಗಳನ್ನು ಕೊಡುತ್ತಾನೆಂದು ಧ್ಯಾನಿಸಬೇಕು. (೩) ಸದಾ ಮನಸ್ಸಿನಿಂದ ಧ್ಯಾನ, ವಚನ, ಮೊದಲಾದವುಗಳನ್ನು ಮಾಡುವವನು ಮುಖ್ಯಪ್ರಾಣನೇ. ಮುಖ್ಯವಾಗಿ ಸಂಕಲ್ಪಾದಿಗಳನ್ನು ವಾಯುವೇ ಮಾಡುವವನಾದುದರಿಂದ **ಆಗಾಯಾನಿ** ಎಂಬುದು ಕೂಡುತ್ತದೆ. (೪) ಪ್ರಾಣನೊಳಗಣ ಶ್ರೀಹರಿಯು **ಆತ್ಮಾ** ಎನಿಸುತ್ತಾನೆ, ಅಂತಹ ಪ್ರಾಣಾಂತರ್ಗತ ವಿಷ್ಣುವಿಗೆ ಅನ್ನಕ್ಕಾಗಿ ಗಾಯನ ಮಾಡಬೇಕು. (ತನಗಾಗಿಯೇ ಅನ್ನದ ಉದ್ದಿಶ್ಯ ಸಾಮಗಾಯನ ಮಾಡುತ್ತೇನೆಂದು ಅರ್ಥವು ಏಕೆ ಆಗಲಾರದೆಂದರೆ—) ಪ್ರಾಣನೊಳಗಣ ಶ್ರೀಹರಿಗೆ ಭೋಜನವು ಆದಾಗ ಅರ್ಥಾತ್ ಪ್ರಾಣನಿಗೆ ಭೋಜನವು ಆಗಿಯೇ ಆಗುವುದು. (ಅದುಕಾರಣ ಇದು ಅರ್ಥವಲ್ಲ.) (೫) ಮುಖ್ಯಪ್ರಾಣನು ದೇವತೆಗಳಲ್ಲಿ ಅಂತರ್ಗತನಾಗಿರುವುದರಿಂದ ದೇವತೆಗಳಿಗೆ ಮೋಕ್ಷಕ್ಕಾಗಿ ಗಾಯನಮಾಡುವಾಗ ಮುಖ್ಯಪ್ರಾಣನಿಗೇನೇ ಮುಖ್ಯವಾಗಿ ಮೋಕ್ಷಫಲವು. (ಹಾಗಾದರೆ ಶ್ರೀವಿಷ್ಣುವೂ ಕೂಡ ದೇವತೆಗಳಲ್ಲಿ ಅಂತರ್ಗತನಾಗಿರುವುದರಿಂದ ವಿಷ್ಣುವಿನ ಮೋಕ್ಷಕ್ಕಾಗಿಯೂ ವಾಯುದೇವರು ಗಾಯನ ಮಾಡುತ್ತಾರೋ ಏನು? ಎಂದರೆ, ಇಲ್ಲವೆನ್ನುತ್ತಾರೆ—) ಯಾವಾಗಲೂ ಎಲ್ಲಿಯೂ ವಿಷ್ಣುವಿಗೆ ಇಂತಹ ಕಾಲದಲ್ಲಿ ಮೋಕ್ಷವು ಆದುದು. ಇಂತಹ ಕಾಲದಲ್ಲಿ ನಾಶವಾಗುವುದು ಎಂದು ವಿಷ್ಣುವಿನ ಮೋಕ್ಷಕ್ಕೆ ಆದ್ಯಂತಗಳು (ಬುಡಕೊನೆಗಳು) ಇಲ್ಲವೇ ಇಲ್ಲ. ॥ ೨ ॥ ॥ ೧ ॥

ಪೀ—ಸ್ವರಾಕ್ಷರ ಊಷ್ಮಾಕ್ಷರ ಸ್ಪರ್ಶಾಕ್ಷರಗಳ ದೇವತೆಗಳನ್ನು ಹೇಳುತ್ತಾರೆ—

**ಉ. ॥ ಸರ್ವೇ ಸ್ವರಾ ಇಂದ್ರಸ್ಯಾತ್ಮಾನಃ ಸರ್ವ ಊಷ್ಮಾಣಃ ಪ್ರಜಾಪ-ತೇರಾತ್ಮಾನಃ ಸರ್ವೇ ಸ್ಪರ್ಶಾ ಮೃತ್ಯೋರಾತ್ಮಾನಸ್ತಂ ಯದಿ ಸ್ವರೇಷೂಪಾ-ಲಭೇತೇಂದ್ರಂ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿವಕ್ಷ್ಯತೀತ್ಯೇನಂ ಬ್ರೂಯಾತ್ ॥ ೩ ॥**

ಅ ॥ ಅಕಾರ ಮೊದಲುಗೊಂಡು ೧೬ ಸ್ವರಾಕ್ಷರಗಳು ಮುಖ್ಯಪ್ರಾಣನಿಗೆ ಸ್ಥಾನಗಳಾಗಿರುತ್ತವೆ. ಅಂದರೆ, ಆ ಅಕ್ಷರಗಳಲ್ಲಿ ಮುಖ್ಯಪ್ರಾಣನು ಇರುವನು. ಊಷ್ಮ (ಶ. ಷ. ಸ. ಹ.) ವರ್ಣಗಳಿಗೆ ವಿಷ್ಣುವು ಸ್ವಾಮಿಯು. ಸ್ಪರ (ಕ ಆರಂಭಿಸಿ ಮ ಪರ್ಯಂತ ೨೫) ಅಕ್ಷರಗಳು ರುದ್ರನಿಗೆ ಪ್ರತಿಮೆ (ಸ್ಥಾನ)ಗಳು. ಉದ್ಗಾತನು ತಪ್ಪಿಲ್ಲದೆ ಸ್ವರಗಳನ್ನು ಸರಿಯಾಗಿ ಉಚ್ಚರಿಸಿದರೂ ಆತನನ್ನು ಅಸುರಸ್ವಭಾವದವನು ಯಾವನಾದರೂ ಸ್ವರವಿಷಯದಲ್ಲಿ ನಿಂದಿಸಿದರೆ ಆ ಅಸುರನೊಡನೆ ನಾನು ಮುಖ್ಯಪ್ರಾಣನನ್ನು ಮರೆಹೊಕ್ಕವನು, (ಆತನ ಅನುಗ್ರಹದಿಂದ ಚೆನ್ನಾಗಿ ಸ್ವರೋಚ್ಚಾರಣೆ ಮಾಡಿರುತ್ತೇನೆ.) ಅದುಕಾರಣ ಆ ಪ್ರಾಣನು ನಿನಗೆ ಪ್ರತ್ಯುತ್ತರಕೊಟ್ಟು ಶಿಕ್ಷಿಸುವನು, ಎಂದು ಹೇಳಬೇಕು. ॥ ೩ ॥

**ಉ. ॥ ಅಥ ಯದ್ಯೇನಮೂಷ್ಮಸೂಪಾಲಭೇತ ಪ್ರಜಾಪತಿಂ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿಪೇಕ್ಷ್ಯತೀತ್ಯೇನಂ ಬ್ರೂಯಾದಥ ಯದ್ಯೇನಃ ಸ್ಪರ್ಶೇಷೂಪಾಲಭೇತ ಮೃತ್ಯುಂ ಶರಣಂ ಪ್ರಪನ್ನೋಽಭೂವಂ ಸ ತ್ವಾ ಪ್ರತಿಧಕ್ಷ್ಯತೀತ್ಯೇನಂ ಬ್ರೂಯಾತ್ ॥ ೪ ॥**

ಅ ॥ (೧) ಊಷ್ಮ (ಶ. ಷ. ಸ. ಹ.) ವರ್ಣಗಳನ್ನುಚ್ಚರಿಸುವ ಉದ್ಗಾತನು, ಅಕ್ಷರಗಳನ್ನು ನೆಟ್ಟಗೆ ಹೇಳಿದರೂ ಆತನನ್ನು ನಿಂದಿಸಿದರೆ—"ನಾನು ವಿಷ್ಣುವನ್ನು ಮರೆಹೊಂದಿರುವೆನು, ಆತನು ನಿನ್ನನ್ನು ನಾಶಗೊಳಿಸುವನು ಎಂದು ನಿಂದಕನಿಗೆ ಹೇಳಬೇಕು. (೨) ಸ್ಪರ್ಶಾಕ್ಷರ ವಿಷಯದಲ್ಲಿ ನಿಂದಿಸಿದರೆ...........ಸ್ಪರ್ಶ (ಕ ಆರಂಭಿಸಿ ಮ ಪರ್ಯಂತ) ಅಕ್ಷರಗಳಿಗೆ ಅಧಿಪತಿಯಾದ ರುದ್ರನು ನಿನ್ನನ್ನು ಸುಟ್ಟುಬಿಡುವನು, ಎಂದನ್ನಬೇಕು. ॥ ೪ ॥

ಪೀ—ಸ್ವರಾದಿಗಳನ್ನುಚ್ಚರಿಸುವ ರೀತಿಯನ್ನು ತೋರಿಸುತ್ತಾರೆ—

**ಉ ॥ ಸರ್ವೇ ಸ್ವರಾ ಘೋಷವಂತೋ ಬಲವಂತೋ ವಕ್ತವ್ಯಾ ಇಂದ್ರೇ ಬಲಂ ದದಾನೀತಿ ಸರ್ವ ಊಷ್ಮಾಣೋಽಗ್ರಸ್ತಾನಿರಸ್ತಾ ವಿವೃತಾ ವಕ್ತವ್ಯಾಃ ಪ್ರಜಾಪತೇರಾತ್ಮಾನಂ ಪರಿದದಾನೀತಿ ಸರ್ವೇ ಸ್ಪರ್ಶಾ ಲೇಶೇನಾನಭಿಹತಾ ವಕ್ತವ್ಯಾ ಮೃತ್ಯೋರಾತ್ಮಾನಂ ಪರಿಹರಾಣೀತಿ ॥ ಇತಿ ದ್ವಾವಿಂಶಃ ಖಂಡಃ ॥ ೪-೨೨ ॥ ॥ ೫ ॥**

ಅ ॥ (1) ಸ್ವರಾಧಿಪತಿಯಾದ ವಾಯುವಿಗೆ ಬಲವನ್ನು ಕೊಡುತ್ತೇನೆಂದು ಸಂಕಲ್ಪಮಾಡಿ ಆತನಿಗೆ ಬಲ ಕೊಡುವುದಕ್ಕಾಗಿ ಅಕಾರಾದಿ ಎಲ್ಲಾ ಸ್ವರಗಳನ್ನು ಧ್ವನಿವಿಶೇಷವುಳ್ಳವುಗಳನ್ನಾಗಿ ವಿವೃತ ಪ್ರಯತ್ನವುಳ್ಳವುಗಳನ್ನಾಗಿ ಹೇಳಬೇಕು ಅಂದರೆ, ಘಟ್ಟಿಯಾಗಿ ಅತಿಪ್ರಯತ್ನದಿಂದ ಸ್ಪಷ್ಟವಾಗಿ ಸ್ವರವನ್ನುಚ್ಚರಿಸಿ ಯಜಮಾನನಿಗೆ ವಿಷ್ಣುವಿನಿಂದ ಮೋಕ್ಷವನ್ನು ಕೊಡಿಸುವುದೇ ಬಲದಾನವು. (2) ಊಷ್ಮವರ್ಣಗಳಿಗೆ ಅಧಿಪತಿಯಾದ ವಿಷ್ಣುವಿಗೆ ತನ್ನನ್ನೇ ಸಮರ್ಪಿಸಿಕೊಳ್ಳುತ್ತೇನೆಂದು ಸಂಕಲ್ಪಿಸಿ ಎಲ್ಲಾ ಊಷ್ಮವರ್ಣಗಳನ್ನು ನುಂಗಿಕೊಳ್ಳದೆ ಶೀಘ್ರವಾಗಿ ಉಚ್ಚರಿಸದೆ ವಿವೃತಪ್ರಯತ್ನವುಳ್ಳವುಗಳನ್ನಾಗಿ ಮಾಡಬೇಕು. ಸ್ಪರ್ಶವರ್ಣಗಳಿಗೆ ಅಧಿಪತಿಯಾದ ರುದ್ರನಿಂದ ಮುಕ್ತಿಯೋಗ್ಯರನ್ನು ಮರಣವಿಲ್ಲದವರನ್ನಾಗಿ ಮಾಡುತ್ತೇನೆಂದು ಸಂಕಲ್ಪಿಸಿ ಎಲ್ಲಾ ಸ್ಪರ್ಶಾಕ್ಷರಗಳನ್ನು ಒಂದು ಅಕ್ಷರದ ಉಚ್ಚಾರಣದಿಂದ ಮತ್ತೊಂದು ಅಕ್ಷರದ ಉಚ್ಚಾರಣೆಗೆ ಬಾಧಕ ಬಾರದಂತೆ ವಿರಳವಾಗಿ ಉಚ್ಚರಿಸಬೇಕು (ಉದ್ಗಾತನು ಮುಖ್ಯಪ್ರಾಣನಾದರೆ ಮೋಕ್ಷಕ್ಕೆ ಯೋಗ್ಯರನ್ನಾಗಿ ಮಾಡುತ್ತಾನೆ. (ಬೇರೆಯವರಾದರೆ) ತನ್ನ ಹೃದಯದಲ್ಲಿರತಕ್ಕ ವಾಯುವು ಮೋಕ್ಷವನ್ನು ಕೊಡುತ್ತಾನೆಂದು ಧ್ಯಾನಿಸುತ್ತಾ ಸ್ಪರ್ಶಾಕ್ಷರಗಳನ್ನುಚ್ಚರಿಸಬೇಕು. ॥೪-೨೨॥ ॥ ೫ ॥

ಪೀ—೫ನೇ ಮಂತ್ರದಲ್ಲಿದ್ದ **ಇಂದ್ರೇ ಬಲಂ ದದಾನಿ** ಇದುಮೊದಲಾದ ವಾಕ್ಯದ ಅರ್ಥ ಹೇಳುತ್ತಾರೆ—

**ಭಾ. ॥ (೧) ಇಂದ್ರೇ ಬಲಂ ದದಾನೀತಿ ಸ್ವರಾನ್ಘೋಷಬಲಾತ್ಮಕಾನ್ । ಬ್ರೂ(ಹೂ)-ಯಾದಗ್ರಸ್ತಾನನಿರಸ್ತಾನೂಷ್ಮಣಃ ಸ್ಪರ್ಶಾನಪಿ ॥ ಸಮಸ್ತಾನ್ಬಲದಾನಾರ್ಥಮಿಂದ್ರೇ ಚೈವ**

**ಪ್ರಜಾಪತೇಃ । ವಿಷ್ಣೋಃ ಸ್ವಾತ್ಮಾನಮೇವಾಹಮರ್ಪಯೇ ಮೃತ್ಯುವರ್ಜಿತಾನ್ । ಮೋಕ್ಷಯೋಗ್ಯಾನ್ಕರಿಷ್ಯಾಮೀತ್ಯೇವಂ ಸ ಪ್ರಾಣ ಏವ ತು ॥ (೨) ಕುರ್ಯಾದನ್ಯಸ್ತು ಮತ್ಸ್ಥಸ್ತು ಪ್ರಾಣ ಏವೇದೃಶಃ ಕ್ಷಮಃ । ಕರೋತೀತಿ ಸ್ಮರೇನ್ನಿತ್ಯಂ ನಾನ್ಯಥಾ ತು ಕಥಂಚನ । ದೇವಾವಮಂತಾ ಹಿ ತಮೋ ಯಾತ್ಯಸಂಶಯತೋ ಯತಃ ॥ (೩) ಅತ ಇಂದ್ರಂ ಪ್ರಜಾಪಾಖ್ಯಂ ವಿಷ್ಣುಂ ಮೃತ್ಯುಂ ಚ ಸರ್ವದಾ । ಶರಣಂ ಗತೋಽಹಮಿತಿ ಚ ಧ್ಯಾಯೇತ್ಸರ್ವತ್ರ ಸರ್ವದಾ ॥ (೪) ಐಶ್ವರ್ಯಾದಿಂದ್ರನಾಮಾ ತು ವಾಯುಃ ಸ್ವರಪತಿಃ ಸದಾ । ಊಷ್ಮಾಧಿಪಸ್ತು ಭಗವಾನ್ವಿಷ್ಣುರೇವ ಪ್ರಜಾಪತಿಃ । ಮೃತ್ಯುನಾಮಾ ತು ಸಂಹಾರಾದ್ರುದ್ರಃ ಸ್ಪರ್ಶಾಧಿಪಃ ಸ್ಮೃತಃ ॥ ಮಾನುಷಾಣಾಂ ತು ಶರಣಮಿತರೇಷಾಂ ತು ವಾಯುತಃ । ವಾಯೋಸ್ತು ಬಲದಾನಾದ್ಯಂ ಮೋಕ್ಷದಾನಾದಿಕಂ ಹರೇಃ ॥ (೫) ಯಸ್ಮಾದ್ವಾಯುಪದೇ ಯೋಗ್ಯಾ ಬಹವಸ್ತ್ವಿಂದ್ರನಾಮಕಾಃ । ಅತ ಇಂದ್ರೇ ದದಾನೀತಿ ಸ್ಮೃತಿಃ ಪ್ರಾಣಸ್ಯ ಯುಜ್ಯತೇ ॥ ಇತಿ ಸಾಮಸಂಹಿತಾಯಾಂ ॥ ೧ ॥**

ಅ ॥ (೧) ಇಂದ್ರನಿಗೆ ಬಲವನ್ನು ಕೊಡುವುದಕ್ಕಾಗಿಯೇ ಇಂದ್ರನಿಗೆ ಬಲ ಕೊಡುತ್ತೇನೆಂದು ಸಂಕಲ್ಪಿಸಿ ಗಟ್ಟಿಯಾಗಿ ಸ್ವರಗಳನ್ನು ಉಚ್ಚರಿಸಬೇಕು ನಾನು ವಿಷ್ಣುವಿಗೆ ತನ್ನನ್ನೇ ಅರ್ಪಿಸುತ್ತೇನೆಂದು ಸಂಕಲ್ಪಿಸಿ ಅತಿಶೀಘ್ರವಾಗದಂತೆಯೂ ಅತಿವಿಲಂಬವಾಗದಂತೆಯೂ ಶ, ಷ, ಸ, ಹ, ಎಂಬ ಊಷ್ಮ ವರ್ಣಗಳನ್ನು ಉಚ್ಚರಿಸಬೇಕು. ಮೋಕ್ಷಕ್ಕೆ ಯೋಗ್ಯರಾದವರನ್ನು ಮರಣವಿಲ್ಲದವರನ್ನಾಗಿ ಮಾಡುತ್ತೇನೆಂದು ಸಂಕಲ್ಪಿಸಿ ಕಕಾರವನ್ನಾರಂಭಿಸಿ ಮ ಪರ್ಯಂತ ಅಕ್ಷರಗಳನ್ನು ವಿವರವಿವರವಾಗಿ ಉಚ್ಚರಿಸಬೇಕು. ಹೀಗೆ ಉಚ್ಚರಿಸುವವನು ಮುಖ್ಯಪ್ರಾಣನೇ ಆಗಿದ್ದರೆ ಮೋಕ್ಷಾದಿಗಳನ್ನು ಅವನೇ ಕೊಡುತ್ತಾನೆ. (೨) ಉದ್ಗಾತನು ಇನ್ನೊಬ್ಬನಾದರೆ ತನ್ನ ಹೃದಯದೊಳಗಣ ಮುಖ್ಯಪ್ರಾಣನೇ ಹೀಗೆ ಮೋಕ್ಷಾದಿಗಳನ್ನು ಕೊಡತಕ್ಕವನೆಂದು ನಿತ್ಯದಲ್ಲಿ ಧ್ಯಾನಿಸಬೇಕು ದೇವತೆಗಳಿಗೆ ಅವಮಾನ ಮಾಡಿದವನು ನಿಶ್ಚಯವಾಗಿಯೂ ತಮಸ್ಸಿಗೆ ಬೀಳುತ್ತಾನೆ ಅದುಕಾರಣ ಇದಕ್ಕೆ ವ್ಯತ್ಯಾಸವಾಗಿ ಆಲೋಚಿಸಬಾರದು. (೩) ಆದಪ್ರಯುಕ್ತ ಇಂದ್ರ, (ವಾಯು,) ಪ್ರಜೆಗಳನ್ನು ಕಾಪಾಡುವ ವಿಷ್ಣು, ರುದ್ರ, ಇವರನ್ನು ಸರ್ವದಾ ಮರೆಹೊಕ್ಕಿರುವೆನು, ಎಂದು ಸದಾ ಧ್ಯಾನಿಸುತ್ತಿರಬೇಕು (೪) ಮುಖ್ಯಪ್ರಾಣನು ಮಹದೈಶ್ವರ್ಯವಿದ್ದುದರಿಂದ ಇಂದ್ರನೆನಿಸಿಕೊಂಡು. ಸ್ವರಾಧಿಪತಿಯಾಗಿದ್ದಾನೆ. ಪ್ರಜೆಗಳನ್ನು ಕಾಪಾಡತಕ್ಕ ವಿಷ್ಣುವು ಊಷ್ಮವರ್ಣಗಳಿಗೆ ಅಧಿಪತಿಯು. ರುದ್ರನು ಸಂಹರಿಸುವವನಾದುದರಿಂದ ಮೃತ್ಯು ಎಂದು ಹೆಸರುಳ್ಳವನಾಗಿ ಸ್ಪರ್ಶಾಕ್ಷರಕ್ಕೆ ಅಧಿಪತಿಯು. ವಾಯುವಿನಿಂದ ಕೆಳಗಿನವರಿಗೆ ವಾಯ್ವಾದಿಗಳಿಂದ ರಕ್ಷಣೆಯಾಗುವುದು ವಾಯ್ವಂತರ್ಗತ ಶ್ರೀಹರಿಯು ವಾಯುವಿಗೆ ಬಲಾದಿಗಳನ್ನೂ ಮೋಕ್ಷಾದಿಗಳನ್ನೂ ಕೊಡುತ್ತಾನೆ (೫) ವಾಯುಪದವಿಗೆ ಯೋಗ್ಯರಾದವರು ಇಂದ್ರನೆನಿಸಿಕೊಂಡವರು ಬಹುಮಂದಿ. ಅದು ಕಾರಣ ಇಂದ್ರನಿಗೆ ಕೊಡುವುದೆಂಬಲ್ಲಿ ಇಂದ್ರಶಬ್ದದಿಂದ ಮುಖ್ಯಪ್ರಾಣನನ್ನು ಇಟ್ಟುಕೊಳ್ಳುವುದು ಯುಕ್ತವು, ಎಂದು ಸಾಮಸಂಹಿತೆಯಲ್ಲಿದೆ. ॥ ೧ ॥

**ಭಾ. ॥ (೧) ಸರ್ವೋಪದ್ರವಕರ್ತೄಣಾಮಸುರಾಣಾಂ ಕುಬುದ್ಧಿನಾಂ । ಉಪಾಲಂಭೇ ಕೃತೇ ಯುಕ್ತಂ ವಿಷ್ಣುಸ್ತ್ವಾಂ ಪ್ರತಿಪೇಕ್ಷ್ಯತಿ । ರುದ್ರಸ್ತ್ವಾಂ ಧಕ್ಷ್ಯತೀತ್ಯಾದಿ ನಾನ್ಯಥಾ ತು ಕಥಂಚನ ॥ ಇತಿ ಚ ॥ (೨) ಮೃತ್ಯೋಸ್ಸಕಾಶಾದಾತ್ಮಾನಂ ಪರಿಹರಾಣೀತಿ । ಬ್ರಹ್ಮಾ ಪ್ರಜಾಪತಿಶ್ಚೇತಿ ವಿಷ್ಣುರನ್ಯಂ ಪ್ರಬೋಧಯನ್ ॥ (೩) ತ(ಅ)ಥೇಂದ್ರನಾಮಾ ವಾಯುಶ್ಚ**

**ಪರೇಷಾಂ ಬೋಧಕೋ ಯದಾ ॥ ಇತಿ ಚ ॥ ಬೃಂಹಯತಿ ಪ್ರಜಾಃ ಪಾತಿ ಇದಂ ರಾತೀತಿ ವ್ಯುತ್ಪತ್ತಿಭಿಃ ॥ ಇತಿ ದ್ವಾವಿಂಶಃ ಖಂಡಃ ॥ ೪-೨೨ ॥　　　　॥ ೨ ॥**

ಅ ॥ (೧) ತಪ್ಪಿಲ್ಲದೆ ಸ್ವರಾದಿಗಳನ್ನು ಸರಿಯಾಗಿ ಹೇಳಿದರೂ ಕೆಡಿಸಬೇಕೆಂಬ ಉದ್ದೇಶದಿಂದ ನಿಂದಿಸುತ್ತಿರುವ ದುರ್ಬುದ್ಧಿಗಳಾದ ಅಸುರರು ನಿಂದಿಸಲು ವಿಷ್ಣುವು ನಿನಗೆ ಶಿಕ್ಷಿಸುವನು. ರುದ್ರನು ನಿನ್ನನ್ನು ಸುಡುವನು ಇತ್ಯಾದಿ ಪ್ರಕಾರ ಹೇಳಬೇಕು. (೨) ರುದ್ರನಿಂದ ಮೋಕ್ಷಯೋಗ್ಯರನ್ನು ಮರಣರಹಿತರನ್ನಾಗಿ ಮಾಡುತ್ತೇನೆ. ಇತರರಿಗೆ ಜ್ಞಾನವನ್ನು ಕೊಡುವ, ಊಷ್ಮಾಕ್ಷರಗಳಲ್ಲಿರತಕ್ಕ ವಿಷ್ಣುವು ಬ್ರಹ್ಮಾ ಪ್ರಜಾಪತಿ ಶಬ್ದಗಳಿಂದ ಹೇಳಲ್ಪಡುತ್ತಾನೆ ಇನ್ನೊಬ್ಬರಿಗೆ ತಿಳುವಳಿಕೆಯನ್ನುಂಟುಮಾಡುವ, ಸ್ವರದಲ್ಲಿರತಕ್ಕ ವಾಯುವು ಇಂದ್ರನೆನಿಸುವನು. ಶ್ರೀಹರಿಯು ಭಕ್ತರನ್ನು ಯೋಗ್ಯತಾನುಸಾರ ಗುಣಗಳಿಂದ ಪೂರ್ಣೀಕರಿಸುವುದರಿಂದ ಬ್ರಹ್ಮನೆಂದೂ, ಪ್ರಜೆಗಳನ್ನು ಕಾಪಾಡುವುದರಿಂದ ಪ್ರಜಾಪತಿ ಎಂದೂ ಎನಿಸುತ್ತಾನೆ. ವಾಯುವು ಇಷ್ಟವನ್ನು ಕೊಡುವವನಾದುದರಿಂದ ಇಂದ್ರನೆಂದೂ ಎನಿಸುತ್ತಾನೆ.
॥ ೧, ೨ ॥ ೪ – ೨೨ ॥　　　　॥ ೨ ॥

ಇಪ್ಪತ್ತೆರಡನೇ ಖಂಡವು ಮುಗಿಯಿತು.

## ೨೩ನೇ ಖಂಡವು

**ಪೀ**—ಸಾಮನೆನಿಸಿದ ಶ್ರೀಹರಿಯನ್ನುಪಾಸನೆ ಮಾಡುವವರಿಗೆ ಸ್ವರ್ಗಮೋಕ್ಷಗಳು ಫಲಗಳೆಂದು ಹೇಳಿವೆ. ಅದರಲ್ಲಿ ಯಾರಿಗೆ ಯಾವ ಫಲವೆಂದರೆ –

**ಉ. ॥ ತ್ರಯೋ ಧರ್ಮಸ್ಕಂಧಾ ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಸ್ತಪ ಏವ ದ್ವಿತೀಯೋ ಬ್ರಹ್ಮಚಾರ್ಯಾಚಾರ್ಯಕುಲವಾಸೀ ತೃತೀಯೋಽತ್ಯಂತಮಾತ್ಮಾನಮಾಚಾರ್ಯಕುಲೇಽವಸಾದಯನ್ಸರ್ವ ಏತೇ ಪುಣ್ಯಲೋಕಾ ಭವಂತಿ ಬ್ರಹ್ಮಸಂಸ್ಥೋಽಮೃತತ್ವಮೇತಿ　　　　॥ ೧ ॥**

ಅ ॥ ಧರ್ಮ ಎಂಬ ವೃಕ್ಷಕ್ಕೆ ಮೂರು ಶಾಖೆಗಳು. (ಮೂರು ಭಾಗಗಳು.) ಯಾಗ, ಅಧ್ಯಯನ, ದಾನ ಎಂಬುದು ಒಂದನೇ ಸ್ಕಂಧ (ಭಾಗ)ವು, ಕೃಚ್ಛ್ರ ಚಾಂದ್ರಾಯಣ, ಇಂದ್ರಿಯಜಯ ಮೊದಲಾದುದು ತಪಸ್ಸು ಎರಡನೇ ಸ್ಕಂಧವು. ನೈಷ್ಠಿಕ ಬ್ರಹ್ಮಚಾರಿಯಾಗಿ ಮರಣಪರ್ಯಂತ ಗುರುಕುಲದಲ್ಲಿಯೇ ಇರುವುದು ಮೂರನೇ ಸ್ಕಂಧವು. ಯಜ್ಞಾದಿಗಳನ್ನು ಮಾಡುವವರೆಲ್ಲರೂ ಪುಣ್ಯದಿಂದ ಸಿಗುವ ಸ್ವರ್ಗ ಮೊದಲಾದ ಲೋಕಗಳಲ್ಲಿರುತ್ತಾರೆ.

ವಿ ॥ (1) ಗೃಹಸ್ಥಾಶ್ರಮಿಯು ಯಜ್ಞ ಅಧ್ಯಯನ ದಾನಗಳಿಂದ ಚಂದ್ರಲೋಕವನ್ನೂ ಯತಿಗಳು ತಪಸ್ಸಿನಿಂದ ಸೂರ್ಯಲೋಕವನ್ನೂ, ವಾನಪ್ರಸ್ಥಾಶ್ರಮಿ, ಬ್ರಹ್ಮಚಾರಿ, ಇವರು ಋಷಿಗಳ ಲೋಕವನ್ನೂ, ಇವರೊಳಗೆ ಬ್ರಹ್ಮಜ್ಞಾನಿಯಾಗಿದ್ದವನು ಮೋಕ್ಷವನ್ನೂ ಹೊಂದುತ್ತಾನೆ.　　　　॥ ೧ ॥

**ಪೀ**—ಪ್ರಾಯಶಃ ಮೋಕ್ಷಾಪೇಕ್ಷಿಗಳು ಜಪಿಸತಕ್ಕ ಮಂತ್ರವು ಓಂಕಾರವೇ ಎಂಬುವಲ್ಲಿ ಹಿಂದೆ ನಡೆದ ಕಥೆಯನ್ನು ಹೇಳಿಕೊಂಡು ಹೇಳುತ್ತಾರೆ—

**ಉ. ॥ ಪ್ರಜಾಪತಿರ್ಲೋಕಾನಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರಯೀ ವಿದ್ಯಾ ಸಂಪ್ರಾಸ್ರವತ್ತಾಮಭ್ಯತಪತ್ತಸ್ಯಾ ಅಭಿತಪ್ತಾಯಾ ಏತಾನ್ಯಕ್ಷರಾಣಿ ಸಂಪ್ರಾಸ್ರವಂತ ಭೂರ್ಭುವಃಸ್ವರಿತಿ ತಾನ್ಯಭ್ಯತಪತ್ತೇಭ್ಯೋಽಭಿತಪ್ತೇಭ್ಯ ಓಂ-ಕಾರಃ ಸಂಪ್ರಾಸ್ರವತ್ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನ್ಯೇ-ವಮೋತೇನೋಂಕಾರೇಣ ಸರ್ವಾ ವಾಕ್ ಸಂತೃಣ್ಣೋಂಕಾರ ಏವೇದꣳಸರ್ವ ಮೋಂಕಾರ ಏವೇದꣳ ಸರ್ವಂ ॥ ಇತಿ ತ್ರಯೋವಿಂಶಃ ಖಂಡಃ ॥೨೩॥ ॥೪-೨॥**

ಅ ॥ ವಿಷ್ಣುವು ಶಬ್ದರಾಶಿಗಳನ್ನು ಕಂಡನು. ಇವುಗಳಲ್ಲಿ ಶ್ರೇಷ್ಠವಾದುದು ಯಾವುದೆಂದು ನೋಡಿದನು. ಎಲ್ಲಾ ಶಬ್ದರಾಶಿಗಳಿಗಿಂತ ಋಗ್ವೇದ ಮೊದಲಾದ ವೇದವಿದ್ಯೆಯನ್ನು ಶ್ರೇಷ್ಠವೆಂದು ಶ್ರೀಹರಿಯು ತಿಳಿದನು. ಇದರಲ್ಲಿ ವಿಮರ್ಶೆಮಾಡಿ **ಭೂಃ ಭುವಃ ಸ್ವಃ** ಎಂಬೀ ಮೂರು ಅಕ್ಷರಗಳು ಶ್ರೇಷ್ಠಗಳೆಂದು ತಿಳಿದನು. ಅವುಗಳಲ್ಲಿಯೂ ಅಕಾರ ಉಕಾರ ಮಕಾರಗಳೆಂಬ ಮೂರು ಅಕ್ಷರಗಳಿಂದೊಡಗೂಡಿದ ಓಂ ಎಂಬ ಪ್ರಣವವು ಶ್ರೇಷ್ಠವೆಂದು ತಿಳಿದನು. (ಅಕಾರವು ಭೂಃ ಎಂಬುದರ ಸಾರ. ಉಕಾರವು ಭುವಃ ಎಂಬುದರ ಸಾರ. ಮಕಾರವು ಸ್ವಃ ಎಂಬುದರ ಸಾರವು.) (ಓಂಕಾರವು ಸರ್ವಶ್ರೇಷ್ಠವೆಂದು ಹೇಳಿದುದಕ್ಕೆ ದೃಷ್ಟಾಂತ ಕೊಡುತ್ತಾರೆ—) ಮೊನೆಯಾದ ಕಡ್ಡಿಯಲ್ಲಿ ಎಲೆಗಳು ಸೇರಿಕೊಳ್ಳುವಂತೆಯೇ ಓಂ ಎಂಬ ಪ್ರಣವದಲ್ಲಿ ವೇದ ಮೊದಲಾದ ಎಲ್ಲಾ ವಚನಗಳೂ ಸೇರಿವೆ. (ಎಲ್ಲಾ ವಚನಗಳೂ ಪ್ರಣವದ ವ್ಯಾಖ್ಯಾನ (ಅರ್ಥ) ಗಳು. ಆದುಕಾರಣ ಓಂಕಾರವು ಶ್ರೇಷ್ಠವು.) ಓಂಕಾರವು ಸರ್ವಗುಣಪೂರ್ಣ ಎಂಬ ಅರ್ಥವನ್ನು ಹೇಳುತ್ತದೆ. ಅಥವಾ ಎಲ್ಲಾ ಶಬ್ದರಾಶಿಗಳಿಗಿಂತಲೂ ಸ್ವರೂಪತಃ ಶ್ರೇಷ್ಠವಾದುದು ಓಂಕಾರವು ॥ ೪—೨೩ ॥ ॥ ೨ ॥

**ಭಾ. ॥ (೧) ಸರ್ವಧರ್ಮೈಃ ಪುಣ್ಯಲೋಕೋ ಬ್ರಹ್ಮಜ್ಞಾನಾದ್ವಿಮುಚ್ಯತೇ ॥ (೨) ಓಂಕಾರೋ ಬ್ರಹ್ಮಣೋ ನಾಮ ಸರ್ವವಾಗಾತ್ಮಕಶ್ಚ ಸಃ । ತದ್ವ್ಯಾಖ್ಯಾತ್ವಾ (ವ್ಯಾಖ್ಯಾ—ನತ್ವಾ)ತ್ಸರ್ವವಾಚಾಂ ಸರ್ವವಾಗಾತ್ಮತಾ ಭವೇತ್ ॥ (೩) ಇದಂ ತು ಪ್ರಸ್ತುತತ್ವಾತ್ಸ ಸರ್ವಂ ಚಾಪ್ಯರ್ಥಪೂರ್ಣತಃ । ಸರ್ವಶಬ್ದಾನ್ವಿತತ್ವಾಚ್ಚ ನ ಲಿಂಗವ್ಯತ್ಯಯೋ ಭವೇತ್ । ಆಧಿಕ್ಯಂ ಚೈವ ಸರ್ವತ್ವಂ ಪ್ರಸ್ತುತಂ ತದ್ಯಥೇತಿ ತತ್ ॥ ಇತಿ ಚ ॥ (೪) ಅಕಾರಾದ್ಯಾಃ ಕ್ರಮೇಣೈವ ಭೂರಾದೇಃ ಸಾರರೂಪಿಣಃ । ಅಸ್ಮಾದಯಂ ಸಾರ ಇತಿ ಜ್ಞಾನಮೇವಾಭಿತಾ-ಪನಂ । ಸಂಪ್ರಸ್ರಾವಶ್ಚ ತದ್ದೃಷ್ಟಿರ್ಬ್ರಹ್ಮಣಃ ಪರಮಸ್ಯ ಹಿ ॥ (೫) ನಿತ್ಯಜ್ಞಾನೋಽಪಿ ಭಗವಾನ್ ಕ್ರೀಡಯಾಽಚೀಕ್ಲೃಪದ್ಯದಾ । ತದಾಽಭಿತಾಪಶಬ್ದೋಽಯಂ ವರ್ತತೇ ಪರ—ಮಾತ್ಮನಿ ॥ ಇತಿ ಚ ॥ ೧ ॥**

ಅ ॥ (೧) ಎಲ್ಲಾ ಆಶ್ರಮಿಗಳ ಧರ್ಮಾಚರಣೆಗಳಿಂದ ಪುಣ್ಯಪ್ರಾಪ್ಯವಾದ ಸ್ವರ್ಗಾದಿಲೋಕವು ಲಭಿಸುತ್ತದೆ. ಬ್ರಹ್ಮಜ್ಞಾನವಿದ್ದರೆ ಸರ್ವರಿಗೂ ಮೋಕ್ಷವು ಆಗಿಯೇ ಆಗುವುದು. (ಆದುಕಾರಣ ಬ್ರಹ್ಮಚಾರಿ ಗೃಹಸ್ಥಾಶ್ರಮಿ ವಾನಪ್ರಸ್ಥ ಈ ಮೂವರಿಗೆ ಸ್ವರ್ಗಾದಿಲೋಕಗಳು ಮಾತ್ರ. ಸನ್ಯಾಸಿಗಳಿಗೇನೇ ಮೋಕ್ಷವು, ಎಂದು ಪರರು ಹೇಳಿದ್ದು ಅಯುಕ್ತವು.) (೨) (**ಓಂಕಾರ ಏವೇದಂ ಸರ್ವಂ** ಎಂಬುದಕ್ಕೆ ಅರ್ಥ ಹೇಳುತ್ತಾರೆ ) ಓಂಕಾರವು ಗುಣಪೂರ್ಣನಾದ ಪರಬ್ರಹ್ಮನ ಹೆಸರು. ವೇದ ಮೊದಲಾದ ಎಲ್ಲಾ ವಚನಗಳೂ ಓಂಕಾರಕ್ಕೆ ಟೀಕೆಯಾಗಿರುವುದರಿಂದ ಓಂಕಾರವು ವೇದ ಮೊದಲಾದ ಎಲ್ಲಾ ವಚನರೂಪವು. (೩) ಓಂಕಾರವನ್ನೇ **ಇದಂ ಸರ್ವಂ** ಎಂಬಲ್ಲಿದ್ದ ಇದಂ ಶಬ್ದದಿಂದ ಇಟ್ಟುಕೊಳ್ಳಬೇಕು. **ಸರ್ವ** ಎಂಬು

ದಕ್ಕೆ ಗುಣಪರಿಪೂರ್ಣವೆಂಬ ಅರ್ಥವಿರುವುದರಿಂದ ಸರ್ವಂ=ಪೂರ್ಣವು. ಇದಂ=ಓಂಕಾರವು ಗುಣಪರಿ ಪೂರ್ಣವು. ಅಥವಾ **ಇದಂ** ಎಂಬುದಕ್ಕೆ ಸರ್ವಶಬ್ದದಲ್ಲಿ ಸಂಬಂಧವಿರುವುದರಿಂದ ಸರ್ವಂ ಎಂಬುದು ನಪುಂಸಕಲಿಂಗವಾದ ಕಾರಣ **ಅಯಂ** ಎಂದು ಲಿಂಗವ್ಯತ್ಯಾಸವು ಆಗಲಿಲ್ಲ. (ಓಂಕಾರವು ಸರ್ವವಚನಗಳಲ್ಲಿ ಶ್ರೇಷ್ಠವೆಂದು ಹೇಳಿ ಈಗ ಸ್ವರೂಪತಃ ಸರ್ವವಚನಗಳಲ್ಲಿ ಶ್ರೇಷ್ಠವಾಗಿದೆ, ಎನ್ನುತ್ತಾರೆ–) **ತದ್ಯಥಾ ಶಂಕುನಾ** ಎಂಬ ಹಿಂದಿನ ವಾಕ್ಯದಲ್ಲಿ ಆಧಿಕ್ಯ ಎಂಬ ಅರ್ಥವನ್ನು ಹೇಳಿದ ಕಾರಣ ಇಲ್ಲಿಯೂ ಓಂಕಾರವೇ, ಇದಂ ಸರ್ವಂ=ಸರ್ವ ವಚನಗಳಲ್ಲಿಯೂ ಶಬ್ದಸ್ವರೂಪದಿಂದಲೂ ಅಧಿಕವು ಶ್ರೇಷ್ಠವು. (೪) ಅಕಾರ ಉಕಾರ ಮಕಾರಗಳು ಕ್ರಮವಾಗಿ ಭೂಃ ಭುವಃ ಸ್ವಃ ಎಂಬವುಗಳ ಶ್ರೇಷ್ಠಭಾಗಗಳೆಂದು (ಬ್ರಹ್ಮನು ತಿಳಿದಿರುತ್ತಾನೆ.) (**ಪ್ರಜಾಪತಿರ್ಲೋಕಾನಭ್ಯತಪತ್....ಸಂಪ್ರಾಸ್ರವತ್** ಎಂಬಲ್ಲಿದ್ದ ಅಭಿತಾಪನ, ಸಂಪ್ರಾಸ್ರವಣ ಈ ಎರಡು ಶಬ್ದಗಳ ಅರ್ಥ ಹೇಳುತ್ತಾರೆ—) ಶಬ್ದರಾಶಿಗಿಂತ ಋಗಾದಿವಿದ್ಯೆಯು ಶ್ರೇಷ್ಠವೆಂಬ ಜ್ಞಾನವೇ **ಅಭಿತಾಪನವೆ**ನಿಸುತ್ತದೆ ಋಗಾದಿವಿದ್ಯೆಗಳು ಶ್ರೇಷ್ಠಗಳೆಂದು ಪರಬ್ರಹ್ಮನು ತಿಳಿದುಕೊಳ್ಳುವುದೇ ಸಂಪ್ರಸ್ರಾವ ಸಂಪ್ರಾಸ್ರವಣ ಎನಿಸುತ್ತದೆ. (೫) (೨ನೇ ಮಂತ್ರದಲ್ಲಿ **ಪ್ರಜಾಪತಿ** ಶಬ್ದದಿಂದ ಪರಬ್ರಹ್ಮನನ್ನು ಇಟ್ಟುಕೊಂಡರೆ ಆತನಿಗೆ ನಿತ್ಯಜ್ಞಾನವಿದ್ದ ಕಾರಣ **ಅಭ್ಯತಪತ್** ಆಗ ನೋಡಿದನು, ಎಂಬ ವ್ಯವಹಾರವು ಹೇಗೆ ಕೂಡುತ್ತದೆ? ಎಂದರೆ—)ಶ್ರೀಹರಿಗೆ ನಾಶವಿಲ್ಲದ, ಸರ್ವದಾ ಒಂದೇ ರೀತಿ ಜ್ಞಾನವಿದ್ದರೂ ಕ್ರೀಡೆಯಿಂದ ತನ್ನ ಜ್ಞಾನವನ್ನು ಪ್ರಕಟೀಕರಿಸಿಕೊಂಡರೆ ಆಗ ಪರಮಾತ್ಮನಲ್ಲಿ ಅಭಿತಾಪ, ಅಭ್ಯತಪತ್=ನೋಡಿದನು ಎಂಬ ಶಬ್ದವು ಹೇಳಲ್ಪಟ್ಟಿದೆ. ॥ ೧ ॥

ಪೀ —ನಾಲ್ಕು ಆಶ್ರಮದವರೂ ಸ್ವರ್ಗಾದಿಗಳನ್ನು ಹೊಂದುತ್ತಾರೆ ಅವರು ಬ್ರಹ್ಮಜ್ಞಾನಿಗಳಾಗಿದ್ದರೆ ಮೋಕ್ಷವನ್ನು ಹೊಂದುತ್ತಾರೆ, ಎಂದಾಗಿದ್ದರೆ ಗೃಹಸ್ಥಾದಿಗಳ ಧರ್ಮಗಳನ್ನು ಹೇಳಿದಂತೆಯೇ ಯತಿಗಳ ಧರ್ಮವನ್ನೂ ಹೇಳಬೇಕಿತ್ತು ಎಂದರೆ—

**ಭಾ.** ॥ (೧) ತಪಶ್ಶಬ್ದೇನೈವ ಯತಿಧರ್ಮಶ್ಚೋಕ್ತಃ । ಸರ್ವೇಷಾಮಾಶ್ರಮಸ್ಥಾನಾಮಜ್ಞಾನಾಂ ಪುಣ್ಯಲೋಕತಾ । ಅಪರೋಕ್ಷದೃಶಾಂ ವಿಷ್ಣೋರಮೃತತ್ವಂ ನ ಚಾನ್ಯಥಾ ॥ ಇತಿ ಚ ॥ (೨) ಯಜ್ಞಾಧ್ಯಯನದಾನೈಸ್ತು ಗೃಹೀ ಸ್ಯಾತ್ಸೋಮಲೋಕಗಃ । ಯತಯಸ್ತಪಸಾ ಸೂರ್ಯಂ ಚತ್ವಾರೋಽಪಿ ವಿಶೇಷತಃ ॥ ಗಚ್ಛಂತಿ ತಪಸೈವರ್ಷೀನ್ ವನಸ್ಥಾ ಬ್ರಹ್ಮಚಾರಿಣಃ । ನೈಷ್ಠಿಕಾ ವಾಲಖಿಲ್ಯಾಂಶ್ಚ ಗುರುಶುಶ್ರೂಷಯೈವ ತು ॥ ಯದಿ ಪಶ್ಯಂತ್ಯೇತ ಏವ ಸಾಕ್ಷಾದ್ದೇವಂ ಜನಾರ್ದನಂ । ಅಮೃತತ್ವಂ ತದಾ ಯಾಂತಿ ನಾನ್ಯಥಾ ತು ಕಥಂಚನ ॥ ಇತಿ ಚ ॥ (೩) ನಚ ಸನ್ನ್ಯಾಸಮಾತ್ರೇಣಾಮೃತತ್ವಂ । ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ । ಇತಿ ಶ್ರುತೇಃ ॥ ವಿದ್ಯೈವ ತು ನಿರ್ಧಾರಣಾತ್ । ಇತಿ (ಚ) ಭಗವದ್ವಚನಂ ॥ ನ ರೋಧಯತಿ ಮಾಂ ಧರ್ಮೋ ನ ಸಾಂಖ್ಯಂ ಯೋಗ ಉದ್ಧವ । ನ ಸ್ವಾಧ್ಯಾಯಸ್ತಪಸ್ತ್ಯಾಗೋ ನೇಷ್ಟಾಪೂರ್ತಂ ನ ದಕ್ಷಿಣಾ ॥ ಇತಿ(ತ್ಯಾದಿ) ಚ ॥ ನಚ ಸನ್ನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ । ಇತಿ ಚ ॥ (೪) ತಸ್ಯ ಪುತ್ರಾ ದಾಯಮುಪಯಂತೀತ್ಯಾದೇರ್ಗೃಹಸ್ಥಾದೀನಾಮಪಿ ಜ್ಞಾನಿನಾಂ ಮೋಕ್ಷಃ ಪ್ರತೀಯತೇ । ಸರ್ವವರ್ಣಾಶ್ರಮಾಣಾಂ ಚ ಜ್ಞಾನಾನ್ಮೋಕ್ಷೋ ವಿನಿಶ್ಚಿತಃ । ಅಂತ್ಯಾನಾಂ ಸ್ಥಾವರಾಣಾಂ ವಾ ತಥಾಽಪಿ ಯತಿರುತ್ತಮಃ ॥ ಜ್ಞಾನದ್ವಾರೋ ಯತೋ ನ್ಯಾಸೋ ವಿಶೇಷೇಣ ಭವಿಷ್ಯತಿ । ಇತಿ ಚ ॥ ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ । ಇತಿ ಚ ॥ ೧, ೨ ॥ ಇತಿ ತ್ರಯೋವಿಂಶಃ ಖಂಡಃ ॥ ೪—೨೩ ॥೨॥

ಅ || (೧) ಯತಿಧರ್ಮವು – ಸಮಸ್ತ ಇಂದ್ರಿಯಗಳ ನಿಗ್ರಹ, ಜ್ಞಾನ, ಇವುಗಳು ಅದುಕಾರಣ ತಪಃ ಶಬ್ದದಿಂದಲೇ ಯತಿಧರ್ಮವನ್ನು ಹೇಳಿದ ಹಾಗಾಯಿತು (ಎಲ್ಲಾ ಆಶ್ರಮದವರಿಗೂ ಭಗವಂತನ ಜ್ಞಾನವಿಲ್ಲವಾದರೆ ತಮ್ಮ ತಮ್ಮ ಧರ್ಮಗಳಿಂದ ಪುಣ್ಯಲೋಕಪ್ರಾಪ್ತಿಯು. ಭಗವಂತನ ಜ್ಞಾನವಿದ್ದರೆ ಮೋಕ್ಷವು ಲಭಿಸುತ್ತದೆ, ಎಂಬಲ್ಲಿ ಪ್ರಮಾಣ ಹೇಳುತ್ತಾರೆ—) ಶ್ರೀಹರಿಯ ತತ್ತ್ವಜ್ಞಾನವನ್ನು ಅರಿಯದ ಎಲ್ಲಾ ಆಶ್ರಮದವರಿಗೂ ಸ್ವರ್ಗ ಮೊದಲಾದ ಪುಣ್ಯಲೋಕಪ್ರಾಪ್ತಿಯಾಗುತ್ತದೆ ಅಪರೋಕ್ಷ ಜ್ಞಾನ (ಭಗವಂತನ ಪ್ರತ್ಯಕ್ಷಜ್ಞಾನ)ವುಳ್ಳವರಿಗೆ ಮೋಕ್ಷವು ಲಭಿಸುತ್ತದೆ. ಅಪರೋಕ್ಷಜ್ಞಾನವಿಲ್ಲದಿದ್ದರೆ ಮೋಕ್ಷವು ಲಭಿಸಲಾರದು. (೨) ಗೃಹಸ್ಥಾಶ್ರಮಿಯು ಯಾಗ, ಅಧ್ಯಯನ, ದಾನಗಳಿಂದ ಚಂದ್ರಲೋಕವನ್ನೂ, ಪರಮಹಂಸ, ಹಂಸ, ಕುಟೀಚಕ ಬಹೂದಕ ಎಂಬ ನಾಲ್ವರು ಯತಿಗಳೂ ಮುಖ್ಯವಾಗಿ ತಪಸ್ಸಿನಿಂದ ಸೂರ್ಯಲೋಕವನ್ನೂ, ವಾನಪ್ರಸ್ಥಾಶ್ರಮಿಗಳು ತಪಸ್ಸಿನಿಂದಲೇ ಋಷಿಗಳ ಲೋಕಗಳನ್ನೂ, ನೈಷ್ಠಿಕ ಬ್ರಹ್ಮಚಾರಿಗಳು ಗುರುಗಳ ಸೇವೆಯಿಂದಲೇ ವಾಲಖಿಲ್ಯರ ಲೋಕಗಳನ್ನೂ, ಹೊಂದುತ್ತಾರೆ. ಇವರೇ ಶ್ರೀಹರಿಯನ್ನು ಭಕ್ತಿಪೂರ್ವಕವಾಗಿ ನೋಡಿದರೆ ಮೋಕ್ಷವನ್ನು ಹೊಂದುತ್ತಾರೆ ಭಗವದ್ದರ್ಶನವಾಗ ದಿದ್ದರೆ ಮೋಕ್ಷವು ಆಗಲಾರದು. (೩) (ಯತಿಗಳಿಗೆ (1)ಸನ್ಯಾಸಾಶ್ರಮವನ್ನು ಸ್ವೀಕಾರ ಮಾತ್ರ ಮಾಡೋ ಣದರಿಂದ ಮೋಕ್ಷವು ಲಭಿಸುವುದೋ, (2) ಅಥವಾ ಯತಿಗಳಿಗೇನೇ ಬ್ರಹ್ಮಜ್ಞಾನದಿಂದ ಮೋಕ್ಷವು ಲಭಿ ಸುವುದೋ (1)ನೇದ್ದು ಅಯುಕ್ತವೆನ್ನುತ್ತಾರೆ—) (1) ಸನ್ಯಾಸಾಶ್ರಮವನ್ನು ಸ್ವೀಕಾರ ಮಾತ್ರ ಮಾಡಿದು ದರಿಂದ ಮೋಕ್ಷವು ಲಭಿಸಲಾರದು. (2) ಏಕೆಂದರೆ— ಶ್ರೀಹರಿಯನ್ನು ಹಿಂದೆ ಹೇಳಿದ ಪ್ರಕಾರ ತಿಳಿದವನು ಮೋಕ್ಷವನ್ನು ಹೊಂದುತ್ತಾನೆ. ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ. (1) ಹೀಗೆ ಜ್ಞಾನದಿಂದಲೇ ಮೋಕ್ಷವು ಲಭಿಸುವುದು ಎಂದು ವೇದಪ್ರಮಾಣವಿದೆ. (3) ಬ್ರಹ್ಮಜ್ಞಾನವೇ ಮೋಕ್ಷಕ್ಕೆ ಸಾಧನವು. ಯಜ್ಞಾದಿಕರ್ಮ ವಲ್ಲ, ಏಕಂದರೆ— **ನಾನ್ಯಃ ಪಂಥಾಃ** ಎಂಬ ವೇದವು ಕರ್ಮಾದಿಗಳನ್ನು ನಿಷೇಧಿಸಿ ಜ್ಞಾನವೇ ಮೋಕ್ಷಕ್ಕೆ ಸಾಧನವೆಂದು ನಿರ್ಣಯಿಸಿರುತ್ತದೆ, ಎಂದು ಬ್ರಹ್ಮಸೂತ್ರವು. (4) (ಸನ್ಯಾಸಮಾತ್ರದಿಂದ ಮೋಕ್ಷ ಪ್ರಾಪ್ತಿಯಾಗುವುದಿಲ್ಲ ಎಂಬಲ್ಲಿ ಭಾಗವತ ವಾಕ್ಯವನ್ನು ಹೇಳುತ್ತಾರೆ—) ಎಲೋ ಉದ್ಧವನೇ ಅವರವರಿಗೆ ವಿಹಿತವಾದ ಧರ್ಮವೂ ಸಾಂಖ್ಯಮತದಲ್ಲಿ ಹೇಳಿದಂತೆ ತತ್ತ್ವಗಳ ವಿಚಾರವಮಾತ್ರವೂ, ಯೋಗಶಾಸ್ತ್ರದಲ್ಲಿ ಹೇಳಿದ *ಅಷ್ಟಾಂಗಯೋಗವೂ, ವೇದಾಧ್ಯಯನವೂ, ತಪಸ್ಸೂ, ಸನ್ಯಾಸವೂ, ಯಾಗವೂ, ಸರೋವ ರಾದಿಗಳ ನಿರ್ಮಾಣವೂ, ಯಾಗದ ದಕ್ಷಿಣೆಯೂ ಇವುಗಳೆಲ್ಲವೂ ಮೋಕ್ಷ ಕೊಡಲಿಕ್ಕೆ ನನ್ನನ್ನು ನಿರ್ಬಂಧಿಸಲಾರವು. (ಅಂದರೆ—ಇವುಗಳಿಂದ ನಾನು ಮೋಕ್ಷವನ್ನು ಕೊಡಲಾರೆ.) (5) ಸನ್ಯಾಸಾ ಶ್ರಮ ಸ್ವೀಕಾರದಿಂದಲೇ ಮೋಕ್ಷವನ್ನು ಹೊಂದಲಾರನು. (ಎಂದು ಭಗವದ್ಗೀತಾ ವಾಕ್ಯವು.) (೪) (ಯತಿಗಳಿಗೇನೇ ಬ್ರಹ್ಮಜ್ಞಾನದಿಂದ ಮೋಕ್ಷವೆಂಬುವ ೨ನೇ ಪಕ್ಷವು ಅಯುಕ್ತವೆನ್ನುತ್ತಾರೆ—) ಮೋಕ್ಷ ವನ್ನು ಹೊಂದಿದವನ ಪುತ್ರರು ಧನ ಕ್ಷೇತ್ರ ಮೊದಲಾದುದನ್ನು ಹೊಂದುತ್ತಾರೆ, ಇದುಮೊದಲಾದ ಪ್ರಮಾಣಗಳಿಂದ ಗೃಹಸ್ಥಾಶ್ರಮಿ ಮೊದಲಾದವರೂ ಜ್ಞಾನಿಗಳಾಗಿದ್ದರೆ ಅವರಿಗೆ ಮೋಕ್ಷವು ಲಭಿಸು ತ್ತದೆಂದು ಸಿದ್ಧವಾಯಿತು. (ಎಲ್ಲಾ ಆಶ್ರಮದವರಿಗೆ ಜ್ಞಾನದಿಂದ ಮೋಕ್ಷವೆಂದಾದರೆ ಬ್ರಾಹ್ಮಣನಿಗೇನೇ ಮೋಕ್ಷವೆಂದು ಹೇಳಿದಂತೆ ಆಗುವುದು. ಹಾಗೆ ಹೇಳಿದರೆ ಬೇರೆ ಪ್ರಮಾಣಗಳಿಂದ ವಿರೋಧವು ಬರು ವುದೆಂದರೆ—) ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಎಲ್ಲಾ ವರ್ಣದವರಿಗೂ, ಬ್ರಹ್ಮಚರ್ಯಾ ದ್ಯಾಶ್ರಮಿಗಳಿಗೂ, ಅಂತ್ಯವರ್ಣದವರಿಗೂ ವೃಕ್ಷ ಮೊದಲಾದ ಸ್ಥಾವರ ಪ್ರಾಣಿಗಳಿಗೂ ಜ್ಞಾನವಿದ್ದರೆ ಅದರಿಂದ ಮೋಕ್ಷವು ಆಗಿಯೇ ಆಗುವುದು. (ಎಲ್ಲರಿಗೂ ಮೋಕ್ಷವಾಗುವುದಾದರೆ ಮಹಾಪ್ರಯಾಸ ಸಾಧ್ಯ ವಾದ ಸನ್ಯಾಸಾಶ್ರಮವನ್ನು ಯಾರೂ ಸ್ವೀಕರಿಸಲಾರರು, ಎಂದರೆ—) ಎಲ್ಲರಿಗೆ ಮೋಕ್ಷ ಲಭಿಸುವುದಾ ದರೂ ಸನ್ಯಾಸಿಗಳು ಉತ್ತಮರು. ಹೇಗೆಂದರೆ—ಸನ್ಯಾಸಾಶ್ರಮದಲ್ಲಿ ಗಾರ್ಹಸ್ಥ್ಯಾದಿಗಳಿಗಿಂತ ಹೆಚ್ಚಾಗಿ

---

* ಯಮ, ನಿಯಮ, ಆಸನ, ಪ್ರಾಣಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬುದು ಎಂಟು.

ಮೋಕ್ಷಸಾಧನವಾದ ಜ್ಞಾನವಿದೆ. (ಸನ್ಯಾಸಿಗಳಿಗೆ ಇತರರಿಗಿಂತ ಹೆಚ್ಚಾಗಿ ಜ್ಞಾನವೆಂಬಲ್ಲಿ ಪ್ರಮಾಣ ಹೇಳುತ್ತಾರೆ—) ಶುದ್ಧಾಂತಃಕರಣರಾದ ಯತಿಗಳು ಸನ್ನ್ಯಾಸ ಸ್ವೀಕಾರವಾದ ವೇದಾಂತ ತತ್ತ್ವವನ್ನು ತಿಳಿದುಕೊಂಡು ಅದರಿಂದ ಭಗವದ್ರೂಪವನ್ನು ನಿಶ್ಚಯಿಸಿಕೊಂಡಿರುವರು. (ಅಂಥವರು ಬ್ರಹ್ಮನೊಂದಿಗೆ ಮೋಕ್ಷವನ್ನು ಹೊಂದುತ್ತಾರೆ.) ॥ ೧ ೨,೩ ॥ ॥೪—೨೩ ॥　　　　॥ ೨ ॥

**ಇಪ್ಪತ್ತಮೂರನೇ ಖಂಡವು ಮುಗಿಯಿತು.**

## ೨೪ನೇ ಖಂಡವು

ಪೀ—ಹಿಂದೆ ಸಾಮನೆನಿಸಿಕೊಂಡ ಶ್ರೀಹರಿಯನ್ನು ಉಪಾಸನೆ ಮಾಡುವುದರಿಂದ ಸ್ವರ್ಗಮೋಕ್ಷಗಳು ಲಭಿಸುತ್ತವೆಂದು ಹೇಳಿದೆ. ಈಗ ಅಲ್ಲಿ ಬರತಕ್ಕ ವಿಘ್ನಗಳ ಪರಿಹಾರಕ್ಕಾಗಿ ವಸ್ವಾದಿಗಳಲ್ಲಿರತಕ್ಕ ಶ್ರೀಹರಿಯ ಉಪಾಸನೆಯನ್ನು ಕಥೆಯ ರೂಪದಿಂದ ಹೇಳುತ್ತಾರೆ—

**ಉ. ॥ ಬ್ರಹ್ಮವಾದಿನೋ ವದಂತಿ ಯ ದ್ವಸೂನಾಂ ಪ್ರಾತಸ್ಸವನಂ ರುದ್ರಾಣಾಂ ಮಾಧ್ಯಂದಿನಂ ಸವನಮಾದಿತ್ಯಾನಾಂ ವಿಶ್ವೇಷಾಂ ದೇವಾನಾಂ ಚ ತೃತೀಯ ಸವನಂಕ್ವ ತರ್ಹಿ ಯಜಮಾನಸ್ಯ ಲೋಕ ಇತಿ ಸ ಯಸ್ತನ್ನ ವಿದ್ಯಾತ್ಕಥಂ ಕುರ್ಯಾದಥ ವಿದ್ವಾನ್ಕುರ್ಯಾತ್ ॥ ೧ ॥**

ಅ ॥ ಪ್ರಾತಃಸವನಕ್ಕೆ ವಸುಗಳು ಅಧಿಪತಿಗಳೆಂದಾದರೆ (ಪ್ರಾತಃಸವನಾಧಿಪತಿಗಳೇ ಭೂಲೋಕಕ್ಕೂ ಅಧಿಪತಿಗಳಾಗಿರುವುದರಿಂದ) ಭೂಲೋಕಕ್ಕೂ ವಸುಗಳೇ ಅಧಿಪತಿಗಳು. (ಮಾಧ್ಯಂದಿನ ಸವನಾಧಿಪತಿಗಳೇ ಅಂತರಿಕ್ಷಲೋಕಕ್ಕೆ ಅಧಿಪತಿಗಳಾಗಿರುವುದರಿಂದ) ಮಾಧ್ಯಂದಿನ ಸವನಕ್ಕೆ ರುದ್ರರು ಅಧಿಪತಿಗಳೆಂದಾದರೆ ಅಂತರಿಕ್ಷ ಲೋಕಕ್ಕೂ ರುದ್ರರೇ ಅಧಿಪತಿಗಳು. (ತೃತೀಯ ಸವನಾಧಿಪತಿಗಳೇ ಸ್ವರ್ಗಲೋಕಕ್ಕೆ ಅಧಿಪತಿಗಳಾಗಿರುವುದರಿಂದ) ತೃತೀಯ ಸವನಕ್ಕೆ ಆದಿತ್ಯರೂ ವಿಶ್ವೇದೇವತೆಗಳೂ ಅಧಿಪತಿಗಳೆಂದಾದರೆ ಸ್ವರ್ಗಲೋಕಕ್ಕೂ ಅವರೇ ಅಧಿಪತಿಗಳು ಎಂದಾಯಿತು. ಹಾಗಾದರೆ (ವಸ್ವಾದಿಗಳು ಭೂಲೋಕ ಮೊದಲಾದವುಗಳಿಗೆ ಅಧಿಪತಿಗಳಾಗಿರುವುದರಿಂದ ಜ್ಞಾನಿ ಅಥವಾ ಅಜ್ಞಾನಿಯಾದ ಯಜಮಾನನಿಗೆ ಎಲ್ಲಿ? ಯಾವ ಲೋಕವು? ಎಂದು ಬ್ರಹ್ಮವಾದಿಗಳಾದ ಶಿಷ್ಯರು ಗುರುಗಳಲ್ಲಿ ಆಕ್ಷೇಪಿಸಿದರು. ಆಗ ಭೂಲೋಕಾದಿಗಳಿಗೆ ಅಧಿಪತಿಗಳಾದ ವಸ್ವಾದಿಗಳಲ್ಲಿರತಕ್ಕ ಶ್ರೀಹರಿಯನ್ನು ಲೋಕದ್ವಾರ ಮೊದಲಾದ ಮಂತ್ರಗಳಿಂದ ಪ್ರಾರ್ಥಿಸಿಕೊಂಡು ಭೂಲೋಕ ಮೊದಲಾದ ವಸುರಾದಿ ಲೋಕಗಳಿಗೆ ಯಜಮಾನನು ಹೋಗುತ್ತಾನೆ, ಎಂದು ಗುರುಗಳು ಸಮಾಧಾನ ಹೇಳುತ್ತಾರೆ—) ಲೋಕದ್ವಾರಾದಿ ಮಂತ್ರಗಳಿಂದ ವಸ್ವಾದಿಗಳೊಳಗಣ ಶ್ರೀಹರಿಯನ್ನು ಪ್ರಾರ್ಥಿಸಿಕೊಂಡರೆ ಆಯಾಯ ವಸ್ವಾದಿಗಳ ಲೋಕಪ್ರಾಪ್ತಿಯಾಗುತ್ತದೆಂಬ ಪ್ರಮೇಯವನ್ನು ತಿಳಿಯದವನು (ಯಜ್ಞಾದಿಗಳನ್ನು) ಹೇಗೆ ಮಾಡಿಯಾನು? ಅದು ಕಾರಣ ಹೊಂದತಕ್ಕ ಫಲದ ಜ್ಞಾನವಿಲ್ಲವಾದರೆ ಫಲಕ್ಕೆ ಕಾರಣವಾದ ಯಜ್ಞಾದಿಗಳನ್ನು ಮಾಡಲು ಸಾಧ್ಯವಿಲ್ಲದಿರುವುದರಿಂದ ತಿಳಿದವನು ಹಿಂದೆ ಹೇಳಿದ ಅರ್ಥವನ್ನು ತಿಳಿದುಕೊಂಡೇ ಕರ್ಮ ಮಾಡಬೇಕು. ॥ ೧ ॥

**ಉ. ॥ ಪುರಾ ಪ್ರಾತರನುವಾಕಸ್ಯೋಪಾಕರಣಾಜ್ಜಘನೇನ ಗಾರ್ಹಪತ್ಯ-ಸ್ಯೋದಙ್ಮುಖ ಉಪವಿಶ್ಯ ಸ ವಾಸವಂ ಸಾಮಾಭಿಗಾಯತಿ ಲೋ೩ಕದ್ವಾರ-ಮಪಾವಾರ್ಣೂ೩ ಪಶ್ಯೇಮ ತ್ವಾ ವಯಂ ರಾ ೩೩೩ ಹುಂ ೩೩೩ ಜ್ಯಾ ೩ ಯೋ೩ ೩೩೩೩೩ ಇತ್ಯಥ ಜುಹೋತಿ ನಮೋಽಗ್ನಯೇ ಪೃಥಿವೀಕ್ಷಿತೇ ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿಂದೈಷ ವೈ ಯಜಮಾನಸ್ಯ ಲೋಕ ಏತಾಽಸ್ಮಿ॥ತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾಽಪಜಹಿ ಪರಿಘಮಿತ್ಯುಕ್ತ್ವೋತ್ತಿಷ್ಠತಿ ತಸ್ಮೈ ವಸವಃ ಪ್ರಾತಸ್ಸವನಂ ಸಂಪ್ರಯಚ್ಛಂತಿ॥**

**ಇತಿ ಚತುರ್ವಿಂಶಃ ಖಂಡಃ ॥ ೪-೨೪ ॥ ॥ ೨ ॥**

ಅ ॥ ಯಜಮಾನನು ಪ್ರಾತರನುವಾಕವಾದ ಶಸ್ತ್ರವನ್ನು ಪ್ರಾರಂಭಿಸುವುದಕ್ಕಿಂತ ಮೊದಲು ಗಾರ್ಹಪತ್ಯಾಗ್ನಿಯ ಪಡುದಿಕ್ಕಿನಲ್ಲಿ ಬಡಗುಮುಖವಾಗಿ ಕುಳಿತುಕೊಂಡು ವಸುಗಳೊಳಗಣ ವಸು ಮೊದಲಾದ ಹೆಸರುಳ್ಳ ಶ್ರೀಹರಿಯನ್ನು ಹೇಳುವ ವಾಸವ ಸಾಮವನ್ನು ಗಾಯನ ಮಾಡಬೇಕು. (ಆ ಸಾಮ ಹೇಳುತ್ತಾರೆ—) ವಸುಗಳೊಳಗಣ ಶ್ರೀಹರಿಯೇ ನೀನು ಭೂಲೋಕಕ್ಕೆ ಬರಲಿಕ್ಕೆ ಪ್ರತಿಬಂಧಕವಾದ ಬಾಗಿಲನ್ನು ತೆರೆ. ಆ ದ್ವಾರದಿಂದ ನಾವು ನಿನ್ನನ್ನು ರಾಜ್ಯಪ್ರಾಪ್ತಿಗಾಗಿ (ಭೂಲೋಕ ಪ್ರಾಪ್ತಿಗಾಗಿ) ನೋಡುವೆವು. ಹುಂ ಇತ್ಯಾದಿಗಳು ಮಂತ್ರದ ಬೀಜಾಕ್ಷರಗಳು ಭೂಲೋಕದಲ್ಲಿ ವಿಶೇಷವಾಗಿ ಪ್ರಕಾಶಗೊಳ್ಳುವುದಕ್ಕಾಗಿ ವಸುಗಳೊಳಗಣ ವಸು ಎನಿಸಿಕೊಂಡ ಶ್ರೀಹರಿಯನ್ನು ಸಾಮಗಾಯನದಿಂದ ಪ್ರಾರ್ಥಿಸಿದ ಮೇಲೆ ಹೋಮಿಸಬೇಕು. ಭೂಲೋಕಗಳಲ್ಲಿ ಆವಾಸಮಾಡಿಕೊಂಡು ಇದ್ದು ಭೂಲೋಕಕ್ಕೆ ಅಧಿಪತಿಯಾದ ಅಗ್ನಿಗಳೊಳಗಣ ಅಗ್ನಿ ಎನಿಸಿಕೊಂಡ ಶ್ರೀಹರಿಗೆ ನಮಸ್ಕಾರವಾಗಲಿ. ನಿನ್ನನ್ನು ಪೂಜಿಸತಕ್ಕ ನನಗೆ ಹೊಂದಲು ಯೋಗ್ಯವಾದ ಭೂಲೋಕವನ್ನು ಹೊಂದಿಸಿಕೊಡು ಭೂಲೋಕವೇ ಯಜಮಾನನ ಮೋಕ್ಷವು ಭೂಲೋಕಕ್ಕೆ ಯಜಮಾನನಾದ ನಾನು ಮರಣಾನಂತರ ಬರುವೆನು ಅದುಕಾರಣ ಆ ಲೋಕವನ್ನು ಹೊಂದಿಸಿಕೊಡು. ಹೀಗೆ ಹೇಳುತ್ತಾ ಅಗ್ನಿಯಲ್ಲಿ ಸ್ವಾಹಾ ಎಂದು ಹೋಮಿಸಬೇಕು. ಆ ಮೇಲೆ ವಸು ಎನಿಸಿದ ಶ್ರೀಹರಿಯೇ ಸಂತೋಷಗೊಂಡ ನೀನು ಭೂಲೋಕದ ಭೋಗವಿಶೇಷವನ್ನು ಹೊಂದಲಿಕ್ಕೆ ತಡೆಯಾದ ಅನಾದಿಯಾದ *ಪರಿಘವನ್ನು ನಾಶಗೊಳಿಸು ಹೀಗೆ ಹೇಳಿ ಅಗ್ನಿಯೊಳಗಣ ಶ್ರೀಹರಿಯನ್ನು ಪ್ರಾರ್ಥಿಸಿ ಎದ್ದು ನಿಂತುಕೊಳ್ಳಬೇಕು. ಅಂತಹ ಯಜಮಾನನಿಗೆ ವಸುಗಳೊಳಗಣ ವಸುಎನ್ನಿಸಿಕೊಂಡ ಭಗವದ್ರೂಪವಿಶೇಷಗಳು ಸಂತುಷ್ಟಗಳಾಗಿ ಪ್ರಾತಃಸವನದಲ್ಲಿ ಮಾಡತಕ್ಕುದನ್ನು ನಿರ್ವಿಘ್ನವಾಗಿ ಸಂಪಾದಿಸಿಕೊಡುತ್ತಾರೆ—ಭೂಲೋಕವನ್ನೂ ಭೂಲೋಕದಲ್ಲಿದ್ದ ಭೋಗವಿಶೇಷವನ್ನೂ ಹೊಂದಿಸಿಕೊಡುತ್ತಾರೆ. ॥ ೪ — ೨೪ ॥

**ಇಪ್ಪತ್ತನಾಲ್ಕನೇ ಖಂಡವು ಮುಗಿಯಿತು.**

---

* ಜೀವನ ಸ್ವರೂಪಾನಂದಾವಿರ್ಭಾವಕ್ಕೆ ಪ್ರತಿಬಂಧವಾದುದು ಪರಿಘವು

## ೨೫ನೇ ಖಂಡವು

ಉ. ॥ ಪುರಾ ಮಾಧ್ಯಂದಿನಸ್ಯ ಸವನಸ್ಯೋಪಾಕರಣಾಜ್ಜಘನೇನಾಽಗ್ನೀ-
ಧ್ರೀಯಸ್ಯೋದಙ್ಮುಖ ಉಪವಿಶ್ಯ ಸ ರೌದ್ರꣳ ಸಾಮಾಭಿಗಾಯತಿ ಲೋ೩ಕ
ದ್ವಾರಮಪಾವಾರ್ಣೂ೩೩ ಪಶ್ಯೇಮ ತ್ವಾ ವಯಂ ವಿರಾ ಆ ಆ ಆ ಆ ಹುಂ ಆ
ಆ ಆಜ್ಯಾ೩ಯೋ೩ಆ ಆ ಇತ್ಯಥ ಜುಹೋತಿ ನಮೋ ವಾಯವೇಽಂತರಿಕ್ಷಕ್ಷಿತೇ
ಲೋಕಕ್ಷಿತೇ ಲೋಕಂ ಮೇ ಯಜಮಾನಾಯ ವಿಂದೈಷ ವೈ ಯಜಮಾನಸ್ಯ
ಲೋಕ ಏತಾಽಸ್ಮ್ಯತ್ರ ಯಜಮಾನಃ ಪರಸ್ತಾದಾಯುಷಃ ಸ್ವಾಹಾಽಪಜಹಿ
ಪರಿಘಮಿತ್ಯುಕ್ತ್ವೋತ್ತಿಷ್ಠತಿ ತಸ್ಮೈ ರುದ್ರಾ ಮಾಧ್ಯಂದಿನꣳ ಸವನꣳ ಸಂಪ್ರ-
ಯಚ್ಛಂತಿ ॥ ಇತಿ ಪಂಚವಿಂಶಃ ಖಂಡಃ ॥ ೪-೨೫ ॥ ॥ ೧ ॥

ಅ ॥ ಯಜಮಾನನು ಮಾಧ್ಯಂದಿನ ಸವನವನ್ನು ಪಕ್ರಮಿಸುವುದಕ್ಕಿಂತ ಮೊದಲು ಆಗ್ನೀಧ್ರೀಯ ಎಂಬ ದಕ್ಷಿಣಾಗ್ನಿಯ ಪಡುಪ್ರದೇಶದಲ್ಲಿ ಒಡಗುಮುಖವಾಗಿ ಕುಳಿತುಕೊಂಡು ರುದ್ರನೊಳಗಣ ರುದ್ರನೆನಿಸಿದ ಶ್ರೀಹರಿಯ ಗುಣಗಳನ್ನು ಹೇಳುವ ರೌದ್ರಸಾಮವನ್ನು ಗಾಯನಮಾಡಬೇಕು. ಎಲೋ ಶ್ರೀಹರಿಯೇ ಅಂತರಿಕ್ಷಲೋಕವನ್ನು ಹೊಂದುವುದಕ್ಕಾಗಿ ಆ ಲೋಕದ ಆವರಣವನ್ನು ತೆರೆ ಆ ದ್ವಾರದಿಂದ ನಾವು ಅಂತರಿಕ್ಷಲೋಕದಲ್ಲಿ ವಿಶೇಷವಾಗಿ ಪ್ರಕಾಶಿಸುವುದಕ್ಕಾಗಿ ನಿನ್ನನ್ನು ನೋಡುತ್ತೇವೆ, ಸಾಮಗಾನಾನಂತರ ಹೋಮಿಸಬೇಕು. (ಅಂತರಿಕ್ಷಲೋಕವನ್ನು ಹೊಂದಲಿಕ್ಕೆ ಪ್ರತಿಬಂಧಕವಾದ ಅನಾದಿ ಪರಿಘವನ್ನು ಹೋಗಲಾಡಿಸುವುದಕ್ಕಾಗಿ ವಾಯುವಿನಲ್ಲಿರತಕ್ಕ ಶ್ರೀಹರಿಯನ್ನು ಪ್ರಾರ್ಥಿಸಿರುತ್ತಾರೆ--- (ಹೋಮ ಮಂತ್ರವು) ಅಂತರಿಕ್ಷಲೋಕಕ್ಕೆ ಅಧಿಪತಿಯಾದ ವಾಯುವಿನಲ್ಲಿ ಅಂತರ್ಗತನಾದ ಶ್ರೀಹರಿಗೆ ನಮಸ್ಕಾರವು. ನನಗೆ ಅಂತರಿಕ್ಷಲೋಕನ್ನು ಕೊಡು. ಅಂತರಿಕ್ಷಲೋಕವು ಸಿಗದಂತೆ ಮಾಡತಕ್ಕ ಪರಿಘವನ್ನು ನಾಶಗೊಳಿಸು— ಕಳೆ........ ಮಾಧ್ಯಂದಿನ ಸವನದಲ್ಲಿ ಮಾಡತಕ್ಕುದನ್ನು ನಿರ್ವಿಘ್ನವಾಗಿ ಸಂಪಾದಿಸಿಕೊಡುತ್ತಾರೆ. ಆಮೇಲೆ ಯಜಮಾನನಿಗೆ ರುದ್ರರಲ್ಲಿರತಕ್ಕ ರುದ್ರರೆನಿಸಿಕೊಂಡ ಭಗವದ್ರೂಪಗಳು ಅಂತರಿಕ್ಷಲೋಕವನ್ನೂ ಅದರಲ್ಲಿರತಕ್ಕ ಭೋಗವಿಶೇಷವನ್ನೂ ಕೊಡುತ್ತಾರೆ ॥ ೪—೨೫ ॥ ॥ ೧ ॥

ಇಪ್ಪತ್ತೈದನೇ ಖಂಡವು ಮುಗಿಯಿತು.

## ೨೬ನೇ ಖಂಡವು

ಉ. ॥ ಪುರಾ ತೃತೀಯಸವನಸ್ಯೋಪಾಕರಣಾಜ್ಜಘನೇನಾಹವನೀಯ-
ಸ್ಯೋದಙ್ಮುಖ ಉಪವಿಶ್ಯ ಸ ಆದಿತ್ಯꣳ ಸ ವೈಶ್ವದೇವꣳ ಸಾಮಾಭಿಗಾಯತಿ
ಲೋ೩ಕದ್ವಾರಮಪಾವಾರ್ಣೂ೩೩ ಪಶ್ಯೇಮ ತ್ವಾ ವಯꣳ ಸ್ವಾರಾ೩ ಆ ಆ ಆ
ಹುಂ ಆ ಆ ಆಜ್ಯಾ೩ಯೋ೩ಆ ಆ ಇತ್ಯಾದಿತ್ಯಮಥ ವೈಶ್ವದೇವಂ ಲೋ೩ಕ-
ದ್ವಾರಮಪಾಽಽವಾರ್ಣೂ೩೩ ಪಶ್ಯೇಮ ತ್ವಾ ವಯꣳ ಸಾಮ್ರಾ೩ ಆ ಆ ಆಹುಂ

**ಆ ಆ ಆಜ್ಯಾ೩ಯೋ೩ಆ ಆ ಇತ್ಯಥ ಜುಹೋತಿ ನಮ ಆದಿತ್ಯೇಭ್ಯಶ್ಚ ವಿಶ್ವೇ-ಭ್ಯಶ್ಚ ದೇವೇಭ್ಯೋ ದಿವಿಕ್ಷಿದ್ಭ್ಯೋ ಲೋಕಕ್ಷಿದ್ಭ್ಯೋ ಲೋಕಂ ಮೇ ಯಜ-ಮಾನಾಯ ವಿಂದತೈಷ ವೈ ಯಜಮಾನಸ್ಯ ಲೋಕ ಏತಾಽಸ್ಮ್ಯತ್ರ ಯಜ-ಮಾನಃ ಪರಸ್ತಾದಾಯುಷಃ ಸ್ವಾಹಾಽಪಹತಪರಿಘಮಿತ್ಯುಕ್ತ್ವೋತ್ತಿಷ್ಠತಿ ತ-ಸ್ಮಾ ಆದಿತ್ಯಾಶ್ಚ ವಿಶ್ವೇ ಚ ದೇವಾಸ್ತೃತೀಯಸವನꣳ ಸಂಪ್ರಯಚ್ಛಂತ್ಯೇಷ ಹ ವೈ ಯಜ್ಞಸ್ಯ ಮಾತ್ರಾಂ ವೇದ ಯ ಏವಂ ವೇದ ಯ ಏವಂ ವೇದ ||**

**ಇತಿ ಷಡ್ವಿಂಶಃ ಖಂಡಃ || ೪-೨೬ || ಇತಿ ಶ್ರೀಮಚ್ಛಾಂದೋಗ್ಯೋಪನಿಷದಿ ಚತುರ್ಥೋಽಧ್ಯಾಯಃ || ೪ ||** || ೧ ||

ಅ || ತೃತೀಯ ಸವನವನ್ನು ಪ್ರಾರಂಭಿಸುವುದಕ್ಕಿಂತ ಮೊದಲು ಆಹವನೀಯಾಗ್ನಿಯ ಪಡುದಿಕ್ಕಿನಲ್ಲಿ ಬಡಗುಮುಖವಾಗಿ ಕುಳಿತುಕೊಂಡು ಆದಿತ್ಯನೊಳಗಣ ಆದಿತ್ಯನೆನಿಸಿದ ಶ್ರೀಹರಿಯೇ ದೇವತೆಯಾಗಿ ಉಳ್ಳ, ವಿಶ್ವೇದೇವತೆಗಳಲ್ಲಿ ಅಂತರ್ಗತನಾದ ಶ್ರೀಹರಿಯೇ ದೇವತೆಯಾಗಿಉಳ್ಳ, ಸಾಮಗಾನಮಾಡಬೇಕು........ ಸ್ವರ್ಗಲೋಕದಲ್ಲಿ ಹೆಚ್ಚು ಪ್ರಕಾಶಿಸುವುದಕ್ಕಾಗಿ........ ಸ್ವರ್ಗಲೋಕಕ್ಕೆ ಅಧಿಪತಿಗಳಾದ ಆದಿತ್ಯಾಂತರ್ಗತ ಭಗವದ್ರೂಪಗಳಿಗೂ ವಿಶ್ವೇದೇವತೆಗಳೊಳಗಣ ಭಗವದ್ರೂಪಗಳಿಗೂ ನಮಸ್ಕಾರವು.... ಯಜಮಾನನಾದ ನನಗೆ ಸ್ವರ್ಗಲೋಕವನ್ನು ಹೊಂದಿಸಿರಿ...........(ಯಜಮಾನನು ವಸ್ವಾದಿಗಳನ್ನು ಉಪಾಸನೆ ಮಾಡಿದುದರಿಂದಲೇ ಸ್ವರ್ಗಾದಿಗಳನ್ನು ಹೊಂದಲಾರ. ಮತ್ತೆ ಅವರಲ್ಲಿ ಅಂತರ್ಗತನಾದ ಶ್ರೀಹರಿಯನ್ನುಪಾಸನೆಮಾಡಿಯೇ ಹೊಂದುತ್ತಾನೆನ್ನುತ್ತಾರೆ—) ಯಾವನು ಹಿಂದೆ ಹೇಳಿದಪ್ರಕಾರ ವಸ್ವಾದಿಗಳೊಳಗಣ ಭಗವದ್ರೂಪಗಳನ್ನು ಉಪಾಸನೆ ಮಾಡಿಯೇ ಆಯಾಯ ಲೋಕಗಳನ್ನು ಹೊಂದುತ್ತಾನೆಂದು ತಿಳಿಯುತ್ತಾನೋ, ಆತನೇ ಯಜ್ಞವನ್ನು ನಿರ್ಮಿಸತಕ್ಕ ಪುರುಷನನ್ನು ಕಾಪಾಡುವ ಶ್ರೀಹರಿಯನ್ನು ತಿಳಿಯುತ್ತಾನೆ. ಆ ಶ್ರೀಹರಿಯ ಪ್ರಸಾದದಿಂದ ಅಜ್ಞನಾದರೆ ಸ್ವರ್ಗವನ್ನೂ ಜ್ಞಾನಿಯಾದರೆ ಮೋಕ್ಷವನ್ನೂ ಹೊಂದುತ್ತಾನೆ. || ೨೬ ||

ಟೀ—೨೪ನೇ ಖಂಡದ ತಾತ್ಪರ್ಯ ಹೇಳುತ್ತಾರೆ

**ಭಾ. || (೧) ವಸುರುದ್ರಾದಿತೇಯೇಷು ವಿಶ್ವೇಷು ಸ್ಥಿತಮೀಶ್ವರಂ | ತನ್ನಾಮಾನಂ ಹರಿಂ ಮಂತ್ರೈರ್ಲೋಕದ್ವಾರಾದಿಭಿಃ ಪ್ರಭುಂ || ಪ್ರಾರ್ಥಯಿತ್ವಾ ದಿವಂ ತ್ವಜ್ಞೋ ಜ್ಞೋ ಮೋಕ್ಷಂ ಪ್ರಾಪ್ನುಯಾತ್ತಥಾ | ಯಜಮಾನೋ ನಾನ್ಯಥಾ ತು ಲೋಕೋಽಸ್ಯ ಪ್ರಾಪ್ಯತೇ ವರಃ || (೨) ರಾಜನಂ ಪೃಥಿವೀಲೋಕೇ ರಾಜ್ಯಮಿತ್ಯುಚ್ಯತೇ ಬುಧೈಃ | ವಿರಾಜ್ಯಮಂತ-ರಿಕ್ಷೇ ತು ಸ್ವಾರಾಜ್ಯಂ ಸ್ವರ್ಗಗಂ ಭವೇತ್ || (೩) ಏತೇಷು ಮೋಕ್ಷೋಽಪಿ ಭವೇನ್ಮಾನು-ಷಾಣಾಂ ವಿಶೇಷಿಣಾಂ || (೪) ಶ್ವೇತದ್ವೀಪಂ ತಥಾ ಗತ್ವಾ ದೃಷ್ಟ್ವಾ ವಿಷ್ಣುಂ ಚ ತೇ ತತಃ | ಅನುಜ್ಞಾತಾಃ ಪ್ರಮೋದಂತೇ ನಿರ್ದುಃಖಾಸ್ತು ಧರಾದಿಷು || ಇತಿ ಚ || (೫) ಯೋ ದೇವಾ-ನಾಂ ನಾಮಧಾ ಏಕ ಏವೇತಿ ಶ್ರುತೇಶ್ಚ ಭಗವತ ಏವ ವಸ್ವಾದಿನಾಮಾನಿ || (೬) ತ್ರೈವಿ-ದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ | ಇತಿ ವಚನಾಚ್ಚ ಭಗವಾನೇವ ಪ್ರಾರ್ಥ್ಯಃ** || ೧ ||

ಅ ॥ (೧) ವಸುಗಳು ರುದ್ರರು, ಆದಿತ್ಯರು, ವಿಶ್ವೇದೇವತೆಗಳು, ಇವರಲ್ಲಿ ಅಂತರ್ಯಾಮಿಯೂ) ವಸು ಮೊದಲಾದ ಆಯಾಯ ಹೆಸರುಳ್ಳವನೂ, ಸರ್ವೇಶ್ವರನೂ, ಸರ್ವಸಮರ್ಥನೂ ಆದ ಶ್ರೀಹರಿಯನ್ನು ಯಜಮಾನನು ಲೋಕದ್ವಾರಾದಿ ಮಂತ್ರಗಳಿಂದ (ವಿಘ್ನಗಳು ಪರಿಹಾರವಾಗಿ ಇಷ್ಟಹೊಂದಲಿಕ್ಕೆ ಪ್ರಾರ್ಥಿಸಿಕೊಂಡು ಅಜ್ಞ (ಬ್ರಹ್ಮ ಪರೋಕ್ಷಜ್ಞಾನಿಯು) ನಾವರೆ *ಅಂತರಿಕ್ಷ, ಭೂಲೋಕಗಳನ್ನು ಜ್ಞಾನಿ (ಅಪರೋಕ್ಷಜ್ಞಾನಿ)ಯಾದರೆ ಮೋಕ್ಷವನ್ನು ಹೊಂದಿ ಅಲ್ಲಿದ್ದ ಸುಖವಿಶೇಷವನ್ನು ಹೊಂದುತ್ತಾನೆ. ವಸ್ವಾದಿಗಳೊಳಗಣ ಶ್ರೀಹರಿಯನ್ನು ಧ್ಯಾನಿಸಿಕೊಂಡು ಯಾಗವಮಾಡದಿದ್ದರೆ ಯಜಮಾನನಿಗೆ ಉತ್ತಮವಾದ ಭೂರಾದಿಲೋಕವೂ ಮೋಕ್ಷವೂ ಸಿಗಲಾರದು. (೨) (ರಾಜ್ಯಾಯ ಇತ್ಯಾದಿಗಳಲ್ಲಿ ಭೂಲೋಕಾದಿಗಳನ್ನು ಹೇಳುವ ಪದವಿಲ್ಲದಿರುವುದರಿಂದ ಭೂಲೋಕಾದಿಗಳು ಸಿಗಬೇಕೆಂದು ಪ್ರಾರ್ಥಿಸಿದ್ದಾರೆಂಬುದು ಅಯುಕ್ತವು ಎಂದರೆ —) ಭೂಲೋಕದಲ್ಲಿ ವಿಶೇಷವಾಗಿ ಪ್ರಕಾಶಿಸಿಕೊಂಡಿರುವುದು ರಾಜ್ಯವೆಂದೂ, ಅಂತರಿಕ್ಷಲೋಕದಲ್ಲಿ ಪ್ರಕಾಶಿಸಿಕೊಂಡಿರುವುದು ವಿರಾಜ್ಯವೆಂದೂ, ಸ್ವರ್ಗದಲ್ಲಿ ಪ್ರಕಾಶಿಸಿಕೊಂಡಿರುವುದು ಸ್ವಾರಾಜ್ಯವೆಂದೂ ಅನಿಸುತ್ತದೆ, ಎಂದು ಜ್ಞಾನಿಗಳು ಹೇಳುತ್ತಾರೆ. (೩) ಆತ್ಮತ್ವವೆಂಬ ಒಂದು ಗುಣವನ್ನು ಉಪಾಸನೆ ಮಾಡಿದ ಮನುಷ್ಯರಿಗೆ § ಭೂಲೋಕ ಮೊದಲಾದ ಲೋಕಗಳಲ್ಲಿಯೇ ಮೋಕ್ಷವಾಗುವುದು ಭೋಗವಿಶೇಷವೂ ಆಗುವುದು. (೪) (**ಯಾವಚ್ಛ್ವೇತಂ ನ ಗಚ್ಛತಿ । ಯೋಗೀ ತಾವನ್ನ ಮುಕ್ತಃ ಸ್ಯಾತ್** ಎಂದು ಹೇಳಿದುದರಿಂದ ಭೂಲೋಕಾದಿಗಳಲ್ಲಿ ಮೋಕ್ಷವಾಗುತ್ತದೆಂಬುದು ಹೇಗೆ ಕೂಡುತ್ತದೆ? ಎಂದರೆ—) ಮುಕ್ತರು ಶ್ವೇತದ್ವೀಪಕ್ಕೆ ಹೋಗಿ ಶ್ರೀಹರಿಯನ್ನು ನೋಡಿ ಶ್ರೀವಿಷ್ಣುವಿನಿಂದ ಅನುಜ್ಞೆ ಪಡೆದವರಾಗಿ ಭೂಲೋಕಾದಿಗಳಲ್ಲಿ ಇದ್ದರೂ ಸ್ವಲ್ಪವೂ ದುಃಖವಿಲ್ಲದವರಾಗಿ ಸ್ವರೂಪಾನಂದವನ್ನು ಅನುಭವಿಸುತ್ತಿರುತ್ತಾರೆ (೫) (ಶ್ರೀಹರಿಗೆ ವಸು ಮೊದಲಾದ ದೇವತೆಗಳ ನಾಮವಿದೆ ಎಂಬುವಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ—) ಶ್ರೀಹರಿಯು ಒಬ್ಬನೇ ಎಲ್ಲಾ ದೇವತೆಗಳ ನಾಮವನ್ನು ಧರಿಸಿದವನು, ಎಂಬ ವೇದದಿಂದ ಶ್ರೀಹರಿಗೇನೇ ಮುಖ್ಯವಾಗಿ ವಸು ಮೊದಲಾದ ನಾಮಗಳು. (೬) (ಮೋಕ್ಷವನ್ನು ಬಯಸುವವರು ಶ್ರೀಭಗವಂತನನ್ನು ಪ್ರಾರ್ಥಿಸಬೇಕು ಸ್ವರ್ಗವು ವಸ್ವಾದಿಗಳನ್ನು ಪ್ರಾರ್ಥನೆ ಮಾಡಿಯೂ ಸಿಗುವುದರಿಂದ ಸ್ವರ್ಗವನ್ನಪೇಕ್ಷಿಸುವವರು ಶ್ರೀಹರಿಯನ್ನು ಪ್ರಾರ್ಥಿಸಬೇಕಾಗಿಲ್ಲ, ಎಂದರೆ—) ಪ್ರತಿಕರ್ಮ ಮಾಡುವಾಗಲೂ ಶ್ರೀಹರಿಯನ್ನು ಸ್ಮರಿಸವೆ ಇದ್ದು ಕರ್ಮದ ಕೊನೆಯಲ್ಲಿ ತಾವು ಮಾಡಿದುದನ್ನು ಶ್ರೀಹರಿಯಲ್ಲಿ ಅರ್ಪಿಸುವವರು ತ್ರೈವಿದ್ಯರು. ಅವರು ಸೋಮರಸ ಪಾನಮಾಡಿ ಪಾಪವನ್ನು ಕಳೆದುಕೊಂಡವರು, ಯಾಗಮಾಡಿ ಸ್ವರ್ಗವನ್ನು ಪ್ರಾರ್ಥಿಸಿಕೊಳ್ಳುತ್ತಾರೆ, ಎಂಬ ಪ್ರಮಾಣದಿಂದ ಶ್ರೀಹರಿಯನ್ನು ಸ್ವರ್ಗವನ್ನು ಅಪೇಕ್ಷಿಸುವವರೂ ಕೂಡ ಪ್ರಾರ್ಥಿಸಲೇಬೇಕು. ॥ ೧ ॥

ಪೀ — ಸ್ವರ್ಗವನ್ನು ಬಯಸುವವರೂ ಶ್ರೀಹರಿಯನ್ನು ಪ್ರಾರ್ಥಿಸಬೇಕೆಂದಾದರೆ -ಅವರಿಗೆ ಸಿಗುವ ಫಲವು ನಶ್ವರವಾಗದಿರಬೇಕು, ಎಂದರೆ —

**ಭಾ. ॥ (೧) ಭಗವತ್ಸ್ವರೂಪಸ್ಯ ಸಮ್ಯಗಪರಿಜ್ಞಾನಾದ್ರಾಗಾಚ್ಚ ತೇಷಾಮಂತವತ್ಫಲ(ವ)ತ್ವಂ ॥ (೨) ನತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ (೩) ಗತಾಗತಂ ಕಾಮ**

---

* ಪ್ರಾತಃಸವನ, ಮಾಧ್ಯಂಸವನ, ಸಾಯಂಸವನ ಎಂದು ಮೂರುಕಾಲದಲ್ಲಿ ಮಾಡತಕ್ಕುದು ಅಗ್ನಿಹೋತ್ರವು ವಸ್ವಾದಿಗಳು ಪ್ರಾತಃಸವನಾದಿಗಳಿಗೆ ಅಧಿಪತಿಗಳು ಅವರು ಸಂತುಷ್ಟರಾದರೆ ಆಯಾಯ ಕಾಲದಲ್ಲಿ ಮಾಡತಕ್ಕದನ್ನು ನಿರ್ವಿಘ್ನವಾಗಿ ಮಾಡಿಸಿ ಭೂಲೋಕಾದಿಗಳನ್ನು ಕೊಡುತ್ತಾರೆ

§ ನಿರ್ದುಃಖಾಸ್ತು ಧರಾದಿಷು ॥ ಆತ್ಮೇತ್ಯೇವ ಪರಂ ದೇವಮುಪಾಸ್ಯ ಹರಿಮವ್ಯಯಂ । ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ ॥ ಅತ್ರೈವ ಚ ಸ್ಥಿತಿಸ್ತೇಷಾಂ ಇದುಮೊದಲಾದ ಪ್ರಮಾಣಗಳಿಂದ ಭೂಲೋಕಾದಿಗಳಲ್ಲಿಯೇ ಮುಕ್ತರಾಗಿ ದುಃಖಸಂಪರ್ಕವಿಲ್ಲದ ಸುಖವನ್ನೇ ಉಣ್ಣುತ್ತಾ ಇರುತ್ತಾರೆ

**ಕಾಮಾ ಲಭಂತೇ । ಇತಿ ವಚನಾತ್ ॥ (೪) ಸರ್ವೋತ್ತಮತ್ವಸ್ಯಾಜ್ಞಾನಾದ್ವಿಷ್ಣೋರಂಧಂ ತಮೋ ಭವೇತ್ । ತದ್ದ್ವೇಷಾತ್ಕಿಮು ವಕ್ತವ್ಯಂ ಬ್ರಹ್ಮಾದಿದ್ವೇಷತೋಽಪಿ ವಾ । ತಾರತಮ್ಯಾಪರಿಜ್ಞಾನಾದನುತ್ಥಾನಂ ತಮೋ ಭವೇತ್ ॥ (೫) ಅಪರಾಧಕೃತೇಸ್ತೇಷಾಂ ನಿರಯಂ ತ್ವೇವ ಗಚ್ಛತಿ । ಪೂಜಾಯಾ ಅಕೃತೇಸ್ತೇಷಾಂ ನ ವರ್ಣೇಷು ಜನಿರ್ಭವೇತ್ ॥ ಸಮ್ಯಕ್ಕರ್ಮಾನನುಷ್ಠಾನಾತ್ ಸ್ವರ್ಗಂ ನೈವೋಪಗಚ್ಛತಿ । ಅಪರೋಕ್ಷದೃಶೇರಾನ್ಯಾನ್ಮೋಕ್ಷಂ ನೈವೋಪಗಚ್ಛತಿ ॥ ಇತಿ ಚ ॥ ೨ ॥**

ಅ ॥ (೧) ಭಗವಂತನ ಸ್ವರೂಪವನ್ನು ಚೆನ್ನಾಗಿ ತಿಳಿಯದಿರುವುದರಿಂದಲೂ ನಶ್ವರ ಸುಖಭೋಗಗಳಲ್ಲಿ ಅಭಿಲಾಷೆಯಿದ್ದುದರಿಂದಲೂ ಸ್ವರ್ಗವನ್ನು ಬಯಸುವವರಿಗೆ ನಶ್ವರ ಫಲವು. (೨) ನನ್ನನ್ನು ಯಥಾರ್ಥವಾಗಿ ತಿಳಿಯುವುದಿಲ್ಲ ಅದುಕಾರಣ ಸ್ವರ್ಗಭ್ರಷ್ಟರಾಗುತ್ತಾರೆ (ಆದಕಾರಣ ಶ್ರೀಹರಿಯ ಸ್ವರೂಪವನ್ನು ಚೆನ್ನಾಗಿ ತಿಳಿಯದಿರುವುದರಿಂದ ನಶ್ವರ ಫಲವು ಸಿಗುವುದು) (೩) (ನಶ್ವರ ಭೋಗಾಭಿಲಾಷೆಯಿಂದ ನಶ್ವರ ಫಲವೆಂಬಲ್ಲಿ ಪ್ರಮಾಣ ಹೇಳುತ್ತಾರೆ—) ಐಹಿಕ ಪದಾರ್ಥಗಳಲ್ಲಿ ಅಭಿಲಾಷೆಯಿದ್ದವರು ಸ್ವರ್ಗಕ್ಕೆ ಹೋಗುವುದು, ಅಲ್ಲಿಂದ ಹಿಂತಿರುಗಿ ಬರುವುದು, ಹೀಗೆ ಗಮನ ಆಗಮನವನ್ನು ಹೊಂದುತ್ತಾರೆ. (೪) (ವಿಷ್ಣು ವೈಷ್ಣವರಲ್ಲಿ ದ್ವೇಷ ಮಾಡದೆ ತಾರತಮ್ಯ ಜ್ಞಾನವಿದ್ದು ವಿಷ್ಣುಸರ್ವೋತ್ತಮತ್ವಜ್ಞಾನವೇ ಸಮ್ಯಕ್ ಜ್ಞಾನವು. ಇದನ್ನು ಅವಶ್ಯವಾಗಿ ಶ್ರೇಯಸ್ಸನ್ನಪೇಕ್ಷಿಸುವವರು ಹೊಂದಬೇಕು, ಇಲ್ಲವಾದರೆ ಅನರ್ಥವದೆ ಎನ್ನುತ್ತಾರೆ—) ವಿಷ್ಣುವು ಸರ್ವೋತ್ತಮನು, ಎಂಬ ಜ್ಞಾನವಿಲ್ಲದಿರುವುದು ಮಾತ್ರವಲ್ಲದೆ ಸರ್ವೋತ್ತಮನಲ್ಲವೆಂಬ ಜ್ಞಾನದಿಂದ ಅಂಧಂತಮಸ್ಸನ್ನು ಹೊಂದುತ್ತಾನೆ. ಆತನಲ್ಲಿ ದ್ವೇಷಮಾಡೋಣದರಿಂದ ಅಂಧಂತಮಸ್ಸು ಆಗಿಯೇ ಆಗುವುದು. ಹಾಗೆಯೇ ಹರಿಭಕ್ತರಾದ ಬ್ರಹ್ಮಾದಿಗಳಲ್ಲಿ ದ್ವೇಷಮಾಡೋಣದರಿಂದಲೂ ತಾರತಮ್ಯ ಜ್ಞಾನವಿಲ್ಲದಿರುವುದರಿಂದಲೂ ಎಂದಿಗೂ ಹಿಂತಿರುಗಿ ಬಾರದಿರುವ ಅಂಧಂತಮಸ್ಸಿನಲ್ಲಿ ಬೀಳುವರು (೫) (ಬ್ರಹ್ಮಾದಿಗಳನ್ನು ದ್ವೇಷಿಸಿ ಅಗ್ನಿಹೋತ್ರಾದಿಗಳನ್ನು ಚೆನ್ನಾಗಿ ಮಾಡಿದರೂ ಕದಾಚಿತ್ ಅವರನ್ನು ಪೂಜಿಸದೆ, ಅವರಿಗೆ ಅಪರಾಧ ಮಾಡಿದರೆ ಅನಿತ್ಯನರಕದಲ್ಲಿ ಬೀಳುತ್ತಾನೆ. (ಅಂಧಂತಮಸ್ಸಿನಲ್ಲಿ ಬೀಳಲಾರನು.) ಅವರಿಗೆ ಪೂಜೆ ಮಾಡದಿರುವುದರಿಂದ ಬ್ರಾಹ್ಮಣಾದಿ ಜಾತಿಯಲ್ಲಿ ಹುಟ್ಟಲಾರನು. ವಿಹಿತಕರ್ಮಗಳನ್ನು ಸರಿಯಾಗಿ ಮಾಡದಿರುವುದರಿಂದ ಸ್ವರ್ಗವನ್ನು ಸರ್ವಥಾ ಹೊಂದಲಾರನು. (ವಿಷ್ಣುವೈಷ್ಣವರಲ್ಲಿ ದ್ವೇಷಮಾಡದೆ ತಾರತಮ್ಯಜ್ಞಾನವಿದ್ದು ವಿಷ್ಣುವು ಸರ್ವೋತ್ತಮನೆಂಬ ಜ್ಞಾನವೇ ಯಥಾರ್ಥಜ್ಞಾನವು ಆ ಜ್ಞಾನದಿಂದಲೇ ಮೋಕ್ಷವು ಎಂದಾದರೆ ಅಂತಹ ಪರೋಕ್ಷಜ್ಞಾನವುಳ್ಳವರಿಗೆ ಏಕೆ ಮೋಕ್ಷವಾಗುವುದಿಲ್ಲ ಎಂದರೆ—) (ಪರೋಕ್ಷಜ್ಞಾನದಿಂದ ಮೋಕ್ಷವು ಆಗಲಾರದು. ಅಪರೋಕ್ಷ ಜ್ಞಾನದಿಂದಲೇ ಮೋಕ್ಷವು ಲಭಿಸುವುದು.) ಅಂತಹ ಅಪರೋಕ್ಷ ಜ್ಞಾನವು ಇಲ್ಲದಿರುವುದರಿಂದ ಮೋಕ್ಷವನ್ನು ಹೊಂದುವುದೇ ಇಲ್ಲ. ॥ ೨ ॥

ಟೀ—ಮೊದಲು ಮೊದಲು ಹೇಳಿದ ದೋಷವಿರುದ್ಧಗಳಾದ ಶ್ರೀಹರಿಯು ಸರ್ವೋತ್ತಮನು. ಇದು ಮೊದಲಾದ ಗುಣಗಳುಳ್ಳವರಿಗೆ ಮೇಲೆ ಹೇಳಿದ ದ್ವೇಷ ಮೊದಲಾದ ದೋಷಗಳು ಕೆಲವು ವೇಳೆ ಬಂದರೆ, ಅವುಗಳಿಂದ ನರಕಪ್ರಾಪ್ತಿಯಾಗುವುದಿಲ್ಲವೆನ್ನುತ್ತಾರೆ—

**ಭಾ. ॥ (೧) ಪೂರ್ವಪೂರ್ವಗುಣೈರ್ದೋಷಾ ನ ಶಕ್ತಾ ಉತ್ತರೋತ್ತರಾಃ ॥ (೨) ಸ್ಥಾನದ್ವಯೋತ್ತರೇ ಶಕ್ತಾ ಮೋಕ್ಷೋ ನಾನಪರೋಕ್ಷಿಣಃ ॥ (೩) ವಿರುದ್ಧರಾಗಿಣಾಂ**

**ನೈವ ಹ್ಯಪರೋಕ್ಷದೃಶಿರ್ಭವೇತ್ । ಯಾವದ್ರಾಗವಿನಾಶಃ ಸ್ಯಾದ್ವಿರಕ್ತೋ ಭಕ್ತಿಸಂಯುತಃ। ಸರ್ವದೈವಾಪ್ರಮತ್ತಶ್ಚ ಪಶ್ಯೇದೇವ(ದ್ದೇವಂ)ಹರಿಂ ಪರಂ ॥(೪)ಅವಿಸ್ಮೃತಿಸ್ಸದಾ ವಿಷ್ಣೋ-ರನ್ಯಥಾಜ್ಞಾನವರ್ಜನಂ । ಶಾಸ್ತ್ರಾಭ್ಯಾಸಃ ಸದೋದ್ಯೋಗಾಚ್ಛ್ರವಣಾಚ್ಚ ವಿಚಾರತಃ ॥ ನಿಷಿದ್ಧಕರ್ಮಣಾಂ ತ್ಯಾಗಃ ಸ್ವಧರ್ಮಸ್ಯ ಕೃತಿಸ್ಸದಾ । ಅಪ್ರಮಾದ ಇತಿ ಪ್ರೋಕ್ತಃ ॥೩॥**

ಅ ॥ (೧) ಮೊದಲು ಮೊದಲು ಹೇಳಿದ ದೋಷಗಳಿಗೆ ವಿರುದ್ಧಗಳಾದ, ಶ್ರೀಹರಿಯು ಸರ್ವೋತ್ತಮನು ಎಂಬ ಜ್ಞಾನವೇ ಮೊದಲಾದ ಗುಣಗಳಿದ್ದು. ಮೇಲೆಹೇಳಿದ ದ್ವೇಷ ಮೊದಲಾದ ದೋಷಗಳು ಕದಾಚಿತ್ ಬಂದರೆ-- ಅವುಗಳಿಂದ ನರಕಾದಿಗಳು ಆಗಲಾರವು. (೨) (ಹಾಗಾದರೆ ಹರಿಸರ್ವೋತ್ತಮತ್ವ ಜ್ಞಾನ, ಶ್ರೀಹರಿಭಕ್ತಿ, ಬ್ರಹ್ಮಾದಿಗಳಲ್ಲಿ ಭಕ್ತಿ, ತಾರತಮ್ಯ ಜ್ಞಾನವಿದ್ದವರೂ ಕೆಲವುವೇಳೆ ಬ್ರಹ್ಮಾದಿಗಳಿಗೆ ಅಪರಾಧಮಾಡಿದರೆ ಅವರಿಗೆ ಆ ದೋಷಗಳಿಂದ ನರಕಾದಿಗಳ ಪ್ರಾಪ್ತಿಯಾಗುವ ಪ್ರಯುಕ್ತ ಹಿಂದೆ ಹೇಳಿದ್ದು ಅಯುಕ್ತವೆಂದರೆ-) (1) ಹರಿಸರ್ವೋತ್ತಮತ್ವಜ್ಞಾನವಿಲ್ಲದಿರುವುದು, ಶ್ರೀಹರಿದ್ವೇಷ ಒಂದು (2) ಬ್ರಹ್ಮಾದಿಗಳಲ್ಲಿ ದ್ವೇಷ, ಬ್ರಹ್ಮಾದಿಗಳಲ್ಲಿ ನೀಚೋಚ್ಚಭಾವಜ್ಞಾನವಿಲ್ಲದಿರುವುದು. ಇನ್ನೊಂದು. ಅಥವಾ (1) ಹರಿಸರ್ವೋತ್ತಮತ್ವಜ್ಞಾನವಿಲ್ಲದಿರುವುದು, ಬ್ರಹ್ಮಾದಿಗಳಲ್ಲಿ ತಾರತಮ್ಯಜ್ಞಾನವಿಲ್ಲದಿರುವುದು ಒಂದು, (2) ಶ್ರೀಹರಿಯಲ್ಲಿಯೂ ಬ್ರಹ್ಮಾದಿಗಳಲ್ಲಿಯೂ ದ್ವೇಷವು ಇನ್ನೊಂದು. ಇವುಗಳಲ್ಲಿ ಪ್ರಥಮ ಪಕ್ಷ, ದ್ವಿತೀಯಪಕ್ಷ, ಈ ಎರಡು ಪಕ್ಷಗಳಲ್ಲಿಯೂ ಎರಡನೇದ್ದು ಅಂದರೆ— (೨) ಬ್ರಹ್ಮಾದಿಗಳಲ್ಲಿ ದ್ವೇಷ, ಅವರಲ್ಲಿ ತಾರತಮ್ಯ ಪರಿಜ್ಞಾನವಿಲ್ಲದಿರುವುದು. ಮತ್ತು ಶ್ರೀಹರಿ, ಬ್ರಹ್ಮಾದಿಗಳಲ್ಲಿ ದ್ವೇಷವು, ಈ ಬ್ರಹ್ಮಾದ್ಯಪರಾಧಾದಿ ದೋಷಗಳು ಕದಾಚಿತ್ ಉಂಟಾದರೆ ಹರಿಸರ್ವೋತ್ತಮತ್ವಜ್ಞಾನವುಳ್ಳವರಿಗೂ ನರಕಾದ್ಯನರ್ಥಗಳನ್ನು ಮಾಡಲಿಕ್ಕೆ ಶಕ್ತಗಳೇ ಆಗುತ್ತವೆ. (ಇದಕ್ಕೆ ದೃಷ್ಟಾಂತಕೊಡುತ್ತಾರೆ—) ಹರಿಸರ್ವೋತ್ತಮತ್ವಾದಿಜ್ಞಾನವುಳ್ಳವರಿಗೂ ಅಪರೋಕ್ಷಜ್ಞಾನವೊಂದಿಲ್ಲದಿದ್ದರೆ ಮೋಕ್ಷವು ಹೇಗೆ ಸಿಗಲಾರದೋ, ಹಾಗೆಯೇ ಪ್ರಕೃತದಲ್ಲಿಯೂ ಹರಿಸರ್ವೋತ್ತಮತ್ವಾದಿಜ್ಞಾನವಿದ್ದವರಿಗೂ ಅಪರಾಧವು ಕದಾಚಿತ್ ಉಂಟಾದರೆ ನರಕಾದಿಗಳು ಆಗುವುವು. (೩) (ಹರಿಸರ್ವೋತ್ತಮತ್ವಾದಿಜ್ಞಾನವುಳ್ಳವರಿಗೆ ಅಪರೋಕ್ಷಜ್ಞಾನವು ಏಕೆ ಹುಟ್ಟುವುದಿಲ್ಲವೆಂದರೆ) ದುರ್ವಿಷಯಗಳಲ್ಲಿ ಇಚ್ಛೆಯುಳ್ಳವರಿಗೆ ಅಪರೋಕ್ಷಜ್ಞಾನವು ಹುಟ್ಟಲಾರದು. (ಅಂತಹವರಿಗೆ ಯಾವಾಗ ಹುಟ್ಟುವುದೆಂದರೆ) ನಿಷಿದ್ಧವಸ್ತುಗಳಲ್ಲಿ ಅಭಿಲಾಷೆಯಿಲ್ಲದವರು, ವೈರಾಗ್ಯವುಳ್ಳವರು, ವಿಹಿತಕರ್ಮಾನುಷ್ಠಾನಗಳಲ್ಲಿ ಜಾಗ್ರತೆಯುಳ್ಳವರು ಅಂತಹವರು ಸರ್ವೋತ್ತಮನಾದ ಶ್ರೀಹರಿಯನ್ನು ಪ್ರತ್ಯಕ್ಷೀಕರಿಸುವರು (೪) ಸರ್ವದಾ ವಿಷ್ಣುವನ್ನು ಮರೆಯದಿರುವಿಕೆ, ಮಿಥ್ಯಾಜ್ಞಾನವಿಲ್ಲದಿರುವಿಕೆ, ಯಾವಾಗಲೂ ಶಾಸ್ತ್ರಶ್ರವಣಾದಿ ವಿಚಾರಗಳಿಂದ ಶಾಸ್ತ್ರಗಳ ಅಭ್ಯಾಸವು, ನಿಷಿದ್ಧಕರ್ಮಗಳನ್ನು ಬಿಡುವುದು, ತಮ್ಮ ಧರ್ಮಗಳನ್ನು ಮಾಡಿಕೊಂಡಿರುವುದು ಇವುಗಳು ಅಪ್ರಮಾದ ಎನ್ನಿಸುತ್ತವೆ. ॥ ೩ ॥

ಹೀ --ಶಾಸ್ತ್ರಾಭ್ಯಾಸಮಾಡಬೇಕೆಂಬ ಹೇಳಿದ ಶಾಸ್ತ್ರವೆಂದರೆ -

**ಭಾ. ॥ (೧) ಶಾಸ್ತ್ರಂ ವೇದಾಸ್ತು ಪಂಚ ಚ । ಭಾರತಂ ಪಂಚರಾತ್ರಂ ಚ ಮೂಲ-ರಾಮಾಯಣಂ ತಥಾ ॥ ಪುರಾಣಂ ಭಾಗವತಂ ಚೈವ ಪಂಚಮೋ ವೇದ ಉಚ್ಯತೇ । ಇತಿ ಚ ॥ (೨) ತ್ರಿಲೋಕಪ್ರಾಪ್ತಿಪರಿಘಾಸ್ತ್ರಯಃ ಸಂತಿ ಸನಾತನಾಃ । ತೇಷಾಮುಗ್ರ್ಯಾದಿಗೋ ವಿಷ್ಣುರಪಹಂತಾ ಸ್ಮೃತೋ ಭವೇತ್ ॥ (೩) ಮೃತಸ್ಸನ್ ಸುಖಭೋಗಾಯ ಯತ್ರ ಗಚ್ಛತಿ ತತ್ರ ಹ । ಏಕೈಕಃ ಪರಿಘೋಽಗ್ರೇ ಸ್ಯಾದ್ಗತೇ ತಸ್ಮಿಂಸ್ತು ವಿಷ್ಣುನಾ ॥ ಯಜಮಾನಃ ಪೃಥಿವ್ಯಾದಿಲೋಕಾನ್ಭೋಗಾಯ ಯಾತಿ ಹಿ । ಇತಿ ಚ ॥ (೪) ಯಸ್ತ್ರಾತಿ ಯಜ್ಞಮಾತಾರಂ**

**ಯಜ್ಞಮಾತ್ರಾ ಹರಿಸ್ತು ಸಃ । ತಮೇವಂ ವೇತ್ತಿ ಯೋ ಭಕ್ತೋ ಯಾತಿ ಸ್ವರ್ಮುಕ್ತಿ-ಮೇವ ಚ ॥ ಇತಿ ಚ ॥ ೪–೨೪, ೨೫, ೨೬ ॥ ॥ ೪ ॥**

ಅ ॥ (೧) ಐದು ವೇದಗಳೇ ಶಾಸ್ತ್ರವೆನಿಸುತ್ತವೆ (ಋಗ್ವೇದಾದಿಗಳು ನಾಲ್ಕು ವೇದಗಳೆಂದು ಪ್ರಸಿದ್ಧಿಯಿರುವುದು. ಐದನೇ ವೇದವು ಯಾವುದೆಂದರೆ—) ಭಾರತ, ಪಂಚರಾತ್ರಾಗಮ, ಮೂಲರಾಮಾಯಣ, ಶ್ರೀಹರಿಯು ಸರ್ವೋತ್ತಮನೆಂದು ಹೇಳುವ ಪುರಾಣ ಇವುಗಳು ಐದನೇ ವೇದವೆನಿಸುತ್ತವೆ. (ಏವಂಚ ಭಾಗವತಾದಿ ವೈಷ್ಣವ ಪುರಾಣಗಳೇ ಐದನೇ ವೇದವು) (೨) (**ಅಪಜಹಿ ಪರಿಘಂ**) ಎಂದು ಮೂರು ಖಂಡಗಳಲ್ಲಿದ್ದ ಪರಿಘಶಬ್ದದ ಅರ್ಥಹೇಳುತ್ತಾರೆ—) ಭೂಲೋಕ ಮೊದಲಾದ ಮೂರು ಲೋಕಗಳಲ್ಲಿ ಮೋಕ್ಷಹೊಂದಲಿಕ್ಕೆ ತಡೆಯಾದ ಪ್ರಸಿದ್ಧಬಾಗಿಲಿನ ಕೀಲಿಗೆ ಸದೃಶಗಳಾದವುಗಳು ಒಂದೊಂದು ಲೋಕ ಹೊಂದಲಿಕ್ಕೆ, ಒಂದೊಂದು ಹೀಗೆ ಅನಾದಿಗಳಾದ ಮೂರು ಪ್ರತಿಬಂಧಕಗಳಿವೆ. ಅವುಗಳನ್ನು ಅಗ್ನ್ಯಾದಿಗಳಲ್ಲಿ ಅಂತರ್ಗತನಾದ ವಿಷ್ಣುವು ನಾಶಗೊಳಿಸುವನು. (೩) ನಾವು ಈಗ ಭೂಮಿಯಲ್ಲಿದ್ದರೆ ನಮಗೆ ತಡೆಯಾದ ಪರಿಘವು ಕಾಣದಿರುವುದರಿಂದ ಮೂರು ಪರಿಘಗಳು ಇವೆ ಎಂಬುದು ಹೇಗೆ ಕೂಡುತ್ತದೆ? ಮತ್ತು ಆ ಪರಿಘವನ್ನು ಹೋಗಲಾಡಿಸುವುದಕ್ಕಾಗಿ ಏಕೆ ಪ್ರಾರ್ಥಿಸುವುದು ಎಂದರೆ—) ಮರಣಾನಂತರ ಪೂರ್ಣಸುಖವನ್ನು ಅನುಭವಿಸುವುದಕ್ಕಾಗಿ ಯಜಮಾನನು ಯಾವ ಲೋಕಕ್ಕೆ ಹೋಗುತ್ತಾನೋ ಅಲ್ಲಿ ಆಯಾಯ ಯಜಮಾನನ ಇದಿರು ಒಂದೊಂದು ಪರಿಘವು ಇದೆ ಅದನ್ನು ವಿಷ್ಣುವು ನಾಶಗೊಳಿಸಿದಮೇಲೆ ಸುಖಭೋಗಕ್ಕಾಗಿ ಭೂಲೋಕಾದಿಗಳಿಗೆ ಹೋಗುತ್ತಾನೆ (ಏವಂಚ ಲೋಕಪ್ರಾಪ್ತಿಯು ಸಿದ್ಧವಾಗಿದ್ದರೂ ಆ ಲೋಕಗಳಲ್ಲಿದ್ದ ಪೂರ್ಣಸುಖವನ್ನುಣ್ಣುವುದಕ್ಕಾಗಿ ಪರಿಘವನ್ನು ನಾಶಗೊಳಿಸಬೇಕೆಂಬ ಉದ್ದೇಶದಿಂದ ಶ್ರೀಹರಿಯನ್ನು ಪ್ರಾರ್ಥಿಸಲೇಬೇಕು.) (೪) (೨೬ನೇ ಖಂಡದಲ್ಲಿದ್ದ **ಯಜ್ಞಸ್ಯ ಮಾತ್ರಾಂ** ಇತ್ಯಾದಿಗಳ ಅರ್ಥಹೇಳುತ್ತಾರೆ–) ಯಾಗವನ್ನು ಮಾಡತಕ್ಕ ಯಜಮಾನನನ್ನು ಶ್ರೀಹರಿಯು ರಕ್ಷಿಸುವುದರಿಂದ ಶ್ರೀಹರಿಯೇ ಯಜ್ಞಮಾತ್ರಾ ಎನಿಸುತ್ತಾನೆ ಆ ಶ್ರೀಹರಿಯನ್ನು ಹಿಂದೆಹೇಳಿದ ಪ್ರಕಾರ ತಿಳಿಯುವ ಭಕ್ತನು ಶ್ರೀಹರಿಯ ಪ್ರಸಾದದಿಂದ ಪರೋಕ್ಷಜ್ಞಾನಿಯಾದರೆ ಸ್ವರ್ಗವನ್ನೂ ಅಪರೋಕ್ಷಜ್ಞಾನಿಯಾದರೆ ಮೋಕ್ಷವನ್ನೂ ಹೊಂದುತ್ತಾನೆ. ॥ ೨೪ ॥ ೨೫ ॥ ೨೬ ॥ ॥ ೪ ॥

**ಇಪ್ಪತ್ತಾರನೇ ಖಂಡವು ಮುಗಿಯಿತು.**

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಚ್ಛಾಂದೋಗ್ಯ-ಉಪನಿಷದ್ಭಾಷ್ಯೇ ಚತುರ್ಥೋಽಧ್ಯಾಯಃ ॥ ೪ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿತವಾದ ಶ್ರೀಮಚ್ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ನಾಲ್ಕನೇ ಅಧ್ಯಾಯವು ಮುಗಿಯಿತು. ॥ ೪ ॥

**ದುರಂತದುರಿತಧ್ವಾಂತವಿಪಾಟನಪಟೀಯಸೇ ।**
**ಬಾದರಾಯಣಸಂಜ್ಞಾಯ ಪರಸ್ಮೈ ಬ್ರಹ್ಮಣೇ ನಮಃ ॥**



|| ಶ್ರೀಃ ||

# ಐದನೇ ಅಧ್ಯಾಯವು

**ಸೂರ್ಯಾದಿಸ್ಥಂ ಹರಿಂ ನಾನಾರೂಪಂ ವಸ್ವಾದಿಸೇವಿತಂ ।**
**ಸೂರ್ಯಾದಿಪಾಲಿತದ್ವಾರಂ ವಂದೇಽಧ್ಯಾತ್ಮಾಧಿದೈವಗಂ ॥**

## ೧ನೇ ಖಂಡವು

ಪೀ—ನಾಲ್ಕನೇ ಅಧ್ಯಾಯದ ಅಂತ್ಯದಲ್ಲಿ, ವಸ್ವಾದಿದೇವತೆಗಳನ್ನು ಯಜಮಾನನು ಉಪಾಸನೆ ಮಾಡಿದರೆ ಅವರು ಉಪಾಸಕನಿಗೆ ನಿರ್ವಿಘ್ನವಾಗಿ ಸ್ವರ್ಗಾದಿಗಳನ್ನು ಕೊಡುತ್ತಾರೆಂದು ಹೇಳಿದೆ ಈಗ ಆ ದೇವತೆಗಳು ಆದಿತ್ಯನೊಳಗಣ ಶ್ರೀಹರಿಯನ್ನು ಉಪಾಸನೆಮಾಡಿಯೇ ವಸ್ವಾದಿಪದವಿಗಳನ್ನು ಹೊಂದಿರುವುದರಿಂದ ಆ ಶ್ರೀಹರಿಯ ಮಹಿಮೆಯನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ—

**ಉ. || ಓಂ || ಅಸೌ ವಾ ಆದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನವಂಶೋಽಂತರಿಕ್ಷಮಪೂಪೋ ಮರೀಚಯಃ ಪುತ್ರಾಃ || ೧ ||**

**ಅ** || ಎಲ್ಲರಿಗಿಂತ ಆದಿಯಲ್ಲಿರುವವನು, ವ್ಯಾಪ್ತನು, ಜ್ಞಾನರೂಪನು, ಅದುಕಾರಣ ಆದಿತ್ಯನೆನಿಸಿಕೊಂಡ ಆದಿತ್ಯನೊಳಗಣ ಶ್ರೀಹರಿಯು ಸುಖಪೂರ್ಣನಾದುದರಿಂದ **ಮಧು** ಎನಿಸಿಕೊಂಡು,ದೇವತೆಗಳಿಗೆ ಮುಖ್ಯಾಶ್ರಯ (ಮುಖ್ಯಕಾರಣ) ನಾದುದರಿಂದ ದೇವಮಧು ಎನಿಸುತ್ತಾನೆ. ಆ ಆದಿತ್ಯನೆನಿಸಿದ ಶ್ರೀಹರಿಗೆ ಪ್ರಕಾಶಾದಿಗುಣಗಳಿಂದ **ದ್ಯು** ಎನಿಸಿಕೊಂಡ. ಸ್ವರ್ಗಕ್ಕೆ ಅಧಿಪತಿಯಾದ ಲಕ್ಷ್ಮೀದೇವಿಯು ಭಕ್ತಿಪೂರ್ವಕವಾಗಿ ಸ್ವಲ್ಪ ಬದಿಗೆ ನಿಂತು ನಮಸ್ಕರಿಸಿ ಶ್ರೀಹರಿಯನ್ನು ತಾನು ವಶೀಕರಿಸಿಕೊಂಡಿರುವುದರಿಂದ ತಿರಶ್ಚೀನವಂಶಃ ಎನಿಸಿಕೊಂಡಿರುತ್ತಾಳೆ. ತನ್ನೊಳಗೆ ಶ್ರೀಹರಿಯನ್ನು ಚೆನ್ನಾಗಿ ನೋಡುವುದರಿಂದ ಅಂತರಿಕ್ಷನೆನಿಸಿಕೊಂಡ ಅಂತರಿಕ್ಷದಲ್ಲಿದ್ದ ವಾಯುದೇವರು ಹೊಂದಲರ್ಹನಾದ ಶ್ರೀಹರಿಯು ಸಮೀಪದಲ್ಲಿದ್ದ ಪ್ರಯುಕ್ತ ಅಂದರೆ ಶ್ರೀಹರಿಯು ವಾಯುದೇವರಲ್ಲಿ ವಿಶೇಷವಾಗಿ ಸನ್ನಿಧಾನವನ್ನು ಇಟ್ಟಪ್ರಯುಕ್ತ ಅಪೂಪ ಎನಿಸಿಕೊಂಡಿರುವರು ಸುಖಾನುಭವವನ್ನುಂಟುಮಾಡುವ ವಸು ರುದ್ರ ಆದಿತ್ಯಾದಿಗಳ ಮಕ್ಕಳಾದ ಮರೀಚಿ ಮೊದಲಾದ ಋಷಿಗಳು ಸೂರ್ಯಕಿರಣಗಳಲ್ಲಿರುವವರು || ೧ ||

**ಭಾ. || ಓಂ || (೧) ಯ ಆದಿತ್ಯಗತೋ ವಿಷ್ಣುಃ ಸ ಏವ ಮಧುನಾಮಕಃ । ಮದಧಿರ್ಮಧ್ವಿತಿ ಪ್ರೋಕ್ತೋ ಮದಃ ಸುಖಮಿಹೋಚ್ಯತೇ ॥ (೨) ಅ ಇತ್ಯಾಧಿಕ್ಯಮುದ್ದಿಷ್ಟಂ ಮಜ್ಞಾನತತಿರುಚ್ಯತೇ । ತದ್ವತ್ತ್ವಾತ್ತತಿರುದ್ದಿಷ್ಟಾ ತೇನಾನುಭವ ಈರಿತಃ ॥ (೩) ಅಧಿಕೋಽನುಭವೋ ಯಸ್ಯ ಸರ್ವಸ್ಮಾದೀಪ್ಸಿತಾದಪಿ । ಸೋಽಯಂ ಮದ ಇತಿ ಪ್ರೋಕ್ತಃ ಸರ್ವಂ ಹಿ ಸುಖಸಾಧನಂ ॥ ತತ್ಪೂರ್ಣೋ ಮಧುನಾಮಾ ಸ್ಯಾತ್ತೃತಿಯೋಽತಿಶಯಾರ್ಥಕಃ । ದೇವಾನಾಮುಪಜೀವ್ಯತ್ವಾತ್ಸ ದೇವಮಧುನಾಮಕಃ ॥ (೪) ಆದಿತ್ವಾದಾ(ಚ್ಚಾ) ತತತ್ವಾಚ್ಚ ಜ್ಞಾನರೂಪತ್ವತಸ್ತಥಾ । ಆದಿತ್ಯ ಇತಿಸಂಪ್ರೋಕ್ತಃ ॥ (೫) ಪ್ರಸಿದ್ಧಮಧುವಚ್ಚ ಸಃ । ತಿರೋವಂಶಾದಿಸಂಯುಕ್ತೋ ದ್ಯುನಾಮ್ನಾ ಚ ದ್ಯುಸಂಸ್ಥಿತಾ ॥ ಪ್ರಕಾಶಾದಿಗುಣೈಃ**

**ಶ್ರೀಸ್ತು ವಾಯೋರಾಶ್ರಯರೂಪತಃ । ತಿರೋವಂಶ ಇತಿ ಪ್ರೋಕ್ತಾ ಮಧ್ವಪೂಪಸ್ತು ಮಾರುತಃ ॥ ತಸ್ಮಿನ್ಸನ್ನಿಹಿತೋ ವಿಷ್ಣುರ್ವಿಶೇಷೇಣ ಯತಃ ಸದಾ । ಸೋಽಂತರಿಕ್ಷಮಿತಿ ಪ್ರೋಕ್ತಃ ಸ್ವಾಂತಃ ಸಮ್ಯಗ್ಪರೀಕ್ಷಣಾತ್ । ಅಂತರಿಕ್ಷಸ್ಥಿತಶ್ಚಾಸೌ ॥ ೧ ॥**

ಅ ॥ (೧) ಸೂರ್ಯನೊಳಗಣ ವಿಷ್ಣುವೇ ಮಧು ಎನಿಸುತ್ತಾನೆ. (ಶ್ರೀಹರಿಗೆ ಮಧುಎಂಬ ನಾಮವು ಹೇಗೆ ಕೂಡುತ್ತದೆ? ಎಂದರೆ—) ಮದಃ=ಸುಖವು ಅಸ್ಮಿನ್ ಧೀಯತೇ ಎಂಬ ಅರ್ಥದಿಂದ ಮಧು=ಸುಖಾಶ್ರಯನು. (೨) (ಹೀಗೆ ಸಂಕ್ಷೇಪವಾಗಿ ಮಧುಶಬ್ದದ ಅರ್ಥಹೇಳಿ ಈಗ ವಿಸ್ತಾರವಾಗಿ ಹೇಳುತ್ತಾರೆ—) **ಮದ** ಮ, ತ್, ಅ, ಎಂಬಲ್ಲಿದ್ದ **ಅ** ಎಂಬುದಕ್ಕೆ ಆಧಿಕ್ಯವೆಂದರ್ಥವು. **ಮಾಙ್**ಮಾನೆ ಎಂಬ ಧಾತುವಿನಿಂದ **ಮ** ಎಂಬುದಕ್ಕೆ ಜ್ಞಾನವೆಂದರ್ಥ. ತನುವಿಸ್ತಾರೇ ಎಂಬ ಧಾತುವಿನಿಂದ ತ್ ಎಂಬುದಕ್ಕೆ ತತಿ=ವಿಸ್ತಾರವೆಂದರ್ಥವು. (ಇಲ್ಲಿ ಜ್ಞಾನದ ವಿಸ್ತಾರವು ಎಂದರ್ಥವಲ್ಲ. ಪರಂತು ಜ್ಞಾನದಿಂದ ಪೂರ್ಣತ್ವವು. ಅಂದರೆ ಜ್ಞಾನವಿರುವಿಕೆಯು. ಅಧಿಕ ಜ್ಞಾನವಿಷಯವೆಂದುಕ್ತವಾಯಿತು. ಭ್ರಮಾದಿಗಳಲ್ಲಿರುವ ಕೇವಲ ಪರೋಕ್ಷ ಜ್ಞಾನಕ್ಕೆ ವಿಷಯವಾದುದು ಸುಖವಾಗಲಾರದೆಂದರೆ—ಜ್ಞಾನಶಬ್ದದಿಂದ ಸಾಕ್ಷಿಯನ್ನು ಇಟ್ಟುಕೊಳ್ಳಬೇಕು. (ಸಾಕ್ಷಿಗೆ ಯಥಾರ್ಥಜ್ಞಾನಾನುಭವ ವಿನಹ ಭ್ರಮೆಯು ಬರಲಾರದು.) (೩) (ಅಕ್ಷರಗಳ ಅರ್ಥ ಹೇಳಿ ಪದದ ಅರ್ಥಹೇಳುತ್ತಾರೆ—) ಇಷ್ಟವಾದ ಎಲ್ಲಾವಸ್ತುಗಳಿಂದಲೂ ಯಾವುದರದ್ದು ಹೆಚ್ಚು ಸುಖಾನುಭವವೋ, ಅದು ಮದನೆನ್ನಿಸುತ್ತದೆ ಹೆಂಡತಿ ಮೊದಲಾದವರು ಸುಖವನ್ನು ಹುಟ್ಟಿಸುವವರು. ಶ್ರೀಹರಿಯು ಸುಖಪೂರ್ಣನು ಅದುಕಾರಣ ಮಧು ಎನಿಸುತ್ತಾನೆ. (ಮದಧಿ(ಮಧಿ)ಯೇ ಮಧು ಎಂದು ಹೇಳಿದ ಪ್ರಕಾರ ಸುಖಾಶ್ರಯನೆಂದಿಷ್ಟುಮಾತ್ರ ಸಿಗುತ್ತದೆ. ಸುಖಪೂರ್ಣ ಎಂಬ ಅರ್ಥವು ಸಿಗುವುದಿಲ್ಲವೆಂದರೆ—) ಮಧಿ ಎಂದು ಹೇಳದೆ ಇಕಾರಬಿಟ್ಟು ಇಕಾರಕ್ಕಿಂತ ಮೂರನೇ ಅಕ್ಷರವಾದ ಉಕಾರವನ್ನು ಮಧಿ ಎಂದು ಇದ್ದುದನ್ನು ಮಧು ಎಂದು ಹೇಳಿದುದರಿಂದ ಅತಿಶಯ=ಅಧಿಕವೆಂಬ ಅರ್ಥವು ಸಿಗುತ್ತದೆ. ಏವಂಚ ಸುಖಪೂರ್ಣನೆಂದು ಅರ್ಥವು ಶ್ರೀಹರಿಯೇ ದೇವತೆಗಳಿಗೆ ಮುಖ್ಯಾಶ್ರಯನಾದುದರಿಂದ ದೇವಮಧು ಎನಿಸುತ್ತಾನೆ. (೪) ಶ್ರೀಹರಿಯು ಎಲ್ಲರಿಗೂ ಕಾರಣನಾದುದರಿಂದ **ಆದಿ**ಯೆಂದೂ. ಸರ್ವತ್ರ ವ್ಯಾಪ್ತನಾದುದರಿಂದ **ತ್** ಎಂದೂ, ಜ್ಞಾನರೂಪನಾದುದರಿಂದ **ಯ** ಎಂದೂ ಹೀಗೆ ಆದಿತ್ಯ ಎನಿಸುತ್ತಾನೆ (೫) ಪ್ರಸಿದ್ಧವಾದ ಜೇನಿನಂತೆ ಶ್ರೀಹರಿಯು ಸಂತೋಷಗೊಳಿಸುವವನು, ಅದುಕಾರಣ ತಿರೋವಂಶಾದಿಗಳಿಂದೊಡಗೂಡಿದವನು. ಪ್ರಕಾಶಾದಿಗುಣಗಳಿಂದ ದ್ಯು ಎನಿಸಿಕೊಂಡ ದ್ಯುಲೋಕದಲ್ಲಿರುವ ಲಕ್ಷ್ಮೀದೇವಿಯು ಅಪೂಪವೆಂಬ ವಾಯುದೇವರಿಗೆ ಆಶ್ರಯಳಾದುದರಿಂದ ತಿರೋವಂಶ ಎನಿಸುತ್ತಾಳೆ. ವಾಯುದೇವರು ಶ್ರೀಹರಿಯನ್ನು ವಿಶೇಷವಾಗಿ ಆಶ್ರಯಿಸುತ್ತಾ ಸದಾ ಭಗವತ್ಸನ್ನಿಧಾನ ವಿಶೇಷವುಳ್ಳವರಾದುದರಿಂದ ಅಪೂಪ ಎನಿಸುತ್ತಾರೆ. ವಾಯುದೇವರು ತನ್ನ ಹೃದಯದೊಳಗೆ ಶ್ರೀಹರಿಯನ್ನು ಸರಿಯಾಗಿನೋಡುವುದರಿಂದಲೂ ಅಂತರಿಕ್ಷಲೋಕದಲ್ಲಿದ್ದಪ್ರಯುಕ್ತವೂ ಅಂತರಿಕ್ಷ ಎನಿಸಿಕೊಳ್ಳುತ್ತಾರೆ. ॥ ೧ ॥

**ಭಾ. ॥ (೧) ವಸ್ವಾದ್ಯಾ ಮಧುಕಾರಿಣಃ । ತತ್ಪುತ್ರಾಸ್ತು ಮರೀಚ್ಯಾದ್ಯಾಸ್ಸೂರ್ಯರಶ್ಮಿಷು ಸಂಸ್ಥಿತಾಃ ॥ (೨) ತಿರ್ಯಕ್ ಸ್ಥಿತ್ವಾ ವಶೇ ಕುರ್ಯಾದ್ಯಸ್ಮಾದ್ದೇವೀ ರಮಾ ಹರಿಂ। ಭಕ್ತ್ಯೈವಾತಸ್ತಿರೋವಂಶಸ್ತಿರ್ಯಕ್ತ್ವಂ ಪ್ರಣತಿಃಸ್ಮೃತಾ ॥ (೩) ತಿರ್ಯಕ್ ಸ್ಥಿತ್ವಾ ಸ್ವಸಂಸ್ಥಂ ತು ವಶೀಕುರ್ಯಾದ್ಯತಸ್ತತಃ । ವಂಶಸ್ತಿರಶ್ಚೀನೋಽನ್ಯೋಽಪಿ ॥ (೪) ಯಸ್ಮಿನ್ನಾಸ್ಯಮುಪಸ್ಥಿತಂ । ಸೋಽಪೂಪ ಆಪ್ಯೋ ಭಗವಾನ್ಮಧ್ವಾಜ್ಯಾದಿಪ್ರಸಿದ್ಧಗಂ ॥ ೧ ॥ ॥ ೨ ॥**

ಅ ॥ (೧) ವಸು ರುದ್ರ ಆದಿತ್ಯಾದಿಗಳು ಸುಖಗೊಳಿಸುವವರು. ವಸ್ವಾದಿಗಳ ಪುತ್ರರಾದ ಮರೀಚ್ಯಾದಿ ಋಷಿಗಳು ಸೂರ್ಯಕಿರಣಗಳಲ್ಲಿರುತ್ತಾರೆ (೨) ಲಕ್ಷ್ಮೀದೇವಿಯು ಭಕ್ತಿಯಿಂದಲೇ ಸ್ವಲ್ಪ ಬದಿ

ಯಲ್ಲಿ ಬಗ್ಗಿ ನಿಂತುಕೊಂಡು ಸಾಷ್ಟಾಂಗವಾಗಿ ನಮಸ್ಕರಿಸಿ ಶ್ರೀಹರಿಯನ್ನು ತನ್ನ ವಶದಲ್ಲಿಟ್ಟುಕೊಂಡ ಪ್ರಯುಕ್ತ ತಿರೋವಂಶ ಎನಿಸುತ್ತಾಳೆ. ಲಕ್ಷ್ಮೀದೇವಿಗೆ ತಿರ್ಯಕ್ ಸ್ಥಿತಿ ಎಂದರೆ, ಭಕ್ತಿಪೂರ್ವಕವಾಗಿ ನಮಸ್ಕಾರವು. (೩) (ಜೇನುತೊಟ್ಟಿ ಇರುವ ಬಿದಿರಿನಲ್ಲಿ ತಿರಶ್ಚೀನ ಶಬ್ದವನ್ನು ತೋರಿಸುತ್ತಾರೆ—) ಬಿದಿರೂ ಕೂಡ ಅಡ್ಡವಾಗಿ ಇದ್ದು ತನ್ನಲ್ಲಿರುವ ಜೇನುಗೂಡನ್ನು ತನ್ನ ವಶದಲ್ಲಿ ಇಟ್ಟುಕೊಂಡ ಕಾರಣ ತಿರಶ್ಚೀನ ವಂಶವೆನಿಸುತ್ತದೆ. (೪) (ಅಪೂಪ ಶಬ್ದದ ಅರ್ಥ ಹೇಳುತ್ತಾರೆ—) ಅಪ್–ಹೊಂದಲರ್ಹನಾದ ಶ್ರೀಹರಿಯು, ಉಪ–ವಾಯುದೇವರ ಸಮೀಪದಲ್ಲಿ ಇದ್ದ ಪ್ರಯುಕ್ತ ಅಂದರೆ ವಾಯುದೇವರಲ್ಲಿ ಸನ್ನಿಧಾನವನ್ನು ವಿಶೇಷವಾಗಿ ಇಟ್ಟ ಪ್ರಯುಕ್ತ ವಾಯುದೇವರು ಅಪೂಪಃ ಎನಿಸುತ್ತಾರೆ. ಆಪ್ಯಃ–ಮುಕ್ತರಿಂದ ಹೊಂದಲ್ಪಡುವವನು ಭಗವಂತನು. (ಪ್ರಸಿದ್ಧವಾದ ಜೇನುತೊಟ್ಟಿಯೂ ಆಪ್ಯವಾಗಿದೆ ಎನ್ನುತ್ತಾರೆ—) ಜೇನು ತುಪ್ಪ ಮೊದಲಾದುದು ಪ್ರಸಿದ್ಧವಾದ ಜೇನುತೊಟ್ಟಿಯಲ್ಲಿದ್ದು (ನೀರಿನ ವಿಕಾರವಾಗಿರುವುದರಿಂದ) ಆಪ್ಯವೆನಿಸುತ್ತದೆ.

ವಿ || ಶ್ರೀಹರಿಯು ಮಧು (ಜೇನು) ವಿನಂತೆ ಇರುವವನು. ಅಪೂಪವೆಂದರೆ ವಾಯುದೇವರು, ಅವರು ಜೇನುಗೂಡಿನಂತಿರುವವರು. ಅದರಲ್ಲಿ ಶ್ರೀಹರಿಯೆಂಬ ಮಧು ಇದೆ. ವಾಯುವೆಂಬ ಅಪೂಪವು ಲಕ್ಷ್ಮೀದೇವಿಯೆಂಬ ತಿರಶ್ಚೀನ ವಂಶವನ್ನಾಶ್ರಯಿಸಿದೆ. ಅಂದರೆ ಅಡ್ಡವಾದ ಬಿದಿರಿನಲ್ಲಿ ಜೇನುತೊಟ್ಟಿ ಇದ್ದು ಅದರೊಳಗೆ ಜೇನು ಇರುವಂತೆಯೇ ಲಕ್ಷ್ಮೀದೇವಿಯನ್ನು ಆಶ್ರಯಿಸಿದ ವಾಯುದೇವರಲ್ಲಿ ಶ್ರೀ ಪರಮಾತ್ಮನು ಇರುತ್ತಾನೆ || ೧ ||　　|| ೩ ||

**ಉ. || ತಸ್ಯ ಯೇ ಪ್ರಾಂಚೋ ರಶ್ಮಯಸ್ತಾ ಏವಾಸ್ಯ ಪ್ರಾಚ್ಯೋ ಮಧುನಾಡ್ಯ ಋಚ ಏವ ಮಧುಕೃತ ಋಗ್ವೇದ ಏವ ಪುಷ್ಪಂ ತಾ ಅಮೃತಾ ಆಪಸ್ತಾ ವಾ ಏತಾ ಋಚಃ || ೨ ||**

**ಉ. || ಏತಮೃಗ್ವೇದಮಭ್ಯತಪꣳಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯꣳ ರಸೋಽಜಾಯತ || ೩ ||**

ಅ || ಸೂರ್ಯನ ಮೂಡುದಿಕ್ಕಿನಲ್ಲಿರತಕ್ಕ ಕಿರಣಗಳೇ ಜೇನುಗೂಡಿನಂತಿರುವ ವಾಯುದೇವರಿಗೆ ಜೇನಿಗೆ ಆಧಾರವಾದ ತೂತುಗಳಂತಿರುವವುಗಳು. (ಶ್ರೀಹರಿಯ ಪಕ್ಷದಲ್ಲಿ) ಸೂರ್ಯನೊಳಗಣ ಮೂಲರೂಪಿ ಶ್ರೀಹರಿಯ ಮೂಡುದಿಕ್ಕಿನ ಕಿರಣಗಳಲ್ಲಿರತಕ್ಕ ರಶ್ಮಿ ಎನಿಸಿಕೊಂಡ ವಾಸುದೇವ ಮೊದಲಾದ ರೂಪವಿಶೇಷಗಳೇ ಮಧುನಾಡಿಗಳೆನ್ನಿಸುತ್ತವೆ. ಮಧು=ಸುಖಪೂರ್ಣವಾದ ಮೂಲರೂಪವನ್ನು (ನಾಡ್ಯಃ)= ಹೊಂದಿಸಿಕೊಡುವವುಗಳು. ಅಂದರೆ, ಅಧಿಕಾರಿಯು ವಾಸುದೇವಾದಿ ರೂಪಗಳ ಅನುಗ್ರಹವಿಲ್ಲದೆ ಮೂಲರೂಪದ ಸಮೀಪ ಹೋಗಲಿಕ್ಕೆ ನಾಲಂ=ನಾಡಂ, ನಾಡೀ, ಸಮರ್ಥನಲ್ಲ, ಅದುಕಾರಣ ವಾಸುದೇವಾದಿ ರೂಪಗಳಿಗೆ ನಾಡೀ ಎಂದು ಹೆಸರು. ಪ್ರಾತಃಸವನದಲ್ಲಿ ಪೂಜಿಸಿಕೊಳ್ಳಲ್ಪಡುವುದರಿಂದಲೂ ಋಗ್ವೇದಕ್ಕೆ ಅಭಿಮಾನಿಗಳಾಗಿರುವುದರಿಂದಲೂ ಋಕ್ ಎನಿಸಿಕೊಂಡ ವಹ್ನಿ. ಅವನ ಅಧೀನದಲ್ಲಿರುವ ವಸುಗಳು ಮಧು ಎನಿಸಿಕೊಂಡ ವಿಷ್ಣುವನ್ನು ಪ್ರಕಟೀಕರಿಸಿರುವುದರಿಂದ ತುಂಬಿಗಳಂತಿರುವವರು. ಋಗ್ವೇದವೇ ಜ್ಞಾನವನ್ನು ವೃದ್ಧಿಗೊಳಿಸುವುದರಿಂದ ಪುಷ್ಪವೆನಿಸುವುದು. (ಪುಷ್ಪವು ತುಂಬಿಗೆ ಜೇನು ಮಾಡಲಿಕ್ಕೆ ಸಹಕರಿಸುವಂತೆ ವಸುಗಳು ಮಧು ಎನಿಸಿದ ಶ್ರೀಹರಿಯನ್ನು ಪ್ರಕಾಶಪಡಿಸುವರು.) ಋಗ್ವೇದದಲ್ಲಿರತಕ್ಕ ವಚನಗಳು ಯಾರಿಂದಲೂ ರಚಿಸಲ್ಪಡದಿರುವುದರಿಂದ ನಿತ್ಯಗಳಾದ ಪ್ರಯುಕ್ತ ಅಮೃತಗಳೆಂದೂ, ದೇವತೆ

ಗಳಿಂದ ತತ್ತ್ವವಿಚಾರವು ಮಾಡಲ್ಪಡುವುದರಿಂದ ಆಪಃ ಎಂದೂ ಎನಿಸುತ್ತವೆ. ಋಗ್ವೇದಕ್ಕೆ ಅಭಿಮಾನಿಗಳಾದ ಋಕ್ ಎಂದು ಹೆಸರುಳ್ಳ ವಹ್ನಿ ಮೊದಲಾದ ವಸುಗಳು ವೇದವಿಚಾರ ಮಾಡಿದರು. ಅಂತಹ ವೇದದಿಂದ ಜ್ಞಾನಾನಂದಸ್ವರೂಪನೂ, ಪ್ರಕಾಶರೂಪನೂ, ಪರಮೈಶ್ವರ್ಯರೂಪನೂ, ಸರ್ವರಿಗೆ ಅನುಗ್ರಹ ಮಾಡಲಿಕ್ಕೆ ಶಕ್ತನೂ, ಬಲರೂಪನೂ, ಸರ್ವಶ್ರೇಷ್ಠನೂ, ಆದ ವಾಸುದೇವರೂಪಿ ಶ್ರೀಹರಿಯು ಪ್ರಕಟನಾದನು. || ೨, ೩ ||

**ಉ. || ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ರೋಹಿತꣳ ರೂಪಂ || ೧ || ಇತಿ ಪ್ರಥಮಃ ಖಂಡಃ || ೫-೧ || ೪ ||**

ಅ || ಯಶಸ್ಸು ಮೊದಲಾದ ಗುಣಗಳಿರುವ ವಾಸುದೇವನು ಧರ್ಮ ಮೋಕ್ಷ ಮೊದಲಾದವುಗಳನ್ನು ದೇವತೆಗಳಿಗೆ ಕೊಟ್ಟನು. ಋಗ್ವೇದದಿಂದ ಪ್ರಕಟನಾದ ವಾಸುದೇವನು ಸೂರ್ಯನ ಮೂಡುದಿಕ್ಕಿನಲ್ಲಿರತಕ್ಕ ಕಿರಣಗಳಲ್ಲಿ ಇರುವನು. ಆ ವಾಸುದೇವನು ಕೆಂಪು ಬಣ್ಣವುಳ್ಳವನಾಗಿ ಮೂಡುದಿಕ್ಕಿನಲ್ಲಿರತಕ್ಕ ಕಿರಣಗಳಲ್ಲಿರುವ ಕೆಂಪುಬಣ್ಣದಲ್ಲಿರುವವನು (ಅಂದರೆ, ಸೂರ್ಯಮಂಡಲದ ಕೆಂಪುಬಣ್ಣದಲ್ಲಿ ತಾನೂ ರಕ್ತಾಕಾರನಾಗಿದ್ದಾನೆಂದುಕ್ತವಾಯಿತು.) || ೨ || || ೧ ||

ಒಂದನೇ ಖಂಡವು ಮುಗಿಯಿತು.

## ೨ನೇ ಖಂಡವು

**ಉ. || ಅಥ ಯೇಽಸ್ಯ ದಕ್ಷಿಣಾ ರಶ್ಮಯಸ್ತಾ ಏವಾಸ್ಯ ದಕ್ಷಿಣಾ ಮಧುನಾಡ್ಯೋ ಯಜೂꣳಷ್ಯೇವ ಮಧುಕೃತೋ ಯಜುರ್ವೇದ ಏವ ಪುಷ್ಪಂ ತಾ ಅಮೃತಾ ಆಪಃ || ೧ ||**

ಅ || ಸಂಕರ್ಷಣನ ಉಪಾಸನೆಯು ಹೇಳಲ್ಪಡುತ್ತದೆ. ಸೂರ್ಯನ ತೆಂಕಣ ದಿಕ್ಕಿನ ಕಿರಣಗಳಲ್ಲಿರತಕ್ಕ ರಶ್ಮಿ ಎನಿಸಿಕೊಂಡ ಸಂಕರ್ಷಣರೂಪಗಳೇ ವಾಯುದೇವರ ತೆಂಕಣ ಮಧುನಾಡಿಗಳಲ್ಲಿರತಕ್ಕ ನಾಡೀ ಎನಿಸಿಕೊಳ್ಳುವ ರೂಪವಿಶೇಷಗಳು. ಯಜುರ್ವೇದಗಳಿಗೆ ಅಭಿಮಾನಿಗಳಾದ ವಾಯು ಮತ್ತು ಅವನ ವಶರಾದ ರುದ್ರರು ಸುಖಪೂರ್ಣನಾದ ಶ್ರೀಹರಿಯನ್ನು ಪ್ರಕಟೀಕರಿಸುವುದರಿಂದ ತುಂಬಿಗಳಂತಿರುವವರು ಯಜುರ್ವೇದವೇ ಪುಷ್ಪವೆನಿಸುತ್ತದೆ ಅದು ನಿತ್ಯವಾದುದರಿಂದ ಅಮೃತವೆಂದೂ ದೇವತೆಗಳಿಂದ ವಿಚಾರಮಾಡಲ್ಪಡುವುದರಿಂದ ಆಪಃ ಎಂದೂ ಎನಿಸುತ್ತದೆ. || ೧ ||

**ಉ. || ತಾನಿ ವಾ ಏತಾನಿ ಯಜೂꣳಷ್ಯೇತಂ ಯಜುರ್ವೇದಮಭ್ಯತಪꣳಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯꣳ ರಸೋಽಜಾಯತ || ೨ ||**

ಅ || ..........ಯಜುರ್ವೇದಾಭಿಮಾನಿಗಳಾದ ವಾಯು ಮತ್ತು ಅವನ ಅಧೀನರಾದ ರುದ್ರರು ಯಜುರ್ವೇದಾರ್ಥವನ್ನು ವಿಚಾರಮಾಡಿದರು. ಅದರಿಂದ *....ಸಂಕರ್ಷಣನು ಪ್ರಕಟನಾದನು. || ೨ ||

* ಯಶಃ ಇತ್ಯಾದಿಗಳಿಗೆ ಹಿಂದಿನಂತೆ ಅರ್ಥ.

**ಉ. ॥ ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಶುಕ್ಲꣳ ರೂಪಂ ॥ ಇತಿ ದ್ವಿತೀಯಃ ಖಂಡಃ ॥ ೫-೨ ॥　　॥ ೩ ॥**

ಅ ॥ ಸಂಕರ್ಷಣನು ಸೂರ್ಯನ ತೆಂಕಣ ಕಿರಣಗಳಲ್ಲಿ ಇರುವವನು. ಸಂಕರ್ಷಣರೂಪವು ಬಿಳೀ ಬಣ್ಣವುಳ್ಳದ್ದಾಗಿ ಸೂರ್ಯನ ಬಿಳಿಪು ಬಣ್ಣದಲ್ಲಿದೆ. ॥ ೫—೨ ॥　　॥ ೩ ॥

ಎರಡನೇ ಖಂಡವು ಮುಗಿಯಿತು.

## ೩ನೇ ಖಂಡವು

**ಉ. ॥ ಅಥ ಯೋಽಸ್ಯ ಪ್ರತ್ಯಂಚೋ ರಶ್ಮಯಸ್ತಾ ಏವಾಸ್ಯ ಪ್ರತೀಚ್ಯೋ ಮಧುನಾಡ್ಯಃ ಸಾಮಾನ್ಯೇವ ಮಧುಕೃತಃ ಸಾಮವೇದ ಏವ ಪುಷ್ಪಂ ತಾ ಅಮೃತಾ ಆಪಃ　　॥ ೧ ॥**

ಅ ॥ ಪ್ರದ್ಯುಮ್ನನ ಉಪಾಸನೆಯು. ಸೂರ್ಯನ ಪಡುದಿಕ್ಕಿನ ಕಿರಣಗಳಲ್ಲಿರತಕ್ಕ ರಶ್ಮಿ ಎನಿಸಿಕೊಂಡ ಪ್ರದ್ಯುಮ್ನನು ವಾಯುದೇವರ ಪಡುದಿಕ್ಕಿನ ಮಧುನಾಡಿಗಳಲ್ಲಿರತಕ್ಕವನು, ನಾಡೀ ಎನಿಸಿಕೊಂಡವನು. ಸಾಮಾಭಿಮಾನಿಗಳಾದ ಸಾಮ ಎನಿಸಿಕೊಂಡಿರುವ ವಿಷ್ಣುವನ್ನಿದು ಇಂದ್ರನೇ ಮೊದಲಾದ ಎಲ್ಲಾ ಆದಿತ್ಯರೂ............　　॥ ೧ ॥

**ಉ. ॥ ತಾನಿ ವಾ ಏತಾನಿ ಸಾಮಾನ್ಯೇತꣳ ಸಾಮವೇದಮಭ್ಯತಪꣳಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯꣳ ರಸೋಽಜಾಯತ　　॥ ೨ ॥**

ಅ ॥ ............ಸಾಮವೇದವನ್ನು ವಿಚಾರ ಮಾಡಿದರು ಆದರಿಂದ ಪ್ರದ್ಯುಮ್ನನು ಪ್ರಕಟನಾದನು.　　॥ ೨ ॥

**ಉ. ॥ ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಕೃಷ್ಣꣳ ರೂಪಂ ॥ ಇತಿ ತೃತೀಯಃ ಖಂಡಃ ॥ ೫-೩ ॥　　॥ ೩ ॥**

ಅ ॥ ..........ಪ್ರದ್ಯುಮ್ನನ ರೂಪವೇ ನೀಲವರ್ಣವುಳ್ಳದ್ದಾಗಿ ಸೂರ್ಯನ ನೀಲಬಣ್ಣದಲ್ಲಿರುವುದು. ॥ ೫—೩ ॥　　॥ ೩ ॥

ಮೂರನೇ ಖಂಡವು ಮುಗಿಯಿತು

## ೪ನೇ ಖಂಡವು

**ಉ. ॥ ಅಥ ಯೋಽಸ್ಯೋದಂಚೋ ರಶ್ಮಯಸ್ತಾ ಏವಾಸ್ಯೋದೀಚ್ಯೋ ಮಧುನಾಡ್ಯೋಽಥರ್ವಾಂಗಿರಸ ಏವ ಮಧುಕೃತ ಇತಿಹಾಸಪುರಾಣಂ ಪುಷ್ಪಂ ತಾ ಅಮೃತಾ ಆಪಃ ॥ ೧ ॥**

ಅ ॥ ಸೂರ್ಯನ ಬಡಗುದಿಕ್ಕಿನ ಕಿರಣಗಳಲ್ಲಿರತಕ್ಕ ರಶ್ಮಿ ಎನಿಸಿಕೊಂಡ ಅನಿರುದ್ಧನೇ ವಾಯುವಿನ ಬಡಗುದಿಕ್ಕಿನ ಮಧುನಾಡಿಗಳಲ್ಲಿರುವವನು, ನಾಡೀ ಎನಿಸಿಕೊಂಡವನು. ಅಥರ್ವ ಋಷಿ, ಅಂಗಿರಸ ಋಷಿ, ಇವರು ಕಂಡುಹಿಡಿದ ಮಂತ್ರ (ಇತಿಹಾಸ, ಪುರಾಣ ಅಥರ್ವವೇದ) ಗಳಿಗೆ ಅಭಿಮಾನಿಗಳಾದ ಮಳೆಯನ್ನು ಕೆಳಗೆ ಸುರಿಸುವುದರಿಂದಲೂ ಮನಸ್ಸು ಪ್ರಾಣಗಳಿಗೆ ಅಭಿಮಾನಿಗಳಾಗಿರುವುದರಿಂದಲೂ ಅಥರ್ವಾ ಅಂಗಿರಸ ಎನಿಸಿಕೊಂಡಿರುವ ಸೋಮ ಅವನ ವಶರಾದ ಮರುತ್‍ಗಳು........ಇತಿಹಾಸ ಪುರಾಣ ಅಥರ್ವವೇದವು ಪುಷ್ಪವು............ಅವುಗಳೇವೇ ವಿಚಾರಮಾಡಲ್ಪಡುವುದರಿಂದ ಅಪ್ ಎನಿಸಿಕೊಂಡ ಇತಿಹಾಸಾದಿ ವಾಕ್ಯಗಳೇ ಪ್ರಸಿದ್ಧ ಅಮೃತಕ್ಕೆ ಸದೃಶಗಳು. ॥ ೧ ॥

**ಉ. ॥ ತೇ ವಾ ಏತೇಽಥರ್ವಾಂಗಿರಸ ಏತದಿತಿಹಾಸಪುರಾಣಮಭ್ಯತಪꣳಸ್ತಸ್ಯಾಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯꣳ ರಸೋಽಜಾಯತ ॥ ೨ ॥**

ಅ ॥ ಇತಿಹಾಸ ಪುರಾಣಾದಿಗಳು.........ಅನಿರುದ್ಧನು ಪ್ರಕಟನಾದನು.........ಬಡಗುದಿಕ್ಕಿನ ರಶ್ಮಿಗಳಲ್ಲಿದ್ದನು........ ॥ ೨ ॥

**ಉ. ॥ ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಪರಃ ಕೃಷ್ಣꣳ ರೂಪಂ ॥ ಇತಿ ಚತುರ್ಥಃ ಖಂಡಃ ॥ ೫-೪ ॥ ॥ ೩ ॥**

ಅ ॥ ಇತಿಹಾಸ ಪುರಾಣ ಅಥರ್ವವೇದಗಳಲ್ಲಿ ಹೇಳಿದ ಅನಿರುದ್ಧರೂಪವೇ ಅತಿ ಕಪ್ಪುಬಣ್ಣವುಳ್ಳದ್ದಾಗಿ ಆದಿತ್ಯನ ಕಪ್ಪುಬಣ್ಣದಲ್ಲಿದ್ದುದು. ॥ ೫-೪ ॥ ॥ ೩ ॥

**ನಾಲ್ಕನೇ ಖಂಡವು ಮುಗಿಯಿತು.**

## ೫ನೇ ಖಂಡವು

**ಉ. ॥ ಅಥ ಯೋಽಸ್ಯೋರ್ಧ್ವಾ ರಶ್ಮಯಸ್ತಾ ಏವಾಸ್ಯೋರ್ಧ್ವಾ ಮಧುನಾಡ್ಯೋ ಗುಹ್ಯಾ ಏವಾದೇಶಾ ಮಧುಕೃತೋ ಬ್ರಹ್ಮೈವ ಪುಷ್ಪಂ ತಾ ಅಮೃತಾ ಆಪಃ ॥ ೧ ॥**

ಅ || ಸೂರ್ಯನ ಮೇಲುಭಾಗದ ಕಿರಣಗಳಲ್ಲಿರತಕ್ಕ ರಶ್ಮಿ ಎನಿಸಿಕೊಂಡ ನಾರಾಯಣನು........ ಎಲ್ಲಾ ಗೋಪ್ಯಗಳನ್ನು ಉಪದೇಶ ಮಾಡುವುದರಿಂದ ಗುಹ್ಯಾದೇಶ ಎನಿಸಿಕೊಂಡ ಎಲ್ಲಾ ವೇದಗಳಿಗೆ ಅಭಿಮಾನಿಗಳಾದ ಬ್ರಹ್ಮನೇ ಮೊದಲಾದ ಎಲ್ಲಾ ಋಜುಗಳೂ........ವೇದರಾಶಿಯೇ ಪುಷ್ಪವು........ ವೇದವಚನಗಳು ಅಮೃತತುಲ್ಯಗಳು........ || ೧ ||

**ಉ. || ತೇ ವಾ ಏತೇ ಗುಹ್ಯಾ ಆದೇಶಾ ಏತದ್ಬ್ರಹ್ಮಾಭ್ಯತಪಂಸ್ತಸ್ಯಾ-ಭಿತಪ್ತಸ್ಯ ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯಂ ರಸೋಽಜಾಯತ || || ೨ ||**

ಅ || ........ಆ ಗುಹ್ಯಾದೇಶ ಎನಿಸಿಕೊಂಡ ಬ್ರಹ್ಮನೇ ಮೊದಲಾದ ಎಲ್ಲಾ ಋಜುಗಳು ವೇದಗಳ ರಾಶಿಯನ್ನು ವಿಚಾರಮಾಡಿದರು........ಅದರಿಂದ ನಾರಾಯಣನು ಪ್ರಕಟನಾದನು. || ೨ ||

**ಉ. || ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾ-ದಿತ್ಯಸ್ಯ ಮಧ್ಯೇ ಕ್ಷೋಭತ ಇವ || ೩ ||**

ಅ || ಸಮಸ್ತ ವೇದಗಳಲ್ಲಿ ವರ್ಣಿಸಲ್ಪಟ್ಟ ಶ್ರೀನಾರಾಯಣರೂಪವು ಉದಯಿಸುವ ಸೂರ್ಯನಂತೆ ಬಣ್ಣವುಳ್ಳದ್ದಾಗಿ ಸೂರ್ಯಮಂಡಲದ ಮಧ್ಯದಲ್ಲಿ ಮಹಾಕಿರಣಗಳ ಗುಂಪಿನಿಂದ ಕದಲದೆ ಇರುವವನಾದರೂ ಕದಲುವಂತೆ ಕಾಣುತ್ತಾನೆ. || ೩ ||

ಪೀ—ಬೇರೆ ಶಬ್ದಗಳಿಗಿಂತ ವೇದಗಳು ಶ್ರೇಷ್ಠಗಳೆಂದು ಹೇಳುತ್ತಾ ಆ ವೇದಗಳು ವಾಸುದೇವಾದಿ ರೂಪಗಳನ್ನು ಹೇಳುತ್ತವೆಂದು ಹೇಳಿದುದನ್ನು ಮುಗಿಸುತ್ತಾರೆ—

**ಉ. || ತೇ ವಾ ಏತೇ ರಸಾನಾಂ ರಸಾ ವೇದಾ ಹಿ ರಸಾಸ್ತೇಷಾಮೇತೇ ರಸಾಸ್ತಾನಿ ವಾ ಏತಾನ್ಯಮೃತಾನಾಮಮೃತಾನಿ ವೇದಾ ಹ್ಯಮೃತಾಸ್ತೇಷಾ-ಮೇತಾನ್ಯಮೃತಾನಿ || ಇತಿ ಪಂಚಮಃ ಖಂಡಃ || ೫-೫ || || ೪ ||**

ಅ || ವಾಸುದೇವ ಮೊದಲಾದ ಐದು ಭಗವದ್ರೂಪ ವಿಶೇಷಗಳು ಶ್ರೇಷ್ಠಗಳಲ್ಲಿ ಶ್ರೇಷ್ಠಗಳು. (ಹೇಗೆಂದರೆ –) ವೇದಗಳು ಶ್ರೇಷ್ಠಗಳು ಆ ವೇದಗಳಲ್ಲಿ ವಾಸುದೇವಾದಿಗಳು ಮುಖ್ಯವಾಗಿ ಹೇಳಲ್ಪಡುವವರು. ವಾಸುದೇವ ಮೊದಲಾದ ಭಗವದ್ರೂಪಗಳು ನಿತ್ಯಗಳಾದ ವೇದಗಳಿಗೆ ನಿತ್ಯತ್ವವನ್ನು ಕೊಡತಕ್ಕವುಗಳು. || ೫ – ೫ || || ೪ ||

ಪೀ –೧ನೇ ಖಂಡದ ೨ನೇ ಮಂತ್ರದಲ್ಲಿದ್ದ ಪ್ರಾಂಚೋ ರಶ್ಮಯಃ ಇತ್ಯಾದಿಗಳ ಅರ್ಥ ಹೇಳುತ್ತಾರೆ—

**ಭಾ. || (೧) ಪ್ರಾಚ್ಯರಶ್ಮಿಷು ಸಂಸ್ಥಸ್ತು ರತಿಶಂಮಾ(ಸ್ವರತಿರ್ಮಾ)ನರೂಪತಃ | ಪ್ರಾಚ್ಯರಶ್ಮಿರಿತಿ ಪ್ರೋಕ್ತೋ ವಾಸುದೇವಾಭಿಧೋ ಹರಿಃ || (೨) ಏತದ್ವಿನಾ ನಾಲಮಿತಿ ನಾಡೀತ್ಯಂಶ ಉದಾಹೃತಃ | ಸ್ವರೂಪಾಂಶೈರ್ವಿನಾ ಪ್ರಾಪ್ತುಂ ನಾಲಂ ಹಿ ಪ್ರಾಪಿತಾಂಶಿ-ನಂ || (೩) ಋಗ್ವೇದಮಾನಿನಶ್ಚೈವ ವಹ್ನ್ಯಾದ್ಯಾ ವಸವಸ್ತ್ವೃಚಃ | ಅರ್ಚ್ಯತ್ವಾತ್ಪೃಥಮಂ**

**ಚೈವ ವಿಶೇಷಾತ್ ॥ (೪) ಯಜ್ಞದೇವತಾಃ । ಇಂದ್ರಾದ್ಯಾ ಯಜುರುದ್ದಿಷ್ಟಾ ರುದ್ರಾ ಇಂ-ದ್ರಸಖಾ(ಹಾ)ಯುತಃ ॥ ಇಂದ್ರಶಬ್ದೋದಿತೋ ವಾಯುಃ ಸ ಯಾಜ್ಯಃ ಸೋಮಭುಕ್ಪರಃ । ಸ ಹಿ ಶಂಕರಪೂರ್ವಾಣಾಂ ರುದ್ರಾಣಾಂ ಮುಖ್ಯ ಏವ ಚ ॥ (೫) ಸಾಮನಾಮಾನ ಆದಿ-ತ್ಯಾ ಮಾಸಶಃ ಸಮಭೋಗತಃ । ಇಂದ್ರೋ ವರುಣ ಉದ್ದಿಷ್ಟೋ ಯಜ್ಞೇಷು ಪ್ರಿಯತೇ ಯತಃ ॥ ಆದಿತ್ಯಾನಾಮಧಿಪತಿಃ ಸ ಹಿ ವಿಷ್ಣುನಿಯೋಜಿತಃ । ವಿಷ್ಣುಸ್ತೂಪಾಸ್ಯರೂಪ-ತ್ವಾನ್ನೋಪಾಸಕಗಣೇ ಯುತಃ ॥** ॥ ೧ ॥

**ಅ** ॥ (೧) ಶ್ರೀವಾಸುದೇವನು ಪೂರ್ವದಿಕ್ಕಿನ ಕಿರಣಗಳಲ್ಲಿರುವವನು. ಕ್ರೀಡೆ, ಸುಖ, ಜ್ಞಾನ ಸ್ವರೂಪನಾದುದರಿಂದ ರಶ್ಮಿ ಎನಿಸಿಕೊಳ್ಳುವವನು (೨) ಮೂಲರೂಪವನ್ನು ಹೊಂದಲಿಕ್ಕೆ ಅಧಿಕಾರಿಯು ಸ್ವರೂಪಾಂಶಗಳಾದ ವಾಸುದೇವಾದಿ ರೂಪಗಳ ವಿನಹ ಸಮರ್ಥನಲ್ಲ. ಅದುಕಾರಣ ವ ಸುದೇವನು *ನಾಡೀ ಎನಿಸುತ್ತಾನೆ. (೩) (**ಋಚ ಏವ ಮಧುಕೃತಃ** ಎಂಬುದರ ಅರ್ಥ ಹೇಳುತ್ತಾರೆ—) ಋಗ್ವೇದಕ್ಕೆ ಅಭಿಮಾನಿಗಳಾದ ವಹ್ನಿ, ಮತ್ತು ಆವನ ವಶರಾದ ವಸುಗಳೇ ವಿಶೇಷವಾಗಿ ಋಕ್ ಎನಿಸುತ್ತವೆ. (**ಶಬ್ದ ವಿಶೇಷಗಳಲ್ಲ.**) ಪ್ರಾತಃಸವನದಲ್ಲಿ ವಿಶೇಷವಾಗಿ ಪೂಜಿಸಿಕೊಳ್ಳಲ್ಪಡುವುದರಿಂದಲೂ ಋಕ್ ಎನಿಸು**ತ್ತವೆ.** (೪) (೨ನೇ ಖಂಡದಲ್ಲಿದ್ದ **ಯಜೂಂಷ್ಯೇವ ಮಧುಕೃತಃ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಯಾಗಕ್ಕೆ ದೇವತೆಗಳಾದ ಇಂದ್ರನೆನಿಸಿಕೊಂಡ ವಾಯುವು ಅವನ ಅಧೀನದಲ್ಲಿರುವ ರುದ್ರರು **ಯಜುಃ** ಎನಿಸಿಕೊಳ್ಳುತ್ತಾರೆ. ರುದ್ರರು ಇಂದ್ರನಿಗೆ ಸಖಿಗಳಾಗಿರುವುದರಿಂದ ಇಂದ್ರನು ರುದ್ರರಲ್ಲಿ ಪ್ರವೇಶಿಸಿರುವನು. ಇಲ್ಲಿ ಇಂದ್ರನೆಂದರೆ ಮುಖ್ಯವಾಯುವು. (ವಾಯುವು ೧೧ ರುದ್ರರಲ್ಲಿ ಸೇರುವುದಿಲ್ಲ. ಅದು ಕಾರಣ ವಾಯುವು ಯಾಗದಲ್ಲಿ ಹೋಮಿಸಲ್ಪಡದಿರುವುದರಿಂದ **ಯಜುಃ** ಶಬ್ದದಿಂದ ವಾಯುವನ್ನು ಇಟ್ಟುಕೊಳ್ಳಲಿಕ್ಕೆ ಆಗುವುದಿಲ್ಲವೆಂದರೆ—) ವಾಯುದೇವರು ಮಾಧ್ಯಂದಿನ ಸವನದಲ್ಲಿ ಸೋಮಪಾನ ಮಾಡುವ ರುದ್ರರಿಗಿಂತ ಮೊದಲು ಹೋಮಿಸಲ್ಪಡುತ್ತಾರೆ (ಅದುಕಾರಣ ಇತರ ರುದ್ರರಿಗಿಂತ ವಾಯು ದೇವರೇ ಮುಖ್ಯವಾಗಿ ಹೋಮಿಸಲ್ಪಡುವವರು.) (ಇಂದ್ರಶಬ್ದದಿಂದ ಪ್ರಸಿದ್ಧ ಇಂದ್ರನನ್ನು ಏಕೆ ಇಟ್ಟು ಕೊಳ್ಳಕೂಡದೆಂದರೆ—) ರುದ್ರನೊಳಗಣ ಇಂದ್ರನೆನಿಸಿದ ವಾಯುವು, ಶಂಕರ ಮೊದಲಾದ ರುದ್ರರಿಗೆ ನಿಯಾಮಕನೆಂದು **ಇಂದ್ರೇಣ ಮುಖೇನ** ಎಂದು ಮುಂದೆ ಹೇಳುವಾಗ ಆ ರುದ್ರರಿಗೆ ನಿಯಾಮಕರು ವಾಯುದೇವರೇ ಆಗಬೇಕಲ್ಲದೆ (ಪ್ರಸಿದ್ಧ ಪುರಂದರನಾಗುವುದಿಲ್ಲ.) (೫) (೩ನೇ ಖಂಡದಲ್ಲಿದ್ದ **ಸಾಮಾನ್ಯೇವ ಮಧುಕೃತಃ** ಎಂಬ ವಾಕ್ಯಕ್ಕೆ ಅರ್ಥ ಹೇಳುತ್ತಾರೆ—) ಒಂದೊಂದು ಮಾಸವನ್ನು ಒಬ್ಬೊಬ್ಬ ಸೂರ್ಯನು ಭೋಗಿಸುವ ಕಾರಣ ೧೨ ಆದಿತ್ಯರು ೧೨ ಮಾಸಗಳಿಗೆ ನಿಯಾಮಕರು. ಹೀಗೆ ವಿಷ್ಣು ವಿನಹ ಇಂದ್ರ ಮೊದಲಾದ ಎಲ್ಲಾ ಆದಿತ್ಯರೂ ಒಂದೇ ರೀತಿ ನಿಯಾಮಕರಾಗಿರುವುದರಿಂದ ಸಾಮ ಎಂದು ಹೆಸರುಳ್ಳವರು. (**ವರುಣೇನ ಮುಖೇನ** ಎಂಬಲ್ಲಿ ಆದಿತ್ಯರಿಗೆ ವರುಣನು ಅಧಿಪತಿಯೆಂದು ಹೇಳಿದೆ. ಅಲ್ಲಿ) ವರುಣ ಶಬ್ದದಿಂದ, ಯಾಗಗಳಲ್ಲಿ ವಿಶೇಷವಾಗಿ ಸ್ತೋತ್ರಮಾಡಿಸಿಕೊಂಡು ಹೋಮಿಸಲ್ಪಡುವುದರಿಂದ ಪುರಂದರನನ್ನು ಇಟ್ಟುಕೊಳ್ಳಬೇಕು. ಮತ್ತು ಪುರಂದರನೇ ಸೂರ್ಯರಿಗೆ ಆಧಿಪತಿಯೆಂದು ಪ್ರಸಿದ್ಧನಲ್ಲದೆ ಸರ್ವಥಾ ವರುಣನಲ್ಲ. (ವಿಷ್ಣುವೇ ತಾನು ಹೊರತು ಬೇರೆ ಆದಿತ್ಯರಿಗೆ ಅಧಿಪತಿಯಾಗಿರು ಎಂದು ದೇವೇಂದ್ರನಿಗೆ ಆಜ್ಞೆಯನ್ನು ಇತ್ತಪ ಯುಕ್ತ ) ವಿಷ್ಣುವಿನಿಂದಲೇ ಪುರಂದರನು ಆದಿತ್ಯರಿಗೆ ಅಧಿಪತಿಯಾಗಿ ಪ್ರೇರೇಪಿಸಲ್ಪಟ್ಟಿರುವನು. (ವಿಷ್ಣುವೇ ಎಲ್ಲಾ ಆದಿತ್ಯರಿಗೂ ಅಧಿಪತಿಯಾಗಿರುವುದರಿಂದ ವರುಣಶಬ್ದದಿಂದ ವಿಷ್ಣುವನ್ನೇ ಏಕೆ ಇಟ್ಟುಕೊಳ್ಳಬಾರದೆಂದರೆ—) ವಿಷ್ಣುವು ಎಲ್ಲರಿಂದಲೂ ಉಪಾಸನೆ (ಸೇವೆ) ಮಾಡಿಸಿಕೊಳ್ಳತಕ್ಕ ರೂಪವುಳ್ಳವನಾದುದರಿಂದ ಉಪಾಸನೆ ಮಾಡುವವರ ಸಮೂಹದಲ್ಲಿ ಸೇರಲಾರನು

---

* ವಾಸುದೇವನು ವಿನಹ ಅಲಂ ನ=ಸಮರ್ಥನಲ್ಲ. ನ ಅಲಂ, ಲ ಡ ಗಳಿಗೆ ಅಭೇದ ನಾಡೀ=ಸಮರ್ಥನಲ್ಲ.

ವಿ || ಉಪಾಸಕರಾದ ದೇವತೆಗಳು ಮಧು (ವಿಷ್ಣು) ವನ್ನು ಪ್ರಕಟಿಸುವವರು. ಉಪಾಸ್ಯನಾದ ವಿಷ್ಣುವು ಮಧು ಸುಖಸ್ವರೂಪನು. ಇಲ್ಲಿ **ವರುಣೇನ ಮುಖೇನ** ಎಂದು ಉಪಾಸಕನಿಗೇನೇ ಬೇರೆ ಉಪಾಸಕರಿಗಿಂತ ಮುಖ್ಯತ್ವವನ್ನು ಹೇಳಿರುವರು. ಅದು ಕಾರಣ ವರುಣಶಬ್ದದಿಂದ ಇಂದ್ರನನ್ನು ಇಟ್ಟು ಕೊಳ್ಳಬೇಕಲ್ಲದೆ ವಿಷ್ಣುವನ್ನು ಇಟ್ಟುಕೊಳ್ಳಕೂಡದು. || ೧ ||

ಪೀ—**ಅಥರ್ವಾಂಗಿರಸ ಏವ ಮಧುಕೃತಃ** ಎಂಬ ೪ನೇ ಖಂಡದ ವಾಕ್ಯಕ್ಕೆ ಅರ್ಥ ಹೇಳುತ್ತಾರೆ-

**ಭಾ. || (೧) ಇತಿಹಾಸಪುರಾಣಾನಾಂ ಸೋಮಾದ್ಯಾ ಅಭಿಮಾನಿನಃ | ಅಥರ್ವಾಂಗಿರಸಾಂ ಚೈವಾಪ್ಯಥರ್ವಾಂಗಿರನಾಮಕಾಃ || ಅಧರಂ ವರ್ತಯೋಯುಸ್ತೇ ವೃಷ್ಟಿಮಂಗರಸಾಸ್ತಥಾ | ಮನಸ್ತ್ವಾತ್ಪ್ರಾಣರೂಪತ್ವಾದಥರ್ವಾಂಗಿರಸಸ್ತತಃ || (೨) ಗುಹ್ಯಾದೇಶಾ ಬ್ರಹ್ಮಪದೇ ಯೇ ಯೋಗ್ಯಾ ಬ್ರಹ್ಮಣಾ ಸಹ | ಸರ್ವಗುಹ್ಯೋಪದೇಷ್ಟಾರಃ ಸರ್ವೇಷಾಂ ಗುರವೋ ಹಿ ತೇ || (೩) ಬ್ರಹ್ಮೇತಿ ಸರ್ವವೇದಾನಾಂ ನಾಮಾನಂತತ್ತ್ವತಃ ಸ್ಮೃತಂ || (೪) ಋಗ್ವೇದಾದೀಂಸ್ತು ತೇ ದೇವಾ ಅಗ್ನ್ಯಾದ್ಯಾಃ ಸಂವ್ಯಚಾರಯನ್ | ಮಧುಬ್ರಹ್ಮವ್ಯಕ್ತಿಕೃತ್ತ್ವಾತ್ತೇ ವೈ ಮಧುಕೃತಃ ಸ್ಮೃತಾಃ || ಜ್ಞಾನಪೋಷಕರತ್ವಾತ್ತು ವೇದಾಃ ಪುಷ್ಪಾಭಿಧಾಃ ಸ್ಮೃತಾಃ | ಅನ್ಯತ್ರ ಮಧುಕೃತ್ಪೋಷಾನ್ನಿತ್ಯತ್ವಾದಮೃತಾಶ್ಚ ತಾಃ || ವೇದವಾಚಃ ಸುರೈಃ ಪೇಯಾ ಭೋಗ್ಯತ್ವಾದಾಪ ಈರಿತಾಃ | ವೇದಪಾನಂ ವಿಚಾರಶ್ಚ ಶ್ರವಣಂ ಪಾಠ ಏವ ಚ || (೫) ದೇವೈರ್ವಿಚಾರಿತೇಭ್ಯಶ್ಚ ವೇದೇಭ್ಯೋ ವ್ಯಕ್ತತಾಂ ಗತಃ | ಜ್ಞಾನಾನಂದಸ್ವರೂಪತ್ವಾದ್ಯಶಸ್ತೇಜಃಸ್ವರೂಪಕಃ || ಇಂದ್ರಿಯಂ ಪರಮೈಶ್ವರ್ಯಾದ್ವೀರ್ಯರೂಪಶ್ಚ ಸರ್ವದಾ | ಸರ್ವಾನುಗ್ರಹಶಕ್ತಿತ್ವಾದನ್ನಾದ್ಯೋ ಬಲರೂಪತಃ | ರಸನಾಮಾ ಚ ಭಗವಾನ್ || ೨ ||**

ಅ || (೧) ಇತಿಹಾಸ ಪುರಾಣಗಳಿಗೂ ಅಥರ್ವಾಂಗಿರಸಗಳಿಗೂ ಸೋಮಾದಿಗಳೇ ಅಭಿಮಾನಿಗಳಾಗಿರುವುದರಿಂದ ಅಥರ್ವಾಂಗಿರ ಎಂದು ಹೆಸರುಳ್ಳವರು ಇತಿಹಾಸ ಪುರಾಣ ಎಂದೂ ಹೆಸರುಳ್ಳವರು. (ಶಬ್ದಾರ್ಥವನ್ನು ವಿಮರ್ಶಿಸುವಾಗಲೂ ಅವರಿಗೆ ಆ ಶಬ್ದವು ಯುಕ್ತವೆನ್ನುತ್ತಾರೆ—) ಅವರು ಮಳೆಯನ್ನು ಕೆಳಗೆ ಸುರಿಸುವುದರಿಂದ ಅಥರ್ವಾ ಎನಿಸುತ್ತಾರೆ. ಎಲ್ಲಾ ಅಂಗಗಳಿಗೂ ನಿಯಾಮಕರಾದ ಕಾರಣ ಆಂಗಿರಾ ಎನ್ನಿಸುತ್ತಾರೆ. ಅದುಕಾರಣ ಅಥರ್ವಾಂಗಿರ ಎಂದು ಹೆಸರುಳ್ಳವರು. ಮತ್ತು ಸೋಮನು ಮನಸ್ಸಿಗೆ ಅಭಿಮಾನಿಯಾಗಿರುವುದರಿಂದಲೂ, ಬೇರೆ ಮರುತ್‌ಗಳು ಪ್ರಾಣಾಪಾನಾದಿರೂಪರೂ ಇಂದ್ರಿಯಾಭಿಮಾನಿಗಳೂ ಆಗಿರುವುದರಿಂದ **ಅಂಗಾನಾಂ ರಸಾಃ** ಎನಿಸಿಕೊಳ್ಳುತ್ತಾರೆ. (೨) (೫ನೇ ಖಂಡದಲ್ಲಿದ್ದ **ಗುಹ್ಯಾ ಏವಾದೇಶಾಃ** ಎಂಬ ವಾಕ್ಯಕ್ಕೆ ಅರ್ಥ ಹೇಳುತ್ತಾರೆ—) ಋಜುಗಳು ರುದ್ರಾದಿಗಳಿಗೆಲ್ಲರಿಗೆ ಗುರುಗಳಾಗಿರುವುದರಿಂದ ಗೋಪ್ಯವಾದುದೆಲ್ಲವನ್ನು ಉಪದೇಶಿಸತಕ್ಕವರು. ಅದುಕಾರಣ ಬ್ರಹ್ಮಪದವಿಗೆ ಯೋಗ್ಯರಾದ, ಬ್ರಹ್ಮನೇ ಮೊದಲಾದ ಎಲ್ಲಾ ಋಜುಗಳೂ ಗುಹ್ಯಾದೇಶರೆನಿಸಿಕೊಳ್ಳುತ್ತಾರೆ. (೩) (**ಬ್ರಹ್ಮೈವ ಪುಷ್ಪಂ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) **ಅನಂತಾ ವೈ ವೇದಾಃ** ಎಂಬ ಪ್ರಮಾಣದಿಂದ ವೇದಗಳು ಅನಂತಗಳಾಗಿರುವುದರಿಂದ ವೇದಗಳ ರಾಶಿಗೆ ಬ್ರಹ್ಮ ಎಂದು ಹೆಸರು. (೪ (೧ನೇ ಖಂಡದಲ್ಲಿದ್ದ **ಏತಾಃ ಋಚಃ ಏತಮೃಗ್ವೇದಮಭ್ಯತಪನ್** ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಅಗ್ನಿ ಮತ್ತು ಅವನ ಅಧೀನರಾದ ವಸುಗಳು ಋಗ್ವೇದವನ್ನು ವಿಮರ್ಶಿಸಿದರು. ಅವರೇ ಮಧು ಎನಿಸಿಕೊಂಡ ವಿಷ್ಣುವನ್ನು ಪ್ರಕಟಿಸುವುದರಿಂದ **ಮಧುಕೃತಃ** ಎನಿಸುತ್ತಾರೆ. ವೇದಗಳು ಜ್ಞಾನವನ್ನು ವೃದ್ಧಿಗೊಳಿ

ಸುವುದರಿಂದ ಪುಷ್ಪ ಎನಿಸುತ್ತವೆ ಪ್ರಸಿದ್ಧ ಪುಷ್ಪವೂ ಕೂಡ ತುಂಬಿಗೆ ಉಪಕರಿಸುವುದರಿಂದ ಪುಷ್ಪವೆನಿಸುತ್ತದೆ. ಋಗ್ವೇದ ಮೊದಲಾದ ವೇದಗಳಲ್ಲಿರುವ ವಚನಗಳನ್ನು ಯಾರೂ ರಚಿಸದಿರುವುದರಿಂದ ನಿತ್ಯವಾಗಿರುವ ಪ್ರಯುಕ್ತ ಅಮೃತಗಳೆನಿಸುತ್ತವೆ. ದೇವತೆಗಳು ವೇದವಚನಗಳನ್ನು ವಿಚಾರಮಾಡಿ ರಕ್ಷಿಸುವುದರಿಂದ ವೇದವಚನಗಳು ಆಪಃ ಎನಿಸುತ್ತವೆ ವೇದಪಾನವೆಂದರೆ—ವೇದಾರ್ಥ ವಿಚಾರ, (ವಿಮರ್ಶೆ) ಗುರುಗಳು ಹೇಳಿದುದನ್ನು ಕೇಳುವುದು. ವೇದಗಳನ್ನು ಪಠಿಸುವುದು ಇವುಗಳೇ. (೫) (**ತಸ್ಯಾಭಿತಪ್ತಸ್ಯ ಯಶಃ** ಇದುಮೊದಲಾದ ವಾಕ್ಯಗಳ ಅರ್ಥ ಹೇಳುತ್ತಾರೆ—) ಋಗ್ವೇದಕ್ಕೆ ಅಭಿಮಾನಿಗಳಾದ ದೇವತೆಗಳು ಋಗ್ವೇದವನ್ನು ವಿಮರ್ಶಿಸಿದ ಮೇಲೆ ಅದರಿಂದ ವಾಸುದೇವನು ಪ್ರಕಟನಾದನು. ಅಂದರೆ—ಜ್ಞಾನಾನಂದ ಸ್ವರೂಪನೂ ಪ್ರಕಾಶರೂಪನೂ, ಪರಮೈಶ್ವರ್ಯಸ್ವರೂಪನೂ, ಸರ್ವರಿಗೆ ಅನುಗ್ರಹ ಮಾಡಲಿಕ್ಕೆ ಶಕ್ತನೂ, ಬಲಸ್ವರೂಪನೂ, ಸರ್ವಶ್ರೇಷ್ಠಸ್ವರೂಪನೂ ಆದ ವಾಸುದೇವನು ಪ್ರಕಟನಾದನು. ॥ ೨ ॥

ಪೀ—೧ನೇ ಖಂಡದಲ್ಲಿದ್ದ **ತದಾದಿತ್ಯಮಭಿತೋಽಶ್ರಯತ್** ಎಂಬುದರ ಅರ್ಥ ಹೇಳುತ್ತಾರೆ—

**ಭಾ. ॥ (೧) ಸಂಸ್ಥಿತಃ ಸೂರ್ಯಮಂಡಲೇ । ವ್ಯಕ್ತರದ್ಧರ್ಮಮೋಕ್ಷಾದೀನ್ದೇವಾನಾಂ ಭಗವಾನ್ಹರಿಃ ॥ ಋಕ್ಪ್ರೋಕ್ತೋ ಲೋಹಿತಾಕಾರೋ ವಾಸುದೇವಃ ಪರಃ ಪುಮಾನ್। ಸ ಏವ ಸೂರ್ಯಲೌಹಿತ್ಯೇ ಪ್ರಾಚ್ಯರಶ್ಮಿಷು ಸಂ (ಚ) ಸ್ಥಿತಃ ॥ (೨) ಸಂಕರ್ಷಣಃ ಶುಕ್ಲವರ್ಣೋ ಯಜುರ್ವೇದೋದಿತಃ ಪ್ರಭುಃ । ಶುಕ್ಲೇ ವರ್ಣೇ ಚ ಸೂರ್ಯಸ್ಯ ದಕ್ಷರಶ್ಮಿಷು ಸಂ (ಚ) ಸ್ಥಿತಃ ॥ (೩) ಪ್ರದ್ಯುಮ್ನಃ ಶ್ಯಾಮವರ್ಣಸ್ತು ಸಾಮವೇದೋದಿತಃ ಪ್ರಭುಃ । ಪ್ರತ್ಯಗ್ರಶ್ಮಿಷು ಸೂರ್ಯಸ್ಯ ಶ್ಯಾಮವರ್ಣೇಽಪಿ ಚ ಸ್ಥಿತಃ ॥ (೪) ಅನಿರುದ್ಧಃ ಸುನೀಲಶ್ಚ ಇತಿಹಾಸಪುರಾಣಯೋಃ । ಅಥರ್ವವೇದೇ ಚೋಕ್ತಸ್ಸನ್ನುದಗ್ರಶ್ಮಿಷು ಸಂಸ್ಥಿತಃ । ಸುಕೃಷ್ಣೇ ಸೂರ್ಯರೂಪೇ ಚ ॥ (೫) ಮಧ್ಯೇ ನಾರಾಯಣಃ ಪ್ರಭುಃ । ಊರ್ಧ್ವರಶ್ಮಿಷು ಸಂಸ್ಥಶ್ಚ ಪ್ರೋದ್ಯದಾದಿತ್ಯಸಪ್ರಭಃ ॥ ಮಹಾಮರೀಚಿಪುಂಜೇನ ಚಲತೀವಾಚಲೋಽಪಿ ಸನ್। ಸ ವಾಚ್ಯಃ ಸರ್ವವೇದಾನಾಂ ॥ (೬) ಏವಂ ಪಂಚಾತ್ಮಕೋ ಹರಿಃ । ವೇದಾನಾಂ ಸಾರಭೂತೋಽಸೌ ವೇದಾನಾಂ ನಿತ್ಯತಾಪ್ರದಃ ॥ ಅತೋಽಮೃತಾನಾಮಮೃತೋ ರಸಾನಾಂ ರಸ ಏವ ಚ । ಇತಿ ಸಾಮಸಂಹಿತಾಯಾಂ ॥ ೩ ॥**

ಅ ॥ (೧) ಸೂರ್ಯಮಂಡಲದಲ್ಲಿದ್ದ ವಾಸುದೇವನು ದೇವತೆಗಳಿಗೆ ಧರ್ಮ ಮೋಕ್ಷ ಮೊದಲಾದವುಗಳನ್ನು ಕೊಟ್ಟನು. ಋಗ್ವೇದದಲ್ಲಿ ಹೇಳಲ್ಪಟ್ಟ ಕೆಂಪು ಬಣ್ಣವುಳ್ಳ ಸರ್ವೋತ್ತಮನಾದ ವಾಸುದೇವನೇ ಸೂರ್ಯಮಂಡಲದ ಮೂಡುದಿಕ್ಕಿನ ಕಿರಣಗಳಲ್ಲಿರತಕ್ಕ ಕೆಂಪುಬಣ್ಣದಲ್ಲಿದ್ದಾನೆ (೨) (೨ನೇ ಖಂಡದಲ್ಲಿದ್ದ **ಆದಿತ್ಯಸ್ಯ ಶುಕ್ಲಂ ರೂಪಂ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಯಜುರ್ವೇದದಲ್ಲಿ ವರ್ಣಿಸಲ್ಪಟ್ಟ ಶುಭ್ರ (ಬಿಳಿಪು) ವರ್ಣನಾದ ಸಂಕರ್ಷಣನು ಸೂರ್ಯಮಂಡಲದ ತೆಂಕಣ ಕಿರಣಗಳಲ್ಲಿರತಕ್ಕ ಬಿಳಿಪು ಬಣ್ಣದಲ್ಲಿರುತ್ತಾನೆ (೩) (೩ನೇ ಖಂಡದಲ್ಲಿದ್ದ **ಆದಿತ್ಯಸ್ಯ ಕೃಷ್ಣಂ ರೂಪಂ** ಎಂಬುದರ ಅರ್ಥ ಹೇಳುತ್ತಾರೆ—) ಸಾಮವೇದದಲ್ಲಿ ವರ್ಣಿಸಲ್ಪಟ್ಟ ನೀಲವರ್ಣನಾದ ಪ್ರದ್ಯುಮ್ನನು ಸೂರ್ಯಮಂಡಲದ ಪಡುದಿಕ್ಕಿನ ಕಿರಣಗಳಲ್ಲಿಯೂ ಅವುಗಳ ನೀಲವರ್ಣದಲ್ಲಿಯೂ ಇದ್ದಾನೆ. (೪) (೪ನೇ ಖಂಡದಲ್ಲಿದ್ದ **ಆದಿತ್ಯಸ್ಯ ಪರಃ ಕೃಷ್ಣಂ ರೂಪಂ** ಎಂಬುದರ ಅರ್ಥಹೇಳುತ್ತಾರೆ.) ಇತಿಹಾಸ ಪುರಾಣಗಳಲ್ಲಿಯೂ ಅಥರ್ವಣವೇದದಲ್ಲಿಯೂ ವರ್ಣಿಸಲ್ಪಟ್ಟ ಅತಿ ಕಪ್ಪಾದ ಅನಿರುದ್ಧನು ಸೂರ್ಯಮಂಡಲದ ಬಡಗುರಶ್ಮಿ

ಗಳಲ್ಲಿಯೂ ಅವುಗಳ ಅತಿ ಕಪ್ಪುಬಣ್ಣದಲ್ಲಿಯೂ ಇದ್ದಾನೆ. (೫) (೫ನೇ ಖಂಡದಲ್ಲಿದ್ದ **ಆದಿತ್ಯಸ್ಯ ಮಧ್ಯೇ** ಎಂಬ ವಾಕ್ಯಕ್ಕೆ ಅರ್ಥ ಹೇಳುತ್ತಾರೆ—) ಸೂರ್ಯಮಂಡಲದ ಮಧ್ಯದಲ್ಲಿಯೂ ಮೇಲು ಭಾಗದ ಕಿರಣ ಗಳಲ್ಲಿಯೂ ಇರುವ ಮೂಡುವ ಸೂರ್ಯನಂತೆ ಕಾಂತಿಯಿರುವ ಸರ್ವವೇದಗಳಲ್ಲಿ ವರ್ಣಿಸಲ್ಪಡುವ ಶ್ರೀನಾರಾಯಣನು ತಾನು ಕದಲದಿರುವವನಾದರೂ ಮಹತ್ತಾದ ಕಿರಣಗಳ ಗುಂಪಿನಿಂದ ಕದಲುವಂತೆ ತೋರುತ್ತಾನೆ. (೬) (೫ನೇಖಂಡದ ೪ನೇಮಂತ್ರದಲ್ಲಿ **ತೇ ವಾ ಏತೇ ರಸಾನಾಂರಸಾಃ** ಇತ್ಯಾದಿಗಳಿಗೆ ಅರ್ಥಹೇಳುತ್ತಾರೆ—) ಹೀಗೆ ವಾಸುದೇವ ಮೊದಲಾದ ಐದು ರೂಪಗಳುಳ್ಳ ಶ್ರೀಹರಿಯು ಎಲ್ಲಾ ವೇದ ಗಳಲ್ಲಿಯೂ ಮುಖ್ಯವಾಗಿ ವರ್ಣಿಸಲ್ಪಡುವವನು, ಆದುಕಾರಣ ರಸಾನಾಂ ರಸತಮಃ ಎನಿಸುತ್ತಾನೆ. ಶ್ರೀಹರಿಯೇ ವೇದಗಳನ್ನು ಅನಾದಿನಿತ್ಯಗಳಾಗುವಂತೆ ಮಾಡಿದವನು, ಆದುಕಾರಣ ಅಮೃತಾನಾಂ ಅಮೃತಃ ಎನ್ನಿಸುತ್ತಾನೆಂದು ಸಾಮಸಂಹಿತೆಯಲ್ಲಿದೆ ‖ ೩ ‖

ಟೀ—ಈ ತನಕ ಪ್ರಮಾಣವನ್ನು ಹೇಳಿ ಹಿಂದೆ ಹೇಳಿದ ವಿದ್ಯೆಯು ಬ್ರಹ್ಮನನ್ನು ಹೇಳುತ್ತದೆಂದು ಹೇಳಿದರು. ಈಗ ಬ್ರಹ್ಮಹೊರತಾದ ಅಚೇತನ (ಜಡ) ವನ್ನು ಉಪಾಸನೆಮಾಡಬೇಕೆಂದು ಅಲ್ಲಿ ಹೇಳುತ್ತದೆಂದು ಪರರು ಹೇಳುತ್ತಾರೆ. ಅದು ಯುಕ್ತಿವಿರುದ್ಧವೆನ್ನುತ್ತಾರೆ—

**ಭಾ. ‖ (೧) ನ ಚಾಚೇತನಮಾತ್ರಮುಪಾಸಿತಂ ಪುರುಷಾರ್ಥಪ್ರದಾನಶಕ್ತಂ ‖ (೨) ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರಬ್ರೂಯಾದಿತಿ ವಾಕ್ಯಶೇಷಾಚ್ಚೈತದವಗಮ್ಯತೇ ‖ (೩) ಯ ಏತಾಮೇವಂ ಬ್ರಹ್ಮೋಪನಿಷದಂ ವೇದೇತಿ ಚ । ಕಥಂ ಚಾಚೇತನೋಪಾಸನಂ ಬ್ರಹ್ಮಾದಿಪದಪ್ರದಂ ಭವತಿ ‖ (೪) ನ ವೈ ತತ್ರ ನ ನಿಮ್ಲೋಚೋ ನೋದಿಯಾಯ ಕದಾಚನ ।' (೫) ಸಕೃದ್ದಿವಾ ಹ್ಯೇವಾಸ್ಮೈ ಭವತೀತ್ಯಾದಿ ಚ ಮುಕ್ತಸ್ಯೈವ ಮುಖ್ಯತೋ ಯುಜ್ಯತೇ ‖ ೪ ‖**

ಅ ‖ (೧) (ಈ ವಿದ್ಯೆಯಲ್ಲಿ ಹೇಳಲ್ಪಡುವವನು ವಸ್ವಾದಿದೇವತೆಗಳಿಗೆ ಪದಪ್ರಾಪ್ತಿಯೆಂಬ ಪುರು ಷಾರ್ಥವನ್ನು ಕೊಡುವವನೆಂದು ಹೇಳುತ್ತದೆ) ಚೇತನಾಶ್ರಿತವಾಗದಿರುವ ಅಚೇತನವು ಪ್ರತಿಪಾದಿಸಲ್ಪ ಡುತ್ತದೆಂದು ಇಟ್ಟುಕೊಂಡರೆ ಅದು ಅಸ್ವತಂತ್ರವಾಗಿರುವುದರಿಂದ ಪುರುಷಾರ್ಥವನ್ನು (ವಸ್ವಾದಿ ಪದವಿ ಗಳನ್ನು) ಕೊಡಲಿಕ್ಕೆ ಸಮರ್ಥವಲ್ಲ. (ಆದುಕಾರಣ ಈ ವಿದ್ಯೆಯಲ್ಲಿ ಪರಬ್ರಹ್ಮನೇ ಹೇಳಲ್ಪಡುತ್ತಾನೆಂದು ಇಟ್ಟುಕೊಳ್ಳಬೇಕು.) (೨) (ಕೊನೆಭಾಗದಲ್ಲಿ ಪರಬ್ರಹ್ಮನನ್ನು ಉಪದೇಶಿಸಿದರು ಎಂದು ಹೇಳಿದಪ್ರಯುಕ್ತ ಪರಬ್ರಹ್ಮನೇ ಇಲ್ಲಿ ಹೇಳಲ್ಪಡುತ್ತಾನೆ, ಅಚೇತನವಲ್ಲವೆನ್ನುತ್ತಾರೆ—) ತಂದೆಯು ಜ್ಯೇಷ್ಠಪುತ್ರನಿಗೆ ಪರ ಬ್ರಹ್ಮನನ್ನು ಉಪದೇಶಿಸಿದನು, ಎಂಬ ವಾಕ್ಯದಿಂದಲೂ ಬ್ರಹ್ಮನೇ ಹೇಳಲ್ಪಡುತ್ತಾನೆ, ಅಚೇತನವಲ್ಲ ವೆಂದು ತಿಳಿಯುತ್ತದೆ. (೩) (ಈ ವಾಕ್ಯದಲ್ಲಿ ತಂದೆಯು ಬ್ರಹ್ಮನನ್ನು ಉಪದೇಶಿಸಬೇಕೆಂದು ಹೇಳಿಯದೆ. ಈ ವಿದ್ಯೆಯು ಬ್ರಹ್ಮನನ್ನು ಉಪದೇಶಿಸುತ್ತದೆಂದು ಹೇಳಲಿಲ್ಲ, ಎಂದರೆ— ಸ್ಪಷ್ಟವಾಗಿ ಹೇಳುವ ಕೊನೆಯ ಇನ್ನೊಂದು ವಾಕ್ಯವನ್ನು ಹೇಳುತ್ತಾರೆ—) ಈ ಉಪನಿಷತ್ತು ಪರಬ್ರಹ್ಮನನ್ನು ವರ್ಣಿಸುತ್ತದೆಂದು ಯಾ ವನು ತಿಳಿಯುತ್ತಾನೋ (ಅತನು ಮುಕ್ತನಾಗುತ್ತಾನೆ.) ಅಚೇತನೋಪಾಸನೆಯಿಂದ (**ಸಾಧ್ಯಾನಾಮೇ ವೈಕೋ ಭೂತ್ವಾ** ಇತ್ಯಾದಿಗಳಲ್ಲಿ **ಹೇಳತಕ್ಕ**) ಪರಮ ಪೂಜ್ಯವಾದ ಬ್ರಹ್ಮಾದಿಪದಪ್ರಾಪ್ತ್ಯಾದಿಗಳು ಸರ್ವಥಾ ಕೂಡಲಾರವು. (೪) (ಮತ್ತು ಹಿಂದೆ ಹೇಳಿದ್ದಕ್ಕೆ ಸಮ್ಮತಿಯಾಗಿ ಹೇಳತಕ್ಕ **ನ ವೈ ತತ್ರ** ಇತ್ಯಾದಿ ಶ್ಲೋಕಗಳಲ್ಲಿ ಪರಬ್ರಹ್ಮನೇ ಹೇಳಲ್ಪಡುತ್ತಾನೆ ಆದುಕಾರಣ ಹಿಂದಿನ ವಿದ್ಯೆಯಲ್ಲಿಯೂ ಪರ ಬ್ರಹ್ಮನೇ ಹೇಳಲ್ಪಡುತ್ತಾನೆನ್ನುತ್ತಾರೆ )ಪರಬ್ರಹ್ಮನಿಗೆ ಯಾವ ದೋಷಗಳೂ ಇಲ್ಲ. (ಸೂರ್ಯನಿಗೆ ಇರು ವಂತೆ) ಉದಯಾಸ್ತಮಯಾದಿ ದೋಷಗಳೂ ಇಲ್ಲ. (ಎಲೋ ದೇವತೆಗಳಿರಾ ಆ ಪರಬ್ರಹ್ಮನ ಪ್ರಸಾದ

ದಿಂದ ಅವೃದ್ಧಿಯನ್ನು ಹೊಂದಲಾರೆ. ವೃದ್ಧಿಯನ್ನೇ ಹೊಂದುವೆನು.) ಈ ವಿದ್ಯೆಯು ಭಗವತ್ಪರವಲ್ಲವಾದರೆ **ನ ನೈ ತತ್ರ** ಎಂಬ ಶ್ಲೋಕವು ಕೂಡದೆಹೋಗುವುದು. (೫) (ಈ ವಿದ್ಯೆಯನ್ನು ತಿಳಿದವನಿಗೆ **ನ ಹವಾ ಅಸ್ಮದುದೇತಿ ನ ನಿಮ್ಲೋಚತಿ ಸಕೃದ್ದಿವಾ** ಇತ್ಯಾದಿಗಳಲ್ಲಿ ಮುಕ್ತಿಯಲ್ಲಿರತಕ್ಕ ಫಲವು ಸಿಗುತ್ತದೆಂದು **ಹೇಳಿದೆ** ಆ ಫಲದಿಂದ ಈ ವಿದ್ಯೆಯು ಪರಬ್ರಹ್ಮನನ್ನು ಹೇಳುತ್ತದೆಂದು ತಿಳಿಯುತ್ತದೆ ಏಕೆಂದರೆ ಈ ವಿದ್ಯೆಯು ಇನ್ನೊಬ್ಬರನ್ನು ಹೇಳುತ್ತದೆಂದಾದರೆ ಪರಬ್ರಹ್ಮನಿಂದ ಸಿಗುವ ಮೋಕ್ಷವು ಸಿಗಲಾರದು ) (**ಸಕೃದ್ದಿವಾ** ಇತ್ಯಾದಿಗಳಲ್ಲಿ ಹೇಳತಕ್ಕ ಫಲವು ಮುಕ್ತಿಯಲ್ಲಿರತಕ್ಕುದೆಂದು ಹೇಗೆ ಸಿದ್ಧವಾಗುತ್ತದೆಂದರೆ—) ಯಾವಾಗಲೂ ಹಗಲೇ ಇವನಿಗೆ ಇರುತ್ತದೆ ಸೂರ್ಯೋದಯವಾಗಲೀ ಅಸ್ತಮಾನವಾಗಲೀ ಅಪೂರ್ಣತೆಯಾಗಲೀ ಇಲ್ಲವೇ ಇಲ್ಲ, ಇತ್ಯಾದಿ ಫಲವು ಮೋಕ್ಷವನ್ನು ಹೊಂದಿದವನಿಗೇನೇ ಮುಖ್ಯವಾಗಿ ಕೂಡುತ್ತದೆ. (ಇತರರಿಗೆ ಸರ್ವಥಾ ಕೂಡಲಾರದು ) || ೪ ||

ಪೀ—**ಯಶಸ್ತೇಜಃ** ಇತ್ಯಾದಿಗಳಲ್ಲಿ ಹೇಳಿದ ಯಶಸ್ಸು ಮೊದಲಾದುದು ಅಚೇತನಕ್ಕೆ ಕೂಡದಿರುವುದರಿಂದ ಈ ವಿದ್ಯೆಯಲ್ಲಿ ಅಚೇತನವು ಹೇಳಲ್ಪಡುತ್ತದೆಂದು ಅನ್ನ ಕೂಡದೆನ್ನುತ್ತಾರೆ—

ಭಾ. || (೧) ಯಶಸ್ತೇಜ ಇಂದ್ರಿಯಂ ವೀರ್ಯಮನ್ನಾದ್ಯರಸತ್ವಂ ಚ ಭಗವಂತಂ ವಿನಾ ಕಸ್ಯ ಮುಖ್ಯತೋ ಯುಜ್ಯತೇ || (೨)ತಸ್ಯ ನಾಮ ಮಹದ್ಯಶಃ | ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ | ಜ್ಞಾನವಿಜ್ಞಾನ(ವೈರಾಗ್ಯ)ಯೋಶ್ಚೈವ ಷಣ್ಣಾಂ ಭಗ ಇತೀರಣಾ || ರಸೋ ವೈ ಸಃ || (೩) ಸುಖಾತ್ಮಕಂ ಷಡ್ಗುಣವಿಗ್ರಹಂ ಪರಂ ಹೃದಿ ಸ್ಥಿತಂ ಬ್ರಹ್ಮ ನಿರಂಜನಂ ಸ್ವರುಕ್ | ಐಶ್ವರ್ಯವೈರಾಗ್ಯಯಶೋವಿಬೋಧವೀರ್ಯಶ್ರಿಯಾ ಪೂರ್ಣಮಹಂ ಪ್ರಪದ್ಯೇ || ಅಹಂ ತತ್ತೇಜೋ ರಶ್ಮಿರ್ನಾರಾಯಣಂ ಪುರುಷಂ ಜಾತಮಗ್ರತ ಇತ್ಯಾದೇಶ್ಚ || (೪)ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣ ಇತಿಚ | ನ ಚಾಚೇತನಸ್ಯೈಶ್ವರ್ಯಾದಿರೂಪತ್ವಂ ಯುಜ್ಯತೇ | ಜ್ಞಾನಾತ್ಮಕೋ ಭಗವಾನೈಶ್ವರ್ಯಾತ್ಮಕೋ ಭಗವಾನ್ ಶಕ್ತ್ಯಾತ್ಮಕೋ ಭಗವಾನ್ | ಇತಿ ಚ ಶ್ರುತಿಃ || (೫) ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾದಿತಿ ಸರ್ವವೇದಪ್ರತಿಪಾದ್ಯತ್ವಂ ಭಗವತ ಉಕ್ತಂ ಭಗವತಾ || ೫ ||

ಅ || (೧) *ಯಶಸ್ಸು ತೇಜಸ್ಸು ಮೊದಲಾದುದು ಶ್ರೀಹರಿಗೆ ಹೊರತು ಮುಖ್ಯವಾಗಿ ಯಾರಿಗೆ ಕೂಡುವುದು? (ಯಾರಿಗೂ ಕೂಡಲಾರದು.) ಏಕೆಂದರೆ – ಬೇರೆಯವರಿಗೆ ಇದೆ ಎಂಬಲ್ಲಿ ಪ್ರಮಾಣವಿಲ್ಲ. ಶ್ರೀಹರಿಗೆ ಅವುಗಳು ಮುಖ್ಯವಾಗಿ ಇವೆ, ಎಂಬಲ್ಲಿ ಪ್ರಮಾಣಗಳನ್ನು ಹೇಳಿರುವೆವು. (೨) (ಬೇರೆ ಪ್ರಮಾಣಗಳನ್ನು ಹೇಳುತ್ತಾರೆ—) ಆ ಶ್ರೀಹರಿಗೇನೇ ಮಹತ್ ಯಶಃ ಎಂಬ ಹೆಸರು. ಪೂರ್ಣ ಐಶ್ವರ್ಯಪೂರ್ಣಗಳಾದ ವೀರ್ಯ, (ಪರಾಕ್ರಮ) ಯಶಸ್ಸು ಸಂಪತ್ತು, ಜ್ಞಾನ, ವಿಜ್ಞಾನ (ವೈರಾಗ್ಯ) ಈ ಆರಕ್ಕೇನೇ ಭಗ ಎಂದು ಹೆಸರು. (ಶ್ರೀಹರಿಯೇ ಭಗವಂತನು.) ಶ್ರೀಹರಿಯೇ ರಸನು. (೩)ಸುಖಸ್ವರೂಪನು, ಆರು ಗುಣಗಳೇ ಶರೀರವಾಗಿರುವವನು, ಸರ್ವೋತ್ತಮನು, ಸರ್ವರ ಹೃದಯದಲ್ಲಿರುವವನು, ನಿರ್ದೋಷನು, ತೇಜೋರೂಪನು. ಐಶ್ವರ್ಯ, ವಿರಕ್ತಿ, ಯಶಸ್ಸು, ವಿಜ್ಞಾನ ವೀರ್ಯ, ಸಂಪತ್ತುಗಳಿಂದ ಪೂರ್ಣನು, ಇಂತಹ ಶ್ರೀನಾರಾಯಣನನ್ನು ಮರೆಹೋಗುವೆನು. ಬಿಡಲ್ಪಡದಿರುವವನು, ವ್ಯಾಪ್ತನು, ತೇಜೋರೂಪನು, ಸೂರ್ಯಾದಿಗಳಿಗೆ ಪ್ರೇರಕನು, ಷಡ್ಗುಣಪೂರ್ಣನು, ಸರ್ವರಿಗಿಂತ ಮೊದಲು ಇದ್ದವನು, ಇಂತಹ ನಾರಾ

* ಇವುಗಳ ಅರ್ಥವು ೧೨೧ನೇ ಪುಟದಲ್ಲಿ ವಿವೃತವಾಗಿದೆ

ಯಣನನ್ನು ಧ್ಯಾನಿಸುವೆನು, ಇದುಮೊದಲಾದ ಪ್ರಮಾಣಗಳಿಂದ (ಶ್ರೀಹರಿಯ ಹೊರತು ಮುಖ್ಯವಾಗಿ ಯಶಸ್ಸು ಮೊದಲಾದುದು ಯಾರಿಗೂ ಕೂಡಲಾರದು) (೪) (ಶ್ರೀಹರಿಯು ಆದಿತ್ಯಾಂತರ್ಗತನೆಂಬಲ್ಲಿ ಪ್ರಮಾಣ ಹೇಳುತ್ತಾರೆ —) ಸೂರ್ಯಮಂಡಲದ ಮಧ್ಯದಲ್ಲಿರುವ ಶ್ರೀನಾರಾಯಣನನ್ನು ಧ್ಯಾನಿಸಬೇಕು, ಇತ್ಯಾದಿ ಪ್ರಮಾಣವು. (ಅಚೇತನದಲ್ಲಿ ತೇಜಸ್ಸು ಕಥಂಚಿತ್ ಕೂಡಿದರೂ ಐಶ್ವರ್ಯಾದಿಗಳು ಸರ್ವಥಾ ಕೂಡಲಾರವು ಎನ್ನುತ್ತಾರೆ—) ಜಡಭೂತವಾದುದಕ್ಕೆ ಐಶ್ವರ್ಯಾದಿರೂಪವು ಸರ್ವಥಾ ಕೂಡುವುದಿಲ್ಲ. (ಶ್ರೀಹರಿಗೆ ಐಶ್ವರ್ಯಾದಿ ರೂಪವಿದೆ ಎಂಬಲ್ಲಿ ವೇದಪ್ರಮಾಣ ಹೇಳುತ್ತಾರೆ —) ಶ್ರೀಹರಿಯು ಜ್ಞಾನಸ್ವರೂಪನು ಐಶ್ವರ್ಯಸ್ವರೂಪನು, ಶಕ್ತಿಸ್ವರೂಪನು, ಎಂದು ವೇದವು. (೫) (ಎಲ್ಲಾ ವೇದಗಳೂ ಶ್ರೀಹರಿಯ ಗುಣಗಳನ್ನೇ ಹೇಳುತ್ತವೆ ಎಂಬುದಕ್ಕೆ ಸೂತ್ರಪ್ರಮಾಣವನ್ನು ಹೇಳುತ್ತಾರೆ—) ಎಲ್ಲಾ ವೇದಗಳಿಂದಲೂ ಶ್ರೀಹರಿಯು ಹೇಳಲ್ಪಡುತ್ತಾನೆಂದು ವೇದವ್ಯಾಸರು §**ಸರ್ವವೇದಾಂತ** ಎಂಬ ಸೂತ್ರದಲ್ಲಿ ತಮ್ಮ ತಮ್ಮ ಶಕ್ತ್ಯನುಸಾರ ಎಲ್ಲಾ ವೇದಗಳನ್ನು ಶ್ರವಣ ಮನನಾದಿ ರೂಪವಾಗಿ ವಿಮರ್ಶೆ ಮಾಡಿ ಪರಬ್ರಹ್ಮನನ್ನು ತಿಳಿಯಬೇಕೆಂದು ಹೇಳಿರುವರು. ॥ ೫ ॥

ಪೀ— ಪುರಾಣ ವೇದ ಇತಿಹಾಸಗಳೆಲ್ಲವೂ ಶ್ರೀಹರಿಯ ಮಹಿಮೆಯನ್ನೇ ಹೇಳುತ್ತವೆನ್ನುತ್ತಾರೆ—

**ಭಾ. ॥ (೧) ಸ ಸರ್ವನಾಮಾ ಸ ಚ ವಿಶ್ವರೂಪಃ ಪ್ರಸೀದತಾಂ ಬ್ರಹ್ಮ ಮಹಾವಿಭೂತಿಃ । ಇತಿ ಚ ॥ (೨) ಸರ್ವೇ ವೇದಾ ಯತ್ಪದಮಾಮನಂತಿ ॥ (೩) ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ ॥ (೪) ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥ (೫) ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ ಇತ್ಯಾದೇಶ್ಚ ಉಪನಿಷತ್ಸ್ವಾಚ್ಚ ವಿಶೇಷತೋ ನ ಯತ್ಕಿಂಚಿದುಚ್ಯತ ಇತಿ ವಕ್ತುಂ ಯುಕ್ತಂ ॥ (೬) ವಿಷ್ಣುರುಕ್ತಃ ಸರ್ವವೇದೈರ್ಮಂತ್ರೈರಪಿ (ತ್ರೇಷು ತು) ವಿಶೇಷತಃ । ಆರಣ್ಯಕೇ ವಿಶೇಷೇಣ ನೈವಾನ್ಯತ್ಕಿಂಚಿದುಚ್ಯತೇ ॥ ಕರ್ಮಾರ್ಥಂ ಚ ಬ್ರಾಹ್ಮಣಂ ಸ್ಯಾದಮುಖ್ಯಾರ್ಥವಿವಕ್ಷಯಾ । ಮುಖ್ಯತೋ ವಿಷ್ಣುರೈವೈಕೋ ಬ್ರಾಹ್ಮಣೇಷ್ವಪಿ ಕಥ್ಯತೇ ॥ ಆರಣ್ಯಕೇಷ್ವೃತೇ ವಿಷ್ಣುಂ ನೈವಾನ್ಯತ್ಕಿಂಚಿದುಚ್ಯತೇ । ಸೂತ್ರಾತ್ಮಾ ತೂಚ್ಯತೇ ವಿಷ್ಣೋಸ್ತದ್ವಿಶಿಷ್ಟತ್ವವಿತ್ತಯೇ ॥ ಕುತ್ರಚಿತ್ತದುಪಾಸ್ತಿಶ್ಚ ತಸ್ಯಾಧ್ಯರ್ಥತನುತ್ವತಃ । ತಸ್ಮಿನ್ವಿಷ್ಣೋರುಪಾಸ್ತ್ಯರ್ಥಂ ನಾನ್ಯಥಾ ಕಿಂಚಿದುಚ್ಯತೇ ॥ ಇತಿ ಬ್ರಹ್ಮಾಂಡೇ ॥ ೬ ॥**

ಅ ॥ (೧) ಎಲ್ಲಾ ನಾಮಗಳುಳ್ಳವನು, ವಿಶ್ವರೂಪ (ಸರ್ವಜಗತ್ತಿನಲ್ಲಿ ವ್ಯಾಪಿಸಿದ ರೂಪ)ಗಳುಳ್ಳವನು, ಮಹಾ ಐಶ್ವರ್ಯವುಳ್ಳವನು, ಇಂತಹ ಬ್ರಹ್ಮನು ಸಂತುಷ್ಟನಾಗಲಿ (೨) ಎಲ್ಲಾ ವೇದಗಳೂ ಶ್ರೀಹರಿಯ ಸ್ವರೂಪವನ್ನೇ ಹೇಳುತ್ತವೆ (೩) ಎಲ್ಲಾ ಋಕ್ಕುಗಳೂ, ವೇದಗಳೂ, ಧ್ವನಿಗಳೂ ಎಲ್ಲವೂ ಶ್ರೀನಾರಾಯಣನು ನಿರ್ದೋಷ ಗುಣಗಳಿಂದ ಪೂರ್ಣನೆಂದೇ ಹೇಳುತ್ತವೆ. (೪) ವೇದ ರಾಮಾಯಣ ಪುರಾಣ ಭಾರತ ಇವುಗಳಲ್ಲಿ ಆದಿಯಲ್ಲಿಯೂ ಅಂತ್ಯದಲ್ಲಿಯೂ ಮಧ್ಯದಲ್ಲಿಯೂ ಎಲ್ಲೆಡೆಯಲ್ಲಿಯೂ ವಿಷ್ಣುವೇ ವರ್ಣಿಸಲ್ಪಡುತ್ತಾನೆ (೫) ಎಲ್ಲಾ ನಾಮಗಳೂ ಯಾರನ್ನು ಹೇಳುತ್ತವೋ ಅಂತಹ ವಿಷ್ಣುವೇ ಸರ್ವೋತ್ತಮನೆನ್ನುತ್ತಾರೆ, ಇದುಮೊದಲಾದ ಪ್ರಮಾಣಗಳಿಂದಲೂ, * ಉಪನಿಷತ್ತೂ ಆಗಿರುವುದ

§ ಬ್ರ. ಸೂ ಅ ೩ ಪಾ. ೩ ಸೂ ೧ ಓ. V ಪು 690, 691ರಲ್ಲಿ ವಿವರಿಸಿಯದೆ

* ಮಂತ್ರ, ಬ್ರಾಹ್ಮಣರೂಪ ವೇದವು ಕರ್ಮಗಳನ್ನು ಸಾಮಾನ್ಯವಾಗಿ ಹೇಳುವಂತೆ ಇದ್ದರೂ ಉಪನಿಷತ್ತುಗಳು ಬ್ರಹ್ಮನನ್ನೇ ಹೇಳುವವುಗಳು

ರಿಂದಲೂ ವಿಶೇಷವಾಗಿ ಬ್ರಹ್ಮನಿಂದ ಬೇರೆಯಾದ ವಸ್ತುವು ಹೇಳಲ್ಪಡುತ್ತದೆಂಬುದು ಯುಕ್ತವಲ್ಲ. (೫) (ಏಕೆ ಯುಕ್ತವಲ್ಲವೆಂದರೆ—) ಸಮಸ್ತ ವೇದ, ಮಂತ್ರ, ಉಪನಿಷತ್ತು, ಇವುಗಳಲ್ಲಿ ವಿಶೇಷವಾಗಿ ವಿಷ್ಣುವೇ ಹೇಳಲ್ಪಡುತ್ತಾನೆ ಹೊರತು ಬೇರೆ ಯಾವುದೂ ಹೇಳಲ್ಪಡುವುದಿಲ್ಲ. ಪರಂತು ಬ್ರಾಹ್ಮಣ ಭಾಗವು ಕೆಲವು ಕಡೆ ಅಮುಖ್ಯವಾದ ಅರ್ಥವನ್ನು ಇಟ್ಟುಕೊಂಡು ಕರ್ಮರೂಪ ಅರ್ಥವನ್ನು ಪ್ರತಿಪಾದಿಸುತ್ತದೆ. ಬ್ರಾಹ್ಮಣಭಾಗದಲ್ಲಿಯೂ ಮುಖ್ಯವಾಗಿ ವಿಷ್ಣುವೇ ಹೇಳಲ್ಪಡುತ್ತಾನೆ. ಉಪನಿಷತ್ತು ಭಾಗಗಳಲ್ಲಿ ಅಂತೂ ವಿಷ್ಣು ವಿನಹ ಬೇರೆ ಯಾವುದೂ ಹೇಳಲ್ಪಡುವುದೇ ಇಲ್ಲ. (ಹಾಗಾದರೆ ಉಪನಿಷತ್ತಿನಲ್ಲಿ ಕೆಲವೆಡೆ ವಾಯುದೇವರನ್ನು ಹೇಳಿರುವುದರಿಂದ ಬೇರೆ ಯಾರನ್ನೂ ಹೇಳುವುದಿಲ್ಲವೆಂಬುದು ಹೇಗೆ? ಎಂದರೆ—) ವಿಷ್ಣುವು ವಾಯುವಿಗಿಂತ ಉತ್ತಮನು ಎಂದು ತಿಳಿಸುವುದಕ್ಕಾಗಿ ವಾಯುದೇವರನ್ನು ಉಪನಿಷತ್ತು ಹೇಳಿರುತ್ತದೆ. (ವಾಯುದೇವರನ್ನು ಉಪಾಸನೆಮಾಡಬೇಕೆಂದು ಹೇಳಿದುದು ಹೇಗೆಂದರೆ—) ಮುಖ್ಯಪ್ರಾಣದೇವರು ವಿಷ್ಣುವಿಗೆ ಎಲ್ಲರಿಗಿಂತ ಮುಖ್ಯಪ್ರತಿಮೆಯಂತಿರತಕ್ಕವರಾಗಿರುವುದರಿಂದ ವಾಯುದೇವರೊಳಗೆ ವಿಷ್ಣುವನ್ನು ಉಪಾಸನೆಮಾಡುವುದಕ್ಕಾಗಿ ಕೆಲವು ಕಡೆ ವಾಯುದೇವರನ್ನು ಉಪಾಸನೆಮಾಡಬೇಕೆಂದು ಹೇಳಿರುತ್ತದೆ. ಇದಕ್ಕೆ ವ್ಯತ್ಯಾಸವಾಗಿ ಬೇರೆ ಅಭಿಪ್ರಾಯದಿಂದ ಹೇಳಿದ್ದಿಲ್ಲ. ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿಯದೆ. ॥ ೬ ॥

ಹೀ—ಭಾಗವತಪುರಾಣದಲ್ಲಿ ಶ್ರೀಹರಿಯ ಹೊರತು ಬೇರೆಯವರನ್ನು ಹೇಳತಕ್ಕ ವಾಕ್ಯವನ್ನು ದೂಷಿಸಿರುವುದರಿಂದಲೂ, **ಆರಣಮಾವರ್ತಯೇತ್** ಎಂದು ವಿಶೇಷವಾಗಿ ಉಪನಿಷತ್ತನ್ನು ಅಭ್ಯಾಸಮಾಡಬೇಕೆಂದು ಹೇಳಿದುದರಿಂದಲೂ ಉಪನಿಷತ್ತುಗಳಲ್ಲಿ ಜಡ ಮೊದಲಾದುದನ್ನು ಹೇಳುತ್ತದೆಂಬುದು ಸರ್ವಥಾ ಯುಕ್ತವಲ್ಲವೆನ್ನುತ್ತಾರೆ—

**ಭಾ. ॥ (೧) ಯಸ್ಯಾಂ ನ ಮೇ ಪಾವನಮಂಗ ಕರ್ಮಸ್ಥಿತ್ಯುದ್ಭವಪ್ರಾಣನಿರೋಧಮಸ್ಯ । ಲೀಲಾವತಾರೇಥಿತಕರ್ಮ ವಾ ಸ್ಯಾದ್ವಂಧ್ಯಾಂ ಗಿರಂ ತಾಂ ಬಿಭೃಯಾನ್ನ ಧೀರಃ ॥ (೨) ವಿತ್ತಂ ತ್ವತೀರ್ಥೀಕೃತಮಂಗ ವಾಚಂ ಹೀನಾಂ ಮಯಾ ರಕ್ಷತಿ ದುಃಖದುಃಖೀ ॥ (೩) ಯನ್ನ ವ್ರಜಂತ್ಯಘಭಿದೋಽರಚನಾನುವಾದಾಃ ಶೃಣ್ವಂತಿ ಯೇಽನ್ಯವಿಷಯಾಃ ಕುಕಥಾ ಮತಿಘ್ನೀಃ। ಯಾಸ್ತು ಶ್ರುತಾ ಹತಭಗೈರ್ನೃಭಿರಾತ್ತಸಾರಾಸ್ತಾಂಸ್ತಾನ್ ಕ್ಷಿಪಂತ್ಯಶರಣೇಷು ತಮಸ್ಸು ಹಂತಾ ॥ ಇತ್ಯಾದಿಭಗವದ್ವಚನಾಚ್ಚ ॥ (೪) ಸರ್ವಾಸು ಶಾಖಾಸ್ವಾರಣಮಾವರ್ತಯೇದಾರಣಮಾವರ್ತಯೇದುಪನಿಷದ ಮಾವರ್ತಯೇದುಪನಿಷದಮಾವರ್ತಯೇದಿತ್ಯುಪನಿಷದಭ್ಯಾಸಸ್ಯ ಸತಾತ್ಪರ್ಯಂ ವಿಹಿತತ್ವಾದಭಗವದ್ವಿಷಯಸ್ಯ ನಿಂದಿತತ್ವಾಚ್ಚ ನೋಪನಿಷತ್ಸ್ವನ್ಯದುಚ್ಯತೇ ॥ (೫) ಅಭ್ಯಸೇದಧಿಯಜ್ಞಂ ಚಾಪ್ಯಧಿದೈವಂ ವಿಶೇಷತಃ। ಅಧ್ಯಾತ್ಮಂ ತು ವಿಶೇಷೇಣ ಯಸ್ಮಾದ್ವಿಷ್ಣುಸ್ತ್ರಿಷೂದಿತಃ ॥ ಇತಿ ಸ್ಕಾಂದೇ ॥ ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಽಪೋಹ್ಯ ಇತ್ಯಹಂ । ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ವೇದ ಕಶ್ಚನ ಇತ್ಯಾದೇಶ್ಚ ಭಗವದುಪಾಸನಾ ಏವ ಸರ್ವತ್ರೋಕ್ತಾಃ ॥೧, ೨, ೩, ೪॥ ಇತಿ ಪಂಚಮಃ ಖಂಡಃ ॥ ೫—೫ ॥ ॥ ೭ ॥**

ಅ ॥ (೧) ಎಲೋ ಧೀರನಾದ ಉದ್ಧವನೇ ಜಗತ್ತಿನ ಸ್ಥಿತಿ, ಇರುವಿಕೆ, ಸೃಷ್ಟಿ, ಅನ್ನದಾನಾದಿಗಳಿಂದ ನಿತ್ಯವೂ ಅನಿಷ್ಟಗಳನ್ನು ಪರಿಹರಿಸಿ ರಕ್ಷಿಸುವಿಕೆ, ಸಂಹಾರ, ಇಂತಹ ನನ್ನ ಕರ್ಮವನ್ನೂ ಕೃಷ್ಣಾದ್ಯವ

ತಾಗಳಲ್ಲಿ ಮಾಡಿದ ಕಂಸಹನನಾದಿರೂಪ ನನ್ನ ಪವಿತ್ರವಾದ ಕರ್ಮವನ್ನು ಯಾವುದರಲ್ಲಿ ವರ್ಣಿಸುವುದಿಲ್ಲವೋ? ಅಂತಹ ನಿಷ್ಫಲವಾದ ಮಾತನ್ನು ಯಾರೂ ಹೇಳಬಾರದು. (ನನ್ನ ಮಹಿಮೆಯನ್ನು ಹೇಳದಿರುವ ಮಾತು ವ್ಯರ್ಥವೇ) (೨) ಎಲೋ ಉದ್ಧವನೇ ಸತ್ಪಾತ್ರದಲ್ಲಿ ದಾನ ಮಾಡದೆ ದ್ರವ್ಯವನ್ನು ಕಾಪಾಡಿಕೊಂಡಿರುವವನೂ, ನನ್ನ (ಶ್ರೀಹರಿಯ) ಗುಣಗಳನ್ನು ಹೇಳದೆ ಇರುವವನೂ ಹೆಚ್ಚು ದುಃಖವನ್ನು (ನರಕಾದ್ಯನರ್ಥವನ್ನು) ಅನುಭವಿಸುವನು. (೩) ಶಕ್ತಿಯನ್ನು ಹೀರಿದ ಅಯೋಗ್ಯರಿಂದ ಕೇಳಲ್ಪಟ್ಟ, ಬುದ್ಧಿಯನ್ನು ಕೆಡಿಸುವ, ಸಂಸಾರ ಭಯವನ್ನು ಪರಿಹರಿಸುವ ಶ್ರೀಹರಿಯು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡಿದವನಲ್ಲ, ಎಂದು ಹೇಳುವ ಕುತ್ಸಿತ ಕಥೆಗಳನ್ನು ಕೇಳುವವರು ಸರ್ವಥಾ ಹಿಂತಿರುಗಿ ಬಾರದಿರುವ ಅಂಧಂತಮಸ್ಸುಗಳಲ್ಲಿ ಬೀಳುವರು ಹೊರತು ಶ್ರೀಹರಿಯು ಇರುವ ಲೋಕವನ್ನು ಹೊಂದಲಾರರು. ಇದುಮೊದಲಾದ ಶ್ರೀಕೃಷ್ಣನ ಮಾತಿನಿಂದಲೂ (ಜಡವು ಹೇಳಲ್ಪಡುವುದಿಲ್ಲವೆಂದು ಸಿದ್ಧವಾಗುತ್ತದೆ.) (೪) ಎಲ್ಲಾ ಶಾಖೆಗಳಲ್ಲಿಯೂ ಆರಣ್ಯವನ್ನು ಅಂದರೆ, ಉಪನಿಷತ್ತನ್ನು ಆವರ್ತಿಸಿಕೊಂಡಿರಬೇಕು, ಉಪನಿಷತ್ತನ್ನು ಆವರ್ತಿಸಿಕೊಂಡಿರಬೇಕು. (ಕೇಳಿದ್ದನ್ನು ಮರಳಿ ಮರಳಿ ಮನನಮಾಡುತ್ತಿರಬೇಕು.) ಹೀಗೆ ಉಪನಿಷತ್ತನ್ನು ಆವೃತ್ತಿಮಾಡುತ್ತಿರಬೇಕೆಂದು ತಾತ್ಪರ್ಯಪೂರ್ವಕವಾಗಿ ಹೇಳಿದುದರಿಂದಲೂ ಶ್ರೀಹರಿಯ ಮಹಿಮೆಯನ್ನು ಹೇಳದಿರುವವನನ್ನು ನಿಂದಿಸಿರುವುದರಿಂದಲೂ ಉಪನಿಷತ್ತುಗಳಲ್ಲಿ ಬೇರೆ ಯಾವುದೂ ಹೇಳಲ್ಪಡುವುದಿಲ್ಲ. (೫) (ಎಲ್ಲಾ ವೇದಗಳಲ್ಲಿಯೂ ವಿಷ್ಣುವೇ ಹೇಳಲ್ಪಡುತ್ತಾನೆ. ಉಪನಿಷತ್ತಿನಲ್ಲಿ ವಿಶೇಷವಾಗಿ ಹೇಳಲ್ಪಟ್ಟಿರುತ್ತಾನೆ. ಅದುಕಾರಣ ಎಲ್ಲೆಡೆಯಲ್ಲಿಯೂ ಶ್ರೀಹರಿಯ ಉಪಾಸನೆಗಳೇ ಹೇಳಲ್ಪಡುತ್ತವೆ, ಎಂಬ ಅಭಿಪ್ರಾಯದಿಂದ ಆ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಯಾಗಗಳನ್ನು ಹೇಳುವ ಬ್ರಾಹ್ಮಣ, ದೇವತೆಗಳನ್ನು ಹೇಳುವ ಮಂತ್ರ, ಶ್ರೀಪರಮಾತ್ಮನನ್ನು ಹೇಳುವ ಆರಣ್ಯಕ (ಉಪನಿಷತ್ತು) ಇವುಗಳನ್ನು ವಿಶೇಷವಾಗಿ ಅಭ್ಯಾಸಮಾಡಬೇಕು. ಏಕೆಂದರೆ ಆ ಮೂರರಲ್ಲಿಯೂ ವಿಷ್ಣುವೇ ಮುಖ್ಯವಾಗಿ ವರ್ಣಿಸಲ್ಪಟ್ಟಿರುತ್ತಾನೆ, ಎಂದು ಸ್ಕಾಂದಪುರಾಣದಲ್ಲಿದೆ (೬) **ವಸಂತೇ ವಸಂತೇ ಜ್ಯೋತಿಷಾ ಯಜೇತ** ಇದುಮೊದಲಾದ ಧರ್ಮಗಳನ್ನು ವಿಧಿಸುವ ವೇದವು ಕೂಡ ನನ್ನ (ಶ್ರೀಹರಿಯ) ಪೂಜೆಯನ್ನು ವಿಧಿಸುತ್ತದೆ. ಇಂದ್ರಾದಿದೇವತೆಗಳನ್ನು ಹೇಳತಕ್ಕ ವೇದವುಕೂಡ ನನ್ನ ಐಶ್ವರ್ಯಾದಿಗಳನ್ನೇ ಹೇಳುತ್ತದೆ. **ಚತ್ವಾರಿ ವಾಕ್ಪರಿಮಿತಾ ಪದಾನಿ** ಇದುಮೊದಲಾದ ವೇದಗಳಿಂದ ನಾನೇ ವಾಸುದೇವ ಮೊದಲಾದ ಬಹುರೂಪಗಳುಳ್ಳವನೆಂದು ಹೇಳಲ್ಪಡುವವನು, ನನಗೆ ಅಪ್ರೀತಿಯನ್ನು ಮಾಡುವ 'ಶ್ರೀಹರಿಯ ಗುಣಗಳು ನನಗೆ ಇರಲಿ' ಎಂಬ ಧ್ಯಾನವನ್ನು ಸರ್ವಥಾ ಮಾಡಬಾರದು. ಈ ವೇದದ ತಾತ್ಪರ್ಯವನ್ನು ನಾನೇ ತಿಳಿದಿರುತ್ತೇನೆ; ಬೇರೆಯವರು ಯಾರೊಬ್ಬರೂ ಪ್ರಾಯಶಃ ತಿಳಿಯುವುದಿಲ್ಲ, ಎಂದು ಭಾಗವತದಲ್ಲಿ (ಉದ್ಧವನಿಗೆ ಶ್ರೀಕೃಷ್ಣನು ಹೇಳಿದುದು) ಇದುಮೊದಲಾದ ಪ್ರಮಾಣಗಳಿಂದ ಎಲ್ಲೆಡೆಯಲ್ಲಿಯೂ ಶ್ರೀಹರಿಯ ಉಪಾಸನೆಗಳೇ ಹೇಳಲ್ಪಟ್ಟಿವೆ. ॥ ೧, ೨, ೩, ೪ ॥ ೫-೫ ॥ ೫ ॥

ಐದನೇ ಖಂಡವು ಮುಗಿಯಿತು.

## ೬ನೇ ಖಂಡವು

**ಪೀ**—ಹೀಗೆ ವಾಸುದೇವ ಮೊದಲಾದ ಐದು ರೂಪಗಳುಳ್ಳ ಶ್ರೀಹರಿಯನ್ನು ಮಧುವೆಂದು ಹೇಳಿ ಈಗ ಯಾವ ಯಾವ ದೇವತೆಗಳು ಯಾರು ಯಾರನ್ನು ಸೇವಿಸುತ್ತಿರುತ್ತಾರೆ, ಅವರಿಗೆ ಯಾವ ಫಲವೆಂದರೆ, ಅದನ್ನು ಹೇಳುತ್ತಾರೆ –

**ಉ. ॥ ತದ್ಯತ್ಪ್ರಥಮಮಮೃತಂ ತದ್ವಸವ ಉಪಜೀವಂತ್ಯಗ್ನಿನಾ ಮುಖೇ-ನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥೧॥**

ಅ ॥ ಆ ಐದು ರೂಪಗಳಲ್ಲಿ ಒಂದನೆಯದಾದ ವಾಸುದೇವರೂಪವನ್ನು ತಮಗಿಂತ ಮುಖ್ಯನಾದ (ಅಂದರೆ, ತಮಗೆ ಉಪದೇಶಕನಾದ) ಅಗ್ನಿಯಿಂದ ಕೂಡಿರುವ ವಸುಗಳು ಆಶ್ರಯಿಸಿರುತ್ತಾರೆ. (ಅಪರೋಕ್ಷ ಜ್ಞಾನ ಹುಟ್ಟಲಿಕ್ಕೆ ವಿಷಯಗಳಲ್ಲಿ ವೈರಾಗ್ಯವು ಕಾರಣವಾಗಿರುವುದರಿಂದ ಅದನ್ನು ತೋರಿಸುತ್ತಾರೆ—) ಶ್ರೀ ವಾಸುದೇವನನ್ನು ನೋಡಿ ಮೋಕ್ಷವನ್ನು ಹೊಂದುವ ಪರ್ಯಂತ ಆ ದೇವತೆಗಳು ಉಣ್ಣುತ್ತಿರಲೇ ಇಲ್ಲ, ಕುಡಿಯುತ್ತಿರಲೇ ಇಲ್ಲ, ಎಲ್ಲಾ ವಿಷಯಭೋಗಗಳನ್ನೂ ಬಿಟ್ಟಿದ್ದರು ವಾಸುದೇವನನ್ನು ನೋಡಿಯೇ ಮೋಕ್ಷ ಹೊಂದುತ್ತಾರೆ. ॥ ೧ ॥

**ಉ. ॥ ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ ॥ ॥ ೨ ॥**

ಅ ॥ ಆ ವಹ್ನಿ ಮೊದಲಾದ ದೇವತೆಗಳು ವಾಸುದೇವನನ್ನು ಮುಕ್ತರಾಗಿ ಪ್ರವೇಶಿಸುತ್ತಾರೆ. (ಸಾಯುಜ್ಯ ಮೋಕ್ಷವನ್ನು ಹೊಂದುತ್ತಾರೆ) ಈ ರೂಪದಿಂದ ಶ್ರೀಹರಿಯ ಇಚ್ಛೆಯನ್ನು ಅನುಸರಿಸುವ ತಮ್ಮ ಇಚ್ಛೆಯಿಂದಲೇ ಹೊರಗೆ ಬರುತ್ತಾರೆ. ॥ ೨ ॥

ಪೀ—ವಸುಗಳ ಪದವಿಯನ್ನು ಹೊಂದಿದವರಿಗೆ ಸಾಯುಜ್ಯಮೋಕ್ಷವು ಆಗುತ್ತದೆಂದು ಹೇಳಿ ಈಗ ಆ ಪದವಿಯನ್ನು ಹೊಂದದಿದ್ದು, ಆ ಪದವಿಯನ್ನು ಹೊಂದಲು ಯೋಗ್ಯರಾದವರಿಗೇನೆ ಮಧೂಪಾಸನೆಯಿಂದ ಆ ಪದವಿಯು ಸಿಗುತ್ತದೆನ್ನುತ್ತಾರೆ—

**ಉ. ॥ ಸ ಯ ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾಽಗ್ನಿನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥**

ಅ ॥ ಈ ವಾಸುದೇವನನ್ನು ತಿಳಿದಿರುವ ಜ್ಞಾನಿಯು ವಸುಗಳಲ್ಲಿ ಒಬ್ಬನಾಗಿ ವಸುಗಳು ಭೋಗಿಸತಕ್ಕ ದೇಶಕಾಲಗಳಿಗೆ ಅಧಿಪತಿಯಾಗಿ ತಮಗಿಂತ ಮುಖ್ಯನಾದ ಅಗ್ನಿಯ ಉಪದೇಶದಿಂದಲೇ ಶ್ರೀವಾಸುದೇವನನ್ನು ನೋಡಿ ಮೋಕ್ಷವನ್ನು ಹೊಂದುತ್ತಾನೆ. ಮೋಕ್ಷದಲ್ಲಿ ವಾಸುದೇವನಲ್ಲಿ ಪ್ರವೇಶಿಸುತ್ತಾನೆ. (ಅಂದರೆ ಸಾಯುಜ್ಯ ಮೋಕ್ಷವನ್ನು ಹೊಂದುತ್ತಾನೆ.) ತಿರುಗಿ ಶ್ರೀಹರಿಯ ಇಚ್ಛೆಯ ಅಧೀನವಾದ ತನ್ನ ಇಚ್ಛೆಯಿಂದ ಆರೂಪದಿಂದ ಹೊರಗೆ ಹೊರಟುಬರುತ್ತಾನೆ. ॥ ೩ ॥

ಪೀ—ವಸುಗಳು ರಕ್ಷಿಸತಕ್ಕ ದೇಶಕಾಲಗಳು ಎಷ್ಟು. ಇವರು ಎಷ್ಟಕ್ಕೆ ಅಧಿಪತಿಗಳಾಗಿರುತ್ತಾರೆಂದರೆ—

**ಉ. ॥ ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾದಸ್ತಮೇತಾ ವಸೂನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥ ಇತಿ ಷಷ್ಠಃ ಖಂಡಃ ॥ ೬ ॥ ॥ ೪ ॥**

ಅ || ಸೂರ್ಯನು ಉದಯಪರ್ವತದಲ್ಲಿ ಉದಯಿಸಿ ಜನರ ದೃಷ್ಟಿಗೆ ವಿಷಯನಾಗಿ ಎಷ್ಟು ದೇಶ ಎಷ್ಟು ಕಾಲಗಳಲ್ಲಿ ಸಂಚರಿಸುತ್ತಾ ಆ ಮೇಲೆ ಅಸ್ತಮಾನಪರ್ವತದಲ್ಲಿ ಕಾಣದಿರುತ್ತಾನೋ. ಆ ಉದಯ ಪರ್ವತ, ಅಸ್ತಮಾನಪರ್ವತಗಳ ಮಧ್ಯದೇಶಕ್ಕೂ ಅಷ್ಟುಕಾಲ ಹಗಲಿಗೂ ವಸುಗಳಿಗೆ ಆಧಿಪತ್ಯವು. ವಸು ಪದವಿಗೆ ಯೋಗ್ಯನಾದ, ವಾಸುದೇವನ ಜ್ಞಾನಿಯು ಅಷ್ಟು ದೇಶ, ಕಾಲಗಳಿಗೆ ಅಧಿಪತಿಯಾಗಿ ಸಂಚರಿಸು ತ್ತಿರುತ್ತಾನೆ. ವಿಷಯಾನುಭವವೆಂಬ ಭೋಗವನ್ನೂ ಹೊಂದುತ್ತಿರುತ್ತಾನೆ. || ೬ ||　　|| ४ ||

**ಭಾ. || (೧) ಪ್ರಥಮಾಮೃತಸ್ಯ ದ್ರಷ್ಟಾರೋ ವಸವಸ್ತ್ವಗ್ನಿಪೂರ್ವಕಾಃ । ಯಾವತ್ ಪಶ್ಯಂತಿ ತಂ ವಿಷ್ಣುಂ ತಾವತ್ತೇ ನಾನ್ಯಭೋಗಿನಃ || (೨) ಏತದೇವ ವಿಶಂತ್ಯದ್ಧಾ ಮೋಕ್ಷೇ ತೇ ತತ ಏವ ಚ । ಸ್ವೇಚ್ಛಯೈವ ಸಮುದ್ಯಂತಿ ಮುಕ್ತಾಃ ಸಂತೋ ಬಹಿಸ್ತಥಾ || ೧, ೨, ೩, ४ || ಇತಿ ಷಷ್ಠಃ ಖಂಡಃ || ೫—೬ ||　　|| ೧ ||**

ಅ || (೧) ಅಗ್ನಿಯೇ ಪ್ರಧಾನರಾಗಿ ಉಳ್ಳ (ಅಗ್ನಿಯಿಂದುಪದೇಶಪಡಕೊಂಡಿರುವ) ವಸುಗಳು ಒಂದ ನೇಯದಾದ ವಾಸುದೇವರೂಪವನ್ನು ನೋಡುತ್ತಾರೆ. ಆ ದೇವತೆಗಳು ಆ ವಾಸುದೇವನನ್ನು ನೋಡುವ ಪರ್ಯಂತ ಅಶನಪಾನಾದಿಗಳನ್ನು ಬಿಟ್ಟಿರುವರು. (ವಿಷಯಭೋಗಗಳಲ್ಲಿ ವಿರಕ್ತರಾಗಿದ್ದರು.) (೨) ಈ ವಾಸುದೇವರೂಪವನ್ನೇ ಮೋಕ್ಷದಲ್ಲಿ ಪ್ರವೇಶಿಸುತ್ತಾರೆ. (ಅಂದರೆ ಸಾಯುಜ್ಯಮೋಕ್ಷವನ್ನು ಹೊಂದು ತ್ತಾರೆ.) ಮುಕ್ತರಾಗಿ ಶ್ರೀಹರಿಯ ಇಚ್ಛೆಯ ಅಧೀನವಾದ ತಮ್ಮ ಇಚ್ಛೆಯಿಂದಲೇ ಅನಾಯಾಸದಿಂದ ಆ ರೂಪದಿಂದಲೇ ಹೊರಗೆ ಬರುತ್ತಾರೆ. || ೬ ||　　|| ೧ ||

ಆರನೇ ಖಂಡವು ಮುಗಿಯಿತು

## ೭ನೇ ಖಂಡವು

**ಉ. || ಅಥ ಯದ್ದ್ವಿತೀಯಮಮೃತಂ ತದ್ರುದ್ರಾ ಉಪಜೀವಂತೀಂ-ದ್ರೇಣ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ　　|| ೧ ||**

ಅ || ......ಎರಡನೆಯದಾದ ಸಂಕರ್ಷಣ ರೂಪವನ್ನು ......ಇಂದ್ರೇಣ ಮುಖೇನ=ಪ್ರಧಾನರಾದ ವಾಯುದೇವರಿಂದ, ಅಂದರೆ ವಾಯುದೇವರಿಂದ ಉಪದೇಶ ಪಡೆದುಕೊಂಡವರು.........　　|| ೧ ||

**ಉ. || ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ　　|| ೨ ||**

ಅ || ಸಂಕರ್ಷಣನನ್ನು............　　|| ೨ ||

**ಉ. || ಸ ಯ ಏತದೇವಮಮೃತಂ ವೇದ ರುದ್ರಾಣಾಮೇವೈಕೋ ಭೂತ್ವೇಂದ್ರೇಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ　　|| ೩ ||**

ಅ || ..........ಸಂಕರ್ಷಣನ ಸಾಯುಜ್ಯವನ್ನು........... || ೩ ||

ಹೀ—ವಸುಗಳು ಭೋಗಿಸತಕ್ಕ ದೇಶಕಾಲಗಳಿಗಿಂತ ಅರ್ಧಕಾಲ ಅಂದರೆ ಅರ್ಧರಾತ್ರಿ ಪರ್ಯಂತ ಕಾಲಕ್ಕೂ ಅಸ್ತಾಚಲದಿಂದ ಹೊರಟು ಅರ್ಧರಾತ್ರಿ ಪರ್ಯಂತ ಹೋಗತಕ್ಕ ದೇಶಕ್ಕೂ ರುದ್ರರು ಅಧಿಪತಿಗಳೆನ್ನುತ್ತಾರೆ—

**ಉ. || ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾದಸ್ತಮೇತಾ ದ್ವಿಸ್ತಾವದ್ದಕ್ಷಿಣತ ಉದೇತೋತ್ತರತೋಽಸ್ತಮೇತಾ ರುದ್ರಾಣಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ || ಇತಿ ಸಪ್ತಮಃ ಖಂಡಃ ||೫-೭||೪||**

ಅ || ಮೇರುಪರ್ವತದ ಪಡುದಿಕ್ಕಿನಲ್ಲಿದ್ದ ಜನರಿಗೆ ದಕ್ಷಿಣ ದಿಕ್ಕಿನಲ್ಲಿ ಉದಯಿಸಿದಂತೆ ಕಣ್ಣಿಗೆ ತೋರಿ ಎಷ್ಟು ಕಾಲ ಪರ್ಯಂತ ಎಷ್ಟು ದೇಶಕ್ಕೆ ಹೋಗುತ್ತಾ ಅಲ್ಲಿಂದ ಉತ್ತರ ದಿಕ್ಕಿನಲ್ಲಿ ಸ್ವಲ್ಪ ಹೋಗಿ ಅಸ್ತಮಾನ ಹೊಂದಿ ತೋರುವುದಿಲ್ಲವೋ, ಅಷ್ಟು ದೇಶಕಾಲಗಳಿಗೆ ರುದ್ರರು ಅಧಿಪತಿಗಳು. ಹಿಂದೆ ಹೇಳಿದ ವಸುಗಳ ಆಧಿಪತ್ಯಕ್ಕೆ ಸೇರಿದ 30 ಘಳಿಗೆಗಿಂತ ಮೇಲಿನ 15 ಘಳಿಗೆ ಅರ್ಧರಾತ್ರಿ ಕಾಲಕ್ಕೆ ರುದ್ರರು ಅಧಿಪತಿಗಳು. (ಎಷ್ಟು ದೇಶ ಎಷ್ಟು ಕಾಲ ಪರ್ಯಂತ ಮೇರು ಪರ್ವತದ ಪಶ್ಚಿಮ ಭಾಗದಲ್ಲಿ ದಕ್ಷಿಣದಿಂದ ಉತ್ತರದಿಕ್ಕಿಗೆ ಹೋಗುವುದೆಂದರೆ—) ಸೂರ್ಯನು ಉದಯಪರ್ವತದಲ್ಲಿ ಉದಯಿಸಿ ಪಡುದಿಕ್ಕಿನಲ್ಲಿ ಯಾವ ದೇಶದಲ್ಲಿ ಯಾವ ಕಾಲದಲ್ಲಿ ಅಸ್ತಮಾನನಾಗುತ್ತಾನೋ, ಆ ದೇಶಕಾಲಗಳು ರುದ್ರರಿಂದ ಭೋಗ್ಯಗಳಾದ ದೇಶಕಾಲಗಳಿಗಿಂತ ಇಮ್ಮಡಿಯಾಗುತ್ತವೆ. ವಸುಗಳು ಭೋಗಿಸುವ ದೇಶಕಾಲಗಳಿಗಿಂತ ಅರ್ಧ ದೇಶವೂ ಅರ್ಧ ರಾತ್ರಿಕಾಲವೂ ರುದ್ರರಿಗೆ ಭೋಗ್ಯಗಳಾಗುತ್ತವೆ. ರುದ್ರರ ಪದವಿಗೆ ಯೋಗ್ಯನಾದ ಸಂಕರ್ಷಣಜ್ಞಾನಿಯು ಅಷ್ಟು ದೇಶ ಕಾಲಗಳಿಗೆ (15 ಘಳಿಗೆ ರಾತ್ರಿಕಾಲಕ್ಕೆ) ಅಧಿಪತಿಯಾಗಿ ವಿಷಯಾನುಭವವೆಂಬ ಭೋಗವನ್ನು ಹೊಂದುತ್ತಾನೆ. || ೫—೭ || || ೪ ||

**ಭಾ. || (೧) ಏವಂ ದ್ವಿತೀಯರೂಪಂ ತು ಶಿವಾದ್ಯಾ ವಾಯುಸಂಸ್ಥಿ(ಶ್ರಿ)ತಾಃ । ವಾಯೋರ್ಹಿರಣ್ಯಗರ್ಭತ್ವಾತ್ಪ್ರದದ್ವಯಮುದಾಹೃತಂ || (೨) ರುದ್ರಾಣಾಮಾಶ್ರಯತ್ವಂ ಚ ಸಾಧ್ಯಾನಾಮಪಿ ಸರ್ವಶಃ । ಅತೋ ಯಜುರ್ವಿಚಾರಶ್ಚ ಸರ್ವವೇದಾತ್ಮನಸ್ತಥಾ । ವಾಯೋರೇವ ವಿಚಾರಃ ಸ್ಯಾದ್ಬ್ರಹ್ಮಣೋಽಪಿ ವಿಶೇಷತಃ || (೩) ಉಭಯಾಶ್ರಯಸ್ಸ ನೋಕ್ತೇಽಪಿ ವಾಯುರೇವ ಹಿ ಸರ್ವದಾ || ೧,೨,೩,೪ || ಇತಿ ಸಪ್ತಮಃ ಖಂಡಃ ||೫—೭|| ೧ ||**

ಅ || (೧) ವಸುಗಳಂತೆಯೇ ಮುಖ್ಯಪ್ರಾಣನನ್ನಾಶ್ರಯಿಸುತ್ತಿರುವ ಶಿವನೇ ಮೊದಲಾದ ರುದ್ರರು ಸಂಕರ್ಷಣರೂಪವನ್ನಾಶ್ರಯಿಸಿರುತ್ತಾರೆ (ವಾಯುದೇವರು ರುದ್ರಗಣಗಳಿಗೆ ಅಧಿಪತಿಗಳೆಂದು ಹೇಳಿದರೆ ಸಾಧ್ಯರಿಗೆ ಅಧಿಪತಿಗಳೆಂದು ಹೇಳಿವುದು ಸರಿಯಲ್ಲ. ಒಬ್ಬರು ಎರಡು ಗಣಗಳಿಗೆ ಅಧಿಪತಿಗಳೆಂಬುದು ಕೂಡಲಾರದೆಂದರೆ—) ವಾಯುಪದವಿಯಲ್ಲಿ ರುದ್ರಗಣಗಳಿಗೆ ಉಪದೇಶಕರು, ವಾಯುದೇವರೇ ಚತುರ್ಮುಖನ ಪದವಿಯನ್ನು ಹೊಂದಿದ ಮೇಲೆ ಸಾಧ್ಯರೆನಿಸಿದ ಋಜುಗಣಗಳಿಗೆ ಉಪದೇಶಕರು, ಅದುಕಾರಣ ಅಯುಕ್ತವಲ್ಲವಾದ ಪ್ರಯುಕ್ತ ವಾಯುದೇವರಿಗೆ ರುದ್ರಮುಖ್ಯತ್ವ ಸಾಧ್ಯಮುಖ್ಯತ್ವ ಈ ಎರಡೂ ಹೇಳಲ್ಪಟ್ಟವೆ (೨) ಎಲ್ಲಾ ರುದ್ರರ ಗಣಗಳಿಗೂ ಎಲ್ಲಾ ಸಾಧ್ಯರ ಗಣಗಳಿಗೂ ವಾಯುದೇವರು ಆಶ್ರಯರಾದುದರಿಂದಲೇ ವಾಯುದೇವರಿಗೇನೇ ಯಜುರ್ವೇದದ ವಿಚಾರವು. ಹಾಗೆಯೇ ಎಲ್ಲಾ ವೇದಗಳಿಗೆ ಅಧಿಪತಿಯಾದ ಬ್ರಹ್ಮನಿಗೂ ರುದ್ರಾದಿಗಳಿಗಿಂತ ವಿಶೇಷವಾಗಿ ಎಲ್ಲಾ ವೇದಗಳ ವಿಚಾರವು ಹೇಳಿದೆ. (ಆದಕಾರಣ

**ಇಂದ್ರೇಣ ಮುಖೇನ ಬ್ರಹ್ಮಣಾ ಮುಖೇನ** ಎಂದು ಎರಡು ಸ್ಥಳದಲ್ಲಿ ಮುಖ್ಯತ್ವವು ಹೇಳಿದ್ದು.) (೩) (ಸಂಸಾರದಲ್ಲಿ ಮಾತ್ರ ಮುಖ್ಯಪ್ರಾಣನು ರುದ್ರರಿಗೂ ಸಾಧ್ಯರಿಗೂ ಆಶ್ರಯನೆಂದಲ್ಲ.) ಮತ್ತೆ ಮೋಕ್ಷದಲ್ಲಿಯೂ ಕೂಡ ವಾಯುದೇವರೇ (ಮುಂದಿನ ಚತುರ್ಮುಖನೇ) ಸರ್ವದಾ ರುದ್ರರಿಗೂ ಸಾಧ್ಯರಿಗೂ ಆಶ್ರಯರು ತತ್ತ್ವೋಪದೇಶಕರು. ॥ ೫—೭ ॥　　॥ ೧ ॥

**ಏಳನೇ ಖಂಡವು ಮುಗಿಯಿತು.**

## ೮ನೇ ಖಂಡವು

**ಉ. ॥ ಅಥ ಯತ್ತೃತೀಯಮಮೃತಂ ತದಾದಿತ್ಯಾ ಉಪಜೀವಂತಿ ವರುಣೇನ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ　　॥ ೧ ॥**

**. ॥ ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ　　॥ ೨ ॥**

**ಉ. ॥ ಸ ಯ ಏತದೇವಮಮೃತಂ ವೇದಾದಿತ್ಯಾನಾಮೇವೈಕೋ ಭೂತ್ವಾ ವರುಣೇನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ　　॥ ೩ ॥**

ಅ ॥ ........ಮೂರನೇ ಪ್ರದ್ಯುಮ್ನ ರೂಪವನ್ನು ... ... ಸೂರ್ಯರು... ... ವರುಣೇನ ಮುಖೇನ= ತಮಗೆ ಆಶ್ರಯರಾದ ಇಂದ್ರದೇವರ ಉಪದೇಶದಿಂದಲೇ........　　॥ ೧, ೨, ೩ ॥

ಪೀ — ತೆಂಕಣ ದಿಕ್ಕಿನಲ್ಲಿ ಉದಯಿಸಿ ಬಡಗಣ ದಿಕ್ಕಿನಲ್ಲಿ ಅಸ್ತಮಾನಹೊಂದಿದ ಸೂರ್ಯನು ಮೇರು ಪರ್ವತದ ಪಡುದಿಕ್ಕಿನಲ್ಲಿದ್ದವರಿಗೆ ಅಸ್ತಮಾನ ಹೊಂದಿದಂತೆ ತೋರುತ್ತಾನೆ. ಸೂರ್ಯಾಸ್ತಮಾನಕ್ಕೆ ಯೋಗ್ಯವಾದ ಮೇರುಪರ್ವತದ ವಾಯುವ್ಯಭಾಗದಿಂದ ಪೂರ್ವದೇಶವಾದ ಮೇರುಪರ್ವತದ ಈಶಾನ್ಯ ಭಾಗದ ವರೆಗೆ ಬಂದಾಗ ಮೇರುಪರ್ವತದ ಬಡಗಣಭಾಗದಲ್ಲಿದ್ದ ಜನರಿಗೆ ಪಡು ಮೂಡುದಿಕ್ಕುಗಳು ಉದಯಾಸ್ತಮಾನ ದೇಶಗಳಾಗುತ್ತವೆ. ಅಷ್ಟು ದೇಶಕಾಲಗಳಿಗೆ ಆದಿತ್ಯರು ಅಧಿಪತಿಗಳು. ರುದ್ರರ ದೇಶ ಕಾಲಗಳಿಗಿಂತ ಅರ್ಧದೇಶ ಕಾಲಗಳು ಆದಿತ್ಯಗಣಗಳಿಗೆ ಭೋಗ್ಯಗಳೆನ್ನುತ್ತಾರೆ—

**ಉ. ॥ ಸ ಯಾವದಾದಿತ್ಯೋ ದಕ್ಷಿಣತ ಉದೇತೋತ್ತರತೋಽಸ್ತಮೇತಾ ದ್ವಿಸ್ತಾವತ್ಪಶ್ಚಾದುದೇತಾ ಪುರಸ್ತಾದಸ್ತಮೇತಾಽಽದಿತ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥ ಇತ್ಯಷ್ಟಮಃ ಖಂಡಃ ॥೫-೮॥　　॥ ೪ ॥**

ಅ ॥ ಪಡುದಿಕ್ಕಿನಲ್ಲಿ ಉದಯಿಸಿ ಪೂರ್ವದಿಕ್ಕಿನಲ್ಲಿ ಎಷ್ಟುದೇಶಕಾಲಗಳಲ್ಲಿ ಅಸ್ತಮಾನ ಹೊಂದುತ್ತಾನೋ ಅಷ್ಟು ದೇಶಕಾಲಗಳಿಗೆ ಆದಿತ್ಯರು ಅಧಿಪತಿಗಳು. ಅರ್ಧರಾತ್ರಿಗಿಂತ (ಅಂದರೆ 15 ಘಳಿಗೆಗಿಂತ)

ಮೇಲಿನ ಒಂದು ಜಾಮಕ್ಕೆ (ಅಂದರೆ 7ಘಳಿಗೆ30ವಿಘಳಿಗೆಗೆ) ಆದಿತ್ಯರುಅಧಿಪತಿಗಳು ) ರುದ್ರರು ಭೋಗಿಸತಕ್ಕ ದೇಶಕಾಲಗಳಿಗಿಂತ ಆದಿತ್ಯರು ಭೋಗಿಸತಕ್ಕ ದೇಶಕಾಲಗಳು ಅರ್ಧ. ಅಂದರೆ ಒಂದು ಜಾಮ. ($7\frac{1}{2}$ ಘಳಿಗೆ.) ॥ ೫ ೮ ॥ ॥ ೮ ॥

**ಭಾ. ॥ ದ್ರಷ್ಟಾರೋಽಥ ತೃತೀಯಸ್ಯ, ಶಕ್ರಮುಖ್ಯಾ ದಿತೇಃ ಸುತಾಃ ॥ ೧,೨,೩,೪ ॥ ಇತ್ಯಷ್ಟಮಃ ಖಂಡಃ ॥ ೫–೮ ॥ ॥ ೧ ॥**

ಅ ॥ ಪ್ರಧಾನರಾದ ಇಂದ್ರದೇವರಿಂದ ಕೂಡಿರುವ ಸೂರ್ಯರು ಮೂರನೆಯದಾದ ಪ್ರದ್ಯುಮ್ನ ರೂಪವನ್ನು ನೋಡಿ ಮುಕ್ತರಾದರು. ॥ ೫– ೮ ॥ ॥ ೧ ॥

**ಎಂಟನೇ ಖಂಡವು ಮುಗಿಯಿತು.**

## ೯ನೇ ಖಂಡವು

**ಉ. ॥ ಅಥ ಯಚ್ಚತುರ್ಥಮಮೃತಂ ತನ್ಮರುತ ಉಪಜೀವಂತಿ ಸೋಮೇನ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ ॥ ೧ ॥**

**ಉ. ॥ ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ ॥ ೨ ॥**

**ಉ. ॥ ಸ ಯ ಏತದೇವಮಮೃತಂ ವೇದ ಮರುತಾಮೇವೈಕೋ ಭೂತ್ವಾ ಸೋಮೇನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ ॥ ೩ ॥**

ಅ ॥ ನಾಲ್ಕನೆಯದಾದ ಅನಿರುದ್ಧರೂಪವನ್ನು........ಸೋಮನೇ ಪ್ರಧಾನರಾಗಿ ಉಳ್ಳ ಮರುತ್‌ಗಳು........ಸೋಮನ ಉಪದೇಶದಿಂದ........ ॥ ೧ ೨, ೩ ॥

ಪೀ—ಮರುತ್‌ಗಳು, ಆದಿತ್ಯರುಪಭೋಗಿಸುವ ದೇಶ ಕಾಲಗಳಿಗಿಂತ (7–30ಕ್ಕಿಂತ) ಅರ್ಧದೇಶ ಕಾಲಗಳಿಗೆ (3ಗಳಿಗೆ 45ವಿಘಳಿಗೆಗೆ) ಅಧಿಪತಿಗಳಾಗಿರುತ್ತಾರೆನ್ನುತ್ತಾರೆ—

**ಉ. ॥ ಸ ಯಾವದಾದಿತ್ಯಃ ಪಶ್ಚಾದುದೇತಾ ಪುರಸ್ತಾದಸ್ತಮೇತಾ ದ್ವಿಸ್ತಾವದುತ್ತರತ ಉದೇತಾ ದಕ್ಷಿಣತೋಽಸ್ತಮೇತಾ ಮರುತಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥ ಇತಿ ನವಮಃ ಖಂಡಃ ॥೫-೯॥೪॥**

ಅ ॥ ಬಡಗಣದಿಕ್ಕಿನಲ್ಲಿ ಮೇರುಪರ್ವತದ ಈಶಾನ್ಯ ಭಾಗಕ್ಕಿಂತ ಬಡಗಣ ದಿಕ್ಕಿನಲ್ಲಿದ್ದವರಿಗೆ ಅಸ್ತಮಾನ ಪ್ರದೇಶದಿಂದ ದಕ್ಷಿಣ ಭಾಗದಲ್ಲಿ ಮೇರುಪರ್ವತದ ಸ್ವಲ್ಪ ಆಗ್ನೇಯ ಭಾಗದಲ್ಲಿ ಅಸ್ತಮಾನ

ಹೊಂದುತ್ತಾನೆ. ಮೇರು ಪರ್ವತದ ಪೂರ್ವ ದಿಕ್ಕಿನಲ್ಲಿದ್ದವರಿಗೆ ಬಡಗಣ ತೆಂಕಣ ಭಾಗಗಳಲ್ಲಿ ಉದಯ ಅಸ್ತಮಾನಗಳು ಆಗುತ್ತವೆ. || ೫-೯ || || ೪ ||

ಒಂಭತ್ತನೇ ಖಂಡವು ಮುಗಿಯಿತು.

## ೧೦ನೇ ಖಂಡವು

ಉ. || ಅಥ ಯತ್ಪಂಚಮಮಮೃತಂ ತತ್ಸಾಧ್ಯಾ ಉಪಜೀವಂತಿ ಬ್ರಹ್ಮಣಾ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ || ೧ ||

ಉ. || ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ || || ೨ ||

ಉ. || ಸ ಯ ಏತದೇವಮಮೃತಂ ವೇದ ಸಾಧ್ಯಾನಾಮೇವೈಕೋ ಭೂತ್ವಾ ಬ್ರಹ್ಮಣೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿಸಂವಿಶತ್ಯೇತಸ್ಮಾದ್ರೂಪಾದುದೇತಿ || ೩ ||

ಅ || ಐದನೆಯದಾದ ಶ್ರೀನಾರಾಯಣರೂಪವನ್ನು ಸಾಧ್ಯರೆನಿಸಿಕೊಂಡ ಬ್ರಹ್ಮಪದವಿಗೆ ಯೋಗ್ಯರಾದ ಋಜುಗಳು........ಗರುಡ, ಶೇಷ, ಸೌಪರ್ಣೀ, ವಾರುಣೀ, ಸರಸ್ವತಿಯರು ಚತುರ್ಮುಖಬ್ರಹ್ಮನಿಂದ ಉಪದೇಶಪಡೆದುಕೊಂಡವರಾಗಿ........ || ೧, ೨, ೩ ||

ಪೀ—ಮರುತ್‌ಗಳು ಭೋಗಿಸತಕ್ಕ ದೇಶಕಾಲಗಳಿಗಿಂತ ಸಾಧ್ಯರು ಅರ್ಧದೇಶಕಾಲಗಳಿಗೆ ಅಧಿಪತಿಗಳಾಗಿರುತ್ತಾರೆನ್ನುತ್ತಾರೆ—

ಉ. || ಸ ಯಾವದಾದಿತ್ಯ ಉತ್ತರತ ಉದೇತಾ ದಕ್ಷಿಣತೋಽಸ್ತಮೇತಾ ದ್ವಿಸ್ತಾವದೂರ್ಧ್ವ ಉದೇತಾಽರ್ವಾಙಸ್ತಮೇತಾ ಸಾಧ್ಯಾನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ || ಇತಿ ದಶಮಃ ಖಂಡಃ || ೧೦ || ೪ ||

ಅ || ಮೇರುಪರ್ವತದ ಸ್ವಲ್ಪ ಆಗ್ನೇಯ ಪೂರ್ವಭಾಗದಲ್ಲಿ ಐಂದ್ರಪುರವಿದೆ. ಅಲ್ಲಿ ಉದಯಪರ್ವತದಲ್ಲಿ ಎತ್ತರ ತಗ್ಗು ಭಾಗಗಳಿವೆ. ಅಲ್ಲಿ ಸೂರ್ಯನು ಉದಯಪರ್ವತದ ಮೇಲುಭಾಗದಿಂದ ಕೆಳಗಿನ ಭಾಗಕ್ಕೆ ಹೋದಾಗ ಆ ದೇಶದವರಿಗೆ ಮೇಲುಭಾಗದಲ್ಲಿ ಸೂರ್ಯೋದಯವು. ಕೆಳಗಿನ ಭಾಗದಲ್ಲಿ ಅಸ್ತಮಾನವು. ಮರುತ್‌ಗಳು ಭೋಗಿಸುವ ದೇಶ ಕಾಲಗಳಿಗಿಂತ (3ಘಳಿಗೆ 45ವಿಘಳಿಗೆಗಿಂತ) ಅರ್ಧ ದೇಶಕಾಲಗಳನ್ನು (1 ಘಳಿಗೆ 52½ ವಿಘಳಿಗೆ) ಸಾಧ್ಯರು ಉಪಭೋಗಿಸುತ್ತಾರೆ. || ೪ ||

ಪೀ—೯ನೇ ಖಂಡದ ಚತುರ್ಥಮಮೃತಂ ಎಂಬುದಕ್ಕೆ ಅರ್ಥ ಹೇಳುತ್ತಾರೆ—

**ಭಾ. ॥ (೧) ಚತುರ್ಥಸ್ಯ ತು ಸೋಮಾದ್ಯಾ ಮರುತಃ ॥ (೨) ಪಂಚಮಸ್ಯ ಚ । ಋಜವೋ ಬ್ರಹ್ಮಮುಖ್ಯಾ ಹಿ ಸುಪರ್ಣಃ ಶೇಷ ಏವ ಚ । ಸರಸ್ವತೀ ಸುಪರ್ಣೀ ಚ ವಾರುಣೀ ಸಾಧ್ಯನಾಮಕಾಃ ॥ (೩) ಅನ್ಯೋನ್ಯಮುಖತಾ ಮುಕ್ತೌ ಬ್ರಹ್ಮಣಾಂ ಸಮತಾ ತಥಾ ॥ (೪) ವಾಕ್ಯೇಷಾದೇರ್ಮುಖಂ ಬ್ರಹ್ಮಾ ಮುಕ್ತಾವಪಿ ವಿಶೇಷತಃ । ದ್ರಷ್ಟೋಭಯಸ್ಯಾಪಿ ಶಿವೋ ದ್ವಿತೀಯಸ್ಯಾಂತಗಸ್ಯ ಚ । ಮೋಕ್ಷೇ ತ್ವನ್ಯತ್ರ ಚೈಕಸ್ಯ ಪರತಶ್ಶೇಷಭಾವತಃ ॥ (೫) ಯೇ ಚೈತತ್ಪದಯೋಗ್ಯಾಃ ಸ್ಯುರ್ದೇವಾಃ ಪಂಚ ಮಹಾಗಣಾಃ । ತೇಷಾಮಪಿ ಯದೋಪಾಸಾ ನಿಚ್ಛಿದ್ರಾ ಮಧುನಾಮಕೇ । ತದಾ ವಸ್ವಾದಿತಾಂ ಪ್ರಾಪ್ಯ ಮುಕ್ತಿಮೇಷ್ಯಂತ್ಯಸಂಶಯಂ ॥ ೧ ॥**

ಅ ॥ (೧) ನಾಲ್ಕನೆಯದಾದ ಅನಿರುದ್ಧರೂಪವನ್ನು ಸೋಮ, ಸೋಮನಿಂದ ಉಪದೇಶ ಪಡೆದುಕೊಂಡ ಮರುತ್‌ಗಳೂ (ಹೊಂದುತ್ತಾರೆ) (೨) (ಪಂಚಮಮಮೃತಂ ಎಂಬ ೧೦ನೇಖಂಡದ ಅರ್ಥ ಹೇಳುತ್ತಾರೆ) ಐದನೆಯದಾದ ಶ್ರೀನಾರಾಯಣರೂಪವನ್ನು ಚತುರ್ಮುಖಬ್ರಹ್ಮನೇ ಮುಖ್ಯನಾಗಿ ಉಳ್ಳ, ಸಾಧ್ಯರೆನಿಸಿದ ಋಜುಗಳು ಹೊಂದುತ್ತಾರೆ (ಹೀಗಾದರೆ ಸರಸ್ವತ್ಯಾದಿಗಳನ್ನು ವಸ್ವಾದಿಗಳಲ್ಲಿ ಎಲ್ಲಿಯೂ ಹೇಳದಿರುವುದರಿಂದ ಅವರಿಗೆ ಮಧುನಾಮಕ ಶ್ರೀಹರಿಯ ಉಪಾಸನೆಯು ಇಲ್ಲವೆಂದಾಗುವುದು, ಎಂದರೆ—) ಗರುಡ, ಶೇಷ, ಸರಸ್ವತೀ, ಸುಪರ್ಣೀ, ವಾರುಣಿಯರು ಸಾಧ್ಯರೆನಿಸುತ್ತಾರೆ. ಸಾಧ್ಯರ ಗಣದಲ್ಲಿ ಸೇರುತ್ತಾರೆ. (೩) (ಬ್ರಹ್ಮನೂ ಋಜುಗಳಲ್ಲಿ ಸೇರಿದಕಾರಣ ಸಾಧ್ಯರೆನಿಸಿದ ಋಜುಗಳಿಗಿಂತ ಮುಖ್ಯನಾಗುವುದು ಹೇಗೆ? ಎಂದರೆ—) ಯದ್ಯಪಿ ಋಜುಗಳಾದ ಬ್ರಹ್ಮರಿಗೆ ಸಾಮ್ಯವು ಆದರೂ ಮುಕ್ತಿಯಲ್ಲಿ ಪರಸ್ಪರವಾಗಿ (ಮುಖತಾ=) ಅಪ್ರಾಧಾನ್ಯವಿಲ್ಲದವರು (ಅಂದರೆ ಒಬ್ಬರಿಗಿಂತ ಒಬ್ಬರು ಶ್ರೇಷ್ಠರೆಂದು ಇಲ್ಲ. ಎಲ್ಲರೂ ಮುಖ್ಯರೇ (೪) (ಹಾಗಾದರೆ ಋಜುಗಳಲ್ಲದ ಸರಸ್ವತೀ ಮೊದಲಾದ ಸಾಧ್ಯರಿಗೆ ಬ್ರಹ್ಮನು ಮುಖನೆಂಬಲ್ಲಿ ಹೇಗೆ ಇಟ್ಟುಕೊಳ್ಳಬೇಕೆಂದರೆ —) ಸರಸ್ವತೀ ಶೇಷ ಮೊದಲಾದವರಿಗೆ ಸಂಸಾರದಲ್ಲಿಯೂ ಮೋಕ್ಷದಲ್ಲಿಯೂ ಬ್ರಹ್ಮನು ಮುಖ್ಯನಾಗಿಯೇ ಉಪದೇಶಿಸುವವನು. ಅವರಿಗಿಂತ ಶ್ರೇಷ್ಠನೇ. (೪) (ರುದ್ರನೇ ಮುಂದೆ ಶೇಷಪದವಿಯನ್ನು ಹೊಂದುವ ಕಾರಣ ಅವನು ೨ನೆಯದಾದ ಸಂಕರ್ಷಣರೂಪವನ್ನು ನೋಡುವವನು. ಅದುಕಾರಣ ಶೇಷನನ್ನು ಸಾಧ್ಯರೊಳಗೆ ಸೇರಿಸಿ ೫ನೆಯದಾದ ನಾರಾಯಣರೂಪವನ್ನು ಶೇಷನು ನೋಡುವವನೆಂದು ಹೇಳಿದುದು ಹೇಗೆ? ಎಂದರೆ—)ರುದ್ರನು ಶೇಷನಾದ ಮೇಲೆ ಎರಡು ರೂಪಗಳನ್ನು ನೋಡುತ್ತಾನೆ. ಶೇಷಪದವಿಯನ್ನು ಹೊಂದುವುದಕ್ಕಿಂತ ಮೊದಲು ಶಿವನಾಗಿರುವಾಗ ಸಂಕರ್ಷಣವೆಂಬ ಒಂದು ರೂಪವನ್ನು ಮಾತ್ರ ನೋಡುತ್ತಾನೆ. ಅಥವಾ ಶೇಷನಾದ ಮೇಲೆ ಮೋಕ್ಷದಲ್ಲಿ ಎರಡು ರೂಪಗಳನ್ನು ನೋಡುತ್ತಾನೆ ಅದಕ್ಕಿಂತ ಮೊದಲು ರುದ್ರನಾಗಿರುವಾಗ ಒಂದು ರೂಪವನ್ನು ನೋಡುತ್ತಾನೆ. (೫) (ಮೊದಲು ಆಯಾಯ ಪದವಿಗಳನ್ನು ಹೊಂದಿದ ವಸ್ವಾದಿಗಳಿಗೆ ಮೋಕ್ಷವಾಗುತ್ತದೆಂದು ಹೇಳಿರುವರು ಈಗ ಆಯಾಯ ಪದವಿಗಳನ್ನು ಹೊಂದದ ಆಯಾಯ ಪದವಿಗಳಿಗೆ ಯೋಗ್ಯರಾದ ಮಧು ಎನಿಸಿದ ಶ್ರೀಹರಿಯನ್ನುಪಾಸನೆ ಮಾಡುವವರಿಗೂ ವಸ್ವಾದಿಗಳ ಪದಪ್ರಾಪ್ತ್ಯಾದಿಗಳೇ ಫಲವೆಂದು ಹೇಳಲಿಕ್ಕೆ **ಸ ಯ ಏತದೇವಮಮೃತಂ** ಎಂದಾರಂಭಿಸಿ **ತಸ್ಮಾದ್ರೂಪಾದುದೇತಿ** ಎಂಬ ಪರ್ಯಂತ ವಾಕ್ಯವು ಐದು ಖಂಡಗಳಲ್ಲಿಯೂ ಹೊರಟಿದೆ. ಆ ವಾಕ್ಯಗಳಿಗೆ, ಆಯಾಯ ಪದವಿಗಳನ್ನು ಹೊಂದಲಿಕ್ಕೆ ಅಯೋಗ್ಯರಾದವರಿಗೆ ಮಧು ಎನಿಸಿದ ಶ್ರೀಹರಿಯನ್ನು ಉಪಾಸನೆ ಮಾಡಿದರೂ ಆಯಾಯ ಪದವಿಗಳು ದೊರಕಲಾರವೆಂದರ್ಥವೆನ್ನುತ್ತಾರೆ—) ಆಯಾಯ ಪದವಿಗಳನ್ನು ಹೊಂದಲಿಕ್ಕೆ ಯೋಗ್ಯರಾದ, ವಸು ಮೊದಲಾದ ಐದು ಶ್ರೇಷ್ಠಗಳಾದ ದೇವತ್ವಯೋಗ್ಯಗಳಾದ ಗಣಗಳಿವೆ. ಅಂತಹ ದೇವತೆಗಳಿಗೂ ಮಧು ಎನಿಸಿದ ಶ್ರೀಹರಿಯಲ್ಲಿ ನಿರ್ದೋಷವಾದ ಭಕ್ತಿಪೂರ್ವಕ ಉಪಾಸನೆಯು

ಆವಾಗ ಆ ದೇವತೆಗಳು ವಸು, ರುದ್ರಾದಿಗಳ ಸ್ವರೂಪವನ್ನು ಹೊಂದಿ ಸಂದೇಹವಿಲ್ಲದೆ ಮೋಕ್ಷವನ್ನು ಹೊಂದುವರು. ॥ ೧ ॥

ಪೀ—೬ನೇ ಖಂಡದ **ಸ ಯಾವದಾದಿತ್ಯಃ** ಎಂಬ ೪ನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ —

**ಭಾ. ॥ (೧) ಉದೇತ್ಯಾಸ್ತಮಯಂ ಯಾವದ್ಯಾತಿ ಭಾನುಸ್ತು ಪರ್ವತೇ । ಉದಯಾಸ್ತಾದ್ರಿಮಧ್ಯಸ್ಯ ವಸವಃ ಪತಯಃ ಸ್ಮೃತಾಃ ॥ (೨) ತತಶ್ಚಾಸ್ತಮಯಾದ್ಯಾವದರ್ಧರಾತ್ರಂ ದಿವಾಕರಃ । ದಕ್ಷಿಣಾದುತ್ತರಂ ಯಾತಿ ಕಿಂಚಿತ್ಪೂರ್ವಸಮನ್ವಿತಂ ॥ ತದ್ದೇಶಕಾಲಯೋರೀಶಾ ರುದ್ರಾ ವಾಯುಪುರಸ್ಸರಾಃ । ವಸುಭೋಜ್ಯಾದರ್ಧಕಾಲಮರ್ಧದೇಶಸ್ತಥೈವ ಚ । ರುದ್ರಭೋಜ್ಯಃ ॥ (೩) ಅರ್ಧರಾತ್ರಾತ್ತು ಯಾಮ ಆದಿತ್ಯದೈವತಃ । ಪಶ್ಚಿಮಾತ್ಪೂರ್ವಮಾರ್ಗಸ್ತು ರೌದ್ರಾದರ್ಧಃ ಪ್ರಕೀರ್ತಿತಃ ॥ (೪) ತತಃ ಪರೋಽರ್ಧಯಾಮಸ್ತು ಸೌಮ್ಯಾದ್ದಕ್ಷಿಣಮಾರ್ಗಕಃ । ಮಾರುತಃ ಕಾಲ ಉದ್ದಿಷ್ಟ ಆದಿತ್ಯಾರ್ಧಶ್ಚ ದೇಶತಃ । (೫) ಪಶ್ಚಾಪಶ್ಚಾದುದೇತ್ಯೇವ ಪೂರ್ವತೋಽಸ್ತಮುಪೈತಿ ಚ ॥ ೨ ॥**

ಅ ॥ (೧) ಸೂರ್ಯನು ಉದಯಪರ್ವತದಲ್ಲಿ ಉದಯಿಸಿ ಎಷ್ಟು ಕಾಲ ಪರ್ಯಂತ ಎಷ್ಟು ದೇಶಗಳಲ್ಲಿ ಸಂಚರಿಸುತ್ತಾ ಅಸ್ತಮಾನ ಪರ್ವತದಲ್ಲಿ ಅಸ್ತ ಹೊಂದುತ್ತಾನೋ, ಆ ಸೂರ್ಯೋದಯ ಸೂರ್ಯಾಸ್ತಮಾನ ಪರ್ವತಗಳ ಮಧ್ಯಪ್ರದೇಶಕ್ಕೂ ಹಗಲಿಗೂ ಅಗ್ನಿಯನ್ನು ಆಶ್ರಯಿಸುತ್ತಿರುವ ವಸುಗಳು ಅಧಿಪತಿಗಳು. (೨) (೬ನೇ ಖಂಡದಲ್ಲಿದ್ದ **ಸ ಯಾವದಾದಿತ್ಯಃ** ಎಂಬ ೪ನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ–) ಸೂರ್ಯನು ಅಸ್ತಮಾನವನ್ನು (ಹಿಂದೆ ಹೇಳಿದ ಅಸ್ತಮಾನ ಪರ್ವತವನ್ನು ಹೊಂದುವಿಕೆ) ಆರಂಭಿಸಿ ಅರ್ಧರಾತ್ರಪರ್ಯಂತ ಯಾವ ದೇಶಕ್ಕೆ ಎಷ್ಟು ದೇಶಕಾಲಗಳಿಂದ ಹೋಗುತ್ತಾನೋ ಆ ಅಸ್ತಮಾನ ಪರ್ವತದ ಮಧ್ಯದೇಶ, ಅರ್ಧರಾತ್ರಕಾಲ ಇವುಗಳಿಗೆ ರುದ್ರರು ಅಧಿಪತಿಗಳು ಸೂರ್ಯನು ಸ್ವಲ್ಪ ಪೂರ್ವಕ್ಕೆ ಚಾಚಿರುವ ತೆಂಕಣದಿಕ್ಕಿನಿಂದ ಬಡಗಣ ದಿಕ್ಕಿನಲ್ಲಿ ಅರ್ಧಕ್ಕೆ ಸ್ವಲ್ಪ ಕಡಿಮೆಯಾದ ಪ್ರದೇಶಕ್ಕೆ ಹೋಗುತ್ತಾನೆ. (ವಸುಗಳು ಭೋಗಿಸುವ ದೇಶಕಾಲಗಳಿಗಿಂತ ರುದ್ರರು ಭೋಗಿಸುವ ದೇಶಕಾಲಗಳು ಎಷ್ಟು ಎಂದರೆ—) ವಸುಗಳು ಭೋಗಿಸುವ ದೇಶಕಾಲಗಳಿಗಿಂತ ಅರ್ಧಕಾಲವೂ ಅರ್ಧದೇಶವೂ ರುದ್ರರು ಭೋಗಿಸುವಂಥಾದ್ದು. (೩) (೭ನೇ ಖಂಡದ **ಸ ಯಾವದಾದಿತ್ಯಃ** ಎಂಬ ೪ನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ—) ಅರ್ಧರಾತ್ರಿಗಿಂತ ಮೇಲಿನ ಒಂದು ಯಾಮಕ್ಕೂ ಅಷ್ಟು ಕಾಲದಿಂದ ಹೋಗತಕ್ಕ ದೇಶಕ್ಕೂ ಆದಿತ್ಯರೆನಿಸಿದ ದೇವತೆಗಳು ಅಧಿಪತಿಗಳು. ಪಶ್ಚಿಮದಲ್ಲಿರುವ ರುದ್ರರ ಅಧಿಕಾರಕ್ಕೆ ಒಳಪಟ್ಟ ದೇಶಕಾಲಗಳಿಗಿಂತ ಪೂರ್ವಕ್ಕೆ ಸೂರ್ಯನು ಹೋಗುವಾಗ ಒಂದು ಯಾಮದಷ್ಟು ಕಾಲಕ್ಕೂ ಅಷ್ಟು ದೇಶಕ್ಕೂ ಆದಿತ್ಯರು ಅಧಿಪತಿಗಳು (೪) ೮ನೇ ಖಂಡದ **ಸ ಯಾವದಾದಿತ್ಯಃ** ಎಂಬ ೪ನೇ ಮಂತ್ರದ ಅರ್ಥ ಹೇಳುತ್ತಾರೆ—) ಆದಿತ್ಯರು ಅಧಿಪತಿಯಾಗಿ ಉಳ್ಳ, ಅರ್ಧರಾತ್ರಿಗಿಂತ ಮೇಲಿನದ್ದಾದ, ಒಂದು ಜಾಮದಿಂದ ಮೇಲಿನ ಅರ್ಧ ಯಾಮಕಾಲ ಅಂದರೆ 3 ಘಳಿಗೆ 45 ವಿಘಳಿಗೆಗೂ ಅಷ್ಟು ಕಾಲದಿಂದ ಹೋಗತಕ್ಕ ದೇಶಕ್ಕೂ ಮರುತ್‌ಗಳು ಅಧಿಪತಿಗಳು. ಆದಿತ್ಯರ ದೇಶಕಾಲಗಳಿಗಿಂತ ಮೇಲೆ ಈಶಾನ್ಯ ಭಾಗದಲ್ಲಿ ಸ್ವಲ್ಪ ಪೂರ್ವ ದಕ್ಷಿಣಮುಖವಾಗಿ ಸೂರ್ಯನು ಹೋಗುವ ಅರ್ಧ ಯಾಮಕ್ಕೂ ಆ ದೇಶಕ್ಕೂ ಮರುತ್‌ಗಳು ಅಧಿಪತಿಗಳು ಆ ಮರುತ್‌ಗಳ ದೇಶಕಾಲಗಳು ಆದಿತ್ಯರ ದೇಶಕಾಲಗಳಿಂದ ಅರ್ಧವು (೫) (ಇಲ್ಲಿ ೭ನೇ ಖಂಡದಲ್ಲಿ **ದಕ್ಷಿಣತಃ ಉದೇತಾ ಉತ್ತರತಃ ಅಸ್ತಮೇತಾ** ಎಂದೂ ೮ನೇ ಖಂಡದಲ್ಲಿ **ಪಶ್ಚಾದುದೇತಾ ಪುರಸ್ತಾದಸ್ತಮೇತಾ** ೧೦ನೇ ಖಂಡದಲ್ಲಿ **ಉತ್ತರತಃ ಉದೇತಾ ದಕ್ಷಿಣತಃ ಅಸ್ತಮೇತಾ**

ಇತ್ಯಾದಿಗಳಲ್ಲಿ ಅರ್ಧರಾತ್ರ, ಯಾಮ, ಯಾಮಾರ್ಧ ಮೊದಲಾದ ಕಾಲಗಳಲ್ಲಿ ಸೂರ್ಯೋದಯ ಸೂರ್ಯಾಸ್ತಮಾನಗಳು ಪ್ರಸಿದ್ಧಗಳಲ್ಲದಿರುವುದರಿಂದ ಹಾಗೆ ಹೇಳಿದ್ದು ಅಯುಕ್ತವು. ಅದುಕಾರಣ ಅಮುಖ್ಯಗಳೆನ್ನುತ್ತಾರೆ—) ಮೊದಲು ಮೊದಲು ಹೇಳಿದ ದೇಶಗಳಲ್ಲಿ ಉದಯಿಸಿ ಮೇಲೆ ಮೇಲೆ ಹೇಳಿದ ದೇಶಗಳಲ್ಲಿ ಅಸ್ತಮಾನ ಹೊಂದುತ್ತಾನೆ.

ವಿ ॥ ಸೂರ್ಯನು ಅಸ್ತಮಾನ ಪರ್ವತವನ್ನು ಬಿಟ್ಟು ಅಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹೋದಾಗ ಅಸ್ತಮಾನಪರ್ವತದಲ್ಲಿದ್ದವರಿಗೆ ಅದರ ತೆಂಕುಬದಿಯು ಉದಯಪರ್ವತದಂತೆ ಎಂದು ತಿಳಿಯಬೇಕು. ಅವರಿಗೆ ಅಭಿಮುಖವಾದ ಉತ್ತರದೇಶ ಪ್ರಾಪ್ತಿಯಾದಾಗ ಉತ್ತರದಿಕ್ಕು ಅಸ್ತಮಾನ ಪರ್ವತವೆಂದು ತಿಳಿಯಬೇಕು. ಹೀಗೆಯೇ ಪಡುವಣದಿಂದ ಮೂಡಣಕ್ಕೆ ಹೋದಾಗ ಪಡುವಣದಲ್ಲಿದ್ದವರಿಗೆ ಸೂರ್ಯನು ಸಮೀಪದಲ್ಲಿದ್ದ ಕಾರಣ ಉದಯಪರ್ವತವೆಂದೂ ಅವರಿಗೇನೇ ಸೂರ್ಯನು ಮೂಡಣಕ್ಕೆ ಹೋದಾಗ ದೂರದಲ್ಲಿದ್ದ ಕಾರಣ ಅಸ್ತಮಾನ ಪರ್ವತವೆಂದೂ ತಿಳಿಯಬೇಕು. ॥ ೨ ॥

ಟೀ—**ತತಃ ಪರೋಽರ್ಧಯಾಮಃ** ಎಂದು ಹೇಳಿದ್ದನ್ನು ವಿವರಿಸುತ್ತಾರೆ—

**ಭಾ. ॥ (೧) ತತಸ್ತದರ್ಧಕಾಲೇನ ತೋಚೋತ್ತರಾದುದಿತಸ್ತಥಾ । ಅಸ್ತಂ ದಕ್ಷಿಣತೋ ಯಾತಿ ಸ ಕಾಲೋ ಮಾರುತಃ ಸ್ಮೃತಃ ॥ (೨) ಉದೇತ್ಯೈ(ತ್ಯೇ)ಂದ್ರಪುರೇ ಚೋರ್ಧ್ವಮರ್ವಾಗುದಯಪರ್ವತೇ । ಅಸ್ತಮೇತಿ ತದರ್ಧೇನ ಬ್ರಹ್ಮಾ ತಸ್ಯ ಪತಿಃ ಸ್ಮೃತಃ ॥ (೩) ಏಕತ್ರಿಂಶತ್ತು ಘಟಿಕಾಃ ಸಾಧಿಕಾ ವಸುದೇವತಾಃ । ತದರ್ಧಾ ರುದ್ರದೈವತ್ಯಾಸ್ತತ ಆದಿತ್ಯದೈವತಾಃ । ತದರ್ಧಾ ಮಾರುತಾ ಬ್ರಾಹ್ಮಾಸ್ತದರ್ಧಾ ದೇಶತಸ್ತಥಾ ॥ ಇತಿ ಚ ॥ (೪) ರೌದ್ರೋ ದ್ವಿಗುಣೀಭೂತೋ ವಸುಕಾಲೋ ಯಾವಾಂಸ್ತಾವಾನ್ಭವತೀತಿ ದ್ವಿಸ್ತಾವತ್। ಅರ್ಧ ಇತ್ಯರ್ಥಃ ॥ (೫) ಬ್ರಾಹ್ಮೇ(ಹ್ಮೋ) ಮುಹೂರ್ತ ಇತ್ಯುಷಃಕಾಲಸ್ಯ ಪ್ರಸಿದ್ಧೇಶ್ಚ । ರೌದ್ರಃ ಕಾಲ ಇತಿ ಪೂರ್ವರಾತ್ರಸ್ಯ ಪ್ರಸಿದ್ಧೇಃ ಸಾರ್ಧರಾತ್ರಸ್ಯ ॥ (೬) ಸೌಮ್ಯಃ ಕಾಲ ಇತಿ ಅಪರರಾತ್ರಸ್ಯ । ಸೌಮ್ಯಕಾಲತ್ವಾಚ್ಚ ತಸ್ಮಿನ್ಕಾಲೇ ಶೀತಮುತ್ಪದ್ಯತೇ ॥ (೭) ಮಾರುತಕಾಲಾದ್ವಾಯುಶ್ಚ ವಾತಿ ॥ ೩ ॥**

ಅ ॥ (೧) ಆದಿತ್ಯಕಾಲ (ಮಧ್ಯರಾತ್ರಿಗಿಂತ ಮೇಲಿನ ಒಂದು ಜಾಮ) ದಾಟಿದ ಮೇಲೆ ಆದಿತ್ಯ ಕಾಲದ ಅರ್ಧಕಾಲದಲ್ಲಿ ಉತ್ತರ ದಿಕ್ಕಿನಲ್ಲಿ ಉದಯಿಸಿದಂತೆ ತೋರಿ ದಕ್ಷಿಣ ದಿಕ್ಕಿನಲ್ಲಿ ಅಸ್ತಮಾನ ಹೊಂದುತ್ತಾನೆ. ಆ ಕಾಲಕ್ಕೆ 3 ಘಳಿಗೆಯೂ 45 ವಿಘಳಿಗೆಗೆ ಅಂದರೆ 22½ ಘಳಿಗೆಯ ಮೇಲೆ 3 ಘಳಿಗೆಯೂ 45 ವಿಘಳಿಗೆ (26 ಘಳಿಗೆ 15 ವಿಘಳಿಗೆ) ಪರ್ಯಂತ ರಾತ್ರಿಕಾಲಕ್ಕೆ ಮಾರುತ ಕಾಲವೆಂದು ಹೆಸರು. (೨) (೧೦ನೇ ಖಂಡದ **ಸ ಯಾವದಾದಿತ್ಯಃ** ಎಂಬ ೪ನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ—) ಇಂದ್ರಪುರದಲ್ಲಿ ಉದಯಪರ್ವತದಲ್ಲಿದ್ದ ಎತ್ತರ ಭಾಗದಲ್ಲಿ ಸೂರ್ಯನು ಉದಯಿಸಿ ಕೆಳಭಾಗದಲ್ಲಿ ಮಾರುತಕಾಲದ ಅರ್ಧಕಾಲದಲ್ಲಿ ಮಾರುತಕಾಲ 3–45, ಅದರ ಅರ್ಧ. 1–52½ರಲ್ಲು ಅಸ್ತಮಾನ ಹೊಂದುತ್ತಾನೆ ಆ ಮರುತ್‌ಗಳ ದೇಶಕಾಲಗಳ ಅರ್ಧ ದೇಶಕಾಲಗಳಿಗೆ ಚತುರ್ಮುಖನು ಅಧಿಪತಿಯು. (೩) (ಹಾಗಾದರೆ—ಹಗಲು ರಾತ್ರಿಗೆ ಒಟ್ಟು 60 ಘಳಿಗೆ. ಅದರಲ್ಲಿ—

| | ಘಳಿಗೆ | | ವಿಘಳಿಗೆ | |
|---|---|---|---|---|
| (1) | 30 | – | 0 | ವಸುಕಾಲ |
| (2) | 15 | — | 0 | ರುದ್ರಕಾಲ |

(3) 7 —30 ಆದಿತ್ಯಕಾಲ
(4) 3 —45 ಮಾರುತಕಾಲ
(5) 1 —52½ ಬ್ರಾಹ್ಮಕಾಲ
58—7½

ಹೀಗೆ ವಸ್ವಾದಿಗಳಿಗೆ ಘಳಿಗೆಯನ್ನು ವಿಭಾಗ ಮಾಡಿದರೂ 1 ಘಳಿಗೆಯೂ 52½ ವಿಘಳಿಗೆಯೂ ಹೆಚ್ಚು ಉಳಿಯುತ್ತದೆ ಇದಕ್ಕೆ ದೇವತೆಯನ್ನು ಪ್ರತ್ಯೇಕ ಹೇಳಲಿಲ್ಲ. ಆದಕ್ಕಾಗಿ ಕಾಲವಿಭಾಗವನ್ನು ಹೇಳುತ್ತಾರೆ—)

| | ಘಳಿಗೆ ವಿಘಳಿಗೆ | | |
|---|---|---|---|
| ಹಗಲು | 31 — 15 ಕ್ಕೆ | ವಸುಗಳು ದೇವತೆಗಳು | ವಸುಕಾಲ |
| ಅದರ ಅರ್ಧ ರಾತ್ರಿ | 15 — 37½ಗೆ | ರುದ್ರರು ೩ | ರುದ್ರಕಾಲ |
| ಅದರ ಅರ್ಧ | 7 — 30 ಕ್ಕೆ | ಆದಿತ್ಯರು ೩ | ಆದಿತ್ಯಕಾಲ |
| ಅದರ ಅರ್ಧ | 3 — 45 ಕ್ಕೆ | ಮರುತ್‌ಗಳು ೩ | ಮಾರುತಕಾಲ |

ಅದರ ಅರ್ಧ 1—52½ ಕಾಲಕ್ಕೆ ಸಾಧ್ಯರೆನಿಸಿದ ಋಜುಗಳು ಅಧಿಪತಿಗಳು. ಇದು ಬ್ರಾಹ್ಮಕಾಲವು ಎಲ್ಲರೂ ಅಷ್ಟಷ್ಟು ದೇಶಗಳಿಗೂ ಆ ಕಾಲಕ್ಕೂ ಅಧಿಪತಿಗಳು (೪) (೭, ೮, ೯, ೧೦ ಈ ನಾಲ್ಕು ಖಂಡಗಳ ೪ನೇ ಮಂತ್ರದಲ್ಲಿರತಕ್ಕ **ದ್ವಿಸ್ತಾವತ್** ಎಂಬುದಕ್ಕೆ ಅರ್ಥ ಹೇಳುತ್ತಾರೆ–) ರೌದ್ರಕಾಲವು ಇಮ್ಮಡಿಯಾದಷ್ಟು ವಸುಗಳ ಕಾಲವು. ವಸುಕಾಲಕ್ಕಿಂತ ರೌದ್ರಕಾಲವು ಅರ್ಧವು. (೫) (ಹಗಲು ಮೊದಲಾದ ಕಾಲವಿಶೇಷಗಳಿಗೆ ವಸ್ವಾದಿಗಳು ದೇವತೆಗಳು ಎಂಬುದನ್ನು ಶ್ರ್ಯುಷ್ಯುಕ್ರಮವನ್ನನುಸರಿಸಿ ಯುಕ್ತಿಗಳಿಂದಲೂ ಹೇಳುತ್ತಾರೆ—) **ಬ್ರಾಹ್ಮೇ ಮುಹೂರ್ತೇ ಚೋತ್ಥಾಯ** ಎಂಬ ಸ್ಮೃತಿಯಲ್ಲಿ ಉಷಃ ಕಾಲಕ್ಕೆ ಚತುರ್ಮುಖ ಬ್ರಹ್ಮನು ದೇವತೆಯೆಂದು ಪ್ರಸಿದ್ಧಿಯಿದೆ. ಅರ್ಧರಾತ್ರಿ ಕಾಲಕ್ಕೆ ರುದ್ರರು ದೇವತೆಗಳಾಗಿರುವುದರಿಂದ ರೌದ್ರಕಾಲವೆಂದು ಪ್ರಸಿದ್ಧಿಯಿದೆ. (ಅರ್ಧರಾತ್ರಿಯಿಂದ ಮೇಲಿನ ಒಂದು ಜಾಮಕ್ಕೆ ಆದಿತ್ಯರು ದೇವತೆಯೆಂದು ಪ್ರಸಿದ್ಧಿಯಿದ್ದಪ್ರಯುಕ್ತ ಅದು ಆದಿತ್ಯಕಾಲವು ) ೬) (ಅಪರರಾತ್ರಿಯು ಸೌಮ್ಯಕಾಲವೆಂಬುವಲ್ಲಿ ಇನ್ನೊಂದು ಯುಕ್ತಿ ಹೇಳುತ್ತಾರೆ–) ಶೈತ್ಯವು ಚಂದ್ರನ ಧರ್ಮವಾಗಿರುವುದರಿಂದ ಅಪರರಾತ್ರಿಗೆ 54 ಘಳಿಗೆ, 22½ ವಿಘಳಿಗೆಯ ಮೇಲಿನ, 3 ಘಳಿಗೆ 45 ವಿಘಳಿಗೆ ಕಾಲಕ್ಕೆ ಸೌಮ್ಯಕಾಲವೆಂದು ಪ್ರಸಿದ್ಧಿಯು. ಆ ಕಾಲದಲ್ಲಿ ಶೈತ್ಯವು ಹುಟ್ಟುತ್ತದೆ. (೭) (ಚಂದ್ರನ ದೇವತೆಯಾಗಲಿ, ಮರುತ್‌ಗಳು ದೇವತೆಗಳು ಹೇಗೆಂದರೆ—) ಅದೇ ಮರುತ್‌ಗಳ ಕಾಲವೂ ಆಗಿರುವುದರಿಂದ ಗಾಳಿಯೂ ಬೀಸುತ್ತಿದೆ. (ಆದಕಾರಣ ಮಾರುತಕಾಲವೆಂದೂ ಪ್ರಸಿದ್ಧಿಯಿದೆ.) ॥ ೩ ॥

ಹೀ - ಅಗ್ನ್ಯಾದಿ ವಸುಗಳು ದೇವತೆಗಳೆಂಬಲ್ಲಿ ಯುಕ್ತಿ ಹೇಳುತ್ತಾರೆ—

**ಭಾ. ॥ (೧) ಆಗ್ನೇಯಕಾಲತ್ವಾದೇವಾಹ್ನಿ ಸೈಕಘಟಿಕಂ ಹೋಮಕರ್ಮಣಿ ವಿಶೇಷತಃ ಪ್ರವರ್ತಂತೇ ॥ (೨) ಅಹಃ ಸರ್ವಂ (ಸರ್ವ)ವಸೂನಾಂ ತು ಪರೇಷಾಂ ರಾತ್ರಿರೇವ ಚ । ಪ್ರದತ್ತಾ ವಿಷ್ಣುನಾ ಪೂರ್ವಂ ನಾಲಮಿತ್ಯಬ್ರುವನ್ಸುರೇ ॥ ಪುನರ್ವಿಶೇಷತೋ ದತ್ತಂ ರುದ್ರಾಣಾಂ ಮರುತಾಂ ತಥಾ । ಮಾಧ್ಯಂದಿನಂ ತೃತೀಯಂ ಚಾಪ್ಯಾದಿತ್ಯಾನಾಂ ಪ್ರದತ್ತವಾನ್ ॥ ವಿಶ್ವೇಷಾಮಪಿ ದೇವಾನಾಂ ಸಾಮಾನ್ಯಾದ್ವಸುನಾಮಹಃ । ಇತಿ ಚ ॥ (೩) ಸರ್ವಸ್ಯಾಧಿಪತಿರ್ಬ್ರಹ್ಮಾ ರುದ್ರಾದ್ಯಾಸ್ತು ದ್ವಯೋರ್ದ್ವಯೋಃ । ವಸವಸ್ತ್ವಹ್ನ ಏವೇಶಾಃ ಸಾಮಾನ್ಯಾನ್ನ ವಿಶೇಷತಃ ॥ ಇತಿ ಚ ॥ (೪) ಮಾಧ್ಯಂದಿನೇ ತೃತೀಯೇ ಚ ರುದ್ರಾದೇರಾಜ್ಯಮಿಷ್ಯತೇ । ತದ್ಭೃತ್ಯತ್ವಾದ್ವಸೂನಾಂ ತು ಪ್ರಾತಃಕಾಲೇ(ಲೋ) ವಿಶೇಷತಃ ॥ (೫) ತತ್ರಾಪಿ ವಾಯ್ವಧೀನತ್ವಮಗ್ನ್ಯಾದೀನಾಂ ಪ್ರಕೀರ್ತಿತಂ ॥ ೪ ॥**

ಅ || (೧) ಹಗಲಿಗೆ ಅಗ್ನ್ಯಾದಿವಸುಗಳು ದೇವತೆಗಳಾಗಿರುವುದರಿಂದ ಹಗಲಿನಲ್ಲಿ ಸೂರ್ಯನು ಉದಯಿಸುವುದಕ್ಕಿಂತ ಮುಂಚಿನ ಅರ್ಧ ಘಳಿಗೆ ಸೂರ್ಯಾಸ್ತಮಯದ ಮೇಲಿನ ಅರ್ಧ ಘಳಿಗೆ ಕಾಲ ಗಳಲ್ಲಿ ಹೋಮ ಮಾಡಲಿಕ್ಕೆ ವಿಶೇಷವಾಗಿ ತಿಳಿದವರು ಪ್ರವರ್ತಿಸುತ್ತಾರೆ. (೨) (ಇಡೀ ಹಗಲಿಗೆ ವಸು ಗಳು ಅಧಿಪತಿಗಳು. ಹಗಲಿನ ಏಕದೇಶಗಳಾದ ಮಾಧ್ಯಂದಿನ ಸವನ ಸಾಯಂಸವನಗಳಿಗೆ ರುದ್ರಾದಿತ್ಯಾ ದಿಗಳು ದೇವತೆಗಳೆಂದು ಇದ್ದ ಕಾರಣ ರಾತ್ರಿಗೇನೇ ರುದ್ರಾದಿಗಳು ಅಧಿಪತಿಗಳೆಂಬುದು ಕೂಡುವುದಿಲ್ಲ, ಎಂದರೆ—) ಇಡೀ ಹಗಲಿಗೆ ವಸುಗಳು ದೇವತೆಯೆಂಬುದು ಸಾಮಾನ್ಯವಾಗಿ ಹೇಳಿದ್ದು. (ವಿಶೇಷವಾಗಿ ಅಲ್ಲ.) ರಾತ್ರಿಗೆ ರುದ್ರಾದಿಗಳೇ ಅಧಿಪತಿಗಳೆಂದು ಶ್ರೀವಿಷ್ಣುವೇ ನಿಯಮಿಸಿರುತ್ತಾನೆ. ರಾತ್ರಿಯ ಅಧಿ ಕಾರವನ್ನು ರುದ್ರಾದಿಗಳಿಗೇನೇ ಕೊಟ್ಟಿರುತ್ತಾನೆ. ಆಗ ರುದ್ರ ಮೊದಲಾದ ದೇವತೆಗಳು ನಮಗೆ ಇದು ಸಾಲದೆಂದರು. ಆಗ ಶ್ರೀವಿಷ್ಣುವು ಮರಳಿ ವಿಶೇಷವಾಗಿ *ರುದ್ರರಿಗೂ ಮರುತ್‌ಗಳಿಗೂ ಮಾಧ್ಯಂದಿನ ಸವನದ (ಮಧ್ಯಾಹ್ನ ಸಮಯದ) ಆಧಿಪತ್ಯವನ್ನು ಕೊಟ್ಟನು. ಶ್ರೀಹರಿಯು ತೃತೀಯ (ಸಾಯಂ) ಸವನಕ್ಕೆ ಆದಿತ್ಯರನ್ನೂ ವಿಶ್ವೇದೇವತೆಗಳನ್ನೂ ವಿಶೇಷವಾಗಿ ಅಧಿಪತಿಗಳನ್ನಾಗಿ ಮಾಡಿದನು. ಹಗಲಿಗೆ ವಸುಗಳು ಅಧಿಪತಿಗಳೆಂದು ಹೇಳಿದ್ದು ಸಾಮಾನ್ಯವಾಗಿ. (೩) (1 ಘಳಿಗೆ 52$\frac{1}{2}$ ವಿಘಳಿಗೆಗೆ ಬ್ರಹ್ಮನು ಅಧಿಪತಿಯೆಂದು ಹೇಳಿದೆ. ಶ್ರೇಷ್ಠರಿಗೆ ಸ್ವಲ್ಪ ಕಾಲಾಧಿಪತ್ಯವನ್ನು ಅಲ್ಪರಿಗೆ ಹೆಚ್ಚು ಕಾಲಾಧಿಪತ್ಯವನ್ನು ಹೇಳಿದ್ದು ವಿರುದ್ಧವೆಂದರೆ—) ಯದ್ಯಪಿ ವಿಶೇಷವಾಗಿ ಸರ್ವಕಾಲಕ್ಕೂ ಬ್ರಹ್ಮನೇ ಅಧಿಪತಿಯು. ರುದ್ರಾ ದಿಗಳು ಚತುರ್ಮುಖನ ಅಧೀನದಲ್ಲಿದ್ದು ಒಂದೊಂದು ಅಂಶ ಕಾಲಕ್ಕೆ ಅಧಿಪತಿಗಳಾಗಿರುತ್ತಾರೆ. ಆದರೂ 1 ಘಳಿಗೆಯು 52$\frac{1}{2}$ ವಿಘಳಿಗೆ ಬ್ರಾಹ್ಮಕಾಲಕ್ಕೆ ಬೇರೆ ಯಾವ ದೇವತೆಗಳೂ ಅಧಿಪತಿಗಳಿಲ್ಲ. ಅದುಕಾರಣ ಅದಕ್ಕೆ ಬ್ರಹ್ಮನೇ ಅಧಿಪತಿಯೆಂದು ಹೇಳಿದುದು. ರುದ್ರ ಆದಿತ್ಯಾದಿಗಳು ಹಗಲು ರಾತ್ರಿಗಳ ಭಾಗಗಳಾದ ಮಾಧ್ಯಂದಿನ ಸವನ, ತೃತೀಯ (ಸಾಯಂ) ಸವನಗಳಿಗೆ ಮುಖ್ಯವಾಗಿ ಅಧಿಪತಿಗಳೆಂದು ಹೇಳಿದ್ದು. (ವಸುಗಳು ಅಧಿಪತಿಗಳೆಂದು ಹೇಳಿದುದು ಸಾಮಾನ್ಯವಾಗಿ.) ವಸುಗಳು ಸಾಮಾನ್ಯವಾಗಿ ಹಗಲಿಗೆ ಮಾತ್ರ ಅಧಿಪತಿಗಳು. ಅದೂ ಮುಖ್ಯವಾಗಿ ಅಲ್ಲ (೪) ಮಾಧ್ಯಂದಿನ ಸವನಕ್ಕೂ ಸಾಯಂ ಸವನಕ್ಕೂ ರುದ್ರಾದಿಗಳೇ ಮುಖ್ಯವಾಗಿ ಅಧಿಪತಿಗಳು. ವಸುಗಳು ರುದ್ರಾದಿಗಳ ಭೃತ್ಯರಾಗಿರುವುದರಿಂದಲೇ ಅವರ ಅಧೀನರಾಗಿ ಪ್ರಾತಃಸವನ ಸಾಯಂಸವನಗಳಿಗೆ ಅಧಿಪತಿಗಳು. ಪ್ರಾತಃಕಾಲಕ್ಕೆ ಸಾಮಾನ್ಯವಾಗಿ ಇತರರ ಅಧೀನರಾಗದೆ ವಸುಗಳು ಅಧಿಪತಿಗಳು. (೫) (ಪ್ರಾತಃಕಾಲಕ್ಕೂ ಅಗ್ನ್ಯಾದಿಗಳು ಸರ್ವಥಾ ಸ್ವತಂತ್ರ ರಲ್ಲವೆನ್ನುತ್ತಾರೆ.) ಚತುರ್ಮುಖನು ಸರ್ವಕಾಲಕ್ಕೂ ಮುಖ್ಯವಾಗಿ ಅಧಿಪತಿಯಾಗಿರುವುದರಿಂದ ಪ್ರಾತಃ ಕಾಲಕ್ಕೂ ಅಗ್ನ್ಯಾದಿಗಳು ಚತುರ್ಮುಖನ ಅಧೀನರಾಗಿಯೇ ಅಧಿಪತಿಗಳಾಗಿರುತ್ತಾರೆ. || ೪ ||

ಪೀ—ವಸ್ವಾದಿಗಳಿಗೆ ಲೋಕ ವಿಭಾಗವನ್ನು ಹೇಳುತ್ತಾರೆ—

**ಭಾ. || (೧) ಏವಂ ಪೃಥಿವ್ಯಾಂ ರುದ್ರಾಣಾಮಂತರಿಕ್ಷಂ ಪ್ರಕೀರ್ತಿತಂ | ಮರುತಾಂ ಚ ದ್ವಿಲೋಕೇಶಾ ಆದಿತ್ಯಾಃ ಪರಿಕೀರ್ತಿತಾಃ || (೨) ಸರ್ವೇಷಾಮಧಿಪೋ ಬ್ರಹ್ಮಾ ದ್ಯು- ನಾಥೀಶಸ್ತು ಮಾರುತಃ | ತ್ರಿಲೋಕಾಧಿಪತಿಶ್ಚೇಂದ್ರಸ್ತೇಷಾಮಪ್ಯಧಿಪೋ ಹರಿಃ || ಇತಿ ಚ|| (೩) ಸ್ವಾರಾಜ್ಯಂ ಭೋಗಃ ಸ್ವರಂಜನಾತ್ || (೪) ನ ತ್ವಿಂದ್ರಾದ್ಯಮೋ ದ್ವಿಗುಣಕಾಲಂ ತಿಷ್ಠತಿ ತಸ್ಮಾದ್ವರುಣಸ್ತಸ್ಮಾತ್ಸೋಮ ಇತ್ಯತ್ರ ಕಿಂಚಿನ್ನ್ಯೂನಂ || (೫) ನ ಚ ಸೋಮಾದ್ದ್ವಿ ಗುಣಮೇವ ಬ್ರಹ್ಮಾ ತಿಷ್ಠತಿ | ದ್ವಿಪರಾರ್ಧಂ ಹಿ ತಸ್ಯ ಕಾಲಃ || ೫ ||**

* ವಸುಗಳು ಸಾಮಾನ್ಯವಾಗಿ ಇತರರ ಅಧೀನದಲ್ಲಿದ್ದು ಮಾಧ್ಯಂದಿನ ಸವನಕ್ಕೆ ಅಧಿಪತಿಗಳು. ರುದ್ರರು ವಿಶೇಷವಾಗಿ ಇತರರ ಅಧೀನರಾಗದೆ ಮುಖ್ಯವಾಗಿ ಮಾಧ್ಯಂದಿನ ಸವನಕ್ಕೆ ಅಧಿಪತಿಗಳು.

ಅ ॥ (೧) ಪ್ರಾತಃಸವನದಲ್ಲಿ ಹೇಳಿದಂತೆಯೇ ಭೂಲೋಕಕ್ಕೆ ವಸುಗಳು ಅಧಿಪತಿಗಳು. ಮಾಧ್ಯಂದಿನಸವನದಲ್ಲಿ ಹೇಳಿದಂತೆಯೇ ರುದ್ರರೂ ಮರುತ್‌ಗಳೂ ಅಂತರಿಕ್ಷಲೋಕಕ್ಕೆ ಅಧಿಪತಿಗಳು. ಆದಿತ್ಯರು ದ್ಯು (ಸ್ವರ್ಗ)ಲೋಕಕ್ಕೆ ಅಧಿಪತಿಗಳು. (೨) ಎಲ್ಲಾ ಲೋಕಗಳಿಗೂ ಬ್ರಹ್ಮನೇ ಮುಖ್ಯವಾಗಿ ಅಧಿಪತಿಯು. ವಾಯುದೇವರು ಸ್ವರ್ಗಾದಿಗಳಿಗೆ ಅಧಿಪತಿಯು. ಇಂದ್ರನು ಮೂರುಲೋಕಗಳಿಗೆ ಅಧಿಪತಿಯು. ಶ್ರೀಹರಿಯು ಎಲ್ಲರಿಗೂ ಅಧಿಪತಿಯು. (೩)ಂತನ್ನನ್ನು ತಾನೇ ಸುಖಗೊಳಿಸುವುದರಿಂದ ಸ್ವಾರಾಜ್ಯವೆಂದರೆ ವಿಷಯಗಳನ್ನು ಅನುಭವಿಸುವದು. (೪) (**ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾದಸ್ತಮೇತಾ, ದ್ವಿಸ್ತಾವದ್ದಕ್ಷಿಣತ ಉದೇತೋತ್ತರತೋಽಸ್ತಮೇತಾ,** ಇದುಮೊದಲಾದ ನಾಲ್ಕು ವಾಕ್ಯಗಳು ಪ್ರತಿನಿತ್ಯವೂ ದಕ್ಷಿಣಾದಿಗಳಲ್ಲಿ ಸೂರ್ಯೋದಯಾದಿಗಳು ಆಗುತ್ತವೆಂದು ಹೇಳುತ್ತವೆಂದರು. **ಈ ವಾಕ್ಯಕ್ಕೆ ಅದ್ವೈತಿಗಳು** ಹೀಗೆ ಅರ್ಥ ಹೇಳುತ್ತಾರೆ. ಸೂರ್ಯನು ಮೂಡುದಿಕ್ಕಿನಲ್ಲಿ ಉದಯಿಸಿ ಪಡುದಿಕ್ಕಿನಲ್ಲಿ ಅಸ್ತಮಾನ ಹೊಂದುತ್ತಾನೆ. ಅದಕ್ಕಿಂತ ಇಮ್ಮಡಿ ಕಾಲದಲ್ಲಿ ಕಾಲಾಂತರದಲ್ಲಿ ದಕ್ಷಿಣದಲ್ಲಿ ಉದಯಿಸಿ ಉತ್ತರದಲ್ಲಿ ಅಸ್ತಮಾನ ಹೊಂದುತ್ತಾನೆ. ಅಷ್ಟು ಕಾಲಕ್ಕೆ ರುದ್ರರು ಅಧಿಪತಿಗಳು. ಅದು ರುದ್ರರಿಗೆ ಭೋಗಿಸುವ ಕಾಲವು. ಅದಕ್ಕಿಂತಲೂ ಇಮ್ಮಡಿ ಕಾಲದಲ್ಲಿ ಪಡುವಣದ ಮೇಲೆ ಉದಯಿಸಿ ವ್ಯತ್ಯಾಸವಾಗಿ ಅಸ್ತಮಾನ ಹೊಂದುತ್ತಾನೆ ಮೊದಲು ಮೊದಲಿನ ದಿಕ್ಕಿನಿಂದ ಇಮ್ಮಡಿ ಇಮ್ಮಡಿಯಾದ ಕಾಲದಿಂದ ಮುಂದೆ ಮುಂದಿನ ದಿಕ್ಕುಗಳಲ್ಲಿ ಉದಯಾದಿಗಳು. ಇಮ್ಮಡಿಯಾದ ಮುಂದಿನ ಕಾಲದಿಂದ ಇಂದ್ರನದ್ದಾದ ಅಮರಾವತೀ ಮೊದಲಾದ ಹಿಂದುಹಿಂದಿನ ಪಟ್ಟಣಗಳಿಗೆ ನಾಶವು, ಆಗಲೇ ದಕ್ಷಿಣಾದಿಗಳಲ್ಲಿ ಉದಯವೆಂದು ಅರ್ಥ ಹೇಳುವರು. ಅದು ಅಯುಕ್ತವೆನ್ನುತ್ತಾರೆ—) ಅಮರಾವತೀ ಮೊದಲಾದ ಪಟ್ಟಣಗಳಿಗೆ ಮೇಲುಮೇಲಿನ ಇಮ್ಮಡಿ ಇಮ್ಮಡಿಯಾದ ಕಾಲದಿಂದ ನಾಶವೆಂದು ಹೇಳಿದ್ದು ಅಯುಕ್ತವು. ಇಂದ್ರಾದಿಗಳ ಪಟ್ಟಣಗಳಿಗೆ ಆಗ ನಾಶವಾಗುವುದಾದರೆ—ಆಯಾಯ ಪಟ್ಟಣಗಳಿಗೆ ಅಧಿಪತಿಗಳಾದ ಇಂದ್ರಾದಿ ದೇವತೆಗಳಿಗೂ ಇಮ್ಮಡಿಯಾದ ಉತ್ತರೋತ್ತರ ಕಾಲದಿಂದ ನಾಶವು ಬರಬೇಕಾದೀತು. ಬರಲಿ ಎಂದರೆ—ಇಂದ್ರನಿಗೆ ನಾಶವಾದ ಮೇಲೆ ಇಂದ್ರನಿಗಿಂತ ಯಮನು ಇಮ್ಮಡಿ ಕಾಲದಲ್ಲಿ ಇರುತ್ತಾನೆ. ಯಮನಿಗೆ ನಾಶವಾದ ಮೇಲೆ ಯಮನಿಗಿಂತ ವರುಣನು ಇಮ್ಮಡಿ ಕಾಲದಲ್ಲಿ ಇರುತ್ತಾನೆ. ವರುಣನಿಗೆ ನಾಶವಾದಾಗ ವರುಣನಿಗಿಂತ ಸೋಮನು ಇಮ್ಮಡಿ ಕಾಲದಲ್ಲಿ ಇರುತ್ತಾನೆಂದು ಹೇಳಬೇಕಾಗುವುದು. ಈ ವಿಷಯದಲ್ಲಿ ಪ್ರತ್ಯಕ್ಷ, ಅನುಮಾನ, ಆಗಮಗಳೆಂಬ ಯಾವ ಪ್ರಮಾಣವೂ ಇಲ್ಲ. (೫) (ಮತ್ತು ೧೦ನೇ ಖಂಡದಲ್ಲಿ **ದ್ವಿಸ್ತಾವದೂರ್ಧ್ವ ಉದೇತಾಽರ್ವಾಗಸ್ತಮೇತಾ** ಎಂಬುದು ಅವರ ಪಕ್ಷದಲ್ಲಿ ಸರ್ವಥಾ ಕೂಡುವುದಿಲ್ಲ. ಏಕೆಂದರೆ - ಅದ್ವೈತಿಗಳ ಮತದಲ್ಲಿ ಸೋಮ, ಆತನ ಪಟ್ಟಣ, ಇವುಗಳಿಗೆ ನಾಶವಾದ ಮೇಲೆ ಅದಕ್ಕಿಂತ ಇಮ್ಮಡಿ ಕಾಲದಲ್ಲಿ ಬ್ರಹ್ಮ, ಆತನ ಪಟ್ಟಣ ಇವುಗಳು ಇರುತ್ತವೆ ಎಂದು ಈ ವಾಕ್ಯದಲ್ಲಿ ಹೇಳಲ್ಪಡುತ್ತದೆನ್ನಬೇಕು. ಅದು ಸರ್ವಥಾ ಕೂಡುವುದಿಲ್ಲವೆನ್ನುತ್ತಾರೆ—) ಸೋಮ, ಸೋಮನ ಪಟ್ಟಣ, ಇವುಗಳಿಗಿಂತ ಇಮ್ಮಡಿ ಕಾಲದಲ್ಲಿಯೇ ಬ್ರಹ್ಮನೂ ಬ್ರಹ್ಮನ ಪಟ್ಟಣವೂ ಇರುತ್ತದೆಂದಲ್ಲ. (ಏಕೆಂದರೆ—) ಬ್ರಹ್ಮನಿಗೆ §ದ್ವಿಪರಾರ್ಧಕಾಲವೆಂದು ಶಾಸ್ತ್ರಪ್ರಸಿದ್ಧಿಯು. (ಅದ್ವೈತಿಗಳು ಹೇಳುವ ಪ್ರಕಾರ ಬಹಳ ಕಡಿಮೆ ಕಾಲವಾಗುತ್ತದೆ.)　　　　॥ ೫ ॥

§ **ಮಾಸೈರ್ದ್ವಾದಶಭಿರ್ವರ್ಷೈರ್ದಿವ್ಯಂ ತದ್ದಿನಮುಚ್ಯತೇ । ಚತುರ್ಯುಗಸಹಸ್ರಾಣಿ ಬ್ರಹಣೋ ದಿನಮುಚ್ಯತೇ । ತಾವದ್ರಾತ್ರಿಸ್ತು ವಿಜ್ಞೇಯಾ ತ್ರೈಲೋಕ್ಯಪ್ರಲಯಂ ಭವೇತ್ ॥ ಇತ್ಯಾದಿ** ಪ್ರಮಾಣ ಪ್ರಕಾರ ಮನುಷ್ಯರ ಒಂದು ವರ್ಷವು ದೇವತೆಗಳಿಗೆ ಒಂದು ದಿನವು ಸಹಸ್ರ ಚತುರ್ಯುಗಗಳು ದಾಟಿದರೆ ಬ್ರಹ್ಮನಿಗೆ ಒಂದು ದಿನವಾಗುತ್ತದೆ. ಅಷ್ಟು ರಾತ್ರಿಯೂ ಬೇಕು ಏವಂಚ ಬ್ರಹ್ಮನ ಒಂದು ದಿನಕ್ಕೆ ದೇವತೆಗಳದ್ದು ಒಂದು ಕೋಟಿಯೂ ಇಪ್ಪತ್ತು ಲಕ್ಷವರ್ಷಗಳು 1,20,00,000. ಮನುಷ್ಯರದ್ದು ನಲ್ವತ್ತಮೂರು ಅರ್ಬುದಗಳೂ ಎರಡು ಕೋಟಿ ವರ್ಷಗಳು. 43,2,00,00,000. **ಮನ್ವಂತರಂ ತು ದಿವ್ಯಾನಾಂ ಯುಗಾನಾಮೇಕಸಪ್ತತಿಃ ।** ಎಪ್ಪತ್ತೊಂದು ಚತುರ್ಯುಗಗಳು ದಾಟಿದಾಗ ಒಂದು ಮನ್ವಂತರವು ಆಗುವುದು ಬ್ರಹ್ಮನ ಒಂದು ದಿನದಲ್ಲಿ ೧೪ ಇಂದ್ರರು ದಾಟುವರು. ೧೪ ಮನ್ವಂತರಗಳೂ ಆಗುವವು. ಇಂತಹ 360 ದಿನಗಳಿಗೆ ಒಂದು ವರ್ಷ. ಅಂತಹ 50 ವರ್ಷಕ್ಕೆ ಒಂದು ಪರಾರ್ಧ ಅಂತಹ ಎರಡು ಪರಾರ್ಧ ಬ್ರಹ್ಮನ ಕಾಲ ಹೀಗೆ ಬ್ರಹ್ಮನಿಗೆ ದ್ವಿಪರಾರ್ಧಕಾಲವನ್ನು ಶಾಸ್ತ್ರದಲ್ಲಿ ಹೇಳಿರುವರು.

ಹೀ—ಇಂದ್ರ, ಯಮಾದಿಗಳಲ್ಲಿ ಮೇಲು ಮೇಲಿನ ದಿಕ್ಕುಗಳ ಅಧಿಪತಿಗಳು ಇಮ್ಮಡಿ ಇಮ್ಮಡಿಯಾದ ಉತ್ತರೋತ್ತರ ಕಾಲದಲ್ಲಿರುತ್ತಾರೆಂಬಲ್ಲಿ ಯಾವ ಪ್ರಮಾಣವೂ ಇಲ್ಲವೆಂದರು. ಈಗ ಪ್ರಮಾಣ ವಿರೋಧವೂ ಅದೆ ಎನ್ನುತ್ತಾರೆ—

**ಭಾ. ॥ (೧) ಇಂದ್ರಾದಯೋ ಓ ಮನ್ವಂತರಮಾತ್ರಂ ತಿಷ್ಠಂತಿ ॥ (೨) ನ ಚ ವಸೂನಾಂ ಪೂರ್ವೋ ದೇಶೋ ರುದ್ರಾಣಾಂ ದಕ್ಷಿಣ ಆದಿತ್ಯಾನಾಂ ಪಶ್ಚಿಮೋ ಮರುತಾಮುತ್ತರ ಏವ । ನಾನ್ಯತ್ರೇತ್ಯತ್ರ ಪ್ರಮಾಣಮಸ್ತಿ ॥ (೩) ತತ್ಪಕ್ಷೇ ರುದ್ರೈಃ ಸಹ ಇಂದ್ರಸ್ಯ ದಕ್ಷಿಣತ್ವಪ್ರಾಪ್ತೇಶ್ಚ ॥ (೪) ಅತ ಇಂದ್ರಾದೇರಿಂದ್ರಸ್ಯ ದ್ವಿಗುಣಕಾಲತ್ವಮಿತಿ ವಿರೋಧಃ । ನ ಚೇಂದ್ರಶಬ್ದೇನ ವಾಯುಸ್ತೈರ್ಗೃಹೀತಃ । ಇಂದ್ರಾದಿಪುರೀಣಾಮುದ್ವಾಸತ್ವೇನ್ಯೈವಮಂಗೀಕಾರೇ ತತ್ಷೋಡಶಗುಣತ್ವಾದೂರ್ಧ್ವೋದಯಸ್ಯ್ಯೈಕೇಂದ್ರಾತ್ಪರತೋಽನಿಂದ್ರತ್ವಮೇವ ಸ್ಯಾತ್ । ಅಥ ತತ ಊರ್ಧ್ವ ಉದೇತ್ಯೇತಿ ತತ್ಪಕ್ಷೇ ಪಶ್ಚಾದಪ್ಯಾದಿತ್ಯಭಾವಾತ್ ಕಲ್ಪಾಂತಪ್ರಲಯೋಽಪಿ ನ ಸ್ಯಾದಿತ್ಯಾದಿತ್ಯಾದ್ಯನಂತದೋಷದುಷ್ಟತ್ವೇಽಪಿ ಗ್ರಂಥಾಲ್ಪತ್ವಾಯೈವೋಪರಮ್ಯತೇ ॥ ೬ ॥**

ಅ ॥ (೧) ಇಂದ್ರ, ಯಮ, ವರುಣ, ಸೋಮರು ಒಂದು ಮನ್ವಂತರ ಪರ್ಯಂತ ಮಾತ್ರ ತಮ್ಮ ತಮ್ಮ ಪದವಿಗಳಲ್ಲಿ ಇರುತ್ತಾರೆಂದು ವೇದ ಮೊದಲಾದ ಪ್ರಮಾಣಗಳಲ್ಲಿ ಹೇಳಿದೆ (ಅದುಕಾರಣ ಅವರು ಹೇಳುವ ಅರ್ಥವು ಪ್ರಮಾಣವಿರುದ್ಧವು) (೨) (ವಸುಗಳು ಅಧಿಪತಿಗಳಾಗಿರುವ ಪೂರ್ವ ದಿಕ್ಕನ್ನು ಬಿಟ್ಟು ಬೇರೆ ಕಾಲದಲ್ಲಿ ರುದ್ರರು ಅಧಿಪತಿಗಳಾಗಿರುವ ತೆಂಕಣದಲ್ಲಿ ಉದಯಿಸುತ್ತಾರೆ. ಹೀಗೆ ವಸ್ವಾದಿಗಳಿಗೆ ದೇಶವಿಭಾಗಗಳನ್ನು ಹೇಳಿರುವರು. ಆ ವಿಷಯದಲ್ಲಿಯೂ ಪ್ರಮಾಣವಿಲ್ಲದಿರುವುದರಿಂದ ಅದು ಯುಕ್ತವಲ್ಲವೆನ್ನುತ್ತಾರೆ—) ವಸುಗಳಿಗೆ ಮೂಡಣವೇ, ರುದ್ರರಿಗೆ ತೆಂಕಣವೇ, ಆದಿತ್ಯರಿಗೆ ಪಡುವಣವೇ, ಮರುತ್‍ಗಳಿಗೆ ಬಡಗಣವೇ ದೇಶವು, ಆ ದಿಕ್ಕುಗಳಿಗೆ ಬೇರೆಯವರು ಅಧಿಪತಿಗಳಿಲ್ಲ, ಎಂಬಲ್ಲಿ ಯಾವ ಪ್ರಮಾಣವೂ ಇಲ್ಲ (೩) (ಇಂದ್ರನ ಪಟ್ಟಣವಾದ ಅಮರಾವತಿಗೆ ನಾಶವಾದಾಗ ಮೂಡಣದಲ್ಲಿ ಉದಯಿಸುವುದಕ್ಕಿಂತ ಇಮ್ಮಡಿ ಕಾಲದಲ್ಲಿ ತೆಂಕಣದಲ್ಲಿ ಉದಯವು ಎಂದು ಹೇಳಿದರೆ ದೋಷ ಹೇಳುತ್ತಾರೆ—) ತೆಂಕಣಾದಿಗಳಲ್ಲಿ ಉದಯಿಸುವುದಕ್ಕೆ ಮೂಡಣದಲ್ಲಿ ಉದಯಿಸುವುದಕ್ಕಿಂತ ಇಮ್ಮಡಿ ಕಾಲವೆಂಬ ಪಕ್ಷದಲ್ಲಿ ಇಂದ್ರನೂ ರುದ್ರರೊಳಗೆ ಸೇರಿ ತೆಂಕಣದಲ್ಲಿ ಉದಯಿಸುವುದಕ್ಕೆ ಅಧಿಪತಿಯಾಗಬೇಕಾಗುವುದು. ಹಾಗೆ ಇಟ್ಟುಕೊಂಡರೆ ಇಂದ್ರನಿಗಿಂತಲೇ ಇಂದ್ರನು ಇಮ್ಮಡಿ ಕಾಲದಲ್ಲಿ ಇರುತ್ತಾನೆನ್ನಬೇಕು. ಇದು ಪೂರ್ವೋತ್ತರ ವಿರುದ್ಧವು. (ಮತ್ತು ಇಂದ್ರನಿಗೆ ನಾಶವಾಗುತ್ತದೆಂದು ಹೇಳಿದ್ದು ಅಯುಕ್ತವು.) (೪) (ನಾಶಹೊಂದಿದ ಇಂದ್ರನು ಬೇರೆ ರುದ್ರರೊಳಗೆ ಸೇರಿದ ಇಂದ್ರನು ವಾಯುವೇ, ಅದುಕಾರಣ ವಿರೋಧವಿಲ್ಲವೆಂದರೆ—) ಇಂದ್ರಶಬ್ದದಿಂದ ಮುಖ್ಯಪ್ರಾಣದೇವರನ್ನು ಅವರು ಇಟ್ಟುಕೊಳ್ಳಲಿಲ್ಲ. (ಇಂದ್ರನ ಪಟ್ಟಣವನ್ನು ಬಿಟ್ಟು ತೆಂಕಣಾದಿಗಳಲ್ಲಿ ಉದಯವೆಂದಂಗೀಕರಿಸಿದರೆ ಇನ್ನೊಂದು ದೋಷ ಹೇಳುತ್ತಾರೆ-) ಇಂದ್ರಾದಿಗಳಿಗೂ, ಅವರ ಪಟ್ಟಣಗಳಿಗೂ ನಾಶವಾಗಿ ತೆಂಕಣಾದಿಗಳಲ್ಲಿ ರುದ್ರರಿಗೆ ಉದಯವೆಂದಂಗೀಕರಿಸಿದರೆ ಊರ್ಧ್ವೋದಯ ಕಾಲಕ್ಕೆ ಪೂರ್ವೋದಯ ಕಾಲಕ್ಕಿಂತ ಹದಿನಾರು ಅಂಶ ಹೆಚ್ಚು ಇದ್ದ ಪ್ರಯುಕ್ತ ಒಬ್ಬ ಇಂದ್ರನು ನಾಶವಾದ ಮೇಲೆ ತೆಂಕಣಾದಿಗಳಲ್ಲಿ ಉದಯಿಸುವ ಕಾಲದಲ್ಲಿ ಇಂದ್ರರೇ ಇಲ್ಲವೆಂದಾಗಬೇಕಾದೀತು. ಅದ್ವೈತಿಗಳ ಪಕ್ಷದಲ್ಲಿ ಊರ್ಧ್ವೋದಯಕಾಲ ಮುಗಿದ ಮೇಲೆಯೂ ಪ್ರಲಯವು ಕೂಡಲಾರದು. **ಅಥ ತತ ಊರ್ಧ್ವ ಉದೇತ್ಯ** ಎಂಬ ೧೧ನೇ ಖಂಡದಲ್ಲಿ ಊರ್ಧ್ವೋದಯಕಾಲ ಮುಗಿದ ಮೇಲೆಯೂ ಆದಿತ್ಯನಿದ್ದಾನೆಂದಂಗೀಕರಿಸಿರುವುದರಿಂದ ಅದ್ವೈತಿಗಳ ಪಕ್ಷದಲ್ಲಿ

ಕಲ್ಪದ ಅಂತ್ಯದಲ್ಲಿ ಪ್ರಲಯವೂ ಇಲ್ಲದೆ ಹೋಗುವುದು. (ಆದಿತ್ಯನಿರುವ ಕಾಲವು ಪ್ರಲಯಕಾಲವಾಗಲಾರದಷ್ಟೆ.) ಇದುಮೊದಲಾದ ಅನಂತದೋಷಗಳು ಇದ್ದರೂ ಗ್ರಂಥವು ಜಾಸ್ತಿಯಾಗುತ್ತದೆಂಬ ಭಯದಿಂದಲೇ ಈ ವಿಚಾರವು ಇಲ್ಲಿ ನಿಲ್ಲಿಸಲ್ಪಟ್ಟಿದೆ

ವಿ॥ ಅಪ್ರಾಕೃತಗಳ ಮತದಲ್ಲಿ ದಕ್ಷಿಣಾದಿಗಳಲ್ಲಿ ಉದಯಿಸುವ ಕಾಲದಲ್ಲಿ ಒಬ್ಬ ಇಂದ್ರನು ಮುಗಿದ ಮೇಲೆ ಇಂದ್ರನೇ ಇಲ್ಲವೆಂದಾಗುವಾಗ ಇಂದ್ರನನ್ನು ಉದ್ದೇಶಿಸಿಕೊಂಡಿರುವ ಕರ್ಮವು ಇಲ್ಲವೆಂದಾಗುವುದು. ಆದುಕಾರಣ ವೇದಗಳು ಅಪ್ರಮಾಣಗಳಾಗಬೇಕಾಗುವವು. ಇಂದ್ರನೂ ಇಂದ್ರನ ಪಟ್ಟಣವೂ ಎರಡೂ ನಾಶಗಳಾಗಿ ತೆಂಕಣಾದಿಗಳಲ್ಲಿ ಉದಯಿಸುವುದೆಂದಂಗೀಕರಿಸಿರುವುದರಿಂದ ಆಗ ಪೂರ್ವೇಂದ್ರ (ಹಿಂದಿನ ಇಂದ್ರನು) ಇದ್ದಾನೆನ್ನ ಕೂಡದು. ಇಂದ್ರ ಇಂದ್ರನ ಪಟ್ಟಣ ಎರಡು ನಾಶವಾದ ಮೇಲೆ ಅಲ್ಪಕಾಲದಲ್ಲಿಯೇ ಪ್ರಲಯವಾಗಿದ್ದ ಕಾರಣ ಕರ್ಮಪ್ರವೃತ್ತಿಯೇ ಇಲ್ಲವೆಂದನ್ನ ಕೂಡದು. ಊರ್ಧ್ವಲೋಕದಲ್ಲಿ ಉದಯಿಸುವ ಕಾಲವು ಮುಗಿದ ಮೇಲೆಯೇ ಪ್ರಲಯವನ್ನು ಅಂಗೀಕರಿಸಿದ್ದು. ಊರ್ಧ್ವೋದಯ ಕಾಲಕ್ಕೆ ಮೂಡಣದಲ್ಲಿ ಉದಯಿಸುವ ಕಾಲಕ್ಕಿಂತ ಹದಿನಾರು ಅಂಶಗಳು ಜಾಸ್ತಿ ಇವೆ. ಹೀಗೆ ಯಮನ ನಾಶವಾದ ಮೇಲೆ ಪಡುವಣದಲ್ಲಿ ಉದಯಿಸುವಾಗ ಯಮನಿಲ್ಲವೆಂದೂ ಆಗಬೇಕಾದೀತು, ಇದುಮೊದಲಾದ ಅನಂತದೋಷಗಳಿವೆ. ॥ ೬ ॥

ಹೀ--ವಸು ಮೊದಲಾದವರಿಗೆ ಮೂಡಣ ಮೊದಲಾದ ದೇಶಗಳ ನಿಯಮವಿದೆ ಎಂಬಲ್ಲಿ ಪ್ರಮಾಣವಿಲ್ಲವೆಂದು ಹಿಂದೆ ಹೇಳಿರುವರು. ಈಗ ಪ್ರಮಾಣವಿರೋಧವೂ ಇದೆ ಎನ್ನುತ್ತಾರೆ—

**ಭಾ. ॥ (೧) ವಸ್ವಾದೀನಾಂ ತು ಸರ್ವೇಷಾಂ ಸರ್ವದಿಕ್ಷು ಪುರಾಣ್ಯಪಿ । ಸಂತ್ಯೇವಮಪಿ ಧೀವೃತ್ತ್ಯೈ ಪ್ರತ್ಯೇಕಂ ದಿಕ್ಷು ಕಥ್ಯತೇ ॥ ಇತಿ ಚ ॥ ಐಂದ್ರ್ಯಾ ಉದ್ವಾಸೇ ರುದ್ರಾಣಾಮೇವೋದಯಾಭಾವ ಇತಿ ಚ ದೋಷಃ । ಅತೋ ಯತ್ಕಿಂಚಿದೇತತ್ ॥ (೨) ಉದೇತಿ ಪೂರ್ವತಃ ಸೂರ್ಯೋ ನಿಮ್ಲೋಚತಿ ಚ ಪಶ್ಚಿಮೇ । ಏವಂ ನಿಯಮ ಉದ್ದಿಷ್ಟೋ ಬ್ರಹ್ಮಣಾ ವಿಷ್ಣುಚೋದನಾತ್ ॥ (೩) ದ್ವಿಗುಣಂ ದ್ವಿಗುಣಂ ಕಾಲಮುದಿತ್ವಾ ದಕ್ಷಿಣಾದಿಷು । ಮಧ್ಯೇ ವ್ಯವಸ್ಥಿತಿಃ ಪಶ್ಚಾದ್ಬ್ರಹ್ಮಾಣಂ ಯಾಚಿತಾ ಪುರಾ ॥ ಹಿರಣ್ಯಕೇನ ಸೂರ್ಯಸ್ಯ ಹಿರಣ್ಯಾಕ್ಷೇಣ ವೈ ಪುನಃ । ತದಾಸುರಾಣಾಂ ದೇವತ್ವಂ ಬ್ರಹ್ಮಾ ತತ್ರ ದದೌ ತಯೋಃ ॥ (೪) ತಚ್ಛ್ರುತ್ವೇಂದ್ರಾದಿಭಿಃ ಪ್ರೋಕ್ತಃ ಕಥಂ ಪ್ರಾದಾ ವರಾವಿಮೌ । ದೇವತಾ ಹಿ ವಿನಶ್ಯೇಯುರೇವಂ ದತ್ತೇ ವರೇ ತ್ವಯಾ ॥ (೫) ಇತ್ಯುಕ್ತೋ ದೈವತೈಃ ಪ್ರಾಹ ಬ್ರಹ್ಮಾ ಲೋಕಪಿತಾಮಹಃ । ನ ಮಯಾ ಸ ವರೋ ದತ್ತೋ ದೈತೇಯಾನಾಂ ಸುರಾಃ ಕ್ವಚಿತ್ । ಯೇನ ಯುಷ್ಮದ್ವಿನಾಶಃ ಸ್ಯಾತ್ತತೋ ವ್ಯೇ(ವ್ಯೈ)ತು ಚ ವೋ ಭಯಂ ॥ ೭ ॥**

ಅ ॥ (೧) ವಸು ಮೊದಲಾದವರಿಗೆಲ್ಲರಿಗೂ ಎಲ್ಲಾ ದಿಕ್ಕುಗಳಲ್ಲಿಯೂ ಬೇರೆಬೇರೆ ಪಟ್ಟಣಗಳಿವೆ. ಆದರೂ ಧ್ಯಾನಮಾಡುವುದಕ್ಕಾಗಿ ಒಬ್ಬೊಬ್ಬರಿಗೆ ಒಂದೊಂದು ದಿಕ್ಕಿನಲ್ಲಿ ಒಂದೊಂದು ಪಟ್ಟಣವು ಹೇಳಲ್ಪಡುತ್ತದೆ. ಇಂದ್ರನ ಪಟ್ಟಣವಾದ ಅಮರಾವತಿಗೆ ನಾಶ ಬಂದರೆ ರುದ್ರರೇ ಇಲ್ಲವೆಂದಾಗಬೇಕಾಗುವುದು. ಎಂಬೀ ದೋಷವಿದೆ (ಅಂದರೆ—ಇಂದ್ರನ ಪಟ್ಟಣವು ನಾಶವಾದ ಮೇಲೆ ರುದ್ರಾದಿಗಳು ಇರುತ್ತಾರೆಂಬಲ್ಲಿ ಪ್ರಮಾಣವಿದ್ದರೆ ವಸ್ವಾದಿಗಳಿಗೆ ದೇಶನಿಯಮ ಹೇಳಿದ್ದು ಕೂಡುತ್ತಿತ್ತು. ರುದ್ರಾದಿಗಳು ಇಂದ್ರನ ಪರಿವಾರರಾಗಿರುವುದರಿಂದ ಇಂದ್ರನಿಗೆ ನಾಶವಾದ ಮೇಲೆ ರುದ್ರಾದಿಗಳು ಸರ್ವಥಾ ಇರಲಾರರು. ಆದುಕಾರಣ

ಅದ್ವೈತಿಗಳು ಹೇಳಿದ ದೇಶನಿಯಮವು ಸರ್ವಥಾ ಯುಕ್ತವಲ್ಲ.) ಹೀಗೆ ಅದ್ವೈತಿಗಳು ಹೇಳುವ ವಿಷಯ ದಲ್ಲಿ ಯಾವುದೊಂದು ಪ್ರಮಾಣವೂ ಇಲ್ಲದಿರುವುದರಿಂದಲೂ ಪ್ರಮಾಣಗಳಿಂದ ವಿರೋಧವಿದ್ದುದರಿಂದಲೂ ವಸ್ವಾದಿಗಳಿಗೆ ನಿಶ್ಚಿತ ದೇಶಗಳನ್ನು ಕಲ್ಪಿಸಿದ್ದು ಸರ್ವಥಾ ಯುಕ್ತವಲ್ಲ (೨) (ಮತ್ತು ಕಾಲಾಂತರದಲ್ಲಿ ತೆಂಕಣಾದಿಗಳಲ್ಲಿ ಉದಯಿಸುವುದೆನ್ನುವುದು ಅಸುರರ ಮತವೆಂದೂ ಪ್ರತಿನಿತ್ಯವೂ ಮೇರುಪರ್ವತಕ್ಕೆ ಪ್ರದಕ್ಷಿಣೆ ಬರುವಾಗ ತೆಂಕಣಾದಿಗಳಲ್ಲಿ ಉದಯಿಸಿದಂತೆ ತೋರುವುದೆನ್ನುವುದು ದೇವರಹಸ್ಯವೆಂದೂ ಹೇಳಿದುದರಿಂದ ಅದ್ವೈತಿಗಳ ಅರ್ಥವು ಸರಿಯಲ್ಲ. ನಾವು ಹೇಳಿದ ಅರ್ಥವೇ ಯುಕ್ತವೆನ್ನುತ್ತಾರೆ -) ಸೂರ್ಯನು ಮೂಡಣದಲ್ಲಿ ಉದಯಿಸಬೇಕು. ಪಡುವಣದಲ್ಲಿ ಅಸ್ತಮಾನ ಹೊಂದಬೇಕು ಹೀಗೆ ಚತುರ್ಮುಖನು ಶ್ರೀಹರಿಯ ಆಜ್ಞಾನುಸಾರವಾಗಿ (ಸೂರ್ಯನಿಗೆ) ನಿಯಮಿಸಿರುತ್ತಾನೆ (೩) ಪರಂತು ಹಿರಣ್ಯಕಶಿಪು ಹಿರಣ್ಯಾಕ್ಷರೆಂಬ ದೈತ್ಯರು (1) ಮೊದಲು ಮೊದಲಿಗಿಂತ ಇಮ್ಮಡಿಯಾದ ಉತ್ತರೋತ್ತರ ಕಾಲದಲ್ಲಿ ತೆಂಕಣಾದಿಗಳಲ್ಲಿ ಸೂರ್ಯನು ಉದಯಿಸಿ ಅಲ್ಲಿ ಮೂಡಣಕ್ಕಿಂತ ಇಮ್ಮಡಿ ಕಾಲದಲ್ಲಿ ಹೀಗೆಯೇ ಉತ್ತರೋತ್ತರ ದಿಕ್ಕುಗಳಲ್ಲಿ ಇಮ್ಮಡಿ ಇಮ್ಮಡಿ ಕಾಲಗಳಲ್ಲಿ ಇರಬೇಕೆಂದೂ (2) ಆ ಕಾಲದಲ್ಲಿ ಅಸುರರಿಗೆ ದೇವತ್ವವು ಬರಬೇಕೆಂದೂ ಹೀಗೆ ಎರಡು ವರಗಳನ್ನು ಬ್ರಹ್ಮನ ಹತ್ತಿರ ಪೂರ್ವದಲ್ಲಿ ಬೇಡಿದ್ದರು ಆಗ ಬ್ರಹ್ಮನು ಆ ಹಿರಣ್ಯಕಶಿಪು ಹಿರಣ್ಯಾಕ್ಷರಿಗೆ ಆ ಎರಡು ವರಗಳನ್ನು ಕೊಟ್ಟನು. (೪) ಅದನ್ನು ಕೇಳಿ, ಎಲೋ ಪ್ರಭುವೇ ಈ ಎರಡು ವರಗಳನ್ನು (ಅಸುರರಿಗೆ) ಹೇಗೆ ಕೊಟ್ಟಿರುವಿ, ಈ ವರ ಕೊಟ್ಟರೆ ದೇವತೆಗಳು ನಾಶಹೊಂದಿಯಾರು. ಎಂದು ಇಂದ್ರ ಮೊದಲಾದ ದೇವತೆಗಳು ಕೇಳಿದಾಗ ಜಗದುದ್ಧಾರಕನಾದ ಬ್ರಹ್ಮನು ಎಲೋ ದೇವತೆಗಳಿರಾ ದೈತ್ಯರಿಗೆ ಅಂತಹ ವರವನ್ನು ಎಂದಿಗೂ ನಾನು ಕೊಡಲಿಲ್ಲ, ಅದು ಕಾರಣ ನಿಮಗೆ ನಾಶವು ಬರಲಾರದು. ಭಯವನ್ನು ಬಿಟ್ಟುಬಿಡಿರಿ ಎಂದನು. ॥ ೪ ॥

ಪೀ — ಬ್ರಹ್ಮನೇ ಅಂತಹ ವರವನ್ನು ನೀನು ಕೊಡದಿದ್ದರೆ **ದಕ್ಷಿಣಾದ್ಯುದಯೋ ಭವಿಷ್ಯತಿ** ಎಂದು ನಿನ್ನ ಮಾತು ಸುಳ್ಳಾಗಬೇಕಾಗುವುದು ಎಂದರೆ—

**ಭಾ. ॥ (೧) ದಕ್ಷಿಣಾದ್ಯುದಯೋ ಯಸ್ತು ಸ ಹಿ ದೈನಂದಿನೋ ಮಯಾ । ಅಭಿಪ್ರೇತೋ ನೈವ ಚಾಯಂ ಕಾಲಾಂತರಗತಃ ಕ್ವಚಿತ್ ॥ (೨) ಅರ್ಧನಾಡ್ಯುತ್ತರಾ ನಾಡೀಃ ಸಕಾಷ್ಠಾ ನಿತ್ಯಶೋ ರವಿಃ । ಪಂಚಾದಶೋತ್ತರಾಂ ಗಚ್ಛೇತ್ಪೂರ್ವರಾತ್ರೇ ತು ದಕ್ಷಿಣಾತ್॥ (೩) ತದರ್ಧಂ ಪಶ್ಚಿಮಾತ್ಪೂರ್ವಂ ತದರ್ಧಂ ಚೋತ್ತರಾದಪಿ । ದಕ್ಷಿಣಾಂ ಚ ತದರ್ಧಂ ಸ ಊರ್ಧ್ವಾದರ್ವಾಕ್ಚ ಗಚ್ಛತಿ । ದಕ್ಷಿಣಾದ್ಯುದಯಸ್ತ್ವೇಷ ನ ತು ಕಾಲಾಂತರೇ ಕ್ವಚಿತ್॥ (೪) ಯದೋತ್ತರಸ್ಮಾದ್ದ್ವಿಗುಣಃ ಪೂರ್ವೋ ಭವತಿ ವೈ ಸುರಾಃ । ತದಾಽಪಿ ದ್ವಿಗುಣತ್ವಂ ಸ್ಯಾತ್ತನ್ಮಯಾತ್ರ ವಿವಕ್ಷಿತಂ ॥ (೫) ಅಹಸ್ಸಾಮ್ಯೇಽಪಿ ಕ್ರಮಶ ಆತಪಸ್ಯಾಲ್ಪಕಾಲತಃ । ಗಿರ್ಯಾವೃತ್ತೇಃ(ತೇ) ಕ್ಷಿಪ್ರಮನ್ಯೇಷೂದಯಾಸ್ತಮಯಾವಿವ ॥ ೮ ॥**

ಅ ॥ (೧)ಎಲೋ ದೇವತೆಗಳಿರಾ ತೆಂಕಣಾದಿಗಳಲ್ಲಿ ಉದಯವೆಂದು ಹೇಳಿದ್ದು (ಮೇರುಪರ್ವತಕ್ಕೆ ಪ್ರದಕ್ಷಿಣೆ ಬರುವಾಗ) ಪ್ರತಿದಿನದಲ್ಲಿಯೂ ಆಗತಕ್ಕ ಸೂರ್ಯೋದಯವನ್ನು ನೋಡಿ ನಾನು ಹೇಳಿದುದು ಅಲ್ಲದೆ ಕಾಲಾಂತರದಲ್ಲಿ ಆಗತಕ್ಕುದನ್ನು ನೋಡಿಕೊಂಡಲ್ಲ. (೨) (ನಿನಗೆ ಅಭಿಪ್ರೇತವಾದ ಉದಯವು ಎಂತಹದೆಂದರೆ—) ಸೂರ್ಯನು ನಿತ್ಯದಲ್ಲಿ ಪೂರ್ವರಾತ್ರಿಯಲ್ಲಿಯೇ ಘಳಿಗೆ 15—3½ ವಿಘಳಿಗೆ ಕಾಲದಲ್ಲಿ ದಕ್ಷಿಣ ದಿಕ್ಕಿನಿಂದ ಉತ್ತರದಿಕ್ಕಿಗೆ ಹೋಗುತ್ತಾನೆ. (೩) ಅದರ ಮೇಲೆ 15 ಘಳಿಗೆಯ ಅರ್ಧ 7 ಘಳಿಗೆ 30 ವಿಘಳಿಗೆ ರಾತ್ರಿಯಲ್ಲಿ ಪಶ್ಚಿಮದಿಂದ ಪೂರ್ವಕ್ಕೂ, ಆ ಮೇಲೆ ಅದರ ಅರ್ಧ, 3— 45 ರಾತ್ರಿಯಲ್ಲಿ

ಉತ್ತರದಿಂದ ದಕ್ಷಿಣಕ್ಕೂ, ಆ ಮೇಲೆ ಅದರ ಅರ್ಧ, 1—52½ ರಾತ್ರಿಯಲ್ಲಿ ಮೇಲೆ ಉದಯಿಸಿ ಕೆಳಗೆ ಅಸ್ತಮಾನ ಹೊಂದುತ್ತಾನೆ. ಹೀಗೆ ನಿತ್ಯದಲ್ಲಿಯೂ ಸೂರ್ಯನು ಸಂಚರಿಸುತ್ತಿರುತ್ತಾನೆಂದು ನನ್ನ ಅಭಿಪ್ರಾಯವು ದಕ್ಷಿಣಾದಿಗಳಲ್ಲಿ ಉದಯವೆಂದರೆ ಇಂತಹುದೇ ಇಷ್ಟವು. ಕಾಲಾಂತರದಲ್ಲಿ ಉದಯವೆಂಬುದು ಸರ್ವಥಾ ನನಗೆ ಇಷ್ಟವಲ್ಲ. (೮) (ದಕ್ಷಿಣಾದ್ಯುದಯವೆಂದು ಹೇಳಿದ ಸ್ಥಳದಲ್ಲಿ ಹೀಗೆ ಅರ್ಥವನ್ನು ಮಾಡುವುದಾದರೂ **ದ್ವಿಗುಣಂ ಕಾಲಮುದಿತ್ವಾ** ಎಂದು ಪ್ರಾರ್ಥಿಸಿದುದರಿಂದ ದಕ್ಷಿಣಾದಿಗಳಲ್ಲಿ ಉದಯವೆಂಬ ಪೂರ್ವೋದಯವು ಪೂರ್ವೋದಯದಿಂದ ಇಮ್ಮಡಿಯಾಗುವುದು ಹೇಗೆ? ಎಂದರೆ—) ಪೂರ್ವದಲ್ಲಿ ಉದಯ, ದಕ್ಷಿಣದಲ್ಲಿ ಉದಯ, ಪಶ್ಚಿಮದಲ್ಲಿ ಉದಯ, ಉತ್ತರದಲ್ಲಿ ಉದಯವೆಂತ ಹೇಳಿದ ಉದಯಗಳಲ್ಲಿ ಮೊದಲು ಮೊದಲು ಹೇಳಿದ ಉದಯವು ಮೇಲೆ ಮೇಲೆ ಹೇಳಿದ ಉದಯಕ್ಕಿಂತ ಇಮ್ಮಡಿಯಾದುದು. ಅಂದರೆ 1—52½ ವಿಘಳಿಗೆಗಿಂತ 3—45 ಇಮ್ಮಡಿಯಾದುದು. ಅದಕ್ಕಿಂತ 7 30 ಇಮ್ಮಡಿಯಾದುದು ಅದಕ್ಕಿಂತ 15—37½ ಇಮ್ಮಡಿಯಾದುದು. ಅದಕ್ಕಿಂತ 31—15 ಇಮ್ಮಡಿಯಾದುದು. ಹೀಗೆ ಇಮ್ಮಡಿ ಇಮ್ಮಡಿಯಾಗಿವೆ, ಎಂದು ನನ್ನ ಅಭಿಪ್ರಾಯವು. ಅಂದರೆ ಒಂದು ದಿವಸದ ಸೂರ್ಯಾಸ್ತಮಾನಗಳ 60 ಗಳಿಗೆಯ ಅಂಶಗಳಿಂದಲೇ ಮೇರುವಿನ ಸುತ್ತಮುತ್ತಲಿನ ಪ್ರದೇಶಗಳ ಉದಯಾಸ್ತಮಾನಗಳ ಸಮಯಗಳನ್ನು ನಾನು ಹೇಳಿರುವುದಲ್ಲದೆ ಕಾಲಾಂತರಗಳ ಉದಯಾದಿಗಳನ್ನು ಹೇಳಿದುದು ಅಲ್ಲ) (೫) (ಉದಯಾಸ್ತಮಾನಗಳನ್ನು ಅನೇಕ ರೀತಿಯಿಂದ ಗಳಿಗೆ ವ್ಯತ್ಯಾಸವಾಗಿ ಹೇಳಿದರೆ ಮೇರುವಿನ ಉತ್ತರದಿಕ್ಕಿನಲ್ಲಿದ್ದವರಿಗೆ ದಕ್ಷಿಣದಲ್ಲಿ ಇದ್ದವರಿಗಿಂತ ಹಗಲು ರಾತ್ರಿಕಾಲವು ವ್ಯತ್ಯಸ್ತವಾಗಬೇಕಾದೀತು, ಎಂದರೆ ಉತ್ತರವು—) ಹಗಲು ರಾತ್ರಿಗಳ ಸಮಯವು ದಕ್ಷಿಣದಲ್ಲಿದ್ದವರಿಗೆ ಇದ್ದಂತೆಯೇ ಉತ್ತರದಲ್ಲಿರುವವರಿಗೂ ಸಮವೇ ಆಗಿದ್ದರೂ ಸೂರ್ಯನ ಬಿಸಿಲು ಉತ್ತರದಲ್ಲಿದ್ದವರಿಗೆ ಕಡಿಮೆ ಕಡಿಮೆ ಇರುವದರಿಂದ ಅಮುಖ್ಯವಾಗಿ ಅವರ ಉದಯಕಾಲಗಳನ್ನು ಕಡಿಮೆ ಕಡಿಮೆ ಹೇಳಿರುವುದರಿಂದ ಯಾವ ವಿರೋಧವೂ ಇಲ್ಲ. ‖ ೮ ‖

**ಹೀ** ದಕ್ಷಿಣಾದ್ಯುದಯವೆಂಬುದು ಪ್ರತಿನಿತ್ಯದಲ್ಲಿ ಆಗತಕ್ಕದ್ದೆಂದು ಇಟ್ಟುಕೊಂಡರೂ ಅನಿಷ್ಟವು ತಪ್ಪಿದ್ದಲ್ಲ. ಹೇಗೆಂದರೆ— ಹಿರಣ್ಯಾಕ್ಷ ಹಿರಣ್ಯಕಶಿಪುಗಳು ದಕ್ಷಿಣಾದಿಗಳಲ್ಲಿ ಸೂರ್ಯೋದಯವಾದರೆ ಅಸುರರಿಗೆ ದೇವತ್ವವನ್ನು ಪ್ರಾರ್ಥಿಸಿದಂತೆ ಬ್ರಹ್ಮನು ವರವನ್ನು ಕೊಟ್ಟಿರುವುದರಿಂದ ನಿತ್ಯವೂ ಆಗತಕ್ಕ ದಕ್ಷಿಣಾದ್ಯುದಯದಲ್ಲಿಯೂ ಅಸುರರಿಗೆ ದೇವತ್ವವು ಪ್ರತಿದಿನವೂ ಬರಬೇಕಾಗುವುದೆಂದರೆ—

**ಭಾ. ‖ (೧) ಕಾಲಾಂತರೇ ಭಾವಿನಂ ತು ದಕ್ಷಿಣಾದ್ಯುದಯಂ ಪುನಃ । ಅಪೇಕ್ಷ್ಯೈವ ವರೋ ದತ್ತೋ ದ್ವಿತೀಯೋ ದೇವತಾ ಮಯಾ ‖ (೨) ಸಮಯಶ್ಚ ಕೃತೋ ನಿತ್ಯೋ ಮಯಾ ಸೂರ್ಯಸ್ಯ ಚಾನಘಾಃ । ಪೂರ್ವಸ್ಮಾದುದಯೋ ನಿತ್ಯಃ(ತ್ಯಂ) ಪಶ್ಚಿಮೇಽಸ್ತಮಯಸ್ತಥಾ । ನಿಯಮೋ ನಾನ್ಯಥಾಽಯಂ ಸ್ಯಾತ್ಕದಾಚಿತ್ ಕೇನಚಿತ್ ಕ್ವಚಿತ್ ‖ (೩) ತಸ್ಮಾನ್ನ ವೋ ಭಯಂ ಕ್ವಾಪಿ ಪ್ರೋಕ್ತಾ ಇತ್ಥಂ ಸುರಾಸ್ತದಾ । ವಿಶೋಕಾ ಅಭವನ್ ಸರ್ವೇ ಯಯುಃ ಸ್ವಂ ಸ್ವಂ ನಿವೇಶನಂ ‖ ಇತಿ ಚ ‖ (೪) ಏತದೇವ ಮೋಕ್ಷಧರ್ಮೇಷು ಬಲಿವಾಸವಸಂವಾದ ಉಕ್ತಂ । ದೇವಾನ್ಪ್ರತಿ ಬ್ರಹ್ಮಣೋ ವಚನಂ ರಹಸ್ಯತ್ವಾದವಿಜ್ಞಾಯ ಬಲಿನಾ ದಕ್ಷಿಣಾದ್ಯುದಯ ಉಕ್ತಃ । ಇಂದ್ರೇಣ ತು ಬ್ರಹ್ಮವಚನಂ ಜಾನತಾ ದಕ್ಷಿಣಾದ್ಯುದಯೋ ನಾಸ್ತೀತ್ಯುಕ್ತಂ ‖ (೫) ದೈತೇಯಯೋರ್ವರಂ ಜ್ಞಾತ್ವಾ ತ್ವವಿಜ್ಞಾಯ ಸುರಾನ್ಪ್ರತಿ । ಬ್ರಹ್ಮಣೋಕ್ತಂ ಹಿ ಬಲಿನಾ ವಾಸವಂ ಪ್ರತ್ಯುದೀರಿತಂ । ದಕ್ಷಿಣಾದ್ಯುದಯಾಂತೇ ತು ತ್ವಾಂ ಜೇಷ್ಯಾಮಿ ಪುರಂದರ ‖ (೬) ಇತ್ಯುಕ್ತಸ್ತಮುವಾಚೇಂದ್ರೋ ನ ಕದಾಚನ**

**ತದ್ಭವೇತ್ । ಬ್ರಹ್ಮಣಾ ನಿಯಮೋ ಯಸ್ಮಾತ್ಕೃತಃ ಪ್ರಾಗುದಯೋ ರವೇಃ ॥ ಇತ್ಯುಕ್ತ್ವಾ ತು ಜಗಾಮೇಂದ್ರೋ ದಿವಮೈರಾವತಸ್ಥಿತಃ । ಇತಿ ಚ ॥ ೧, ೨, ೩, ೪ ॥ ಇತಿ ದಶಮಃ ಖಂಡಃ ॥ ೫–೧೦ ॥ ॥ ೬ ॥**

ಅ ॥ (೧) ಎಲೋ ದೇವತೆಗಳೇ ಕಾಲಾಂತರದಲ್ಲಿ ಆಗತಕ್ಕ ತೆಂಕಣಾದಿಗಳಲ್ಲಿ ಉದಯವನ್ನು ಇಟ್ಟು ಕೊಂಡೇ ನಾನೇ ಎರಡನೇದ್ದಾದ ಅಸುರರಿಗೆ ದೇವತ್ವಪ್ರಾಪ್ತಿಯೆಂಬ ವರವನ್ನು ಕೊಟ್ಟದ್ದು. (೨) (ಆದರೂ ಅನಿಷ್ಟವು ತಪ್ಪಿದ್ದಲ್ಲ, ಚತುರ್ಮುಖನ ಇಚ್ಛೆಯಿಂದ ಸೂರ್ಯನಿಗೆ ಕಾಲಾಂತರದಲ್ಲಿ ತೆಂಕಣಾದಿಗಳಲ್ಲಿ ಉದಯವಾದರೆ ಅಸುರರಿಗೆ ದೇವತ್ವವು ಬರಬೇಕಾಗುವುದು ಎಂದರೆ—) ಎಲೋ ನಿರ್ದೋಷಿಗಳಾದ ದೇವತೆಗಳಿರಾ ನಾನು ಮೂಡಣದಲ್ಲಿ ಸೂರ್ಯೋದಯವು ನಿಶ್ಚಿತವೆಂದೂ, ಪಡುವಣದಲ್ಲಿ ಅಸ್ತಮಾನವು ನಿಶ್ಚಿತವೆಂದೂ, ಹೀಗೆ ಸೂರ್ಯನಿಗೆ ನಿಶ್ಚಿತವಾದ ಸಮಯವನ್ನು ನಿಯಮಿಸಿರುತ್ತೇನೆ. ಇದನ್ನು ಯಾರೂ ಯಾವಾಗಲೂ ಎಲ್ಲಿಯೂ ವ್ಯತ್ಯಾಸಪಡಿಸಲಾರರು. * (೩) ಅದುಕಾರಣ ದೇವತೆಗಳಿರಾ ಎಲ್ಲಿಯೂ ನಿಮಗೆ ಭಯವು ಇಲ್ಲ ಹೀಗೆ ಹೇಳಿಸಿಕೊಂಡ ದೇವತೆಗಳು ದುಃಖರಹಿತರಾಗಿ ತಮ್ಮತಮ್ಮ ವಾಸಸ್ಥಳಕ್ಕೆ ಹೊರಟು ಹೋದರು. (೪) ಕಾಲಾಂತರಗಳಲ್ಲಿ ತೆಂಕಣಾದಿಗಳಲ್ಲಿ ಉದಯಿಸುವುದಿಲ್ಲವೆಂಬ ಪ್ರಮೇಯವನ್ನೇ ಮೋಕ್ಷಧರ್ಮಗಳಲ್ಲಿ ಬಲಿಚಕ್ರವರ್ತಿ ದೇವೇಂದ್ರರ ಸಂವಾದದಲ್ಲಿ ಹೇಳಿರುವರು. ದೇವತೆಗಳಿಗೆ ಚತುರ್ಮುಖನು ಹೇಳಿದ ಮಾತು ಗೋಪ್ಯವಾಗಿರುವುದರಿಂದ ಅದರ ತತ್ತ್ವವನ್ನು ತಿಳಿಯದೆ ಬಲಿಚಕ್ರವರ್ತಿಯು ದಕ್ಷಿಣಾದಿಗಳಲ್ಲಿ ಉದಯವೆಂದು ಹೇಳಿರುವನು. ಚತುರ್ಮುಖನ ಮಾತಿನ ಗೋಪ್ಯಾಭಿಪ್ರಾಯವನ್ನು ತಿಳಿದ ದೇವೇಂದ್ರನು ತೆಂಕಣಾದಿಗಳಲ್ಲಿ ಉದಯವಿಲ್ಲವೆಂದು ಹೇಳಿರುವನು. (೫) ದೈತ್ಯರಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳಿಗೆ ಕೊಟ್ಟ ವರವನ್ನು ಮಾತ್ರ ತಿಳಿದು ಬ್ರಹ್ಮನು ದೇವತೆಗಳಿಗೆ ಹೇಳಿದ ಗೋಪ್ಯವಾದ ಅಭಿಪ್ರಾಯವನ್ನು ತಿಳಿಯದೆ ಬಲಿಚಕ್ರವರ್ತಿಯು ದೇವೇಂದ್ರನೇ ತೆಂಕಣಾದಿಗಳಲ್ಲಿ ಉದಯಿಸಿದ ಮೇಲೆ ನಾನು ನಿನ್ನನ್ನು ಗೆಲ್ಲುವೆನೆಂದು ದೇವೇಂದ್ರನಿಗೆ ಹೇಳಿದನು. (೬) ಹೀಗೆ ಹೇಳಿಸಿಕೊಂಡ ದೇವೇಂದ್ರನು ಮೂಡುದಿಕ್ಕಿನಲ್ಲಿಯೇ ಉದಯಿಸಬೇಕೆಂದು ಸೂರ್ಯನಿಗೆ ಬ್ರಹ್ಮನು ನಿಯಮಿಸಿರುವುದರಿಂದ ಇದು ಯಾವಾಗಲೂ ಸರ್ವಥಾ ವ್ಯತ್ಯಾಸವಾಗಲಾರದು. ಹೀಗೆ ಹೇಳಿ ದೇವೇಂದ್ರನು ಐರಾವತದಲ್ಲಿ ಕುಳಿತುಕೊಂಡು ಸ್ವರ್ಗಕ್ಕೆ ಹೋದನು. ॥ ೫ – ೧೦ ॥ ॥ ೬ ॥

**ಹತ್ತನೇ ಖಂಡವು ಮುಗಿಯಿತು.**

---

## ೧೧ನೇ ಖಂಡವು

ಪೀ—ಪ್ರಲಯಕಾಲದಲ್ಲಿ ಶ್ರೀಹರಿಯು ಹೇಗೆ ಇರುತ್ತಾನೆಂದರೆ—

**ಉ. ॥ ಅಥ ತತ ಊರ್ಧ್ವ ಉದೇತ್ಯ ನೈವೋದೇತಾ ನಾಸ್ತಮೇತೈಕಲ ಏವ ಮಧ್ಯೇ ಸ್ಥಾತಾ ತದೇಷ ಶ್ಲೋಕಃ ॥ ೧ ॥**

ಅ ॥ ಉದಯಾಸ್ತಮಾನಗಳನ್ನು ಪ್ರಚಾರ ಮಾಡಿದ ಮೇಲೆ ಪ್ರಲಯಕಾಲದಲ್ಲಿ ಆದಿತ್ಯನೆನಿಸಿದ ಶ್ರೀಹರಿಯು ಸೂರ್ಯಮಂಡಲಕ್ಕಿಂತ ಮೇಲಕ್ಕಿರುವ ವೈಕುಂಠಲೋಕಕ್ಕೆ ಹೋಗಿ ಹಿಂದೆ ಹೇಳಿದಂತಹ

* ದಕ್ಷಿಣಾದಿಗಳಲ್ಲಿ ಉದಯವಾಗುವಂತೆಯೂ ಇಲ್ಲ ಅಸುರರಿಗೆ ದೇವತ್ವಪ್ರಾಪ್ತಿಯಾಗುವಂತೆಯೂ ಇಲ್ಲ

ಸೂರ್ಯನ ಉದಯಾಸ್ತಮಾನಗಳನ್ನು ಮಾಡುವುದಿಲ್ಲ. ಒಂದೇ ರೀತಿಯಾಗಿಯೇ ಪ್ರಲಯಕಾಲದಲ್ಲಿರುತ್ತಾನೆ. ಆ ಅರ್ಥದಲ್ಲಿ ಮುಂದೆ ಹೇಳುವ ಶ್ಲೋಕವು ಪ್ರಮಾಣವಾಗುವುದು. ॥ ೧ ॥

**ಉ. ॥ ನ ವೈ ತತ್ರ ನ ನಿಮ್ಲೋಚೋ ನೋದಿಯಾಯ ಕದಾಚನ । ದೇವಾಸ್ತೇನಾಹಂ ಸತ್ಯೇನ ಮಾ ವಿರಾಧಿಷಿ ಬ್ರಹ್ಮಣಾ ॥ ಇತಿ ॥ ೨ ॥**

ಅ ॥ ಆ ವೈಕುಂಠ ಲೋಕದಲ್ಲಿಯೂ ವೈಕುಂಠ ಲೋಕದಲ್ಲಿದ್ದ ಆದಿತ್ಯನೆನಿಸಿದ ಶ್ರೀಹರಿಯಲ್ಲಿಯೂ ಉದಯಾಸ್ತಮಯ ಮೊದಲಾದ ಯಾವ ದೋಷಗಳೂ ಇಲ್ಲವೇ ಇಲ್ಲ. ಎಲೋ ದೇವತೆಗಳಿರಾ! ಭಗವಂತನು ನಿರ್ದೋಷನು, ಇದುಮೊದಲಾದ ಶಪಥರೂಪವಾದ ಸತ್ಯನುಡಿಯಿಂದ ಶ್ರೀಪರಬ್ರಹ್ಮನ ಪ್ರಸಾದದಿಂದ ನಾನು ದೇವತ್ವವಿಲ್ಲದವನಾಗಲಾರೆನು. (ಪರಂತು ದೇವತೆಯೇ ಆಗಿರುತ್ತೇನೆ.) (ಎಂದು ದೇವತೆಗಳಿಗೆ ಬ್ರಹ್ಮನು ಹೇಳಿರುತ್ತಾನೆ.) ॥ ೨ ॥

ಹೀ—ಈ ವಿದ್ಯೆಯನ್ನು ತಿಳಿದವನಿಗೆ ಮೋಕ್ಷವಾಗುತ್ತದೆನ್ನುತ್ತಾರೆ

**ಉ. ॥ ನ ಹ ವಾ ಅಸ್ಮಾ ಉದೇತಿ ನ ನಿಮ್ಲೋಚತಿ ಸಕೃದ್ದಿವಾ ಹೈವಾಸ್ಮೈ ಭವತಿ ಯ ಏತಾಮೇವಂ ಬ್ರಹ್ಮೋಪನಿಷದಂ ವೇದ ॥ ೩ ॥**

ಅ ॥ ಹೀಗೆ ಪರಬ್ರಹ್ಮನನ್ನು ಹೇಳುವ ಮಧುವಿದ್ಯೆಯನ್ನು ತಿಳಿದ ಜ್ಞಾನಿಗೆ ಆದಿತ್ಯನೆನಿಸಿದ ಶ್ರೀಹರಿಯು ಉದಯಾಸ್ತಮಾನಗಳನ್ನು ಮಾಡುವುದಿಲ್ಲ. (ಅಂದರೆ ಮುಕ್ತನನ್ನಾಗಿ ಮಾಡುತ್ತಾನೆ) ವೈಕುಂಠಕ್ಕೆ ಹೋದವನಿಗೆ ಯಾವಾಗಲೂ ಹಗಲೇ ಆಗುತ್ತದೆ. (ಆತನು ಒಂದೇ ರೀತಿಯಾಗಿಯೇ ಇರುತ್ತಾನೆ.) ॥ ೩ ॥

ಹೀ - ಈ ವಿದ್ಯೆಯು ಜ್ಞಾನಿಗಳ ಉಪದೇಶ ಪರಂಪರೆಯಿಂದ ಬಂದಿರುವ ಪ್ರಯುಕ್ತ ಶ್ರೇಷ್ಠವಾಗಿದೆ ಎನ್ನುತ್ತಾರೆ—

**ಉ. ॥ ತದ್ಧೈತದ್ಬ್ರಹ್ಮಾ ಪ್ರಜಾಪತಯ ಉವಾಚ ಪ್ರಜಾಪತಿರ್ಮನವೇ ಮನುಃ ಪ್ರಜಾಭ್ಯಸ್ತದ್ಧೈತದುದ್ದಾಲಕಾಯಾ(ಕ ಆ)ರುಣಯೇ ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಪ್ರೋವಾಚ ॥ ೪ ॥**

ಅ ॥ ಈ ಆದಿತ್ಯನೆನಿಸಿದ, ಐದು ವಿಧ ದೇವಮಧು ಎನಿಸಿದ ಬ್ರಹ್ಮರೂಪವನ್ನು ಶ್ರೀವಿಷ್ಣುವು ಚತುರ್ಮುಖನಿಗೂ, ಚತುರ್ಮುಖನು ಸ್ವಾಯಂಭುವಮನುವಿಗೂ, ಆತನು ಇಕ್ಷ್ವಾಕು ಮೊದಲಾದ ಪ್ರಜೆಗಳಿಗೂ, ಹೇಳಿರುವನು (ಈ ವಿದ್ಯೆಯು ಅತೀ ಗೋಪ್ಯವಾಗಿರುವುದರಿಂದ ಅಯೋಗ್ಯರಿಗೆ ಹೇಳಬಾರದೆನ್ನುತ್ತಾರೆ—) ಈ ಪರಬ್ರಹ್ಮನನ್ನು ತಂದೆಯಾದ ಉದ್ದಾಲಕರು ಜ್ಯೇಷ್ಠ ಪುತ್ರನಾದ ಆರುಣಿಗೆ ಹೇಳಿರುವರು. ॥ ೪ ॥

**ಉ. ॥ ಇದಂ ವಾವ ತಜ್ಜ್ಯೇಷ್ಠಾಯ ಪುತ್ರಾಯ ಪಿತಾ ಬ್ರಹ್ಮ ಬ್ರೂಯಾತ್ಪ್ರಣಾಯ್ಯಾಯ ವಾಽಂತೇವಾಸಿನೇ ॥ ೫ ॥**

ಅ || ಆದುಕಾರಣ ಈವಾಗಲೂ ತಂದೆಯುವರು ಭಕ್ತಿನವ್ರನಾದ ಪಸೀತನಾದ ಜ್ಯೇಷ್ಠಪುತ್ರನಿಗೆ ಅಥವಾ ಅಂತಹ ಶಿಷ್ಯನಿಗೆ ಪರಬ್ರಹ್ಮನನ್ನು ಉಪದೇಶಿಸಬೇಕು || ೫ ||

**ಉ. || ನಾನ್ಯಸ್ಮೈ ಕಸ್ಮೈಚನ ಯದ್ಯಪ್ಯಸ್ಮಾ ಇಮಾಮದ್ಭಿಃ ಪರಿಗೃಹೀತಾಂ ಧನಸ್ಯ ಪೂರ್ಣಾಂ ದದ್ಯಾದೇತದೇವ ತತೋ ಭೂಯ ಇತ್ಯೇತದೇವ ತತೋಭೂಯ ಇತಿ || ಇತ್ಯೇಕಾದಶಃ ಖಂಡಃ || ೫-೧೧ || || ೬ ||**

ಅ || ಬೇರೆಯುವರಿಗೆ ಹೇಳಕೂಡದು (ಈ ವಿದ್ಯೆಯನ್ನು ಉಪದೇಶಿಸುವ ಗುರುಗಳಿಗೆ ಸದೃಶವಾದ ಗುರುದಕ್ಷಿಣೆಯು ಇಲ್ಲದಿರುವುದರಿಂದಲೂ ಈ ವಿದ್ಯೆಯು ಅತಿಶ್ರೇಷ್ಠವಾಗಿದೆ ಎನ್ನುತ್ತಾರೆ—) ಈ ಮಧು ವಿದ್ಯೆಯನ್ನುಪದೇಶಿಸುವವನಿಗೆ ರತ್ನ ಮೊದಲಾದ ದ್ರವ್ಯಗಳಿಂದ ತುಂಬಿರುವ ಏಳು ಸಮುದ್ರ ಪರ್ಯಂತ ಭೂಮಿಯನ್ನು ಗುರುದಕ್ಷಿಣೆಯಾಗಿ ಕೊಟ್ಟರೂ ಅಂತಹ ಭೂದಾನವು ಈ ವಿದ್ಯಾದಾನಕ್ಕೆ ಸಮಾನವಲ್ಲ. ಪರಂತು ಗುರುದಕ್ಷಿಣಾರೂಪವಾದ ಭೂದಾನಕ್ಕಿಂತಲೂ ಈ ಮಧುವಿದ್ಯಾದಾನವೇ ಶ್ರೇಷ್ಠವು (ಅಂದರೆ ಈ ಮಧುವಿದ್ಯೋಪದೇಶಕ್ಕೆ ಏಳು ದ್ವೀಪ ಪರ್ಯಂತ ಭೂಮಿಯನ್ನು ಗುರುದಕ್ಷಿಣೆಯಾಗಿ ಕೊಟ್ಟರೂ ಸಾಕಾಗದು. || ೫-೧೧ || || ೬ ||

ಪೀ—ಪ್ರತಿದಿವಸದಲ್ಲಿಯೂ ಪೂರ್ವಾದಿ ದಿಕ್ಕುಗಳಲ್ಲಿ ಉದಯಿಸುತ್ತಿರುವ ಆದಿತ್ಯನೆನಿಸಿದ ಶ್ರೀಹರಿಯನ್ನು ಮಧುವೆಂದು ಉಪಾಸನೆಮಾಡಬೇಕೆಂದು ಹೇಳಿರುವರು. ಈಗ ಪ್ರಲಯಕಾಲದಲ್ಲಿ ಹಾಗೆ ಉದಯಾದಿಗಳನ್ನು ಹೊಂದುವುದಿಲ್ಲವೆನ್ನುತ್ತಾರೆ -

**ಭಾ. || (೧) ಅಥ ಸೂರ್ಯಸ್ಥಿತೋ ವಿಷ್ಣುರಾದಿತ್ಯಸ್ತ್ವಾದಿಮೂಲತಃ | ಆದಾನಾದ್ವಾಽಪಿ ದೇವಾನಾಮೂರ್ಧ್ವಂ ಗಚ್ಛತಿ ಮಂಡಲಾತ್ || ಪ್ರಾಪ್ಯ ವೈಕುಂಠಲೋಕಂ ಚ ನೋದೈತ್ಯಸ್ತಂ ನ ಚೈತಿ ಸಃ | ಏಕಲಃ ಪ್ರಲಯೋ ಸ್ಥಾತಾ || (೨) ದೇವತಾ ನಾತ್ರ ಸಂಶಯಃ | ತೇನ ಸತ್ಯೇನ ನ ವ್ಯೃದ್ಧಿಮಾಪ್ನುಯಾಂ ಬ್ರಹ್ಮಣಾ ಕ್ವಚಿತ್ | ಇತ್ಯುವಾಚ ಪುರಾ ಬ್ರಹ್ಮಾ ದೇವೇಭ್ಯಃ ಸ ಚತುರ್ಮುಖಃ || (೩) ಏತಾಂ ವಿದ್ಯಾಂ ತು ಯೋ ವೇದ ನಿತ್ಯಮಸ್ಯ ದಿವಾ ಭವೇತ್ | ವೈಕುಂಠಧಾಮಸಂಸ್ಥಸ್ಯ ಮುಕ್ತಸ್ಯಾನುದಯಾಸ್ತಕಂ || (೪) ತದೇತದ್ಭಗವಾನ್ವಿಷ್ಣುಃ ಪ್ರಾದಾಜ್ಜ್ಞಾನಂ ವಿರಿಂಚಯೇ | ವಿರಿಂಚಿರ್ಮನವೇ ಪ್ರಾಹ ಪ್ರಜಾಭ್ಯೋ ಮನುರೇವ ಚ || (೫) ಪೂರಯಿತ್ವಾ ತು ಪೃಥಿವೀಂ ರತ್ನೈಃ ಸಪ್ತಸಮುದ್ರಿಣೀಂ | ದತ್ವಾಽಪಿ ಗುರವೇ ನೈವ ಪೂರ್ಯತೇ ಗುರುದಕ್ಷಿಣಾ || (೬) ದೇವಾಸ್ತೂಪಾಸನಾಯೋಗ್ಯಾ ಏಕೈಕಸ್ಯಾಮೃತಸ್ಯ ಹಿ | ಸರ್ವಸ್ಯೋಪಾಸನೇ ಬ್ರಹ್ಮಾ ತದನ್ಯೇ ಜ್ಞಾನಮಾತ್ರಕೇ || ಉಪಾಸನೇ ನೈವ ಯೋಗ್ಯಾಸ್ತದ್ಯೋಗ್ಯಾ ಹಿ ಸುರಾ ಯತಃ | ಇತಿ ದೇವಶ್ರುತೌ || ಬ್ರಹ್ಮಣಾ ಪರೇಣ ಮಾ ವಿರಾಧಿಷಿ | ಭಗವತ್ಪ್ರಸಾದಾದವೃದ್ಧಿಂ ನ ಪ್ರಾಪ್ನುಯಾಮಿತ್ಯರ್ಥಃ || ೧, ೨, ೩, ೪, ೫, ೬ || ಇತ್ಯೇಕಾದಶಃ ಖಂಡಃ || ೫-೧೧ || || ೧ ||**

ಅ || (೧) (೧ನೇ ಮಂತ್ರದ ಅರ್ಥವು) ಆದಿಕಾರಣನಾದುದರಿಂದಲೂ ದೇವತೆಗಳನ್ನು ತಮ್ಮವರನ್ನಾಗಿ ಮಾಡಿಕೊಂಡಿರುವುದರಿಂದಲೂ ಆದಿತ್ಯನೆನಿಸಿದ ಆದಿತ್ಯನೊಳಗಣ ಶ್ರೀವಿಷ್ಣುವು ಸೂರ್ಯಮಂಡಲಕ್ಕಿಂತ ಮೇಲಕ್ಕಿರುವ ವೈಕುಂಠಕ್ಕೆ ಹೋಗಿ ಉದಯಾಸ್ತಮಾನಗಳನ್ನು ಹೊಂದುವುದೇ ಇಲ್ಲ. ಒಂದೇ

ರೀತಿಯಾಗಿಯೇ ಪ್ರಲಯಕಾಲದಲ್ಲಿ ಇರುವವನು. (೨) (೨ನೇ ಮಂತ್ರದ ಅರ್ಥ) ಎಲೋ ದೇವತೆಗಳಿರಾ (ವೈಕುಂಠದಲ್ಲಿಯೂ ಶ್ರೀಹರಿಯಲ್ಲಿಯೂ ಯಾವ ದೋಷವೂ ಇಲ್ಲ) ಈ ವಿಷಯದಲ್ಲಿ ಸಂಶಯವಿಲ್ಲ. ಈ ಸತ್ಯನುಡಿಯಿಂದಲೇ ನಾನು ಪರಬ್ರಹ್ಮನ ಪ್ರಸಾದದಿಂದ ಎಲ್ಲಿಯೂ ದೇವತ್ವವಿಲ್ಲದಿರುವುದನ್ನು ಸರ್ವಥಾ ಹೊಂದಲಾರೆ ಹೀಗೆ ಚತುರ್ಮುಖಬ್ರಹ್ಮನು ಮೊದಲು ದೇವತೆಗಳಿಗೆ ಹೇಳಿರುವನು. (೩) ಈ ವಿದ್ಯೆಯನ್ನು ತಿಳಿದವನಿಗೆ ವೈಕುಂಠಲೋಕಪ್ರಾಪ್ತಿಯಾಗುತ್ತದೆ. ಅಂತಹ ಮುಕ್ತನಿಗೆ ಉದಯಾಸ್ತಮಾನಾದಿಗಳಿಲ್ಲದೆ ನಿತ್ಯದಲ್ಲಿಯೂ ಹಗಲೇ ಆಗುತ್ತದೆ (೪) (೪ನೇ ಮಂತ್ರದ ಅರ್ಥಹೇಳುತ್ತಾರೆ—) ಮಧು ಎನಿಸಿದ ಶ್ರೀಹರಿಯ ಜ್ಞಾನವನ್ನು ಶ್ರೀವಿಷ್ಣುವು ಬ್ರಹ್ಮನಿಗೂ ಬ್ರಹ್ಮನು ಸ್ವಾಯಂಭುವ ಮನುವಿಗೂ ಆತನು ಪ್ರಜೆಗಳಿಗೂ ಉಪದೇಶಿಸಿರುವನು. (೫) (೬ನೇ ಮಂತ್ರದ ಅರ್ಥ ಹೇಳುತ್ತಾರೆ—) ಏಳು ಸಮುದ್ರ ಪರ್ಯಂತ ಭೂಮಿಯನ್ನು ರತ್ನಗಳಿಂದ ತುಂಬಿಸಿ ಗುರುಗಳಿಗೆ ದಕ್ಷಿಣೆಯಾಗಿ ಕೊಟ್ಟರೂ ಈ ಮಧುವಿದ್ಯಾದಾನಕ್ಕೆ ಗುರುದಕ್ಷಿಣೆಯು ಸಾಕಾಗದು. (೬) (ಈ ವಿದ್ಯೋಪಾಸನೆಯ ಅಧಿಕಾರಿಗಳನ್ನು ಹೇಳುತ್ತಾರೆ—) ದೇವತೆಗಳಾದರೂ ಒಂದೊಂದು ಭಗವದ್ರೂಪವನ್ನು ಉಪಾಸನೆ ಮಾಡಲಿಕ್ಕೆ ಯೋಗ್ಯರಾಗಿರುತ್ತಾರೆ ಎಲ್ಲಾ ಭಗವದ್ರೂಪಗಳನ್ನುಪಾಸನೆ ಮಾಡಲಿಕ್ಕೆ ಬ್ರಹ್ಮನು ಅಧಿಕಾರಿಯು. ಬೇರೆಯವರಿಗೆ ಜ್ಞಾನದಲ್ಲಿ ಮಾತ್ರ ಅಧಿಕಾರವು. ಉಪಾಸನೆ ಮಾಡಲಿಕ್ಕೆ ಮನುಷ್ಯರು ಯೋಗ್ಯರಲ್ಲ. ಎಂದು ದೇವಶ್ರುತಿಯಲ್ಲಿದೆ. (೭) ೨ನೇ ಮಂತ್ರದಲ್ಲಿದ್ದ **ಬ್ರಹ್ಮಣಾ ಮಾ ವಿರಾಧಿಷಿ** ಎಂಬುದರ ಅರ್ಥ ಹೇಳುತ್ತಾರೆ—ಭಗವಂತನ ಪ್ರಸಾದದಿಂದ ಅವೃದ್ಧಿಯನ್ನು (ದೇವತ್ವ ಹೊಂದದಿರುವುದನ್ನು) ಹೊಂದಲಾರೆ ॥ ೧ ೨, ೩, ೪, ೫, ೬ ॥ ೫ ೧೧ ॥ ॥ ೧ ॥

**ಹನ್ನೊಂದನೇ ಖಂಡವು ಮುಗಿಯಿತು.**

## ೧೨ನೇ ಖಂಡವು

ಹೀ ಆದಿತ್ಯನೊಳಗಣ ಶ್ರೀಹರಿಯು ವಸು ಮೊದಲಾದ ಸಮಸ್ತ ದೇವತೆಗಳಿಂದುಪಾಸ್ಯನೆಂದು ಹಿಂದೆ ಹೇಳಿರುವರು. ಈಗ ಶ್ರೀಹರಿಯನ್ನು ಪ್ರತಿಪಾದಿಸುವ ಗಾಯತ್ರಿಯಲ್ಲಿರತಕ್ಕ ಗಾಯತ್ರೀ ಎನಿಸಿಕೊಂಡ ಶ್ರೀಹರಿಯು ಆರು ವಿಧನಾಗಿರುತ್ತಾನೆನ್ನುತ್ತಾರೆ—ಅಥವಾ ಶ್ರೀಹರಿಯು ಗಾಯತ್ರೀ ಎಂಬ ನಾಮದಿಂದ ಹೇಳಲ್ಪಡುವವನೆಂದು ಉಪಾಸನೆ ಮಾಡಬೇಕೆನ್ನುತ್ತಾರೆ—

**ಉ. ॥ ಗಾಯತ್ರೀ ವಾ ಇದꣳ ಸರ್ವಂ ಭೂತಂ ಯದಿದಂ ಕಿಂ ಚ ವಾಗ್ವೈ ಗಾಯತ್ರೀ ವಾಗ್ವಾ ಇದꣳ ಸರ್ವಂ ಭೂತಂ ಗಾಯತಿ ಚ ತ್ರಾಯತೇ ಚ ॥ ೧ ॥**

ಅ ॥ ಎಲ್ಲಾ ವಸ್ತುಗಳೊಳಗಿರುವ ಪರಿಪೂರ್ಣವಾದ ಮತ್ಸ್ಯ ಮೊದಲಾದ ಅವತಾರಗಳ ಸಮುದಾಯವೆಲ್ಲವೂ ಗಾಯತ್ರಿಯೇ. ಅಂದರೆ—ಗಾಯತ್ರಿಯಲ್ಲಿದ್ದು ಗಾಯತ್ರೀ ಎನಿಸಿಕೊಂಡ ಸ್ತ್ರೀರೂಪನಾದ ಶ್ರೀಹರಿಯೇ. ಪ್ರಸಿದ್ಧವು. (ಗಾಯತ್ರಿಯಲ್ಲಿ ಅಡಕವಾದ ವಾಗಾದಿಗಳಲ್ಲಿರತಕ್ಕ ಶ್ರೀಹರಿಯ ಉಪಾಸನೆಗಳನ್ನು ಹೇಳುತ್ತಾರೆ—) ಗಾಯತ್ರೀ ಎನಿಸಿಕೊಂಡ ಶ್ರೀಹರಿಯು ವಾಗಿಂದ್ರಿಯದಲ್ಲಿರತಕ್ಕ ವಾಕ್ ಎನಿಸಿಕೊಂಡ ಸ್ತ್ರೀರೂಪನಾದ ಹಯಗ್ರೀವನೇ ದೇಶಕಾಲಗುಣಗಳಿಂದ ಪರಿಪೂರ್ಣವಾದ ಮತ್ಸ್ಯ ಮೊದಲಾದ ಅವತಾರವು ಹಯಗ್ರೀವರೂಪವೇ. (ಅಂದರೆ—ಮತ್ಸ್ಯ ಮೊದಲಾದ ಅವತಾರಗಳಿಗೆ ಹಯ

ಗ್ರೀವರೂಪಿ ಶ್ರೀಹರಿಯಿಂದ ಭೇದವಿಲ್ಲ.) ಅದುಕಾರಣ ಗಾಯತ್ರೀ ಎನಿಸಿದ ಸ್ತ್ರೀರೂಪಕ್ಕೆ ಹಯಗ್ರೀವ ರೂಪಿ ಶ್ರೀಹರಿಯಿಂದ ಅಭೇದವೇ.) ಎಲ್ಲಾ ವೇದಗಳನ್ನು ಪ್ರಥಮದಲ್ಲಿ ಹೇಳಿದವನು, (ಪ್ರಥಮೋಪ ದೇಶಕನು.) ಇಡೀ ಜಗತ್ತನ್ನು ರಕ್ಷಿಸುವವನು. ಅದುಕಾರಣ ಹಯಗ್ರೀವನು ಗಾಯತ್ರೀ ಎನಿಸುತ್ತಾನೆ.

ವಿ || (1) ಗಾಯತ್ರೀ ಎನಿಸಿದ ಗಾಯತ್ರಿಯಲ್ಲಿರತಕ್ಕ ಸ್ತ್ರೀರೂಪನಾದ ಹಯಗ್ರೀವನು ಒಂದನೇ ರೂಪವು. (2) ಭೂತ ಎನಿಸಿದ ಸರ್ವ ವಸ್ತುಗಳೊಳಗಣ ಮತ್ಸ್ಯ ಮೊದಲಾದುದು ಎರಡನೇ ರೂಪವು. (3) ವಾಕ್ ಎನಿಸಿದ ಸ್ತ್ರೀರೂಪನಾದ ಹಯಗ್ರೀವನು ಮೂರನೇ ರೂಪವು. || ೧ ||

**ಉ. || ಯಾ ವೈ ಸಾ ಗಾಯತ್ರೀಯಂ ವಾವ ಸಾ ಯೇಯಂ ಪೃಥಿವ್ಯಸ್ಯಾꣳ ಹೀದꣳ ಸರ್ವಂ ಭೂತಂ ಪ್ರತಿಷ್ಠಿತಮೇತಾಮೇವ ನಾತಿಶೀಯಂತೇ || ೨ ||**

ಅ || ಗಾಯತ್ರೀ ಎನಿಸಿದ ಶ್ರೀಹರಿಯು ಪೃಥಿವೀ ಎನಿಸಿದ ಪೃಥಿವಿಯಲ್ಲಿರತಕ್ಕ ಹಳದಿ ಬಣ್ಣವುಳ್ಳ ಶ್ರೀಹರಿಯೇ. (ಭಗವದ್ರೂಪಗಳಿಗೆ ಸ್ವಲ್ಪವೂ ಭೇದವು ಇಲ್ಲ.) (ಪೃಥಿವೀಪದದಿಂದ ಪರಬ್ರಹ್ಮನನ್ನು ಏತಕ್ಕೆ ಇಟ್ಟುಕೊಳ್ಳುವುದೆಂದರೆ—) ಪೃಥಿವೀ ಎನಿಸಿದ ಶ್ರೀಹರಿಯಲ್ಲಿ ಇಡೀ ಜಗತ್ತು ಆಶ್ರಿತವಾಗಿದೆ. ಪೃಥಿವೀ ಎನಿಸಿದ ಶ್ರೀಹರಿಯನ್ನು ಮೀರಿರುವವರು ಯಾರೂ ಇಲ್ಲ. ಇವನೇ ಸರ್ವೋತ್ತಮನು. (ಹೀಗೆ ಸರ್ವಾಶ್ರಯತ್ವ, ಸರ್ವೋತ್ತಮತ್ವ ಎಂಬ ಎರಡು ಲಕ್ಷಣಗಳಿಂದ ಪೃಥಿವೀ ಎನಿಸಿದವನು ಶ್ರೀಹರಿಯೇ.) (ಪೃಥಿವೀ ಎನಿಸಿದ ಸ್ತ್ರೀರೂಪವು ನಾಲ್ಕನೇ ರೂಪವು.) || ೨ ||

**ಉ. || ಯಾ ವೈ ಸಾ ಪೃಥಿವೀಯಂ ವಾವ ಸಾ ಯದಿದಮಸ್ಮಿನ್ ಪುರುಷೇ ಶರೀರಮಸ್ಮಿನ್ ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯಂತೇ || ೩ ||**

ಅ || ಪ್ರತ್ಯಕ್ಷಸಿದ್ಧನಾದ ಜೀವನೊಳಗೆ ಇರತಕ್ಕ (ಶ) ಸುಖಸ್ವರೂಪನೂ, (ರ) ಕ್ರೀಡಾರೂಪನೂ, (ಈರ) ಜಗತ್ತಿಗೆ ಪ್ರೇರಕನು ಇವುಗಳಿಂದ ಶರೀರ ಎನಿಸಿಕೊಂಡ ಭಗವದ್ರೂಪವೇ ಪೃಥಿವೀ ಎನಿಸುತ್ತದೆ. ಅಥವಾ ಶರೀರದೊಳಗೆ ಇರತಕ್ಕ ಪುರುಷ ಎನಿಸಿಕೊಂಡ ಜೀವನಿಗೆ ನಿಯಾಮಕನಾಗಿರುವ ಶರೀರ ಎನಿಸಿ ಕೊಂಡ ಶ್ರೀಹರಿಯೇ ಪೃಥಿವೀ ಎನಿಸುತ್ತಾನೆ. ಶರೀರನೆನಿಕೊಂಡಿರುವ ಶ್ರೀಹರಿಯಲ್ಲಿ ಇಂದ್ರಿಯಗಳೂ ಪ್ರಾಣಾದಿವಾಯುಗಳೂ ಆಶ್ರಯಿಸಿರುತ್ತಾರೆ............(ಶರೀರನೆನಿಸಿದವನು ಐದನೇ ರೂಪವು.) (ಇಂದ್ರಿಯಾಶ್ರಯತ್ವ ಸರ್ವೋತ್ತಮತ್ವ ಎಂಬ ಭಗವಲ್ಲಕ್ಷಣವು ಜೀವಾಂತರ್ಗತರೂಪದಲ್ಲಿ ಪ್ರಸಿದ್ಧವಾಗಿದೆ.) || ೩ ||

**ಉ. || ಯದ್ವೈ ತತ್ಪುರುಷೇ ಶರೀರಮಿದಂ ವಾವ ತದ್ಯದಿದಮಸ್ಮಿನ್ನಂತಃಪುರುಷೇ ಹೃದಯಮಸ್ಮಿನ್ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯಂತೇ || ೪ ||**

ಅ || ಜೀವನಿಗೆ ನಿಯಾಮಕವಾದ ಶರೀರ ಎನಿಸಿಕೊಂಡ ಭಗವದ್ರೂಪವು ಜೀವನ ಸ್ವರೂಪ ದೇಹದ ಹೃದಯದಲ್ಲಿರತಕ್ಕ ಹೃದಯ ಎನಿಸಿಕೊಂಡ ಭಗವದ್ರೂಪವು...........(ಹೃದಯನೆನ್ನುವುದು ಆರನೇ ರೂಪವು.) || ೪ ||

ಪೀ—ಹೀಗೆ ಗಾಯತ್ರೀ, ಭೂತ, ವಾಕ್, ಪೃಥಿವೀ, ಶರೀರ, ಹೃದಯ ಎಂದು ಶ್ರೀಹರಿಯು ಆರು ಪ್ರಕಾರನೆಂದು ಹೇಳಿಕೊಂಡು ಈಗ ನಾಲ್ಕು ಪ್ರಕಾರನೆನ್ನುತ್ತಾರೆ—

**ಉ. ॥ ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾಽಭ್ಯ-ನೂಕ್ತಂ ॥ ೫ ॥**

ಅ ॥ ಆರು ಪ್ರಕಾರವಾದ ಗಾಯತ್ರಿಯು (ಗಾಯತ್ರೀ ಎನಿಸಿದ ಶ್ರೀಹರಿಯು) ನಾಲ್ಕು ಪಾದಗಳುಳ್ಳದ್ದು. (ಆ ನಾಲ್ಕು ಪಾದಗಳುಳ್ಳವನು.) ((೧) ನಾಲ್ಕು ಪಾದಗಳು ಯಾವುವು? (೨) ಎಲ್ಲಿಇರುತ್ತವೆ? (೩) ಒಂದೇ ಪ್ರಕಾರವಿರುವುವುಗಳೋ ಎಂದರೆ –) ಗಾಯತ್ರೀ ಎನಿಸಿದ ಶ್ರೀಹರಿಗೆ ನಾಲ್ಕು ಪಾದಗಳಿವೆ, ಎಂಬುದು ಮಂತ್ರದಿಂದ ಮೂರು ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಅನುಕೂಲವಾಗಿ ಹೇಳಲ್ಪಟ್ಟಿದೆ. ॥ ೫ ॥

ಪೀ – ಆ ಮಂತ್ರವನ್ನು ಹೇಳುತ್ತಾರೆ— .

**ಉ. ॥ ತಾವಾನಸ್ಯ ಮಹಿಮಾ ತತೋ ಜ್ಯಾಯಾꣳಶ್ಚ ಪುರುಷಃ । ಪಾ-ದೋಽಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವೀತಿ ॥ ೬ ॥**

ಅ ॥ ಪುರುಷನೆನಿಸಿದ ಶ್ರೀಹರಿಯು ಸಹಸ್ರ ಶಿರಸ್ಸುಗಳುಳ್ಳವನು ಇದು ಮೊದಲಾದ ಮಹಿಮೆಯು ಇಷ್ಟೇ ಅಲ್ಲ. ಪರಂತು ಹಿಂದೆ ಹೇಳಿದ ಮಹಿಮೆಗಿಂತಲೂ ಶ್ರೀಹರಿಯು ಹೆಚ್ಚು ಮಹಾತ್ಮ್ಯಯಿರುವವನು. ಶ್ರೀಹರಿಗೆ ಸಮಸ್ತ ಜೀವರು ಒಂದು ಪಾದವು. (ಭಿನ್ನಾಂಶರೂ) ಶ್ರೀಹರಿಯ ಸ್ವರೂಪಭೂತವಾದ ನಾರಾಯಣ, ವಾಸುದೇವ, ವೈಕುಂಠ, ಎಂಬ ಮೂರು ಪಾದವು ಚಿತ್ಪ್ರಕೃತಿರೂಪವಾದ, ಲಕ್ಷಯೋಜನವಿರುವ ಅಂತರಿಕ್ಷಲೋಕದಿಂದ ಮೇಲೆ ಇರುವ, ದ್ಯು ಎನಿಸಿದ ಶ್ವೇತದ್ವೀಪ ಅನಂತಾಸನ ವೈಕುಂಠಲೋಕಗಳಲ್ಲಿ ಕ್ರಮವಾಗಿ ಇರುತ್ತದೆ. ॥ ೬ ॥

ಪೀ—ಗಾಯತ್ರೀ ಎನಿಸಿದ ಶ್ರೀಹರಿಗೆ ನಾಲ್ಕು ಪಾದಗಳಿವೆ ಎಂಬುದನ್ನು ಇನ್ನೊಂದು ರೀತಿಯಿಂದ ಹೇಳುತ್ತಾರೆ –

**ಉ. ॥ ಯದ್ವೈ ತದ್ಬ್ರಹ್ಮೇತೀದಂ ವಾವ ತದ್ಯೋಽಯಂ ಬಹಿರ್ಧಾ ಪುರುಷಾದಾಕಾಶೋ ಯೋ ವೈ ಸ ಬಹಿರ್ಧಾ ಪುರುಷಾದಾಕಾಶಃ ॥ ೭ ॥**

ಅ ॥ ಗಾಯತ್ರೀ ಎನಿಸಿದ ಭಗವದ್ರೂಪವೇ ಸರ್ವತ್ರ ವ್ಯಾಪ್ತವಾದುದು. (ಗಾಯತ್ರೀ ಎನಿಸಿದ ಶ್ರೀಹರಿಗೆ ಇದೊಂದು ಪಾದವು.) ಸರ್ವಗತನಾದ ಬ್ರಹ್ಮನೇ ಜೀವಸ್ವರೂಪದಿಂದ ಹೊರಗಿನದ್ದಾದ ಜಡಹೃದಯದಲ್ಲಿ ಚೆನ್ನಾಗಿ ಪ್ರಕಾಶಿಸಿಕೊಂಡಿರುವುದರಿಂದ ಆಕಾಶ ಎನಿಸಿಕೊಂಡ ಶ್ರೀಹರಿಯು. (ಇದು ಎರಡನೇ ಪಾದವು.) (ಜೀವರೊಳಗೆ ವ್ಯಾಪಿಸಿಕೊಂಡಿರುವ ರೂಪಗಳಿಗೆ ಭೇದವಿಲ್ಲವೆನ್ನುತ್ತಾರೆ.) ಶರೀರದ ಹೃದಯಾಕಾಶದಲ್ಲಿರತಕ್ಕ ಆಕಾಶನೆನಿಸಿಕೊಂಡ ಶ್ರೀಹರಿಯು ಸರ್ವತ್ರವ್ಯಾಪ್ತನಾದ ಬ್ರಹ್ಮನೇ. (ಇದು ಮೂರನೇ ರೂಪವು.) ॥ ೭ ॥

**ಉ. ॥ ಅಯಂ ವಾವ ಸ ಯೋಽಯಮಂತಃಪುರುಷ ಆಕಾಶೋ ಯೋ ವೈ ಸೋಽಂತಃಪುರುಷ ಆಕಾಶಃ ॥ ೮ ॥**

ಉ. || ಅಯಂ ವಾವ ಸ ಯೋಽಯಮಂತರ್ಹೃದಯ ಆಕಾಶೋ ಯೋ ವೈ ಸೋಽಂತರ್ಹೃದಯ ಆಕಾಶಸ್ತದೇತತ್ಪೂರ್ಣಮಪ್ರವರ್ತಿ ಪೂರ್ಣಾಮಪ್ರವರ್ತಿನೀಂ ಶ್ರಿಯಂ ಲಭೇತ ಯ ಏವಂ ವೇದ || ಇತಿ ದ್ವಾದಶಃ ಖಂಡಃ || || ೫–೧೨ || || ೯ ||

ಅ || ಬಾಹ್ಯಹೃದಯದಲ್ಲಿರುವ ಶ್ರೀಹರಿಯೇ ಜೀವರೊಳಗಿನ ಆಕಾಶದಲ್ಲಿ ವ್ಯಾಪಿಸಿಕೊಂಡಿರತಕ್ಕ ಆಕಾಶನೆನಿಸಿಕೊಂಡ ಶ್ರೀಹರಿಯು. (ನಾಲ್ಕನೇ ಪಾದವನ್ನು ಹೇಳುತ್ತಾರೆ—) ಪುರುಷನೊಳಗೆ ವ್ಯಾಪಿಸಿಕೊಂಡಿರತಕ್ಕ ಆಕಾಶನೆನಿಸಿದ ಶ್ರೀಹರಿಯೇ ಜೀವರ ಹೃದಯದೊಳಗಿನ ಆಕಾಶದಲ್ಲಿರತಕ್ಕ ಆಕಾಶನೆನಿಸಿದ ಶ್ರೀಹರಿಯು (ಶ್ರೀಹರಿಯ ಮಹಿಮೆ ಹೇಳುತ್ತಾರೆ ) ಜೀವರ ಹೃದಯದೊಳಗಿನ ಆಕಾಶನೆನಿಸಿದ ಶ್ರೀಹರಿಯು ದೇಶ ಕಾಲ ಗುಣಗಳಿಂದ ಪೂರ್ಣನು. ಪ್ರವರ್ತಕನಿಲ್ಲದಿರುವವನು ಅಂದರೆ–ಸರ್ವಸ್ವತಂತ್ರನು. ಹೀಗೆ ಗಾಯತ್ರೀ ಎನಿಸಿದ ಶ್ರೀಹರಿಯನ್ನು ತಿಳಿಯಲಿಕ್ಕೆ ಚತುರ್ಮುಖಪದವಿಗೆ ಯೋಗ್ಯನಾದವನೇ ಮುಖ್ಯಾಧಿಕಾರಿಯು. ಆತನು ತನ್ನ ಯೋಗ್ಯತಾನುಸಾರ ಪರಿಪೂರ್ಣವಾದ ಕೇವಲ ವಿಷ್ಣುವಿನ ಅಧೀನವಾದ ಸಂಪತ್ತನ್ನು ಈ ಲೋಕದಲ್ಲಿಯೂ ಮೋಕ್ಷದಲ್ಲಿಯೂ ಹೊಂದುತ್ತಾನೆ ಬೇರೆಯವರು ತಮ್ಮ ತಮ್ಮ ಯೋಗ್ಯತಾನುಸಾರ ಸಂಪತ್ತನ್ನು ಹೊಂದುತ್ತಾರೆ. || ೫—೧೨ || || ೯ ||

ಪೀ –ಗಾಯತ್ರೀ ವಾ ಇದಂ ಸರ್ವಂ ಎಂಬ ೧ನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ —

ಭಾ. || (೧) ಯದಿದಂ ಕಿಂ ಚ ಭೂತಂ ಪ್ರಭೂತಂ ಪರಿಪೂರ್ಣಂ ತತ್ಸರ್ವಂ ಗಾಯತ್ರೀ ಭಗವಾನೇವ | ಭೂ ಬಹಾವಿತಿ ಧಾತೋಃ | ಬಹುಃ ಪೂರ್ಣತಾಯಾಮಿತಿ ಚ || (೨) ಯದಿದಂ ಪರಿತಃ ಪೂರ್ಣಂ ಮತ್ಸ್ಯಕೂರ್ಮಾದಿರೂಪಕಂ | ತದಿದಂ ಭಗವಾನ್ವಿಷ್ಣುಃ ಸರ್ವಾಂತಃಸ್ಥಿತ ಏವ ಚ || ತನ್ನಿಃಸೃತತ್ವಾದ್ವೇದಾನಾಂ ಗಾಯಕಸ್ತ್ರಾತಿ ಚಾಖಿಲಂ | ಅತೋ ಗಾಯತ್ರಿನಾಮ್ಯಾಸೌ ವಾಸುದೇವಃ ಪರಃ ಪುಮಾನ್ | ಭೂಮಾ ಭೂತಮಿತಿ ಪ್ರೋಕ್ತಃ ಪೂರ್ಣತ್ವಾತ್ಪುರುಷೋತ್ತಮಃ || (೩) ಅನನ್ಯಾಪೇಕ್ಷಮುದ್ರಿಕ್ತಂ ಸರ್ವಸ್ಯ ವಿ(ಚ) ನಿಯಾಮಕಂ | ಯದ್ಯತ್ತತ್ತದ್ವಿಷ್ಣುರೇವ ನಾನ್ಯದೇತಾದೃಶಂ ಕ್ವಚಿತ್ || (೪) ಸ ಏವ ಭಗವಾನ್ವಿಷ್ಣುರ್ವಾಗ್ಜ್ಞಾಮಾ ವಾಚಿ ಸಂಸ್ಥಿತಃ | ವಚನಾದ್ಧಯಶೀರ್ಷಾಖ್ಯೋ ಗಾಯತ್ರ್ಯಾಂ ಚ ಸ ಆಸ್ಥಿತಃ || ೧ ||

ಅ || (೧) ಸರ್ವ ವಸ್ತುಗಳೊಳಗಣ ಪರಿಪೂರ್ಣವಾದ ಮತ್ಸ್ಯ ಮೊದಲಾದ ಅವತಾರವೆಲ್ಲವೂ ಗಾಯತ್ರೀ ಎನಿಸಿದ ಸ್ತ್ರೀರೂಪನಾದ ಭಗವಂತನೇ. ಭೂಧಾತುವು ಬಹು ಎಂಬ ಅರ್ಥದಲ್ಲಿದ್ದುದರಿಂದ ಬಹುಶಬ್ದವು ಪರಿಪೂರ್ಣತೆಯೆಂಬ ಅರ್ಥದಲ್ಲಿದೆ (ಅದುಕಾರಣ ಭೂತಂ=ಗುಣಪರಿಪೂರ್ಣವು.) (೨) ಸರ್ವ ದೇಶಕಾಲಗಳಲ್ಲಿರುವ ಸರ್ವಗುಣಪರಿಪೂರ್ಣವಾದ, ಸರ್ವ ವಸ್ತುಗಳೊಳಗಣ ಮತ್ಸ್ಯ ಕೂರ್ಮ ಮೊದಲಾದ ರೂಪವು ಗಾಯತ್ರೀ ಎನಿಸಿದ ವಿಷ್ಣುವೇ. ಸರ್ವೋತ್ತಮನಾದ ವಾಸುದೇವನು ವೇದಗಳನ್ನು ಹೇಳಿ ಗಾನಮಾಡಿದುದರಿಂದಲೂ ಇಡೀ ಜಗತ್ತನ್ನು ರಕ್ಷಿಸುವುದರಿಂದಲೂ ಗಾಯತ್ರೀ ಎನಿಸುತ್ತಾನೆ. ಪುರುಷೋತ್ತಮಗಳಾದ ಮತ್ಸ್ಯ ಮೊದಲಾದ ಭಗವದ್ರೂಪಗಳು ಸರ್ವಗುಣಪರಿಪೂರ್ಣಗಳಾಗಿರುವುದರಿಂದ ಭೂತಂ=ಭೂಮಾ ಎನಿಸುತ್ತವೆ. (೩) (ಪರಿಪೂರ್ಣರಾದವರೆಲ್ಲರೂ ಗಾಯತ್ರೀ ಎನಿಸಿದ ವಿಷ್ಣುವೇ ಎಂಬ ಅರ್ಥವು ಕೂಡುವುದಿಲ್ಲ ಹಾಗೆ ಹೇಳಿದರೆ ಮುಕ್ತರೂ ಲಕ್ಷ್ಮೀದೇವಿಯೂ ಪೂರ್ಣರಾದುದರಿಂದ ಅವ

ರಿಗೂ ವಿಷ್ಣುತ್ವವು ಬರಬೇಕಾಗುವುದೆಂದರೆ—) ಇತರರ ಅಪೇಕ್ಷೆಯಿಲ್ಲದೆ ಪರಿಪೂರ್ಣನೂ, ಎಲ್ಲರಿಗೆ ನಿಯಾಮಕನೂ, ಎಲ್ಲಾ ವಸ್ತುಗಳೊಳಗೆ ಇರುವವನೂ ಆದವನು ಶ್ರೀವಿಷ್ಣುವೇ. ಎಲ್ಲಿಯೂ ಇಂತಹವರು ಬೇರೆಯಿಲ್ಲ. (೪) (೩ನೇ ರೂಪವನ್ನು ಹೇಳಲಿಕ್ಕೆ ಹೊರಟ **ವಾಗ್ವೈ ಗಾಯತ್ರೀ** ಎಂಬುದರ ಅರ್ಥ ಹೇಳುತ್ತಾರೆ—) ಗಾಯತ್ರೀ ಎನಿಸಿದ ಆ ವಿಷ್ಣುವೇ ಮಾತಾಡುವ ಶಕ್ತಿಯನ್ನು ಕೊಡುವುದರಿಂದ ವಾಕ್ ಎನಿಸಿಕೊಂಡ ವಾಗಿಂದ್ರಿಯದಲ್ಲಿರತಕ್ಕ ಹಯಗ್ರೀವನು. ಆತನೇ ಗಾಯತ್ರಿಯಲ್ಲಿ ಹೇಳಲ್ಪಡುವವನು.

ವಿ || ಗಾಯತ್ರೀ ಎನಿಸಿದ ಶ್ರೀಹರಿಗೆ ಆರು ವಿಧ ರೂಪಗಳ ಮಧ್ಯದಲ್ಲಿ ಗಾಯತ್ರೀ ಎಂಬುದು ೧ನೇ ರೂಪವು. ಭೂತ ಎನಿಸಿದ ಮತ್ಸ್ಯಾದಿಗಳು ೨ನೇ ರೂಪಗಳು. (ವಾಕ್ ಎನಿಸಿದ ಹಯಗ್ರೀವನು ೩ನೇ ಯವನು.) || ೧ ||

ಟೀ—ಗಾಯತ್ರೀ ಎನಿಸಿದ ವಿಷ್ಣುವಿನ ೪ನೇ ರೂಪವನ್ನು ಹೇಳಲಿಕ್ಕೆ ಹೊರಟ **ಯಾ ವೈ ಸಾ ಗಾಯತ್ರೀ** ಎಂಬುದರ ಅರ್ಥ ಹೇಳುತ್ತಾರೆ—

**ಭಾ. || (೧) ಸ ಏವ ಪೃಥಿವೀನಾಮಾ ಪೃಥಿವ್ಯಾಮಪಿ ಸಂಸ್ಥಿತಃ । ವಿಷ್ಣೌ ಹಿ ಪೃಥಿವೀಸಂಸ್ಥೇ ಜಗತ್ಸರ್ವಂ ಪ್ರತಿಷ್ಠಿತಂ || ನಾತಿಶೇತೇ ಚ ತಂ ಕಶ್ಚಿತ್ಸ ಹಿ ಸರ್ವಾಧಿಕೋ ಹರಿಃ । ಪೃಥುತ್ವಾತ್ಪೃಥಿವೀನಾಮಾ || (೨) ಸ ಏವಾಂತಶ್ಶರೀರಗಃ । ತರಿತ್ವಾದೀರಣಾಚ್ಚೈವ ಶರೀರಂ ಭಗವಾನಜಃ । ಪುರುಷೋ ಜೀವ ಉದ್ದಿಷ್ಟಸ್ತಸ್ಮಿನ್ನೇವ ಸ್ಥಿತೋ ವಿಭುಃ|| (೩) ಯೋಽಸೌ ಜೀವೇ ಸ್ಥಿತೋ ವಿಷ್ಣುಃ ಶರೀರಮಿತಿ ನಾಮಕಃ । ಶಂತ್ವಾಚ್ಚ ರತಿರೂಪತ್ವಾದೀರಣಾಚ್ಚ ಸ ಏವ ತು || ಜೀವಚ್ಚೈತನ್ಯರೂಪಸ್ಯ ಹೃದಯೇಽಪಿ ವ್ಯವಸ್ಥಿತಃ । ಅಯನಾದ್ಧೃದಿ ವಿಷ್ಣುಸ್ಸ ಹೃದಯಂ ಕೀರ್ತಿತೋ ಬುಧೈಃ || ೨ ||**

ಅ || (೧) ಗಾಯತ್ರೀ ಎನಿಸಿದ ಶ್ರೀಹರಿಯೇ ಪೃಥಿವೀ ಎನಿಸಿಕೊಂಡವನು, ಪೃಥಿವಿಯಲ್ಲಿರುವವನು ಪೃಥಿವಿಯಲ್ಲಿರುವ ಶ್ರೀವಿಷ್ಣುವಿನಲ್ಲಿ ಇಡೀ ಜಗತ್ತು ಆಶ್ರಿತವಾಗಿದೆ. ಆ ಶ್ರೀಹರಿಯನ್ನು ಯಾರೊಬ್ಬನೂ ಮೀರುವುದಿಲ್ಲ ಆತನೇ ಸರ್ವೋತ್ತಮನು. ಸರ್ವತ್ರ ವ್ಯಾಪಿಸಿಕೊಂಡಿದ್ದುದರಿಂದ ಪೃಥಿವೀ ಎನಿಸುತ್ತಾನೆ. (ಇದು ೪ನೇ ರೂಪವು.) (೨) (೩ನೇ ಮಂತ್ರದ ಅರ್ಥ ಹೇಳುತ್ತಾರೆ—) ಪೃಥಿವೀ ಎನಿಸಿಕೊಂಡ ಶ್ರೀಹರಿಯೇ ಶರೀರದೊಳಗಣ ಪುರುಷನಲ್ಲಿರುವವನು. ಶ್ರೀಹರಿಯು ಸುಖಸ್ವರೂಪನೂ, ಕ್ರೀಡಾಸ್ವರೂಪನೂ ಆಗಿರುವುದರಿಂದಲೂ ಸರ್ವರಿಗೆ ಪ್ರೇರಕನಾದುದರಿಂದಲೂ ಶರೀರನೆನಿಸುತ್ತಾನೆ. ಪುರುಷನೆಂದರೆ ಜೀವನು ಆತನಲ್ಲಿಯೇ ಶ್ರೀಹರಿಯು ಇದ್ದಾನೆ. (ಶರೀರವೆಂಬುದು ೫ನೇ ರೂಪವು.) (೩) ೬ನೇ ರೂಪವನ್ನು ಹೇಳಲಿಕ್ಕೆ ಹೊರಟ **ಯದ್ವೈ ತತ್ಪುರುಷೇ ಶರೀರಂ** ಎಂಬ ೪ನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ—) ಸುಖಸ್ವರೂಪನೂ, ಕ್ರೀಡಾಸ್ವರೂಪನೂ ಪ್ರೇರಕನೂ ಆಗಿರುವುದರಿಂದ ಜೀವನಲ್ಲಿದ್ದ ವಿಷ್ಣುವಿಗೆ ಶರೀರನೆಂದು ಹೆಸರು. ಆತನೇ ಜೀವಚ್ಚೈತನ್ಯದ ಹೃದಯದಲ್ಲಿಯೂ ಇದ್ದಾನೆ. ಆ ವಿಷ್ಣುವನ್ನು ಹೃದಯದಲ್ಲಿ ತಿಳಿದುಕೊಳ್ಳುವುದರಿಂದ ಅಥವಾ ವಿಷ್ಣುವು ಹೃದಯದಲ್ಲಿ ಇದ್ದಪ್ರಯುಕ್ತ ಹೃದಯನೆನಿಸುತ್ತಾನೆ. (ಹೃದಯವೆಂಬುದು ೬ನೇ ರೂಪವು.) || ೨ ||

ಟೀ—**ಸೈಷಾ ಚತುಷ್ಪದಾ** ಎಂಬ ೫ನೇ ಮಂತ್ರದ ಅರ್ಥಹೇಳುತ್ತಾರೆ—

**ಭಾ. || (೧) ಗಾಯತ್ರ್ಯಾಂ ಸಂಸ್ಥಿತೋ ವಿಷ್ಣುಃ ಸ್ತ್ರೀರೂಪಃ ಸೂರ್ಯಸಪ್ರಭಃ || (೨) ದ್ವಿತೀಯಶ್ಚೈವ ಮತ್ಸ್ಯಾದಿಭೂತನಾಮಾಽವತಾರಗಃ|| (೩) ತೃತೀಯೋ ವಾಚಿ ಸಂ-**

**ಸ್ಥಶ್ಚ ಸ್ತ್ರೀರೂಪೋ ಹಯಶೀರ್ಷಕಃ ॥ (೪) ಚತುರ್ಥಃ ಪೃಥಿವೀಸಂಸ್ಥಃ ಸ್ತ್ರೀರೂಪಃ ಪೀತ-ವರ್ಣಕಃ ॥ (೫) ಜೀವಸ್ಯಾಂತರ್ಗತೋ ವ್ಯಾಪ್ಯ ಶರೀರಮಿತಿ ನಾಮಕಃ । ಪಂಚಮಃ ॥ (೬) ತದ್ಧೃದಿಸ್ಥಶ್ಚ(ಸ್ತು) ಷಷ್ಠೋ ಹೃದಯನಾಮಕಃ । ಗಾಯತ್ರೀನಾಮಕೋ ವಿಷ್ಣು-ರೇವಂ ಷಡ್ವಿಧ ಉಚ್ಯತೇ ॥ ३ ॥**

ಅ ॥ (೧) ಗಾಯತ್ರಿಯಲ್ಲಿ ಹೇಳಲ್ಪಡತಕ್ಕ ಶ್ರೀವಿಷ್ಣುವು ಸ್ತ್ರೀಸ್ವರೂಪನು. ಸೂರ್ಯನಂತೆ ಕಾಂತಿಯಿರುವವನು. (ಇವನು ಒಂದನೆಯವನು.) (೨) ಭೂತ ಎನಿಸಿಕೊಂಡ ಮತ್ಸ್ಯ ಮೊದಲಾದ ಅವತಾರವು ೨ನೇದ್ದು (೩) ವಾಗಿಂದ್ರಿಯದಲ್ಲಿರತಕ್ಕ ಸ್ತ್ರೀರೂಪನಾದ ಹಯಗ್ರೀವನು ೩ನೇಯವನು. (೪) ೪ನೇಯವನು ಪೃಥಿವಿಯಲ್ಲಿರುವವನು. ಸ್ತ್ರೀರೂಪನು, ಹಳದಿ ಬಣ್ಣವುಳ್ಳವನು. (೫) ಜೀವನೊಳಗೆ ಇದ್ದು ಜೀವನಲ್ಲಿ ವ್ಯಾಪಿಸಿಕೊಂಡಿದ್ದು ಶರೀರವೆನಿಸಿಕೊಂಡವನು ೫ನೇಯವನು. (೬) ೬ನೇಯವನು ಜೀವನ ಹೃದಯದಲ್ಲಿದ್ದು ಹೃದಯನೆನಿಸಿಕೊಂಡವನು. ಹೀಗೆ ಗಾಯತ್ರಿ ಎನಿಸಿಕೊಂಡ ವಿಷ್ಣುವೇ ಆರು ವಿಧನಾಗುತ್ತಾನೆ. ॥ ३ ॥

ಪೀ - ೫ನೇ ಮಂತ್ರದಲ್ಲಿದ್ದ **ಚತುಷ್ಪದಾ** ಎಂಬುದಕ್ಕೆ ಅರ್ಥ ಹೇಳುತ್ತಾರೆ—

**ಭಾ. ॥ (೧) ತ್ರಿಭಿಃ ಸ್ವರೂಪಪಾದೈಶ್ಚ ಭಿನ್ನೇನೈಕೇನ ಚೈವ ಹಿ । ಗಾಯತ್ರೀ-ನಾಮಕೋ ವಿಷ್ಣುಶ್ಚತುಷ್ಪಾತ್ಸಂಪ್ರಕೀರ್ತಿತಃ॥(೨)ಭಿನ್ನಪಾದಾಃ ಸರ್ವಜೀವಾಸ್ತಸ್ಯ ಸಾದೃ-ಶ್ಯಮಾತ್ರತಃ । ಸ್ವರೂಪಪಾದಾ ವಿಷ್ಣೋಸ್ತು ತ್ರಯೋ ಹಿ ದಿವಿ ಸಂಸ್ಥಿತಾಃ । ನಾರಾಯ-ಣೋ ವಾಸುದೇವೋ ವೈಕುಂಠ ಇತಿ ತೇ ತ್ರಯಃ ॥ (೩) ಅನಂತಶಯನಂ ಚೈವ ತಥಾಽ-ನಂತಾಸನಂ ಹರೇಃ । ಬಹುಲಕ್ಷೋಚ್ಛ್ರಿತೇ ನಿತ್ಯೇ ವಿಮಾನೇ ಸಂಸ್ಥಿತಂ ಯತಃ । ಚಿತ್ರ-ಕೃತ್ಯಾತ್ಮನಿ ತತೋ ದಿವೀತಿ ಕಥಿತಂ ಶ್ರುತೌ ॥ (೪) ಲೋಕತ್ರಯವಿವಕ್ಷಾಯಾಂ ಪರತೋ ಲಕ್ಷಯೋಜನಾತ್ । ಸರ್ವಂ ದ್ಯೌರಿತಿ ವಿಜ್ಞೇಯಂ ತತಸ್ತೇ ದಿವಿ ಸಂಸ್ಥಿತಾಃ ॥ (೫) ದಿವಃ ಪರಶ್ಚ ಭಗವಾನ್ ಸಪ್ತಲೋಕವಿವಕ್ಷಯಾ ॥ ೪ ॥**

ಅ ॥ (೧) ಸ್ವರೂಪಗಳೇ ಆದ ಪಾದಗಳು (ಅಂಶಗಳು) ಮೂರು. ಭಿನ್ನವಾದುದು ಒಂದು. ಹೀಗೆ ಗಾಯತ್ರೀ ಎನಿಸಿದ ವಿಷ್ಣುವಿಗೆ ನಾಲ್ಕು ಪಾದ (ಅಂಶ)ಗಳು. (**ಪಾದೋಽಸ್ಯ ಸರ್ವಾ ಭೂತಾನಿ** ಎಂಬ ೬ನೇ ಮಂತ್ರದ ಅರ್ಥ ಹೇಳುತ್ತಾರೆ—) (೨) ಶ್ರೀಹರಿಗೆ ಸಮಸ್ತ ಜೀವರು ಭಿನ್ನಾಂಶರು. ಸಮಸ್ತ ಜೀವರಿಗೆ ಜ್ಞಾನಾದಿಗಳಿಂದ ಶ್ರೀಹರಿಯ ಸಾದೃಶ್ಯವಿದ್ದುದರಿಂದ ಅಮುಖ್ಯವಾಗಿ ಜೀವರು ಪಾದರೆನಿಸುತ್ತಾರೆ. (**ತ್ರಿಪಾದಸ್ಯಾಮೃತಂ ದಿವಿ** ಎಂಬುದರ ಅರ್ಥ ಹೇಳುತ್ತಾರೆ-) ಶ್ವೇತದ್ವೀಪ ಅನಂತಾಸನ ವೈಕುಂಠಗಳಲ್ಲಿರತಕ್ಕ ನಾರಾಯಣ ವಾಸುದೇವ ವೈಕುಂಠ ಎನಿಸಿಕೊಂಡ ಮೂವರು ಶ್ರೀವಿಷ್ಣುವಿನ ಸ್ವರೂಪಾಂಶರು. (೩) (ವೈಕುಂಠಲೋಕವು ಸತ್ಯಲೋಕಕ್ಕಿಂತ ಮೇಲೆ ಇದ್ದಪ್ರಯುಕ್ತ ವೈಕುಂಠನು ದ್ಯುಲೋಕದಲ್ಲಿದ್ದಾನೆ, ಎಂಬುದು ಕೂಡಿದರೂ ಶ್ವೇತದ್ವೀಪ ಅನಂತಾಸನಗಳು ಭೂಪ್ರದೇಶದಲ್ಲಿಯೇ ಇರತಕ್ಕವುಗಳಾದುದರಿಂದ ಅಲ್ಲಿರುವ ನಾರಾಯಣ ವಾಸುದೇವ ರೂಪಗಳು ದ್ಯುಲೋಕದಲ್ಲಿ ಇರುತ್ತವೆಂಬುದು ಕೂಡಲಾರದೆಂದರೆ—) ಶ್ರೀಹರಿಯ ನಾರಾಯಣ ಎಂಬ ರೂಪವೂ ಹಾಗೆಯೇ ವಾಸುದೇವ ಎಂಬ ರೂಪವೂ ಬಹುಲಕ್ಷ ಯೋಜನಗಳಿಂದಲೂ ಎತ್ತರ ನಿತ್ಯ ಚಿತ್ರಕೃತಿ ರೂಪಗಳೂ ಆದ ವಿಮಾನಗಳಲ್ಲಿದ್ದ ಪ್ರಯುಕ್ತವೇ **ತ್ರಿಪಾದಸ್ಯಾಮೃತಂ ದಿವಿ** ಎಂಬ ವೇದದಲ್ಲಿ **ದಿವಿ** ದ್ಯುಲೋಕದಲ್ಲಿವೆ, ಎಂದು

**ಹೇಳಿದೆ.** (೪) (ವಿಮಾನಗಳು ಬಹುಲಕ್ಷ ಯೋಜನಗಳಿಗಿಂತ ಎತ್ತರಗಳಾಗಿದ್ದರೂ ಅವುಗಳಿಗಿಂತಲೂ ಬಹು ಲಕ್ಷ ಯೋಜನ ಎತ್ತರವಾದ ಸ್ವರ್ಗವೇ ದ್ಯು ಎನಿಸಿಕೊಳ್ಳುವುದರಿಂದ ಶ್ವೇತದ್ವೀಪ ಅನಂತಾಸನಗಳು ಸ್ವರ್ಗದಲ್ಲಿರುತ್ತವೆಂಬುದು ಹೇಗೆ? ಕೂಡುತ್ತವೆ ಎಂದರೆ —) ಭೂಃ ಭುವಃ ಸ್ವಃ ಎಂದು ಮೂರು ಲೋಕಗಳನ್ನು ಇಟ್ಟುಕೊಂಡಾಗ ಲಕ್ಷ ಯೋಜನ ಎತ್ತರವಾದ ಅಂತರಿಕ್ಷ ಲೋಕಕ್ಕಿಂತ ಮೇಲೆ ಇರುವ ಶ್ವೇತ ದ್ವೀಪ ಅನಂತಾಸನ ವೈಕುಂಠಗಳು ದ್ಯು ಎನಿಸಿಕೊಳ್ಳುವುದರಿಂದ ಆ ಲೋಕಗಳಲ್ಲಿರುವ ಮೂರು ರೂಪ ಗಳು ದ್ಯುಲೋಕದಲ್ಲಿವೆ, ಎಂಬುದು ಕೂಡುತ್ತದೆ (೫ (ಈ ಮೂರು ರೂಪಗಳು ಸ್ವರ್ಗದಲ್ಲಿರುವವು ಗಳೆಂದಾದರೆ **ಅಥ ಯದತಃ ಪರೋ ದಿವಃ** ಎಂದು ಹೇಳಿದ ದಿವಃಪರತ್ವವು ಕೂಡುವುದು ಹೇಗೆಂದರೆ—) ಮೂರು ರೂಪಗಳುಳ್ಳ ಶ್ರೀಹರಿಯು ಏಳು ಲೋಕಗಳೆಂದು ಇಟ್ಟುಕೊಳ್ಳುವಾಗ ದಿವಃಪರನೆನಿಸಿಕೊಳ್ಳುತ್ತಾನೆ. || ೪ ||

ಪೀ—ಬೇರೆ ರೀತಿಯಾಗಿ ಗಾಯತ್ರೀ ಎನಿಸಿಕೊಂಡ ಶ್ರೀಹರಿಗೆ ನಾಲ್ಕು ಪಾದಗಳಿವೆ ಎನ್ನುತ್ತಾರೆ—

**ಭಾ. || (೧) ಪರಂ ಬ್ರಹ್ಮೇತಿ ಭಗವಾನ್ ಸರ್ವಗಃ ಸಂಪ್ರಕೀರ್ತಿತಃ || (೨) ಸ ಏವ ಜೀವಸ್ಯ ಬಹಿರ್ಹೃದಯಾಕಾಶ ಆ(ಸಂ)ಸ್ಥಿತಃ || (೩) ಯೋಽಯಂ ಹೃದಯಗಃ ಸೋಽಥ ಜೀವಾಂತರ್ವ್ಯಾಪ್ಯ ಸಂಸ್ಥಿತಃ || (೪) ವ್ಯಾಪ್ತೋ ಜೀವಾಂತರೇ ಯೋಽಸೌ ಸ ಜೀವಹೃದಿ ಸಂಸ್ಥಿತಃ । ಏವಂ ಚಾಪಿ ಚತುಷ್ಪಾತ್ತ್ವಂ ವಾಸುದೇವಸ್ಯ ಕೀರ್ತಿತಂ || (೫) ಸ ಏವ ಪೂರ್ಣೋ ಭಗವಾನಪ್ರವರ್ತ್ಯಸ್ತಥಾಽಖಿಲೈಃ । ಅನ್ಯೈಃ ಪ್ರವರ್ತ್ಯತೇ ಯೋಽಸೌ ಸ ಪ್ರವರ್ತೀತಿ ಗೀಯತೇ || ಅಪ್ರವರ್ತ್ಯೋ ಹರಿರ್ನಿತ್ಯಃ ಸ್ವತಂತ್ರತ್ವಾತ್ಸದೈವ ಚ । ಅಸ್ಯ(ಸ್ಮಿನ್) ಪ್ರವೃತ್ತಿರ್ನಾಸ್ತೀತಿ ಸೋಽಪ್ರವರ್ತೀತಿ ಕೀರ್ತಿತಃ || (೬) ಪೂರ್ಣಾ ಸ್ವತಂತ್ರಾ ಶ್ರೀಶ್ಚಾಸ್ಯ ನೇತ್ರೀ ಭವತಿ ಶಾಶ್ವತೀ । ಸಾಕ್ಷಾದ್ಗಾಯತ್ರ್ಯುಪಾಸಾಯಾ(ಯಾಂ) ಯೋಗ್ಯ ಏಕಶ್ಚತುರ್ಮುಖಃ । ತಸ್ಮಾದನನ್ಯತಂತ್ರಾಽಸ್ಯ ಶ್ರೀರ್ಭವೇನ್ನಾನ್ಯಥಾ ಕ್ವಚಿತ್ || (೭) ವಿಷ್ಣುತಂತ್ರತ್ವಮಸ್ಯ ಸ್ಯಾತ್ ಪರೇಷಾಂ ತಸ್ಯ ತಂತ್ರತಾ । ಯಥಾಕ್ರಮೇಣ ತಂತ್ರತ್ವಂ ಯೋಗ್ಯತಾಕ್ರಮತೋ ಭವೇತ್ || ಇತಿ ಚ ಸತ್ತತ್ತ್ವೇ || ೫ ||**

ಅ || (೧) ಗಾಯತ್ರೀ ಎನಿಸಿದ ಪರಬ್ರಹ್ಮನು ಶರೀರದೊಳಗೂ ಹೊರಗೂ ವ್ಯಾಪಿಸಿರುವವನು. (ನಾಲ್ಕು ರೂಪಗಳಲ್ಲಿ ಇದೊಂದನೆಯದು.) (ಇದು ೧ನೇ ಮಂತ್ರದಲ್ಲಿದ್ದ **ಯದ್ವೈ ತದ್ಬ್ರಹ್ಮ** ಎಂಬುದರ ಅರ್ಥವು) (೨) (**ಇದಂ ವಾವ ತದ್ಯೋಽಯಂ** ಎಂಬುದರ ಅರ್ಥ ಹೇಳುತ್ತಾರೆ--) ಸರ್ವತ್ರ ವ್ಯಾಪ್ತನಾದ ಬ್ರಹ್ಮನೇ ಜೀವನ ಹೊರಗಿನ ಜಡದೇಹದ ಹೃದಯದಲ್ಲಿ ಆಕಾಶನೆನಿಸಿಕೊಂಡಿರುವವನು. (ಜೀವನ ಬಾಹ್ಯಹೃದಯದಲ್ಲಿದ್ದ ರೂಪವು ೨ನೇ ರೂಪವು.) (೩) (**ಯೋ ವೈ ಸಃ ಬಹಿರ್ಧಾ ಪುರುಷಾದಾಕಾಶಃ** ಎಂಬುದರ ಅರ್ಥ ಹೇಳುತ್ತಾರೆ—) ಹೃದಯದೊಳಗಣ ಶ್ರೀಹರಿಯೇ ಜೀವರೊಳಗೆ ವ್ಯಾಪಿಸಿ ಕೊಂಡಿರುವವನು (ಇದು ೩ನೇ ರೂಪವು.) (೪) (೮ನೇ ಮಂತ್ರದಲ್ಲಿದ್ದ **ಯೋ ವೈ ಸೋಽಂತಃಪುರುಷಃ** ಎಂಬುದರ ಅರ್ಥ ಹೇಳುತ್ತಾರೆ—) ಜೀವರೊಳಗೆ ವ್ಯಾಪಿಸಿಕೊಂಡಿರುವವನು ಜೀವರ ಸ್ವರೂಪದೇಹದ ಹೃದಯದಲ್ಲಿರುತ್ತಾನೆ ಹೀಗೆ ವಾಸುದೇವನಿಗೆ ನಾಲ್ಕು ರೂಪಗಳು (೫) (೯ನೇ ಮಂತ್ರದ ಅರ್ಥ ಹೇಳುತ್ತಾರೆ —) ಸರ್ವಗುಣಪರಿಪೂರ್ಣನಾದ ಶ್ರೀಹರಿಯೇ ಯಾರಿಂದಲೂ ಪ್ರೇರೇಪಿಸಲ್ಪಡದಿರುವವನು ಬೇರೆಯವರಿಂದ ಪ್ರೇರೇಪಿಸಲ್ಪಡುವವನು ಸಪ್ರವೃತ್ತಿ ಎನಿಸುತ್ತಾನೆ. ಶ್ರೀಹರಿಯು ಯಾವಾಗಲೂ ಸರ್ವ ಸ್ವತಂತ್ರನಾದುದರಿಂದ ಯಾರಿಂದಲೂ ಪ್ರೇರೇಪಿಸಲ್ಪಡದಿರುವವನು ಶ್ರೀಹರಿಗೆ ಪ್ರೇರೇಪಿಸುವವನು

ಯಾರೂ ಇಲ್ಲದಿರುವುದರಿಂದ ಶ್ರೀಹರಿಯು ಅಪ್ರವೃತ್ತಿ ಎನಿಸುತ್ತಾನೆ. (೬) ಯೋಗ್ಯತಾನುಸಾರ ಪರಿಪೂರ್ಣವೂ ಸ್ವತಂತ್ರವೂ (ತಮ್ಮಿಂದ ಕೆಳಗಿನವರ ಅಧೀನವಾಗದಿರುವ) ಶಾಶ್ವತವೂ ಆದ (ನಶ್ವರವಾಗದಿರುವ) ಸಂಪತ್ತು ಈ ವಿದ್ಯೆಯನ್ನು ತಿಳಿದವನಿಗೆ ಬರುತ್ತದೆ. ಮುಖ್ಯವಾಗಿ ಗಾಯತ್ರಿಯನ್ನು ಪಾಸನ ಮಾಡಲಿಕ್ಕೆ ಯೋಗ್ಯನಾದವನು ಚತುರ್ಮುಖನೊಬ್ಬನೇ. ಅದುಕಾರಣ ಚತುರ್ಮುಖನಿಗೆನೇ, ಬೇರೆಯವರ ಅಧೀನವಾಗದಿರುವ ಸ್ವತಂತ್ರವಾದ ಸಂಪತ್ತುಂಟಾಗುತ್ತದೆ ಚತುರ್ಮುಖನಲ್ಲದ ಅಮುಖ್ಯೋಪಾಸಕರಿಗೆ ಸ್ವತಂತ್ರ ಸಂಪತ್ತು ಸರ್ವಥಾ ಬರಲಾರದು, (೭) ಚತುರ್ಮುಖನ ಸಂಪತ್ತು ಲಕ್ಷ್ಮೀನಾರಾಯಣರ ಅಧೀನದಲ್ಲಿರತಕ್ಕುದು. ಗರುಡಶೇಷಾದಿಗಳ ಸಂಪತ್ತು ಚತುರ್ಮುಖನ ಅಧೀನದಲ್ಲಿರತಕ್ಕುದು. ಯೋಗ್ಯತಾನುಸಾರ ಕೆಳಕೆಳಗಿನವರ ಸಂಪತ್ತು ಉತ್ತಮೋತ್ತಮರ ಅಧೀನದಲ್ಲಿರತಕ್ಕುದು, ಎಂದು ಸತ್ತತ್ತ್ವವೆಂಬ ಗ್ರಂಥದಲ್ಲಿದೆ. || ೫ ||

**ಪೀ—ಈ** ವಿದ್ಯೆಯು ಪರಬ್ರಹ್ಮನನ್ನು ಹೇಳುತ್ತದೆಂಬುವಲ್ಲಿ ಪ್ರಮಾಣ ಹೇಳಿ **ಈಗ** ಮಂತ್ರಶಬ್ದರೂಪ ಗಾಯತ್ರಿಯನ್ನೇ ಈ ವಿದ್ಯೆಯು ಹೇಳುತ್ತದೆಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ—

**ಭಾ. || (೧) ಬ್ರಹ್ಮಶಬ್ದಾಚ್ಚ ಭಗವಾನಿತ್ಯವಸೀಯತೇ || (೨) ಪೂರ್ಣಾಪ್ರವೃತ್ತಿತ್ವಂ ಚ ತಸ್ಮಿನ್ನೇವ ಮುಖ್ಯಂ । ತಾವಾನಸ್ಯ ಮಹಿಮೇತಿ ಮಂತ್ರಾಚ್ಚ || (೩) ಪಾದೋಽಸ್ಯ ವಿಶ್ವಾ ಭೂತಾನೀತಿ ಜೀವಾನಾಂ ಚತುಷ್ಪಾದಾಂತರ್ಭಾವಾತ್ । ಭೂತಂ ಯದಿದಂ ಕಿಂ ಚೇತಿ ಷಡ್ವಿಧಾಂತರ್ಭೂತಂ ಭೂತಂ ಮತ್ಸ್ಯಾದ್ಯವತಾರರೂಪಮೇವ || (೪) ದ್ವಾವಿಂಶೇಷ್ವವತಾರೇಷು ಜೀವೋಽಪ್ಯುಕ್ತೋ ಯಥಾ ಪೃಥುಃ । ತಥಾ ಪಾದೇಷು ಚತುರ್ಷು ಸಾನ್ನಿಧ್ಯಾಜ್ಜೀವ ಈರಿತಃ || ಯಥಾ ಕಾಲಃ ಪುಮಾನ್ ವ್ಯಕ್ತಂ ಪ್ರಕೃತಿಶ್ಚ ಪರಸ್ಯ ತು । ವಿಷ್ಣೋ ರೂಪಾಣಿ ಗಣ್ಯಂತೇ ಪರರೂಪೇಣ ಸೈ ಸಹ । ಏವಂಭೂತಾನಿ ಗಣ್ಯಂತೇ ಭಿನ್ನಾನ್ಯಪಿ ಪದ್ಯೈಃ ಸಹ || (೫) ಮೂರ್ತಾಮೂರ್ತೇ ಯಥಾ ರೂಪೇ ಬ್ರಹ್ಮಣಸ್ತು ತಥೈವ ಚ । ಭಿನ್ನಾನ್ಯಪಿ ತು ಭೂತಾನಿ ಪದಾನಿ ಸ್ವಪದ್ಯೈಃ ಸಹ || ಇತಿ ಪ್ರಾಥಮ್ಯೇ || (೬) ಸುದರ್ಶನಾಖ್ಯಂ ಸ್ವಾಸ್ತ್ರಂ ತು ಪ್ರಾಯುಂಕ್ತ ದಯಿತಂ ತ್ರಿಪಾತ್ । ಇತಿ ಶ್ರೀಭಾಗವತೇ ಪ್ರಯೋಗಾಚ್ಚ ನ ಜೀವೋ ಭಗವತ್ಸ್ವರೂಪಂ || ಸುವರ್ಚಲಾ ಯಥಾ ಸೂರ್ಯಪತ್ನ್ಯಂಶಃ ಸಮುದಾಹೃತಾ । ಏವಂ ಜೀವಾ ಭಗವತೋ ವಸ್ತುಭೇದೇಽಪಿ ಸರ್ವದಾ || ಇತಿ ಚ || || ೧, ೨, ೩, ೪, ೫, ೬, ೭, ೮, ೯ || ಇತಿ ದ್ವಾದಶಃ ಖಂಡಃ || ೫–೧೨ || || ೬ ||**

ಅ || (೧) ಹಿಂದೆ ಹೇಳಿದ ಪ್ರಮಾಣಗಳಿಂದಲೂ ಬ್ರಹ್ಮವೆಂಬ ಶಬ್ದವಿದ್ದುದರಿಂದಲೂ ಇಲ್ಲಿ ಗಾಯತ್ರೀ ಎಂದರೆ ಭಗವಂತನೇ, ಎಂದು ನಿಶ್ಚಯವಾಗುತ್ತದೆ (೨) (ಶ್ರೀಹರಿಯನ್ನೇ ಹೇಳುತ್ತದೆಂಬುವುದಕ್ಕೆ ವೇದಪ್ರಮಾಣವನ್ನು ಹೇಳಿ ಈಗ ಅಂತಹ ಲಕ್ಷಣವನ್ನು ಹೇಳುತ್ತಾರೆ—) ಇಲ್ಲಿ ಹೇಳಲ್ಪಡತಕ್ಕ ಪೂರ್ಣ ಸ್ವಾತಂತ್ರ್ಯವು ಬ್ರಹ್ಮನಲ್ಲಿಯೇ ಮುಖ್ಯವು (ಅದುಕಾರಣ ಶ್ರೀಬ್ರಹ್ಮನೆಂದೇ ನಿಶ್ಚಯವಾಗುತ್ತದೆ.) **ತಾವಾನಸ್ಯ ಮಹಿಮಾ** ಎಂಬ ಮಂತ್ರದಿಂದಲೂ (ಶ್ರೀಹರಿಯೇ ಇಲ್ಲಿ ಹೇಳಲ್ಪಡುತ್ತಾನೆಂದು ನಿಶ್ಚಯವಾಗುತ್ತದೆ.) (೩) (ಈ ವಿದ್ಯೆಯು ಶ್ರೀಹರಿಯನ್ನೇ ಹೇಳುತ್ತದೆಂದು ಹೇಳಿ ಈಗ ಅದ್ವೈತಿಗಳು **ಭೂತಂ** ಎಂಬುವುದಕ್ಕೆ ಸ್ಥಾವರ ಜಂಗಮರೂಪವಾದ ಪ್ರಾಣಿಗಳ ಸಮುದಾಯವೆಂದು ಅರ್ಥ ಹೇಳಿದ್ದು ಅಯುಕ್ತವೆನ್ನುತ್ತಾರೆ-) **ಪಾದೋಽಸ್ಯ ವಿಶ್ವಾ ಭೂತಾನಿ** ಎಂದು ಜೀವರು ನಾಲ್ಕು ಪಾದಗಳೊಳಗೆ ಸೇರಿರುತ್ತಾರೆ. **ಭೂತಂ ಯದಿದಂ ಕಿಂಚ** ಎಂದು ಆರು ವಿಧದಲ್ಲಿ ಸೇರಿದ ಭೂತಶಬ್ದದಿಂದ ಮತ್ಸ್ಯಾದ್ಯವತಾರಗಳನ್ನು ಇಟ್ಟುಕೊಳ್ಳಬೇಕು. (ಅಂದರೆ –ಭೂತಂ ಎಂಬುವುದರಿಂದ ಗಾಯತ್ರಿಯು ಆರು ವಿಧವು, ಅದಕ್ಕೆ ನಾಲ್ಕು ಪಾದ

ಗಳೆಂದು ಹೇಳಿದೆ. ಆರು ವಿಧದಲ್ಲಿ ಪ್ರಾಣಿಗಳ ಸಮುದಾಯವು ಸೇರಿದ್ದೆಂದಾದರೆ— ಸ್ಥಾವರ ಜಂಗಮ ರೂಪ ಸಮಸ್ತ ಜೀವರು **ಪಾದೋಽಸ್ಯ ವಿಶ್ವಾ ಭೂತಾನಿ** ಎಂದು ನಾಲ್ಕು ಪಾದಗಳೊಳಗೆ ಸೇರಿರುವುದರಿಂದ ಪುನರುಕ್ತಿಯು ಬರಬೇಕಾಗುವುದು (ಎರಡು ಸಲ ಹೇಳಿದಂತೆ ಆಗುವುದು) ಅದುಕಾರಣ ಭೂತ ಶಬ್ದದಿಂದ ಮತ್ಸ್ಯಾದ್ಯವತಾರಗಳನ್ನೇ ಇಟ್ಟುಕೊಳ್ಳಬೇಕು. (ಪ್ರಾಣಿಗಳ ಸಮುದಾಯವನ್ನು ಇಟ್ಟುಕೊಳ್ಳಕೂಡದು.) (೪) (**ಪಾದೋಽಸ್ಯ** ಎಂಬಲ್ಲಿ ಜೀವರನ್ನು ಇಟ್ಟುಕೊಳ್ಳುವುದಿಲ್ಲ. ಏಕೆಂದರೆ—ಭಿನ್ನರಾದ ಜೀವರನ್ನು ಭೇದವಿಲ್ಲದಿರುವ ನಾರಾಯಣಾದಿ ರೂಪಗಳೊಂದಿಗೆ ಹೇಳಲಾರರು. ಆದಕಾರಣ ಪೌನರುಕ್ತ್ಯವಿಲ್ಲವೆಂದರೆ— ಭಿನ್ನರಾದ ಜೀವರಿಗೆ ಭೇದವಿಲ್ಲದಿರುವ ಭಗವದ್ರೂಪಗಳೊಂದೊಡಗೂಡಿ ಪಾಠವದೆ ಎಂದು ದೃಷ್ಟಾಂತ ಕೊಟ್ಟು ಹೇಳುತ್ತಾರೆ—) ಪೃಥುರಾಜನು ಜೀವನಾದಾಗ್ಯೂ ಶ್ರೀಹರಿಯು ಅವನಲ್ಲಿ ವಿಶೇಷವಾಗಿ ಸನ್ನಿಧಾನವನ್ನು ಇಟ್ಟಪ್ರಯುಕ್ತ ೨೨ ಅವತಾರಗಳೊಂದಿಗೆ ಹೇಳಲ್ಪಟ್ಟಂತೆ ನಾಲ್ಕು ಪಾದಗಳೊಂದಿಗೆ ಜೀವನೂ ಹೇಳಲ್ಪಟ್ಟಿದ್ದಾನೆ. ಹೇಗೆ ಕಾಲವು ಚತುರ್ಮುಖನು ಜಡಪ್ರಕೃತಿಯು ಲಕ್ಷ್ಮೀದೇವಿಯು ಇವರೆಲ್ಲರೂ ವಿಷ್ಣುವಿನ ವಿಶೇಷ ಸನ್ನಿಧಾನವಿರುವವರಾದುದರಿಂದ ಮತ್ಸ್ಯಾದಿರೂಪಗಳೊಂದೊಡಗೂಡಿ ವಿಷ್ಣುವಿನ ರೂಪಗಳೆಂದು ಗಣಿಸಲ್ಪಡುತ್ತಾರೆ—ಹೀಗೆಯೇ ಭೇದವಿರುವ ಜೀವರು ಸ್ವರೂಪಭೂತಗಳಾದ ನಾರಾಯಣಾದಿರೂಪಗಳೊಂದೊಡಗೂಡಿ ಹೇಳಲ್ಪಡುತ್ತಾರೆ. (೫) ಹೇಗೆ ಬ್ರಹ್ಮನಿಗೆ ಮೂರ್ತ, (ಪೃಥಿವೀ, ಜಲ, ತೇಜಸ್ಸು) ಅಮೂರ್ತ (ವಾಯು, ಆಕಾಶ)ಗಳು ಬ್ರಹ್ಮನ ರೂಪಗಳೋ, ಹಾಗೆಯೇ ಭೇದವಿರುವ ಜೀವರೂ ಸ್ವರೂಪಾಂಶಗಳೊಂದೊಡಗೂಡಿ ಪಾದ(ಭಿನ್ನಾಂಶ)ಗಳೆಂದು ಹೇಳಲ್ಪಡುತ್ತಾರೆ, ಎಂದು ಪ್ರಾಥಮ್ಯವೆಂಬ ಗ್ರಂಥದಲ್ಲಿದೆ (೬) (ಹಾಗಾದರೆ ಭಿನ್ನರಾದ ಜೀವರನ್ನು ಭೇದವಿಲ್ಲದಿರುವ ಭಗವದ್ರೂಪಗಳೊಂದೊಡಗೂಡಿ ಹೇಳಿದ್ದೆಂದು ಏಕೆ ಇಟ್ಟುಕೊಳ್ಳುವುದು? ಜೀವರಿಗೂ ಭೇದವಿಲ್ಲವೆಂದು ಏಕೆ ಹೇಳಬಾರದೆಂದರೆ—) ಶ್ರೀಹರಿಯ ಮೂರು ಪಾದಗಳು ಅಂದರೆ— ನಾರಾಯಣ ವಾಸುದೇವ ವೈಕುಂಠ ಎಂಬ ಮೂರು ರೂಪಗಳುಳ್ಳ ಹರಿಯು ಪ್ರಿಯವಾದ ಸುದರ್ಶನವೆಂಬ ತನ್ನ ಅಸ್ತ್ರವನ್ನು ಬಿಟ್ಟನು. ಎಂದು ಶ್ರೀಭಾಗವತದಲ್ಲಿ ಹೇಳಿದಪ್ರಯುಕ್ತವೂ ಜೀವನು ಭಗವತ್ಸ್ವರೂಪನಲ್ಲ. (ಅಂದರೆ— ಜೀವನೂ ಭಗವಂತನ ಸ್ವರೂಪಭೂತ ಪಾದನೆಂಬುದು ಇಷ್ಟವಾಗಿದ್ದರೆ ಭಾಗವತಾದಿಗಳಲ್ಲಿ ತ್ರಿಪಾತ್ ಎಂದು ಹೇಳಿದ್ದು ಕೂಡದೆ ಹೋಗುತ್ತಿತ್ತು. ಚತುಷ್ಪಾತ್ ಎಂದು ಹೇಳಬೇಕಿತ್ತು. ಜೀವನಿಗೆ ಭೇದವಿದೆ ಎಂದು ಇಟ್ಟುಕೊಂಡಿದ್ದರೆ ಸ್ವರೂಪಭೂತವಾದುದು ಮೂರು ಪಾದಗಳಾದುದರಿಂದ ತ್ರಿಪಾತ್ ಎಂದು ಹೇಳಿದ್ದು ಯುಕ್ತವಾಗುವುದು) ಸುವರ್ಚಲಾ, ಸಂಜ್ಞಾ ಎಂದು ಇಬ್ಬರು ಸೂರ್ಯನ ಹೆಂಡಂದಿಯರು ಇವರಿಗೆ ಭೇದವಿದ್ದರೂ ಸುವರ್ಚಲೆಯು ಸಂಜ್ಞಾದೇವಿಯ ಅಂಶಳೆಂದು ಹೇಗೆ ಹೇಳಲ್ಪಡುತ್ತಾಳೋ, ಹೀಗೆಯೇ ಜೀವರಿಗೂ ಶ್ರೀಹರಿಗೂ ಭೇದವಿದ್ದರೂ ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ಜೀವರು ಶ್ರೀಹರಿಯ ಅಂಶರು. ಎನಿಸುತ್ತಾರೆ. ॥ ೧ ೨, ೩, ೪, ೫, ೬, ೭, ೮, ೯ ॥ ೫-೧೨ ॥ ॥ ೬ ॥

**ಹನ್ನೆರಡನೇ ಖಂಡವು ಮುಗಿಯಿತು.**

## ೧೩ನೇ ಖಂಡವು

ಹೀ—ಪರಬ್ರಹ್ಮನಿಗೆ ತನ್ನ ಉಪಾಸನೆಗೆ ಅನುಗುಣವಾದ ಫಲವನ್ನು ಕೊಡತಕ್ಕ ದ್ವಾರಪಾಲಕತನವೆಂಬ ಮಹಿಮೆಯನ್ನು ಹೇಳುತ್ತಾರೆ—

**ಉ. ॥ ತಸ್ಯ ಹ ವಾ ಏತಸ್ಯ ಹೃದಯಸ್ಯ ಪಂಚ ದೇವಸುಷಯಃ ಸ**

**ಯೋಽಸ್ಯ ಪ್ರಾಙ್ ಸುಷಿಃ ಸ ಪ್ರಾಣಸ್ತಚ್ಚಕ್ಷುಃ ಸ ಆದಿತ್ಯಸ್ತದೇತತ್ತೇಜೋಽನ್ನಾದ್ಯಮಿತ್ಯುಪಾಸೀತ ತೇಜಸ್ವ್ಯನ್ನಾದೋ ಭವತಿ ಯ ಏವಂ ವೇದ ॥ ೧ ॥**

ಅ ॥ ಶ್ರೀಹರಿಯು ಇರುವ ಹೃದಯದಿಂದ ದೇವತೆಗಳು ಹೊರಟುಹೋಗತಕ್ಕ ಮಾರ್ಗಗಳು ಐದು ಇವೆ. ಅವುಗಳನ್ನು ಪಾಸನೆ ಮಾಡಬೇಕು. (ಕ್ರಮವಾಗಿ ಐದು ದ್ವಾರಗಳನ್ನೂ ದ್ವಾರಪಾಲಕರನ್ನೂ ಹೇಳುತ್ತಾರೆ—) ಹೃದಯಕ್ಕೆ (ಹೃದಯನೆನಿಸಿದ ಶ್ರೀಹರಿಗೆ) ಪೂರ್ವದ್ವಾರವು. ಆ ದ್ವಾರಕ್ಕೆ ಪಾಲಕನು ಪ್ರಾಣನು, ಅಂದರೆ—ಪ್ರಾಣನೆನಿಸಿಕೊಂಡ ಜಡವಾದ ಶ್ವಾಸ ವಾಯುವಿಗೆ ಅಭಿಮಾನಿಯು. ಪ್ರಾಣಾಭಿಮಾನಿಯೇ ಚಕ್ಷುರಭಿಮಾನಿಯು. ಚಕ್ಷುರಭಿಮಾನಿಯೇ ಆದಿತ್ಯನು. ಪ್ರಾಣಚಕ್ಷುಸ್ಸುಗಳಿಗೆ ಅಭಿಮಾನಿಯಾದ ಆದಿತ್ಯನು ಪೂರ್ವದ್ವಾರಕ್ಕೆ ಅಧಿಪತಿಯು. ತೇಜಸ್ಸು ಅನ್ನಾದಿಗಳಿಗೆ ಅಭಿಮಾನಿಯು ಎಂದು ಉಪಾಸನೆ ಮಾಡಬೇಕು. ಹೀಗೆ ಉಪಾಸನೆ ಮಾಡುವವನು ತೇಜಸ್ಸುಳ್ಳವನೂ ಯಥೇಷ್ಟ ಅನ್ನವನ್ನುಣ್ಣುವವನೂ ಆಗುತ್ತಾನೆ. (ಅಂದರೆ – ಆದಿತ್ಯನ ಗುಣಗಳಾದ ತೇಜಸ್ಸು ಮೊದಲಾದವುಗಳ ಅಂಶಗಳಲ್ಲಿ ಕೆಲವು ಭಾಗಗಳನ್ನು ಹೊಂದುತ್ತಾನೆ.) ॥ ೧ ॥

**ಉ. ॥ ಅಥ ಯೋಽಸ್ಯ ದಕ್ಷಿಣಃ ಸುಷಿಃ ಸ ವ್ಯಾನಸ್ತಚ್ಛ್ರೋತ್ರಂ ಸ ಚಂದ್ರಮಾಸ್ತದೇತಚ್ಛ್ರೀಶ್ಚ ಯಶಶ್ಚೇತ್ಯುಪಾಸೀತ ಶ್ರೀಮಾನ್ಯಶಸ್ವೀ ಭವತಿ ಯ ಏವಂ ವೇದ ॥ ೨ ॥**

ಅ ॥ ಈ ಹೃದಯಕ್ಕೆ ದಕ್ಷಿಣದ್ವಾರವಿದೆ. ಆ ದ್ವಾರಕ್ಕೆ ಅಧಿಪತಿಯು, ವ್ಯಾನನೆನಿಸಿದ ಜಡ ವಾಯುವಿನ ವ್ಯಾಪಾರಕ್ಕೆ ಅಧಿಪತಿಯು. ವ್ಯಾನಾಭಿಮಾನಿಯೇ ಶ್ರೋತ್ರಕ್ಕೆ ಅಭಿಮಾನಿಯು. ಶ್ರೋತ್ರಾಭಿಮಾನಿಯು ಚಂದ್ರನು. ವ್ಯಾನ, ಶ್ರೋತ್ರಗಳಿಗೆ ಅಭಿಮಾನಿಯಾದ ಚಂದ್ರನು ದಕ್ಷಿಣದ್ವಾರಕ್ಕೆ ಅಧಿಪತಿಯು, ಲಾವಣ್ಯರೂಪನು ಸರ್ವದಿಕ್ಕುಗಳಲ್ಲಿ ವ್ಯಾಪ್ತವಾದ ಕೀರ್ತಿಯುಳ್ಳವನು ಎಂದು ಉಪಾಸನೆ ಮಾಡಬೇಕು. ಹೀಗೆ ಉಪಾಸನೆ ಮಾಡಿದವನು ಸಪಂತ್ತುಳ್ಳವನೂ ಯಶಸ್ಸುಳ್ಳವನೂ ಆಗುತ್ತಾನೆ. (ಚಂದ್ರನ ಗುಣಗಳಾದ ಲಾವಣ್ಯಾದಿಗಳ ಕೆಲವಂಶಗಳನ್ನು ಹೊಂದುತ್ತಾನೆ.) ॥ ೨ ॥

**ಉ. ॥ ಅಥ ಯೋಽಸ್ಯ ಪ್ರತ್ಯಙ್ಸುಷಿಃ ಸೋಽಪಾನಃ ಸಾ ವಾಕ್ ಸೋಽಗ್ನಿಸ್ತದೇತದ್ಬ್ರಹ್ಮವರ್ಚಸಮನ್ನಾದ್ಯಮಿತ್ಯುಪಾಸೀತ ಬ್ರಹ್ಮವರ್ಚಸ್ಯನ್ನಾದೋ ಭವತಿ ಯ ಏವಂ ವೇದ ॥ ೩ ॥**

ಅ ॥ ಹೃದಯಕ್ಕೆ ಪಶ್ಚಿಮದಲ್ಲಿ ದ್ವಾರವಿದೆ. ಆ ದ್ವಾರಕ್ಕೆ ಅಧಿಪತಿಯು ಅಪಾನವಾಯ್ವಭಿಮಾನಿಯು. ಅವನೇ ವಾಗಿಂದ್ರಿಯಕ್ಕೆ ಅಭಿಮಾನಿಯು. ವಾಗಭಿಮಾನಿಯು ಅಗ್ನಿಯು. ಹೀಗೆ ಅಪಾನ, ವಾಗಿಂದ್ರಿಯಗಳಿಗೆ ಅಭಿಮಾನಿಯಾದ ಪಶ್ಚಿಮದ್ವಾರಕ್ಕೆ ಅಧಿಪತಿಯಾದ ಅಗ್ನಿಯು, ವೇದಾಧ್ಯಯನದಿಂದುಂಟಾದ ತೇಜಸ್ಸಿಗೂ, ಅನ್ನಾದ್ಯಕ್ಕೂ ಅಭಿಮಾನಿಯೆಂದು ಉಪಾಸನೆ ಮಾಡಬೇಕು. ಹೀಗೆ ಉಪಾಸನೆ ಮಾಡುವವನು ವೇದಾಧ್ಯಯನದಿಂದುಂಟಾದ ತೇಜಸ್ಸುಳ್ಳವನೂ ಯಥೇಷ್ಟ ಅನ್ನವನ್ನುಣ್ಣುವವನೂ ಆಗುತ್ತಾನೆ. (ಅಂದರೆ-ಅಗ್ನಿಯ ಗುಣಗಳಾದ ತೇಜಸ್ಸು ಮೊದಲಾದವುಗಳ ಕೆಲವಂಶಗಳನ್ನು ಹೊಂದುತ್ತಾನೆ.) ॥ ೩ ॥

**ಉ. ॥ ಅಥ ಯೋಽಸ್ಯೋದಙ್ಸುಷಿಃ ಸ ಸಮಾನಸ್ತನ್ಮನಃ ಸ ಪರ್ಜನ್ಯಸ್ತದೇತತ್ಕೀರ್ತಿಶ್ಚ ವ್ಯುಷ್ಟಿಶ್ಚೇತ್ಯುಪಾಸೀತ ಕೀರ್ತಿಮಾನ್ ವ್ಯುಷ್ಟಿಮಾನ್ಭವತಿ ಯ ಏವಂ ವೇದ ॥ ೪ ॥**

ಅ || ಹೃದಯದ ಉತ್ತರದಲ್ಲಿ ದ್ವಾರವಿದೆ. ಆ ದ್ವಾರಕ್ಕೆ ಅಧಿಪತಿಯು ಸಮಾನ ವಾಯ್ವಭಿಮಾನಿಯು. ಅವನೇ ಮನೋಽಭಿಮಾನಿಯು. ಆತನು ಪರ್ಜನ್ಯನೆನಿಸಿದ ಇಂದ್ರನು. ಸಮಾನವಾಯು, ಮನಸ್ಸು ಇವುಗಳಿಗೆ ಅಭಿಮಾನಿಯಾದ ಉತ್ತರದ್ವಾರಕ್ಕೆ ಅಧಿಪತಿಯಾದ ಇಂದ್ರನು ಕೀರ್ತಿಯುಳ್ಳವನು, ಐಶ್ವರ್ಯವುಳ್ಳವನು ಎಂದುಪಾಸನೆ ಮಾಡಬೇಕು. ಹೀಗೆ ತಿಳಿದವನು ಕೀರ್ತಿಯುಳ್ಳವನೂ ಐಶ್ವರ್ಯವುಳ್ಳವನೂ ಆಗುತ್ತಾನೆ. (ಇಂದ್ರನ ಗುಣಗಳಾದ ಕೀರ್ತಿ ಮೊದಲಾದವುಗಳ ಕೆಲವಂಶಗಳನ್ನು ಹೊಂದುತ್ತಾನೆ.) || ೪ ||

**ಉ. || ಅಥ ಯೋಽಸ್ಯೋರ್ಧ್ವಃ ಸುಷಿಃ ಸ ಉದಾನಃ ಸ ವಾಯುಃ ಸ ಆಕಾಶಸ್ತದೇತದೋಜಶ್ಚ ಮಹಶ್ಚೇತ್ಯುಪಾಸೀತೌಜಸ್ವೀ ಮಹಸ್ವಾನ್ ಭವತಿ ಯ ಏವಂ ವೇದ || ೫ ||**

ಅ || ಹೃದಯಕ್ಕೆ ಮೇಲೆ ದ್ವಾರವಿದೆ. ಮೇಲಿನ ದ್ವಾರಕ್ಕೆ ಅಧಿಪತಿಯು ಉದಾನವಾಯುವಿನ ಅಭಿಮಾನಿಯು. ಅವನೇ ಮುಖ್ಯ ವಾಯುವು. ಅವನೇ ಸರ್ವಜ್ಞನಾದುದರಿಂದ ಆಕಾಶನೆನಿಸುತ್ತಾನೆ. ಮೇಲಿನ ದ್ವಾರಕ್ಕೆ ಅಧಿಪತಿಯೂ ಉದಾನವಾಯುವಿಗೆ ಅಭಿಮಾನಿಯೂ ಆದ ಮುಖ್ಯ ವಾಯುವನ್ನು ಉತ್ಕೃಷ್ಟನೂ ಪೂರ್ಣನೂ ಎಂದು ಉಪಾಸನೆ ಮಾಡಬೇಕು. ಹೀಗೆ ತಿಳಿದವನು ತೇಜಸ್ಸುಳ್ಳವನೂ ತನ್ನ ಯೋಗ್ಯತಾನುಸಾರ ಗುಣಪೂರ್ತಿಯುಳ್ಳವನೂ ಆಗುತ್ತಾನೆ || ೫ ||

**ಉ. || ತೇ ವಾ ಏತೇ ಪಂಚ ಬ್ರಹ್ಮಪುರುಷಾಃ ಸ್ವರ್ಗಸ್ಯ ಲೋಕಸ್ಯ ದ್ವಾರಪಾಃ ಸ ಯ ಏತಾನೇವಂ ಪಂಚ ಬ್ರಹ್ಮಪುರುಷಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ವೇದಾಸ್ಯ ಕುಲೇ ವೀರೋ ಜಾಯತೇ ಪ್ರತಿಪದ್ಯತೇ ಸ್ವರ್ಗಂ ಲೋಕಂ ಯ ಏತಾನೇವಂ ಪಂಚ ಬ್ರಹ್ಮಪುರುಷಾನ್ ಸ್ವರ್ಗಸ್ಯ ಲೋಕಸ್ಯ ದ್ವಾರಪಾನ್ವೇದ || ೬ ||**

ಅ || ಈ ಸೂರ್ಯ, ಚಂದ್ರ, ಅಗ್ನಿ, ಇಂದ್ರ ಮುಖ್ಯ ವಾಯುಗಳು ಐವರು ಹೃದಯದಲ್ಲಿರತಕ್ಕ ಪರಬ್ರಹ್ಮನಿಗೆ ದ್ವಾರಪಾಲಕರು ಸ್ವರೂಪಭೂತವಾದ ಕ್ರೀಡಾಜ್ಞಾನಸ್ವರೂಪವಾದ ವಿಷ್ಣುಲೋಕಕ್ಕೂ *ದ್ವಾರಪಾಲಕರು. ಹೀಗೆ ತಿಳಿದವನ ವಂಶದಲ್ಲಿ ವೀರನು ಹುಟ್ಟುತ್ತಾನೆ. ಶ್ರೇಷ್ಠಸಂತಾನವಾಗುತ್ತದೆ. ಈ ಜ್ಞಾನದಿಂದ ಮೋಕ್ಷವನ್ನು ಹೊಂದುತ್ತಾನೆ. || ೬ ||

**ಪೀ** — **ತ್ರಿಪಾದಸ್ಯಾಮೃತಂ ದಿವಿ** ಎಂದು ದ್ಯುಲೋಕದಲ್ಲಿದ್ದ ನಾರಾಯಣಾದಿ ಮೂರು ರೂಪಗಳಿಗೂ **ಯೋಽಯಮಂತರ್ಹೃದಯ ಆಕಾಶಃ** ಎಂದು ಹೇಳಿದ ಹೃದಯದಲ್ಲಿರತಕ್ಕ ರೂಪಕ್ಕೂ ಭೇದವಲ್ಲ, ಅಭೇದವೇ ಎನ್ನುತ್ತಾರೆ —

**ಉ. || ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ನಂತಃಪುರುಷೇ ಜ್ಯೋತಿಸ್ತಸ್ಯೈಷಾ ದೃಷ್ಟಿಃ || ೭ ||**

---

* ಜಯವಿಜಯಾದಿಗಳು ಹೊರಗಿನ ದ್ವಾರಪಾಲಕರು ಸೂರ್ಯಾದಿಗಳು ಒಳಗಿನ ದ್ವಾರಪಾಲಕರು

ಅ || ದ್ವಾರಪಾಲಕನನ್ನು ಪಾಸನೆ ಮಾಡಬೇಕೆಂದು ಹೇಳಿ ಮರಳಿ ಭಗವನ್ಮಹಾತ್ಮ್ಯೆಯನ್ನು ಹೇಳುತ್ತಾರೆ— **ತ್ರಿಪಾದಸ್ಯಾಮೃತಂ ದಿವಿ** ಎಂದು ದ್ಯುಲೋಕದಲ್ಲಿ (ಶ್ವೇತದ್ವೀಪ ಅನಂತಾಸನ ವೈಕುಂಠ ಗಳಲ್ಲಿ) ಇರತಕ್ಕ ನಾರಾಯಣ ವಾಸುದೇವ ವೈಕುಂಠರೆಂಬ ಮೂರು ರೂಪಗಳು, ಸರ್ವಲೋಕಗಳಿಂದ ಎತ್ತರಗಳಾದ, ಮೇರು ವೈಜಯಂತ ಸತ್ಯಲೋಕಗಳೆಂಬ ಬ್ರಹ್ಮನ ಮಂದಿರಗಳಿಗಿಂತ ಎತ್ತರಗಳಾದ, ಇವುಗಳಿಗಿಂತ ಬೇರೊಂದು ಉತ್ತಮಲೋಕಗಳಿಲ್ಲದಿರುವ, ಸರ್ವೋತ್ಕೃಷ್ಟಗಳಾದ ಶ್ವೇತದ್ವೀಪ ಅನಂತಾ ಸನ ವೈಕುಂಠಗಳಲ್ಲಿ **ಪೃಥಿವ್ಯಾಂ ದ್ಯೌಃ** ಎಂಬ ಪ್ರಮಾಣದಿಂದ ದ್ಯು ಎನಿಸಿಕೊಂಡ ಮೇರು, ಸೂರ್ಯ ಮಂಡಲ, ಇಂದ್ರಸದನಗಳೆಂಬ ಮೂರು ಲೋಕಗಳಿಂದ ಕ್ರಮವಾಗಿ ಮೇಲೆ ಇದ್ದವುಗಳಾಗಿ ಪ್ರಕಾಶಿಸಿ ಕೊಂಡಿವೆ. ಜ್ಯೋತಿಃ ಎನಿಸಿಕೊಂಡ ಆ ಮೂರು ರೂಪಗಳೇ ಜೀವರ ಹೃದಯದೊಳಗಿನ ರೂಪಗಳು. ಜೀವರೊಳಗೆ ಪ್ರಾಣಾಗ್ನಿಯಲ್ಲಿರತಕ್ಕ ಜ್ಯೋತಿಃ ಎನಿಸಿಕೊಂಡ ಶ್ರೀಹರಿಯ ಸಾಕ್ಷಾತ್ಕಾರವಿದು. || ೭ ||

**ಉ. || ಯತ್ರೈತದಸ್ಮಿಂಚ್ಛರೀರೇ ಸಂಸ್ಪರ್ಶೇನೋಷ್ಣಿಮಾನಂ ವಿಜಾ-ನಾತಿ ತಸ್ಯೈಷಾ ಶ್ರುತಿರ್ಯತ್ರೈತತ್ಕರ್ಣಾವಪಿಗೃಹ್ಯ ನಿನದಮಿವ ನದಥು-ರಿವಾಗ್ನೇರಿವ ಪ್ರಜ್ವಲತ ಉಪಶೃಣೋತಿ ತದೇತದ್ದೃಷ್ಟಂ ಚ ಶ್ರುತಂ ಚೇತ್ಯು-ಪಾಸೀತ ಚಕ್ಷುಷ್ಯಃ ಶ್ರುತೋ ಭವತಿ ಯ ಏವಂ ವೇದ ಯ ಏವಂ ವೇದ || ಇತಿ ತ್ರಯೋದಶಃ ಖಂಡಃ || ೫-೧೩ || || ೮ ||**

ಅ || ಯಾವ ಈ ಶರೀರದಲ್ಲಿ ಹಸ್ತಸ್ಪರ್ಶದಿಂದ ಔಷ್ಣ್ಯವನ್ನು ತಿಳಿಯುವುದೇ ಸಾಕ್ಷಾತ್ಕಾರವು. (ಅಂದರೆ—ತ್ವಗಿಂದ್ರಿಯದಿಂದ ಶರೀರದಲ್ಲಿರತಕ್ಕ ಅಗ್ನಿಯಲ್ಲಿ ಔಷ್ಣ್ಯವು ತೋರುವುದು) ಅಗ್ನಿಗೆ ನಿಯಾ ಮಕನು ಪ್ರಾಣನು. ಪ್ರಾಣನಲ್ಲಿ ಅಂತರ್ಗತನು, ಭಗವಂತನು ಹೀಗೆ ತಿಳಿಯುವುದರಿಂದ ಶ್ರೀಹರಿಯನ್ನು ತಿಳಿದಂತೆ ಆಗುವುದು. ಹೃದಯದಲ್ಲಿರತಕ್ಕ ಶ್ರೀಹರಿಯ ಸ್ತೋತ್ರವನ್ನು ಮುಖ್ಯಪ್ರಾಣನು ಮಾಡು ತ್ತಾನೆ. ಸ್ತೋತ್ರವು ಧ್ವನಿಯು. (ಪುರುಷರ ಒಳಗೆ ಮುಖ್ಯಪ್ರಾಣನು ಇದ್ದು ಸ್ತೋತ್ರ ಮಾಡುವುದರಿಂದ ಆ ಸ್ತೋತ್ರಕ್ಕೆ ವಿಷಯನು ಪರಬ್ರಹ್ಮನೆಂದು ಸಿದ್ಧಿಸುತ್ತದೆ) (ಆ ಸ್ತೋತ್ರವು ಯಾವುದೆಂದರೆ—) ಯಾವಾಗ ಕಿವಿಗಳನ್ನು ಕೈಗಳಿಂದ ಮುಚ್ಚಿಕೊಂಡು ಇರುವ ಪುರುಷನು ಸಮುದ್ರದ ಧ್ವನಿಯಂತೆಯೂ ಮೇಘಗರ್ಜನೆಯಂತೆಯೂ ಜ್ವಲಿಸುವ ಬೆಂಕಿಯ ಧ್ವನಿಯಂತೆಯೂ ಈ ಶಬ್ದವನ್ನು ಕೇಳುತ್ತಾನೆ. ಇದೇ ಧ್ವನಿಯು. (ಹೀಗೆಯೇ ಉಪಾಸನೆ ಮಾಡಬೇಕೆನ್ನುತ್ತಾರೆ—) ಆ ಈ ಹೃದಯಾಕಾಶದಲ್ಲಿರತಕ್ಕ ಜ್ಯೋತೀರೂಪ ಬ್ರಹ್ಮನು ಈ ಕಾರಣದಿಂದ ಅನುಮೇಯನು (ತಿಳಿಯಲ್ಪಡುವವನು) ವೇದದಲ್ಲಿ ವರ್ಣಿಸ ಲ್ಪಡುವವನು. ಎಂದುಪಾಸನೆ ಮಾಡಬೇಕು ಹೀಗೆ ತಿಳಿದು ಉಪಾಸನೆ ಮಾಡಿ ಪ್ರತ್ಯಕ್ಷವಾಗಿ ತಿಳಿದವನು ದಿವ್ಯಜ್ಞಾನವುಳ್ಳವನೂ, ಉತ್ತಮ ಕೀರ್ತಿಯುಳ್ಳವನೂ ಆಗಿ ಮುಕ್ತನಾಗುತ್ತಾನೆ. || ೫-೧೩ || || ೮ ||

ಟೀ—೧ನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ –

**ಭಾ. || (೧) ಪ್ರಾಣಾಭಿಮಾನೀ ಚಕ್ಷುಶ್ಚ ಸೂರ್ಯ ಏವ ಹ್ಯುದಾಹೃತಃ | ತೇಜೋ-ಽನ್ನಾದ್ಯಭಿಮಾನೀ ಚ ಪ್ರಾಗ್ದ್ವಾರಾ(ರೇಽ)ಧಿಪತಿರ್ಹರೇಃ || (೨) ದಕ್ಷಿಣಾಧಿಪತಿಃ ಸೋಮೋ ವ್ಯಾನಃ ಶ್ರೋತ್ರಾಭಿಮಾನವಾನ್ | ಯಶೋಲಾವಣ್ಯರೂಪಶ್ಚ || (೩) ಪಶ್ಚಿ-ಮದ್ವಾರಪಸ್ತಥಾ | ವಾಗಪಾನಾತ್ಮಕೋ ವಹ್ನಿರ್ಬ್ರಹ್ಮತೇಜೋಽನ್ನದೇವತಾ || (೪) ಉ-ತ್ತರದ್ವಾರಪಸ್ತ್ವಿಂದ್ರಃ ಸಮಾನೋ ಮನಆತ್ಮಕಃ | ಕೀರ್ತ್ಯೈಶ್ವರ್ಯಾತ್ಮಕೋ ನಿತ್ಯಂ||(೫)**

**ಊರ್ಧ್ವದ್ವಾರಪ ಏವ ಚ । ಪ್ರಧಾನವಾಯುರಾಕಾಶಃ ಸಾರ್ವಜ್ಞ್ಯಾ(ಪ್ರಕಾಶ್ಯಾ)ದುನ್ನತೇ-ಸ್ತಥಾ । ಉದಾನ ಊರ್ಜಿತತ್ವಾತ್ಸ ಓಜಃಪೂರ್ಣತ್ವತೋ ಮಹಃ ॥ (೬) ಪರಸ್ಯ ಬ್ರಹ್ಮ-ಣಸ್ತ್ವೇತೇ ಪುರುಷಾಃ ಪಂಚ ಕೀರ್ತಿತಾಃ । ದ್ವಾರಪಾ ಹೃದಯೇ ಚೈವ ವಿಷ್ಣುಲೋಕೇ ಚ ಸರ್ವದಾ । ಅಂತರದ್ವಾರಪಾ ಹ್ಯೇತೇ ಜಯಾದ್ಯಾ ಬಾಹ್ಯತಃ ಸ್ಮೃತಾಃ ॥ (೭) ಏವ-ಮೇತಾನುಪಾಸ್ಯೈವ ತದ್ಗುಣಾಂಶಾಂಶಭಾಗ್ಭವೇತ್ । ವಿಷ್ಣುಲೋಕಂ ತಥಾ ಗಚ್ಛೇದ್ಭವೇ-ದಪಿ ಸುಸಂತತಿಃ　　॥ ೧ ॥**

ಅ ॥ (೧) ಶ್ವಾಸವಾಯುವಿಗೆ ಅಭಿಮಾನಿಯೂ ಚಕ್ಷುರಿಂದ್ರಿಯಕ್ಕೆ ಅಭಿಮಾನಿಯೂ ಸೂರ್ಯನೇ. ಅವನು ಶ್ರೀಹರಿಯ ಪೂರ್ವದ್ವಾರಕ್ಕೆ ಅಧಿಪತಿಯೆಂದೂ, ತೇಜಸ್ಸು ಅನ್ನಾದಿಗಳಿಗೆ ಅಭಿಮಾನಿಯೆಂದೂ ಉಪಾಸನೆ ಮಾಡಬೇಕು. (೨) ಸೋಮನು ದಕ್ಷಿಣದ್ವಾರಕ್ಕೆ ಅಧಿಪತಿಯು. ವ್ಯಾನಾಖ್ಯವಾಯುವಿಗೆ, ಅಭಿಮಾನಿಯು. ಶ್ರೋತ್ರಕ್ಕೆ ಅಧಿಪತಿಯು. ಕೀರ್ತಿಯುಳ್ಳವನು, ಲಾವಣ್ಯ ಸ್ವರೂಪನು. (೩) ವಾಗಿಂದ್ರಿಯಕ್ಕೆ ಅಧಿಪತಿಯಾದ ಅಗ್ನಿಯು ಪಶ್ಚಿಮದ್ವಾರಕ್ಕೆ ಅಧಿಪತಿಯು. ಅಪಾನ ವಾಯುವಿಗೆ ಅಧಿಪತಿಯು. ವೇದಾಧ್ಯಯನದಿಂದುಂಟಾದ ತೇಜಸ್ಸುಳ್ಳವನು. ಅನ್ನಾದಿಗಳಿಗೆ ಅಧಿಪತಿಯು. (೪) ಉತ್ತರ ದ್ವಾರಕ್ಕೆ ಅಧಿಪತಿಯಾದ ಇಂದ್ರನು ಸಮಾನವಾಯುವಿಗೂ ಮನಸ್ಸಿಗೂ ಅಧಿಪತಿಯು. ನಿತ್ಯದಲ್ಲಿ ಕೀರ್ತಿ ಐಶ್ವರ್ಯ ಸ್ವರೂಪನು (೫) ಮೇಲಿನ ದ್ವಾರಕ್ಕೆ ಅಧಿಪತಿಯಾದ ಪ್ರಧಾನವಾಯುವು ಸರ್ವಜ್ಞನಾದುದರಿಂದ ಆಕಾಶನೆಂದೂ, ಎಲ್ಲರಿಗಿಂತ ಮೇಲೆ ಇರುವುದರಿಂದ ಉದಾನನೆಂದೂ, ಸರ್ವೋತ್ಕೃಷ್ಟನಾದುದರಿಂದ ಊರ್ಜಿತನೆಂದೂ, ಗುಣಪೂರ್ಣನಾದುದರಿಂದ ಮಹಃ ಎಂದೂ ಅನಿಸುತ್ತಾನೆ. (೬) ಈ ಐದು ಮಂದಿ ಪುರುಷರು ಹೃದಯದಲ್ಲಿದ್ದ ಪರಬ್ರಹ್ಮನ ದ್ವಾರಪಾಲಕರು ವಿಷ್ಣುಲೋಕಕ್ಕೂ ದ್ವಾರ ಪಾಲಕರು ಇವರು ಒಳಗಿನ ದ್ವಾರಪಾಲಕರು. ಜಯವಿಜಯಾದಿಗಳು ಹೊರಗಿನ ದ್ವಾರಪಾಲಕರು. (೭) ಹೀಗೆ ಈ ದೇವತೆಗಳನ್ನು ಪಾಸನೆಮಾಡಿಯೇ ಆದಿತ್ಯಾದಿಗಳ ಗುಣಗಳ ಕೆಲವಂಶಗಳನ್ನು ಹೊಂದುವರು ಅವರಿಗೆ ಸತ್ಪುತ್ರರು ಹುಟ್ಟುತ್ತಾರೆ ಅವರು ಕೊನೆಗೆ ವೈಕುಂಠಕ್ಕೆ ಹೋಗುತ್ತಾರೆ　　॥ ೧ ॥

**ಭಾ. ॥ (೧) ಯೋಽಸೌ ವೈಕುಂಠಗೋ ವಿಷ್ಣುಃ ಸಪ್ತಲೋಕೋಪರಿ ಸ್ಥಿತಃ । ಸ ಏವ ಸರ್ವಲೋಕೇಷು ವಿಶ್ವತೋ ಬ್ರಹ್ಮಣಸ್ತಥಾ ॥ ಉಚ್ಚೇಷೂತ್ತಮಲೋಕೇಷು ತಥಾ ಪ್ರತ್ಯವರೇಷು ಚ । ಪುರುಷೇಷು ಚ ಸರ್ವೇಷು ಸ ಏಕಃ ಸಂವ್ಯವಸ್ಥಿತಃ ॥ (೨) ಪ್ರಾಣ ಸಂಸ್ಥಃ ಸ ವೈ ವಿಷ್ಣುಃ ಪ್ರಾಣೋಽಗ್ನೌ ಸಂವ್ಯವಸ್ಥಿತಃ । ಸ್ಪರ್ಶೇನ ದೃಶ್ಯತೇ ಚಾಗ್ನಿಸ್ತ-ದ್ದೃಷ್ಟಿರಿವ ಸಾ ತತಃ ॥ (೩) ಸ ಪ್ರಾಣಃ ಸ್ತೌತಿ ತಂ ವಿಷ್ಣುಂ ಸಾ ಸ್ತುತಿಃ ಶ್ರೂಯತೇ ಸದಾ । ಕರ್ಣೌ ಪಿಧಾಯ ತದ್ವಿದ್ವಾನ್ ದಿವ್ಯಚಕ್ಷುಃ ಸುಕೀರ್ತಿಮಾನ್ ॥ ಮುಕ್ತೋ ಭೂತ್ವಾ ಭವೇದ್ಯಸ್ಮಾದುಪಾಸೀತೈವ ಸಂ(ತಂ)ತತಂ । ಇತಿ ಸತ್ತತ್ತ್ವೇ(ಸಂಸ್ತವೇ)　　॥ ೨ ॥**

ಅ ॥ (೧) ಏಳು ಲೋಕಗಳಿಗಿಂತ ಮೇಲೆ ಇರುವ ವೈಕುಂಠಲೋಕದಲ್ಲಿ ಯಾವ ವಿಷ್ಣುವೋ, ಶ್ವೇತ ದ್ವೀಪ ಅನಂತಾಸನಗಳಲ್ಲಿ ಯಾವ ವಿಷ್ಣುವೋ, ಅವನೇ ಸರ್ವಲೋಕಗಳಿಗಿಂತಲೂ ಬ್ರಹ್ಮನ ಮಂದಿರ ಗಳಿಂದಲೂ ಎತ್ತರಗಳಾದ, ಇದಕ್ಕಿಂತ ಬೇರೆ ಉತ್ತಮ ಲೋಕವಿಲ್ಲದಿರುವ ಶ್ವೇತದ್ವೀಪ, ಅನಂತಾಸನ, ವೈಕುಂಠಲೋಕಗಳಲ್ಲಿಯೂ ಎಲ್ಲಾ ಪುರುಷರಲ್ಲಿಯೂ ಇರುತ್ತಾನೆ (೨ ವಿಷ್ಣುವು ಪ್ರಾಣನಲ್ಲಿರುವವನು, ಪ್ರಾಣನು ಅಗ್ನಿಯಲ್ಲಿರುವವನು. ಅಗ್ನಿಯು ಮುಟ್ಟಿದೊಡನೆ ತ್ವಗಿಂದ್ರಿಯದಿಂದ ತಿಳಿಯಲ್ಪಡುತ್ತಾನೆ ಅದು

ಕಾರಣ ಆ ಜ್ಞಾನವು ಅಗ್ನಿಯನ್ನಾಶ್ರಯಿಸಿರುವ ಪ್ರಾಣನಲ್ಲಿರತಕ್ಕ ವಿಷ್ಣುವಿನ ಜ್ಞಾನದಂತೆ ಆಗುವುದು. (೩) ಪ್ರಾಣನು ವಿಷ್ಣುವನ್ನು ಸ್ತೋತ್ರಮಾಡುತ್ತಾನೆ ಆ ಸ್ತೋತ್ರವು ಎರಡು ಕಿವಿಗಳನ್ನು ಕೈಗಳಿಂದ ಚೆನ್ನಾಗಿ ಮುಚ್ಚಿಕೊಂಡಿದ್ದವನಿಗೆ ಕೇಳುತ್ತದೆ. ಹೀಗೆ ತಿಳಿದವನು ದಿವ್ಯವಾದ ಜ್ಞಾನವುಳ್ಳವನೂ, ಕೀರ್ತಿಯುಳ್ಳವನೂ ಆಗಿ ಮುಕ್ತನಾಗುತ್ತಾನೆ ಅದುಕಾರಣ ನಿರಂತರವೂ ಹೀಗೆಯೇ ಉಪಾಸನೆ ಮಾಡುತ್ತಿರಬೇಕು. ಹೀಗೆ ಸತ್ತತ್ತ್ವ(ಸಂಸ್ತವ)ವೆಂಬ ಗ್ರಂಥದಲ್ಲಿದೆ ॥ ೨ ॥

ಟೀ—ಕೀರ್ತಿ ಯಶಃಶಬ್ದಗಳಿಗೆ ಬೇರೆ ಬೇರೆ ಅರ್ಥವೆನ್ನುತ್ತಾರೆ—

**ಭಾ. ॥ (೧) ದಿಕ್ಷು ಯಾನಾದ್ಯಶೋ ವ್ಯಾಪ್ತಂ ಕೀರ್ತಿಃ ಪ್ರತ್ಯಕ್ಷತಃ ಸ್ತುತಿಃ । ಇತಿ ಶಬ್ದನಿರ್ಣಯೇ ॥ (೨) ಸರ್ವತಃ ಪೃಷ್ಠೇಷು ಸರ್ವತ ಉಚ್ಚೇಷು ವೈಕುಂಠಕ್ಷೀರಸಾಗರಾನಂತಾಸನಾದಿಷು ವಿಶ್ವತೋ ಬ್ರಹ್ಮಣೋಽಪ್ಯುಚ್ಚೇಷು ತತ ಉತ್ತಮೋ(ಽನ್ಯೋ) ನಾಸ್ತೀತ್ಯನುತ್ತಮಾಃ । ಸರ್ವತಃ ಸ್ವಯಮುತ್ತಮಾಃ ॥ (೩) ಪೃಥಿವೀಸ್ಥೇಷು ಸರ್ವೇಭ್ಯೋ ಲೋಕೋಽನಂತಾಸನಾತ್ಮಕಃ । ಅಂತರಿಕ್ಷಾತ್ಮಕೇಭ್ಯಶ್ಚ ಶ್ವೇತದ್ವೀಪೇ ಸ್ಥಿತೋ ಹರಿಃ । ದ್ಯ್ವಾತ್ಮಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ ॥ (೪) ಪೃಥಿವ್ಯಾಂ ದ್ಯೌರ್ಮಹಾಮೇರುರಾಕಾಶೇ ಸೂರ್ಯಮಂಡಲಂ । ದಿವೀಂದ್ರಸದನಂ ಚೈವ ತತ್ಪರೇ ತು ದಿವಃ ಪರೇ ॥ (೫) ಪೃಥಿವ್ಯಾಂ ಬ್ರಹ್ಮಣೋ ಮೇರೌ ಜಯಂತಂ (ಜಾಯಂತೇ) ತ್ವಂತರಿಕ್ಷಗಂ । ತೃತೀಯಂ ಸತ್ಯಲೋಕಂ(ಕೇ) ಚ ಸದನಂ ತ್ರಿವಿಧಂ ಸ್ಮೃತಂ ॥ ತೇಭ್ಯೋಽನಂತಾಸನಾದ್ಯಾ ಯತ್ಪರತೋ ವಿಶ್ವತಃ ಪರೇ । ಇತಿ ಸತ್ತತ್ತ್ವೇ ॥ (೬) ನಿನದಃ ಸಮುದ್ರಘೋಷಃ ಸ್ಯಾನ್ನದಥುರ್ಮೇಘಸಂಭವಃ । ಇತಿ ಚ (ಸತ್ತತ್ತ್ವೇ) ॥ ಚಕ್ಷುಷ್ಯಶ್ಚಕ್ಷುಷಿ ಬ್ರಹ್ಮಣ್ಯೇವ ಯಾತೀತ್ಯುಪಾಸಕಃ । ಇತಿ ಚ ॥ ೧, ೨, ೩, ೪, ೫, ೬, ೭, ೮ ॥ ಇತಿ ತ್ರಯೋದಶಃ ಖಂಡಃ ॥ ೫—೧೩ ॥ ॥ ೩ ॥**

ಅ ॥ (೧) ಸರ್ವದಿಕ್ಕುಗಳಲ್ಲಿಯೂ ಪ್ರಖ್ಯಾತವಾದ ಮಹಿಮೆಯು ಯಶಃ ಎನಿಸುತ್ತದೆ. ಇದಿರಿನಲ್ಲಿ ಪ್ರತ್ಯಕ್ಷವಾಗಿ ಹೇಳಲ್ಪಡುವ ಮಹಿಮೆಯು ಕೀರ್ತಿಯೆನಿಸುತ್ತದೆ ಎಂದು ಶಬ್ದ ನಿರ್ಣಯದಲ್ಲಿದೆ (೨) ಸರ್ವತಃ ಪೃಷ್ಠೇಷು=ಎಲ್ಲಾ ಲೋಕಗಳಿಗಿಂತಲೂ ಎತ್ತರಗಳಾದ ವೈಕುಂಠ ಕ್ಷೀರಸಾಗರ ಅನಂತಾಸನ ಮೊದಲಾದವುಗಳಲ್ಲಿ. ವಿಶ್ವತಃ=ಮೇರು ವೈಜಯಂತ ಸತ್ಯಲೋಕಗಳೆಂಬ ಬ್ರಹ್ಮದೇವರ ಮಂದಿರಗಳಿಂದಲೂ ಉನ್ನತಗಳಾದ ಆ ಲೋಕಗಳಿಗಿಂತ ಉತ್ತಮವಾದ ಲೋಕವು ಬೇರೆ ಇಲ್ಲದಿರುವುದರಿಂದ ಅವುಗಳು ಅನುತ್ತಮಗಳು ಎಲ್ಲಾ ಲೋಕಗಳಿಂದಲೂ ವೈಕುಂಠಾದಿ ಲೋಕಗಳೇ ಉತ್ತಮಗಳು (೩) (ವೈಕುಂಠಲೋಕವು ಎಲ್ಲಾ ಲೋಕಗಳಿಗಿಂತ ಮೇಲೆ ಎಂಬುದು ಯುಕ್ತವು. ಕ್ಷೀರಸಮುದ್ರದಲ್ಲಿರುವ ಶ್ವೇತದ್ವೀಪವೂ ಭೂಮಿಯಲ್ಲಿರುವ ಅನಂತಾಸನವೂ, ಸರ್ವಲೋಕಗಳಿಗಿಂತ ಮೇಲಿನದ್ದೆಂಬುದು ಹೇಗೆ ಕೂಡುತ್ತದೆಂದರೆ—) ಭೂಮಿಯಲ್ಲಿರತಕ್ಕ ಎಲ್ಲಾ ಲೋಕಗಳಲ್ಲಿ ಅತ್ಯುತ್ತಮವಾದ ಲೋಕವು ಅನಂತಾಸನವು. ಅಂತರಿಕ್ಷದಲ್ಲಿರುವ ಎಲ್ಲಾ ಲೋಕಗಳಿಗಿಂತ ಶ್ವೇತದ್ವೀಪವು ಶ್ರೇಷ್ಠವು ಉನ್ನತವು ದ್ಯು ಎನಿಸಿಕೊಳ್ಳುವ ಎಲ್ಲಾ ಲೋಕಗಳಿಗಿಂತ ವೈಕುಂಠವು ಉನ್ನತವು (೪) (ದ್ಯುಲೋಕದಲ್ಲಿದ್ದ ಮೂರ್ತಿತ್ರಯುವು ದಿವಃಪರವಾಗುವುದು ಹೇಗೆಂದರೆ) ಪೃಥಿವಿಯಲ್ಲಿ ಮಹಾ ಮೇರುಪರ್ವತವು ದ್ಯು ಎಂದೂ, ಆಕಾಶದಲ್ಲಿ ಸೂರ್ಯಮಂಡಲವು ದ್ಯು ಎಂದೂ, ಸ್ವರ್ಗದಲ್ಲಿ ಇಂದ್ರದೇವರ ಮಂದಿರವು

ದ್ಯು ಎಂದೂ ಅನ್ನಿಸುತ್ತದೆ. ಮೇರುಪರ್ವತ ಮೊದಲಾದವುಗಳಿಂದ ಮೇಲೆ ಇದ್ದುದು *ದಿವಃಪರ ಎನಿಸುತ್ತದೆ. (೫) (ಸತ್ಯಲೋಕಕ್ಕಿಂತ ಎತ್ತರವಾದ ವೈಕುಂಠವು ಮೇರು ಮೊದಲಾದವುಗಳಿಂದೆಲ್ಲವುಗಳಿಂದಲೂ ಎತ್ತರವಾದರೂ ಶ್ವೇತದ್ವೀಪ ಅನಂತಾಸನಗಳು ಉನ್ನತಗಳಾಗಲಾರವು, ಎಂದರೆ—) ಬ್ರಹ್ಮನಿಗೆ ಭೂಲೋಕದಲ್ಲಿ ಮೇರುಪರ್ವತದಲ್ಲಿ ಮನೆಯು, ಅಂತರಿಕ್ಷ ಲೋಕದಲ್ಲಿ ವೈಜಯಂತವು, ‡ಮೂರನೆಯದು ಸತ್ಯಲೋಕವು ಹೀಗೆ ಮೂರು ಮನೆಗಳಿವೆ. ಅವುಗಳಿಂದ ಮೇಲೆ ಇರುವ ಅನಂತಾಸನಾದಿಗಳು **ವಿಶ್ವತಃ ಪರೇ** ಎನಿಸುತ್ತವೆ. (೬) ರಥದ ಧ್ವನಿಯಂತಿರುವುದು ನಿನದವು. (ಎತ್ತಿನ ಧ್ವನಿಯಂತಿರುವುದು ನದಥು ಎಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ.) ಸಮುದ್ರದ ಧ್ವನಿಯು ನಿನದವು, ಮೇಘ ಧ್ವನಿಯು ನದಥು ಎನಿಸುತ್ತದೆ. ಉಪಾಸಕನು ಸರ್ವದಾ ಬ್ರಹ್ಮನನ್ನೇ ತಿಳಿಯುತ್ತಿರುವುದರಿಂದ **ಚಕ್ಷುಷ್ಯಃ** ಎನಿಸುತ್ತಾನೆ. ॥ ೫—೧೩ ॥ ॥ ೩ ॥

**ಹದಿಮೂರನೇ ಖಂಡವು ಮುಗಿಯಿತು.**

## ೧೪ನೇ ಖಂಡವು

**ಪೀ**—ಹೃದಯದೊಳಗಿನ ಭಗವದ್ರೂಪಕ್ಕೂ ಹೃದಯದ ಹೊರಗಿನ ಭಗವದ್ರೂಪಕ್ಕೂ ಐಕ್ಯ ಹೇಳಿದ್ದು ಯುಕ್ತವಲ್ಲ, ಹೃದಯದೊಳಗಣ ರೂಪವು ಅಣುವಾದುದು. ಬಾಹ್ಯರೂಪವು ಮಹತ್ತಾದುದು. ಚಿಕ್ಕರೂಪಕ್ಕೂ ದೊಡ್ಡರೂಪಕ್ಕೂ ಐಕ್ಯವು ಕೂಡಲಾರದೆಂದರೆ—

**ಉ. ॥ ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತಾಥ ಖಲು ಕ್ರತುಮಯಃ ಪುರುಷೋ ಯಥಾ ಕ್ರತುರಸ್ಮಿಁಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ॥ ೧ ॥**

ಅ ॥ ಹೃದಯದಲ್ಲಿದ್ದ ಪರಬ್ರಹ್ಮನು ಸರ್ವರೊಳಗೆ ಇದ್ದುದರಿಂದ ಅತಿ ಸಮೀಪದಲ್ಲಿದ್ದವನು, ಗುಣ ಪರಿಪೂರ್ಣನು, ವ್ಯಾಪ್ತನು ಪ್ರಲಯಜಲಕ್ಕೆ ಆಶ್ರಯನು. ಹೀಗೆ ಉಪಾಸಕನು ತಿಳಿಯಬೇಕು. (ಏಕೆ ಹೀಗೆ ತಿಳಿಯಬೇಕೆಂದರೆ —) ಜೀವನು ಜ್ಞಾನಪ್ರಧಾನನು. ಲೋಕದಲ್ಲಿ ಜೀವನು ಶ್ರೀಹರಿಯಲ್ಲಿ ಎಂತಹ ನಿಶ್ಚಯವುಳ್ಳವನಾಗುತ್ತಾನೋ ಅದಕ್ಕೆ ಯೋಗ್ಯವಾದ ಫಲವುಳ್ಳವನಾಗುತ್ತಾನೆ. ಅಂದರೆ—ಮರಣ ಹೊಂದಿದಮೇಲೆ ಮೋಕ್ಷದಲ್ಲಿ ತನಗೆ ಯೋಗ್ಯವಾದ ಜ್ಞಾನಕ್ಕೆ ಅನುಸಾರಿಯಾದ ಫಲವುಳ್ಳವನಾಗುತ್ತಾನೆ. ಆದುಕಾರಣ ಅಧಿಕಾರಿಯು ತನಗೆ ಯೋಗ್ಯವಾದ ಶ್ರೀಹರಿಯ ಜ್ಞಾನವನ್ನು ಸಂಪಾದಿಸಬೇಕು. ॥ ೧ ॥

**ಪೀ**—ಬೇರೆ ರೀತಿಯಾಗಿಯೂ ಶ್ರೀಹರಿಯ ಜ್ಞಾನವನ್ನು ಸಂಪಾದಿಸಬೇಕೆನ್ನುತ್ತಾರೆ—

* ಪೃಥಿವಿಯಲ್ಲಿ ಮಹಾ ಮೇರುಪರ್ವತವು ದ್ಯು ಎನಿಸಿಕೊಳ್ಳುವುದರಿಂದ ಅದಕ್ಕಿಂತ ಮೇಲೆ ಇದ್ದ ಉತ್ತಮವಾದ ಅನಂತಾಸನವು ದಿವಃಪರವೆಂದೂ, ಆಕಾಶದಲ್ಲಿ ಸೂರ್ಯಮಂಡಲವು ದ್ಯು ಎನಿಸಿಕೊಳ್ಳುವುದರಿಂದ ಅದಕ್ಕಿಂತ ಮೇಲೆ ಇದ್ದ ಶ್ವೇತದ್ವೀಪವು ದಿವಃಪರವೆಂದೂ, ಸ್ವರ್ಗದಲ್ಲಿ ಇಂದ್ರನ ಮಂದಿರವು ದ್ಯು ಎನಿಸಿಕೊಳ್ಳುವುದರಿಂದ ಅದಕ್ಕಿಂತ ಮೇಲೆ ಇದ್ದ ವೈಕುಂಠವು ದಿವಃಪರವೆಂದೂ ಎನಿಸುತ್ತದೆ.

‡ ಮೇರುವಿನಲ್ಲಿರತಕ್ಕ ಬ್ರಹ್ಮನ ಮನೆಗಿಂತ ಅನಂತಾಸನವೂ, ಅಂತರಿಕ್ಷದಲ್ಲಿರತಕ್ಕ ವೈಜಯಂತಕ್ಕಿಂತ ಶ್ವೇತದ್ವೀಪವೂ, ಸತ್ಯಲೋಕದಲ್ಲಿದ್ದ ಮನೆಗಿಂತ ವೈಕುಂಠವೂ ಎತ್ತರವಾಗಿರುವುದರಿಂದ ಅವುಗಳು ವಿಶ್ವತಃ ಪೃಷ್ಠ (ಉನ್ನತ) ಗಳೆನಿಸುತ್ತವೆ.

**ಉ. || ಮನೋಮಯಃ ಪ್ರಾಣಶರೀರೋ ಭಾರೂಪಃ ಸತ್ಯಸಂಕಲ್ಪ ಆಕಾಶ ಆತ್ಮಾ ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವ-ಮಿದಮಭ್ಯಾತ್ತೋಽವಾಕ್ಯನಾದರಃ || ೨ ||**

**ಅ ||** ಪೂರ್ಣ ಜ್ಞಾನವುಳ್ಳವನು, ಬಲಾತ್ಮಕ ಶರೀರವುಳ್ಳವನು, ಪ್ರಕಾಶ ಸ್ವರೂಪನು, ಸತ್ಯ ಸಂಕಲ್ಪವುಳ್ಳವನು, ಚೆನ್ನಾಗಿ ಪ್ರಕಾಶಿಸಿಕೊಂಡಿರುವವನು, ವ್ಯಾಪ್ತನು, ಅವರವರಿಗೆ ನಿಯಾಮಕನಾಗಿ ಸರ್ವ ಕರ್ಮಗಳನ್ನು ಮಾಡಿಸುವವನು, ಸಮಸ್ತ ಇಷ್ಟಾರ್ಥಗಳನ್ನು ಹೊಂದಿದವನು, ಸರ್ವ ಶುಭಗಂಧ ಸ್ವರೂಪನು, ಸರ್ವ ಶುಭರಸಸ್ವರೂಪನು, ಸಮಸ್ತ ಜಗತ್ತನ್ನು ಹೊಂದಿದವನು, ಸಾಮಾನ್ಯ ಜನರಂತೆ ಅರ್ಥವಿಲ್ಲದ ಮಾತನ್ನಾಡದಿರುವವನು, ತನ್ನನ್ನು ತಾನೇ ಹೊಗಳದಿರುವವನು. || ೨ ||

**ಪೀ—**ಹೃದಯದೊಳಗಿನ ಅಣುರೂಪಕ್ಕೆ ಬಾಹ್ಯವಾದ ದೊಡ್ಡ ರೂಪದಿಂದ ಐಕ್ಯ ಹೇಳಲಿಕ್ಕಾಗಿ ಅಣುತ್ವವನ್ನು ಹೇಳಿಕೊಂಡು ಮಹತ್ವವನ್ನು ಹೇಳುತ್ತಾರೆ—

**ಉ. || ಏಷ ಮ ಆತ್ಮಾಂತರ್ಹೃದಯೇಽಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ ಶ್ಯಾಮಾಕಾದ್ವಾ ಶ್ಯಾಮಾಕತಂಡುಲಾದ್ವೈಷ ಮ ಆತ್ಮಾಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾ ಜ್ಯಾಯಾನಂತರಿಕ್ಷಾಜ್ಜ್ಯಾ-ಯಾನ್ ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ || ೩ ||**

**ಅ ||** ನನ್ನ ಹೃದಯದೊಳಗಿರುವ ಪರಮಾತ್ಮನು ಬತ್ತ ಅಥವಾ ಯವ (ಜೋಗು ಇದ್ದ ಬತ್ತ) ಸಾಸಿವೆ, ಶ್ಯಾಮೆ ಅಕ್ಕಿ ಇವುಗಳಿಂದ ಅತ್ಯಂತ ಅಣುವಾಗಿರುತ್ತಾನೆ ಆ ಹೃದಯದೊಳಗಣ ಪರಮಾತ್ಮನು ಭೂಲೋಕದಿಂದಲೂ, ಅಂತರಿಕ್ಷ ಲೋಕದಿಂದಲೂ, ಸ್ವರ್ಗದಿಂದಲೂ, ಈ ಲೋಕಗಳಿಂದಲೂ ಅತಿ ಸ್ಥೂಲನಾದವನು, ದೊಡ್ಡ ಪರಿಮಾಣವುಳ್ಳವನು. || ೩ ||

**ಪೀ—**ಒಬ್ಬನಲ್ಲೇ ಅಣುತ್ವಮಹತ್ತ್ವಾದಿಗಳು ಲೋಕದೃಷ್ಟಿಯಿಂದ ವಿರುದ್ಧಗಳಂತೆ ತೋರಿದರೂ ಶ್ರೀಹರಿಗೆ ಅಚಿಂತ್ಯ ಐಶ್ವರ್ಯವಿದ್ದುದರಿಂದ ಸರ್ವಗುಣಗಳಿವೆಂಬುದು ಪ್ರಮಾಣಸಿದ್ಧವಾಗಿದೆ, ಎನ್ನುತ್ತಾರೆ—

**ಉ. || ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ ಸರ್ವ-ಮಿದಮಭ್ಯಾತ್ತೋಽವಾಕ್ಯನಾದರ ಏಷ ಮ ಆತ್ಮಾಂತರ್ಹೃದಯ ಏತದ್ಬ್ರ-ಹ್ಮೈತಮಿತಃ ಪ್ರೇತ್ಯಾಭಿಸಂಭವಿತಾಸ್ಮೀತಿ ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾ-ಸ್ತೀತಿ ಹ ಸ್ಮಾಹ ಶಾಂಡಿಲ್ಯಃ ಶಾಂಡಿಲ್ಯಃ || ಇತಿ ಚತುರ್ದಶಃ ಖಂಡಃ || || ೫-೧೪ || || ೪ ||**

**ಅ ||** §................ನನ್ನ ಹೃದಯದೊಳಗಣ ಶ್ರೀಪರಮಾತ್ಮನು ಅಣುತ್ವ ಮಹತ್ತ್ವಾದಿ ಗುಣಗಳುಳ್ಳವನು. ಸರ್ವ ಗುಣಗಳಿರುವವನು ..............ಮರಣಾನಂತರ ನನ್ನಿಂದ ಉಪಾಸಿಸಲ್ಪಡುವ

§ ಹಿಂದಿನಂತೆ ಅರ್ಥ.

ಭಗವದ್ರೂಪವನ್ನು ನಾನು ಹೊಂದುವವನಾಗುತ್ತೇನೆಂದು ಯಾರಿಗೆ ನಿಶ್ಚಯವಿದೆಯೋ, ಆ ವಿಷಯದಲ್ಲಿ ಯಾರಿಗೆ ಸಂದೇಹವಿಲ್ಲವೋ, ಆತನು ಪುರುಷೋತ್ತಮನನ್ನು ನಿಶ್ಚಯವಾಗಿಯೂ ಹೊಂದುತ್ತಾನೆ. ಹೀಗೆ ಶಾಂಡಿಲ್ಯರೆಂದು ಪ್ರಸಿದ್ಧರಾದ ಋಷಿಗಳು ಹೇಳಿರುವರು. (ಇದರಿಂದ ಮೇ=ನನ್ನ ಎಂಬ ಮಾತು ಶಾಂಡಿಲ್ಯರದ್ದು ಎಂದು ತಿಳಿಯಬೇಕು.) ॥ ೫ - ೧೪ ॥ ॥ ೪ ॥

ಹೀ—ಸಮಸ್ತ ಜಗತ್ತು ಬ್ರಹ್ಮರೂಪವು ಹೇಗೆಂದರೆ—ತಜ್ಜಲಾನಿತಿ= ತಜ್ಜ=) ಬ್ರಹ್ಮನಿಂದ ಹುಟ್ಟಿದ್ದು (ತಲ್ಲ=) ಬ್ರಹ್ಮನಲ್ಲಿಯೇ ಲಯ ಹೊಂದತಕ್ಕದು (ಅನಿತಿ=) ಆ ಕಾಲದಲ್ಲಿ ಚೇಷ್ಟೆ (ವ್ಯಾಪಾರ) ಯನ್ನು ಮಾಡುತ್ತಿರುವುದು ಹೀಗೆ ಬ್ರಹ್ಮರೂಪವಾಗಿಯೇ ಮೂರು ಕಾಲಗಳಲ್ಲಿರುವುದು. ಪ್ರತ್ಯೇಕ ಜಗತ್ತು ಇಲ್ಲ. ಮಿಥ್ಯೆಯು. ಈ ರೀತಿ ಪರರು ಅರ್ಥ ಹೇಳಿದ್ದು ಯುಕ್ತವಲ್ಲ. ಆ ವಿಷಯದಲ್ಲಿ ಪ್ರಮಾಣ ವಿಲ್ಲ. ಮತ್ತು ಅದಕ್ಕೆ ಪ್ರಮಾಣವಿರೋಧವೂ ಅದೆ ಎನ್ನುತ್ತಾರೆ—

**ಭಾ. ॥ (೧) ಇದಂ ಬ್ರಹ್ಮಾತಿಸಾಮಿಪ್ಯಾತ್ಸರ್ವಂ ಪೂರ್ಣಗುಣತ್ವತಃ । ತಚ್ಚ ಬ್ರಹ್ಮಜಲಾನ್ನಾಕ್ನಾದ್ಯೋಽಸೌ ವಿಷ್ಣುರ್ಜಲೇಽನಿತಿ ॥ (೨) ಆನೀದವಾತಮಿತಿ ಯಂ ವೇದವಾಗವದತ್ ಸ್ಫುಟಂ । ಅಪ್ರಕೇತೇ ತು ಸಲಿಲೇ ಬ್ರಹ್ಮ ನಾರಾಯಣೋಽಪಿ ಸಃ (ಹಿ) । ಇತಿ ಶಾಂತ ಉಪಾಸೀತ ಯಸ್ಮಾಜ್ಜ್ಞಾನಮಯಃ ಪುಮಾನ್ ॥ (೩) ಕ್ರತುಸ್ತು ನಿಶ್ಚಿತಂ ಜ್ಞಾನಂ ತದ್ವಶಃ ಪುರುಷೋ ಮೃತೌ । ತಸ್ಮಾದ್ವಿನಿಶ್ಚಿತಂ ಜ್ಞಾನಂ ಕುರ್ಯಾದ್ವಿಷ್ಣೌ ಮಹಾಗುಣೇ ॥ (೪) ಮಹಾಜ್ಞಾನಾತ್ಮಕತ್ವಾತ್ತು ಪ್ರೋಕ್ತೋ ವಿಷ್ಣುರ್ಮನೋಮಯಃ । ಯ(ತ)ಸ್ಮಾದ್ಬಲಶರೀರೋಽಸಾವತಃ ಪ್ರಾಣಶರೀರಕಃ ॥ (೫) ಆ ಸಮಂತಾತ್ಪ್ರಕಾಶಾತ್ಸ ಆಕಾಶಾತ್ಮಾ ಪ್ರಕೀರ್ತಿತಃ । ಸರ್ವಗಂಧಾದಿರೂಪಶ್ಚ ಭೋಕ್ತಾ ಚೈಷಾಂ ಸದೈವ ಹಿ । ಇತಿ ನಿಶ್ಚಯಕೃದ್ಯಾತಿ ತಮೇವ ಪುರುಷೋತ್ತಮಂ ॥ ಇತಿ ಸದ್ಗುಣೇ ॥ (೬) ಏಕತ್ರ ಸರ್ವಗಂಧಾದಿನಾ ಚಿದಾನಂದಾತ್ಮಕಸರ್ವಗಂಧಾದಿರೂಪತ್ವಮುಚ್ಯತೇ । ಅನ್ಯತ್ರ ತದ್ಭೋಕ್ತೃತ್ವಂ॥ ॥ ೧, ೨, ೩, ೪ ॥ ಇತಿ ಚತುರ್ದಶಃ ಖಂಡಃ ॥ ೫–೧೪ ॥ ॥ ೧ ॥**

ಅ ॥ (೧) (೧ನೇ ಮಂತ್ರದ ಅರ್ಥ ಹೇಳುತ್ತಾರೆ-) ಬ್ರಹ್ಮನು ಸರ್ವರ ಹೃದಯದೊಳಗಿದ್ದುದರಿಂದ ಅತಿಸಾಮಿಪ್ಯವಿದ್ದಪ್ರಯುಕ್ತ **ಇದಂ** ಎಂದೂ, ಗುಣಪೂರ್ಣನಾದುದರಿಂದ **ಬ್ರಹ್ಮ**ನೆಂದೂ ಅನಿಸುತ್ತಾನೆ. ಈ ವಿಷ್ಣುವು ಮುಖ್ಯವಾಗಿ ಪ್ರಲಯಜಲದಲ್ಲಿ ಕ್ರೀಡಿಸಿಕೊಂಡಿರುವುದರಿಂದ **ಜಲಾನ್** ಎಂದು ಅನಿಸುತ್ತಾನೆ. (೨) (ಆ ವಿಷಯದಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ-) ಯಾವ ಬ್ರಹ್ಮನನ್ನು ‡**ಆನೀದವಾತಂ** ಎಂಬ ವೇದವಾಕ್ಯವು ಸ್ಪಷ್ಟವಾಗಿ ಹೇಳುತ್ತದೋ ಅವನೇ ಬ್ರಹ್ಮನು ಏಕೆಂದರೆ—ಅಪರಿಮಿತವಾದ ಅಗಾಧವಾದ ಲಕ್ಷ್ಮೀರೂಪವಾದ ಪ್ರಲಯಜಲದಲ್ಲಿ ಸುಖವಾಗಿರುವವನು ಪರಬ್ರಹ್ಮನೇ. (ಬೇರೆ ಯಾರೂ ಇರುವುದಿಲ್ಲ.) (ಆವಿಷಯದಲ್ಲಿ ಇನ್ನೊಂದು ಪ್ರಮಾಣಹೇಳುತ್ತಾರೆ—) ಆವಿಷ್ಣುವು §ನಾರಾಯಣ

‡ ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ ॥ ಪ್ರಲಯಕಾಲದಲ್ಲಿ ಸರ್ವೋತ್ತಮನಾದ ಬ್ರಹ್ಮನೊಬ್ಬನೇ ವಾಯುವಿನ ಸಹಾಯವೂ ಇಲ್ಲದೆ ಸುಖವಾಗಿಯೇ ಚೇಷ್ಟೆಯನ್ನು ಮಾಡುತ್ತಿದ್ದನು. (ಸುಖಪ್ರಾಪ್ತಿಗಾಗಿ ಅಲ್ಲ.) ಆವನಿಂದ ಬೇರೆ ಸರ್ವೋತ್ತಮವಾದುದು ಯಾವುದೂ ಇಲ್ಲ ಲಕ್ಷ್ಮೀದೇವಿಯು ಅಪರಿಮಿತ ಜಲರೂಪಳಾಗಿ ಪ್ರಲಯ ಕಾಲದಲ್ಲಿದ್ದಳು ಆ ನೀರಿನಿಂದ ಎಲ್ಲಾ ವಸ್ತುವೂ ಅಡಗಿಕೊಂಡಿತ್ತು.

§ ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ । ಅಯನಂ ತಸ್ಯತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥ ಎಂಬ ಸ್ಮೃತಿಯಿಂದ ನಾರಾಯಣನೆಂದರೆ ಪ್ರಲಯ ಜಲದಲ್ಲಿ ಮಲಗಿರುವವನೆಂದೇ ಪ್ರಸಿದ್ಧನು

ಎಂಬ ಶಬ್ದದಿಂದಲೂ ಹೇಳಲ್ಪಡುತ್ತಾನೆ. ಅದುಕಾರಣ ಶಮದಮಾದಿಸಂಪನ್ನನಾದ ಅಧಿಕಾರಿಯು ಜ್ಞಾನಪ್ರಧಾನನಾದುದರಿಂದ ಹಿಂದೆ ಹೇಳಿದ ಪ್ರಕಾರ ತಿಳಿದುಕೊಂಡು ಉಪಾಸನೆಮಾಡಬೇಕು. (೩) ಕ್ರತು ಎಂದರೆ ನಿಶ್ಚಿತಜ್ಞಾನವೇ. ಮುಕ್ತಿಗಾಗಿ ಪುರುಷನ ಜ್ಞಾನದ ಅಧೀನನಾಗುತ್ತಾನೆ. (ಅಂದರೆ -- ತನಗೆ ಯೋಗ್ಯವಾದ ಜ್ಞಾನದಿಂದ ಮೋಕ್ಷವನ್ನು ಹೊಂದುತ್ತಾನೆ.) ಆದಕಾರಣ ಮಹಾಗುಣಗಳುಳ್ಳ ವಿಷ್ಣುವಿನಲ್ಲಿ ನಿಶ್ಚಿತವಾದ ಜ್ಞಾನವನ್ನು ಸಂಪಾದಿಸಬೇಕು. (ಅಂದರೆ ಅಧಿಕಾರಿಯು ಸ್ವಯೋಗ್ಯವಾದ ಜ್ಞಾನಾನುಸಾರ ಫಲ ಹೊಂದುವುದರಿಂದ ತನ್ನ ಯೋಗ್ಯತಾನುಸಾರ ನಿಶ್ಚಯಜ್ಞಾನರೂಪವಾದ ಶ್ರೀಹರಿಯ ಉಪಾಸನೆಯನ್ನು ಮಾಡಬೇಕು ಉಪಾಸನೆ ಮಾಡದಿದ್ದರೆ ಸ್ವಯೋಗ್ಯವಾದ ಫಲವು ಸಿಗಲಾರದು.) (೪) (೨ನೇ ಮಂತ್ರದ ಅರ್ಥ ಹೇಳುತ್ತಾರೆ--) ವಿಷ್ಣುವು ಪೂರ್ಣಜ್ಞಾನಸ್ವರೂಪನಾದುದರಿಂದ ಮನೋಮಯನೆಂದೂ, ಬಲಶರೀರವುಳ್ಳವನಾದುದರಿಂದ ಪ್ರಾಣಶರೀರನೆಂದೂ ಅನಿಸುತ್ತಾನೆ (೫) ಚೆನ್ನಾಗಿ ಪ್ರಕಾಶಿಸಿಕೊಂಡಿರುವುದರಿಂದ ಆಕಾಶನೆಂದೂ ಅನಿಸುತ್ತಾನೆ. ಸರ್ವ ಸುಗಂಧಾದಿಗಳ ಸ್ವರೂಪನು ಸರ್ವದಾ ಸುಗಂಧಾದಿಗಳನ್ನು ಭೋಜಿಸುವವನು. ಹೀಗೆ ನಿಶ್ಚಯಜ್ಞಾನವಿದ್ದವನು ಆ ಶ್ರೀಹರಿಯನ್ನೇ ಹೊಂದುತ್ತಾನೆ, ಎಂದು ಸದ್ಗುಣ ಎಂಬ ಗ್ರಂಥದಲ್ಲಿದೆ. (೬) ೨ನೇ ಮಂತ್ರದಲ್ಲಿದ್ದ ಸರ್ವಗಂಧಾದಿಪದದಿಂದ ಶ್ರೀಹರಿಯು ಚಿದಾನಂದಾತ್ಮಕವಾದ ಸರ್ವ ಗಂಧಾದಿಸ್ವರೂಪನೆಂದೂ ೪ನೇ ಮಂತ್ರದಲ್ಲಿದ್ದ ಸರ್ವ ಗಂಧಾದಿಪದದಿಂದ ಗಂಧಾದಿಗುಣಗಳನ್ನನುಭವಿಸುವವನೆಂದೂ ಅನಿಸುತ್ತಾನೆ. ||೫-೧೪||೧||

**ಹದಿನಾಲ್ಕನೇ ಖಂಡವು ಮುಗಿಯಿತು**

---

# ೧೫ನೇ ಖಂಡವು

**ಪೀ--ಏಭ್ಯೋ ಲೋಕೇಭ್ಯೋ ಜ್ಯಾಯಾನ್** ಎಂಬಲ್ಲಿ ಶ್ರೀಹರಿಯು ಶ್ರೇಷ್ಠನೆಂದು ಹೇಳಿದೆ. ಪರಂತು ಆಕಾಶದಂತೆಯೇ ಶರೀರವಿಲ್ಲದವನೆಂಬ ಬುದ್ಧಿಯನ್ನು ಹೋಗಲಾಡಿಸುವುದಕ್ಕಾಗಿ ಶರೀರದಿಂದಲೇ ಶ್ರೇಷ್ಠನೆಂದು ತೋರಿಸುತ್ತಾ ವಾಯುದೇವರನ್ನು ಹುಟ್ಟಿಸತಕ್ಕ ಬಾಹು ಮೊದಲಾದ ಅವಯವಗಳುಳ್ಳವನೆಂದು ಶ್ರೀಹರಿಯನ್ನುಪಾಸನೆ ಮಾಡಬೇಕೆನ್ನುತ್ತಾರೆ --

**ಉ. || ಅಂತರಿಕ್ಷೋದರಃ ಕೋಶೋ ಭೂಮಿಬುಧ್ನೋ ನ ಜೀರ್ಯತಿ ದಿಶೋ ಹ್ಯಸ್ಯ ಸ್ರಕ್ತಯೋ ದ್ಯೌರಸ್ಯೋತ್ತರಂ ಬಿಲಂ ಸ ಏಷ ಕೋಶೋ ವಸುಧಾನಸ್ತಸ್ಮಿನ್ ವಿಶ್ವಮಿದಂ ಶ್ರಿತಂ || ೧ ||**

**ಅ ||** ಆನಂದ ಇಚ್ಛಾಸ್ವರೂಪನಾದುದರಿಂದ ಕೋಶನೆನಿಸಿಕೊಂಡ ಶ್ರೀಹರಿಯು ಹೊಟ್ಟೆಯಲ್ಲಿ ಅಂತರಿಕ್ಷಲೋಕವುಳ್ಳವನು. ಪಾದಮೂಲಗಳಲ್ಲಿ ಭೂಮಿಯುಳ್ಳವನು. ನಿತ್ಯದಲ್ಲಿಯೂ ಮುಪ್ಪು ಇಲ್ಲದವನು ಇವನ ನಾಲ್ಕು ತೋಳುಗಳು ಧರ್ಮಜ್ಞಾನಾದಿಗಳನ್ನು ಹೊಂದಿಸಿಕೊಡುವುದರಿಂದ ದಿಕ್ ಎಂದು ಹೆಸರುಳ್ಳವುಗಳು, ದಿಕ್ಕನ್ನು ಆಶ್ರಯಿಸಿವೆ. (ಅಂದರೆ -- ಬಾಹುಗಳಲ್ಲಿ ದಿಕ್ಕುಗಳಿವೆ,) ಶಿರಸ್ಸಿನ ವಿವರದಲ್ಲಿ ದ್ಯುಲೋಕವಿದೆ ಆ ಈ ಕೋಶನೆನಿಸಿದ ಶ್ರೀಹರಿಯು ದೇವತೆಗಳ ಸಮೂಹಕ್ಕೆ ಆಶ್ರಯನು. ಕೋಶನೆನಿಸಿದ ಶ್ರೀವಿಷ್ಣುವಿನಲ್ಲಿ ಸಮಸ್ತ ಜಗತ್ತು ಆಶ್ರಿತವಾಗಿದೆ. || ೧ ||

**ಪೀ--** ತೋಳುಗಳು ದಿಕ್ಕುಗಳಲ್ಲಿವೆ ಎಂದು ಹೇಳಿಯದೆ. ಅವುಗಳಲ್ಲಿ ಯಾವ ತೋಳು ಯಾವ ದಿಕ್ಕನ್ನು ಪ್ರೇರೇಪಿಸುತ್ತದೆ. ಹೆಸರೇನು? ಆಯುಧವು ಯಾವುದೆಂದರೆ--

**ಉ. ॥ ತಸ್ಯ ಪ್ರಾಚೀ ದಿಕ್ ಜುಹೂರ್ನಾಮ ಸಹಮಾನಾ ನಾಮ ದಕ್ಷಿಣಾ ರಾಜ್ಞೀ ನಾಮ ಪ್ರತೀಚೀ ಸುಭೂತಾ ನಾಮೋದೀಚೀ ತಾಸಾಂ ವಾಯುರ್ವತ್ಸಃ ಸ ಯ ಏತಮೇವಂ ವಾಯುಂ ದಿಶಾಂ ವತ್ಸಂ ವೇದ ನ ಪುತ್ರರೋದꣳ ರೋದಿತಿ ಸೋಽಹಮೇತಮೇವಂ ವಾಯುಂ ದಿಶಾಂ ವತ್ಸಂ ವೇದ ಮಾ ಪುತ್ರರೋದꣳ ರುದಂ ॥ ೨ ॥**

**ಅ ॥** ಕೋಶನೆನಿಸಿದ ಶ್ರೀಹರಿಗೆ ಪೂರ್ವದಿಕ್ಕಿಗೆ ಆಶ್ರಯವಾದ ಪ್ರಾಚೀ ಎಂದು ಹೆಸರುಳ್ಳ ಪೂರ್ವ ದಿಕ್ಕಿನಲ್ಲಿರುವ ಬಲಭಾಗದ ಮೇಲಿನ ತೋಳು ಭಕ್ತರಿಗೆ ಅಭೀಷ್ಟವನ್ನು ಕೊಡುವುದು, ಭಕ್ತಿಯಿಂದ ಕೊಟ್ಟ ದ್ದನ್ನು ತೆಗೆದುಕೊಳ್ಳುವುದು, ಉಣ್ಣುವುದು ಇವುಗಳಿಂದ **ಜುಹೂಃ** ಎನಿಸುತ್ತದೆ. ಅಥವಾ ಚಕ್ರಾಯುಧ ದಿಂದ ಶತ್ರುಗಳನ್ನು ಸಂಹರಿಸುವುದಕ್ಕಾಗಿ ಕೈಯಲ್ಲಿ ಚಕ್ರವನ್ನು ಧರಿಸಿರುವುದರಿಂದ (ಅಂದರೆ—ಶತ್ರು ಗಳನ್ನು ನಾಶಗೊಳಿಸುವ ಚಕ್ರವುಳ್ಳ ತೋಳು) **ಜುಹೂಃ** ಎನಿಸುತ್ತದೆ. ಪ್ರಸಿದ್ಧ. ದಕ್ಷಿಣ ದಿಕ್ಕಿನಲ್ಲಿರುವ, ದಕ್ಷಿಣ ದಿಕ್ಕಿಗೆ ಆಶ್ರಯವಾದ ಬಲಭಾಗದ ಕೆಳಗಿನ ತೋಳು ವೇದಾಭಿಮಾನಿ ದೇವತೆಯು ಅಭಿಮಾನಿ ಯಾಗಿ ಉಳ್ಳ, ಶಂಖದಿಂದೊಡಗೂಡಿರುವುದರಿಂದ **ಸಹಮಾನ** ಎನಿಸುತ್ತದೆ. ಪಶ್ಚಿಮ ದಿಕ್ಕಿನಲ್ಲಿರುವ ಪಶ್ಚಿಮ ದಿಕ್ಕಿಗೆ ಆಶ್ರಯವಾದ ಎಡಗೈಯ ಮೇಲಿನ ತೋಳು ಕಾಂತಿಯಿರುವ ಗದಾರೂಪ ಆಯುಧ ದಿಂದೊಡಗೂಡಿರುವುದರಿಂದ ಅಥವಾ ದೈತ್ಯರ ರಕ್ತದಿಂದ ಕೆಂಪಾಗಿರುವುದರಿಂದ ರಾಜೀ ಎನಿಸಿಕೊಂಡ ಗದೆಯಿಂದೊಡಗೂಡಿರುವುದರಿಂದ **ರಾಜ್ಞೀ** ಎನಿಸುತ್ತದೆ. ಪ್ರಸಿದ್ಧ. ಉತ್ತರ ದಿಕ್ಕಿಗೆ ಆಶ್ರಯವಾದ ಉತ್ತರ ದಿಕ್ಕಿನಲ್ಲಿರುವ ಎಡಗೈಯ ಕೆಳಗಿನ ತೋಳು ಐಶ್ವರ್ಯಕ್ಕೆ ಅಭಿಮಾನಿಯಾದ ಭೂತ ಎನಿಸಿಕೊಂಡ ಲಕ್ಷ್ಮೀದೇವಿಗೆ ಆಶ್ರಯವಾದ ಪದ್ಮ (ಕಮಲ)ದಿಂದೊಡಗೂಡಿರುವುದರಿಂದ **ಸುಭೂತಾ** ಎನಿಸುತ್ತದೆ. ದಿಕ್ ಎಂದು ಹೆಸರುಳ್ಳ ದಿಕ್ಕಿಗೆ ಆಶ್ರಯಗಳಾದ ತೋಳುಗಳಿಗೆ ಧರ್ಮ, ಜ್ಞಾನ, ವೈರಾಗ್ಯ ಐಶ್ವರ್ಯ ರೂಪನಾದ ಮುಖ್ಯಪ್ರಾಣನು ಮಗನು. (ಅಂದರೆ—ಜುಹೂದಿಂದ ಧರ್ಮ, ಸಹಮಾನದಿಂದ ಜ್ಞಾನ, ರಾಜ್ಞಿಯಿಂದ ವೈರಾಗ್ಯ, ಸುಭೂತದಿಂದ ಐಶ್ವರ್ಯವು ಹುಟ್ಟಿದ್ದೆಂದು ತಿಳಿಯಬೇಕು) (ಇದನ್ನು ತಿಳಿ ದವನಿಗೆ ಫಲ ಹೇಳುತ್ತಾರೆ—) ಹೀಗೆ ಧರ್ಮಾದಿರೂಪನಾದ ಮುಖ್ಯಪ್ರಾಣನು ದಿಕ್ಕುಗಳ ಮಗನೆಂದು ತಿಳಿದವನು ಮಗನಾಗಿ ಅಳುವುದಿಲ್ಲ. (ಮುಕ್ತನೇ ಆಗುತ್ತಾನೆ) (ಹೀಗೆ ತಿಳಿದು ಫಲವನ್ನು ಹೊಂದಿ ದವರು ಯಾರಾದರೂ ಇದ್ದಾರೇನು? ಎಂದರೆ—) ನಾನು ಮುಖ್ಯಪ್ರಾಣನು ದಿಕ್ಕುಗಳ ಮಗನೆಂದು ತಿಳಿ ದಿರುವುದರಿಂದ ಯಾರಿಗೂ ಮಗನಾಗಿ ಹುಟ್ಟಿ ಅಳಲಿಲ್ಲ. (ಅನಾದಿಕಾಲದಿಂದಲೂ ಜರಾಮರಣರಹಿತಳಾಗಿ ಮುಕ್ತಳೇ ಆಗಿರುವೆನೆಂದು) ಲಕ್ಷ್ಮೀದೇವಿಯ ಮಾತು. ॥ ೨ ॥

**ಉ. ॥ ಅರಿಷ್ಟಂ ಕೋಶಂ ಪ್ರಪದ್ಯೇಽಮುನಾಽಮುನಾಽಮುನಾ ಪ್ರಾಣಂ ಪ್ರಪದ್ಯೇಽಮುನಾಽಮುನಾಽಮುನಾ ಭೂಃ ಪ್ರಪದ್ಯೇಽಮುನಾಽಮುನಾಽಮುನಾ ಭುವಃ ಪ್ರಪದ್ಯೇಽಮುನಾಽಮುನಾಽಮುನಾ ಸ್ವಃ ಪ್ರಪದ್ಯೇಽಮುನಾಽಮುನಾಽಮುನಾ ॥ ೩ ॥**

**ಅ ॥** ವಿನಾಶವಿಲ್ಲದಿರುವ, ಪರಮಾನಂದ ಇಚ್ಛಾಸ್ವರೂಪನಾದ ಶ್ರೀಹರಿಯ ಬಳಿಯಲ್ಲಿ ಶ್ರೀಹರಿಯ ಪ್ರಸಾದದಿಂದಲೇ ಸೇರಿಕೊಂಡಿರುವೆನು (ನನ್ನ ಪ್ರಯತ್ನದಿಂದ ಅಲ್ಲ) ಭಕ್ತರಿಗೆ ಮೋಕ್ಷವನ್ನು ಹೊಂದಿಸಿಕೊಡುವುದರಿಂದ ಪ್ರಾಣನೆನಿಸಿಕೊಂಡ ವಾಸುದೇವನನ್ನೂ, ಭಕ್ತರಿಗೆ ಜ್ಞಾನವನ್ನು ಹುಟ್ಟಿಸು ವುದರಿಂದ **ಭೂಃ** ಎನಿಸಿಕೊಂಡ ಸಂಕರ್ಷಣನನ್ನೂ, ಜಗತ್ತನ್ನು ಸೃಷ್ಟಿಸುವುದರಿಂದ **ಭುವಃ** ಎನಿಸಿ

ಕೊಂಡ ಪ್ರದ್ಯುಮ್ನನನ್ನೂ, ಉತ್ಕೃಷ್ಟವಾದ ಆನಂದವನ್ನು ಕೊಡುವುದರಿಂದ ಸ್ವಃ ಎನಿಸಿಕೊಂಡ ಅನಿರುದ್ಧನ ಬಳಿಯಲ್ಲಿ ಸೇರಿರುವೆನು. || ೩ ||

ಟೀ—ಪ್ರಾಣಂ ಪ್ರಪದ್ಯೇ ಇದುಮೊದಲಾದ ನಾಲ್ಕು ವಾಕ್ಯಗಳನ್ನು ಈ ವೇದವೇ ವಿವರಿಸಿಯದೆ, ಎನ್ನುತ್ತಾರೆ—

**ಉ || ಸ ಯದವೋಚಂ ಪ್ರಾಣಂ ಪ್ರಪದ್ಯ ಇತಿ ಪ್ರಾಣೋವಾ ಇದꣳ ಸರ್ವಂ ಭೂತಂ ಯದಿದಂ ಕಿಂಚ ತಮೇವ ತತ್ಪ್ರಾಪತ್ಸಿ || ೪ ||**

ಅ || ಆ ನಾನು **ಪ್ರಾಣಂ ಪ್ರಪದ್ಯೇ** ಎಂದು ಏನು ಹೇಳಿರುವೆನೋ ಅದೂ, ಗುಣಪರಿಪೂರ್ಣವಾದ ಮತ್ಸ್ಯಾದ್ಯವತಾರ ಸಮುದಾಯವೂ ಇವೆಲ್ಲವೂ ಪ್ರಾಣನೆನಿಸಿದ ವಾಸುದೇವನೇ. ಅದುಕಾರಣ ಎಲೋ ಭಕ್ತರೇ ಮತ್ಸ್ಯಾದಿಗಳಿಂದ ಭೇದವಿಲ್ಲದಿರುವ ವಾಸುದೇವನನ್ನೇ ಉಪಾಸನೆಮಾಡಿ ಹೊಂದುವಿರಿ ಎಂದು ಲಕ್ಷ್ಮೀದೇವಿಯು ಹೇಳಿದಳು. || ೪ ||

**ಉ. || ಅಥ ಯದವೋಚಂ ಭೂಃ ಪ್ರಪದ್ಯ ಇತಿ ಪೃಥಿವೀಂ ಪ್ರಪದ್ಯೇಽಂತರಿಕ್ಷಂ ಪ್ರಪದ್ಯೇ ದಿವಂ ಪ್ರಪದ್ಯ ಇತ್ಯೇವ ತದವೋಚಂ || ೫ ||**

ಅ || ಜ್ಞಾನವನ್ನು ಕೊಡುವುದರಿಂದ ಭೂಃ ಎನಿಸಿಕೊಂಡ ಸಂಕರ್ಷಣನನ್ನು ಹೊಂದಿರುತ್ತೇನೆಂದು ಹೇಳಿದ್ದು, ಪೃಥಿವಿಯಲ್ಲಿರತಕ್ಕ ಪೃಥಿವೀ ಎನಿಸಿಕೊಂಡ, ಅಂತರಿಕ್ಷಲೋಕದಲ್ಲಿರತಕ್ಕ ಅಂತರಿಕ್ಷನೆನಿಸಿಕೊಂಡ, ದ್ಯುಲೋಕದಲ್ಲಿರುವ ದ್ಯು ಎನಿಸಿಕೊಂಡ ಸಂಕರ್ಷಣನನ್ನೇ ಹೇಳಿರುವೆನು. ಅದುಕಾರಣ ನೀವೂ ಕೂಡ ಮೂರು ಲೋಕಗಳಲ್ಲಿ ವ್ಯಾಪಿಸಿಕೊಂಡಿರುವ ಲೋಕನೆನಿಸಿಕೊಂಡ ಸಂಕರ್ಷಣನನ್ನು ಉಪಾಸನೆಮಾಡಿ ಹೊಂದುವಿರಿ. || ೫ ||

**ಉ. || ಅಥ ಯದವೋಚಂ ಭುವಃ ಪ್ರಪದ್ಯ ಇತ್ಯಗ್ನಿಂ ಪ್ರಪದ್ಯೇ ವಾಯುಂ ಪ್ರಪದ್ಯ ಆದಿತ್ಯಂ ಪ್ರಪದ್ಯ ಇತ್ಯೇವ ತದವೋಚಂ || ೬ ||**

ಅ || ಜಗತ್ತನ್ನು ಸೃಷ್ಟಿಸುವುದರಿಂದ **ಭುವಃ** ಎನಿಸಿಕೊಂಡ ಪ್ರದ್ಯುಮ್ನನನ್ನು ಹೊಂದಿರುವೆನೆಂದು ಹೇಳಿದುದು ಬೆಂಕಿಯಲ್ಲಿ ಹೋಮಿಸಿದುದನ್ನು ತೆಗೆದುಕೊಳ್ಳುವುದರಿಂದ ಅಗ್ನಿ ಎನಿಸಿಕೊಂಡ ಅಗ್ನಿಯಲ್ಲಿರುವ, ಬೀಸುವುದು ಆಯುಷ್ಯವನ್ನು ಕೊಡುವುದು ಇವುಗಳಿಂದ ವಾಯು ಎನಿಸಿಕೊಂಡ ವಾಯುವಿನಲ್ಲಿರುವ, ಆಯುಷ್ಯವನ್ನು ತೆಗೆದುಕೊಳ್ಳುವುದರಿಂದ ಆದಿತ್ಯನೆನಿಸಿಕೊಂಡ ಆದಿತ್ಯನಲ್ಲಿರತಕ್ಕ ಪ್ರದ್ಯುಮ್ನನನ್ನು ನಾನು ಹೊಂದಿರುತ್ತೇನೆ. ಅದುಕಾರಣ ನೀವು ಕೂಡ ಅಗ್ನ್ಯಾದಿ ದೇವತೆಗಳೊಳಗಣ ಅಗ್ನ್ಯಾದಿಗಳೆನಿಸಿಕೊಂಡ ಪ್ರದ್ಯುಮ್ನನನ್ನು ಹೊಂದುವಿರಿ. || ೬ ||

**ಉ. || ಅಥ ಯದವೋಚಂ ಸ್ವಃ ಪ್ರಪದ್ಯ ಇತ್ಯೃಗ್ವೇದಂ ಪ್ರಪದ್ಯೇ ಯಜುರ್ವೇದಂ ಪ್ರಪದ್ಯೇ ಸಾಮವೇದಂ ಪ್ರಪದ್ಯ ಇತ್ಯೇವ ತದವೋಚಂ ತದವೋಚಂ || ಇತಿ ಪಂಚದಶಃ ಖಂಡಃ || ೫-೧೫ || || ೭ ||**

ಅ || ಉತ್ಕೃಷ್ಟ ಆನಂದಸ್ವರೂಪನಾದುದರಿಂದ ಸ್ವಃ ಎನಿಸಿಕೊಂಡ ಅನಿರುದ್ಧನನ್ನು ಹೊಂದಿರುತ್ತೇನೆಂದು ಹೇಳಿದುದು, ಜ್ಞಾನವನ್ನು ಹುಟ್ಟಿಸುವುದರಿಂದ ಋಗ್ವೇದವೆಂದು ಹೆಸರುಳ್ಳ ಋಗ್ವೇದದಲ್ಲಿರತಕ್ಕ, ಯಾಗವನ್ನು ತಿಳಿಸುವುದರಿಂದ ಯಜುರ್ವೇದವೆಂದು ಹೆಸರುಳ್ಳ ಯಜುರ್ವೇದದಲ್ಲಿರತಕ್ಕ, ಭಗವದ್ರೂಪಗಳಿಗೆ ಸಾಮ್ಯವನ್ನು ತಿಳಿಸುವುದರಿಂದ ಸಾಮವೇದವೆನಿಸಿಕೊಂಡ ಸಾಮವೇದದಲ್ಲಿರತಕ್ಕ, ಅನಿರುದ್ಧನನ್ನು ನಾನು ಹೊಂದಿರುವೆನು. (ಅದುಕಾರಣ ನೀವೂ ಕೂಡ ಋಗಾದಿ ವೇದಗಳಲ್ಲಿ ವರ್ಣಿಸಲ್ಪಡತಕ್ಕ ಋಗಾದಿ ವೇದಗಳೆನಿಸಿಕೊಂಡ ಅನಿರುದ್ಧನನ್ನು ಉಪಾಸನೆ ಮಾಡಿ ಹೊಂದುವಿರಿ, ಎಂದು ಲಕ್ಷ್ಮೀದೇವಿಯು ಹೇಳಿರುವಳು.) || ೫—೧೫ || || ೬ ||

ಪೀ—೧ನೇ ಮಂತ್ರದ ಅರ್ಥ ಹೇಳುತ್ತಾರೆ—

**ಭಾ. (೧) ಕ ಇತ್ಯಾನಂದ ಉದ್ದಿಷ್ಟ ಉಶ ಇಚ್ಛಾ ಪ್ರಕೀರ್ತಿತಾ | ಆನಂದೇಚ್ಛಾಸ್ವರೂಪೋಽಸೌ ಕೋಶೋ ವಿಷ್ಣುಃ ಪ್ರಕೀರ್ತಿತಃ || (೨) ತಸ್ಯೋದರೇಽಂತರಿಕ್ಷಂ ಚ ಪೃಥಿವೀ ಪಾದಬುಧ್ನಯೋಃ | ಶಿರೋವಿವರಗಾ ದ್ಯೌಶ್ಚ ದಿಶೋ ಬಾಹುಷು ಸಂಸ್ಥಿತಾಃ || (೩) ಅಜರೋಽಯಂ ಮಹಾವಿಷ್ಣುರ್ವಸವೋ ದೇವತಾಗಣಾಃ | ತೇಷಾಂ ನಿಧಾನಂ ಭಗವಾಂಸ್ತಸ್ಮಿನ್ ಸರ್ವಮಿದಂ ಶ್ರಿತಂ || (೪) ಪ್ರಾಚೀದಿಕ್‌ಸಂಸ್ಥಿತಸ್ತಸ್ಯ ಬಾಹುರ್ದಕ್ಷಿಣ ಊರ್ಧ್ವಗಃ | ಜುಹೂಃ ಸ ಹೋಮಕರ್ತೃತ್ವಾದ್ಭುಂಕ್ತೇ ಹ್ಯೇತೇನ ಕೇಶವಃ || (೫) ದಕ್ಷಿಣಸ್ತ್ವಧರೋ ಬಾಹುರ್ದಕ್ಷಿಣಾದಿಕ್‌ಸ್ಥಿತೋ ವಿಭೋಃ | ಸಹಮಾನೇತಿ ಸಂಪ್ರೋಕ್ತೋ ಮಾನಂ ವೇದಾತ್ಮಕಂ ಯತಃ || ಶಂಖೋ ವೇದಾತ್ಮಕಃ ಶಂಖಸಹಿತೋ ದಕ್ಷಿಣಾಧರಃ | ಬಾಹುರ್ಜುಹೋತಿ ಚಕ್ರೇಣ ಶತ್ರೂನಿತ್ಯಥ ವಾ ಜುಹೂಃ || ೧ ||**

ಅ || (೧) ಕಃ, ಎಂದರೆ ಆನಂದವು. ಉಶಃ-ಇಚ್ಛೆಯು. ಆನಂದ ಇಚ್ಛಾಸ್ವರೂಪನಾದುದರಿಂದ ಶ್ರೀವಿಷ್ಣುವು ಕೋಶನೆನಿಸುತ್ತಾನೆ. (೨) ಶ್ರೀಹರಿಯ ಹೊಟ್ಟೆಯಲ್ಲಿ ಅಂತರಿಕ್ಷಲೋಕವೂ ಪಾದಗಳ ಮೇಲುಭಾಗಗಳಲ್ಲಿ ಭೂಲೋಕವೂ, ಶಿರಸ್ಸಿನ ವಿವರದಲ್ಲಿ ದ್ಯುಲೋಕವೂ, ತೋಳುಗಳಲ್ಲಿ ದಿಕ್ಕುಗಳೂ ಇರುತ್ತವೆ. (೩) ಶ್ರೀವಿಷ್ಣುವು ಮುಪ್ಪು ಇಲ್ಲದವನು ವಸುಗಳು ಅಂದರೆ ದೇವತೆಗಳ ಸಮುದಾಯಗಳು. ಅವರಿಗೆ ಶ್ರೀಹರಿಯು ಆಶ್ರಯನಾದುದರಿಂದ ವಸುಧಾನನೆನಿಸುತ್ತಾನೆ. ಸಮಸ್ತ ಜಗತ್ತು ಶ್ರೀಹರಿಯನ್ನು ಆಶ್ರಯಿಸುತ್ತಿದೆ. (೪) (೨ನೇ ಮಂತ್ರದ ಅರ್ಥ ಹೇಳುತ್ತಾರೆ–) ವಿಷ್ಣುವಿನ ನಾಲ್ಕು ತೋಳುಗಳಲ್ಲಿ ಮೇಲಿನ ಬಲತೋಳು ಪೂರ್ವದಿಕ್ಕಿಗೆ ಆಶ್ರಯವು ಭಕ್ತರಿಗೆ ಇಷ್ಟ ಕೊಡುವುದು. ಭಕ್ತರು ಕೊಟ್ಟದ್ದನ್ನು ತೆಗೆದುಕೊಳ್ಳುವುದು, ಇವುಗಳಿಂದ ಅಥವಾ ಕೇಶವನು ಬಲಗೈಯಿಂದುಣ್ಣುವುದರಿಂದ ಬಲತೋಳು ಜುಹೂಃ ಎನಿಸುತ್ತದೆ. (೫) ಶ್ರೀಹರಿಯ ಕೆಳಗಿನ ಬಲತೋಳು ದಕ್ಷಿಣದಿಕ್ಕಿಗೆ ಆಶ್ರಯವು. ಮಾನ ಎಂದರೆ—ವೇದಗಳು ಶಂಖಕ್ಕೆ ವೇದಾಭಿಮಾನಿದೇವತೆಗಳು ಅಭಿಮಾನಿಗಳು. ಕೆಳಗಿನ ಬಲತೋಳು ಶಂಖದಿಂದೊಡಗೂಡಿದ್ದು. ಅದುಕಾರಣ ಸಹಮಾನವೆನಿಸುತ್ತದೆ. ಅಥವಾ ಚಕ್ರದಿಂದ ಶತ್ರುಗಳನ್ನು ಸಂಹರಿಸುವುದರಿಂದ ಮೇಲಿನ ಬಲತೋಳು ಜುಹೂಃ ಎನಿಸುತ್ತದೆ || ೧ ||

**ಭಾ. || (೧) ಪ್ರತೀಚೀದಿಕ್‌ಸ್ಥಿತಸ್ತಸ್ಯ ವಾಮಬಾಹುಸ್ತಥೋತ್ತರಃ | ರಾಜೀಯುಕ್ತಗದಾಯುಕ್ತೋ ರಾಜ್ಞೀನಾಮಾ(ಮ) ಪ್ರಕೀರ್ತಿತಃ || (೨) ಅಧರೋ ವಾಮಬಾಹುರ್ಯ ಉತ್ತರಾದಿಕ್‌ಸ್ಥಿತೋ ವಿಭೋಃ | ಶ್ರಿಯ ಆಧಾರಪದ್ಮಿತ್ವಾತ್ಸುಭೂತಾನಾಮಕಃ ಸ್ಮೃತಃ || (೩)ದಿಙ್ಮಾನಶ್ಚ ಕೇ ಪ್ರೋಕ್ತಾ ಧರ್ಮಜ್ಞಾನಾದಿ(ಶಿ)ದೇಶನಾತ್ | ತೇಭ್ಯೋ ಜಾತೋ**

ಮಹಾಬಾಹುರ್ದಿಶಾಂ ವತ್ಸಸ್ತತಃ ಸ್ಮೃತಃ ॥ (೪) ಧರ್ಮಜ್ಞಾನಾದಿರೂಪೇಣ ವಿಷ್ಣೋ-ರ್ಬಾಹುಚತುಷ್ಟಯಾತ್ । ಜಾತಂ ವಾಯುಂ ವಿದಿತ್ವೈವ ಪುತ್ರೋ ಭೂತ್ವಾ ನ ರೋದಿತಿ । ನ ಜಾಯತೇ ನ ಮ್ರಿಯತೇ ಮುಕ್ತೋ ಭೂತ್ವಾ ಸುಖೀ ಭವೇತ್ ॥ (೫) ವಾಯುಂ ಹರೇಃ ಸುತಂ ಜ್ಞಾತ್ವಾ ನಾಹಂ ಪುತ್ರತಯಾಽರುದಂ । ಹರೇಃ ಪ್ರಸಾದಸಾಮರ್ಥ್ಯಾದಜರಾ ಚಾ-ಮರಾ ಹ್ಯಹಂ । ಅನಾದಿಕಾಲಸಂಬಂಧಾದಿತ್ಯುವಾಚ ಪು(ಪ)ರಾ ರಮಾ ॥ ೨ ॥

ಅ ॥ (೧) ಶ್ರೀಹರಿಯ ಮೇಲಿನ ಎಡತೋಳು ಪಶ್ಚಿಮ ದಿಕ್ಕಿಗೆ ಆಶ್ರಯವು ಶೋಭಿಸುತ್ತಿರುವ ಗದೆಯಿಂದೊಡಗೂಡಿದ ಪ್ರಯುಕ್ತ ರಾಜ್ಞೀ ಎನಿಸುತ್ತದೆ (೨) ಶ್ರೀಹರಿಯ ಉತ್ತರದಿಕ್ಕಿಗೆ ಆಶ್ರಯ ವಾದ ಎಡಗೈಯ ಕೆಳಗಿನ ತೋಳು ಕಾಂತಿಗೆ ಆಧಾರವಾದ ಪದ್ಮವುಳ್ಳದ್ದಾದುದರಿಂದ ಸುಭೃತಾ ಎನಿಸುತ್ತದೆ. (೩) ಆ ತೋಳುಗಳು ಧರ್ಮಜ್ಞಾನಗಳನ್ನು ಕೊಡುವುದರಿಂದ ದಿಕ್ ಎನಿಸುತ್ತವೆ. ಮುಖ್ಯಪ್ರಾಣನು ದಿಕ್ಕುಗಳಿಂದ ಹುಟ್ಟಿರುವುದರಿಂದ ದಿಶಾಂವತ್ಸ ಎನಿಸುತ್ತಾನೆ. (೪) ಶ್ರೀವಿಷ್ಣುವಿನ ನಾಲ್ಕು ತೋಳುಗಳಿಂದ ಧರ್ಮ, ಜ್ಞಾನ ವೈರಾಗ್ಯ, ಐಶ್ವರ್ಯರೂಪನಾಗಿ ಹುಟ್ಟಿದ ಮುಖ್ಯಪ್ರಾಣನನ್ನು ತಿಳಿದವನು, ಮಗನಾಗಿ ಅಳುವುದಿಲ್ಲ ಅಂದರೆ—ಜನನಮರಣಾದಿಗಳನ್ನು ಹೊಂದುವುದೇ ಇಲ್ಲ. (೫) ಮುಖ್ಯಪ್ರಾಣನು ಶ್ರೀಹರಿಯ ಪುತ್ರನೆಂದು ಅನಾದಿಕಾಲದಿಂದಲೂ ತಿಳಿದಿರುವುದರಿಂದ ನಾನು ಪುತ್ರಿಯಾಗಿ ಮರುಗಲಿಲ್ಲ. ಶ್ರೀಹರಿಯ ಅನುಗ್ರಹ ಸಾಮರ್ಥ್ಯದಿಂದಲೇ ಸದಾ ಜರಾಮರಣವಿಲ್ಲದವಳೂ ಆಗಿರುತ್ತೇನೆಂದು ಮೊದಲು ರಮಾದೇವಿಯು ಹೇಳಿದ್ದಳು. ॥ ೨ ॥

ಪೀ—೩ನೇ ಮಂತ್ರದ ಅರ್ಥ ಹೇಳುತ್ತಾರೆ—

ಭಾ ॥ (೧) ಅವಿನಷ್ಟಂ ಪರಾನಂದಕಾಮಂ ವಿಷ್ಣುಂ ಸದಾ ಹ್ಯಹಂ । ಪ್ರಪದ್ಯೇ ತತ್ಪ್ರ-ಸಾದೇನ ಕೇವಲಂ ನಾತ್ಮಶಕ್ತಿತಃ । ಪ್ರಾಣಂ ಸರ್ವಪ್ರಣೇತಾರಂ ಪ್ರಪದ್ಯೇ ಕೇಶವಂ ಸದಾ॥ (೨) ಪ್ರಭೂತಂ ಯದಿದಂ ಕಿಂಚಿತ್ ಪ್ರಾದುರ್ಭಾವಾತ್ಮಕಂ ಹರೇಃ । ಮತ್ಸ್ಯಾದ್ಯಂ ತತ್ ಪ್ರಾಣ ಏವ ವಿಷ್ಣುರ್ನಾಸ್ತ್ಯತ್ರ ಸಂಶಯಃ ॥ (೩) ತಸ್ಮಾನ್ಮತ್ಸ್ಯಾದಿರೂಪಂ ತಂ ವಿಷ್ಣು-ಮೇವ ಪ್ರಪದ್ಯಥ । ಹೇ ಜನಾ ಇತ್ಯವೋಚತ್ಸಾ ಲಕ್ಷ್ಮೀಃ ಸರ್ವಾಃ ಪ್ರಜಾಃ ಪ್ರತಿ । ಪ್ರಾ-ಣನಾಮಾ ವಾಸುದೇವೋ ಮೋಕ್ಷಂ ಸ್ವಾನ್‌ಪ್ರಣಯೇದ್ಯತಃ ॥ (೪) ಸಂಕರ್ಷ-ಣಸ್ತು ಭೂರ್ನಾಮಾ ಭೂಷಯೇಜ್ಜ್ಞಾನತೋ ಯತಃ । ಸ ಪೃಥ್ವ್ಯಾಂ ಪೃಥಿವೀನಾಮಾ ಸ್ವಾತ್ಮಾನಂ ಪ್ರಥಯೇದ್ಯತಃ ॥ ಅಂತರಿಕ್ಷೇಽಂತರಿಕ್ಷಾಖ್ಯೋ ಯತಃ ಸಾಧ್ವಂತರೀಕ್ಷತೇ । ದಿವಿ ದ್ಯುನಾಮಾ ಸ ವಿಭುಃ ಸರ್ವಕ್ರೀಡಾಕರತ್ವತಃ ॥ (೫) ಪ್ರದ್ಯುಮ್ನಶ್ಚ ಭುವೋನಾಮಾ ಸೃಷ್ಟ್ಯಾ ಯದ್ಭಾವಯೇಜ್ಜಗತ್ । ಸೋಽಗ್ನಿನಾಮಾ ಪರೋ ವಹ್ನಾವತ್ತಿ ಸರ್ವಂ ಯತೋ ಹುತಂ ॥ ವಾಯುನಾಮಾ ಸ ವಾಯುಸ್ಥೋ ವಾತ್ಯಾಯುಶ್ಚ ಯತೋಽಸ್ಯ ತತ್ । ಆದಿ-ತ್ಯಾಖ್ಯಃ ಸ ಆದಿತ್ಯೇ ಆದದಾತ್ಯಾಯುರಸ್ಯ ಯತ್ ॥ ಸ್ವರ್ನಾಮಾ ತ್ವ(ಹ್ಯ)ನಿರುದ್ಧೋಽಸೌ ಪರಾನಂದಪ್ರದತ್ವತಃ । ಋಗ್ವೇದಾಖ್ಯಃ ಸ ಋಗ್ವೇದೇ ಜ್ಞಾನಂ ವೇದಯತೇ ಯತಃ ॥ ಯಜುರ್ವೇದೋ ಯಜುರ್ವೇದೇ ಯಜ್ಞಂ ವೇದಯತೇ ಯತಃ । ಸಾಮವೇದಃ ಸಾಮ-ವೇದೇ ಸಾಮ್ಯಂ ವೇದಯತೇ ಹ್ಯಯಂ ॥ (೬) ಏವಂ ಚತುರ್ವಿಧಂ ತತ್ತ್ವಂ ತದವೋಚ-ಮಹಂ ಹರೇಃ । ಇತ್ಯುವಾಚೇಂದಿರಾ ದೇವೀ ಸ್ತುವಂತೀ ಪರಮಂ ಹರಿಂ ಇತಿ ॥ ೩ ॥

**ಪುಲ್ಲಿಂಗೇನೋಚ್ಯತೇ ಸ್ತ್ರೀ (ಶ್ರೀಶ್ಚ) ಚ ಪುಂವಚ್ಛ(ಸಃ ಶ)ಕ್ತಿಮತೀ ಯದಿ ಇತಿ ಚ ||**
**|| ೧, ೨, ೩, ೪, ೫, ೬, ೭ || ಇತಿ ಪಂಚದಶಃ ಖಂಡಃ || ೪—೧೫ || || ೧ ||**

ಅ || (೧) ನಾನು ನಾಶವಿಲ್ಲದವನೂ ಉತ್ಕೃಷ್ಟವಾದ ಆನಂದ ಇಚ್ಛಾಸ್ವರೂಪನೂ ಆದ ಶ್ರೀವಿಷ್ಣು ವಿನ ಸಮೀಪದಲ್ಲಿಯೇ ಸದಾ ನಾನು ಆ ಶ್ರೀಹರಿಯ ಅನುಗ್ರಹದಿಂದಲೇ ಸೇರಿರುವೆನು ನನ್ನ ಶಕ್ತಿ ಯಿಂದಲ್ಲ. (೨) ಸರ್ವರಿಗೂ ಪ್ರೇರಕನಾದ ಕೇಶವನ ಬಳಿಯಲ್ಲಿಯೇ ಯಾವಾಗಲೂ ನಾನು ಸೇರಿರುವೆನು. (೩) (೪ನೇ ಮಂತ್ರದ ಅರ್ಥ ಹೇಳುತ್ತಾರೆ—) ಗುಣಪರಿಪೂರ್ಣವಾದ ಮತ್ಸ್ಯ ಮೊದಲಾದ ಶ್ರೀಹರಿಯ ಅವತಾರರೂಪಗಳೂ ಪ್ರಾಣನೆನಿಸಿದ ಶ್ರೀವಿಷ್ಣುವೇ. ಈ ವಿಷಯದಲ್ಲಿ ಸಂದೇಹವಿಲ್ಲ. (೩) ಈ ಉಪಾ ಸನೆಗೆ ಇಂತಹ ಮಹಾಫಲವಿದ್ದುದರಿಂದ ಎಲೋ ಭಕ್ತರೇ ನೀವು ಮತ್ಸ್ಯ ಮೊದಲಾದ ರೂಪವುಳ್ಳ ಆ ಶ್ರೀವಿಷ್ಣುವನ್ನೇ ಹೊಂದುವಿರಿ, ಎಂದು ಲಕ್ಷ್ಮೀದೇವಿಯು ಎಲ್ಲಾ ಪ್ರಜೆಗಳಿಗೆ ಹೇಳಿದಳು. ವಾಸು ದೇವನು ಭಕ್ತರನ್ನು ಮೋಕ್ಷಕ್ಕೆ ಕಳುಹಿಸಿಕೊಡುವುದರಿಂದ ಪ್ರಾಣನೆನಿಸುತ್ತಾನೆ. (೪) (೫ನೇ ಮಂತ್ರದ ಅರ್ಥ ಹೇಳುತ್ತಾರೆ—) ಸಂಕರ್ಷಣನು ಭಕ್ತರಿಗೆ ಜ್ಞಾನವನ್ನು ಕೊಡುವುದರಿಂದ ಭೂಃ ಎನಿಸುತ್ತಾನೆ. ಆತನು ಪೃಥಿವಿಯಲ್ಲಿದ್ದು ತನ್ನನ್ನು ಪ್ರಸಿದ್ಧಿಗೊಳಿಸುವುದರಿಂದ ಪೃಥಿವೀ ಎನಿಸುತ್ತಾನೆ ಅಂತರಿಕ್ಷ ದಲ್ಲಿದ್ದವನಾಗಿ ಚೆನ್ನಾಗಿ ಹೃದಯದೊಳಗಿದ್ದು ನೋಡುವುದರಿಂದ ಅಂತರಿಕ್ಷನೆನಿಸುತ್ತಾನೆ ಸ್ವರ್ಗಲೋಕ ದಲ್ಲಿದ್ದು ಸಮಸ್ತ ಲೀಲಾಕಾರ್ಯಗಳನ್ನು ಮಾಡುತ್ತಿರುವುದರಿಂದ ದ್ಯು ಎನಿಸುತ್ತಾನೆ. (೫) (೬ನೇ ಮಂತ್ರದ ಅರ್ಥ ಹೇಳುತ್ತಾರೆ ) ಪ್ರದ್ಯುಮ್ನನು ಜಗತ್ತನ್ನು ಸೃಷ್ಟಿಸುವುದರಿಂದ ಭುವಃ ಎನಿಸುತ್ತಾನೆ. ಆತನು ಅಗ್ನಿಯಲ್ಲಿ ಹೋಮಿಸಿದ್ದೆಲ್ಲವನ್ನು ತಿನ್ನುವುದರಿಂದ ಅಗ್ನಿ ಎನಿಸುತ್ತಾನೆ ಆತನು ಗಾಳಿ ಬೀಸಿ ಕೊಂಡು ಜನರಿಗೆ ಆಯುಷ್ಯವನ್ನು ಕೊಡುತ್ತಾನೆ, ಅದುಕಾರಣ ವಾಯು ಎನಿಸಿಕೊಂಡವನಾಗಿ ವಾಯು ವಿನಲ್ಲಿದ್ದಾನೆ. ಆತನು ಜನರ ಆಯುಷ್ಯವನ್ನು ತೆಗೆದುಕೊಳ್ಳುವುದರಿಂದ ಆದಿತ್ಯನೆನಿಸಿಕೊಂಡವನಾಗಿ ಆದಿತ್ಯನಲ್ಲಿದ್ದಾನೆ (೬) (೭ನೇ ಮಂತ್ರದ ಅರ್ಥ ಹೇಳುತ್ತಾರೆ—) ಅನಿರುದ್ಧನು ಉತ್ಕೃಷ್ಟವಾದ ಆನಂದ ವನ್ನು ಕೊಡುವುದರಿಂದ ಸ್ವಃ ಎನಿಸುತ್ತಾನೆ ಆತನು ಜ್ಞಾನವನ್ನು ಹುಟ್ಟಿಸುವುದರಿಂದ ಋಗ್ವೇದನೆನಿಸಿ ಕೊಂಡವನು, ಋಗ್ವೇದದಲ್ಲಿರತಕ್ಕವನು ಯಾಗ ವಿಷಯವನ್ನು ತಿಳಿಸುವುದರಿಂದ ಯಜುರ್ವೇದನೆನಿಸಿ ಕೊಂಡವನು. ಯಜುರ್ವೇದದಲ್ಲಿರುವವನು. ಶ್ರೀಹರಿಯು ತನ್ನ ರೂಪಗಳಿಗೆ ಸಾಮ್ಯವನ್ನು ತಿಳಿಸಿಕೊಡು ವುದರಿಂದ ಸಾಮವೇದನೆನಿಸಿಕೊಂಡವನಾಗಿ ಸಾಮವೇದದಲ್ಲಿರುವನು (೭) ಹೀಗೆ ಲಕ್ಷ್ಮೀದೇವಿಯು ಸರ್ವೋತ್ತಮನಾದ ಶ್ರೀಹರಿಯನ್ನು ಸ್ತೋತ್ರಮಾಡುತ್ತಾ ಶ್ರೀಹರಿಯ ನಾಲ್ಕು ವಿಧ ತತ್ತ್ವವನ್ನು ಹೇಳಿರು ವೆನೆಂದು ಹೇಳಿದಳು ಸ್ತ್ರೀಯರಿಗೆ ಪುರುಷರಂತೆ ಶಕ್ತಿಯಿದ್ದರೆ ಅವರು ಪುಲ್ಲಿಂಗ ಶಬ್ದದಿಂದ ಹೇಳಲ್ಪಡು ತ್ತಾರೆ. ಅಥವಾ ಲಕ್ಷ್ಮೀದೇವಿಯು ಪುರುಷರಂತೆ ಶಕ್ತಿಯುಳ್ಳವಳಾದುದರಿಂದ ಪುಲ್ಲಿಂಗ ಶಬ್ದದಿಂದ ಹೇಳಲ್ಪಡುತ್ತಾಳೆ. || ೫—೧೫ || || ೩ ||

**ಹದಿನೈದನೇ ಖಂಡವು ಮುಗಿಯಿತು.**

## ೧೬ನೇ ಖಂಡವು

**ಪೀ**—ಅನೇಕ ಉಪಾಸನೆಗಳನ್ನು ಹಿಂದೆ ಹೇಳಿರುವರು ಮುಂದೆಯೂ ಹೇಳುವರು. ಅವುಗಳನ್ನು ಮಾಡಲಿಕ್ಕೆ ಆಯುಷ್ಯವು ಕಡಿಮೆಯಾದರೆ ದೇಹದಲ್ಲಿ ರೋಗಾದ್ಯುಪದ್ರವಗಳು ಬಂದರೆ ಅಸಾಧ್ಯವು. ಅದು ಕಾರಣ ಆಯುಷ್ಯವು ಅಭಿವೃದ್ಧಿಯಾಗುವುದಕ್ಕಾಗಿಯೂ ರೋಗಪರಿಹಾರವಾಗುವುದಕ್ಕಾಗಿಯೂ ಪುರುಷ ಯಜ್ಞದ ಉಪಾಸನೆ ಹೇಳುತ್ತಾರೆ—

**ಉ. ॥ ಪುರುಷೋ ವಾವ ಯಜ್ಞಸ್ತಸ್ಯ ಯಾನಿ ಚತುರ್ವಿಂಶತಿವರ್ಷಾಣಿ ತತ್ಪ್ರಾತಃಸವನಂ ಚತುರ್ವಿಂಶತ್ಯಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಃ-ಸವನಂ ತದಸ್ಯ ವಸವೋಽನ್ವಾಯತ್ತಾಃ ಪ್ರಾಣಾ ವಾವ ವಸವ ಏತೇ ಹೀದಂ ಸರ್ವಂ ವಾಸಯಂತಿ ॥ ೧ ॥**

**ಅ ॥** ಅಧಿಕಾರಿ ಜೀವನು, ನಾನು ವಿಷ್ಣುಪೂಜೆಗಾಗಿ ಯಜ್ಞನೆನಿಸಿದವನು ಎಂದು ಉಪಾಸನೆ ಮಾಡಬೇಕು. (ಪುರುಷನು ಯಜ್ಞನಾದರೆ ಸವನಗಳು ಯಾವುವೆಂದರೆ—) ಪುರುಷನ ಆಯುಷ್ಯದ ಮಧ್ಯದಲ್ಲಿ ಮೊದಲಿನ ಇಪ್ಪತ್ತನಾಲ್ಕು ವರ್ಷಗಳು ಪ್ರಾತಃಸವನವು. (ಇಪ್ಪತ್ತನಾಲ್ಕು ವರ್ಷಗಳು ಪ್ರಾತಃ ಸವನವು ಆಗುವುದು ಹೇಗೆಂದರೆ—) ಗಾಯತ್ರಿಗೆ ಇಪ್ಪತ್ತನಾಲ್ಕು ಅಕ್ಷರಗಳು. ಪ್ರಾತಃಸವನವೂ ಗಾಯತ್ರೀ ಛಂದಸ್ಸುಳ್ಳ ಮಂತ್ರದಿಂದೊಡಗೂಡಿದ್ದು. (ಅಂತೂ ೨೪ ವರ್ಷದಷ್ಟು ಆಯುಷ್ಯಕ್ಕೆ ಪ್ರಾತಃಸವನದಲ್ಲಿ ಜಪಿಸತಕ್ಕ ಗಾಯತ್ರಿಯ ಅಕ್ಷರಗಳ ಸಂಖ್ಯೆಯು ಸಮವಾಗಿರುವುದರಿಂದ ಪ್ರಾತಃಸವನವೆಂದು ಹೇಳಿದ್ದು.) (ಅದರ ದೇವತೆಗಳನ್ನು ಹೇಳುತ್ತಾರೆ—) ೨೪ ವರ್ಷವೆಂಬ ಪ್ರಾತಃಸವನಕ್ಕೆ ವಸುಗಳು ದೇವತೆಗಳು. (ಇದೇ ಅಭಿಪ್ರಾಯವನ್ನು ತೈತ್ತಿರೀಯ ಶ್ರುತಿಯಲ್ಲಿ **ವಸುಮದ್ಗಣಸ್ಯ ಸೋಮದೇವತೀತಿ ಮತಿವಿದಃ ಪ್ರಾತಃಸವನಸ್ಯ ಗಾಯತ್ರಛಂದಸಃ** ಎಂದು ಹೇಳಿದೆ) ಪ್ರಾಣಿಗಳ ಸಮುದಾಯಗಳನ್ನು ಪ್ರಾತಃ ಸವನವೆಂಬ ೨೪ ವರ್ಷದಲ್ಲಿ ಇಂದ್ರಿಯಾಭಿಮಾನಿ ದೇವತೆಗಳು ವಾಸಗೊಳಿಸುವುದರಿಂದ ಪುರುಷಯಜ್ಞದಲ್ಲಿ ಪ್ರಾಣಗಳು ವಸುಗಳೆನ್ನುತ್ತಾರೆ. (ಪ್ರಾಣಗಳು ದೇಹದಲ್ಲಿದ್ದರೇನೇ ಎಲ್ಲವೂ ಇರುತ್ತದೆ. ಇಲ್ಲವಾದರೆ ಇರುವುದಿಲ್ಲ.) ॥ ೧ ॥

**ಪೀ—**ಪ್ರಾತಃಸವನದಲ್ಲಿ ಪ್ರಾರ್ಥಿತರಾದ ವಸುಗಳು ಅಲ್ಲಿ ಬರತಕ್ಕ ವಿಘ್ನಗಳನ್ನು ಪರಿಹರಿಸಿ ಮಾಧ್ಯಂದಿನ ಸವನಪರ್ಯಂತ ಆಯುಷ್ಯ ಕೊಡುವುದರಿಂದ ಇಲ್ಲಿಯೂ ಅಂತಕುದಿದೆ ಎನ್ನುತ್ತಾರೆ—

**ಉ. ॥ ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ವಸವ ಇದಂ ಮೇ ಪ್ರಾತಃಸವನಂ ಮಾಧ್ಯಂದಿನಂಸವನಮನು ಸಂತನುತೇತಿ ಮಾಽಹಂ ಪ್ರಾಣಾನಾಂ ವಸೂನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯು-ದ್ಧೈವ ತತ ಏತ್ಯಗದೋ ಹ ಭವತಿ ॥ ೨ ॥**

**ಅ ॥** ವಿಷ್ಣುವಿನ ಪೂಜೆಗೋಸ್ಕರ ಯಜ್ಞರೂಪನಾದ ಪುರುಷನನ್ನು ಪ್ರಾತಃಸವನವೆಂಬ ೨೪ ವರ್ಷದ ವಯಸ್ಸಿನಲ್ಲಿ ಜ್ವರಾದಿಗಳು ಪೀಡಿಸಿ ದುಃಖವನ್ನುಂಟುಮಾಡಿದರೆ ಆಗ ಆ ಪುರುಷನು (ತನ್ನನ್ನು ಯಜ್ಞನೆಂದು ತಿಳಿಯುತ್ತಾ ವಸುಗಳನ್ನು) ಪ್ರಾರ್ಥಿಸಬೇಕು. ಎಲೋ ಇಂದ್ರಿಯಾಭಿಮಾನಿಗಳಾದ ವಸುಗಳೇ ನನ್ನ ಪ್ರಾತಃಸವನವೆಂಬ ಪ್ರಥಮ ವಯಸ್ಸನ್ನು ಮಾಧ್ಯಂದಿನ ಸವನ ಪರ್ಯಂತ ತೆಗೆದುಕೊಂಡು ಹೋಗಿರಿ. (ಅಂದರೆ ಮಾಧ್ಯಂದಿನಸವನವೆನಿಸಿದ ಆಯುಷ್ಯದಿಂದ ಕೂಡಿಸಿರಿ.) ಇಂದ್ರಿಯಾಭಿಮಾನಿಗಳಾದ ವಸುಗಳಾದ ನೀವು ಪ್ರಾತಃ ಸವನಕ್ಕೆ ಅಧಿಪತಿಗಳಾಗಿರುವಾಗ ಭಗವಂತನ ಯಜ್ಞರೂಪನಾದ ನಾನು ನಾಶಹೊಂದಿದದವನಾಗಬಾರದು; ಎಂದು ಹೇಳಬೇಕು. ಹಾಗೆ ಪ್ರಾರ್ಥಿಸಿದುದರಿಂದ ಜ್ವರಾದಿಗಳು ನಿಶ್ಚಯವಾಗಿಯೂ ಬಿಟ್ಟು ಹೋಗುತ್ತವೆ. ಸಂದೇಹವಿಲ್ಲ. ರೋಗವಿಲ್ಲದವನಾಗುತ್ತಾನೆ. ॥ ೨ ॥

**ಉ. ॥ ಅಥ ಯಾನಿ ಚತುಶ್ಚತ್ವಾರಿಂಶದ್ವರ್ಷಾಣಿ ತನ್ಮಾಧ್ಯಂದಿನಂ-**

ಸವನಂ ಚತುಶ್ಚತ್ವಾರಿಂಶದಕ್ಷರಾ ತ್ರಿಷ್ಟುಪ್ ತ್ರೈಷ್ಟುಭಂ ಮಾಧ್ಯಂದಿನꣳ ಸವನಂ ತದಸ್ಯ ರುದ್ರಾ ಅನ್ವಾಯತ್ತಾಃ ಪ್ರಾಣಾ ವಾವ ರುದ್ರಾ ಏತೇ ಹೀದꣳ ಸರ್ವꣳ ರೋದಯಂತಿ || ೩ ||

ಅ || ಆ ಮೇಲೆ ನಲ್ವತ್ತನಾಲ್ಕು ವರ್ಷಗಳು ಮಾಧ್ಯಂದಿನ ಸವನವು. ತ್ರಿಷ್ಟುಪ್ ಛಂದಸ್ಸಿನಲ್ಲಿ ೪೪ ಅಕ್ಷರಗಳು. ಮಾಧ್ಯಂದಿನ ಸವನಕ್ಕೆ ತ್ರಿಷ್ಟುಪ್ ಛಂದಸ್ಸುಳ್ಳ ಋಕ್ಕು ಇರುವುದು. ಅದಕ್ಕೆ ರುದ್ರರು ದೇವತೆಗಳು. ರುದ್ರರೆಂದರೆ ಪ್ರಾಣರು. ಪ್ರಾಣಿಗಳ ಶರೀರಗಳಲ್ಲಿ ತಾವು ಇಲ್ಲದಿದ್ದರೆ ಪ್ರಾಣಿಗಳನ್ನು ಮರುಗಿಸುವುದರಿಂದ ರುದ್ರರೆನಿಸುತ್ತಾರೆ. || ೩ ||

ಉ. || ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ರುದ್ರಾ ಇದಂ ಮೇ ಮಾಧ್ಯಂದಿನꣳ ಸವನಂ ತೃತೀಯಂ ಸವನಮನುಸಂತನುತೇತಿ ಮಾಹಂ ಪ್ರಾಣಾನಾಂ ರುದ್ರಾಣಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹ ಭವತಿ || ೪ ||

ಉ. || ಅಥ ಯಾನ್ಯಷ್ಟಾಚತ್ವಾರಿꣳಶದ್ವರ್ಷಾಣಿ ತತ್ತೃತೀಯಸವನಮಷ್ಟಾಚತ್ವಾರಿಂಶದಕ್ಷರಾ ಜಗತೀ ಜಾಗತಂ ತೃತೀಯಸವನಂ ತದಸ್ಯಾದಿತ್ಯಾ ಅನ್ವಾಯತ್ತಾಃ ಪ್ರಾಣಾ ವಾವ ಆದಿತ್ಯಾ ಏತೇ ಹೀದꣳ ಸರ್ವಮಾದದತೇ || ೫ ||

ಅ || *...........೪೮ ವರ್ಷಗಳು ತೃತೀಯ ಸವನವು. ಜಗತೀ ಛಂದಸ್ಸಿನಲ್ಲಿ ೪೮ ಅಕ್ಷರಗಳು. ತೃತೀಯ ಸವನಕ್ಕೆ ಜಗತೀ ಛಂದಸ್ಸುಳ್ಳ ಋಕ್ಕು............ಶಬ್ದ ಮೊದಲಾದ ವಿಷಯಗಳ ಸಮೂಹವನ್ನು ತೆಗೆದುಕೊಳ್ಳುತ್ತಾರೆ. ಅದುಕಾರಣ ಆದಿತ್ಯರೆನಿಸುತ್ತಾರೆ. || ೪—೫ ||

ಉ. || ತಂ ಚೇದೇತಸ್ಮಿನ್ವಯಸಿ ಕಿಂಚಿದುಪತಪೇತ್ಸ ಬ್ರೂಯಾತ್ಪ್ರಾಣಾ ಆದಿತ್ಯಾ ಇದಂ ಮೇ ತೃತೀಯಸವನಮಾಯುರನುಸಂತನುತೇತಿ ಮಾಹಂ ಪ್ರಾಣಾನಾಮಾದಿತ್ಯಾನಾಂ ಮಧ್ಯೇ ಯಜ್ಞೋ ವಿಲೋಪ್ಸೀಯೇತ್ಯುದ್ಧೈವ ತತ ಏತ್ಯಗದೋ ಹೈವ ಭವತಿ || ೬ ||

ಅ || ೭೨ರ ಮೇಲೆ ೪೮ ವರ್ಷವು ತೃತೀಯ ಸವನವು. ಅಷ್ಟರ ಪರ್ಯಂತ ಅಂದರೆ ೧೧೬ ವರ್ಷಗಳನ್ನು ಪೂರ್ಣಗೊಳಿಸಿರಿ. ಪೂರ್ಣಾಯುಷ್ಯವನ್ನು ಕೊಟ್ಟು ಯಜ್ಞವನ್ನು ಸಮಾಪ್ತಗೊಳಿಸಿರಿ. || ೬ ||

ಪೀ—ಜೀವನು ತನ್ನನ್ನು ಯಜ್ಞನೆಂದು ಉಪಾಸನೆಮಾಡಿ ನಿರ್ವಿಘ್ನವಾಗಿ ಪೂರ್ಣವಾದ ಆಯುಷ್ಯವನ್ನು ಹೊಂದಿರುತ್ತಾನೆನ್ನುತ್ತಾರೆ—

* ಹಿಂದಿನಂತೆ ಅರ್ಥ.

**ಉ. ॥ ಏತದ್ಧ ಸ್ಮ ವೈ ತದ್ವಿದ್ವಾನಾಹ ಮಹಿದಾಸ ಐತರೇಯಃ ಸ ಕಿಂ ಮ ಏತದುಪತಪಸಿ ಯೋಽಹಮನೇನ ನ ಪ್ರೇಷ್ಯಾಮೀತಿ ಸಹ ಷೋಡಶಂ ವರ್ಷಶತಮಜೀವತ್ಸಹ ಷೋಡಶಂ ವರ್ಷಶತಂ ಜೀವತಿ ಯ ಏವಂ ವೇದ॥ ಇತಿ ಷೋಡಶಃ ಖಂಡಃ ॥ ಖ ೧೬ ॥** ॥ ೭ ॥

ಅ ॥ ಈ ಪುರುಷಯಜ್ಞಪ್ರಕಾರವನ್ನು ವಸ್ವಾದಿಗಳನ್ನು ಪ್ರಾರ್ಥಿಸಿದರೆ ಆಯಾಯ ವಯಸ್ಸಿನಲ್ಲಿ ಬರತಕ್ಕ ರೋಗಪರಿಹಾರವಾಗುತ್ತದೆ, ಎಂದೂ ತಿಳಿದ ಇತರಾದೇವಿಯ ಮಗನಾದ ಮಹಿದಾಸನೆನ್ನುವ ಒಬ್ಬಾನೊಬ್ಬ ಋಷಿಯು, ಎಲೋ ರೋಗವೇ ಯಜ್ಞನೆನಿಸಿದ ನನ್ನ ಶರೀರಕ್ಕೆ ಕ್ಲೇಶವನ್ನೇತಕ್ಕೆ ಕೊಡುತ್ತಿ. ಯಜ್ಞನೆನಿಸಿದ ನಾನು ನೀನು ಕೊಡತಕ್ಕ ಈ ದುಃಖದಿಂದ ಸಾಯಲಾರೆನು. (ನಿನಗೆ ವ್ಯರ್ಥ ವಾಗಿ ಶ್ರಮವು) ಎಂದು ಹೇಳಿದನು. ಹೀಗೆ ನಿಶ್ಚಯವುಳ್ಳ ಆ ಋಷಿಯು ನೂರಹದಿನಾರು (೧೧೬) ವರ್ಷ ಜೀವಿಸುತ್ತಿದ್ದನು. ಹೇಳಿದಪ್ರಕಾರ ಪುರುಷಯಜ್ಞಾದಿಗಳನ್ನು ತಿಳಿದು ಉಪಾಸನೆ ಮಾಡುವವನೂ ಕೂಡ ಈ ನಿಶ್ಚಯದಿಂದ ೧೧೬ ವರ್ಷ ಜೀವಿಸುತ್ತಿರುತ್ತಾನೆ. (ಎಂದು ಲಕ್ಷ್ಮೀದೇವಿಯು ಹೇಳಿದಳು.) ॥ ಖ ೧೬ ॥ ॥ ೭ ॥

ಪೀ —ಖಂಡಾರ್ಥದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ಭಾ. ॥ (೧) ವಿಷ್ಣುಪೂಜಾರ್ಥಯಜ್ಞೋಽಹಮಿತ್ಯುಪಾಸನಮಾದರಾತ್ । ಕುರ್ವೀತ ಪುರುಷೋ ನಿತ್ಯಂ ತಸ್ಯ ಯತ್ಷೋಡಶೋತ್ತರಂ । ಶತಮಾಯುಸ್ತತ್ಸವನತ್ರಯಮೀರಿತ- ಮುತ್ತಮಂ ॥ (೨) ಚತುರ್ವಿಂಶತ್ತು ಯತ್ಪೂರ್ವಂ ಪ್ರಾತಃಸವನಮೇವ ತತ್ ॥ (೩) ಪ್ರಾರ್ಥಯಿತ್ವಾ ವಸೂಂಸ್ತದ್ಗಂ ಪುಮಾನ್ಮೃತ್ಯುಮಪಾನುದೇತ್ ॥ (೪) ಮಧ್ಯೇ ಚತು- ಶ್ಚತ್ವಾರಿಂಶನ್ಮಧ್ಯಮಂ ಸವನಂ ಸ್ಮೃತಂ ॥ (೫) ರುದ್ರಾಣಾಂ ಪ್ರಾರ್ಥನೇನಾತ್ರ ಪುಮಾ- ನ್ಮೃತ್ಯುಮಪಾನುದೇತ್ ॥ (೬) ತತೋಽಷ್ಟಚತ್ವಾರಿಂಶತ್ತು ತೃ (ತ್ರುತ್ತ್ರೃ) ತೀಯಂ ಸವನಂ ಸ್ಮೃ (ಮ) ತಂ । ಆದಿತ್ಯಾನಾಂ ಪ್ರಾರ್ಥನೇನ ತದ್ಗಂ ಮೃತ್ಯುಮಪಾನುದೇತ್ ॥ ಇತಿ ಸರ್ವಯಜ್ಞೇ ॥** ॥ ೧ ॥

ಅ ॥ (೧) (೧ನೇ ಮಂತ್ರದ ಅರ್ಥ ಹೇಳುತ್ತಾರೆ—) ಜೀವರು ನಿತ್ಯದಲ್ಲಿಯೂ ಭಕ್ತಿಯಿಂದ ನಾನು ವಿಷ್ಣುವಿನ ಪೂಜೆಗಾಗಿ ಯಜ್ಞನೆನಿಸಿದವನೆಂದು ಉಪಾಸನೆಮಾಡಬೇಕು. ಪುರುಷನಿಗೆ ಆಗತಕ್ಕ *ನೂರ ಹದಿನಾರು (೧೧೬) ವರ್ಷವು ಮೂರು ಸವನಗಳೆನ್ನುತ್ತವೆ. ಈ ಸವನವು ತ್ರಿಷವಣ ಎಂದು ಪ್ರಸಿದ್ಧ ಮೂರು ಸವನಗಳಿಗಿಂತ ಹೆಚ್ಚು ಮತ್ತು ಉತ್ತಮವಾದ ಫಲವನ್ನು ಹೊಂದಿಸಿಕೊಡುವುದು, ಅದುಕಾರಣ ಆ ಸವನಗಳಿಗಿಂತಲೂ ಶ್ರೇಷ್ಠವು. (೨) ಮೊದಲಿನ ಇಪ್ಪತ್ತನಾಲ್ಕು ೨೪ ವರ್ಷಪರ್ಯಂತ ಆಯುಷ್ಯವು ಪ್ರಾತಃಸವನವೆನಿಸುತ್ತದೆ. (೩) (೨ನೇ ಮಂತ್ರದ ಅರ್ಥ ಹೇಳುತ್ತಾರೆ—) ವಸುಗಳನ್ನು ಪ್ರಾರ್ಥಿಸಿ ಕೊಂಡು ಮೃತ್ಯುವನ್ನು ಪರಿಹರಿಸಿಕೊಳ್ಳಬೇಕು. (೪) (೩ನೇ ಮಂತ್ರದ ಅರ್ಥ ಹೇಳುತ್ತಾರೆ—) ಪ್ರಾತಃ ಸವನದ್ದು ಇಪ್ಪತ್ತನಾಲ್ಕು(೨೪)ತೃತೀಯಸವನದ್ದು ನಲ್ವತ್ತೆಂಟು(೪೮)ಈ ವರ್ಷರೂಪ ಆಯುಷ್ಯಗಳ ಮಧ್ಯ ದಲ್ಲಿ ಇರುವ ನಲ್ವತ್ತನಾಲ್ಕು(೪೪)ವರ್ಷ ಆಯುಷ್ಯವು ಮಾಧ್ಯಂದಿನ ಸವನವೆನಿಸುತ್ತದೆ. (೫)(೪ನೇ ಮಂತ್ರದ ಅರ್ಥ ಹೇಳುತ್ತಾರೆ—) ಜೀವರು ರುದ್ರರನ್ನು ಪ್ರಾರ್ಥಿಸಿಕೊಂಡು ಅಲ್ಲಿ ಬಂದ ಮೃತ್ಯುವನ್ನು ಪರಿಹರಿಸಿ

* ಬಾರ್ಹಸ್ಪತ್ಯ ಮೊದಲಾದ ಮಾನಭೇದದಿಂದ ಅಥವಾ ದ್ವಾಪರಾದಿ ಯುಗಭೇದದಿಂದ ಪುರುಷರಿಗೆ ೧೧೬ ವರ್ಷ ಆಯುಷ್ಯವು.

ಕೊಳ್ಳಬೇಕು. (೬) (೫ನೇ ಮಂತ್ರದ ಅರ್ಥ ಹೇಳುತ್ತಾರೆ—) ಅದರ ಮೇಲಿನ ನಲ್ವತ್ತೆಂಟು ೪೮ ವರ್ಷ ಆಯುಷ್ಯವು ತೃತೀಯ ಸವನವೆನಿಸುತ್ತದೆ. (೬ನೇ ಮಂತ್ರದ ಅರ್ಥ—) ಆದಿತ್ಯರನ್ನು ಪ್ರಾರ್ಥಿಸಿಕೊಂಡು ಅಲ್ಲಿ ಬರತಕ್ಕ ರೋಗ, ಮೃತ್ಯುಗಳನ್ನು ಪರಿಹರಿಸಿಕೊಳ್ಳಬೇಕು, ಎಂದು ಸರ್ವಯಜ್ಞವೆಂಬ ಗ್ರಂಥದಲ್ಲಿದೆ. || ೧ ||

**ಪೀ—(1)** ಇಲ್ಲಿ ಹೇಳಿದ ಮಹಿದಾಸನು ಶ್ರೀಹರಿಯ ಅವತಾರನೆಂದಾದರೆ ೧೧೬ ವರ್ಷಪರ್ಯಂತ ಜೀವಿಸಿದನೆಂದು ಹೇಳಿದ ಅಲ್ಪಾಯುಷ್ಯವೂ ರೋಗಾದಿಗಳನ್ನು ವಸ್ವಾದಿಗಳ ಪ್ರಾರ್ಥನೆಯಿಂದ ಪರಿಹರಿಸಿಕೊಂಡನೆಂಬುದೂ ಕೂಡಲಾರದು. (2) ಹಾಗೆಯೇ ಮೇಲಿನ ಖಂಡದಲ್ಲಿದ್ದ ಕೃಷ್ಣನು ಶ್ರೀಹರಿಯ ಅವತಾರನೆಂದು ಇಟ್ಟುಕೊಂಡರೆ ಪಾನೇಚ್ಛೆಯಿಲ್ಲದವನಾದನೆಂಬುದೂ ಕೂಡಲಾರದು, ಅದುಕಾರಣ ಮಹಿದಾಸ ಕೃಷ್ಣರೆಂದರೆ ಯಾರು? ಎಂದರೆ—

**ಭಾ. || (೧) ಮಹಿದಾಸೋಽನ್ಯಃ ಕೃಷ್ಣಶ್ಚಾನ್ಯ ಏವ । (೨) ಮಹಿದಾಸಸ್ತ್ವೈತರೇಯಃ ಕೃಷ್ಣೋಽನ್ಯೋ ದೇವಕೀಸುತಃ । ಕಪಿಲಶ್ಚ ದ್ವಿತೀಯೋಽನ್ಯಸ್ತ್ರಯ ಏತೇ (೩) ಪುರಾ ನರಾಃ(ತನಾಃ) । ಸಂಗತ್ಯೋಚ್ಚೈಸ್ತಪಸ್ತೇಪುರ್ಬ್ರಹ್ಮಣೇ ಪರಮೇಷ್ಠಿನೇ । ಮಾತುಃ ಸ್ವಸ್ಯ ಚ ನಾಮೈಕ್ಯಂ ವಿಷ್ಣುನಾ ಸ್ಯಾದಿತಿ ಹ್ಯುಭೌ । ಸ್ವಾತ್ಮಶಿಷ್ಯಪ್ರಶಿಷ್ಯಾಣಾಂ ನಾಮೈಕ್ಯಂ ಕಪಿಲಸ್ತಥಾ । ಏವಮೇವ ಚ ವೇದೋಕ್ತಾ ಭವೇಮೇತಿ ತ್ವತಂದ್ರಿತಾಃ । ತಾನ್ವರಾನ್ ಪ್ರದದೌ ತೇಷಾಂ ಬ್ರಹ್ಮಾ ಲೋಕಪಿತಾಮಹಃ । ತಸ್ಮಾತ್ತನ್ನಾಮಿನಶ್ಚಾಸಂಸ್ತ್ರಯಸ್ತೇ ಮುನಯೋಽಪಿ ಹಿ । (೪) ಮಹಿದಾಸಸ್ತ್ವೈತರೇಯೋ ಬಹ್ವೃಚೋಪನಿಷದ್ಗತಃ । ಸಾಕ್ಷಾತ್ಸ ಭಗವಾನ್ವಿಷ್ಣುಸ್ತನ್ನಾಮೈಕೋ ಮುನಿರ್ಹ್ಯಭೂತ್ । (೫) ಕೃಷ್ಣಸ್ತು ವಾಸುದೇವಾಖ್ಯಃ ಪರಮಾತ್ಮೈವ ಕೇವಲಃ । ತನ್ನಾಮಾ ದೇವಕೀಪುತ್ರಸ್ತ್ವನ್ಯೋಽಪ್ಯಭವದಂಜಸಾ । (೬) ಕಪಿಲೋ ವಾಸುದೇವಾಖ್ಯಃ ಸಾಕ್ಷಾನ್ನಾರಾಯಣಃ ಪ್ರಭುಃ । ತನ್ನಾಮಾ ಕಪಿಲೋಽನ್ಯಸ್ತು ಶಿಷ್ಯನಾಮ್ನಾ ಸಹಾಭವತ್ । (೭) ಸ ಷೋಡಶಶತಂ ಜೀವೀ ಮಹಿದಾಸೋಽಪರಸ್ತ್ವೃಷಿಃ । ಘೋರಶಿಷ್ಯಸ್ತಥಾ ಕೃಷ್ಣಃ ಕಪಿಲಶ್ಚ ಕುಶಾಸ್ತ್ರಕೃತ್ । ತ್ರಯ ಏತೇ ವರಂ ಪ್ರಾಪ್ಯ ಬ್ರಹ್ಮಣಃ ಪರಮೇಷ್ಠಿನಃ । ಕೃತಕೃತ್ಯಾಃ ಪ್ರಮುಮುದುಸ್ತನ್ನಾಮಾನಶ್ಚ ತೇಽಭವನ್ || ಇತಿ ಕಾಲಕೀಯೇ || ೧, ೨, ೩, ೪, ೫, ೬, ೭ || ಇತಿ ಷೋಡಶಃ ಖಂಡಃ ||**
**|| ೧೬ ||** **|| ೨ ||**

ಅ || (೧) ಇಲ್ಲಿ ಹೇಳಿದ ಮಹಿದಾಸನು ವಿಷ್ಣುವಿನ ಅವತಾರನಾದ ಮಹಿದಾಸನಿಗಿಂತಲೂ, ಮೇಲಿನ ಖಂಡದಲ್ಲಿ ಹೇಳಲ್ಪಡತಕ್ಕ ಕೃಷ್ಣನು ವಿಷ್ಣುವಿನ ಅವತಾರನಾದ ಕೃಷ್ಣನಿಗಿಂತಲೂ ಬೇರೆ (ಅದುಕಾರಣ ಉಪನಿಷತ್ತಿನಲ್ಲಿ ಅವರಿಗೆ ಹೇಳಿದ ಫಲವು ಸಂಗತವೇ ಆಗಿದೆ.) (೨) (ವಿಷ್ಣುವಿನ ಅವತಾರದಿಂದ ಬೇರೆ ಮಹಿದಾಸ ಕೃಷ್ಣರು ಇದ್ದರೆ ಕೂಡಬಹುದಿತ್ತು. ಆ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಕೂಡಲಾರದೆಂದರೆ—) ಇತರಾದೇವಿಯ ಮಗನಾದ ಮಹಿದಾಸನೂ ದೇವಕೀಪುತ್ರನಾದ ಕೃಷ್ಣನೂ ಕಪಿಲನೂ ಕೂಡ ವಿಷ್ಣುವಿನ ಅವತಾರದಿಂದ ಬೇರೆಯೇ ಇದ್ದಾರೆ. ಇವರು ಮೂವರೂ ಜೀವರು. (೩) (ಹೀಗೆ ಹೇಳಿದ್ದು ಕೂಡುವುದಿಲ್ಲ ಏಕೆಂದರೆ—ಮಹಿದಾಸನು ಇತರಾದೇವಿಯ ಮಗನೆಂದೂ ಕೃಷ್ಣನು ದೇವಕೀಪುತ್ರನೆಂದೂ ಕಪಿಲನಿಗೆ ಆಸುರಿ ಮೊದಲಾದ ಶಿಷ್ಯರು ಇದ್ದಾರೆಂದೂ ಹೇಳಿದೆ ಅವುಗಳು ವಿಷ್ಣುವಿನ ಅವತಾರರಾದ ಮಹಿದಾಸಾದಿಗಳಲ್ಲಿರುವ ಗುಣಗಳಾಗಿವೆ. ಮತ್ತೂ ವೇದದಲ್ಲಿ ಹೇಳಲ್ಪಟ್ಟಿದ್ದಾರೆ. ಕಾರಣವಿಲ್ಲದೆ ವೇದದಲ್ಲಿ ಮನುಷ್ಯರು ಹೇಳಲ್ಪಟ್ಟಿದ್ದಾರೆಂಬುದು ಕೂಡಲಾರದು. ಆದಪ್ರಯುಕ್ತ ಶ್ರೀಹರಿಯ ಅವತಾರರೆಂದೇ ಇಟ್ಟುಕೊಳ್ಳಬೇಕೆಂದರೆ—) ಮೊದಲು ಈ ಮೂವರು ಮನುಷ್ಯರು ಕೂಡಿ

ಅಂದರೆ—ಮಹಿದಾಸ ಕೃಷ್ಣರಿಬ್ಬರು ತಮಗೆ ವಿಷ್ಣುವಿನ ನಾಮ ಬರಬೇಕೆಂದೂ, ತಮ್ಮ ತಾಯಂದಿಯರಿಗೆ ವಿಷ್ಣುವಿನ ತಾಯಂದಿಯರ ನಾಮ ಬರಬೇಕೆಂದೂ, ಹಾಗೆಯೇ ಕಪಿಲನು ತನ್ನ ಶಿಷ್ಯಪ್ರಶಿಷ್ಯರಿಗೆ ವಿಷ್ಣು ರೂಪನಾದ ಕಪಿಲನ ಶಿಷ್ಯಪ್ರಶಿಷ್ಯರ ನಾಮ ಬರಬೇಕೆಂದೂ ವಿಷ್ಣುರೂಪರಾದ ಮಹಿದಾಸಾದಿಗಳಂತೆಯೇ ವೇದದಲ್ಲಿ ಹೇಳಲ್ಪಡಬೇಕೆಂದೂ ಆಲಸ್ಯವಿಲ್ಲದೆ ಒಟ್ಟುಕೂಡಿ ಚತುರ್ಮುಖ ಬ್ರಹ್ಮನ ತಪಸ್ಸು ಮಾಡಿದರು. ಅವರಿಗೆ ಲೋಕಪಿತಾಮಹನಾದ ಚತುರ್ಮುಖನು ಆ ವರಗಳನ್ನು ಇತ್ತನು ಅದುಕಾರಣ ಮೂವರು ಮುನಿಗಳು ಆಯಾಯ ಹೆಸರುಳ್ಳವರಾದರು. ಅವರ ತಾಯಂದಿಯರು ಶಿಷ್ಯರೂ ಪ್ರಶಿಷ್ಯರೂ ಕೂಡ ವಿಷ್ಣುವಿನ ಅವತಾರರಾದ ಮಹಿದಾಸಾದಿಗಳ ತಾಯಿ ಮೊದಲಾದವರ ನಾಮವುಳ್ಳವರಾದರು. (೪) (ಹೇಳಿದ ಈ ಅರ್ಥದಲ್ಲಿ ಕಾಲಕೇಯವೆಂಬ ಗ್ರಂಥದಲ್ಲಿಯೇ ಸ್ಥಾನಾಂತರದಲ್ಲಿದ್ದ ವಾಕ್ಯವನ್ನು ಹೇಳುತ್ತಾರೆ—) ಐತರೇಯೋಪನಿಷತ್ತಿನಲ್ಲಿ ವರ್ಣಿಸಲ್ಪಡತಕ್ಕ ಇತರಾದೇವಿಯ ಮಗನಾದ ಮಹಿದಾಸನು ಸಾಕ್ಷಾತ್ ಭಗವಂತನೇ. ಮಹಿದಾಸನೆಂದು ಹೆಸರುಳ್ಳವನು ಒಬ್ಬ ಮುನಿಯು ಇರುತ್ತಿದ್ದನು. (೫) ವಸುದೇವ ಪುತ್ರನಾದ ಶ್ರೀಕೃಷ್ಣನು ಕೇವಲ ಪರಮಾತ್ಮನೇ. ಕೃಷ್ಣನೆಂದು ಹೆಸರುಳ್ಳವನು ದೇವಕೀಪುತ್ರನು ಮತ್ತೊಬ್ಬನಿದ್ದಾನೆ. (೬) ವಾಸುದೇವನೆನಿಸಿದ ಕಪಿಲನು ಸಾಕ್ಷಾತ್ ನಾರಾಯಣನು. ಆ ಹೆಸರುಳ್ಳವನು ಮತ್ತೊಬ್ಬ ಕಪಿಲನಿದ್ದಾನೆ. ಶಿಷ್ಯರಿಗೂ ಕಪಿಲರೂಪಿ ಶ್ರೀಹರಿಯ ಶಿಷ್ಯರ ಹೆಸರೇ ಆದವು. (೭) ಮಹಿದಾಸ ಋಷಿಯು ೧೧೬ ವರ್ಷ ಬದುಕುವವನೆಂದು ವೇದದಲ್ಲಿ ಹೇಳಿದೆ. ಹಾಗೆಯೇ ಕೃಷ್ಣನು ಘೋರ ಋಷಿಗಳ ಶಿಷ್ಯನು. ಕಪಿಲನು ಕುತ್ಸಿತ ಶಾಸ್ತ್ರಗಳನ್ನು (ನಿರೀಶ್ವರ ಸಾಂಖ್ಯ ಮತವನ್ನು) ನಿರ್ಮಿಸಿದವನು. ಈ ಮೂವರು ಬ್ರಹ್ಮನಿಂದ ವರವನ್ನು ಪಡೆದುಕೊಂಡು ಆಯಾಯ ನಾಮವುಳ್ಳವರಾದರು, ಕೃತಾರ್ಥರಾಗಿ ಸಂತೋಷಗೊಳ್ಳುತ್ತಿದ್ದರು, ಎಂದು ಕಾಲಕೇಯ ಗ್ರಂಥದಲ್ಲಿದೆ. ॥ ೫—೧೬ ॥ ॥ ೨ ॥

ಹದಿನಾರನೇ ಖಂಡವು ಮುಗಿಯಿತು.

## ೧೭ನೇ ಖಂಡವು

**ಪೀ**—ಪ್ರಸಿದ್ಧಯಜ್ಞದಲ್ಲಿ ದೀಕ್ಷೆ ಉಪಸತ್ ಸ್ತುತ ಶಸ್ತ್ರ ದಕ್ಷಿಣೆ ಇವುಗಳಿವೆ. ಅವುಗಳು ಪುರುಷ ಯಜ್ಞದಲ್ಲಿಯೂ ಇರುತ್ತವೆ ಎನ್ನುತ್ತಾರೆ —

**ಉ. ॥ ಸ ಯದಶಿಶಿಷತಿ ಯತ್ಪಿಪಾಸತಿ ಯನ್ನ ರಮತೇ ತಾ ಅಸ್ಯ ದೀಕ್ಷಾ ॥ ೧ ॥**

ಅ ॥ ಶ್ರೀಹರಿಯ ಪೂಜೆಗಾಗಿ ಆಗತಕ್ಕ ಯಜ್ಞನೆನಿಸಿದ ಪುರುಷನು ಭೋಜನಮಾಡಲಿಕ್ಕೆ ಇಚ್ಛಿಸುವುದೂ. ಕುಡಿಯಲಿಚ್ಛಿಸುವುದೂ, ಇಷ್ಟಾರ್ಥವು ಸಿಗದಿರುವುದರಿಂದ ಅತೃಪ್ತಿಯೂ, ಈ ಕ್ಷುತ್ (ಹಸಿವೆ) ಪಿಪಾಸಾ (ಕುಡಿಯಲಿಚ್ಛೆಯು) ಅರತಿ (ಸಂತೋಷಗೊಳ್ಳದಿರುವುದು) ಗಳು ಜೀವಸ್ವರೂಪಭೂತ ಯಜ್ಞಕ್ಕೆ ದೀಕ್ಷೆಗಳು (ಯಜ್ಞದಲ್ಲಿ ದೀಕ್ಷೆಯು ಮೊದಲಿನ ಕರ್ತವ್ಯ. ಅದರಂತೆ ಭೋಜನೇಚ್ಛಾದಿಗಳು ಮೊದಲು ಇರುವುದರಿಂದ ದೀಕ್ಷೆ ಎನಿಸುತ್ತವೆ.) ॥ ೧ ॥

**ಉ. ॥ ಅಥ ಯದಶ್ನಾತಿ ಯತ್ಪಿಬತಿ ಯದ್ರಮತೇ ತದುಪಸದೈರೇತಿ ॥ ॥ ೨ ॥**

ಅ || ಉಣ್ಣುವುದು, ಕುಡಿಯುವುದು, ಇಷ್ಟಪ್ರಾಪ್ತಿಯಿಂದ ತೃಪ್ತಿಯು ಎಂಬೀ ಅಶನ ಪಾನ ರಮಣ ಗಳು ಉಪಸದಗಳೆನ್ನುವ ಯಜ್ಞದ ಅಂಗಭೂತಗಳಾದ ಯಜಮಾನನ ವ್ಯಾಪಾರ ವಿಶೇಷಗಳಿಂದ ಸಾಮ್ಯವನ್ನು ಹೊಂದುತ್ತವೆ. (ಇವೆರಡೂ ದೀಕ್ಷೆಯಾದ ಮೇಲೆ ಆಗತಕ್ಕವುಗಳು.) || ೨ ||

**ಉ. || ಅಥ ಯದ್ಧಸತಿ ಯಜ್ಜಕ್ಷತಿ ಯನ್ಮೈಥುನಂ ಚರತಿ ಸ್ತುತಶ-ಸ್ತ್ರೈರೇವ ತದೇತಿ || ೩ ||**

ಅ || ನಗುವುದು, ತಿನ್ನುವುದು, ಸ್ತ್ರೀಸಂಭೋಗ, ಬೇರೆ ಕೃತ್ಯ ಮಾಡುವುದು ಇವುಗಳು ಸ್ತುತ (ಋಗ್ವೇದ ಮಂತ್ರಗಳ ಸಾಮಗಾನ) ಶಸ್ತ್ರ (ಶಂಸನ (ಸ್ತುತಿಸುವ) ಮಂತ್ರ) ಗಳಿಂದ ಸಾಮ್ಯವನ್ನು ಹೊಂದುತ್ತವೆ. (ಎರಡರಲ್ಲಿಯೂ ಶಬ್ದಗಳು ಸಮಾನಗಳಾಗಿವೆ.) || ೩ ||

**ಉ. || ಅಥ ಯತ್ತಪೋ ದಾನಮಾರ್ಜವಮಹಿಂಸಾ ಸತ್ಯವಚನಮಿತಿ ತಾ ಅಸ್ಯ ದಕ್ಷಿಣಾಃ || ೪ ||**

ಅ || ಕೃಚ್ಛ್ರ ಚಾಂದ್ರಾಯಣಾದಿಗಳೂ, ಅಥವಾ ಪರಾಪರತತ್ತ್ವವಿಚಾರವೂ ಸತ್ಪಾತ್ರದಲ್ಲಿ ನ್ಯಾಯದಿಂದ ಸಂಪಾದಿಸಲ್ಪಟ್ಟ ದ್ರವ್ಯಾದಿಗಳನ್ನು ದಾನಕೊಡುವುದು, ಧರ್ಮಮಾರ್ಗದಲ್ಲಿ ಮನಸ್ಸು ವಚನ ಶರೀರ ಕರ್ಮಗಳಲ್ಲಿ ಏಕರೀತಿಯಾಗಿರುವುದು, ವ್ಯರ್ಥವಾಗಿ ಹಿಂಸೆಮಾಡದಿರುವುದು, ಯಥಾರ್ಥ ನುಡಿಯು ಇವುಗಳು ಪುರುಷಯಜ್ಞಕ್ಕೆ ದಕ್ಷಿಣೆಗಳು. (ಇವೆರಡೂ ಧರ್ಮವನ್ನು ಪುಷ್ಟೀಕರಿಸತಕ್ಕವು ಗಳು) || ೪ ||

**ಉ.|| ದದಾತ್ಯಾತ್ಮ ದಕ್ಷಿಣಂ ವಾ ಏತದ್ಯತ್ಸತ್ರಮಿತಿ ತಸ್ಮಾದಾಹುಃ ಸೋ-ಷ್ಯತ್ಯಸೋಷ್ಟೇತಿ ಪುನರುತ್ಪಾದನಮೇವಾಸ್ಯ ತನ್ಮರಣಮೇವಾವಭೃಥಃ || ೫ ||**

ಅ || ಸತ್ರವೆಂಬ ಕರ್ಮವು ಜೀವನೇ ದಕ್ಷಿಣೆಯಾಗಿಯುಳ್ಳದ್ದು ಪುರುಷನು ಯಜ್ಞರೂಪನಾದುದ ರಿಂದಲೇ ಪುರುಷನ ಹುಟ್ಟುವಿಕೆಯು (ಅಂದರೆ ಪುತ್ರೋತ್ಪತ್ತಿಯು ಸಮೀಪಿಸಿದಾಗ) ಇವನ (ಹೆಂಡ ತಿಯು) ಮಗುವನ್ನು ಹೆರುವಳು. ಮಗು ಹುಟ್ಟಿದೊಡನೆಯೇ ಹೆತ್ತಳು ಎನ್ನುತ್ತಾರೆ. ಪ್ರಸಿದ್ಧಯಜ್ಞ ದಲ್ಲಿಯೂ ಸೋಮಲತೆಯನ್ನು ಹಿಂಡುವನು, ಆ ಮೇಲೆ ಹಿಂಡಿದನು ಎನ್ನುತ್ತಾರೆ. ಅದುಕಾರಣ ಯಜ ಮಾನನಿಗೆ ಪ್ರಥಮತಃ ತಂದೆಯಿಂದ ಉತ್ಪತ್ತಿಯು, ಆ ಮೇಲೆ ತಾಯಿಯಿಂದ ಉತ್ಪತ್ತಿಯು ಎನ್ನುತ್ತಾರೆ ಪುರುಷನ ಮರಣವು, ಪುರುಷಯಜ್ಞದ ಅವಭೃಥಸಮಾನವು (ಯಜ್ಞ ಮುಗಿದ ಮೇಲೆ ಮಾಡತಕ್ಕ ಸ್ನಾನವು) (ಎರಡರಲ್ಲಿಯೂ ಸಮಾಪ್ತಿಯು ಸಮವೇ ಆಗಿದೆ) ಅಂದರೆ—ಆಯುಷ್ಯವು ಯಜ್ಞಸದೃಶವಾಗಿ ರುವುದರಿಂದ ಯಜ್ಞದಲ್ಲಿ ಸೋಮಲತೆಯನ್ನು ಹಿಂಡುವನು ಹಿಂಡಿದನು, ಎಂದು ಇದ್ದಂತೆಯೇ ಇಲ್ಲಿಯೂ ಯಜಮಾನನು ತಂದೆಯಿಂದ ಮೊದಲು ಹುಟ್ಟಿ ಎರಡನೇ ತಾಯಿಯಿಂದ ಹುಟ್ಟುವುದೆನ್ನುತ್ತಾರೆ. ಪುರುಷ ಯಜ್ಞದ ಮರಣವೇ ಅವಭೃಥಸಮಾನವು || ೫ ||

**ಉ. || ತದ್ಧೈತದ್ಘೋರ ಆಂಗಿರಸಃ ಕೃಷ್ಣಾಯ ದೇವಕೀಪುತ್ರಾಯೋ-ಕ್ತ್ವೋವಾಚಾಪಿಪಾಸ ಏವ ಸ ಬಭೂವ ಸೋಽಂತವೇಲಾಯಾಮೇತ-**

**ತ್ರಯಂ ಪ್ರತಿಪದ್ಯೇತಾಕ್ಷಿತಮಸ್ಯಚ್ಯುತಮಸಿ ಪ್ರಾಣಸಂಶಿತಮಸೀತಿ ತತ್ರೈ-ತೇ ದ್ವೇ ಋಚೌ ಭವತಃ ॥ ೬ ॥**

ಅ ॥ ಅಂಗಿರಋಷಿಯ ಮಗನಾದ ಘೋರನೆನ್ನುವ ಋಷಿಯು, ಹಿಂದಿನ ಖಂಡದಲ್ಲಿಯೂ ಈ ಖಂಡದಲ್ಲಿಯೂ ಹೇಳಿದ ಪುರುಷಯಜ್ಞ ಪ್ರಕಾರವನ್ನು ದೇವಕೀ ಎಂಬ ಹೆಂಗಸಿನ ಮಗನಾದ ವಿಷ್ಣುವಿನ ಅವತಾರನಲ್ಲದ ಕೃಷ್ಣನೆನ್ನುವ ಮುನಿಗೆ ಹೇಳಿ ವಿಷ್ಣುವಿನ ಉಪಾಸನಪ್ರಕಾರವನ್ನು ಹೇಳಿದನು. ಅವನು ಕುಡಿಯಲಿಚ್ಛೆ ಮೊದಲಾದ ದೀಕ್ಷಾದಿಗಳುಳ್ಳವನಾದನು ಅಥವಾ ಬೇರೆ ವಿದ್ಯೆಗಳಲ್ಲಿ ಆಸಕ್ತಿಯನ್ನು ಬಿಟ್ಟನು. ಈ ವಿದ್ಯೆಯಲ್ಲಿಯೇ ಆಸಕ್ತಿಯುಳ್ಳವನಾದನು. (ಅಂಗಿರಸರ ಪುತ್ರರಾದ ಘೋರಋಷಿಗಳು ಕೃಷ್ಣನೆಂಬ ಮುನಿಗೆ ಏನು ಹೇಳಿದರೆಂದರೆ—) ತನ್ನನ್ನು ಆಯುರ್ಯಜ್ಞನೆಂದು ಧ್ಯಾನಿಸತಕ್ಕ ಪುರುಷನು ಅವಭೃಥರೂಪವಾದ ಪ್ರಾಣ ಹೋಗುವ ಕಾಲದಲ್ಲಿ ಶ್ರೀಹರಿಯ ಮೂರು ಮಂತ್ರಗಳನ್ನು ಜಪಿಸಬೇಕು (ಆ ಮೂರು ಮಂತ್ರಗಳನ್ನು ಹೇಳುತ್ತಾರೆ—) ಎಲೋ ಶ್ರೀಹರಿಯೇ ನೀನು ನಾಶವಿಲ್ಲದವನಾಗಿರುತ್ತಿ. ಗುಣಗಳಿಂದ ಚ್ಯುತಿಯಿಲ್ಲದವನಾಗಿರುತ್ತಿ. (ಪೂರ್ಣಗುಣಗಳುಳ್ಳವನಾಗಿರುತ್ತಿ) ಮುಖ್ಯಪ್ರಾಣನಿಗಿಂತಲೂ ಹೆಚ್ಚು ಸುಖವುಳ್ಳವನಾಗಿರುತ್ತಿ, ಎಂದು ಧ್ಯಾನಿಸಬೇಕು. ಇಂತಹ ಯಜ್ಞಧ್ಯಾನದಿಂದ ಅಪರೋಕ್ಷಜ್ಞಾನವುಂಟಾಗಿ ಅದರಿಂದ ಭಗವಂತನ ಸಾಮೀಪ್ಯರೂಪ ಮೋಕ್ಷವನ್ನು ಹೊಂದುತ್ತಾನೆ ಭಗವದುಪಾಸನೆಯಿಂದ ಅಪರೋಕ್ಷಜ್ಞಾನವು, ಅದರಿಂದ ಪರಬ್ರಹ್ಮಪ್ರಾಪ್ತಿಯು, ಎಂಬೀ ಎರಡು ಅರ್ಥಗಳಲ್ಲಿ ಕ್ರಮವಾಗಿ ಎರಡು ಋಕ್ಕುಗಳು ಪ್ರಮಾಣಗಳಾಗುತ್ತವೆ ॥ ೬ ॥

ಓ—ಆ ಋಕ್ಕುಗಳನ್ನು ಹೇಳುತ್ತಾರೆ—

**ಉ. ॥ (೧)ಆದಿತ್ಪ್ರತ್ನಸ್ಯ ರೇತಸಃ (೨) ಉದ್ವಯಂ ತಮಸಸ್ಪರಿ ಜ್ಯೋ-ತಿಷ್ಪಶ್ಯಂತ ಉತ್ತರಂ ಸ್ವಃ ಪಶ್ಯಂತ ಉತ್ತರಂ ದೇವಂ ದೇವತ್ರಾ ಸೂರ್ಯಮ-ಗನ್ಮ ಜ್ಯೋತಿರುತ್ತಮಮಿತಿ ಜ್ಯೋತಿರುತ್ತಮಮಿತಿ ॥ ಇತಿ ಸಪ್ತದಶಃ ಖಂಡಃ ॥**
॥ ೫-೧೭ ॥ ॥ ೭ ॥

**ಅ ॥ (೧) ಆದಿತ್ ಪ್ರತ್ನಸ್ಯ ರೇತಸೋ ಜ್ಯೋತಿಷ್ಪಶ್ಯಂತಿ ವಾಸರಂ । ಪರೋ ಯದಿಧ್ಯತೇ ದಿವಾ ॥** ಪ್ರಕಾಶಸ್ವರೂಪನಾದ ಯಾವ ಪರಬ್ರಹ್ಮನು ದ್ಯುಲೋಕಕ್ಕಿಂತ ಮೇಲೆ ಇರತಕ್ಕ ವೈಕುಂಠಲೋಕದಲ್ಲಿ ಪ್ರಕಾಶಿಸಿಕೊಂಡು ಪೂರ್ಣವಾಗಿಯೇ ಇದ್ದಾನೋ, ಅಂತಹ ಅನಾದಿಯಾದ ಸುಖಸ್ವರೂಪನಾದ ಶ್ರೀಹರಿಯು ಸುಖವನ್ನುಂಟುಮಾಡುವ ರೂಪವನ್ನು ಉಪಾಸನೆಯಿಂದ ಲಭಿಸುವ ಭಗವತ್ಪ್ರಸಾದದಿಂದಲೇ ಜ್ಞಾನಿಗಳು ನೋಡುತ್ತಾರೆ (೨) ಜ್ಞಾನಾನಂದಸ್ವರೂಪನಾದ ಶ್ರೀಹರಿಯನ್ನು ನೋಡುತ್ತಿರುವ ನಾವು ಅಜ್ಞಾನಾದ್ಯನರ್ಥಪರಂಪರೆಗಳಿಂದ ಮೇಲೆ ಬಂದಿರುತ್ತೇವೆ (ಅಜ್ಞಾನಾದಿಗಳಿಲ್ಲದವರಾಗಿರುತ್ತೇವೆ.) ದೇವತೆಗಳಿಗೂ ಆದಿದೇವನಾದ ಜ್ಞಾನಿಗಳಿಂದ ಹೊಂದಲ್ಪಡುವ ಉತ್ತಮೋತ್ತಮನಾದ ಉತ್ ಎನಿಸಿಕೊಂಡ ವಾಸುದೇವನನ್ನು ಹೊಂದಿರುತ್ತೇವೆ. ॥ ೫ ೧೭ ॥ ॥ ೭ ॥

**ಭಾ. ॥ (೧) ಸ್ವರೂಪಭೂತಯಜ್ಞಸ್ಯ ಕ್ಷುತ್ಪಿಪಾಸಾಽರತಿಸ್ತಥಾ । ದೀಕ್ಷಾ ॥ (೨) ಭೋಜನಪಾನೇ ಚ ರತಿಶ್ಚೋಪಸದಃ ಸ್ಮೃತಾಃ ॥ (೩) ವ್ಯಾಯಹಾಸಭಕ್ಷಾಸ್ತು ಸ್ತುತ-(೩)ಶಸ್ತ್ರಾತ್ಮಕಾಃ ಸ್ಮೃತಾಃ ॥ (೪) ತಪೋದಾನಾರ್ಜವಾಹಿಂಸಾಃ ಸತ್ಯಮಸ್ಯ ದಕ್ಷಿಣಾ ॥**

**(೫) ಸೋಷ್ಯತ್ಯಸೋಷ್ಟೇತಿ ತತೋ ಯಜ್ಞವತ್ಪುತ್ರಜನ್ಮನಿ । ಆಹುರ್ಹಿ ಪುನರುತ್ಪತ್ತಿಃ ಪ್ರಸವಃ ಪ್ರಥಮಾ ಪಿತುಃ । ಯಜ್ಞಸ್ನಾನಂ ತು ಮರಣಂ ॥ (೬) ತದಾ ಧ್ಯಾಯೇತ್ತ್ರಯಂ ಪುಮಾನ್ । ಭಗವನ್ನಕ್ಷಯೋಽಸಿ ತ್ವಮಚ್ಯುತೋಽಸಿ ಗುಣೈಃ ಸದಾ ॥ ಪ್ರಾಣಾಚ್ಚ ಸುಖಿ-(ಖಿ)ತೋ ನಿತ್ಯಮಾಧಿಕ್ಯೇನೇತಿ ಚಿಂತಯೇತ್ । ಇತಿ ಸತ್ತತ್ತ್ವೇ　　॥ ೧ ॥**

**ಅ** ॥ (೧) (೧ನೇ ಮಂತ್ರದ ಅರ್ಥ ಹೇಳುತ್ತಾರೆ—) ಪುರುಷನ ಸ್ವರೂಪಭೂತವಾದ ಯಜ್ಞಕ್ಕೆ ಹಸಿವು, ಪಾನೇಚ್ಛೆ, ಅತೃಪ್ತಿ ಇವುಗಳು ದೀಕ್ಷೆಯು. (೨) (೨ನೇ ಮಂತ್ರದ ಅರ್ಥ.) ಭೋಜನ, ಪಾನ, ತೃಪ್ತಿ ಇವುಗಳು ಉಪಸತ್ (ಯಜ್ಞಕ್ಕೆ ಅಂಗಭೂತಗಳಾದ ಯಜಮಾನನ ವ್ಯಾಪಾರವಿಶೇಷಗಳು) ಎನ್ನುತ್ತವೆ. (೩)(೩ನೇ ಮಂತ್ರದ ಅರ್ಥ—) ಸಂಭೋಗ, ನಗುವುದು, ಭಕ್ಷಣ ಇವುಗಳು ಸಾಮಗಾನ ಮಂತ್ರರೂಪಗಳು. (೪) (೪ನೇ ಮಂತ್ರದ ಅರ್ಥ—) ಪುರುಷಯಜ್ಞಕ್ಕೆ ತಪಸ್ಸು, ದಾನ, ಮನಸ್ಸು ಮೊದಲಾದವುಗಳಲ್ಲಿ ಏಕರೀತಿಯಾಗಿರುವುದು, ಅಹಿಂಸೆ ಯಥಾರ್ಥನುಡಿ ಇವುಗಳು ದಕ್ಷಿಣೆಯು. (೫) (೫ನೇ ಮಂತ್ರದ ಅರ್ಥ—) ಯಜ್ಞದಲ್ಲಿ ಚೈತ್ರನು ಸೋಮಲತೆಯನ್ನು ಹಿಂಡುವನೆಂದೂ, ಆ ಮೇಲೆ ಹಿಂಡಿದನೆಂದೂ ಶಬ್ದವನ್ನು ಪ್ರಯೋಗಿಸುತ್ತಾರೆ. ಹಾಗೆಯೇ ಇಲ್ಲಿಯೂ ಪುತ್ರೋತ್ಪತ್ತಿಯು ಸಮೀಪಿಸಿದಾಗ ಯಜಮಾನನ ಹೆಂಡತಿಯು ಮಗುವನ್ನು ಹೆರುವಳೆಂದೂ ಆ ಮೇಲೆ ಹೆತ್ತಳೆಂದೂ ಹೇಳುತ್ತಾರೆ. **ಸೋಷ್ಯತಿ ಅಸೋಷ್ಟ** ಎಂಬ ಶಬ್ದಗಳು ಎರಡು ಕಡೆಗಳಲ್ಲಿಯೂ ಸಮಾನವೇ. (ಪುತ್ರೋತ್ಪತ್ತಿಯು ಯಜಮಾನನಿಗೆ ಮರಳಿ ಉತ್ಪತ್ತಿಯಾಗುವುದು ಹೇಗೆಂದರೆ—) ಯಜಮಾನನ ಉತ್ಪತ್ತಿಯು ಪುತ್ರನ ಉತ್ಪತ್ತಿಯು. (ಅಂದರೆ— **ಆತ್ಮಾ ವೈ ಪುತ್ರನಾಮಾಸಿ** ಎಂಬ ವೇದದಿಂದ ಪುತ್ರನ ದೇಹವೂ ತಂದೆಯ ದೇಹದ ಅಂಶವಾಗಿರುವುದರಿಂದ ಪುತ್ರೋತ್ಪತ್ತಿಯು ತಂದೆಯು ಪುನಃ ಹುಟ್ಟಿದಂತೆ ಆಗುತ್ತದೆ) ಪುರುಷಯಜ್ಞದ ಮರಣವೇ, ಯಜ್ಞವು ಮುಗಿದಮೇಲೆ ಮಾಡತಕ್ಕ ಅವಭೃಥಸ್ನಾನವು. (೬) ಮರಣಕಾಲದಲ್ಲಿ ಯಜ್ಞರೂಪನಾದ ಪುರುಷನು ಮೂರು ಮಂತ್ರಗಳನ್ನು ಜಪಿಸಬೇಕು. ಅಂದರೆ—(1) ಭಗವಂತನೇ ನಾಶರಹಿತನಾಗಿರುತ್ತಿ. (2) ಸದಾ ಪೂರ್ಣ ಗುಣಗಳುಳ್ಳವನಾಗಿರುತ್ತಿ. (3) ಸದಾ ಮುಖ್ಯಪ್ರಾಣನಿಗಿಂತಲೂ ಅತ್ಯಧಿಕವಾಗಿ ಸುಖವುಳ್ಳವನಾಗಿರುತ್ತಿ ಎಂದು ಧ್ಯಾನಿಸಬೇಕು, ಎಂದು ಸತ್ತತ್ತ್ವವೆಂಬ ಗ್ರಂಥದಲ್ಲಿದೆ　　॥ ೧ ॥

**ಪೀ**—ಹೀಗೆ ಉಪಾಸನೆ ಮಾಡಿದರೆ ಅಪರೋಕ್ಷ ಜ್ಞಾನವು ಉಂಟಾಗುತ್ತದೆ. ಅದರಿಂದ ಮೋಕ್ಷವಾಗುತ್ತದೆಂಬ ಎರಡು ಅರ್ಥಗಳಲ್ಲಿ ವೇದಪ್ರಮಾಣಗಳನ್ನು ಹೇಳುತ್ತಾರೆ—

**ಭಾ ॥ (೧) ಆದಿತ್ತಸ್ಮಾದೇವ ತತ್ಪ್ರಸಾದಾದೇವ । ಪ್ರತ್ನಸ್ಯ ಪುರಾತನಸ್ಯಾನಾದೇರ್ಭಗವತೋ ರೇತಸೋ ರತಿರೂಪಸ್ಯ ಜ್ಯೋತಿಃ (ಪ್ರ) ಪಶ್ಯಂತಿ । ವಾಸೇನ ರಮಯತೀತಿ ವಾಸರಂ ॥ (೨) ದಿವಃ ಪರತೋ ವೈಕುಂಠೇ ಯದಿದ್ಧ್ಯತೇ । ಖುದ್ಧತಮಮೇವ ಸರ್ವದಾ । ಅಥ ಯದತಃ ಪರ (ಪರೋ ದಿವಃ) ಇತ್ಯುಕ್ತತ್ವಾಚ್ಚ ॥ (೩) ನ ಚಾದಿತ್ಯಮಂಡಲಂ ದಿವಃ ಪರತಃ ॥ (೪) ಉತ್ತರಂ ಜ್ಯೋತಿಃ ಪಶ್ಯಂತಃ ಸ್ವರಾನಂದರೂಪಂ ಪರಿಪಶ್ಯಂತೋ ವಯಂ ತಮಸ ಉದಗನ್ಮ । ಉತ್ತರಂ ಜ್ಯೋತಿಃ ಪಶ್ಯಂತಸ್ತದೇವೋತ್ತರಂ ಸ್ವಶ್ಚ ಪಶ್ಯಂತಃ । ದ್ವಿರುಕ್ತಿಸ್ತಾತ್ಪರ್ಯಾರ್ಥಾ(ರ್ಥೇ) ॥ (೫) ಉದಾಖ್ಯಂ ಜ್ಯೋತಿರುತ್ತಮಂ ತಮಸಃ ಸಕಾಶಾದಗನ್ಮ ಪ್ರಾಪ್ತಾಃ ಸ್ಮೇತ್ಯರ್ಥಃ । ತಸ್ಯೋದಿತಿನಾಮೇತಿ ಶ್ರುತೇಃ ॥ (೬) ದೇವತ್ರಾ ದೇವಂ ದೇವವಿಷಯೇಽಪಿ ದೇವಂ ದೇವಾನಾಂ (ಅಪಿ) ದೇವಮಿತ್ಯರ್ಥಃ । ಸೂರಿಭಿಃ ಪ್ರಾಪ್ಯತ್ವಾತ್ ಸೂರ್ಯಂ ॥ (೭ ರತಿರೂಪಂ ಪರಂ ಜ್ಯೋತಿರನಾದೇಃ ಕೇಶವಸ್ಯ ಯತ್ । ತತ್ಪ್ರಸಾದೇನ**

**ಪಶ್ಯಂತಿ ಹೃದಿ ವಾಸಾದ್ರತಿಪ್ರದಂ ॥ ಯತ್ಪೂರ್ಣಂ ಸರ್ವ(ತ್ಸ)ದಾ ಭಾತಿ ವೈಕುಂಠೇ ಪರತೋ ದಿವಃ । ತದುದಾಖ್ಯಂ ಪ್ರಪಶ್ಯಂತೋ ನಿರ್ಗತ್ಯ ತಮಸೋ ವಯಂ ॥ ಜ್ಯೋತಿ-ರಾನಂದಸದ್ರೂಪಮುತ್ತಮೋತ್ತಮಸೂತ್ತಮಂ । ದೇವಾನಾಂ ದೈವತಂ ಸಾಕ್ಷಾತ್ಸೂರಿ-ಪ್ರಾಪ್ಯಂ ಪರಂ ಪದಂ ॥ ಪ್ರಾಪ್ತಾಃ ಸ್ಮ ವಾಸುದೇವಾಖ್ಯಮಿತಿ ಮಂತ್ರದೃಗಬ್ರವೀತ್ । ಇತಿ ನಾರಾಯಣೀಯೇ ॥ ೧,೨,೩,೪,೫,೬,೭ ॥ ಇತಿ ಸಪ್ತದಶಃ ಖಂಡಃ ॥೫–೧೭॥ ೨ ॥**

**ಅ** ॥ (೧) ಆದಿತ್–ಭಗವತ್ಪ್ರಸಾದದಿಂದಲೇ, ಪ್ರತ್ನಸ್ಯ–ಪುರಾತನನಾದ ಅನಾದಿಯಾದ, ರೇತಸಃ–ಸುಖಸ್ವರೂಪನಾದ ಶ್ರೀಹರಿಯ ಪ್ರಕಾಶಿಸುತ್ತಿರುವ ರೂಪವನ್ನು ಜ್ಞಾನಿಗಳು ನೋಡುತ್ತಾರೆ. ಆವಾಸ ಮಾಡಿ ಸುಖಗೊಳಿಸುವುದರಿಂದ ವಾಸರನೆನಿಸುತ್ತಾನೆ. (೨) ದ್ಯುಲೋಕಕ್ಕಿಂತ ಮೇಲೆ ಇರುವ ವೈಕುಂಠದಲ್ಲಿ ಪ್ರಕಾಶಿಸುತ್ತಿದ್ದಾನೆ. ಸರ್ವದಾ ಪ್ರಕಾಶಿಸಿಕೊಂಡೇ ಇದ್ದು **ಅಥ ಯದತಃ ಪರೋ,** ದ್ಯುಲೋಕಕ್ಕಿಂತ ಮೇಲೆ ಇರುವವನೆಂದು ಹೇಳಿದೆ. (೩) ಆದಿತ್ಯಮಂಡಲವು (ಅಂತರಿಕ್ಷಲೋಕದಲ್ಲಿದ್ದ ಪ್ರಯುಕ್ತ) ಅದು ದ್ಯುಲೋಕಕ್ಕಿಂತ ಮೇಲೆ ಇರತಕ್ಕುದಲ್ಲ. (೪) (ಎರಡನೇ ಋಕ್ಕಿನ ಅರ್ಥ ಹೇಳುತ್ತಾರೆ—) ಹಿಂದೆ ಹೇಳಿದ ಉಪಾಸನೆಯಿಂದ ಉತ್ತಮವಾದ ಜ್ಯೋತಿಸ್ಸನ್ನು ನೋಡುವ, ಜ್ಞಾನ ಆನಂದಸ್ವರೂಪವಾದ ಅತ್ಯುತ್ತಮವಾದ ಆ ಜ್ಯೋತಿಸ್ಸನ್ನೇ ನೋಡುತ್ತಿರುವ ನಾವು ಅಜ್ಞಾನದಿಂದ ಬಿಡುಗಡೆ ಹೊಂದಿದೆವು ಉತ್ತಮವಾದ ಜ್ಯೋತಿಸ್ಸನ್ನು ನೋಡುವುದೇ ಆನಂದರೂಪವನ್ನು ನೋಡುವುದು. ಈ ಪ್ರಮೇಯವು ಅತ್ಯಾವಶ್ಯಕವೆಂದು ತಿಳಿಸುವುದಕ್ಕಾಗಿ ಎರಡು ಸಲ ಹೇಳಿದ್ದು. (೫) (ಈಗ ಮತ್ತೊಂದು ಪ್ರಕಾರ ಅರ್ಥ ಹೇಳುತ್ತಾರೆ—) ದುರ್ಗಾದೇವಿಗಿಂತ ಉತ್ತಮವಾದ ಉತ್ ಎನಿಸಿಕೊಂಡ ಜ್ಯೋತಿಸ್ಸನ್ನು ಹೊಂದಿರುತ್ತೇವೆ. ಶ್ರೀಹರಿಗೆ ಉತ್ ಎಂದು ಹೆಸರು, ಎಂದು ವೇದವು (೬) ದೇವತ್ರಾದೇವಂ–ದೇವತೆಗಳ ವಿಷಯದಲ್ಲಿಯೂ ದೇವನು ಅಂದರೆ ದೇವತೆಗಳಿಗೆ ದೇವತ್ವವನ್ನು ಕೊಟ್ಟವನು. ಜ್ಞಾನಿಗಳಾದ ಬ್ರಹ್ಮಾದಿಗಳಿಂದ ಹೊಂದಲ್ಪಡುವುದರಿಂದ ಶ್ರೀಹರಿಯು ಸೂರ್ಯನೆನಿಸುವನು. (೭) ಅನಾದಿಯಾದ ಕೇಶವನ ಸುಖಸ್ವರೂಪವಾದ ಉತ್ತಮವಾದ ಜ್ಯೋತಿಸ್ಸನ್ನು ಶ್ರೀಹರಿಯ ಅನುಗ್ರಹದಿಂದಲೇ ನೋಡುತ್ತಾರೆ. ಹೃದಯದಲ್ಲಿ ಆವಾಸಮಾಡುವುದರಿಂದ ಸುಖವನ್ನು ಕೊಡುವವನು, ಗುಣಪರಿಪೂರ್ಣನು. ಅಂತಹನು ದ್ಯುಲೋಕದಿಂದ ಮೇಲೆ ಇರುವ ವೈಕುಂಠಲೋಕದಲ್ಲಿ ಪ್ರಕಾಶಿಸಿಕೊಂಡಿದ್ದಾನೆ. ಅಜ್ಞಾನದಿಂದ ಬಿಡುಗಡೆ ಹೊಂದಿ ಉತ್ ಎನಿಸಿಕೊಂಡ ಶ್ರೀಹರಿಯನ್ನು ನೋಡುತ್ತಿರುವ ನಾವು, ಪ್ರಕಾಶ ಆನಂದ, ಸತ್ ಸ್ವರೂಪನೂ, ಉತ್ತಮೋತ್ತಮೋತ್ತಮನೂ, ದೇವತೆಗಳಿಗೂ ದೇವತ್ವವನ್ನು ಕೊಟ್ಟವನೂ, ಬ್ರಹ್ಮಾದಿಗಳಿಂದ ಹೊಂದಲ್ಪಡುವವನೂ, ಸರ್ವೋತ್ತಮನೂ, ಆದ ವಾಸುದೇವನನ್ನು ಮುಖ್ಯವಾಗಿ ಹೊಂದಿರುತ್ತೇವೆ, ಎಂದು ಮಂತ್ರವನ್ನು ಕಂಡುಹಿಡಿದ ಋಷಿಯು ಹೇಳಿರುವನು, ಎಂದು ನಾರಾಯಣೀಯ ಗ್ರಂಥದಲ್ಲಿದೆ. ॥ ೫ — ೧೭ ॥ ॥ ೨ ॥

**ಹದಿನೇಳನೇ ಖಂಡವು ಮುಗಿಯಿತು.**

## ೧೮ನೇ ಖಂಡವು

**ಓ**—ಆಯುಷ್ಯವನ್ನು ಹೊಂದಿದ ಪುರುಷನ ಆಯುಷ್ಯವು ಸಾರ್ಥಕವಾಗುವುದಕ್ಕಾಗಿ ಅಧ್ಯಾತ್ಮದಲ್ಲಿಯೂ ಅಧಿದೈವತದಲ್ಲಿಯೂ ಶ್ರೀಹರಿಯ ಉಪಾಸನೆಯನ್ನೂ ಅದರ ಫಲವನ್ನೂ ಹೇಳುತ್ತಾರೆ—

**ಉ. ॥ ಮನೋ ಬ್ರಹ್ಮೇತ್ಯುಪಾಸೀತೇತ್ಯಧ್ಯಾತ್ಮಮಥಾಧಿದೈವತಮಾಕಾಶೋ ಬ್ರಹ್ಮೇತ್ಯುಭಯಮಾದಿಷ್ಟಂ ಭವತ್ಯಧ್ಯಾತ್ಮಂ ಚಾಧಿದೈವತಂ ಚ ॥೧॥**

**ಅ ॥** ಸರ್ವಜ್ಞನಾದುದರಿಂದ ಮನಃ ಎನಿಸಿಕೊಳ್ಳುವ ಮನಸ್ಸಿನಲ್ಲಿರತಕ್ಕ ನಾರಾಯಣನನ್ನು ಪರಬ್ರಹ್ಮನೆಂದು ಉಪಾಸನೆ ಮಾಡಬೇಕು. ಹೀಗೆ (ಅಧ್ಯಾತ್ಮಂ=) ದೇಹದಲ್ಲಿರತಕ್ಕ ಬ್ರಹ್ಮನ ಉಪಾಸನೆಯು ಹೇಳಲ್ಪಟ್ಟಿತು. ಇನ್ನು ಮೇಲೆ ದೇವತೆಗಳಿಗೆ ನಿಯಾಮಕನಾದ ಬ್ರಹ್ಮನ ಉಪಾಸನೆಯು ಹೇಳಲ್ಪಡುತ್ತದೆ. ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನೆನಿಸಿದ ಆಕಾಶದಲ್ಲಿದ್ದ ನಾರಾಯಣನನ್ನು ಪರಬ್ರಹ್ಮನೆಂದು ಉಪಾಸನೆಮಾಡಬೇಕು. ಹೀಗೆ ಅಧ್ಯಾತ್ಮ ಅಧಿದೈವತ ಈ ಎರಡು ಉಪಾಸನೆಗಳು ಹೇಳಲ್ಪಟ್ಟವು. ಅಥವಾ ಮನಸ್ಸಿನಲ್ಲಿದ್ದ ನಾರಾಯಣನೇ ಆಕಾಶದಲ್ಲಿದ್ದವನಾಗಿ ಮನಃ ಆಕಾಶ ಎಂದು ಹೆಸರುಳ್ಳವನು. ಅದುಕಾರಣ ಆಕಾಶದಲ್ಲಿ ಮನಃ ಆಕಾಶ ಎನ್ನುವ ಎರಡು ರೂಪಗಳು ಇದ್ದುದರಿಂದ **ಆಕಾಶಃ ಬ್ರಹ್ಮ** ಎನ್ನುವುದರಿಂದ ಅಧ್ಯಾತ್ಮ ಅಧಿದೈವತ ಎಂಬ ಎರಡು ರೂಪಗಳನ್ನು ಹೇಳಿದಂತೆ ಆಯಿತು. ॥ ೧ ॥

**ಉ. ॥ ತದೇತಚ್ಚತುಷ್ಪಾದ್ಬ್ರಹ್ಮ ವಾಕ್ಪಾದಃ ಪ್ರಾಣಃ ಪಾದಶ್ಚಕ್ಷುಷ್ಪಾದಃ ಶ್ರೋತ್ರಂ ಪಾದ ಇತ್ಯಧ್ಯಾತ್ಮಮಥಾಧಿದೈವತಮಗ್ನಿಃ ಪಾದೋ ವಾಯುಃ ಪಾದ ಆದಿತ್ಯಃ ಪಾದೋ ದಿಶಃ ಪಾದ ಇತ್ಯುಭಯಮೇವಾದಿಷ್ಟಂ ಭವತ್ಯಧ್ಯಾತ್ಮಂ ಚಾಧಿದೈವತಂ ಚ ॥ ೨ ॥**

**ಅ ॥** ಅಧ್ಯಾತ್ಮ ಅದಿದೈವತದಲ್ಲಿದ್ದ ನಾರಾಯಣನು ವಾಸುದೇವ ಮೊದಲಾದ ನಾಲ್ಕು ರೂಪಗಳಿಂದೊಡಗೂಡಿದವನು. (ಅಧ್ಯಾತ್ಮದಲ್ಲಿದ್ದ ನಾಲ್ಕು ರೂಪಗಳನ್ನು ಹೇಳುತ್ತಾರೆ—) (1) ಮಾತನಾಡುವ ಶಕ್ತಿಯನ್ನು ಕೊಡುವುದರಿಂದ ವಾಕ್ ಎಂದು ಹೆಸರುಳ್ಳ ವಾಗಿಂದ್ರಿಯದಲ್ಲಿರತಕ್ಕ ವಾಸುದೇವನು ಮನಸ್ಸಿನಲ್ಲಿದ್ದ ನಾರಾಯಣನ ಒಂದು ಅಂಶನು. (ಅವತಾರನು) (2) ಚೆನ್ನಾಗಿ ಪ್ರೇರಕನಾದುದರಿಂದ ಪ್ರಾಣನೆನಿಸಿಕೊಂಡ ಪ್ರಾಣ (ಘ್ರಾಣೇಂದ್ರಿಯ) ದಲ್ಲಿದ್ದ ಸಂಕರ್ಷಣನು ಒಂದು ರೂಪನು. (3) ಸರ್ವವನ್ನು ನೋಡುವುದರಿಂದ ಚಕ್ಷುಃ ಎನಿಸಿಕೊಂಡ ಚಕ್ಷುಸ್ಸಿನಲ್ಲಿದ್ದ ಪ್ರದ್ಯುಮ್ನನು ಒಂದು ರೂಪನು. (4) ಸರ್ವವನ್ನು ಕೇಳುವುದರಿಂದ ಶ್ರೋತ್ರನೆನಿಸಿಕೊಂಡ ಶ್ರೋತ್ರದಲ್ಲಿರತಕ್ಕ ಅನಿರುದ್ಧನು ಒಂದು ರೂಪನು ಹೀಗೆ ಅಧ್ಯಾತ್ಮದಲ್ಲಿ ಮನಸ್ಸಿನಲ್ಲಿರತಕ್ಕ ಶ್ರೀಹರಿಯು ನಾಲ್ಕು ರೂಪಗಳನ್ನು ಹೇಳಿದರು. ಇನ್ನು ಮುಂದೆ ಅಧಿದೈವತದಲ್ಲಿ ಆಕಾಶಾದಿಗಳಲ್ಲಿರತಕ್ಕ ಶ್ರೀಹರಿಯ ಸ್ವರೂಪಾಂಶಗಳನ್ನು ನಿರೂಪಿಸುತ್ತೇವೆ. (1) ಸರ್ವಭಕ್ಷಕನಾದುದರಿಂದ ಅಥವಾ ಅಂಗಗಳಿಗೆ ಪ್ರೇರಕನಾದುದರಿಂದ ಅಗ್ನಿ ಎನಿಸಿಕೊಂಡ ಅಗ್ನಿಯಲ್ಲಿರತಕ್ಕ ವಾಸುದೇವನು ಒಂದು ರೂಪನು. (2) ಜ್ಞಾನಸ್ವರೂಪನೂ ಆಯುಷ್ಯವನ್ನು ಕೊಡುವವನೂ ಆದುದರಿಂದ ವಾಯು ಎನಿಸಿಕೊಂಡ ವಾಯುವಿನಲ್ಲಿರತಕ್ಕ ಸಂಕರ್ಷಣನು ಒಂದು ರೂಪನು. (3) ಆಯುಷ್ಯವನ್ನು ತೆಗೆದುಕೊಳ್ಳುವುದರಿಂದ ಆದಿತ್ಯನೆನಿಸಿಕೊಂಡ ಆದಿತ್ಯನೊಳಗಣ ಪ್ರದ್ಯುಮ್ನನು ಒಂದು ರೂಪನು. (4) ಧರ್ಮಜ್ಞಾನಗಳನ್ನು ಕೊಡುವುದರಿಂದ ದಿಕ್ ಎಂದು ಹೆಸರುಳ್ಳ ದಿಕ್ಕಿನಲ್ಲಿರತಕ್ಕ ಅನಿರುದ್ಧನು ಒಂದಂಶನು. (ವಾಗಾದಿಗಳಲ್ಲಿರತಕ್ಕ ರೂಪಗಳೂ ಕ್ರಮದಿಂದ ಅಗ್ನ್ಯಾದಿಗಳಲ್ಲಿದ್ದ ಪ್ರಯುಕ್ತ ಮೊದಲಿನ ನಾಲ್ಕು ಸ್ವರೂಪಾಂಶಗಳ ಜ್ಞಾನಕ್ಕಿಂತ ಈ ನಾಲ್ಕು ಸ್ವರೂಪಾಂಶಗಳ ಜ್ಞಾನವು ಶ್ರೇಷ್ಠವೆನ್ನುತ್ತಾರೆ—) **ಅಗ್ನಿಃ ಪಾದಃ** ಇತ್ಯಾದಿಗಳಿಂದ ಅಧ್ಯಾತ್ಮದಲ್ಲಿ ವಾಗಾದಿಗಳಲ್ಲಿರತಕ್ಕ ನಾಲ್ಕು ಸ್ವರೂಪಾಂಶಗಳೂ, ಅಧಿದೈವತದಲ್ಲಿ ಅಗ್ನ್ಯಾದಿಗಳಲ್ಲಿರತಕ್ಕ ನಾಲ್ಕು ಸ್ವರೂಪಾಂಶಗಳೂ ಎರಡೂ ಹೇಳಲ್ಪಟ್ಟವು. ॥ ೨ ॥

ಪೀ—ಆಧ್ಯಾತ್ಮ ಅಧಿದೈವತಗಳಲ್ಲಿರತಕ್ಕ ರೂಪಗಳಿಗೆ ಅತ್ಯಲ್ಪ ಭೇದವೂ ಇಲ್ಲವೆನ್ನುತ್ತಾರೆ—

**ಉ. ॥ ವಾಗೇವ ಬ್ರಹ್ಮಣಶ್ಚತುರ್ಥಃ ಪಾದಃ ಸೋಽಗ್ನಿನಾ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ॥ ೩ ॥**

ಅ ॥ ವಾಕ್ ಎಂದು ಹೆಸರುಳ್ಳ ವಾಗಿಂದ್ರಿಯದಲ್ಲಿರತಕ್ಕ ಪರಬ್ರಹ್ಮನ ನಾಲ್ಕನೇ ಅಂಶ (ಅವತಾರ) ನಾದ ವಾಸುದೇವನೇ ಅಗ್ನಿ ಎನಿಸಿಕೊಂಡ ಅಗ್ನಿಯಲ್ಲಿರತಕ್ಕ ಜ್ಯೋತಿರ್ಮಯನಾದ ವಾಸುದೇವನಿಂದ ಪ್ರಕಾಶಿಸುತ್ತಾನೆ. ದುಷ್ಟರನ್ನು ಸುಡುತ್ತಾನೆ. ಹೀಗೆ ತಿಳಿದುಕೊಂಡು ಉಪಾಸನೆ ಮಾಡುವವನು ಮೋಕ್ಷವನ್ನು ಹೊಂದಿ ಅಲ್ಲಿ ಕೀರ್ತಿ, ಯಶಸ್ಸು, ಜ್ಞಾನ, ಸುಖಸ್ವರೂಪವಾದ ಬ್ರಹ್ಮವರ್ಚಸ್ಸು ವೇದಾಭ್ಯಾಸದಿಂದುಂಟಾದ ತೇಜೋವಿಶೇಷ, ಇವುಗಳಿಂದ ಪ್ರಕಾಶಿಸುತ್ತಾನೆ. ಅತ್ಯಲ್ಪವೂ ಅಜ್ಞಾನಾದಿಗಳಿಲ್ಲದವನಾಗುತ್ತಾನೆ. ॥ ೩ ॥

**ಉ. ॥ ಪ್ರಾಣ ಏವ ಬ್ರಹ್ಮಣಶ್ಚತುರ್ಥಃ ಪಾದಃ ಸ ವಾಯುನಾ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ॥ ೪ ॥**

ಅ ॥ ಪ್ರಾಣನೆನಿಸಿಕೊಂಡ ಘ್ರಾಣೇಂದ್ರಿಯದಲ್ಲಿರತಕ್ಕ ಸಂಕರ್ಷಣನು ಪರಬ್ರಹ್ಮನ ನಾಲ್ಕನೇ ರೂಪನು. ಆ ಸಂಕರ್ಷಣನು ವಾಯುವಿನಲ್ಲಿರುವ ವಾಯು ಎನಿಸಿಕೊಂಡ ಸಂಕರ್ಷಣನೆನ್ನುವ ಜ್ಯೋತೀರೂಪದಿಂದ ಪ್ರಕಾಶಿಸುತ್ತಾನೆ............ಹೀಗೆ ತಿಳಿದವನು ಕೀರ್ತಿ............ಮೊದಲಾದವುಗಳಿಂದ ಪ್ರಕಾಶಿಸುತ್ತಾನೆ, ಅಜ್ಞಾನಾದಿಗಳಿಲ್ಲದವನಾಗುತ್ತಾನೆ. ॥ ೪ ॥

**ಉ. ॥ ಚಕ್ಷುರೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ಆದಿತ್ಯೇನ ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ॥ ೫ ॥**

ಅ ॥ ಚಕ್ಷುಸ್ಸಿನಲ್ಲಿರತಕ್ಕ ಚಕ್ಷುರೆನಿಸಿಕೊಂಡ ಪ್ರದ್ಯುಮ್ನನು ಆದಿತ್ಯನೊಳಗಣ ಆದಿತ್ಯನೆನಿಸಿಡ ಜ್ಯೋತಿರ್ಮಯನಾದ ಪ್ರದ್ಯುಮ್ನನಿಂದ ಪ್ರಕಾಶಿಸುತ್ತಾನೆ............ ॥ ೫ ॥

**ಉ. ॥ ಶ್ರೋತ್ರಮೇವ ಬ್ರಹ್ಮಣಶ್ಚತುರ್ಥಃ ಪಾದಃ ಸ ದಿಗ್ಭಿರ್ಜ್ಯೋತಿಷಾ ಭಾತಿ ಚ ತಪತಿ ಚ ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದ ಯ ಏವಂ ವೇದ ॥ ಇತ್ಯಷ್ಟಾದಶಃ ಖಂಡಃ ॥ ॥ ೫-೧೮ ॥ ೬ ॥**

ಅ ॥ ಶ್ರೋತ್ರನೆನಿಸಿದ ಶ್ರೋತ್ರದೊಳಗಣ ಅನಿರುದ್ಧನು ದಿಕ್ ಎನಿಸಿದ ದಿಕ್ಕುಗಳೊಳಗಣ ಅನಿರುದ್ಧನಿಂದ ಪ್ರಕಾಶಿಸುತ್ತಾನೆ........॥ ೫-೧೮ ॥ ॥ ೬ ॥

**ಭಾ. ॥ (೧) ಮನಃಸಂಸ್ಥಸ್ತು ಯೋ ದೇವಃ ಸಾಕ್ಷಾನ್ನಾರಾಯಣಃ ಪ್ರಭುಃ । ಸ ಏವಾಕಾಶಸಂಸ್ಥಶ್ಚ ಮನಆಕಾಶನಾಮಕಃ । ಮನನಾನ್ಮನ ಆಕಾಶ ಆ ಸಮಂತಾತ್ಪ್ರಕಾ-**

**ಶನಾತ್ ॥ (೨) ವಾಸುದೇವಾದಿಭೇದೇನ ಸ ವಾಗಾದಿಷು ಸಂಸ್ಥಿತಃ । ಅಗ್ನ್ಯಾದಿಷು ಚ ತನ್ನಾಮಾ ವಾಗಾದಿಸ್ಥಃ ಸ ಏವ ತು । ಅಗ್ನ್ಯಾದಿಸ್ಥೈಃ ಸಹೈವೇಶೋ ಭಾತಿ ದುಷ್ಟಾಂಸ್ತ್ಪತ್ಯಥ ॥ (೩) ಏವಂ ವಿದ್ವಾಂಸ್ತ್ವಿಮಾಶೇಶಂ ಯಶೋಜ್ಞಾನಸುಖಾತ್ಮತಾಂ । ಕೀರ್ತಿಂ ಚ ಬ್ರಹ್ಮಸಂಪ್ರಾಪ್ಯಾ(ಪ್ಯ) ವರತಾಂ ಮುಕ್ತಿಗಾಮಪಿ ॥ ಪ್ರಾಪ್ಯ ಭಾತಿ ತಪತ್ಯದ್ಧಾ ಸ್ವಾಜ್ಞಾನಾದಿಕಮೇವ ಚ । ಇತಿ ಚ ॥ ೧,೨,೩,೪,೫,೬ ॥ ಇತ್ಯಷ್ಟಾದಶಃ ಖಂಡಃ ॥೫–೧೮॥ ೧ ॥**

ಅ ॥ (೧) (೧ನೇ ಮಂತ್ರದ ಅರ್ಥ ಹೇಳುತ್ತಾರೆ—) ಸರ್ವಜ್ಞನಾದುದರಿಂದ ಮನಃ ಎನಿಸಿದ ಮನಸ್ಸಿನೊಳಗಣ ಸಾಕ್ಷಾತ್ ನಾರಾಯಣನು, ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನೆನಿಸುವನು. (೨) (೨ನೇ ಮಂತ್ರದ ಅರ್ಥ ಹೇಳುತ್ತಾರೆ—) ಆ ಶ್ರೀನಾರಾಯಣನು ವಾಸುದೇವ ಮೊದಲಾದ ರೂಪಗಳಿಂದ ವಾಗಿಂದ್ರಿಯ ಮೊದಲಾದವುಗಳಲ್ಲಿದ್ದಾನೆ. ವಾಗಾದಿಗಳಲ್ಲಿರುವವನೇ ಅಗ್ನಿ ಮೊದಲಾದ ನಾಮಗಳುಳ್ಳವನಾಗಿ ಅಗ್ನ್ಯಾದಿಗಳಲ್ಲಿದ್ದು ಅಗ್ನ್ಯಾದಿಗಳಲ್ಲಿರತಕ್ಕ ರೂಪಗಳಿಂದೊಡಗೂಡಿಯೇ ಶೋಭಿಸುತ್ತಾನೆ. ದುಷ್ಟರನ್ನು ಸುಡುತ್ತಾನೆ. (೩) (ಫಲ ಹೇಳುವ ನಾಲ್ಕು ವಾಕ್ಯಗಳ ಅರ್ಥ ಹೇಳುತ್ತಾರೆ–) ಜಗತ್ತಿಗೆ ನಿಯಾಮಕರಾದ ಬ್ರಹ್ಮಾದಿಗಳಿಗೂ ನಿಯಾಮಕನಾದ ಶ್ರೀಹರಿಯನ್ನು ಹೀಗೆ ತಿಳಿದುಕೊಂಡು ಸಾವಿಾಪ್ಯ ಮೋಕ್ಷವನ್ನು ಹೊಂದಿದವನಾಗಿ ಬ್ರಹ್ಮನ ಬಳಿಯಲ್ಲಿದ್ದು ಯಶಸ್ಸು ಜ್ಞಾನ ಸುಖ ಕೀರ್ತಿಗಳನ್ನು ಹೊಂದಿ ಮೋಕ್ಷದಲ್ಲಿ ಶ್ರೇಷ್ಠನಾಗಿರುತ್ತಾನೆ ತನ್ನ ಅಜ್ಞಾನಾದಿಗಳನ್ನೆಲ್ಲಾ ಕಳೆದುಕೊಂಡೇ ಮೋಕ್ಷಕ್ಕೆ ಹೋಗುವನು. ॥ ೫–೧೮ ॥ ॥ ೧ ॥

ಹದಿನೆಂಟನೇ ಖಂಡವು ಮುಗಿಯಿತು.

## ೧೯ನೇ ಖಂಡವು

ಪೀ--ಕೀರ್ತ್ಯಾದಿ ಫಲಗಳನ್ನು ಹೊಂದಿಸಿಕೊಡುವ ಆದಿತ್ಯನಲ್ಲಿರುವ ಭಗವದುಪಾಸನೆಯನ್ನು ಹೇಳುತ್ತಾರೆ—

**ಉ. ॥ ಆದಿತ್ಯೋ ಬ್ರಹ್ಮೇತ್ಯಾದೇಶಸ್ತಸ್ಯೋಪವ್ಯಾಖ್ಯಾನಮಸದೇವೇದಮಗ್ರ ಆಸೀತ್ತತ್ಸದಾಸೀತ್ತತ್ಸಮಭವತ್ತದಾಂಡಂ ನಿರವರ್ತತ ತತ್ಸಂವತ್ಸರಸ್ಯ ಮಾತ್ರಾಮಶಯತ ತನ್ನಿರಭಿದ್ಯತ ತೇ ಆಂಡಕಪಾಲೇ ರಜತಂ ಚ ಸುವರ್ಣಂ ಚಾಭವತಾಂ ॥ ೧ ॥**

ಅ ॥ ಆದಿತ್ಯನೊಳಗಣ ಆದಿತ್ಯನೆನಿಸಿದ ಶ್ರೀಹರಿಯನ್ನು ಪರಬ್ರಹ್ಮನೆಂದು ಉಪಾಸನೆ ಮಾಡಬೇಕು ಎಂದುಪದೇಶವು. (ಆದಿತ್ಯನೊಳಗಣ ಶ್ರೀಹರಿಯನ್ನೇ ಏಕೆ ಉಪಾಸನೆ ಮಾಡಬೇಕೆಂದರೆ—) ಆದಿತ್ಯನೊಳಗಣ ಶ್ರೀಹರಿಯನ್ನು ಉಪಾಸನೆ ಮಾಡಿದರೆ ಕೀರ್ತಿ ಮೊದಲಾದ ಎಲ್ಲಾ ಫಲವೂ ಸಿಗುವುದರಿಂದ ಅದನ್ನು ಅವಶ್ಯವಾಗಿ ಮಾಡಬೇಕೆಂದು ತಿಳಿಸುವುದಕ್ಕಾಗಿ ಸೃಷ್ಟಿಯನ್ನು ಹೇಳುತ್ತಾರೆ. ಜಗತ್ತು ಹುಟ್ಟುವುದಕ್ಕಿಂತ ಮೊದಲು ಪ್ರಲಯಕಾಲದಲ್ಲಿ ಯಾರಿಂದಲೂ ಹೊಂದಲ್ಪಡದಿರುವುದರಿಂದ ಅಸತ್ ಎನಿಸಿದ ನಾರಾಯಣನು ಇದ್ದನು. ಅಸತ್ ಎನಿಸಿದ ನಾರಾಯಣನಿಂದ ಜ್ಞಾನಿಗಳಿಂದ ಹೊಂದಲ್ಪಡುವುದರಿಂದ ಸತ್ ಎನಿಸಿದ ವಾಸುದೇವನು ಆದನು. (ಹೀಗೆಯೇ ಲಕ್ಷ್ಮೀದೇವಿಯು ಮಾಯಾ ಎನಿಸಿ

ಕೊಂಡಳು.) ಆ ವಾಸುದೇವನು ಮಾಯೆಯಿಂದ ಸಂಭೋಗ ಮಾಡಿದನು ಅದರಿಂದ ಬ್ರಹ್ಮಾದಿಗಳೂ ಮಹತ್ತತ್ತ್ವ ಮೊದಲಾದುದೂ ಬ್ರಹ್ಮಾಂಡಪರ್ಯಂತವಾದುದೆಲ್ಲವೂ ಹುಟ್ಟಿತು. ಬ್ರಹ್ಮಾಂಡವೂ ಹುಟ್ಟಿತು. ಆ ಅಂಡವು ಸಂವತ್ಸರಪರ್ಯಂತ ಎರಡು ಕಪಾಲಗಳಾಗಿ ಒಡೆಯದೆ ಒಂದೇ ಆಗಿತ್ತು. ಆ ಮೇಲೆ ಮೇಲಿನದ್ದು ಕೆಳಗಿನದ್ದು ಎಂದು ಎರಡು ಕಪಾಲಗಳಾಗಿ ಒಡೆಯಲ್ಪಟ್ಟಿತು ಸರ್ವ ಲೋಕಗಳಿಗೆ ಆಶ್ರಯಗಳಾದ, ಬ್ರಹ್ಮಾಂಡ ಸಂಬಂಧಿಗಳಾದ ಮೇಲಿನ ಕೆಳಗಿನ ಎರಡು ಕಪಾಲಗಳು ಕೆಳಗಿನದ್ದು ರಜತ (ಬೆಳ್ಳಿ) ಮಯವಾಗಿಯೂ ಮೇಲಿನದ್ದು ಸುವರ್ಣ (ಚಿನ್ನ) ಮಯವಾಗಿಯೂ ಆದವು ॥ ೧ ॥

**ಉ. ॥ ತದ್ಯದ್ರಜತಂ ಸೇಯಂ ಪೃಥಿವೀ ಯತ್ಸುವರ್ಣಂ ಸಾ ದ್ಯೌರ್ಯಜ್ಜರಾಯು ತೇ ಪರ್ವತಾ ಯದುಲ್ಬಂ ಸ ಮೇಘೋ ನೀಹಾರೋ ಯಾ ಧಮನಯಸ್ತಾ ನದ್ಯೋ ಯದ್ವಾಸ್ತೇಯಮುದಕಂ ಸ ಸಮುದ್ರಃ ॥ ೨ ॥**

ಅ ॥ ರಜತಮಯವಾದ ಕೆಳಭಾಗದಲ್ಲಿದ್ದ ಬ್ರಹ್ಮಾಂಡಕಪಾಲವು ಪೃಥಿವಿಯು. ಅಂದರೆ—ರಜತಮಯವಾದ ಬ್ರಹ್ಮಾಂಡಕಪಾಲದಲ್ಲಿ ಕೆಳಗಿನ *ಅತಲಾದಿ ಏಳು ಲೋಕಗಳು ಇರುತ್ತವೆ. ಸುವರ್ಣಮಯವಾದ ಮೇಲುಭಾಗದ ಬ್ರಹ್ಮಾಂಡಕಪಾಲವು ದ್ಯುಲೋಕವು. ಅಂದರೆ—ಸುವರ್ಣ ಕಪಾಲದಲ್ಲಿ ಮೇಲಿನ ಭೂರಾದಿಲೋಕಗಳಿರುತ್ತವೆ. ದೊಡ್ಡದಾದ, ಗರ್ಭದ (ಜರಾಯು=) ದೊಡ್ಡ ಮುಸುಕು, ಅದೇ ಪರ್ವತಗಳು. (ಉಲ್ಬ=) ಚಿಕ್ಕದಾದ ಗರ್ಭದೊಳಗಣ ಮುಸ್ಸು, ಅದ ಮೋಡ ಮತ್ತು ಮಂಜುಗಳು. (ನಾಡೀ=) ನರಗಳು ನದಿಗಳು ವಸ್ತಿ ಸಂಬಂಧಿಯಾದ ನಾಭಿ ಹೊಕ್ಕಳು) ಯ ಕೆಳಹೊಟ್ಟೆಯ ನೀರು ಸಮುದ್ರವು. ॥ ೨ ॥

**ಉ. ॥ ಅಥ ಯತ್ತದಜಾಯತ ಸೋಽಸಾವಾದಿತ್ಯಸ್ತಂ ಜಾಯಮಾನಂ ಘೋಷಾ ಉಲೂಲವೋಽನೂದತಿಷ್ಠನ್ತ್ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಸ್ತಸ್ಮಾತ್ತಸ್ಯೋದಯಂ ಪ್ರತಿ ಪ್ರತ್ಯಾಯನಂ ಪ್ರತಿಘೋಷಾ ಉಲೂಲವೋಽನೂತ್ತಿಷ್ಠಂತಿ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾಃ ॥ ೩ ॥**

ಅ ॥ ಆ ಮೇಲೆ ಬ್ರಹ್ಮಾಂಡದಲ್ಲಿ ಆದಿತ್ಯ (ಸೂರ್ಯ)ನು ಹುಟ್ಟಿದನು ಆದಿತ್ಯನೆನಿಸಿದ ಜೀವನಿಗೆ ನಿಯಾಮಕನಾದ, ಆದಿತ್ಯಮಂಡಲದೊಳಗಣ ಆದಿತ್ಯನೆನಿಸಿದ ಶ್ರೀಹರಿಯು ನಿಯಾಮಕನಾಗಿರುತ್ತಾನೆ. ಅದುಕಾರಣ ಆದಿತ್ಯನೆನಿಸಿದ ಶ್ರೀಹರಿಯನ್ನು ಪರಬ್ರಹ್ಮನೆಂದು ಉಪಾಸನೆ ಮಾಡಬೇಕು ಪ್ರಕಟನಾಗುವ ಆದಿತ್ಯಮಂಡಲದೊಳಗಣ ಶ್ರೀಹರಿಯನ್ನು ಅನುಸರಿಸಿ ಗಾಯತ್ರೀ ಮೊದಲಾದ ವೇದಗಳ ಅತಿ ದೊಡ್ಡ ಧ್ವನಿಗಳೂ ಬ್ರಹ್ಮ ರುದ್ರ ಮೊದಲಾದ ಎಲ್ಲಾ ದೇವತೆಗಳೂ ಎಲ್ಲಾ ಮಂಗಲದ್ರವ್ಯಗಳೂ ಅಭಿವ್ಯಕ್ತಗಳಾದವು. ಬ್ರಹ್ಮ ರುದ್ರ ಮೊದಲಾದ ಎಲ್ಲಾ ದೇವತೆಗಳು ಗಂಧಾಕ್ಷತ ಪುಷ್ಪ ಮೊದಲಾದ ಮಂಗಲದ್ರವ್ಯಗಳನ್ನು ಸಮರ್ಪಿಸಿ ಗಾಯತ್ರೀ ಮೊದಲಾದ ವೇದಧ್ವನಿಗಳಿಂದ ಸ್ತೋತ್ರಮಾಡಿದರು. ಬ್ರಹ್ಮಾದಿಗಳು ಹೀಗೆ ಮಾಡಿದ ಕಾರಣ ಆ ರೀತಿಯನ್ನೇ ಅನುಸರಿಸಿ ಈಗಿನ ಜೀವರೂ ಆದಿತ್ಯನ ಉದಯ ಅಸ್ತಮಾನಗಳಲ್ಲಿ ಗಾಯತ್ರೀ ಮೊದಲಾದ ವೇದಧ್ವನಿಗಳಿಂದ ಸ್ತುತಿಸಿ ಗಂಧಾಕ್ಷತ ಮೊದಲಾದ ಮಂಗಲ ದ್ರವ್ಯಗಳಿಂದ ಪೂಜಿಸಿ ಅಭೀಷ್ಟಗಳನ್ನು ಹೊಂದುತ್ತಾರೆ. ॥ ೩ ॥

* (1) ಅತಲ ವಿತಳ ಸುತಳ ತಳಾತಳ ರಸಾತಳ ಮಹಾತಳ ಪಾತಾಳ, ಹೀಗೆ ಕೆಳಗಿನ ೭ ಲೋಕಗಳು

(2) ಭೂಃ ಭುವಃ ಸುವಃ ಮಹಃ ಜನಃ ತಪಃ ಸತ್ಯಂ ಎಂದು ಮೇಲಿನ ೭ ಲೋಕಗಳು.

ಪೀ—ಇದನ್ನು ತಿಳಿದವನಿಗೆ ಫಲ ಹೇಳುತ್ತಾರೆ—

**ಉ. ‖ ಸ ಯ ಏತದೇವಂ ವಿದ್ವಾನಾದಿತ್ಯಂ ಬ್ರಹ್ಮೇತ್ಯುಪಾಸ್ತೇಽಭ್ಯಾಶೋ ಹ ಯದೇನꣳ ಸಾಧವೋ ಘೋಷಾ ಆ ಚ ಗಚ್ಛೇಯುರುಪ ಚ ನಿಮ್ರೇಡೇರನ್ನಿಮ್ರೇಡೇರನ್ ‖ ಇತ್ಯೇಕೋನವಿಂಶಃ ಖಂಡಃ ‖ ೫–೧೯ ‖ ಇತಿ ಶ್ರೀಮಚ್ಛಾಂದೋಗ್ಯೋಪನಿಷದಿ ಪಂಚಮೋಽಧ್ಯಾಯಃ ‖ ೫ ‖ ‖ ೪ ‖**

ಅ ‖ ಹಿಂದೆ ಹೇಳಿದ ಪ್ರಕಾರ ತಿಳಿದು ಆದಿತ್ಯನೊಳಗಣ ಪರಬ್ರಹ್ಮನನ್ನುಪಾಸನೆ ಮಾಡುವವನಿಗೆ ಪ್ರಶಸ್ತಗಳಾದ ವೇದಧ್ವನಿಗಳು ಉಂಟಾಗುತ್ತವೆ. (ವೇದಾರ್ಥಗಳನ್ನು ಚೆನ್ನಾಗಿ ತಿಳಿದವನಾಗುತ್ತಾನೆ.) ಮತ್ತು ಮೋಕ್ಷದಲ್ಲಿ ವೇದಾಧ್ಯಯನದಿಂದುಂಟಾದ ಪೂರ್ಣ ಫಲವುಳ್ಳವನಾಗುತ್ತಾನೆ. ‖ ೫–೧೯ ‖ ‖ ೫ ‖

ಪೀ—೧ನೇ ಮಂತ್ರದಲ್ಲಿದ್ದ **ಅಸದೇವೇದಮಗ್ರ ಆಸೀತ್** ಎಂಬ ವಾಕ್ಯಕ್ಕೆ ಅರ್ಥ ಹೇಳುತ್ತಾರೆ—

**ಭಾ. ‖ (೧) ಅಗಮ್ಯತ್ವಾದಸನ್ನಾಮ ಬ್ರಹ್ಮ ನಾರಾಯಣಾಭಿಧಂ । ಪ್ರಲಯೇ ವಾಸುದೇವಾಖ್ಯಂ ಗಮ್ಯಂ ಸದಭವದ್ವಿದಾಂ ‖ (೨) ತತ್ಕೃತ್ವಾ ಸಮಭವತ್ತತ ಆಂಡಮಜಾಯತ । ತಸ್ಮಿನ್ನಾದಿತ್ಯನಾಮಾಽಸಾವಭವತ್ಸೂರ್ಯಮಂಡಲೇ । ನಿಯಂತೈವ ಚ ಸೂರ್ಯಸ್ಯ ಭಗವಾನ್ ಪುರುಷೋತ್ತಮಃ ‖ (೩) ತಸ್ಮಾದಾದಿತ್ಯನಾಮಾನಮಾದಿತ್ಯಸ್ಥಂ ಜನಾರ್ದನಂ । ಬ್ರಹ್ಮೋಪಾಸೀತ ಪರಮಂ ಸರ್ವವೇದಜ್ಞತಾ ತತಃ ‖ ಇತಿ ಬ್ರಹ್ಮತತ್ತ್ವೇ ‖ (೪) ಉಲೂಲವ ಉರೂರವಃ । ಅತಿಮಹಾಂತೋ ಗಾಯತ್ರ್ಯಾದಿಘೋಷಾಃ ಉಪ ಚ ನಿಮ್ರೇಡೇರನ್ । ಮುಕ್ತೇ ತಸ್ಮಿನ್ನೇವ ವಸೇಯುಃ ‖ (೫) ಸೂರ್ಯಬಿಂಬಸ್ಥಿತೇ ವಿಷ್ಣೌ ಜಾಯಮಾನೇ ಪರಾತ್ಮನಿ । ಗಾಯತ್ರೀಪೂರ್ವಕೈರ್ವೇದೈರ್ಬ್ರಹ್ಮಾದ್ಯಾಸ್ಸಮುಪಸ್ಥಿತಾಃ ‖ ಉಪತಿಷ್ಠಂತ್ಯತೋ ನಿತ್ಯಂ ಗಾಯತ್ರ್ಯಾದಿಭಿರಂಜಸಾ । ತದ್ವಿದ್ವಾನ್ಮುಕ್ತ ಆವಾಸೋ ವೇದಾನಾಂ ಸರ್ವದಾ ಭವೇತ್ ‖ ಇತಿ ಚ ‖ ೧,೨,೩,೪ ‖ ಇತ್ಯೇಕೋನವಿಂಶಃ ಖಂಡಃ ‖ ‖ ೫–೧೯ ‖ ‖ ೧ ‖**

ಅ ‖ (೧) ಪ್ರಲಯಕಾಲದಲ್ಲಿ ನಾರಾಯಣನೆನಿಸಿದ ಪರಬ್ರಹ್ಮನು ಯಾರಿಂದಲೂ ಹೊಂದಲ್ಪಡದಿರುವುದರಿಂದ ಅಸತ್ ಎನಿಸಿಕೊಂಡನು. ಆ ನಾರಾಯಣನು ಜ್ಞಾನಿಗಳಿಂದ ಹೊಂದಲ್ಪಡುವುದರಿಂದ ಸತ್ ಎನಿಸಿದ ವಾಸುದೇವನಾಗಿ ಅವತರಿಸಿದನು. (೨) ವಾಸುದೇವನು ಲಕ್ಷ್ಮೀರೂಪಳಾದ ಮಾಯೆಯಿಂದ ಸಂಭೋಗ ಮಾಡಿದನು. ಸಂಭೋಗಾನಂತರದಲ್ಲಿ * ತತ್ತ್ವಸೃಷ್ಟ್ಯಾದಿಗಳಾಗಿ ಬ್ರಹ್ಮಾಂಡವು ಹುಟ್ಟಿತು. ಬ್ರಹ್ಮಾಂಡದಲ್ಲಿ ಆದಿತ್ಯನು ಹುಟ್ಟಿದನು. ಆದಿತ್ಯಮಂಡಲದಲ್ಲಿದ್ದ ಸೂರ್ಯನಿಗೆ ನಿಯಾಮಕನೂ ಆದಿತ್ಯ ಮಂಡಲದಲ್ಲಿದ್ದವನೂ ಆಗಿ ಆದಿತ್ಯನೆನಿಸಿದ ಪುರುಷೋತ್ತಮನಾದ ಶ್ರೀಹರಿಯು ಪ್ರಕಟನಾದನು. (೩ನೇ ಮಂತ್ರದಲ್ಲಿ ಬ್ರಹ್ಮಾದಿ ಸಮಸ್ತ ದೇವತೆಗಳಿಂದ ಸೇವಿಸಲ್ಪಡುವವನೆಂದು ಹೇಳಿದ ಕಾರಣ ಪುರುಷೋತ್ತಮನಾದ ಭಗವಂತನೇ ಆದಿತ್ಯನೆನಿಸಿದವನು. ಪ್ರಸಿದ್ಧಸೂರ್ಯನಲ್ಲ) (೩) ಆದಕಾರಣ ಆದಿತ್ಯನೊಳಗಣ ಆದಿತ್ಯನೆನಿಸಿದ ಜನಾರ್ದನನನ್ನು ಪರಬ್ರಹ್ಮನೆಂದು ಉಪಾಸನೆಮಾಡಬೇಕು. ಅದರಿಂದ

---

* ಜಡಪ್ರಕೃತಿಯಿಂದ ಸತ್ತ್ವರಜಸ್ತಮೋಗುಣಗಳು, ಅವುಗಳಿಂದ ಮಹತ್ತತ್ತ್ವ, ಅದರಿಂದ ವೈಕಾರಿಕ ತೈಜಸ ತಾಮಸ ವೆಂಬ ಅಹಂಕಾರತತ್ತ್ವ ಅದರಿಂದ ದೈವದೇಹ, ಮನಸ್ಸು, ದಶೇಂದ್ರಿಯ, ಆಕಾಶ,ವಾಯು,ತೇಜಸ್ಸು,ಜಲ,ಪೃಥಿವೀ ಇತ್ಯಾದಿ.

ಸಮಸ್ತ ವೇದಗಳ ತತ್ತ್ವಜ್ಞಾನಿಯಾಗುತ್ತಾನೆ, ಎಂದು ಬ್ರಹ್ಮತತ್ತ್ವವೆಂಬ ಗ್ರಂಥದಲ್ಲಿದೆ. (೪) ಉಲೂಲವಃ=ಉತ್ಕೃಷ್ಟವಾದ ಧ್ವನಿಯು. ಅತಿದೊಡ್ಡದಾದ ಗಾಯತ್ರೀ ಮೊದಲಾದ ವೇದಗಳ ಧ್ವನಿಗಳು ಪೂರ್ಣಗಳಾಗಿ ಮುಕ್ತನಲ್ಲಿಯೇ ಇರುತ್ತವೆ. (೫) ಸೂರ್ಯಮಂಡಲದಲ್ಲಿರುವ ಪರಮಾತ್ಮನು ಪ್ರಕಟನಾಗಲು ಬ್ರಹ್ಮ ರುದ್ರ ಮೊದಲಾದ ದೇವತೆಗಳು ಗಾಯತ್ರೀ ಮೊದಲಾದ ವೇದಗಳಿಂದ ಸ್ತೋತ್ರ ಮಾಡುತ್ತಾ ಸಮೀಪದಲ್ಲಿ ನಿಲ್ಲುತ್ತಾರೆ. ಅದುಕಾರಣ ಈಗಿನವರೂ ಕೂಡ ಚೆನ್ನಾಗಿ ಗಾಯತ್ರೀ ಮೊದಲಾದವುಗಳಿಂದ ನಿತ್ಯದಲ್ಲಿಯೂ ಆದಿತ್ಯನೊಳಗಣ ಶ್ರೀಹರಿಯನ್ನು ತಿಳಿದು ಧ್ಯಾನಿಸಿ ಮುಕ್ತರಾಗುತ್ತಾರೆ. ಸರ್ವದಾ ವೇದಾರ್ಥಗಳನ್ನು ಚೆನ್ನಾಗಿ ತಿಳಿದವರು ಆಗುತ್ತಾರೆಂದು ಹೇಳಿದೆ. ॥ ೧ ೨, ೩, ೪ ॥ ೫–೧೯ ॥

**ಹತ್ತೊಂಭತ್ತನೇ ಖಂಡವು ಮುಗಿಯಿತು.**

---

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಚ್ಛಾಂದೋಗ್ಯ-ಉಪನಿಷದ್ಭಾಷ್ಯೇ ಪಂಚಮೋಽಧ್ಯಾಯಃ ॥ ೫ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ಐದನೇ ಅಧ್ಯಾಯವು ಮುಗಿಯಿತು. ॥ ೫ ॥

**ಸುಖಮುಖಗುಣಪೂರ್ಣಂ ಸರ್ವದೋಷಾತಿತೀರ್ಣಂ**
**ಶ್ರುತಿಮತಿರತಿಮದ್ಭಿರ್ಗಮ್ಯಮಾದ್ಯಾದಿಸದ್ಭಿಃ ।**
**ನಿಖಿಲನಿಗಮವೇದ್ಯಂ ನಿರ್ಜರಾರಾಧ್ಯಮಾದ್ಯಂ**
**ನವನಲಿನಸುನೇತ್ರಂ ನೌಮಿ ಲಕ್ಷ್ಮೀಕಳತ್ರಂ ॥**

**ಯೋಽಂತಃ ಸ್ಥಿತ್ವಾ ಸರ್ವಕರ್ಮಕರ್ತಾ ಸ ಭಗವಾನ್ ಪ್ರಭುಃ ।**
**ಪ್ರೀತೋಽಸ್ತ್ವನೇನ ಮಧ್ವೇಶೋ ರೂಪ್ಯಪೀಠಗತೋ ಹರಿಃ ॥**



|| ಶ್ರೀಃ ||

# ಆರನೇ ಅಧ್ಯಾಯವು

**ಅಪರಂ ಬ್ರಹ್ಮ ವಾಯುಂ ಚ ಪರಂ ಬ್ರಹ್ಮ ಸುಖಾಧಿಕಂ ।**
**ವಾಸುದೇವಾದಿರೂಪಂ ಚ ವಾಮನಂ ಚಾನಿಶಂ ಭಜೇ ॥**
**ಭಾರತೀಶ ನಮಸ್ತುಭ್ಯಂ ರಾಮಪ್ರಿಯ ನಮೋಽಸ್ತು ತೇ ।**
**ನಮಸ್ತೇ ದ್ರೌಪದೀಕಾಂತ ವ್ಯಾಸಶಿಷ್ಯ ನಮೋಽಸ್ತು ತೇ ॥**

●

## ೧ನೇ ಖಂಡವು

**ಪೀ**—ಐದನೇ ಅಧ್ಯಾಯದ ಅಂತ್ಯದಲ್ಲಿ ಪ್ರಕಾಶಾದಿ ಗುಣಗಳನ್ನು ಕೊಡುವ ವಿದ್ಯೆಯನ್ನು ಹೇಳಿರುವರು. ಇಲ್ಲಿ ಸಾರ್ವಜ್ಞಾದಿಗಳನ್ನು ಕೊಡುವ ಸಂವರ್ಗವಿದ್ಯೆಯನ್ನು ಹಿಂದಿನ ಕಥೆಯನ್ನು ಹೇಳಿಕೊಂಡು ಹೇಳುತ್ತಾರೆ—

**ಉ. ॥ ಓಂ ॥ ಜಾನಶ್ರುತಿರ್ಹ ಪೌತ್ರಾಯಣಃ ಶ್ರದ್ಧಾದೇಯೋ ಬಹುದಾಯೀ ಬಹುಪಾ(ವಾ)ಕ್ಯ ಆಸ ಸ ಹ ಸರ್ವತ ಆವಸಥಾನ್ ಮಾಪಯಾಂ-ಚಕ್ರೇ ಸರ್ವತ ಏವ ಮೇಽತ್ಸ್ಯಂತೀತಿ ॥ ೧ ॥**

**ಅ** ॥ ಬ್ರಾಹ್ಮಣಾದಿಗಳಿಗೆ ಕೊಡುವ ವಸ್ತುವನ್ನು ಶ್ರದ್ಧೆಯಿಂದ ಕೊಡುವವನೂ, ಯಥೇಷ್ಟವಾಗಿ ದಾನಮಾಡುವವನೂ, ಬಹುಮಾನದಿಂದ ಮಾತನಾಡುವವನೂ ಅಥವಾ ಬಹುಶಾಸ್ತ್ರ ಶ್ರವಣಮಾಡಿದವನೂ ಅಥವಾ ಪ್ರತಿದಿನದಲ್ಲಿಯೂ ಅನ್ನಾರ್ಥಿಗಳಿಗೆ ಬಹುವಿಧ ಪಾಕಮಾಡಿಸುವವನೂ ಇಂತಹ ಪುತ್ರಾಯಣನ ಗೋತ್ರದಲ್ಲಿ ಹುಟ್ಟಿದ, ಜನಶ್ರುತನ ಮಗನಾದ ಜಾನಶ್ರುತಿ ಎಂಬ ರಾಜನು *ಪ್ರತಿಷ್ಠಾನವೆಂಬ ಪಟ್ಟಣದಲ್ಲಿದ್ದನು, ಆ ಜಾನಶ್ರುತಿಯು, ಜನರು ಎಲ್ಲಾ ದಿಕ್ಕುಗಳಿಂದ ಬಂದು ನನ್ನ ಅನ್ನವನ್ನು ಮನೆಗಳಲ್ಲಿ ಆವಾಸಮಾಡುತ್ತಾ ಉಣ್ಣುವರೆಂಬ ಬುದ್ಧಿಯಿಂದ ಎಲ್ಲಾ ದಿಕ್ಕುಗಳಲ್ಲಿಯೂ ಗ್ರಾಮಗಳಲ್ಲಿಯೂ ನಗರಗಳಲ್ಲಿಯೂ ಆವಾಸಮಾಡಲಿಕ್ಕೆ ಯೋಗ್ಯಗಳಾದ ಅನ್ನಛತ್ರಮನೆಗಳನ್ನು ಕಟ್ಟಿಸಿದನು. ॥ ೧ ॥

**ಉ. ॥ ಅಥ ಹ ಹಂಸಾ ನಿಶಾಯಾಮತಿಪೇತುಸ್ತದ್ಧೈವಂ ಹಂಸೋ ಹಂಸಮಭ್ಯುವಾದ ಹೋ ಹೋಯಿ ಭಲ್ಲಾಕ್ಷ ಭಲ್ಲಾಕ್ಷ ಜಾನಶ್ರುತೇಃ ಪೌತ್ರಾಯಣಸ್ಯ ಸಮಂ ದಿವಾ ಜ್ಯೋತಿರಾತತಂ ತನ್ಮಾ ಪ್ರಸಾಂಕ್ಷೀಸ್ತತ್ತ್ವಾ ಮಾ ಪ್ರಧಾಂಕ್ಷೀರಿತಿ ॥ ೨ ॥**

---

* **ಅಸ್ತಿ ಗೋದಾವರೀತೀರೇ ಪ್ರತಿಷ್ಠಾನಗರಂ ಮಹತ್ । ತತ್ರ ಜಾನಶ್ರುತಿರ್ನಾಮ್ನಾ ಮೇದಿನೀವಲ್ಲಭೋಽಭವತ್** । ಎಂದು ಪ್ರಮಾಣವು.

ಅ || ರಾಜನು ಹೀಗೆ ಇರುತ್ತಿರಲು ಒಂದಾನೊಂದು ದಿನ ರಾತ್ರಿಕಾಲದಲ್ಲಿ ಹಂಸಪಕ್ಷಿಗಳು ಬಹು ಎತ್ತರವಾದ ಉಪ್ಪರಿಗೆಯ ಮೇಲೆ ಮಂಚದಲ್ಲಿ ಮಲಗಿರುವ ಜಾನಶ್ರುತಿರಾಜನ ಮೇಲುಭಾಗದಲ್ಲಿ † ಅಂತರಿಕ್ಷಮಾರ್ಗದಲ್ಲಿ ಹಾರುತ್ತಿದ್ದವು. ಆಗಲೇ ಒಂದಾನೊಂದು ಹಂಸವು ‡ ಮುಂದೆ ಹಾರುತ್ತಿರುವ ಹಂಸದೊಡನೆ ಹೇಳಿತು. ಎಲೋ ಹಂಸವೇ ಮಂದಾಕ್ಷವೇ (ಅತ್ಯಲ್ಪಜ್ಞಾನಿಯೇ) ಪೌತ್ರಾಯಣನ * ಪ್ರಕಾಶಿಸುತ್ತಿರುವ ತೇಜಸ್ಸಮುದಾಯವು ದ್ಯುಲೋಕಪರ್ಯಂತ ಸರ್ವದಾ ವ್ಯಾಪಿಸಿಕೊಂಡಿದೆ. (ಆ ತೇಜಸ್ಸನ್ನು ನೀನು ನೋಡುವುದಿಲ್ಲವಷ್ಟೆ.) (ಆ ತೇಜಸ್ಸು ಪೌತ್ರಾಯಣನನ್ನು ದಾಟಿಕೊಂಡು ಹೋಗತಕ್ಕ ನಿನ್ನನ್ನು ಸುಟ್ಟುಬಿಡಬಾರದು. ಅದಕ್ಕಾಗಿ ಆ ತೇಜಸ್ಸಿನ ಸಂಬಂಧವನ್ನು ಮಾಡಬೇಡ. ಅಂದರೆ—ಜಾನಶ್ರುತಿಯ ತೇಜಸ್ಸನ್ನು ದಾಟಿದರೆ ನಿನ್ನನ್ನು ಸುಟ್ಟುಬಿಡುವುದೆಂದು ಹೇಳಿತು || ೨ ||

**ಉ. || ತಮು ಹ ಪರಃ ಪ್ರತ್ಯುವಾಚ ಕಮ್ವರ ಏನಮೇತತ್ಸಂತಂ ಸಯುಗ್ವಾನಮಿವ ರೈಕ್ವಮಾತ್ಥೇತಿ ಯೋ ನು ಕಥಂ ಸಯುಗ್ವಾ ರೈಕ್ವ ಇತಿ|| ೩||**

ಅ || ಹೀಗೆ ಹೇಳತಕ್ಕ ಹಿಂದಿನ ಹಂಸದ ಹತ್ತಿರ ಮುಂದೆ ಹಾರುತ್ತಿರುವ ಹಂಸವು ಘಟ್ಟಿಯಾಗಿ ಹೇಳಿತು. × ಎಲೋ ಹಂಸವೇ ಎತ್ತರವಾದ ಉಪ್ಪರಿಗೆಯಲ್ಲಿ ಮಲಗಿರುವ ಪೌತ್ರಾಯಣನಿಗೆ ಎಂತಹ ಪ್ರಭಾವವಿದೆ, ಎಂದು ತಿಳಿದು, ನಿರ್ದುಷ್ಟನಾದ ಎರಡು ಶಕಟ (ಬಂಡಿ) ಗಳಿಂದೊಡಗೂಡಿದ ರೈಕ್ವನೆನ್ನಂಬಂತೆ ಪೌತ್ರಾಯಣನನ್ನು ಹೊಗಳುತ್ತಿ. (ಹೀಗೆ ಸ್ತುತಿಸಿಕೊಳ್ಳಲಿಕ್ಕೆ ರೈಕ್ವನೇ ಯೋಗ್ಯನು. ಪೌತ್ರಾಯಣನಿಗೆ ಇಂತಹ ಮಹಿಮೆಯು ಇಲ್ಲವೇ ಇಲ್ಲ.) ಎಂದು ಹೇಳಿತು. ಹೀಗೆ ಉತ್ತರಿಸಲ್ಪಟ್ಟ ಹಿಂದಿನ ಹಂಸವು, 'ನೀನು ಹೇಳಿದ ರೈಕ್ವನು ಯಾರು? ಎಂತಹ ಮಹಿಮೆಯುಳ್ಳವನು' ಎಂದು ಕೇಳಿತು. || ೩ ||

**ಉ. || ಯಥಾಕೃತಾಯ ವಿಜಿತಾಯಾಧರೇಯಾಃ ಸಂಯಂತ್ಯೇವಮೇನಂ ಸರ್ವಂ ತದಭಿಸಮೇತಿ ಯತ್ಕಿಂ ಚ ಪ್ರಜಾಃ ಸಾಧು ಕುರ್ವಂತಿ ಯಸ್ತದ್ವೇದ ಯತ್ಸ ವೇದ ಸ ಮಯೈತದುಕ್ತ ಇತಿ || ೪ ||**

ಅ || ಆಗ ಮುಂದಿನ ಹಂಸವು ಉತ್ತರ ಹೇಳಿತು. ಹೇಗೆ ಚೆನ್ನಾಗಿ ಸತ್ಕರ್ಮವನ್ನು ಮಾಡಿ ಕೃತಯುಗವನ್ನು ಗೆದ್ದವನಿಗೆ ತ್ರೇತಾದಿ ಯುಗಗಳನ್ನು ಗೆದ್ದಂತೆ ಆಗುತ್ತದೋ, ಹಾಗೆಯೇ ಈ ಪ್ರಜೆಗಳು ಪೂರ್ಣಕರ್ಮವನ್ನು ಮಾಡಿದರೂ ಅದೆಲ್ಲವೂ ಸಂವರ್ಗವಿದ್ಯೆಯನ್ನು ತಿಳಿದ ರೈಕ್ವರಿಗೇನೇ ಬರುತ್ತದೆ. ಯಾರು ಯಾರು ಏನೇನು ತಿಳಿಯುವರೋ ಅದೆಲ್ಲವನ್ನು ರೈಕ್ವರು ತಿಳಿದಿರುತ್ತಾರೆ. ರೈಕ್ವರ ಮಹಿಮೆಯು ಈ ರೀತಿ ಇರುವುದೆಂದು ಹಂಸವು ಹೇಳಿತು.

ವಿ || ಸಮಸ್ತ ವಿಘ್ನಗಳನ್ನು ಪರಿಹರಿಸತಕ್ಕ ರೈಕ್ವರು ಆವಾಸಮಾಡುತ್ತಿರಲು ಸಮಸ್ತ ಪ್ರಜೆಗಳೂ ನಿರ್ವಿಘ್ನವಾಗಿ ಚೆನ್ನಾಗಿ ಕರ್ಮಗಳನ್ನು ಮಾಡುವರು. ಅದರ ಫಲವು ರೈಕ್ವರಿಗೇನೇ ಬರುವುದು. || ೪ ||

---

† ತತೋಽಂತರಿಕ್ಷಮಾರ್ಗೇಣ ಯೂಥಾನಾಂ ಪಕ್ಷಸಂಹಿತಾಃ। ಮೃಣಾಲಚಂಚವೋ ದೇವಿ ದೇವಹಂಸಾ ವಿನಿರ್ಗತಾಃ॥

‡ ತ್ವರಯಾ ಗಚ್ಛತಾಂ ತೇಷಾಮನ್ಯೋನ್ಯಂ ಮರ್ಮಭಾಷಿಣಾಂ । ಭಲ್ಲಾಕ್ಷ ಪ್ರಮುಖಾಃ ದ್ವಿತ್ರಾಃ ಪುರಸ್ತಾನ್ನಿರ್ಯಯುರ್ಜವಾತ್ ॥

* ಯಸ್ಯ ದೀಪಾಧ್ವರೇ ಧೂಮ್ಯೈಃ ಶ್ಯಾಮಲಾಃ ಕಲ್ಪಶಾಖಿನಃ । ಎಂದು ಪ್ರಮಾಣವು

× ಹಂಸಾ ಹಸಿತ್ವಾ ಸಾವಜ್ಞಮೂಚುರ್ವಚನಮುಚ್ಚಕೈಃ । ಎಂದು

**ಉ. ‖ ತದು ಹ ಜಾನಶ್ರುತಿಃ ಪೌತ್ರಾಯಣ ಉಪಶುಶ್ರಾವ ಸಹ ಸಂಜಿಹಾನ ಏವ ಕ್ಷತ್ತಾರಮುವಾಚಾಂಗಾರೇ ಹ ಸಯುಗ್ವಾನಮಿವ ರೈಕ್ವಮಾತ್ಥೇತಿ ಯೋ ನು ಕಥಂ ಸಯುಗ್ವಾ ರೈಕ್ವ ಇತಿ ‖ ೫ ‖**

ಅ ‖ ಹೀಗೆ ಮುಂದುಗಡೆ ಇರುವ ಹಂಸವು ಹೇಳಿದ ತನ್ನ ನಿಂದೆ, ರೈಕ್ವರ ಪ್ರಶಂಸೆ ಮಾತುಗಳನ್ನು ಪೌತ್ರಾಯಣನು, ಕೇಳಿದನು. ಪೌತ್ರಾಯಣನು, ಹಂಸವು ಹೇಳಿದ ತಿರಸ್ಕಾರದ ಮಾತನ್ನು ಕೇಳಿ ಹಾಸಿಗೆಯಿಂದ ಎದ್ದೊಡನೆಯೇ ಎಲೋ ಪ್ರಿಯನಾದ ಸಾರಥಿಯೇ ರೈಕ್ವರನ್ನು ಅವಶ್ಯವಾಗಿ ತಿಳಿದು ಕರತರಬೇಕು. *ಏಕೆಂದರೆ ಹಂಸವು ರೈಕ್ವರನ್ನು ಹೊಗಳಿಯದೆ ನನ್ನನ್ನು ನಿಂದಿಸಿಯದೆ, ಎಂದು ಸಾರಥಿಯೊಡನೆ ಹೇಳಿದನು

ವಿ ‖ ಎಲೋ ಸಾರಥಿಯೇ ನೀನು ರೈಕ್ವಮುನಿಗಳನ್ನು ತಿಳಿಯಬೇಕು. ಏಕೆಂದರೆ ರಾತ್ರಿಯಲ್ಲಿ ಉಪ್ಪರಿಗೆಯಲ್ಲಿ ನಾನು ಮಲಗಿಕೊಂಡಿರುವಾಗ ಕೆಲವು ಹಂಸಪಕ್ಷಿಗಳು ಆಕಾಶದಲ್ಲಿ ಹಾರುತ್ತಿದ್ದವು. ಆಗ ಮುಂದಿನ ಒಂದು ಹಂಸದ ಹತ್ತಿರ ಎಲೋ ಅಲ್ಪಜ್ಞಾನವುಳ್ಳ ಹಂಸವೇ ಜಾನಶ್ರುತಿಯ ಪ್ರಕಾಶವು ದ್ಯುಲೋಕಪರ್ಯಂತ ವ್ಯಾಪಿಸಿಕೊಂಡಿದೆ. ಆ ತೇಜಸ್ಸನ್ನು ದಾಟಿಕೊಂಡು ಹೋಗಬೇಡ. ದಾಟಿದರೆ ಆತನ ತೇಜಸ್ಸು ನಿನ್ನನ್ನು ಸುಡುವುದು, ಎಂದು ಹಿಂದಿನ ಹಂಸವು ಹೇಳಿದಾಗ ಮುಂದಿನ ಹಂಸವು ರೈಕ್ವಋಷಿಗಳಂತೆ ಯಾರನ್ನು ಹೊಗಳುತ್ತಿ? ಪೌತ್ರಾಯಣನನ್ನು ಹೊಗಳುವುದು ಯೋಗ್ಯವಲ್ಲವೆಂದು ಹೇಳಿತು. ಹೀಗೆ ಹಂಸದಿಂದ ತಿರಸ್ಕೃತನಾದ ಪೌತ್ರಾಯಣನು ತನ್ನ ಸಾರಥಿಯ ಹತ್ತಿರ ರೈಕ್ವರನ್ನು ಅವಶ್ಯವಾಗಿ ತಿಳಿಯಬೇಕೆಂದನು. ‖ ೫ ‖

ಪೀ—ಆಗ ಎರಡು ಬಂಡಿಗಳಿಂದೊಡಗೂಡಿದ ರೈಕ್ವರು ಹೇಗೆ ಇರುವವರು? ಎಂದು ಸಾರಥಿಯು ಕೇಳಿದಾಗ ಪೌತ್ರಾಯಣನು ಹಂಸವು ಹೇಳಿದಂತೆ ರೈಕ್ವರ ಲಕ್ಷಣವನ್ನು ಹೇಳಿದನು.

**ಉ. ‖ ಯಥಾಕೃತಾಯ ವಿಜಿತಾಯಾಧರೇಯಾಃ ಸಂಯಂತ್ಯೇವಮೇನಂ ಸರ್ವಂ ತದಭಿಸಮೇತಿ ಯತ್ಕಿಂಚ ಪ್ರಜಾಃ ಸಾಧು ಕುರ್ವಂತಿ ಯಸ್ತದ್ವೇದ ಯತ್ಸ ವೇದ ಸ ಮಯೈತದುಕ್ತ ಇತಿ ‖ ೬ ‖**

**ಉ. ‖ ಸ ಹ ಕ್ಷತ್ತಾಽನ್ವಿಷ್ಯ ನಾವಿಂದಮಿತಿ ಪ್ರತ್ಯೇಯಾಯ ತಂ ಹ ಹೋವಾಚ ಯತ್ರಾರೇ ಬ್ರಾಹ್ಮಣಸ್ಯಾನ್ವೇಷಣಾ ತದೇನಮೃಚ್ಛೇತಿ ‖ ೭ ‖**

ಅ ‖ ಹೀಗೆ ಹೇಳಿಸಿಕೊಂಡ ಸಾರಥಿಯು ಎಲ್ಲಾಕಡೆ ಹುಡುಕಿ ರೈಕ್ವರು ಸಿಗಲಿಲ್ಲವೆಂದು ಹೇಳುತ್ತಾ ತಿರುಗಿ ಬಂದನು ಮರಳಿ ರಾಜನು ಸಾರಥಿಯೊಡನೆ ಎಲೋ ಸಾರಥಿಯೇ ಯಾವ ಪ್ರದೇಶದಲ್ಲಿ ಬ್ರಾಹ್ಮಣರು ಶಾಸ್ತ್ರವಿಚಾರ ಮಾಡುತ್ತಾರೋ ಅಲ್ಲಿ ರೈಕ್ವರನ್ನು ಹುಡುಕು, ಎಂದು ಹೇಳಿದನು. ‖ ೭ ‖

**ಉ. ‖ ಸೋಽಧಸ್ತಾಚ್ಛಕಟಸ್ಯ ಪಾಮಾನಂ ಕಷಮಾಣಮುಪೋಪವಿ-**

---

* ತತಃ ಸಾರಥಿಮಾಹೂಯ ಭೂಪಾಲೋ ವಿಸ್ಮಯಾಶ್ರಯಃ । ಸಂದಿದೇಶ ಮಹಾತ್ಮಾ ಸ ರೈಕ್ವ ಆನೀಯತಾಮಿತಿ ॥

* ಇನೇ ಮಂತ್ರದಂತೆಯೇ ಅರ್ಥವು

**ವೇಶ ತꣳ ಹಾಭ್ಯುವಾದ ತ್ವಂ ನು ಭಗವಃ ಸಯುಗ್ವಾ ರೈಕ್ವ ಇತ್ಯಹꣳ ಹ್ಯರಾ೩ ಇತಿ ಪ್ರತಿ ಹ ಜಜ್ಞೇ ಸಹ ಕ್ಷತ್ತಾಽವಿಷ್ಯಾವಿದಮಿತಿ ಪ್ರತ್ಯೇಯಾಯ ॥ ಇತಿ ಪ್ರಥಮಃ ಖಂಡಃ ॥ ೬-೧ ॥ ॥ ೮ ॥**

ಅ ॥ ಹೀಗೆ ಹೇಳಿಸಿಕೊಂಡ ಸಾರಥಿಯು (ಅಲ್ಲಿಂದ ಹೊರಟು ಕಾಶಿ ಮೊದಲಾದ ಸಮಸ್ತ ತೀರ್ಥ ಕ್ಷೇತ್ರಗಳಲ್ಲಿ ಸಂಚರಿಸಿ ಎಲ್ಲಿಯೂ ಅವರನ್ನು ಹೊಂದದೆ ಕಾಶ್ಮೀರ ನಗರಕ್ಕೆ ಬಂದು ಅಲ್ಲಿ ರಾಜದ್ವಾರದಲ್ಲಿ) ಬಂಡಿಯ ಕೆಳಗೆ ಕಜ್ಜಿ ತೊರಿಸುತ್ತಿರುವ ರೈಕ್ವರನ್ನು ನೋಡಿ (ರಾಜನು ಹೇಳಿದ ಚಿಹ್ನೆಗಳಿಂದ ಇವರೇ ರೈಕ್ವರೆಂದು ನಿಶ್ಚಯಿಸಿ ನಮಸ್ಕಾರಮಾಡಿ) ಅವರ ಸಮೀಪದಲ್ಲಿ ಕುಳಿತನು. ಸಮೀಪದಲ್ಲಿ ಕುಳಿತ ಸಾರಥಿಯು ರೈಕ್ವರೊಡನೆ ಎಲೋ ಪೂಜ್ಯರೇ ನೀವು ಬಂಡಿಗಳಿಂದೊಡಗೂಡಿದ †ರೈಕ್ವರು ಆಗಿರುತ್ತೀರೋ ಏನು? ಎಂದನು. ಆಗ ರೈಕ್ವರು ಎಲೋ ಸುಮುಖನೇ ನಾನು ರೈಕ್ವನೆಂದು ಪ್ರಸಿದ್ಧನು, ಎಂದನು (ಏಕೆ ಇಲ್ಲಿ ಕುಳಿತದ್ದೆಂದರೆ ನಾವು ಕೃತಕೃತ್ಯರು, ಸೇವಕನಾದ ಒಬ್ಬ ಶಿಷ್ಯನು ಬೇಕು, ಎಂದನು) ಹೀಗೆ ಸಾರಥಿಯು ರೈಕ್ವರನ್ನು ಹುಡುಕಿ ತಿಳಿದುಕೊಂಡು ರಾಜನ ಸಮೀಪಕ್ಕೆ ಬಂದು ರೈಕ್ವರನ್ನು ತಿಳಿದು ಕೊಂಡು ಬಂದೆನು, ಎಂದು ಹೇಳಿ ಅಲ್ಲಿ ನಡೆದ ಎಲ್ಲಾ ವೃತ್ತಾಂತಗಳನ್ನು ತಿಳಿಸಿದನು. ॥ ೬-೧ ॥ ॥ ೮ ॥

**ಭಾ. ॥ (೧)ಭಲ್ಲಾಕ್ಷ ಮಂದಾಕ್ಷ ।(೨)ಯಥಾ ಕೃತೇ ಜಿತೇ ತ್ರೇತಾದಿಜಯಫಲಂ ಚ ತಸ್ಯೈ ಭವತಿ ಏವಮನ್ಯೇಷಾಂ ಪುಣ್ಯಫಲಂ ಪ್ರಾಧಾನ್ಯೇನ ತಸ್ಯೈ ಭವತಿ ॥ (೩) ಅರೇ ಅಂಗ ಇಷ್ಟ ಸಯುಗ್ವಾ ರೈಕ್ವೋ ಜ್ಞಾತವ್ಯಃ । ಅಹಂ ಹ್ಯರಾ ೩ ಇತಿ ಪ್ಲುತಿಃ ಪಾಮಕಷಣಭಾವೇನ ॥ ೧, ೨, ೩, ೪, ೫, ೬, ೭, ೮ ॥ ಇತಿ ಪ್ರಥಮಃ ಖಂಡಃ ॥ ೬-೧ ॥ ॥ ೧ ॥**

ಅ ॥ (೧) (೨ನೇ ಮಂತ್ರದಲ್ಲಿದ್ದ ಭಲ್ಲಾಕ್ಷನೆಂದರೆ* ಮಂದಜ್ಞಾನಿಯೇ (೨) (೩ನೇ ಮಂತ್ರದ ಅರ್ಥ ಹೇಳುತ್ತಾರೆ—) ಹೇಗೆ ಧರ್ಮಾಚರಣೆಯಿಂದ ಕೃತಯುಗವನ್ನು ಗೆದ್ದರೆ ತ್ರೇತಾದಿ ಯುಗಗಳನ್ನು ಗೆದ್ದಂತೆಯೇ ಆಗುವುದೋ ಹಾಗೆಯೇ ಬೇರೆ ಪ್ರಜೆಗಳೂ ಪುಣ್ಯಕರ್ಮ ಮಾಡದರೆ ಆ ಫಲವು ಮುಖ್ಯವಾಗಿ ಸಂವರ್ಗವಿದ್ಯೆಯನ್ನು ತಿಳಿದವನಿಗೇನೇ ಬರುತ್ತದೆ. (ಹಂಸಗಳೂ ದೇವತೆಗಳೂ ಋಷಿಗಳೂ ಎಲ್ಲರೂ ಜಾನಶ್ರುತಿಯು ಮಾಡಿದ ಅನ್ನದಾನದಿಂದ ಸಂತುಷ್ಟರಾಗಿ ಬಂದಿರುತ್ತಾರೆಂದು ಪರರೂ ಅರ್ಥ ಹೇಳಿರುವುದರಿಂದ ಅವರಿಗೆ ಅಜ್ಞಾನಾದಿಗಳು ಕೂಡಲಾರವು, ಎಂದುಕ್ತವಾಯಿತು.) (೩) ಎಲೋ ಪ್ರಿಯನಾದ ಸಾರಥಿಯೇ ಬಂಡಿಗಳಿಂದೊಡಗೂಡಿದ ರೈಕ್ವರನ್ನು ಅವಶ್ಯವಾಗಿ ತಿಳಿಯಬೇಕು. (೪) (೮ನೇ ಮಂತ್ರದ ಅರ್ಥ ಹೇಳುತ್ತಾರೆ—) ಅಹಂ ಹ್ಯರಾ ೩ ಎಂಬ § ಪ್ಲುತವು ಕಜ್ಜಿಯನ್ನು ತೊರಿಸಿಕೊಂಡೇ ಇರುವವನೆಂಬ ಅಭಿಪ್ರಾಯದಿಂದ. ॥೧, ೨, ೩ ೪, ೫, ೬, ೭, ೮ ॥ ೬—೧ ॥ ॥ ೧ ॥

ಒಂದನೇ ಖಂಡವು ಮುಗಿಯಿತು.

---

† ತತ್ರೋಪವಿಶ್ಯ ತಂ ರೈಕ್ವಂ ಪ್ರತ್ಯಭ್ಯುವಾದ ಕ್ಷತ್ತಾ । ಹೇ ಭಗವಂಸ್ತ್ವಮೇವ ಕಿಂ ಸಯುಗ್ವಾ ರೈಕ್ವ ಇತಿ ॥ ಎಂದು ಗೀತಾಮಹಾತ್ಮ್ಯದಲ್ಲಿದೆ.

* ಜಾನಶ್ರುತಿಯ ಪ್ರಕಾಶವನ್ನು ಮೀರಿ ಹೋದರೆ ನೀನು ಸುಟ್ಟು ಹೋಗುವಿ, ಎಂಬುದನ್ನು ಸಹ ತಿಳಿಯಲಿಲ್ಲ, ಎಂಬ ಅಭಿಪ್ರಾಯದಿಂದ ಮಂದಾಕ್ಷ ಎಂದು ಸಂಬೋಧಿಸಿದ್ದು. ಹೀಗೆ ಗೀತಾ ಮಹಾತ್ಮ್ಯದಲ್ಲಿ ಉಕ್ತವಾಗಿದೆ ಪ್ರಕಾಶಮಾನಂ ಪುರತಃ ತೇಜಃ ಪುಂಜಂ ನ ಪಶ್ಯಥ । ಜಾನಶ್ರುತೇಃ ಮಹೀಭರ್ತುಃ ಪುಣ್ಯಕೀರ್ತೇರಿತಿ ಸ್ಫುಟಂ ॥

§ ಹ್ರಸ್ವ ದೀರ್ಘ ಪ್ಲುತ ಎಂದು ಮೂರು ವಿಧ ಸ್ವರವು. ಅ. ಹ್ರಸ್ವ. ಆ. ದೀರ್ಘ. ಆ೩ ಪ್ಲುತವು ಅತೀ ದೀರ್ಘ ಸ್ವರವು

## ೨ನೇ ಖಂಡವು

**ಉ. ॥ ತದು ಹ ಜಾನಶ್ರುತಿಃ ಪೌತ್ರಾಯಣಃ ಷಟ್ ಶತಾನಿ ಗವಾಂ ನಿಷ್ಕಮಶ್ವತರೀರಥಂ ತದಾದಾಯ ಪ್ರತಿಚಕ್ರಮೇ ತꣳ ಹಾಭ್ಯುವಾದ ॥ ೧ ॥**

ಅ ॥ ಸಾರಥಿಯು ರೈಕ್ವರ ವೃತ್ತಾಂತವನ್ನು ಹೇಳಿದುದರಿಂದಲೇ ಪುತ್ರಾಯಣನ ಗೋತ್ರದಲ್ಲಿ ಹುಟ್ಟಿದ ಜನಶ್ರುತನ ಮಗನಾದ ಜಾನಶ್ರುತಿ ರಾಜನು ಆರುನೂರು (೬೦೦) ಗೋವುಗಳನ್ನು ಮುತ್ತಿನ ಸರವನ್ನು ಅಶ್ವತರಿ (ಕುದುರೆಗಳಿಂದ ಹೆಣ್ಣು ಕತ್ತೆಗಳಲ್ಲಿ ಹುಟ್ಟಿದವುಗಳು ಅತಿ ವೇಗದಿಂದ ಓಡುವವುಗಳು.) ಗಳಿಂದೊಡಗೂಡಿದ ರಥವನ್ನು ಗುರುದಕ್ಷಿಣೆಯಾಗಿ ಹಿಡಿದುಕೊಂಡು ರೈಕ್ವರ ಸ್ಥಳಕ್ಕೆ ಹೋದನು. ಅಲ್ಲಿಗೆ ಹೋಗಿ ಪೌತ್ರಾಯಣನು ರೈಕ್ವರಿಗೆ ಹೇಳಿದನು ॥ ೧ ॥

**ಉ. ॥ ರೈಕ್ವೇಮಾನಿ ಷಟ್ಛತಾನಿ ಗವಾಮಯಂ ನಿಷ್ಕೋಽಯಮಶ್ವತರೀರಥೋ ನು ಮ ಏತಾಂ ಭಗವೋ ದೇವತಾಂ ಶಾಧಿ ಯಾಂ ದೇವತಾಮುಪಾಸ್ಸ ಇತಿ ॥ ೨ ॥**

ಅ ॥ ಎಲೋ ರೈಕ್ವರೇ ೬೦೦ ಗೋವುಗಳೂ ಈ ಮುತ್ತಿನ ಸರವೂ ಈ ಅಶ್ವತರೀರಥವೂ ಇವುಗಳೆಲ್ಲವೂ ನಿಮಗೆ ಗುರುದಕ್ಷಿಣೆಯಾಗಿವೆ. ಎಲೋ ಪೂಜ್ಯರೇ ಇವುಗಳನ್ನು ತೆಗೆದುಕೊಂಡು ಸಂತುಷ್ಟರಾಗಿ ನೀವು ಉಪಾಸನೆಮಾಡುವ ದೇವತೆಯನ್ನು ನನಗೆ ಉಪದೇಶಿಸಿರಿ, ಎಂದನು ॥ ೨ ॥

**ಉ. ॥ ತಮು ಹ ಪರಃ ಪ್ರತ್ಯುವಾಚಾಹಹಾರೇ ತ್ವಾ ಶೂದ್ರ ತವೈವ ಸಹ ಗೋಭಿರಸ್ತ್ವಿತಿ ತದು ಹ ಪುನರೇವ ಜಾನಶ್ರುತಿಃ ಪೌತ್ರಾಯಣಃ ಸಹಸ್ರಂ ಗವಾಂ ನಿಷ್ಕಮಶ್ವತರೀರಥಂ ದುಹಿತರಂ ತದಾದಾಯ ಪ್ರತಿಚಕ್ರಮೇ ॥ ೩ ॥**

ಅ ॥ ಲೋಕವಿಲಕ್ಷಣನಾದ ರೈಕ್ವಮುನಿಯು ಪೌತ್ರಾಯಣನಿಗೆ ಹೇಳಿದನು. (ಹಂಸವು ತಿರಸ್ಕಾರ ಮಾಡಿದುದರಿಂದುಂಟಾದ ಶೋಕವಿರುವುದರಿಂದ ಶೂದ್ರನೆನಿಸಿಕೊಂಡ) ಎಲೋ ಪೌತ್ರಾಯಣನೇ ಮುತ್ತಿನ ಸರ, ಬಂಡಿ, ಗೋವುಗಳು ಎಲ್ಲವೂ ನಿನಗೇನೇ ಇರಲಿ, ಎಂದನು. ರೈಕ್ವರು ಹೀಗೆ ತಿರಸ್ಕರಿಸಿದುದರಿಂದಲೇ ಪೌತ್ರಾಯಣನು (ಅತ್ಯಲ್ಪ ಧನವನ್ನು ತಂದದ್ದೆಂದು ರೈಕ್ವರಿಗೆ ಕೋಪವೆಂದು ತಿಳಿದು ಮರಳಿ ಪಟ್ಟಣಕ್ಕೆ ಬಂದು) ಸಹಸ್ರ (೧೦೦೦) ಗೋವುಗಳನ್ನೂ ಮುತ್ತಿನ ಸರವನ್ನೂ ಅಶ್ವತರೀರಥವನ್ನೂ ಹಿಡಿದುಕೊಂಡು (ಋಷಿಗೆ ಮದುವೆಮಾಡಿಕೊಡುವುದಕ್ಕಾಗಿ ತನ್ನ) ಮಗಳನ್ನು ಕರೆದುಕೊಂಡು ಅಲ್ಲಿಗೆ ಹೊರಟು ಹೋದನು. ॥ ೩ ॥

**ಉ. ॥ ತꣳ ಹಾಭ್ಯುವಾದ ರೈಕ್ವೇದꣳ ಸಹಸ್ರಂ ಗವಾಮಯಂ ನಿಷ್ಕೋಽಯಮಶ್ವತರೀರಥ ಇಯಂ ಜಾಯಾಽಯಂ ಗ್ರಾಮೋ ಯಸ್ಮಿನ್ನಾಸ್ಸೇಽನ್ವೇವ ಮಾ ಭಗವಃ ಶಾಧೀತಿ ॥ ೪ ॥**

ಅ || ಪೌತ್ರಾಯಣನು ಅಲ್ಲಿಗೆ ಹೋಗಿ ರೈಕ್ವರಿಗೆ ನಮಸ್ಕರಿಸಿದನು. ಎಲೋ ರೈಕ್ವರೇ ಈ ಸಹಸ್ರ ಗೋವುಗಳೂ, ಈ ಮುತ್ತಿನ ಸರವೂ, ಅಶ್ವತರೀರಥವೂ, ನಿಮಗೆ ಹೆಂಡತಿಯಾಗಲಿಕ್ಕೆ ಯೋಗ್ಯಳಾದ ನನ್ನ ಮಗಳೂ, ನೀವು ಇರುವ ಗ್ರಾಮವೂ ಎಲ್ಲವೂ ನಿಮಗೆ ದಕ್ಷಿಣೆಯಾಗಿ ಇರಲಿ, ಎಲೋ ಪೂಜ್ಯರೇ ನೀವು ಉಪಾಸನೆಮಾಡುವ ದೇವತೆಯನ್ನು ಚೆನ್ನಾಗಿ ಉಪದೇಶಿಸಿರಿ. || ೪ ||

**ಉ. || ತಸ್ಯಾ ಹ ಮುಖಮುಪೋದ್ಗೃಹ್ಣನ್ನುವಾಚಾಜಹಾರೇಮಾಃ ಶೂದ್ರಾನೇನೈವ ಮುಖೇನಾಲಾಪಯಿಷ್ಯಥಾ ಇ ಇತಿ ತೇ ಹೈತೇ ರೈಕ್ವಪರ್ಣಾ ನಾಮ ಮಹಾವೃಷೇಷು ಯತ್ರಾಸ್ಮಾ ಉವಾಸ ತಸ್ಮೈ ಹೋವಾಚ || ಇತಿ ದ್ವಿತೀಯಃ ಖಂಡಃ || ೬-೨ || || ೫ ||**

ಅ || ರೈಕ್ವರು ರಾಜಕನ್ನಿಕೆಯ ಮುಖವನ್ನು ನೋಡುತ್ತಾ ಈ ಗುರುದಕ್ಷಿಣೆಯನ್ನು ಸ್ವೀಕರಿಸಿದನು. ರೈಕ್ವರು ರಾಜನೊಡನೆ, ಎಲೋ ರಾಜನೇ ಗುರುಗಳ ಶುಶ್ರೂಷೆಯಿಲ್ಲದೆ ಮುತ್ತಿನ ಸರ ಮೊದಲಾದವುಗಳನ್ನು ಮಾತ್ರ ಹಿಡಿದುಕೊಂಡು ಬಂದಿರುತ್ತಿ, ಎಂದನು. (ಅಥವಾ ಹೀಗೆ ಹೇಳಿಸಿಕೊಂಡ ರೈಕ್ವರು ಮದುವೆ ಮಾಡಿಕೊಡುವುದಕ್ಕಾಗಿ ಕರೆದುಕೊಂಡು ಬಂದ ರಾಜನ ಮಗಳ ಮುಖವನ್ನು ಮೆಲ್ಲಗೆ ನೋಡುತ್ತಾ *ಕೋಪಗೊಂಡವನಾಗಿ ಹೇಳಿದನು ಎಲೋ ರಾಜನೇ ಈ ಗುರುದಕ್ಷಿಣೆಯನ್ನು ವಾಪಾಸು ತೆಗೆದುಕೊಂಡು ಹೋಗು. ವಿರಕ್ತನಾದ ನನಗೆ ಇದರಿಂದ ಪ್ರಯೋಜನವಿಲ್ಲ ಸೇವೆ ಮಾಡತಕ್ಕ ಬ್ರಹ್ಮಚಾರಿಯೇ ನನಗೆ ಬೇಕಾದದ್ದು. ಅವನನ್ನು ತರಲಿಲ್ಲ. ಸೇವೆಯಿಲ್ಲದೆ ಗವಾದಿಗಳನ್ನೇ ತಂದು ಮಾತನಾಡಿಸುವಿ, ಎಂದನು.) ಹೀಗೆ ಹೇಳಿದೊಡನೆ ರಾಜನು ಶಾಪಕ್ಕೆ ಹೆದರಿ ರೈಕ್ವರನ್ನು ಸಂತೋಷಗೊಳಿಸಿದನು. ಆ ಮೇಲೆ ರೈಕ್ವರು ರಾಜನಿಗೆ ಉಪದೇಶಿಸಿದರು ರೈಕ್ವರು ಆವಾಸಮಾಡತಕ್ಕ (ರಾಜನು ಕೊಟ್ಟ ಗ್ರಾಮದ ಹೆಸರನ್ನು ವೇದವು ಹೇಳುತ್ತದೆ.) ಯಾವ ಗ್ರಾಮಗಳಲ್ಲಿ ರೈಕ್ವರು ರಾಜನಿಗೆ ಉಪದೇಶಿಸುವುದಕ್ಕಾಗಿ ಆವಾಸಮಾಡಿರುವರೋ ಅಂತಹ ರಾಜನು ಕೊಟ್ಟಿರುವ ಗ್ರಾಮಗಳು ಕಾಶ್ಮೀರ ಎನಿಸಿಕೊಂಡ ಮಹಾವೃಷದೇಶಗಳಲ್ಲಿ ರೈಕ್ವಪರ್ಣಗಳೆಂದು ಪ್ರಸಿದ್ಧಗಳಾದ ಗ್ರಾಮಗಳು ದಕ್ಷಿಣೆಯನ್ನು ತೆಗೆದುಕೊಂಡು ಸಂತುಷ್ಟರಾದ ರೈಕ್ವರು ರಾಜನಿಗೆ ಸಂವರ್ಗ ವಿದ್ಯೆಯನ್ನು ಹೇಳಿದರು. || ೬—೨ || || ೫ ||

**ಭಾ. || ಶುಚಾ ದ್ರವಣಾಚ್ಛೂದ್ರಃ । ರಾಜಾ ಪೌತ್ರಾಯಣಃ ಶೋಕಾಚ್ಛೂದ್ರೇತಿ ಮುನಿನೋದಿತಃ । ಪ್ರಾಣವಿದ್ಯಾಮವಾಪ್ಯಾಸ್ಮಾತ್ಪರಂ ಧರ್ಮಮವಾಪ್ತವಾನ್ || ಇತಿ ಪಾದ್ಮೇ || ೧, ೨, ೩, ೪, ೫ || ಇತಿ ದ್ವಿತೀಯಃ ಖಂಡಃ || ೬—೨ || || ೧ ||**

ಅ || ಪೌತ್ರಾಯಣರಾಜನು ಹಂಸವು ತಿರಸ್ಕಾರ ಮಾಡಿದುದರಿಂದುಂಟಾದ ಶೋಕದಿಂದೊಡಗೂಡಿರುವುದರಿಂದ ಶೂದ್ರನೆನಿಸುತ್ತಾನೆ. **ಅಯಮಶ್ವತರೀರಥಃ** ಎಂದು ಹೇಳಿದ ಪ್ರಕಾರ ಇದ್ದುದರಿಂದ ಪೌತ್ರಾಯಣನು ರಾಜನೇ. ಪೌತ್ರಾಯಣರಾಜನು ಮಹಾಶೋಕದಿಂದೊಡಗೂಡಿದವನಾದುದರಿಂದ ಶೂದ್ರನೆಂದು ಮುನಿಯಿಂದ ಹೇಳಿಸಿಕೊಂಡಿದ್ದಾನೆ ರಾಜನು ರೈಕ್ವರಿಂದ ಸಂವರ್ಗ (ಪ್ರಾಣ) ವಿದ್ಯೆಯನ್ನು ಕಲಿತು ಮಹಾಧರ್ಮವನ್ನು ಹೊಂದಿರುತ್ತಾನೆ, ಎಂದು ಪಾದ್ಮ ಪುರಾಣದಲ್ಲಿದೆ. || ೧—೫ ||

ಎರಡನೇ ಖಂಡವು ಮುಗಿಯಿತು.

---

* **ತತೋ ವಿಲೋಕ್ಯ ತತ್ಸರ್ವಂ ರೈಕ್ವೋ ರಾಜ್ಞೇ ಚುಕೋಪ ಹ । ರೇ ಶೂದ್ರ ಮಾಮಕಂ ವೃತ್ತಂ ನ ಜಾನಾಸಿ ದುರೀಶ್ವರ ।।** ಎಂದು ಹೇಳಿದೆ.

## ೩ನೇ ಖಂಡವು

ಪೀ—ರೈಕ್ವರು ಹೇಳಿದ ಸಂವರ್ಗವಿದ್ಯೆಯನ್ನೂ, ಸಂವರ್ಗಸ್ವರೂಪವನ್ನೂ ವಿಸ್ತಾರವಾಗಿ ವೇದ ಪುರುಷನು ಹೇಳುತ್ತಾನೆ—

**ಉ. ॥ ವಾಯುರ್ವಾವ ಸಂವರ್ಗೋ ಯದಾ ವಾ ಮಹಾಪ್ರಲಯೇ ಅಗ್ನಿರುದ್ವಾಯತಿ ವಾಯುಮೇವಾಪ್ಯೇತಿ ಯದಾ ಸೂರ್ಯೋಽಸ್ತಮೇತಿ ವಾಯುಮೇವಾಪ್ಯೇತಿ ಯದಾ ಚಂದ್ರೋಽಸ್ತಮೇತಿ ವಾಯುಮೇವಾಪ್ಯೇತಿ ॥೧॥**

ಅ ॥ ಮುಖ್ಯವಾಯುವೇ ಸಂಹರಿಸುವವನಾದುದರಿಂದ ಸಂವರ್ಗನೆನಿಸುತ್ತಾನೆ. ಮಹಾಪ್ರಲಯ ಕಾಲದಲ್ಲಿ ಅಗ್ನಿಯು ಶಾಂತನಾಗಿ ವಾಯುವಿನಲ್ಲಿ ಲಯಹೊಂದುತ್ತಾನೆ ಸೂರ್ಯ ಚಂದ್ರರು ಅಸ್ತ ಮಾನಹೊಂದಿಯೂ ಕೂಡ ವಾಯುವಿನಲ್ಲಿಯೇ ಲಯಹೊಂದುತ್ತಾರೆ. ॥ ೧ ॥

**ಉ. ॥ ಯದಾಽಽಪ ಉಚ್ಛುಷ್ಯಂತಿ ವಾಯುಮೇವಾಪಿಯಂತಿ ವಾಯು-ರ್ಹ್ಯೇವೈತಾನ್ಸರ್ವಾನ್ ಸಂವೃಂಕ್ತ ಇತ್ಯಧಿದೈವತಂ ॥ ೨ ॥**

ಅ ॥ ಜಲಗಳು ಒಣಗಿದಾಗ ಜಲಾಭಿಮಾನಿಯಾದ ಇಂದ್ರನು ಶಾಂತನಾಗಿ ವಾಯುವಿನಲ್ಲಿ ಲಯ ಹೊಂದುತ್ತಾನೆ ಮುಖ್ಯಪ್ರಾಣನೇ ಅಗ್ನ್ಯಾದಿ ದೇವತೆಗಳನ್ನು ಸಂಹರಿಸುತ್ತಾನೆಂದು ಪ್ರಸಿದ್ಧ ಅಧಿ ದೈವತದಲ್ಲಿ ಸಂವರ್ಗವೆನಿಸಿದ ವಾಯುವಿನ ರೂಪವು ಹೇಳಲ್ಪಟ್ಟಿತು ॥ ೨ ॥

**ಉ. ॥ ಅಥಾಧ್ಯಾತ್ಮಂ ಪ್ರಾಣೋ ವಾವ ಸಂವರ್ಗಃ ಸ ಯದಾ ಸ್ವಪಿತಿ ಪ್ರಾಣಮೇವ ವಾಗಪ್ಯೇತಿ ಪ್ರಾಣಂ ಚಕ್ಷುಃ ಪ್ರಾಣಂ ಶ್ರೋತ್ರಂ ಪ್ರಾಣಂ ಮನಃ ಪ್ರಾಣೋ ಹ್ಯೇವೈತಾನ್ಸರ್ವಾನ್ ಸಂವೃಂಕ್ತ ಇತಿ ॥ ೩ ॥**

ಅ ॥ ಇನ್ನು ಮುಂದೆ ಅಧ್ಯಾತ್ಮದಲ್ಲಿ ಸಂವರ್ಗಸ್ವರೂಪವು ಹೇಳಲ್ಪಡುತ್ತದೆ. ಮುಖ್ಯಪ್ರಾಣನು ಸಂವರ್ಗನೆನಿಸುತ್ತಾನೆ ಮುಖ್ಯಪ್ರಾಣನು ಜೀವನನ್ನು ಮಲಗಿಸುವಾಗ ವಾಗಾದಿ ದೇವತೆಗಳು ಅಂದರೆ— ಅಧ್ಯಾತ್ಮದಲ್ಲಿದ್ದ ಅಗ್ನ್ಯಾದಿ ದೇವತೆಗಳು ಮುಖ್ಯಪ್ರಾಣನನ್ನು ಹೊಂದುತ್ತಾರೆ. ಮುಖ್ಯಪ್ರಾಣನೇ ಇವ ರೆಲ್ಲರನ್ನು ಸಂಹರಿಸುತ್ತಾನೆ. ॥ ೩ ॥

ಪೀ—ಹೇಳಿದ ಅರ್ಥವನ್ನು ಸಂಗ್ರಹಿಸಿ ಹೇಳುತ್ತಾರೆ-

**ಉ. ॥ ತೌ ವಾ ಏತೌ ದ್ವೌ ಸಂವರ್ಗೌ ವಾಯುರೇವ ದೇವೇಷು ಪ್ರಾಣಃ ಪ್ರಾಣೇಷು ॥ ೪ ॥**

ಅ ॥ ದೇವತೆಗಳ ವಿಷಯದಲ್ಲಿ ಮುಖ್ಯವಾಯುವೇ. ವಾಗಾದಿ ಇಂದ್ರಿಯಗಳ ವಿಷಯದಲ್ಲಿ ಮುಖ್ಯ ಪ್ರಾಣನೇ. ಹೀಗೆ ಇವರಿಬ್ಬರೇ ಸಂವರ್ಗರೆನಿಸಿದವರು. ॥ ೪ ॥

ಪೀ—ಮುಖ್ಯವಾಯುವೇ ಸಂವರ್ಗನೆನಿಸಿದವನೆಂಬ ವಿಷಯದಲ್ಲಿ ಹಿಂದಿನ ಕಥೆ ಹೇಳುತ್ತಾರೆ—

**ಉ. ॥ ಅಥ ಹ ಶೌನಕಂ ಚ ಕಾಪೇಯಮಭಿಪ್ರತಾರಿಣಂ ಚ ಕಾಕ್ಷ-ಸೇನಿಂ ಪರಿವಿಷ್ಯಮಾಣೌ ಬ್ರಹ್ಮಚಾರೀ ಬಿಭಿಕ್ಷೇ ತಸ್ಮಾ ಉ ಹ ನ ದದತುಃ ॥ ॥ ೫ ॥**

ಅ ॥ ಕಪಿಗೋತ್ರದಲ್ಲಿ ಹುಟ್ಟಿದ ಶುನಕನ ಮಗನಾದ ಶೌನಕನೂ, ಕಕ್ಷಸೇನನ ಮಗನಾದ ಅಭಿಪ್ರತಾರಿಯು, ಇವರಿಬ್ಬರೂ ಅನ್ನವನ್ನು (ಅತಿಥಿಗಳಿಗೆ) ಬಡಿಸುತ್ತಿರುವಾಗ ಇವರೊಡನೆ ಒಬ್ಬಾನೊಬ್ಬ ಬ್ರಹ್ಮಚಾರಿಯು ಅನ್ನವನ್ನು ಬೇಡಿದನು ಅವರಿಬ್ಬರೂ ಆತನಿಗೆ ಕೊಡಲಿಲ್ಲ ಆಶ್ಚರ್ಯ. ॥ ೫ ॥

**ಉ. ॥ ಸ ಹೋವಾಚ ಮಹಾತ್ಮನಶ್ಚತುರೋ ದೇವ ಏಕಃ ಕಃ ಸೋ ಜಗಾರ ಭುವನಸ್ಯ ಗೋಪಾಸ್ತಂ ಕಾಪೇಯ ನಾಭಿಪಶ್ಯಂತಿ ಮರ್ತ್ಯಾ ಅಭಿ-ಪ್ರತಾರಿನ್ ಬಹುಧಾ ವಸಂತಂ ಯಸ್ಮೈ ವಾ ಏತದನ್ನಂ ತಸ್ಮಾ ಏತನ್ನ ದತ್ತ-ಮಿತಿ ॥ ೬ ॥**

ಅ ॥ ಆಗ ಬ್ರಹ್ಮಚಾರಿಯು ಅವರೊಡನೆ ಹೇಳಿದನು. ಎಲೋ ಕಾಪೇಯನೇ, ಎಲೋ ಅಭಿಪ್ರತಾರಿಯೇ, ಯಾವನು ಸಮಸ್ತ ಜಗತ್ತನ್ನು ರಕ್ಷಿಸುವವನೋ, ಒಬ್ಬ ದೇವನು ಅಧಿದೈವದಲ್ಲಿ ನಾಲ್ಕು ಮಹಾನುಭಾವರಾದ ಅಗ್ನ್ಯಾದಿಗಳನ್ನೂ, ಅಧ್ಯಾತ್ಮದಲ್ಲಿ ವಾಗಾದಿಗಳನ್ನೂ ನುಂಗಿರುವನೋ, ಮನುಷ್ಯರಲ್ಲಿ ಬಹುರೂಪದಿಂದ ಆವಾಸಮಾಡುತ್ತಿರುವವನನ್ನು ಮನುಷ್ಯರು ತಿಳಿಯುವುದಿಲ್ಲವೋ, (ಅವನು ಯಾರು? ಅವನ ಹೆಸರೇನು? ಆತನ ಮಹಿಮೆಯೇನು? ಅವನನ್ನು ನಾನು ತಿಳಿದಿರುತ್ತೇನೆ. ನೀವು ತಿಳಿದಿದ್ದರೆ ಹೇಳಿರಿ. ಅದುಕಾರಣ) ಯಾವ ದೇವತೆಯದ್ದು ಅನ್ನವೋ ಅದನ್ನೇ ಆ ದೇವತೆಗೆ ನೀವು ಕೊಡಲಿಲ್ಲ. ಆದುದರಿಂದ ಕೊಡಿರಿ. ॥ ೬ ॥

**ಉ. ॥ ತದು ಹ ಶೌನಕಃ ಕಾಪೇಯಃ ಪ್ರತಿಮನ್ವಾನಃ ಪ್ರತ್ಯೇಯಾಯ ಆತ್ಮಾ ದೇವಾನಾಂ ಜನಿತಾ ಪ್ರಜಾನಾಂ ಹಿರಣ್ಯದಂಷ್ಟ್ರೋ ಬಭಸೋಽನ ಸೂರಿರ್ಮಹಾಂತಮಸ್ಯ ಮಹಿಮಾನಮಾಹುರನದ್ಯಮಾನೋ ಯದನನ್ನಮ-ತ್ತೀತಿ ವೈ ವಯಂ ಬ್ರಹ್ಮಚಾರಿನ್ನಿದಮುಪಾಸ್ಮಹೇ ದತ್ತಾಸ್ಮೈ ಭಿಕ್ಷಾಮಿತಿ ॥೭॥**

ಅ ॥ ಬ್ರಹ್ಮಚಾರಿಯು ಹೀಗೆ ಹೇಳಿದಾಗ ಕಪಿಗೋತ್ರದಲ್ಲಿ ಹುಟ್ಟಿದ ಶೌನಕನು ಬ್ರಹ್ಮಚಾರಿಯು ಕೇಳಿದ್ದನ್ನೇ ವಿಚಾರಮಾಡುತ್ತಾ ತಿಳಿದನು. ತಿಳಿದು ಬ್ರಹ್ಮಚಾರಿಗೆ ಹೇಳಿದನು. ಬ್ರಹ್ಮಚಾರಿಯೇ ನೀನು ಕೇಳಿದ ದೇವತೆಯು ಅಗ್ನ್ಯಾದಿ ದೇವತೆಗಳಿಗೆ ಸ್ವಾಮಿಯು, ಪ್ರಜೆಗಳಿಗೆ ಉತ್ಪಾದಕನು, ಸರ್ವಭಕ್ಷಕನು, ಅಂತಹನು ಸರ್ವರಿಗೆ ಚೇಷ್ಟಕನಾದುದರಿಂದಲೂ ಜ್ಞಾನಿಯಾದುದರಿಂದಲೂ ಅನಸೂರಿ ಎನಿಸಿದ ಮುಖ್ಯಪ್ರಾಣನು ಈ ಮುಖ್ಯಪ್ರಾಣನ ಮಹಿಮೆಯನ್ನು ಪ್ರಾಜ್ಞರು ಹೇಳುತ್ತಾರೆ. ಮುಖ್ಯಪ್ರಾಣನು ವಿಷ್ಣುವನ್ನು ಹೊರತು ಬೇರೆ ದೇವತೆಗಳಿಗೆ ತಿನ್ನಲಶಕ್ಯನು, ತಾನು ಎಲ್ಲಾ ದೇವತೆಗಳ ಸಮುದಾಯವನ್ನು ತಿನ್ನುವವನು, ಸಂಹರಿಸುವವನು. ಹೀಗೆ ಈ ದೇವತೆಯನ್ನು ಉಪಾಸನಮಾಡುತ್ತೇವೆ ವಾಯುದೇವತೆಯನ್ನು ತಿಳಿದ ಬ್ರಹ್ಮಚಾರಿಗೆ ಅಥವಾ ಬ್ರಹ್ಮಚಾರಿಯಲ್ಲಿದ್ದ ಪ್ರಾಣನಿಗೆ ಎಲೋ ಭೃತ್ಯರೇ ಭಿಕ್ಷೆಯನ್ನು ಕೊಡಿರಿ, ಎಂದು ಕಾಪೇಯನು ಹೇಳಿದನು.

**ಉ. ॥ ತಸ್ಮಾ ಉ ಹ ದದುಸ್ತೇ ವಾ ಏತೇ ಪಂಚಾನ್ಯೇ ಪಂಚಾನ್ಯೇ ದಶ ಸಂತಸ್ತತ್ಕೃತಂ ತಸ್ಮಾತ್ಸರ್ವಾಸು ದಿಕ್ಷ್ವನ್ನಮೇವ ದಶಕೃತಂ ಸೈಷಾ ವಿರಾಡನ್ನಾದೀ ತಯೇದಂ ಸರ್ವಂ ದೃಷ್ಟಂ ಸರ್ವಮಸ್ಯೇದಂ ದೃಷ್ಟಂ ಭವತ್ಯನ್ನಾದೋ ಭವತಿ ಯ ಏವಂ ವೇದ ಯ ಏವಂ ವೇದ ॥ ಇತಿ ತೃತೀಯಃ ಖಂಡಃ ॥ ೬–೩ ॥                    ॥ ೮ ॥**

ಅ ॥ ಆಗ ಕೆಲವು ಬಡಿಸುವವರು ಆ ಬ್ರಹ್ಮಚಾರಿಗೆ ಆಗಲೇ ಭಿಕ್ಷೆ ಕೊಟ್ಟರು. (ಹೀಗಾದರೆ ಪ್ರಾಣನೇ ಸರ್ವೋತ್ಪಾದಕನಾಗಿ ಸರ್ವಸಂಹಾರಕನೋ, ಏನು? ಎಂದರೆ—ರೈಕ್ವರು ಅಲ್ಲವೆನ್ನುತ್ತಾರೆ—) ಅಧಿದೈವದಲ್ಲಿ ಅಗ್ನ್ಯಾದಿಗಳು ನಾಲ್ವರು, ಮುಖ್ಯವಾಯು ಹೀಗೆ ಐವರು, ಹಾಗೆಯೇ ಅಧ್ಯಾತ್ಮದಲ್ಲಿ ವಾಗಾದಿಗಳು ನಾಲ್ವರು, ಮುಖ್ಯಪ್ರಾಣನು ಹೀಗೆ ಐವರು. ಹೀಗೆ ಹತ್ತು ಮಂದಿಯಾಗಿ ಹತ್ತು ದೇವತೆಗಳು ಕೃತಂ (ಪೂರ್ಣವಾದ ಅನ್ನವು) ಎನಿಸುತ್ತಾರೆ. (ಕೃತಯುಗವು ಪೂರ್ಣವಾದ ಧರ್ಮವುಳ್ಳದ್ದು ಹೇಗೋ, ಹಾಗೆಯೇ ಹತ್ತು ದೇವತೆಗಳು ಪೂರ್ಣರಾಗಿದ್ದಾರೆ.) ಅಗ್ನ್ಯಾದಿಗಳು ಅಧಿದೈವ ಅಧ್ಯಾತ್ಮ ಭೇದದಿಂದ ಎಂಟು ಮಂದಿಯಾದರೂ ಮುಖ್ಯವಾಯು, ಮುಖ್ಯಪ್ರಾಣ ಇವರಿಂದೊಡಗೂಡ ಹತ್ತು ಮಂದಿಯಾಗುವುದರಿಂದ, ಹತ್ತು ದಿಕ್ಕುಗಳಲ್ಲಿರತಕ್ಕ ಹತ್ತು ದೇವತೆಗಳು ಪೂರ್ಣವಾದ ಅನ್ನ ಎನಿಸುತ್ತಾರೆ. (ಈ ದೇವತೆಗಳು ಯಾರಿಗೆ ಅನ್ನವೆಂದರೆ—) ಪ್ರಸಿದ್ಧವಾದ ಸರ್ವಾನ್ನಕ್ಕೂ ದೇವತೆಯಾದವನು ವಿಶೇಷವಾಗಿ ಪ್ರಕಾಶಿಸಿಕೊಂಡಿರುವ ವಿಷ್ಣುವೇ ಸರ್ವವನ್ನು ತಿನ್ನುವವನು. (ಅವನಿಗೆ ಸರ್ವವಸ್ತುಗಳ ಜ್ಞಾನವಿಲ್ಲದಿದ್ದರೆ ಸರ್ವವನ್ನು ಭಕ್ಷಿಸುವುದು ಹೇಗೆಂದರೆ—) ಆ ವಿಷ್ಣುವಿನಿಂದ ವಾಯು ಮೊದಲಾದ ಎಲ್ಲಾ ಜಗತ್ತು ಕಾಣಲ್ಪಟ್ಟದೆ. (ಅದುಕಾರಣ ಅವನು ಸರ್ವಜ್ಞನೇ.) (ಹೀಗೆ ವಿಷ್ಣುವನ್ನು ಪಾಸನೆ ಮಾಡುವವನಿಗೆ ಅದಕ್ಕೆ ಅನುಗುಣವಾದ ಫಲ ಹೇಳುತ್ತಾರೆ—) ಮುಖ್ಯವಾಯುವು ತಾನು ಸಮಸ್ತ ಜಗತ್ತನ್ನು ಸಂಹರಿಸುವುದರಿಂದ ಸಂವರ್ಗನೆನಿಸಿಕೊಂಡವನಾಗಿ ಶ್ರೀಹರಿಗೆ ಅನ್ನನಾಗುತ್ತಾನೆಂದು ತಿಳಿದವನು ಯಥೇಷ್ಟ ಭೋಗ್ಯವಸ್ತುವನ್ನುಣ್ಣುತ್ತಾನೆ ಉಪಾಸಕನು ಸ್ವಯೋಗ್ಯವಾದುದೆಲ್ಲವನ್ನು ಕಾಣುತ್ತಾನೆ ಸರ್ವಜ್ಞನಾಗುತ್ತಾನೆ. ॥ ೬–೩ ॥
॥ ೮ ॥

ಪೀ—ಹುಲ್ಲು ಮೊದಲಾದುದನ್ನು ಒಂದು ಕಡೆ ಸೇರಿಸುವುದರಿಂದ ಜಡವಾಯುವು ಸಂವರ್ಗವೆನಿಸುತ್ತದೆ ಎಂದು ಪರರು ಹೇಳುವುದು ಅಯುಕ್ತವೆಂಬ ಅಭಿಪ್ರಾಯದಿಂದ ಪ್ರಮಾಣ ಹೇಳಿ ೧ನೇ ಮಂತ್ರಕ್ಕೆ ಅರ್ಥ ಹೇಳುತ್ತಾರೆ –

**ಭಾ. ॥ (೧) ಸಂವೃಂಕ್ತೇ ಸರ್ವದೇವಾನ್ಯದ್ವಾಯುಃ ಸಂವರ್ಗ ಈರಿತಃ । ಮಹಾನ್ಮಾಽಸ್ಯ ಮಹಾನೇಷ ಯದನದ್ಯೋಽತ್ತಿ ದೇವತಾಃ ॥ ಇತಿ ಪ್ರಭಂಜನೇ ॥ (೨) ದಶೇತಿ ವೈ ಸರ್ವಮಿತಿ ಶ್ರುತೇಃ । ಕೃತಸ್ಯ ಚ ಪೂರ್ಣಾರ್ಥತ್ವಕತ್ವಾದಧ್ಯಾತ್ಮಾಧಿದೈವತಭೇದೇನ ಪಂಚ ದೇವತಾ ದಶಭೂತಾಃ ಕೃತಂ ॥ (೩) ತಸ್ಮಾದ್ವಾಯುನಾ ಸಹ ದಶಸಂಖ್ಯಾಪೂರಣಾತ್ ಸರ್ವದಿಕ್ಷು ಸ್ಥಿತಾ ದೇವತಾ ವಾಯುನಾ ಸಹಾನ್ನಮೇವ ॥ (೪) ಅನ್ನಾದೀ ದೇವತಾ ವಿರಾಡ್ವಿಷ್ಣುರೇವ ॥ (೫) ಅನದ್ಯಮಾನ ಇತ್ಯನ್ಯೈರನದ್ಯಮಾನಃ ॥ (೬) ವಾಯುಸ್ತು ಸರ್ವದೇವಾತ್ತಾ ವಾಯೋರತ್ತಾ ಜನಾರ್ದನಃ । ನ ತಸ್ಯ ಕಶ್ಚಿದತ್ತಾಽಸ್ತಿ ಸ ವಿರಾಡಧಿರಾಜನಾತ್ ಇತಿ ಚ ॥ ೧, ೨, ೩, ೪, ೫, ೬, ೭, ೮ ॥ ಇತಿ ತೃತೀಯಃ ಖಂಡಃ ॥ ೬–೩ ॥    ॥ ೧ ॥**

ಅ ॥ (೧) ವಾಯುವು ಸಮಸ್ತ ದೇವತೆಗಳನ್ನು ಸಂಹರಿಸುವುದರಿಂದ ಸಂವರ್ಗನೆನಿಸುತ್ತಾನೆ. (೭ನೇ ಮಂತ್ರದಲ್ಲಿದ್ದ **ಮಹಾಂತಮಸ್ಯ** ಎಂಬುದರ ಅರ್ಥ ಹೇಳುತ್ತಾರೆ—) ಮುಖ್ಯವಾಯುವು ವಿಷ್ಣು

**ಹೊರತು** ಬೇರೆಯವರಿಂದ ಸಂಹರಿಸಲ್ಪಡದಿರುವವನು. ತಾನು ಸಮಸ್ತ ದೇವತೆಗಳನ್ನು ಸಂಹರಿಸುವವನು, **ಅದುಕಾರಣ** ವಾಯುವಿನ ಮಹಿಮೆಯು ಅತಿಶ್ರೇಷ್ಠವಾದುದು, ಎಂದು ಪ್ರಭಂಜನವೆಂಬ ಗ್ರಂಥದಲ್ಲಿ ಹೇಳಿದೆ (೨) (೮ನೇ ಮಂತ್ರದಲ್ಲಿದ್ದ ದಶ ಎಂಬುವುದಕ್ಕೆ ಪೂರ್ಣವೆಂಬ ಅರ್ಥವಿದೆ ಎಂಬುವಲ್ಲಿ ವೇದ ಪ್ರಮಾಣ ಹೇಳುತ್ತಾರೆ–) ದಶ ಎಂಬುವುದಕ್ಕೆ ಸರ್ವವೆಂದು ಅರ್ಥವು. **ಸರ್ವಂ ಪೂರ್ಣಮಿಹೋಚ್ಯತೇ** ಎಂಬ ಸ್ಮೃತಿಯಿಂದ ಸರ್ವವೆಂದರೆ ಪೂರ್ಣವು. ಅಂತೂ ದಶ ಎಂಬುದಕ್ಕೆ ಪೂರ್ಣವೆಂದು ಅರ್ಥವು. (೮ ಹತ್ತು ದೇವತೆಗಳು ಪೂರ್ಣರಾಗಿದ್ದರೂ **ಕೃತಂ** ಎಂದು ಹೇಳಿದ್ದು ಹೇಗೆ? ಎಂದರೆ–) ಕೃತಯುಗವು ಪೂರ್ಣ ಧರ್ಮವುಳ್ಳದ್ದಾದುದರಿಂದ ಅಧ್ಯಾತ್ಮ ಅಧಿದೈವತ ಎಂಬ ಭೇದದಿಂದ ಐದು ದೇವತೆಗಳು ಹತ್ತು ಮಂದಿಯಾಗಿ ಕೃತಂ ಎನಿಸುತ್ತಾರೆ (೩) ಅಧ್ಯಾತ್ಮ ಅಧಿದೈವತ ಎಂಬ ಭೇದದಿಂದ ವಾಯುದೇವರು ಮುಖ್ಯವಾಯುರೂಪ, ಮುಖ್ಯಪ್ರಾಣರೂಪ, ಈ ಎರಡೂ ರೂಪಗಳು ಒಟ್ಟು ಸೇರಿ ಹತ್ತು ಮಂದಿಯಾಗುವುದರಿಂದ ಹತ್ತು ದಿಕ್ಕುಗಳಲ್ಲಿರತಕ್ಕ ಹತ್ತುದೇವತೆಗಳು ಅನ್ನವೆಂದೇ ಎನಿಸುತ್ತಾರೆ. (೪) (ಹೀಗಾದರೆ–**ಸೈಷಾ ವಿರಾಡನ್ನಾದೀ** ಎಂಬ ಉತ್ತರವಾಕ್ಯದಲ್ಲಿ ವಾಯುದೇವರು ಅನ್ನಾದಿಗಳು ಅನ್ನವನ್ನುಣ್ಣುವವರು ಎಂದು ಹೇಳಿದುದರಿಂದ ಆ ವಾಕ್ಯದಿಂದ ವಿರೋಧವು ಎಂದರೆ—) ಹಿಂದಿನ ವಾಕ್ಯದಲ್ಲಿ ವಾಯುದೇವರನ್ನು ಅನ್ನ ಎಂದು ಹೇಳಿದುದರಿಂದ ಇಲ್ಲಿ ಅನ್ನಾದಿ ಎಂದು ಹೇಳುವುದಿಲ್ಲ. ವಾಯುವೇ ಅನ್ನನೂ ಅನ್ನಾದಿಯೂ ಅಂದರೆ--ತಿನ್ನಲ್ಪಡುವ ಅನ್ನವು ತಿನ್ನುವ ಜೀವನು ಆಗಲಾರನು. ಅದುಕಾರಣ ಅನ್ನಾದಿ ದೇವತೆಯು (೧೦ ದೇವತೆಗಳನ್ನು ಸಂಹರಿಸುವವನು) ವಿಶೇಷವಾಗಿ ಪ್ರಕಾಶಿಸುತ್ತಿರುವ ಶ್ರೀವಿಷ್ಣುವೇ. (೫) (ವಿಷ್ಣುವು ಅನ್ನವನ್ನು ತಿನ್ನುವವನೆಂದಂಗೀಕರಿಸಿ ವಾಯುವು ಅನ್ನನೆಂದಂಗೀಕರಿಸಿದರೆ **ಅನದ್ಯಮಾನಃ** ಎಂದು ಹೇಳಿದ್ದು ವಿರುದ್ಧವಾಯಿತೆಂದರೆ–) ವಿಷ್ಣು ವಿನಹ ಇತರರಿಂದ ಸಂಹರಿಸಲ್ಪಡದಿರುವವನು, ಎಂದರ್ಥವು. (೬) (**ಯದನನ್ನಮತ್ತಿ** ಎಂದು ವಾಯುದೇವರು ಸಮಸ್ತ ದೇವತೆಗಳನ್ನು ಸಂಹರಿಸುವವರು ಎಂದು ಹೇಳಿದುದರಿಂದ ವಾಯುದೇವರು ವಿಷ್ಣುವಿಗೆ ಅನ್ನರಾಗುವುದು ಹೇಗೆ ಎಂದರೆ–) ಸಮಸ್ತ ದೇವತೆಗಳನ್ನು ಸಂಹರಿಸುವವರು ವಾಯುದೇವರು. ವಾಯುದೇವರನ್ನು ಸಂಹರಿಸುವವನು ಶ್ರೀಹರಿಯು. ಶ್ರೀಹರಿಗೆ ಸಂಹಾರಕನು ಯಾರೂ ಇಲ್ಲ. ಚೆನ್ನಾಗಿ ಪ್ರಕಾಶಿಸುವುದರಿಂದ **ವಿರಾಟ್** ಎನಿಸುತ್ತಾನೆ ॥ ೧, ೨, ೩, ೪, ೫, ೬, ೭, ೮ ॥ ೬ ೩ ॥ ॥ ೧ ॥

**ಮೂರನೇ ಖಂಡವು ಮುಗಿಯಿತು.**

## ೪ನೇ ಖಂಡವು

ಹೀ—ಪರಾಪರವಿಷಯಕ ಸಂವರ್ಗವಿದ್ಯೆಯನ್ನು ಹೇಳಿದರು. ಈಗ ಪರಬ್ರಹ್ಮವಿಷಯಕವೇ ಆದ ವಾಸುದೇವ ಮೊದಲಾದ ನಾಲ್ಕು ಭಗವನ್ಮೂರ್ತಿಗಳ ವಿದ್ಯೆಯನ್ನು ಹಿಂದಿನ ಕಥೆಯನ್ನೂ ವಿವರಿಸುತ್ತಾ ಹೇಳುತ್ತಾರೆ–ಅಥವಾ ಮೊದಲು **ಚತುಷ್ಪಾತ್ ಬ್ರಹ್ಮ** ಇತ್ಯಾದಿಗಳಿಂದ ವಾಸುದೇವ ಮೊದಲಾದ ನಾಲ್ಕು ಭಗವನ್ಮೂರ್ತಿಗಳ ವಿದ್ಯೆ ಹೇಳಿದರು. ಈಗ ಪ್ರತ್ಯೇಕವಾಗಿ ವಾಸುದೇವಾದಿ ನಾಲ್ಕು ರೂಪಗಳ ವಿದ್ಯೆಯನ್ನು ಹಿಂದಿನ ಕಥೆ ವಿವರಿಸುತ್ತಾ ಆರು ಖಂಡಗಳಲ್ಲಿ ಹೇಳುತ್ತಾರೆ–

**ಉ. ॥ ಸತ್ಯಕಾಮೋ ಹ ಜಾಬಾಲೋ ಜಬಾಲಾಂ ಮಾತರಮಾಮಂತ್ರಯಾಂಚಕ್ರೇ ಬ್ರಹ್ಮಚರ್ಯಂ ಭವತಿ ವಿವತ್ಸ್ಯಾಮಿ ಕಿಂಗೋತ್ರೋಽನ್ವಹಮಸ್ಮೀತಿ ॥ ೧ ॥**

ಅ ॥ ಜಬಾಲೆಯ ಮಗನಾದ ಸತ್ಯಕಾಮನು ಜಬಾಲೆಯೆಂಬ ತನ್ನ ತಾಯಿಯನ್ನು ಕರೆದು ಹೇಳಿದನು. ತಾಯಿಯೇ ನಾನು ವೇದಾಧ್ಯಯನಕ್ಕಾಗಿ (ದೇಶಾಂತರಕ್ಕೆ ಹೋಗಿ) ಆಚಾರ್ಯರ ಸಮೀಪದಲ್ಲಿ ಆವಾಸಮಾಡುವೆನು. (ನನಗೆ ಈ ತನಕ ಉಪನಯನವಾಗಲಿಲ್ಲ. ಗೋತ್ರ ನಿರ್ಣಯವಾಗದಿದ್ದರೆ ಆಚಾರ್ಯರು ಉಪನಯನಮಾಡಲಾರರು. ಅದುಕಾರಣ) ನನ್ನ ಗೋತ್ರವು ಯಾವುದು? ಎಂದನು. ॥ ೧ ॥

**ಉ. ॥ ಸಾ ಹೈನಮುವಾಚ ನಾಹಮೇತದ್ವೇದ ತಾತ ಯದ್ಗೋತ್ರಸ್ತ್ವಮಸಿ ಬಹ್ವಹಂ ಚರಂತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮ ತ್ವಮಸಿ ಸ ಸತ್ಯಕಾಮೋ ಜಾಬಾಲೋಽಬ್ರವೀಥಾ ಇತಿ ॥ ೨ ॥**

ಅ ॥ ಆಗ ತಾಯಿಯು ಮಗನಿಗೆ ಹೇಳಿದಳು ಮಗನೇ ನಿನ್ನ ಗೋತ್ರವು ಯಾವುದೆಂದು ನಾನು ತಿಳಿಯಲಾರೆ (ಏಕೆಂದರೆ) ನಾನು ಪೋಷಕನ ಮನೆಯಲ್ಲಿ ಬಹು ಕರ್ಮಗಳನ್ನು ಯಥೇಷ್ಟವಾಗಿ ಮಾಡಿಕೊಂಡು ದಾಸಿಯಾಗಿ ಯೌವನಕಾಲದಲ್ಲಿ ನಿನ್ನನ್ನು ಪಡೆದಿರುವೆನು ಅದುಕಾರಣ ವಿಲಾಸ ಭೋಗದಲ್ಲಿ ಆಸಕ್ತಳಾದ ಕಾರಣ ನಿನ್ನ ಗೋತ್ರವು ಯಾವುದೆಂದು ನಾನು ತಿಳಿಯಲಾರೆ. ಜಬಾಲಾ ಎಂದು ನನ್ನ ಹೆಸರು. ಸತ್ಯಕಾಮನೆಂದು ನಿನ್ನ ಹೆಸರು ಆದಪ್ರಯುಕ್ತ ಗುರುಗಳಲ್ಲಿ ಸತ್ಯಕಾಮನೆಂದು ನನ್ನ ಹೆಸರು. ಜಬಾಲೆಯ ಮಗನು ಎಂದೇ ಹೇಳು, ಎಂದು ಹೇಳಿದಳು. ॥ ೨ ॥

**ಉ. ॥ ಸ ಹ ಹಾರಿದ್ರುಮತಂ ಗೌತಮಮೇತ್ಯೋವಾಚ ಬ್ರಹ್ಮಚರ್ಯಂ ಭಗವತಿ ವತ್ಸ್ಯಾಮ್ಯುಪೇಯಾಂ ಭಗವಂತಮಿತಿ ॥ ೩ ॥**

ಅ ॥ ಸತ್ಯಕಾಮನು ಹರಿದ್ರುಮತ್ ಋಷಿಗಳ ಮಗನಾದ ಗೌತಮಋಷಿಗಳ ಬಳಿಗೆ ಬಂದು ಪೂಜ್ಯರಾದ ತಮ್ಮಲ್ಲಿ ಬ್ರಹ್ಮಚರ್ಯಾಶ್ರಮವನ್ನು ಸಾಧಿಸುವುದಕ್ಕಾಗಿ ಆವಾಸಮಾಡುವೆನು. ಪೂಜ್ಯರಾದ ತಮಗೆ ಶಿಷ್ಯನಾಗುವೆನೆಂದನು. ॥ ೩ ॥

**ಉ. ॥ ತꣳ ಹೋವಾಚ ಕಿಂಗೋತ್ರೋ ನು ಸೋಮ್ಯಾಸೀತಿ ಸ ಹೋವಾಚ ನಾಹಮೇತದ್ವೇದ ಭೋ ಯದ್ಗೋತ್ರೋಽಹಮಸ್ಮ್ಯಪೃಚ್ಛಂ ಮಾತರꣳ ಸಾ ಮಾ ಪ್ರತ್ಯಬ್ರವೀದ್ಬಹ್ವಹಂ ಚರಂತೀ ಪರಿಚಾರಿಣೀ ಯೌವನೇ ತ್ವಾಮಲಭೇ ಸಾಹಮೇತನ್ನ ವೇದ ಯದ್ಗೋತ್ರಸ್ತ್ವಮಸಿ ಜಬಾಲಾ ತು ನಾಮಾಹಮಸ್ಮಿ ಸತ್ಯಕಾಮೋ ನಾಮ ತ್ವಮಸೀತಿ ಸೋಽಹಂ ಸತ್ಯಕಾಮೋ ಜಾಬಾಲೋಽಸ್ಮಿ ಭೋ ಇತಿ ॥ ೪ ॥**

ಅ ॥ ಸತ್ಯಕಾಮನ ಹತ್ತಿರ ಗೌತಮರು ಎಲೋ ಸುಮುಖನೇ ನಿನ್ನ ಗೋತ್ರವು ಯಾವುದು? ಎಂದು ಕೇಳಿದರು. ಆಗ ಸತ್ಯಕಾಮನು 'ನನ್ನ ಗೋತ್ರವು ಯಾವುದೆಂದು ನಾನು ತಿಳಿಯಲಿಲ್ಲ. ತಾಯಿಯ ಹತ್ತಿರ ಕೇಳಿದೆನು, ಆಗ ಅವಳು ಹೇಳಿದಳು ನಾನು ತಿಳಿಯಲಾರೆ ಪೋಷಕನ ಮನೆ

ಯುಲ್ಲಿ ಬಹುಕರ್ಮಗಳನ್ನು ಮಾಡುತ್ತಾ ದಾಸಿಯಾಗಿರುವಾಗ ಯೌವನಕಾಲದಲ್ಲಿ ನೀನು ಹುಟ್ಟಿದ್ದು. ಅದುಕಾರಣ ನಿನ್ನ ಗೋತ್ರವನ್ನು ನಾನು ತಿಳಿಯಲಾರೆ, ಸತ್ಯಕಾಮನೆಂದು ನಿನ್ನ ಹೆಸರು. ಇಷ್ಟುಮಾತ್ರ ಹೇಳಿರುವಳು' ಅದುಕಾರಣ ಎಲೋ ಪೂಜ್ಯರೇ ನಾನು ಸತ್ಯಕಾಮನೆನಿಸಿದವನು, ಜಬಾಲೆಯ ಮಗನು ಎಂದನು ॥ ೪ ॥

**ಉ. ॥ ತꣳ ಹೋವಾಚ ನೈತದಬ್ರಾಹ್ಮಣೋ ವಿವಕ್ತುಮರ್ಹತಿ ಸಮಿಧꣳ ಸೋಮ್ಯಾಽಹರೋಪತ್ವಾ ನೇಷ್ಯೇ(ಷ್ಯಾಮಿ)ನ ಸತ್ಯಾದಗಾ ಇತಿ ತಮುಪನೀಯ ಕೃಶಾನಾಮಬಲಾನಾಂ ಚತುಶ್ಶತಂ ಗಾ ನಿರಾಕೃತ್ಯೋವಾಚೇಮಾಃ ಸೋಮ್ಯಾನುಸಂವ್ರಜೇತಿ ತಾ ಅಭಿಪ್ರಸ್ಥಾಪಯನ್ನುವಾಚ ನಾಸಹಸ್ರೇಣಾವರ್ತೇಯೇಯಮಿತಿ ಸ ಹ ವರ್ಷಗಣಂ ಪ್ರೋವಾಸ ತಾ ಯದಾ ಸಹಸ್ರꣳ ಸಂಪೇದುಃ ॥ ಇತಿ ಚತುರ್ಥಃ ಖಂಡಃ ॥ ೬-೪ ॥ ॥ ೫ ॥**

ಅ ॥ ಹೀಗೆ ಸತ್ಯನುಡಿಯಿಂದ ಸತ್ಯಕಾಮನ ಸರಳತನವನ್ನು ತಿಳಿದು ಗೌತಮರು ಬ್ರಾಹ್ಮಣೇತರರು ಸರಳತನದಿಂದ ಸತ್ಯನುಡಿಯನ್ನು ಸರ್ವಥಾ ಹೇಳಲಾರರು. ಅದುಕಾರಣ ಇವನು ಬ್ರಾಹ್ಮಣನೇ ಎಂದು ಅವನ ಸರಳಮಾತಿನಿಂದ ನಿಶ್ಚಯಿಸಿ ಸತ್ಯಕಾಮನೊಡನೆ ಎಲೋ ಸೋಮಪಾನಾರ್ಹನೇ ನೀನು ಸತ್ಯನುಡಿಯನ್ನು ಬಿಡಲಿಲ್ಲ. ಅದುಕಾರಣ ಸಮಿಧೆಯನ್ನು ತೆಗೆದುಕೊಂಡು ಬಾ. ನಿನಗೆ ಉಪನಯನ ಮಾಡುವೆನು, ಎಂದು ಹೇಳಿದರು ಆ ಮೇಲೆ ಗೌತಮರು ಸತ್ಯಕಾಮನಿಗೆ ಉಪನಯನ ಮಾಡಿ, ಕೃಶಗಳಾದ (ಬೆಂಡಾಗಿರುವ) ದುರ್ಬಲಗಳಾದ ಗೋವುಗಳ ಮಧ್ಯದಲ್ಲಿ ೪೦೦ (ನಾಲ್ಕು ನೂರು) ಗೋವುಗಳನ್ನು ಹಟ್ಟಿಯಿಂದ ಹೊರಗೊಳಿಸಿ, ಎಲೋ ಸತ್ಯಕಾಮನೇ ಈ ಗೋವುಗಳನ್ನು ಹಿಂಬಾಲಿಸಿಕೊಂಡು ಹೋಗು. ಅರಣ್ಯಕ್ಕೆ ತೆಗೆದುಕೊಂಡು ಹೋಗಿ ಹುಲ್ಲು ಮೊದಲಾದುದನ್ನು ಮೇಯಿಸು ಎಂದನು. ಆಗ ಸತ್ಯಕಾಮನು ಅವುಗಳನ್ನು ಗೋಷ್ಠದಿಂದ ಹೊರಗೊಳಿಸುವಾಗ ಸಹಸ್ರ (೧೦೦೦) ಗೋವುಗಳನ್ನು ಸಂಪಾದಿಸದೆ ಹಿಂದಕ್ಕೆ ಬರಲಾರೆನು, ಎಂದು ಹೇಳುತ್ತಾ ಗೋವುಗಳನ್ನು ಕಾಡಿಗೆ ಒಯ್ದು ಅಲ್ಲಿಯೇ ಸಹಸ್ರ ಗೋವುಗಳು ಆಗುವ ಪರ್ಯಂತ ಬಹು ಸಂವತ್ಸರಗಳಲ್ಲಿ ಆವಾಸಮಾಡಿದನು. ಅರಣ್ಯದಲ್ಲಿ ಬಹುವರ್ಷ ಆವಾಸಮಾಡಿ ಸಹಸ್ರ ಗೋವುಗಳನ್ನು ಸಂಪಾದಿಸಿಕೊಂಡು ಬಂದನು ॥ ೬—೪ ॥ ॥ ೫ ॥

ಪೀ—ಗೋತ್ರ ನಿರ್ಣಯವಾಗದಿದ್ದರೆ ಇವನು ಬ್ರಾಹ್ಮಣನೆಂದು ನಿಶ್ಚಯವಾಗದಿರುವುದರಿಂದ ಸತ್ಯಕಾಮನಿಗೆ ಉಪನಯನಮಾಡಲಿಕ್ಕೆ, ಗೌತಮರು ಹೇಗೆ ಪ್ರವೃತ್ತಿ ಮಾಡಿದರೆಂದರೆ—

**ಭಾ. ॥ ಆರ್ಜವಂ ಬ್ರಾಹ್ಮಣೇ ಸಾಕ್ಷಾಚ್ಛೂದ್ರೋಽನಾರ್ಜವಲಕ್ಷಣಃ । ಗೌತಮಸ್ತ್ವಿತಿ ವಿಜ್ಞಾಯ ಸತ್ಯಕಾಮಮುಪಾನಯತ್ ॥ ಇತಿ ಸಾಮಸಂಹಿತಾಯಾಂ ॥ ೧, ೨, ೩, ೪, ೫ ॥ ಇತಿ ಚತುರ್ಥಃ ಖಂಡಃ ॥ ೬—೪ ॥ ॥ ೧ ॥**

ಅ ॥ ಪರಬ್ರಹ್ಮನನ್ನು ತಿಳಿಯಲಿಕ್ಕೆ ಯೋಗ್ಯರಾದ ತ್ರೈವರ್ಣಿಕರಲ್ಲಿ, (ಬ್ರಾಹ್ಮಣ ಕ್ಷತ್ರಿಯ ವೈಶ್ಯರಲ್ಲಿ) ಮುಖ್ಯವಾಗಿ ಸರಳತನವು ಬ್ರಾಹ್ಮಣನ ಲಕ್ಷಣವು. ಬ್ರಾಹ್ಮಣೇತರರಲ್ಲಿ ಸರಳತನವು ಇರಲಾರದು. ಹೀಗೆ ಗೌತಮರು ತಿಳಿದು ಸತ್ಯಕಾಮನಿಗೆ ಉಪನಯನಮಾಡಿದರು, ಎಂದು ಸಾಮಸಂಹಿತೆಯಲ್ಲಿದೆ. ॥ ೬ — ೪ ॥ ॥ ೧ ॥

ನಾಲ್ಕನೇ ಖಂಡವು ಮುಗಿಯಿತು.

# ೫ನೇ ಖಂಡವು

**ಉ. ॥ ಅಥ ಹೈನಮೃಷಭೋಽಭ್ಯುವಾದ ಸತ್ಯಕಾಮಾ ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ಪ್ರಾಪ್ತಾಃ ಸೋಮ್ಯ ಸಹಸ್ರꣳ ಸ್ಮಃ ಪ್ರಾಪಯ ನ ಆಚಾರ್ಯಕುಲಂ ॥ ೧ ॥**

ಅ ॥ ಸಹಸ್ರ ಗೋವುಗಳು ಆದಮೇಲೆ (ಶ್ರದ್ಧೆ ತಪಸ್ಸುಗಳಿಂದೊಡಗೂಡಿದ) ಸತ್ಯಕಾಮನಿಗೆ ಶ್ರೇಷ್ಠರಾದ ವಾಯುದೇವರು ವೃಷಭ (ಎತ್ತು) ರೂಪವನ್ನು ತಾಳಿ ಸಂತುಷ್ಟರಾಗಿ ತಾನೇ ಬಂದು, ಪೂಜ್ಯನಾದ ಸತ್ಯಕಾಮನೇ ಎಂದು ಹೇಳಿದರು. (ಆಗ ಸತ್ಯಕಾಮನು) ಪೂಜ್ಯರೇ ಎಂದು ಉತ್ತರಿಸಿದನು. ಎಲೋ ಸತ್ಯಕಾಮನೇ ೧೦೦೦ ಗೋವುಗಳಾದೆವು. ನಮ್ಮನ್ನು ಗುರುಗಳ ಮನೆಗೆ ಒಯ್ಯು. ಎಂದು ವೃಷಭನು (ವೃಷಭಾವಿಷ್ಟನಾದ ಮುಖ್ಯಪ್ರಾಣನು) ಹೇಳಿದನು ॥ ೧ ॥

**ಉ. ॥ ಬ್ರಹ್ಮಣಶ್ಚ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಚೀ ದಿಕ್ಕಲಾ ಪ್ರತೀಚೀ ದಿಕ್ಕಲಾ ದಕ್ಷಿಣಾ ದಿಕ್ಕಲೋದೀಚೀ ದಿಕ್ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣಃ ಪ್ರಕಾಶವಾನ್ನಾಮ ॥ ೨ ॥**

ಅ ॥ ನಾನು ಪರಬ್ರಹ್ಮನ ವಾಸುದೇವ ಎಂಬ ಒಂದು ರೂಪವನ್ನು ವಿವರಿಸುವೆನೆಂದು ಋಷಭದಲ್ಲಿ ಆವಿಷ್ಟರಾದ ವಾಯುದೇವರು ಹೇಳಿದರು. ಆಗ ಸತ್ಯಕಾಮನು ತಾವು ನನಗೆ ಹೇಳಿರಿ, ಎಂದನು. ಆಗ ಸತ್ಯಕಾಮನಿಗೆ ಋಷಭಾವಿಷ್ಟರಾದ ವಾಯುದೇವರು ಪೂರ್ವದಿಕ್ಕಿಗೆ ನಿಯಾಮಕನಾಗಿರುವ ಪ್ರಾಚೀ ದಿಕ್ ಎನಿಸಿಕೊಂಡ ವಾಸುದೇವ ವಾಸುದೇವನು ಪರಬ್ರಹ್ಮನ ಪಾದನೆನಿಸಿದ ವಾಸುದೇವನ ಒಂದನೇ ರೂಪವು. ಪಶ್ಚಿಮ ದಿಕ್ಕಿನಲ್ಲಿರುವ ಪ್ರತೀಚೀದಿಕ್ ಎನಿಸಿಕೊಂಡ ವಾಸುದೇವ ಸಂಕರ್ಷಣನು ಪರಬ್ರಹ್ಮನ ಸ್ವರೂಪಾಂಶನಾದ ವಾಸುದೇವನ ಎರಡನೇ ರೂಪವು. ದಕ್ಷಿಣದಿಕ್ಕಿನಲ್ಲಿರುವ ದಕ್ಷಿಣದಿಕ್ ಎನಿಸಿಕೊಂಡ ವಾಸುದೇವ ಪ್ರದ್ಯುಮ್ನನು ಪರಬ್ರಹ್ಮನ ಮೂರನೇ ರೂಪವು. ಉತ್ತರ ದಿಕ್ಕಿನಲ್ಲಿರುವ ಉದಕ್ ದಿಕ್ ಎನಿಸಿಕೊಂಡ ವಾಸುದೇವಾನಿರುದ್ಧನು ನಾಲ್ಕನೇ ರೂಪವು. ಎಲೋ ಸತ್ಯಕಾಮನೇ ವಾಸುದೇವ ಮೊದಲಾದ ನಾಲ್ಕು ಅಂಶಗಳಿಂದೊಡಗೂಡಿದ ಪರಬ್ರಹ್ಮನ ವಾಸುದೇವ ಎಂಬ ರೂಪವು ಪ್ರಕಾಶವಾನ್ ಎಂದು ಹೆಸರುಳ್ಳದ್ದು. ॥ ೨ ॥

**ಉ. ॥ ಸ ಯ ಏತಮೇವಂ ವಿದ್ವಾꣳಶ್ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶವಾನಿತ್ಯುಪಾಸ್ತೇ ಪ್ರಕಾಶವಾನಸ್ಮಿꣳಲ್ಲೋಕೇ ಭವತಿ ಪ್ರಕಾಶವತೋ ಹ ಲೋಕಾನ್ ಜಯತಿ ಯ ಏತಮೇವಂ ವಿದ್ವಾꣳಶ್ಚತುಷ್ಕಲಂ ಪಾದಂ ಬ್ರಹ್ಮಣಃ ಪ್ರಕಾಶವಾನಿತ್ಯುಪಾಸ್ತೇ ॥ ಇತಿ ಪಂಚಮಃ ಖಂಡಃ ॥ ೬–೫ ॥ ೩ ॥**

ಅ ॥ ಹೀಗೆ ಪರಬ್ರಹ್ಮನ ಪ್ರಥಮರೂಪನಾದ ವಾಸುದೇವನು ನಾಲ್ಕು ರೂಪಗಳಿಂದ ಪೂರ್ವಾದಿ ದಿಕ್ಕುಗಳಲ್ಲಿ ಪ್ರಾಚೀ ಮೊದಲಾದ ಹೆಸರುಳ್ಳವನಾಗಿ ಇದ್ದಾನೆಂದು ತಿಳಿದು ಶ್ರೀಹರಿಯ ನಾಲ್ಕು ರೂಪವುಳ್ಳ ವಾಸುದೇವನಿಗೆ ಪ್ರಕಾಶವಾನ್ ಎಂದು ಹೆಸರು ಇದೆ, ಎಂದು ಉಪಾಸನೆ ಮಾಡುತ್ತಾನೋ, ಆತನು

ಈ ಲೋಕದಲ್ಲಿ ಪ್ರಕಾಶವುಳ್ಳವನೂ ಪ್ರಖ್ಯಾತಿಪಟ್ಟವನೂ ಆಗುತ್ತಾನೆ, ಹೀಗೆ ತಿಳಿದವನಿಗೆ ಐಹಿಕ ಫಲ ಮಾತ್ರವಲ್ಲ, ಮತ್ತೆ ಆತನು ಪ್ರಕಾಶವುಳ್ಳ ವೈಕುಂಠಾದಿ ಲೋಕಗಳನ್ನು ಹೊಂದುತ್ತಾನೆ. ||೬-೫|| || ೩ ||

ಐದನೇ ಖಂಡವು ಮುಗಿಯಿತು.

## ೬ನೇ ಖಂಡವು

**ಉ. || ಅಗ್ನಿಷ್ಟೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಂಚಕಾರ ತಾ ಯತ್ರಾಭಿಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ || ೧ ||**

ಅ || ವೃಷಭಾಪಿಸ್ಥರಾದ ವಾಯುದೇವರು ವಾಸುದೇವ ಎಂಬ ಬ್ರಹ್ಮನ ಒಂದು ರೂಪವನ್ನು ಉಪದೇಶಿಸಿ ನಿನಗೆ ಅಗ್ನಿದೇವತೆಯು ಪರಬ್ರಹ್ಮನ ಸಂಕರ್ಷಣವೆಂಬ ಒಂದು ಪಾದವನ್ನು ಹೇಳುವನು, ಎಂದು ಹೇಳಿ ಹೊರಟುಹೋದರು ಸತ್ಯಕಾಮನು ಮರುದಿವಸ (ನಿತ್ಯಕರ್ಮಗಳನ್ನು ಮಾಡಿ) ಗೋವುಗಳನ್ನು ಆಚಾರ್ಯರ ಮನೆಯ ಇದಿರು ಒಯ್ಯುತ್ತಾ ಇದ್ದನು. ಅವುಗಳು ಮೆಲ್ಲಗೆ ಸಂಚರಿಸುತ್ತಾ ಆಚಾರ್ಯರ ಮನೆಯ ಇದಿರು ನಿಂತವು ಯಾವ ಪ್ರದೇಶದಲ್ಲಿ ಸಾಯಂಕಾಲವಾಯಿತೋ ಅಲ್ಲಿ ಗೋವುಗಳನ್ನು ತಡೆದು ನಿಲ್ಲಿಸಿ ಅಗ್ನಿ ಪ್ರತಿಷ್ಠೆಮಾಡಿ ಅಗ್ನಿಗೆ ಸಮಿಧೆ ಹಾಕಿ ಅಗ್ನಿಯ ಇದಿರು ಮೂಡುಮುಖನಾಗಿ ಋಷಭನ ಉಪದೇಶದಂತೆ ದೇವರನ್ನು ಧ್ಯಾನಿಸುತ್ತಾ ಅಗ್ನಿಯ ಸಮೀಪದಲ್ಲಿ ಕುಳಿತನು. || ೧ ||

**ಉ. || ತಮಗ್ನಿರಭ್ಯುವಾದ ಸತ್ಯಕಾಮಾ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ || ೨ ||**

ಅ || ಸತ್ಯಕಾಮನಿಗೆ ಅಗ್ನಿಯು ಪ್ರತ್ಯಕ್ಷನಾಗಿ ಸತ್ಯಕಾಮನೇ ಎಂದನು. ಸತ್ಯಕಾಮನು ಆ ಅಗ್ನಿಗೆ ಹೇ ಭಗವನ್ ಎಂದು ಉತ್ತರಿಸಿದನು. || ೨ ||

**ಉ. || ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪೃಥಿವೀ ಕಲಾಽಂತರಿಕ್ಷಂ ಕಲಾ ದ್ಯೌಃ ಕಲಾ ಸಮುದ್ರಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋಽನಂತವಾನ್ನಾಮ || ೩ ||**

ಅ || ಸುಮುಖನೇ ಪರಬ್ರಹ್ಮನ ಅಂಶನಾದ ಸಂಕರ್ಷಣನಿಗೆ ನಾಲ್ಕು ಸ್ವರೂಪಾಂಶಗಳಿವೆ, ಎಂದು ನಾನು ನಿನಗೆ ಹೇಳುತ್ತೇನೆಂದು ಅಗ್ನಿಯು ಹೇಳಿದನು. ಹೇಳಬೇಕೆಂದು ಕೇಳಿಕೊಂಡ ಮೇಲೆ ಅಗ್ನಿಯು ಸತ್ಯಕಾಮನಿಗೆ ಹೇಳಿದನು. ಪೃಥಿವೀ ಎನಿಸಿಕೊಂಡ ಪೃಥಿವಿಗೆ ನಿಯಾಮಕನಾಗಿ ಪೃಥಿವಿಯಲ್ಲಿರುವ ಸಂಕರ್ಷಣ ವಾಸುದೇವ ರೂಪವು ಪರಬ್ರಹ್ಮನ ಅಂಶಭೂತನಾದ ಸಂಕರ್ಷಣನ ಮೊದಲಿನ ರೂಪವು.

ಅಂತರಿಕ್ಷಕ್ಕೆ ನಿಯಾಮಕನಾಗಿ ಅಂತರಿಕ್ಷದಲ್ಲಿರತಕ್ಕ ಅಂತರಿಕ್ಷನೆನಿಸಿಕೊಂಡ ಸಂಕರ್ಷಣ ಸಂಕರ್ಷಣ ರೂಪವು ಎರಡನೇ ರೂಪವು. ದ್ಯುಲೋಕಕ್ಕೆ ನಿಯಾಮಕನಾಗಿ ದ್ಯುಲೋಕದಲ್ಲಿರುವ ದ್ಯು ಎನಿಸಿಕೊಂಡ ಸಂಕರ್ಷಣ ಪ್ರದ್ಯುಮ್ನ ರೂಪವು ಮೂರನೇ ರೂಪವು. ಸಮುದ್ರಕ್ಕೆ ನಿಯಾಮಕನಾಗಿ ಸಮುದ್ರದಲ್ಲಿರತಕ್ಕ ಸಮುದ್ರನೆನಿಸಿಕೊಂಡ ಸಂಕರ್ಷಣಾನಿರುದ್ಧ ರೂಪವು ನಾಲ್ಕನೇ ರೂಪವು. ಹೀಗೆ ಪರಬ್ರಹ್ಮನ ಅಂಶನಾದ ಸಂಕರ್ಷಣನಿಗೆ ಸಂಕರ್ಷಣ ವಾಸುದೇವ ಮೊದಲಾದ ನಾಲ್ಕು ರೂಪಗಳು. ನಾಶವಿಲ್ಲದಿರುವುದರಿಂದ ಅನಂತವಾನ್ ಎಂದು ಹೆಸರು. ॥ ೩ ॥

**ಉ. ॥ ಸ ಯ ಏತಮೇವಂವಿದ್ವಾꣳಶ್ಚತುಷ್ಕಲಂ ಪಾದಂ ಬ್ರಹ್ಮಣೋಽನಂತವಾನಿತ್ಯುಪಾಸ್ತೇಽನಂತವಾನಸ್ಮಿꣳಲ್ಲೋಕೇ ಭವತ್ಯನಂತವತೋ ಹ ಲೋಕಾನ್ ಜಯತಿ ಯ ಏತಮೇವಂವಿದ್ವಾꣳಶ್ಚತುಷ್ಕಲಂ ಪಾದಂ ಬ್ರಹ್ಮಣೋಽನಂತವಾನಿತ್ಯುಪಾಸ್ತೇ ॥ ಇತಿ ಷಷ್ಠಃ ಖಂಡಃ ॥ ೬-೬ ॥ ॥ ೪ ॥**

ಅ ॥ ಪರಬ್ರಹ್ಮನ ನಾಲ್ಕು ರೂಪಗಳನ್ನು ತಿಳಿದು ಅನಂತವಾನ್ ಎಂದು ಉಪಾಸನೆ ಮಾಡಿದವನು ನಾಶವಿಲ್ಲದವನಾಗುತ್ತಾನೆ. ಫಲಸಮೃದ್ಧಿಯುಳ್ಳವನಾಗುತ್ತಾನೆ. ನಾಶವಿಲ್ಲದ ಮೋಕ್ಷಾದಿಗಳನ್ನು ಹೊಂದುತ್ತಾನೆ. ॥ ೬—೬ ॥ ॥ ೪ ॥

ಆರನೇ ಖಂಡವು ಮುಗಿಯಿತು.

## ೭ನೇ ಖಂಡವು

**ಉ. ॥ ಹꣳಸಸ್ತೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಂಚಕಾರ ತಾ ಯತ್ರಾಭಿಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ ॥ ೧ ॥**

ಅ ॥ ಅಗ್ನಿದೇವನು ಪರಬ್ರಹ್ಮನ ರೂಪನಾದ ಸಂಕರ್ಷಣನೆನ್ನುವ ನಾಲ್ಕು ರೂಪಗಳನ್ನು ಹೇಳಿ, ಎಲೋ ಸತ್ಯಕಾಮನೇ ನಿನಗೆ ಚತುರ್ಮುಖ ಬ್ರಹ್ಮನು ಹಂಸರೂಪವನ್ನು ತಾಳಿಕೊಂಡು ಪರಬ್ರಹ್ಮನ ಪ್ರದ್ಯುಮ್ನವೆಂಬ ಒಂದು ರೂಪವನ್ನು ಉಪದೇಶಿಸುವನು ಎಂದು ಹೇಳಿ ಹೊರಟುಹೋದನು. ಸತ್ಯಕಾಮನು ಮರುದಿನ………… ॥ ೧ ॥

**ಉ. ॥ ತꣳ ಹꣳಸ ಉಪನಿಪತ್ಯಾಭ್ಯುವಾದ ಸತ್ಯಕಾಮಾ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ॥ ೨ ॥**

ಅ ॥ ಹಂಸರೂಪಿಯಾದ ಬ್ರಹ್ಮನು ಸತ್ಯಕಾಮನ ಬಳಿಗೆ ಬಂದು… ……. ॥ ೨ ॥

ಉ. ॥ ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚಾಗ್ನಿಃ ಕಲಾ ಸೂರ್ಯಃ ಕಲಾ ಚಂದ್ರಃ ಕಲಾ ವಿದ್ಯುತ್ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣೋ ಜ್ಯೋತಿಷ್ಮಾನ್ನಾಮ ॥ ೩ ॥

ಅ ॥ ಪರಬ್ರಹ್ಮನ ರೂಪನಾದ ಪ್ರದ್ಯುಮ್ನವೆಂಬ ರೂಪವನ್ನು ಹೇಳುವೆನೆಂದು ಹೇಳಿದರು. ಆಗ ಸತ್ಯಕಾಮನು ಹಂಸದ ಹತ್ತಿರ ಹೇಳಬೇಕೆಂದನು. ಆಗ ಹಂಸರೂಪಿಯಾದ ಬ್ರಹ್ಮನು ಹೇಳಿದನು. ಪರಬ್ರಹ್ಮನ ಅಂಶಭೂತನಾದ ಪ್ರದ್ಯುಮ್ನನಿಗೆ ಅಗ್ನಿಗೆ ನಿಯಾಮಕನಾಗಿ ಅಗ್ನಿಯೊಳಗಣ ಅಗ್ನಿ ಎನಿಸಿದ ಪ್ರದ್ಯುಮ್ನ ವಾಸುದೇವರೂಪವು ಒಂದನೇ ರೂಪವು ಸೂರ್ಯನಿಗೆ ನಿಯಾಮಕನಾಗಿ ಸೂರ್ಯನೊಳಗಣ ಸೂರ್ಯನೆನಿಸಿದ ಪ್ರದ್ಯುಮ್ನ ಸಂಕರ್ಷಣರೂಪವು ಎರಡನೇ ರೂಪವು. ಚಂದ್ರನಿಗೆ ನಿಯಾಮಕನಾಗಿ ಚಂದ್ರನೊಳಗಣ ಚಂದ್ರನೆನಿಸಿದ ಪ್ರದ್ಯುಮ್ನ ಪ್ರದ್ಯುಮ್ನ ರೂಪವು ಮೂರನೇ ರೂಪವು ಮಿಂಚಿಗೆ ನಿಯಾಮಕನಾಗಿ ಮಿಂಚಿನಲ್ಲಿರುವ ವಿದ್ಯುತ್ ಎನಿಸಿಕೊಂಡ ಪ್ರದ್ಯುಮ್ನಾನಿರುದ್ಧ ರೂಪವು ಬ್ರಹ್ಮನ ರೂಪನಾದ ಪ್ರದ್ಯುಮ್ನನ ನಾಲ್ಕನೇ ರೂಪವು...................... ಆ ಪ್ರದ್ಯುಮ್ನನಿಗೆ ಜ್ಯೋತಿಷ್ಮಾನ್ ಎಂದು ಹೆಸರು. ॥ ೩ ॥

ಉ. ॥ ಸ ಯ ಏತಮೇವಂವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣೋ ಜ್ಯೋತಿಷ್ಮಾನಿತ್ಯುಪಾಸ್ತೇ ಜ್ಯೋತಿಷ್ಮಾನಸ್ಮಿಂಲ್ಲೋಕೇ ಭವತಿ ಜ್ಯೋತಿಷ್ಮತೋ ಹ ಲೋಕಾನ್ ಜಯತಿ ಯ ಏತಮೇವಂವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣೋ ಜ್ಯೋತಿಷ್ಮಾನಿತ್ಯುಪಾಸ್ತೇ ॥ ಇತಿ ಸಪ್ತಮಃ ಖಂಡಃ ॥೬-೭॥ ೪ ॥

ಅ ॥ ಪರಬ್ರಹ್ಮನ ರೂಪನಾದ ಪ್ರದ್ಯುಮ್ನನಿಗೆ ಪ್ರದ್ಯುಮ್ನ ವಾಸುದೇವ ಮೊದಲಾದ ನಾಲ್ಕು ರೂಪಗಳನ್ನು ತಿಳಿದು ಉಪಾಸನೆ ಮಾಡುವವನು ಈ ಲೋಕದಲ್ಲಿ ಪ್ರಕಾಶಿಸಿಕೊಂಡಿರುತ್ತಾನೆ............ ಮತ್ತು ಸರ್ವದಾ ಪ್ರಕಾಶವುಳ್ಳ ವೈಕುಂಠಾದಿಲೋಕಗಳನ್ನು ಹೊಂದುತ್ತಾನೆ. ॥ ೬—೭ ॥ ॥ ೪ ॥

ಏಳನೇ ಖಂಡವು ಮುಗಿಯಿತು.

## ೮ನೇ ಖಂಡವು

ಉ. ॥ ಮದ್ಗುಷ್ಟೇ ಪಾದಂ ವಕ್ತೇತಿ ಸ ಹ ಶ್ವೋಭೂತೇ ಗಾ ಅಭಿಪ್ರಸ್ಥಾಪಯಾಂಚಕಾರ ತಾ ಯತ್ರಾಭಿಸಾಯಂ ಬಭೂವುಸ್ತತ್ರಾಗ್ನಿಮುಪಸಮಾಧಾಯ ಗಾ ಉಪರುಧ್ಯ ಸಮಿಧಮಾಧಾಯ ಪಶ್ಚಾದಗ್ನೇಃ ಪ್ರಾಙುಪೋಪವಿವೇಶ ॥ ೧ ॥

ಅ ॥ ಹೀಗೆ ಚತುರ್ಮುಖ ಬ್ರಹ್ಮನು ಹಂಸರೂಪವನ್ನು ತಾಳಿಕೊಂಡು ಬ್ರಹ್ಮನ ರೂಪನಾದ ಪ್ರದ್ಯುಮ್ನನು ವಾಸುದೇವಾದಿ ನಾಲ್ಕು ರೂಪದಿಂದ ಇದ್ದಾನೆಂದು ಹೇಳಿ, ಸತ್ಯಕಾಮನೇ ನಿನಗೆ ಮರು

ಣನು ನೀರುಕಾಗೆಯ ರೂಪವನ್ನು ಹೊಂದಿ ಬ್ರಹ್ಮನ ಅಂಶನಾದ ಅನಿರುದ್ಧರೂಪವನ್ನು ಉಪದೇಶಿಸುವ ನೆಂದು ಹೇಳಿ ಹೊರಟುಹೋದನು ಸತ್ಯಕಾಮನು………… ॥ ೧ ॥

ಉ. ॥ ತಂ ಮದ್ಗುರುಪನಿಪತ್ಯಾಭ್ಯುವಾದ ಸತ್ಯಕಾಮಾ೩ ಇತಿ ಭಗವ ಇತಿ ಪ್ರತಿಶುಶ್ರಾವ ॥ ೨ ॥

ಅ ॥ ನೀರುಕಾಗೆಯ ರೂಪನಾದ ವರುಣನು ಸತ್ಯಕಾಮನ ಸಮೀಪಕ್ಕೆ ಬಂದು…….. ॥ ೨ ॥

ಉ. ॥ ಬ್ರಹ್ಮಣಃ ಸೋಮ್ಯ ತೇ ಪಾದಂ ಬ್ರವಾಣೀತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ ಪ್ರಾಣಃ ಕಲಾ ಚಕ್ಷುಃ ಕಲಾ ಶ್ರೋತ್ರಂ ಕಲಾ ಮನಃ ಕಲೈಷ ವೈ ಸೋಮ್ಯ ಚತುಷ್ಕಲಃ ಪಾದೋ ಬ್ರಹ್ಮಣ ಆಯತ-ನವಾನ್ನಾಮ ॥ ೩ ॥

ಅ ॥ ಎಲೋ ಸತ್ಯಕಾಮನೇ ಪರಬ್ರಹ್ಮನ ರೂಪನಾದ ಅನಿರುದ್ಧನನ್ನು ನಿನಗೆ ಹೇಳುವೆನೆಂದು ಹೇಳಿದನು ಹೇಳಬೇಕೆಂದು ಪ್ರಾರ್ಥಿಸಿದಾಗ ಸತ್ಯಕಾಮನಿಗೆ ಉಪದೇಶಿಸಿದನು ಪರಬ್ರಹ್ಮನ ರೂಪ ನಾದ ಅನಿರುದ್ಧನಿಗೆ ಘ್ರಾಣೇಂದ್ರಿಯಕ್ಕೆ ನಿಯಾಮಕನಾಗಿ ಘ್ರಾಣೇಂದ್ರಿಯದೊಳಗಣ ಪ್ರಾಣನೆನಿಸಿದ, ಅನಿರುದ್ಧ ವಾಸುದೇವನು ಒಂದನೇ ರೂಪವು ಚಕ್ಷುರಿಂದ್ರಿಯಕ್ಕೆ ನಿಯಾಮಕನಾಗಿ ಚಕ್ಷುರಿಂದ್ರಿಯ ದೊಳಗಣ ಚಕ್ಷುರೆನಿಸಿದ ಅನಿರುದ್ಧ ಸಂಕರ್ಷಣನು ಎರಡನೇ ರೂಪನು. ಶ್ರೋತ್ರದೊಳಗಣ ಶ್ರೋತ್ರ ನೆನಿಸಿದ ಅನಿರುದ್ಧ ಪ್ರದ್ಯುಮ್ನನು ಮೂರನೇ ರೂಪವು. ಮನಸ್ಸಿನೊಳಗಣ ಮನಃ ಎನಿಸಿದ ಅನಿರುದ್ಧಾ ನಿರುದ್ಧನು ನಾಲ್ಕನೇ ರೂಪನು ಹೀಗೆ ಪರಬ್ರಹ್ಮನ ರೂಪನಾದ ಅನಿರುದ್ಧನು ನಾಲ್ಕು ರೂಪಗ ಳುಳ್ಳವನು ಎಲ್ಲರೂ ಆಶ್ರಯಿಸಿಕೊಂಡಿರುವುದರಿಂದ ಇವನಿಗೆ ಆಯತನವಾನ್ ಎಂದು ಹೆಸರು. ॥ ೩ ॥

ಉ ॥ ಸ ಯ ಏತಮೇವಂವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣ ಆಯತನವಾನಿತ್ಯುಪಾಸ್ತ ಆಯತನವಾನಸ್ಮಿಂಲ್ಲೋಕೇ ಭವತ್ಯಾಯತನವ-ತೋ ಹ ಲೋಕಾನ್ ಜಯತಿ ಯ ಏತನೇವಂವಿದ್ವಾಂಶ್ಚತುಷ್ಕಲಂ ಪಾದಂ ಬ್ರಹ್ಮಣ ಆಯತನವಾನಿತ್ಯುಪಾಸ್ತೇ ॥ ಇತ್ಯಷ್ಟಮಃ ಖಂಡಃ ॥ ೬-೮ ॥ ೪ ॥

ಅ ॥ ಪರಬ್ರಹ್ಮನ ರೂಪನಾದ ಅನಿರುದ್ಧನು ನಾಲ್ಕು ರೂಪಗಳುಳ್ಳವನೆಂದು ತಿಳಿದು ಉಪಾಸನೆ ಮಾಡುವವನು ಈ ಲೋಕದಲ್ಲಿ ಉತ್ತಮವಾದ ಆವಾಸಮಾಡಲಿಕ್ಕೆ ಯೋಗ್ಯವಾದ ಮನೆಯುಳ್ಳವನಾಗು ತ್ತಾನೆ. ಉತ್ತಮ ಆವಾಸಸ್ಥಾನವುಳ್ಳ ವೈಕುಂಠಾದಿ ಲೋಕಗಳನ್ನು ಹೊಂದುತ್ತಾನೆ. ॥ ೬ ೮ ॥ ॥ ೪ ॥

ಎಂಟನೇ ಖಂಡವು ಮುಗಿಯಿತು.

# ೯ನೇ ಖಂಡವು

**ಉ. ॥ ಪ್ರಾಪ ಹಾಚಾರ್ಯಕುಲಂ ತಮಾಚಾರ್ಯೋಽಭ್ಯುವಾದ ಸತ್ಯಕಾಮಾ೩ ಇತಿ ಭಗವ ಇತಿ ಹ ಪ್ರತಿಶುಶ್ರಾವ ॥ ೧ ॥**

ಅ ॥ ಆ ಮೇಲೆ ಅರಣ್ಯದಿಂದ ಹೊರಟ ಸತ್ಯಕಾಮನು ಮಾರ್ಗದಲ್ಲಿ ಮೂರು ರಾತ್ರಿ ಕಳೆದು ನಾಲ್ಕನೇ ದಿನ ಆಚಾರ್ಯರ ಮನೆಗೆ ಹಿಂತಿರುಗಿ ಬಂದನು. ಬಂದ ಸತ್ಯಕಾಮನನ್ನು ಆಚಾರ್ಯರಾದ ಗೌತಮರು ಸತ್ಯಕಾಮನೇ ಎಂದು ಕರೆದರು. ಆಗ ಸತ್ಯಕಾಮನು ಪೂಜ್ಯರೇ ಎಂದು ಉತ್ತರಿಸಿದನು. ॥ ೧ ॥

**ಉ. ॥ ಬ್ರಹ್ಮವಿದಿವ ವೈ ಸೋಮ್ಯ ಭಾಸಿ ಕೋ ನು ತ್ವಾನುಶಶಾಸೇತ್ಯನ್ಯೇ ಮನುಷ್ಯೇಭ್ಯ ಇತಿ ಹ ಪ್ರತಿಜಜ್ಞೇ ಭಗವಾಂಸ್ತ್ವೇವ ಮೇ ಕಾಮೇ ಬ್ರೂಯಾತ್ ॥ ೨ ॥**

ಅ ॥ ಎಲೋ ಸತ್ಯಕಾಮನೇ ಬ್ರಹ್ಮಜ್ಞಾನಿಯಂತೆ ಸ್ಪಷ್ಟವಾಗಿ ತೋರುತ್ತಿ. ನಿನಗೆ ಯಾರು ಉಪದೇಶಿಸಿರುವರು, ಎಂದು ಗೌತಮರು ಕೇಳಿದರು. ಆಗ ಸತ್ಯಕಾಮನು ಮನುಷ್ಯರಲ್ಲದ ದೇವತೆಗಳು ನನಗೆ ಉಪದೇಶಿಸಿರುವರು, ಎಂದನು. (ಹಾಗಾದರೆ ನಾನು ಉಪದೇಶಿಸುವ ಅಂಶವು ಇಲ್ಲವೇನು? ಎಂದರೆ—) ನನ್ನ ಅಭೀಷ್ಟವು ಸಿದ್ಧಿಯಾಗಲಿಕ್ಕೆ ತಾವೇ ಉಪದೇಶಿಸಬೇಕೆಂದನು. ॥ ೨ ॥

**ಉ. ॥ ಶ್ರುತꣳ ಹ್ಯೇವ ಮೇ ಭಗವದ್ದೃಶೇಭ್ಯ ಆಚಾರ್ಯಾದ್ಧ್ಯೇವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತೀತಿ ತಸ್ಮೈ ಹೈತದೇವೋವಾಚಾತ್ರ ಹ ನ ಕಿಂಚನ ವೀಯಾಯೇತಿ ವೀಯಾಯೇತಿ ॥ ಇತಿ ನವಮಃ ಖಂಡಃ ॥೬-೯॥**

ಅ ॥ ಯದ್ಯಪಿ ಮಹಾನುಭಾವರಾದ ದೇವತೆಗಳಿಂದ ಪರಬ್ರಹ್ಮಸ್ವರೂಪವನ್ನು ಕೇಳಿ ನಾನು ತಿಳಿದಿರುತ್ತೇನೆ. ಆದರೂ ಪೂಜ್ಯರಾದ ತಾವೇ ನನ್ನ ಶುಭಕ್ಕಾಗಿ ಹೇಳಬೇಕು ಏಕೆಂದರೆ—ಆಚಾರ್ಯರ ಉಪದೇಶದಿಂದಲೇ ತಿಳಿದ ವಿದ್ಯೆಯು ಸ್ಥಿರವಾಗುತ್ತದೆ, ಮತ್ತು ಅತ್ಯುತ್ತಮವಾಗುತ್ತದೆ, ಎಂದು ತಮ್ಮಂತಹವರು ಹೇಳಿದುದನ್ನು ಕೇಳಿರುತ್ತೇನೆ (ಅದುಕಾರಣ ನಾನು ತಮ್ಮನ್ನೇ ಆಚಾರ್ಯರನ್ನಾಗಿ ಸ್ವೀಕರಿಸಿರುತ್ತೇನೆ. ದೇವತೆಗಳನ್ನು ಆಚಾರ್ಯರನ್ನಾಗಿ ಸ್ವೀಕರಿಸಲಿಲ್ಲ. ಪರಂತು ವಾಯು, ಅಗ್ನಿ, ಬ್ರಹ್ಮ, ವರುಣರು ದಯೆಯಿಂದ ತಾವಾಗಿಯೇ ಬಂದು ಉಪದೇಶಿಸಿರುವರು ಆಚಾರ್ಯರೆಂಬ ಬುದ್ಧಿಯಿಂದ ಅವರು ಉಪದೇಶಿಸಲಿಲ್ಲ. ಅದುಕಾರಣ ನೀವೇ ನನಗೆ ಉಪದೇಶಿಸಬೇಕೆಂದು ಪ್ರಾರ್ಥಿಸಿದನು.) ಹೀಗೆ ಪ್ರಾರ್ಥಿತರಾದ ಗೌತಮರು ಸತ್ಯಕಾಮನಿಗೆ ವಾಯು ಮೊದಲಾದವರು ಉಪದೇಶಿಸಿದುದನ್ನೇ ಉಪದೇಶಿಸಿದರು (ಪೂಜ್ಯರೇ ತಮ್ಮನ್ನೇ ಗುರುಗಳೆಂದು ಸ್ವೀಕರಿಸಿ, ತಮಗಿಂತ ಬೇರೆಯಾದ ದೇವತೆಗಳಿಂದ ಪರಬ್ರಹ್ಮನನ್ನು ಕೇಳಿದುದರಿಂದ ನನಗೆ ಅಪರಾಧವು ಉಂಟಾಯಿತೇನು? ಎಂದರೆ—) ದೇವತೆಗಳಿಂದ ಕೇಳಿದ ತತ್ತ್ವ ವಿಷಯದಲ್ಲಿ ಯಾವುದೊಂದು ಹಾನಿಯೂ ನಿನಗೆ ಆಗಲಿಕ್ಕಿಲ್ಲ. ಅಂದರೆ ಗುರುಗಳೆಂದು ಸ್ವೀಕರಿಸಲ್ಪಡದಿರುವ ದೇವತೆಗಳಿಂದ ಕೇಳಿದಪ್ರಯುಕ್ತ ನಿನಗೆ ಯಾವ ಅಪರಾಧವೂ ಉಂಟಾಗಲಿಲ್ಲ. ॥ ೬-೯ ॥ ॥ ೩ ॥

**ಭಾ. ॥ (೧) ವಾಯುರ್ವೃಷಭರೂಪಃ ಸನ್ನಗ್ನಿರ್ಹಂಸಶ್ಚತುರ್ಮುಖಃ । ಮದ್ಗುರೂಪಶ್ಚ ವರುಣಃ ಸತ್ಯಕಾಮಾಯ ಹೋಚಿರೇ ॥ (೨) ಪ್ರಕಾಶಾನಂತತೇಜೋವತ್ಸ್ಥಾನವತ್**

**ಸಂಜ್ಞಿಕಾ ಹರೇಃ । ವಾಸುದೇವಾದಿಕಾ ಮೂರ್ತೀಃ ಪ್ರತ್ಯೇಕಂ ಚತುರಾತ್ಮನಃ । ದಿಗಾದಿಷು ಸ್ಥಿತಾಸ್ತೇಷಾಮಧಿಪಾಶ್ಚ ತದಾಖ್ಯಕಾಃ ॥ (೩) ನಾಚಾರ್ಯಬುದ್ಧ್ಯಾ ತೈರುಕ್ತಮತೋಽನುಜ್ಞಾಂ ಗುರೋರಗಾತ್ ॥ (೪) ಉತ್ತಮಾಚಾರ್ಯಸಂಪ್ರಾಪ್ತ್ಯೈ ನಾವರಾಚಾರ್ಯತಃ ಕ್ವಚಿತ್ । ಇಚ್ಛೇದನುಜ್ಞಾಂ ಶ್ರುತ್ವಾಽಪಿ ನಾನುಜ್ಞಾಂ ಪ್ರಾರ್ಥಯೇತ್ತತಃ ॥ (೫) ಋಷಿಭ್ಯಸ್ತೂತ್ತಮಾ ದೇವಾ ದೇವೇಭ್ಯೋ ವಾಯುರುತ್ತಮಃ । ವಾಯೋಶ್ಚ ಭಗವಾನ್ ವಿಷ್ಣುರ್ನ ತಸ್ಮಾದುತ್ತಮೋ ಗುರುಃ ॥ ಇತ್ಯಾಚಾರ್ಯಸಂಹಿತಾಯಾಂ ॥ (೬) ಅತ್ರ ಹ ನ ಕಿಂಚನ ವೀಯಾಯ ದೇವೇಭ್ಯಃ ಶ್ರುತ್ವಾ ನ ಚ ತೇ ಕಾಚಿದ್ಬಾಧಿರಭವದಿತ್ಯರ್ಥಃ ॥ ೬–೫, ೬, ೭, ೮, ೯ ॥**	**॥ ೧ ॥**

ಅ ॥ (೧) ಸತ್ಯಕಾಮನಿಗೆ ಎತ್ತಿನ ರೂಪವನ್ನು ತಾಳಿದ ವಾಯುವೂ, ಅಗ್ನಿಯೂ, ಹಂಸರೂಪವನ್ನು ತಾಳಿದ ಚತುರ್ಮುಖಬ್ರಹ್ಮನೂ ನೀರುಕಾಗೆಯ ರೂಪವನ್ನು ತಾಳಿದ ವರುಣನೂ ಈ ನಾಲ್ವರೂ ಪರಬ್ರಹ್ಮಸ್ವರೂಪವನ್ನು ಉಪದೇಶಿಸಿದರು. (೨) ಪ್ರಕಾಶವಾನ್, ಅನಂತವಾನ್ **ಜ್ಯೋತಿಷ್ಮಾನ್ ಆಯತನವಾನ್** ಎಂದು ಹೆಸರುಳ್ಳ ಪೂರ್ವಾದಿ ದಿಕ್ಕುಗಳಲ್ಲಿದ್ದ ಪ್ರಯುಕ್ತವೂ, ಆ ದಿಕ್ಕುಗಳಿಗೆ ಅಧಿಪತಿಗಳಾಗಿರುವುದರಿಂದಲೂ ಪ್ರಾಚೀದಿಕ್ ಇತ್ಯಾದಿ ಹೆಸರುಗಳುಳ್ಳ, ಪ್ರತ್ಯೇಕವಾಗಿ ನಾಲ್ಕು ನಾಲ್ಕು ರೂಪಗಳುಳ್ಳ ಶ್ರೀಹರಿಯ ವಾಸುದೇವ ಮೊದಲಾದ ಮೂರ್ತಿಗಳನ್ನು ವಾಯು ಮೊದಲಾದವರು ಉಪದೇಶಿಸಿದರು. (೩) **ಪೂರ್ವಸ್ಮಾದುತ್ತಮೋ ಲಬ್ಧಃ ಸ್ವಯಮೇವ ಗುರುರ್ಯದಿ । ಗೃಹ್ಣೀಯಾದವಿಚಾರೇಣ** ಎಂಬ ಪ್ರಮಾಣದಲ್ಲಿ ಮೊದಲಿನವರಿಗಿಂತ ಉತ್ತಮರು ಸಿಕ್ಕಿದರೆ ನಿರ್ವಿಚಾರವಾಗಿ ಅವರನ್ನು ಗುರುಗಳನ್ನಾಗಿ ಸ್ವೀಕರಿಸಬೇಕೆಂದು ಹೇಳಿದುದರಿಂದ ವೃಷಭಾದಿಗಳು ಗುರುಗಳೆಂದೇ ಆಗಿದ್ದರೆ ಅವರು ಉಪದೇಶಿಸಿದ ಮೇಲೆ ಸತ್ಯಕಾಮನು ಮರಳಿ ಗೌತಮರಲ್ಲಿ ಪ್ರಾರ್ಥಿಸಿದುದು ಏಕೆ? ಎಂದರೆ–) (ವೃಷಭಾದಿಗಳು ಯದೃಚ್ಛೆಯಿಂದ ಉಪದೇಶ ಮಾಡಿದವರು. ಸತ್ಯಕಾಮನು ಅವರನ್ನು ಗುರುಗಳನ್ನಾಗಿ ಸ್ವೀಕರಿಸಲಿಲ್ಲ. ಆದುದರಿಂದಲೇ) ವೃಷಭಾದಿರೂಪಗಳನ್ನು ಹೊಂದಿದ ವಾಯು ಮೊದಲಾದವರು ಸತ್ಯಕಾಮನಿಗೆ ಪೂರ್ಣಾನುಗ್ರಹ ಮಾಡಿಕೊಂಡು ನಾವು ಉಪದೇಶ ಮಾಡುವವರೆಂಬ ಬುದ್ಧಿಯಿಂದ ಉಪದೇಶಿಸಲಿಲ್ಲ. ಅದುಕಾರಣ ಗುರುಗಳಾದ ಗೌತಮರಲ್ಲಿ ವಾಯು ಮೊದಲಾದವರ ಮುಖದಿಂದ ಕೇಳಿದುದರಿಂದ ದೋಷವು ಬರಬಾರದೆಂದು ಪ್ರಾರ್ಥಿಸಿ ಅನುಜ್ಞೆ ಪಡೆದನು. (೪) (ಸತ್ಯಕಾಮನು ವಾಯ್ವಾದಿಗಳನ್ನು ಆಚಾರ್ಯರೆಂದು ಸ್ವೀಕರಿಸಿದ ಮೇಲೆಯೇ ಗೌತಮರಿಂದ ಅನುಜ್ಞೆ ಪಡೆದನೆಂದು ಏಕೆ ಆಗಲಾರದೆಂದರೆ–) ಉತ್ತಮಗುರುಗಳನ್ನು ಹೊಂದಲಿಕ್ಕೆ ಅಧಮಗುರುಗಳಿಂದ ಎಲ್ಲಿಯೂ ಅನುಜ್ಞೆ ಪಡೆಯಬೇಕಾಗಿಲ್ಲ. ಆದಕಾರಣ ಉತ್ತಮಗುರುಗಳಿಂದ ಕೇಳಿದ ಮೇಲೆ ಗೌತಮರಿಂದ ಅನುಜ್ಞೆಯನ್ನು ಪ್ರಾರ್ಥಿಸದೆ ಇರಬೇಕಿತ್ತು. (ಸಮಾನಿಕರಾದ ಗುರುಗಳಲ್ಲಿ ಒಬ್ಬರನ್ನು ಬಿಟ್ಟು ಇನ್ನೊಬ್ಬರನ್ನು ಸ್ವೀಕರಿಸಲಿಕ್ಕೆ ಹಿಂದಿನವರ ಅನುಜ್ಞೆಯು ಬೇಕು.) (೫) (ಸತ್ಯಕಾಮನು ವಾಯ್ವಾದಿಗಳಿಂದ ಕೇಳಿದರೂ ಮರಳಿ ಗೌತಮರ ಅನುಜ್ಞೆಯನ್ನು ಪ್ರಾರ್ಥಿಸಿದುದರಿಂದ ಗೌತಮರು ವಾಯ್ವಾದಿಗಳಿಗೆ ಸಮಾನಿಕರೆಂದು ಏಕೆ ಆಗಲಾರದೆಂದರೆ–) ಋಷಿಗಳಿಗಿಂತ ದೇವತೆಗಳು ಉತ್ತಮರು, ಅವರಿಗಿಂತ ವಾಯುವು ಉತ್ತಮನು ವಾಯುವಿಗಿಂತ ವಿಷ್ಣುವು ಉತ್ತಮನು. ಅವನಿಗಿಂತ ಉತ್ತಮನಾದ ಗುರುವು ಇಲ್ಲವೇ ಇಲ್ಲ, ಎಂದು ಆಚಾರ್ಯಸಂಹಿತೆಯಲ್ಲಿದೆ. (೬)(೯ನೇ ಖಂಡದ ೩ನೇ ಮಂತ್ರದಲ್ಲಿದ್ದ **ಅತ್ರ ಹ ನ ಕಿಂಚನ ವೀಯಾಯ** ಎಂಬುವ ಅನುಜ್ಞೆಯನ್ನು ಕೊಡುವ ವಚನಕ್ಕೆ ಅರ್ಥ ಹೇಳುತ್ತಾರೆ—) ವಾಯು ಮೊದಲಾದ ದೇವತೆಗಳಿಂದ ಪರಬ್ರಹ್ಮ ಸ್ವರೂಪವನ್ನು ಕೇಳಿದ ನಿನಗೆ ಯಾವ ಅಪರಾಧವೂ ಉಂಟಾಗಲಿಲ್ಲ. ಯಾವ ದೋಷವೂ ಬರಲಿಲ್ಲ, ಎಂದು ಗೌತಮರು ಹೇಳಿದರು ಎಂದರ್ಥವು ॥೬–೫॥ ೬, ೭, ೮ ೯ ॥
॥ ೧ ॥

**ಒಂಭತ್ತನೇ ಖಂಡವು ಮುಗಿಯಿತು.**

## ೧೦ನೇ ಖಂಡವು

ಪೀ—ಪ್ರಾಚೀನ ಕಥೆಯನ್ನು ಹೇಳುತ್ತಾ ಪರಾಪರ ಬ್ರಹ್ಮವಿದ್ಯೆಯನ್ನೂ ಉತ್ಕ್ರಮಣಕಾಲದಲ್ಲಿ ಹೋಗತಕ್ಕ ಮಾರ್ಗವನ್ನೂ ಹೇಳುತ್ತಾರೆ—

**ಉ. ॥ ಉಪಕೋಸಲೋ ಹ ವೈ ಕಾಮಲಾಯನಃ ಸತ್ಯಕಾಮೇ ಜಾಬಾಲೇ ಬ್ರಹ್ಮಚರ್ಯಮುವಾಸ ತಸ್ಯ ಹ ದ್ವಾದಶ ವರ್ಷಾಣ್ಯಗ್ನೀನ್ಪರಿಚಚಾರ ಸ ಹ ಸ್ಮಾನ್ಯಾನಂತೇವಾಸಿನಃ ಸಮಾವರ್ತಯꣳಸ್ತꣳ ಹ ಸ್ಮೈವ ನ ಸಮಾವರ್ತಯತಿ ॥ ೧ ॥**

ಅ ॥ ಕಾಮಲನ ಮಗನಾದ ಉಪಕೋಸಲನೆನ್ನುವವನು ಜಬಾಲೆಯ ಮಗನಾದ ಸತ್ಯಕಾಮನಲ್ಲಿ ಬ್ರಹ್ಮಚರ್ಯ (ಪರಬ್ರಹ್ಮನನ್ನು ಹೊಂದುವುದಕ್ಕಾಗಿ ಮಾಡುವ ವ್ರತವಿಶೇಷ)ಕ್ಕಾಗಿ ಆವಾಸ ಮಾಡುತ್ತಿದ್ದನು ಆ ಗುರುಕುಲದಲ್ಲಿ ಆ ಸತ್ಯಕಾಮರ ಗಾರ್ಹಪತ್ಯ ಆಹವನೀಯ ಅನ್ವಾಹಾರ್ಯಪಚನ ಎಂಬ ಮೂರು ಅಗ್ನಿಗಳನ್ನು ಹನ್ನೆರಡು ವರ್ಷಗಳಲ್ಲಿ ಸೇವಿಸುತ್ತಿದ್ದನು. ಆ ಸತ್ಯಕಾಮರು ಬೇರೆ ಶಿಷ್ಯರಿಗೆ ಪರಬ್ರಹ್ಮನನ್ನುಪದೇಶಿಸಿ ಅವರವರ ಮನೆಗೆ ಹೋಗಲಿಕ್ಕೆ ಅನುಜ್ಞೆ ಕೊಡುವವರಾಗಿ ಉಪಕೋಸಲನೊಬ್ಬನಿಗೇನೆ ಮನೆಗೆ ಹೋಗಲಿಕ್ಕೆ ಅನುಜ್ಞೆ ಕೊಡಲಿಲ್ಲ. ದೊಡ್ಡವರ ಮನೋವ್ಯಾಪಾರವು ಅತ್ಯಾಶ್ಚರ್ಯಕರವು. ॥ ೧ ॥

**ಉ. ॥ ತಂ ಜಾಯೋವಾಚ ತಪ್ತೋ ಬ್ರಹ್ಮಚಾರೀ ಕುಶಲಮಗ್ನೀನ್ ಪರಿಚಚಾರೀನ್ಮಾ ತ್ವಾಗ್ನಯಃ ಪರಿಪ್ರವೋಚನ್ ಪ್ರಬ್ರೂಹ್ಯಸ್ಮಾ ಇತಿ ತಸ್ಮೈ ಹಾಪ್ರೋಚ್ಯೈವ ಪ್ರವಾಸಾಂಚಕ್ರೇ ॥ ೨ ॥**

ಅ ॥ ಗಂಡನಾದ ಸತ್ಯಕಾಮನಿಗೆ ಹೆಂಡತಿಯು ಹೇಳಿದಳು. ಬ್ರಹ್ಮಚಾರಿಯು ಬಹುಕ್ಲೇಶದಿಂದ ಅಗ್ನಿಗಳನ್ನು ಜಾಣತನದಿಂದ ಸೇವಿಸುತ್ತಿದ್ದಾನೆ. (ನಮ್ಮಿಬ್ಬರನ್ನೂ ಜಾಣತನದಿಂದ ಸೇವಿಸಿರುವನು. ಆದರೂ ನೀವು ಪರಬ್ರಹ್ಮನನ್ನು ಉಪದೇಶಿಸಲೇ ಇಲ್ಲ.) ನಮ್ಮ ಅಗ್ನಿಗಳೂ ಕೂಡ ಬ್ರಹ್ಮಚಾರಿಯಿಂದ ಚೆನ್ನಾಗಿ ಸೇವಿಸಲ್ಪಟ್ಟಿವೆ. ಆ ಅಗ್ನಿಗಳೂ ಕೂಡ ಇವನಿಗೆ ಪರಬ್ರಹ್ಮನನ್ನು ಉಪದೇಶಿಸು ಎಂದು ನಿಮಗೆ ಹೇಳಲೇ ಇಲ್ಲ. ಅದುಕಾರಣ ಇವನಿಗೆ ಪರಬ್ರಹ್ಮನನ್ನು ಉಪದೇಶಿಸಿರಿ ಎಂದು ಹೆಂಡತಿಯು ಹೇಳಿದಳು. ಹೀಗೆ ಹೆಂಡತಿಯು ಹೇಳಿದಾಗ್ಯೂ ಸತ್ಯಕಾಮರು ಉಪಕೋಸಲನಿಗೆ ಪರಬ್ರಹ್ಮನನ್ನು ಉಪದೇಶಿಸದೇನೆ ದೇಶಾಂತರಕ್ಕೆ ಹೊರಟು ಹೋದರು. ॥ ೨ ॥

**ಉ. ॥ ಸ ಹ ವ್ಯಾಧಿನಾನಶಿತುಂ ದಧ್ರೇ ತಮಾಚಾರ್ಯಜಾಯೋವಾಚ ಬ್ರಹ್ಮಚಾರಿನ್ನಶಾನ ಕಿಂ ನು ನಾಶ್ನಾಸೀತಿ ಸ ಹೋವಾಚ ಬಹವ ಇಮೇऽಸ್ಮಿನ್ಪುರುಷೇ ಕಾಮಾ ನಾನಾತ್ಯಯಾ ವ್ಯಾಧಿಭಿಃ ಪ್ರತಿಪೂರ್ಣೋऽಸ್ಮಿ ನಾಶಿಷ್ಯಾಮೀತಿ ॥ ೩ ॥**

ಅ ॥ ಉಪಕೋಸಲನು ಮನಸ್ಸಿನ ದುಃಖದಿಂದ ಅನಶನ ವ್ರತಮಾಡಲಿಕ್ಕೆ ಮನಸ್ಸು ಮಾಡಿದನು. ಆಗ ಗುರುಗಳ ಹೆಂಡತಿಯು ಉಪಕೋಸಲನೇ ಉಣ್ಣು. ಏಕೆ ಉಣ್ಣುವುದಿಲ್ಲ, ಎಂದಳು. ಆಗ ಉಪ

ಕೋಸಲನು ಪುರುಷನಲ್ಲಿ ನಾನಾಪ್ರಕಾರಗಳಾದ ಬಹು ಇಷ್ಟಗಳು ಇರುತ್ತವೆ. ಅವು ಸಿಗದಿರುವುದರಿಂದ ಮನಸ್ಸಿನಲ್ಲಿ ವ್ಯಥೆಗಳು ತುಂಬಿವೆ. ಅದುಕಾರಣ ಉಣ್ಣುವುದಿಲ್ಲವೆಂದು ಹೇಳಿ ಸುಮ್ಮನೆ ಕುಳಿತನು. ॥ ೩ ॥

**ಉ. ॥ ಅಥ ಹಾಗ್ನಯಃ ಸಮೂದಿರೇ ತಪ್ತೋ ಬ್ರಹ್ಮಚಾರೀ ಕುಶಲಂ ನಃ ಪರಿಚಚಾರೀದ್ಧಂತಾಸ್ಮೈ ಪ್ರಬ್ರವಾಮೇತಿ ತಸ್ಮೈ ಹೋಚುಃ ॥ ೪ ॥**

ಅ ॥ ಗುರುಗಳು ಹೊರಟುಹೋದ ಮೇಲೆ ಅಥವಾ ಗುರುಗಳು ಉಪದೇಶ ಮಾಡದಿರುವುದರಿಂದ ಅಥವಾ ಗಾರ್ಹಪತ್ಯ ಮೊದಲಾದ ಮೂರು ಅಗ್ನಿದೇವತೆಗಳು ತಮ್ಮ ಸೇವೆಯನ್ನು ಚೆನ್ನಾಗಿ ಮಾಡಿರುವ ಪ್ರಯುಕ್ತ ಕೃಪೆಯಿಂದ ಪರಸ್ಪರ ಮಾತಾಡಿಕೊಂಡರು. ಬಹು ಕಷ್ಟದಿಂದ ಬ್ರಹ್ಮಚಾರಿಯು ಚೆನ್ನಾಗಿ ನಮ್ಮನ್ನು ಸೇವಿಸಿರುವನು. ಈ ಬ್ರಹ್ಮಚಾರಿಗೆ ಪರಬ್ರಹ್ಮವಿದ್ಯೆಯನ್ನು ಸಂತೋಷದಿಂದ ಹೇಳುವ. ಹೀಗೆ ಪರಸ್ಪರ ಮಾತಾಡಿಕೊಂಡು ಹೋಮ ಕುಂಡಗಳಿಂದ ಮೂರು ಅಗ್ನಿದೇವತೆಗಳು ಮೇಲಕ್ಕೆ ಬಂದು ಉಪಕೋಸಲನಿಗೆ ಪರಬ್ರಹ್ಮ ವಿದ್ಯೆಯನ್ನು ಹೇಳಿದರು. ॥ ೪ ॥

**ಉ. ॥ ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮೇತಿ ಸ ಹೋವಾಚ ವಿಜಾನಾಮ್ಯಹಂ ಯತ್ಪ್ರಾಣೋ ಬ್ರಹ್ಮ ಕಂ ಚ ತು ಖಂ ಚ ನ ವಿಜಾನಾಮೀತಿ ತೇ ಹೋಚುರ್ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ ಕಮಿತಿ ಪ್ರಾಣಂ ಚ ಹಾಸ್ಮೈ ತದಾಕಾಶಂ ಚೋಚುಃ ॥ ಇತಿ ದಶಮಃ ಖಂಡಃ ॥೫॥**

ಅ ॥ ಬಲದೇವತೆಯಾದ ಮುಖ್ಯವಾಯುವು ಅಪರಬ್ರಹ್ಮನು. (ಕಂ=) ಸ್ವಾಭಾವಿಕವಾದ ಪರಿಪೂರ್ಣ ಸುಖರೂಪನು ವಿಷ್ಣುವೆನಿಸಿದ ಪರಬ್ರಹ್ಮನು. (ಖಂ=) ಪರಿಪೂರ್ಣ ಜ್ಞಾನಬಲ ರೂಪನು ವಿಷ್ಣುವೆನಿಸಿದ ಪರಬ್ರಹ್ಮನು, ಎಂದು ಅಗ್ನಿದೇವತೆಗಳು ಹೇಳಿದರು. ಆಗ ಉಪಕೋಸಲನು ಹೇಳಿದನು. ಪ್ರಾಣನೆಂದರೆ ಮುಖ್ಯವಾಯುವೆಂದು ಪ್ರಸಿದ್ಧಿಯಿದ್ದುದರಿಂದ ಪ್ರಾಣೋ ಬ್ರಹ್ಮ ಪ್ರಾಣನು ಅಪರ ಬ್ರಹ್ಮನು ಎಂದು ಹೇಳಿದುದನ್ನು ನಾನು ತಿಳಿದಿರುತ್ತೇನೆ. ಪರಂತು ಪ್ರಾಣನಿಗಿಂತ ಪರಬ್ರಹ್ಮನಿಗೆ ಭೇದವಿದ್ದಂತೆಯೇ ಕ ಖಗಳಿಗೆ ಭೇದವೋ ಅಭೇದವೋ ಎಂದು ತಿಳಿಯಲಿಲ್ಲ, ಎಂದನು ಆಗ ಅಗ್ನಿದೇವತೆಗಳು ಕ ಖ ಗಳಿಗೆ ಅಭೇದವೆಂದರು. ಕ ಎನಿಸುವುದೇ ಖ ಎನಿಸುವುದು. ಖ ಎನಿಸುವುದೇ ಕ ಎನಿಸುವುದು. ಸ್ವಲ್ಪವೂ ವ್ಯತ್ಯಾಸವಿಲ್ಲ. (ಸ್ವಲ್ಪವೂ ಭೇದವಿಲ್ಲ. ವಿಶೇಷಬಲದಿಂದಲೇ ಆನಂದ ರೂಪನು ಜ್ಞಾನಬಲರೂಪನು, ಎಂದು ಬೇರೆಯಾಗಿ ವ್ಯವಹಾರ ಮಾತ್ರ.) ಹೀಗೆ ಆ ಅಗ್ನಿಗಳು ಒಟ್ಟುಕೂಡಿ ಉಪಕೋಸಲನಿಗೆ ಮುಖ್ಯವಾಯುವು ಅಪರಬ್ರಹ್ಮನೆಂದೂ, ಕಂ ಖಂ ಎಂದು ಹೇಳಲ್ಪಟ್ಟ ಚೆನ್ನಾಗಿ ಪ್ರಕಾಶಿಸಿರುವುದರಿಂದ ಆಕಾಶನೆನಿಸಿದ ವ್ಯಾಪ್ತನಾದ ಶ್ರೀಹರಿಯು ಪರಬ್ರಹ್ಮನೆಂದೂ ಉಪದೇಶಿಸಿದರು. ಎಂದು ವೇದಪುರುಷನ ಮಾತು. ॥ ೬—೧೦ ॥ ॥ ೫ ॥

ಷೀ—೫ನೇ ಮಂತ್ರದ ಅರ್ಥ ಹೇಳುತ್ತಾರೆ—

**ಭಾ. ॥ (೧) ಪ್ರಾಣೋ ಬ್ರಹ್ಮ ಬಲರೂಪಂ ಬ್ರಹ್ಮ ಕಮಾನಂದರೂಪಂ ಖಂ ಜ್ಞಾನರೂಪಂ ॥ (೨) ಅಪರಂ ಬ್ರಹ್ಮ ಸ ಪ್ರಾಣಃ ಸಾಕ್ಷಾದ್ವಾಯೋ ಬಲದೇವತಾ । ಜ್ಞಾನಾನಂದಾತ್ಮಕಂ ಪೂರ್ಣಂ ಪರಂ ಬ್ರಹ್ಮ ಸ್ವಯಂ ಹರಿಃ ॥ (೩) ನೈಜಾನಂದಬಲೋದ್ರೇಕಃ ಕ-**

**ಮಿತ್ಯುಕ್ತೋ ಮನೀಷಿಭಿಃ । ಬಲಜ್ಞಾನಸಮಾಹಾರಃ ಪೂರ್ಣಃ ಖಮಿತಿ ಶಬ್ದಿತಃ ॥ (೪) ತದಾತ್ಮಕಃ ಪರೋ ವಿಷ್ಣುರಾಕಾಶ ಇತಿ ಕೀರ್ತಿತಃ । ಏವಂ ಪ್ರಾಣಸ್ತಥಾಽಽಕಾಶೋ ಬ್ರ-ಹ್ಮಣೀ ದ್ವೇ ಪ್ರಕೀರ್ತಿತೇ ॥ ಇತಿ ಚ ॥ (೫) ಪ್ರಾಣಶಬ್ದಸ್ಯ ವಾಯುರರ್ಥಃ ಪ್ರಸಿದ್ಧಃ । ಕಖಯೋರ್ಭಿನ್ನಾರ್ಥತ್ವಶಂಕಯಾ ಕಂ ಚ ತು ಖಂ ಚ ನ ವಿಜಾನಾಮೀತ್ಯಾಹ । ಅತ ಏವೈಕ್ಯಾಭಿಪ್ರಾಯೇಣ ಯದ್ವಾವ ಕಂ ತದೇವ ಖಂ ಯದೇವ ಖಂ ತದೇವ ಕಮಿತ್ಯೂ-ಚುಃ ॥ ೧, ೨, ೩, ೪, ೫ ॥ ಇತಿ ದಶಮಃ ಖಂಡಃ ॥ ೬–೧೦ ॥ ॥ ೧ ॥**

**ಅ** ॥ (೧) ಬಲರೂಪನಾದ ಮುಖ್ಯವಾಯುವು ಅಪರಬ್ರಹ್ಮನು. ಪರಬ್ರಹ್ಮನು ಕಂ=ಆನಂದ ರೂಪನು. ಖಂ=ಬಲಜ್ಞಾನರೂಪನು. (೨) (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ—) ಸಾಕ್ಷಾತ್ ಬಲದೇವತೆಯಾದ ಮುಖ್ಯಪ್ರಾಣನು ಅಪರಬ್ರಹ್ಮನೆನಿಸುತ್ತಾನೆ. ಪರಿಪೂರ್ಣವಾದ ಜ್ಞಾನಬಲರೂಪನಾದವನು ಪರಬ್ರಹ್ಮನು. ಸಾಕ್ಷಾತ್ ಹರಿಯು (೩) ಪರಾಧೀನವಾಗದಿರುವ ಪೂರ್ಣವಾದ ಆನಂದ ಬಲಗಳು ಕಂ ಎನಿಸುತ್ತವೆ. ಪೂರ್ಣವಾದ ಬಲಜ್ಞಾನ ಸಮೂಹವು ಖಂ ಎನಿಸುತ್ತದೆ. (೪) ಜ್ಞಾನಾನಂದಾದಿಸ್ವರೂಪನಾದ ಸರ್ವೋತ್ತಮನಾದ ಶ್ರೀವಿಷ್ಣುವು ಆಕಾಶನೆನಿಸುತ್ತಾನೆ. ಹೀಗೆ ಪ್ರಾಣನು ಅಪರ ಬ್ರಹ್ಮನೆಂದೂ ಆಕಾಶನು ಪರಬ್ರಹ್ಮನೆಂದೂ ಹೇಳಲ್ಪಡುತ್ತಾರೆ (೫) ಪ್ರಾಣಶಬ್ದಕ್ಕೆ ಮುಖ್ಯವಾಯುವೆಂಬ ಅರ್ಥವು ಪ್ರಸಿದ್ಧವು. ಕಕಾರ ಖಕಾರಗಳಿಗೆ ಬೇರೆಬೇರೆ ಅರ್ಥವೆಂದು ಸಂದೇಹಪಟ್ಟು ಕ ಮತ್ತು ಖ ಗಳನ್ನು ವಿಶೇಷವಾಗಿ ತಿಳಿಯಲಿಲ್ಲವೆಂದನು. ಆದುದರಿಂದಲೇ ಕ ಖ ಗಳಿಗೆ ಐಕ್ಯವೆಂಬ ಅಭಿಪ್ರಾಯದಿಂದ ಕಕಾರವೇ ಖಕಾರವು ಖಕಾರವೇ ಕಕಾರವು. ಎಂದರು. ॥ ೬—೧೦ ॥ ॥ ೧ ॥

ಹತ್ತನೇ ಖಂಡವು ಮುಗಿಯಿತು.

## ೧೧ನೇ ಖಂಡವು

**ಪೀ**—ಹೀಗೆ ಅಗ್ನಿಗಳು ಒಟ್ಟು ಸೇರಿ ಹೇಳಿದ ಪರಾಪರ ಬ್ರಹ್ಮವಿದ್ಯೆಯನ್ನು ವಿವರಿಸಿ, ಈಗ ಪ್ರತ್ಯೇಕ ಪ್ರತ್ಯೇಕವಾಗಿ ಹೇಳಿದ ಪರಬ್ರಹ್ಮವಿದ್ಯೆಯನ್ನೇ ವಿವರಿಸುತ್ತಾರೆ—

**ಉ. ॥ ಅಥ ಹೈನಂ ಗಾರ್ಹಪತ್ಯೋಽನುಶಶಾಸ ಪೃಥಿವ್ಯಗ್ನಿರನ್ನಮಾದಿತ್ಯ ಇತಿ ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ ॥ ೧ ॥**

**ಅ** ॥ ಅಗ್ನಿಗಳು ಒಟ್ಟು ಸೇರಿ ಉಪದೇಶಿಸಿದ ಮೇಲೆ ಉಪಕೋಸಲನಿಗೆ ಗಾರ್ಹಪತ್ಯನೆಂಬ ಅಗ್ನಿಯು ಉಪದೇಶ ಮಾಡಿದನು. ಪರಬ್ರಹ್ಮನು ವ್ಯಾಪ್ತನಾದುದರಿಂದ ಪೃಥಿವೀ ಎನಿಸಿಕೊಂಡವನು, ಪೃಥಿವಿಯೊಳಗಣನು. ಅಂಗಗಳಿಗೆ ಪ್ರೇರಕನಾದುದರಿಂದ ಅಂಗನೆನಿಸಿಕೊಂಡವನು, ಅಂಗಗಳೊಳಗಣನು ಸರ್ವಸಂಹಾರಕನಾದುದರಿಂದ ಅನ್ನನೆನಿಸಿಕೊಂಡವನು ಅನ್ನದೊಳಗಣನು. ಸರ್ವದಾ ಆದಿರೂಪನಾದುದರಿಂದ ಆದಿತ್ಯನೆನಿಸಿದವನು ಆದಿತ್ಯನೊಳಗಣನು ಹೀಗೆ ಪೃಥಿವೀ ಮೊದಲಾದ ಹೆಸರುಳ್ಳ ನಾಲ್ಕು ಪರಬ್ರಹ್ಮರೂಪಗಳನ್ನು ಉಪದೇಶ ಮಾಡಿದನು. (ಸ್ಥಾನಭೇದದಿಂದ ರೂಪಗಳಿಗೆ ಭೇದವನ್ನು ತಿಳಿಯಕೂಡದೆನ್ನುತ್ತಾರೆ—) ಪೃಥಿವೀ ಅಗ್ನಿ ಅನ್ನ ಆದಿತ್ಯರಲ್ಲಿ ದಿವ್ಯದೃಷ್ಟಿಗೆ ಗೋಚರನಾದ ಗುಣಪರಿ

ಪೂರ್ಣನಾದ ಶ್ರೀಹರಿಯೇ, ಎಲ್ಲರಿಂದಲೂ ಬಿಡಲ್ಪಡದಿರುವುದರಿಂದ ಅಹಂ ಎನಿಸಿಕೊಂಡವನಾಗಿ ಗಾರ್ಹಪತ್ಯದೊಳಗಣನು. ಆದಿತ್ಯನೊಳಗಣನೇ ನನ್ನೊಳಗಣನು. (ಅಂದರೆ— ಗಾರ್ಹಪತ್ಯನೊಳಗಣನು) (ಇಂದ್ರಾರ್ಜುನರು, ವಿದುರಧರ್ಮರಾಜರು ಇತ್ಯಾದಿಗಳಂತೆ ಜೀವಾಂತರ್ಯಾಮಿಯಾದ ಶ್ರೀಹರಿಗೆ ಸ್ವಲ್ಪವೂ ವಿಶೇಷವಿಲ್ಲ.) ॥ ೧ ॥

**ಉ. ॥ ಸ ಯ ಏತಮೇವಂವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾಪ(ವ)ರಪುರುಷಾಃ ಕ್ಷೀಯಂತ ಉಪವಯಂತಂ ಭುಂಜಾಮೋಽಸ್ಮಿಂಶ್ಚ ಲೋಕೇಽಮುಷ್ಮಿಂಶ್ಚ ಯ ಏತಮೇವಂವಿದ್ವಾನುಪಾಸ್ತೇ ॥ ಇತ್ಯೇಕಾದಶಃ ಖಂಡಃ ॥ ೬-೧೧ ॥೨॥**

ಅ ॥ ಪೃಥಿವ್ಯಾದಿಗಳೊಳಗಣನೇ ಗಾರ್ಹಪತ್ಯನೊಳಗಣನೆಂದು ತಿಳಿದು ಉಪಾಸನೆ ಮಾಡುವವನು ಪಾಪವನ್ನು ಕಳೆದುಕೊಳ್ಳುತ್ತಾನೆ. ವೈಕುಂಠಕ್ಕೆ ಹೋಗುತ್ತಾನೆ. ಪೂರ್ಣಾಯುಷ್ಯವನ್ನು ಹೊಂದುತ್ತಾನೆ. ಸರ್ವಜ್ಞನಾಗಿ ಬಾಳುತ್ತಾನೆ ಉಪಾಸಕನ ಭೃತ್ಯರು ನಾಶಹೊಂದುವುದಿಲ್ಲ. (ಸರ್ವದಾ ಭೃತ್ಯರುಳ್ಳವನೇ ಆಗುತ್ತಾನೆ) ಹೀಗೆ ತಿಳಿದು ಉಪಾಸನೆ ಮಾಡುವವನನ್ನು ನಾವೆಲ್ಲರೂ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಕೂಡ ರಕ್ಷಿಸುವೆವು. ಹೀಗೆ ಅಗ್ನಿದೇವತೆಗಳು ಹೇಳಿದರು. ॥ ೬-೧೧ ॥ ೨ ॥

**ಹನ್ನೊಂದನೇ ಖಂಡವು ಮುಗಿಯಿತು.**

## ೧೨ನೇ ಖಂಡವು

**ಉ. ॥ ಅಥ ಹೈನಮನ್ವಾಹಾರ್ಯಪಚನೋಽನುಶಶಾಸಾಽಪೋ ದಿಶೋ ನಕ್ಷತ್ರಾಣಿ ಚಂದ್ರಮಾ ಇತಿ ಯ ಏಷ ಚಂದ್ರಮಸಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ ॥ ೧ ॥**

ಅ ॥ ಗಾರ್ಹಪತ್ಯಾಗ್ನಿಯು ಉಪದೇಶಿಸಿದ ಮೇಲೆ ಈ ದಕ್ಷಿಣಾಗ್ನಿಯು ಚರುವನ್ನು ಪಾಕಮಾಡುವುದರಿಂದ ಅನ್ವಾಹಾರ್ಯ ಪಚನನೆನಿಸಿಕೊಂಡ ದಕ್ಷಿಣಾಗ್ನಿಯು ಉಪದೇಶಿಸಿದನು. ಹೇಗೆಂದರೆ - ಚೆನ್ನಾಗಿ ರಕ್ಷಿಸುವುದರಿಂದ ಆಪಃ ಎನಿಸಿಕೊಂಡು ಜಲಗಳೊಳಗಣನೂ, ಅಭೀಷ್ಟಗಳನ್ನು ಕೊಡುವುದರಿಂದ ದಿಕ್ ಎನಿಸಿಕೊಂಡು ದಿಕ್ಕುಗಳೊಳಗಣನೂ, ಬೇರೆಯವರ ವಶನಾಗದಿರುವುದರಿಂದ ನಕ್ಷತ್ರನೆನಿಸಿಕೊಂಡು ನಕ್ಷತ್ರನೊಳಗಣನೂ, ಆನಂದರೂಪನಾದುದರಿಂದ ಚಂದ್ರನೆನಿಸಿಕೊಂಡು ಚಂದ್ರನೊಳಗಣನೂ ಪರಬ್ರಹ್ಮನು. ಜಲಾದಿಗಳಲ್ಲಿ ದಿವ್ಯ ದೃಷ್ಟಿಗೆ ಗೋಚರನಾದವನೇ ಅನ್ವಾಹಾರ್ಯ ಪಚನನೊಳಗಣನು. ॥ ೧ ॥

**ಉ. ॥ ಸ ಯ ಏತಮೇವಂವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾವರಪುರುಷಾಃ ಕ್ಷೀಯಂತ ಉಪವಯಂತಂ ಭುಂಜಾಮೋಽಸ್ಮಿಂಶ್ಚ ಲೋಕೇಽಮುಷ್ಮಿಂಶ್ಚ ಯ ಏತಮೇವಂವಿದ್ವಾನುಪಾಸ್ತೇ ॥ ಇತಿ ದ್ವಾದಶಃ ಖಂಡಃ ॥೬-೧೨॥ ೨ ॥**

ಅ || (ಹಿಂದಿನಂತೆ ಅರ್ಥ) || ೬-೧೨ || || ೨ ||

ಹನ್ನೆರಡನೇ ಖಂಡವು ಮುಗಿಯಿತು.

## ೧೩ನೇ ಖಂಡವು

ಉ. || ಅಥ ಹೈನಮಾಹವನೀಯೋಽನುಶಶಾಸ ಪ್ರಾಣ ಆಕಾಶೋ ದ್ಯೌರ್ವಿದ್ಯುದಿತಿ ಯ ಏಷ ವಿದ್ಯುತಿ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮೀತಿ || ೧ ||

ಅ || ಆ ಮೇಲೆ ಆಹವನೀಯನೆಂಬ ಅಗ್ನಿಯು ಉಪದೇಶಿಸಿದನು. ಬಲರೂಪನಾದುದರಿಂದ ಪ್ರಾಣನೆನಿಸಿಕೊಂಡು ಪ್ರಾಣನೊಳಗಣನೂ, ಪದಾರ್ಥಗಳನ್ನು ತುಂಬಿಸಲಿಕ್ಕೆ ಅವಕಾಶ ಕೊಡುವುದರಿಂದ ಆಕಾಶನೆನಿಸಿಕೊಂಡು ಆಕಾಶನೊಳಗಣನೂ, ಪ್ರಕಾಶರೂಪನಾದುದರಿಂದ ದ್ಯೌಃ ಎನಿಸಿಕೊಂಡು ದ್ಯುಲೋಕದೊಳಗಣನೂ, ತಿಳಿಸಿಕೊಡುವುದರಿಂದ ವಿದ್ಯುತ್ ಎನಿಸಿಕೊಂಡು ವಿದ್ಯುದೊಳಗಣನೂ ಪರಬ್ರಹ್ಮನು. ಪ್ರಾಣಾದಿಗಳೊಳಗಣನೇ ಆಹವನೀಯಾಗ್ನಿಗಳೊಳಗಣನಾಗಿರುತ್ತೇನೆ................ || ೧ ||

ಉ. || ಸ ಯ ಏತಮೇವಂವಿದ್ವಾನುಪಾಸ್ತೇಽಪಹತೇ ಪಾಪಕೃತ್ಯಾಂ ಲೋಕೀಭವತಿ ಸರ್ವಮಾಯುರೇತಿ ಜ್ಯೋಗ್ಜೀವತಿ ನಾಸ್ಯಾವರಪುರುಷಾಃ ಕ್ಷೀಯಂತ ಉಪವಯಂತಂ ಭುಂಜಾಮೋಽಸ್ಮಿಂಶ್ಚ ಲೋಕೇಽಮುಷ್ಮಿಂಶ್ಚ ಯ ಏತಮೇವಂವಿದ್ವಾನುಪಾಸ್ತೇ || ಇತಿ ತ್ರಯೋದಶಃ ಖಂಡಃ || ೬-೧೩ || ೨ ||

ಅ || (ಹಿಂದಿನಂತೆ ಅರ್ಥ.) || ೬-೧೩ || || ೨ ||

ಹದಿಮೂರನೇ ಖಂಡವು ಮುಗಿಯಿತು.

## ೧೪ನೇ ಖಂಡವು

ಪೀ—ಮೂರು ಅಗ್ನಿದೇವತೆಗಳು ಒಟ್ಟು ಸೇರಿಯೂ ಬೇರೆ ಬೇರೆಯಾಗಿಯೂ ಉಪದೇಶಿಸಿದುದನ್ನು ಅನುವಾದಮಾಡಿ ಬೇರೆ ಪರತತ್ತ್ವವನ್ನು ಅವರು ಹೇಳಿರುವರೆಂದು ವೇದವು ಹೇಳುತ್ತದೆ, ಎನ್ನುತ್ತಾರೆ—

ಉ. || ತೇ ಹೋಚುರುಪಕೋಸಲೈಷಾ ಸೋಮ್ಯ ತೇಽಸ್ಮದ್ವಿದ್ಯಾಽಽತ್ಮವಿದ್ಯಾ ಚಾಽಽಚಾರ್ಯಸ್ತು ತೇ ಗತಿಂ ವಕ್ತೇತ್ಯಾಜಗಾಮ ಹಾಸ್ಯಾಽಽಚಾರ್ಯಸ್ತಮಾಚಾರ್ಯೋಽಭ್ಯುವಾದೋಪಕೋಸಲಾ೩ ಇತಿ || ೧ ||

ಅ || ಆ ಅಗ್ನಿಗಳು ಒಟ್ಟು ಸೇರಿಯೂ ಬೇರೆಬೇರೆಯಾಗಿಯೂ ಉಪದೇಶಿಸಿ ಹೇಳಿದರು. ಎಲೋ ಉಪಕೋಸಲನೇ ನಿನಗೆ ಅಂತರ್ಯಾಮಿ ವಿದ್ಯೆಯೂ, ಕಂ ಬ್ರಹ್ಮ ಇತ್ಯಾದಿಗಳಿಂದ ವ್ಯಾಪ್ತರೂಪ

ವನ್ನು ಹೇಳುವ ಆತ್ಮವಿದ್ಯೆಯೂ ಉಪದೇಶಿಸಲ್ಪಟ್ಟಿತು. (ಈ ವಿದ್ಯೆಯನ್ನು ನಿನಗೆ ತಿಳಿಯುವುದಕ್ಕಾಗಿ ಹೇಳಿದುದಲ್ಲದೆ ಉಪಾಸನೆಮಾಡಲಿಕ್ಕೆ ಹೇಳಿದುದಲ್ಲ ಅದುಕಾರಣ ಆಚಾರ್ಯರೇ ನಿನಗೆ ಉಪಾಸನೆ ಮಾಡಿ ಹೊಂದಲ್ಪಡುವ ಭಗವದ್ರೂಪವನ್ನೂ, ಆತನನ್ನು ಹೊಂದಲಿಕ್ಕೆ ಉಪಾಯಭೂತವಾದ ಮಾರ್ಗ ವನ್ನೂ ಉಪದೇಶಿಸುವರು, ಎಂದು ಅಗ್ನಿಗಳು ಹೇಳಿದರು. ಆಚಾರ್ಯರು ಬಂದರು ಅವರು ಉಪ ಕೋಸಲ ಎಂದು ಕರೆದರು. || ೧ ||

**ಉ. || ಭಗವ ಇತಿ ಹ ಪ್ರತಿಶುಶ್ರಾವ ಬ್ರಹ್ಮವಿದ ಇವ ಸೋಮ್ಯ ತೇ ಮುಖಂ ಭಾತಿ ಕೋ ನು ತ್ವಾಽನುಶಶಾಸೇತಿ ಕೋ ನು ಮಾಽನುಶಿಷ್ಯಾದ್ಭೋ ಇತೀಹಾಪೇವ ನಿಹ್ನುತ ಇಮೇ ನೂನಮೀದೃಶಾ ಅನ್ಯಾದೃಶಾ ಇತೀಹಾಗ್ನೀ-ನಭ್ಯೂದೇ ಕಿಂ ನು ಸೋಮ್ಯ ಕಿಲ ತೇಽವೋಚನ್ನಿತಿ || ೨ ||**

ಅ || ಉಪಕೋಸಲನು ಪೂಜ್ಯರೇ ಎಂದುತ್ತರಿಸಿದನು. ಆಗ ಸತ್ಯಕಾಮರು ಉಪಕೋಸಲನೇ ನಿನ್ನ ಮುಖವು ಬ್ರಹ್ಮಜ್ಞಾನಿಯ ಮುಖದಂತೆ ಅತಿ ಪ್ರಸನ್ನವಾಗಿ ಶೋಭಿಸುತ್ತಿದೆ. ನಿನಗೆ ಯಾರು ಉಪ ದೇಶಿಸಿರುವರು. ದೇವತೆಗಳೋ? ಬೇರೆಯವರೋ? ಎಂದರು. ಆಗ ಉಪಕೋಸಲನು ಎಲೋ ಪೂಜ್ಯರೇ ಮನುಷ್ಯನಾಗಲೀ ಅಸುರನಾಗಲೀ ಯಾವನು ಉಪದೇಶಿಸಿಯಾನು? ಯಾರೂ ಉಪದೇಶಿಸಲಿಕ್ಕೆ ಶಕ್ತ ರಲ್ಲ. ಏಕೆಂದರೆ ಭೂಲೋಕದಲ್ಲಿದ್ದ ಮನುಷ್ಯರೂ, ಪಾತಾಳ ಲೋಕದಲ್ಲಿದ್ದ ಅಸುರರೂ ಕೂಡ ಶ್ರೀಹರಿ ಯನ್ನು ಅಪಲಾಪ (ಇದ್ದುದನ್ನು ಮರೆ) ಮಾಡುತ್ತಾರೆ. (ಅಂದರೆ ಶ್ರೀಹರಿಯ ಗುಣಗಳನ್ನು ತಿಳಿಯ ದಿರುವುದರಿಂದ ಹೇಳಲಿಕ್ಕೂ ಅಶಕ್ತರು ಮತ್ತು ವ್ಯತ್ಯಾಸವಾಗಿಯೂ ಹೇಳುತ್ತಾರೆ.) ಅದುಕಾರಣ ದೇವತೆ ಗಳೇ ನನಗೆ ಉಪದೇಶಿಸಿರುವರು. (ಯಾವ ದೇವತೆಗಳೆಂದರೆ) ಅಗ್ನಿಯು ಕಿಡಿಯಂತೆ ಜ್ವಲಿಸುವ ಬಣ್ಣ ವುಳ್ಳ, ಕೈಕಾಲು ಮೊದಲಾದ ಅವಯವಗಳುಳ್ಳ. ಅಗ್ನಿದೇವತೆಗಳು ಪ್ರತ್ಯಕ್ಷರಾಗಿ ನನಗೆ ಉಪದೇಶಿಸಿರು ವರು ಹೀಗೆ ಗುರುಗಳ ಸಮೀಪದಲ್ಲಿ ಅಗ್ನಿಗಳು ತನಗೆ ಉಪದೇಶಿಸಿರುವರು, ಎಂದು ಉಪಕೋಸಲನು ಸ್ಪಷ್ಟವಾಗಿ ಹೇಳಿದನು. ಆಗ ಆಚಾರ್ಯರು ಉಪಕೋಸಲನೇ ಅಗ್ನಿಗಳು ಏನು ಉಪದೇಶಿಸಿರುವರು, ಎಂದರು. || ೨ ||

**ಉ. || ಇದಮಿತಿ ಹ ಪ್ರತಿಜಜ್ಞೇ ಲೋಕಾನ್ವಾವ ಕಿಲ ಸೋಮ್ಯ ತೇಽ-ವೋಚನ್ನಹಂ ತು ತೇ ತದ್ವಕ್ಷ್ಯಾಮಿ ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತ ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತ ಇತಿ ಬ್ರವೀತು ಮೇ ಭಗವಾನಿತಿ ತಸ್ಮೈ ಹೋವಾಚ || ಇತಿ ಚತುರ್ದಶಃ ಖಂಡಃ || ೬-೧೪ || ೩ ||**

ಅ || ಅಗ್ನಿದೇವತೆಗಳು ಇದನ್ನು ಉಪದೇಶಿಸಿರುವರೆಂದು ಉಪಕೋಸಲನು ಪ್ರತಿಜ್ಞೆಮಾಡಿದನು. ಅಂದರೆ—ಅಗ್ನಿದೇವತೆಗಳು ಹೇಳಿದುದನ್ನು ಅನುವಾದಮಾಡಿದನು. ಆಗ ಸತ್ಯಕಾಮರು ಎಲೋ ಉಪಕೋಸಲನೇ ನಿನಗೆ ಅಗ್ನಿದೇವತೆಗಳು ಪೃಥಿವ್ಯಾದಿ ಲೋಕಗಳಲ್ಲಿದ್ದ ಭಗವದ್ರೂಪಗಳನ್ನು ಅವಶ್ಯ ವಾಗಿ ತಿಳಿಯಬೇಕೆಂದು ಹೇಳಿರುವರಷ್ಟೆ. (ಪರಂತು ಆ ರೂಪಗಳನ್ನು ನೀನು ತಿಳಿಯಬೇಕೆಂದು ಹೇಳಿರು ವರಾದರೂ ಅದು ನಿನಗೆ ಉಪಾಸನೆಗೆ ಉಪಯುಕ್ತವಾಗುವುದಿಲ್ಲ. ನಾನು ನಿನಗೆ ಉಪಾಸ್ಯರೂಪವನ್ನೂ, ಶ್ರೀಹರಿಯ ಸಾಮೀಪ್ಯವನ್ನು ಹೊಂದಲಿಕ್ಕೆ ಉಪಾಯಭೂತವಾದ ಮಾರ್ಗವನ್ನೂ ಹೇಳುವೆನೆಂದರು. ಹೇಗೆ ತಾವರೆಯ ಎಲೆಯಲ್ಲಿ ನೀರನ್ನು ಹಾಕಿದರೆ ಅದು ಅದಕ್ಕೆ ಅಂಟಿಕೊಳ್ಳುವುದಿಲ್ಲವೋ, ಅಂತೆಯೇ

ಅಪರೋಕ್ಷಜ್ಞಾನಿಗೆ ಪಾಪಕರ್ಮವು ಅಂಟಿಕೊಳ್ಳುವುದಿಲ್ಲ. ಅಂದರೆ—ಯಾವ ಶ್ರೀಹರಿಯ ಜ್ಞಾನದಿಂದ ಪಾಪಸಂಬಂಧವಿಲ್ಲದಿರುವ ಮುಕ್ತಿಯಾಗುತ್ತದೋ ಆ ಶ್ರೀಹರಿಯನ್ನು ನಾನು ನಿನಗೆ ಉಪದೇಶಿಸುವೆನೆಂದು ಗುರುಗಳು ಹೇಳಿದರು. ಆಗ ಉಪಕೋಸಲನು ಗುರುಗಳೇ ಉಪದೇಶಿಸಿರಿ ಎಂದಾಗ ಗುರುಗಳಾದ ಸತ್ಯಕಾಮರು ಉಪಕೋಸಲನಿಗೆ ಉಪದೇಶಿಸಿದರು. ॥ ೬—೧೪ ॥ ॥ ೩ ॥

**ಹದಿನಾಲ್ಕನೇ ಖಂಡವು ಮುಗಿಯಿತು.**

---

## ೧೫ನೇ ಖಂಡವು

ಪೀ—ಗುರುಗಳು ಉಪದೇಶಿಸಿದ ವಿದ್ಯೆಯನ್ನು ವೇದವು ಹೇಳುತ್ತದೆ—

**ಉ. ॥ ಯ ಏಷೋಽಂತರಕ್ಷಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಸ್ಮಿನ್ನ ಕಿಂಚನ ಶ್ಲಿಷ್ಯತಿ ತದ್ಯದ್ಯಪ್ಯಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ॥ ೧ ॥**

ಅ ॥ ಕಣ್ಣಿನೊಳಗೆ ಪೂರ್ಣಗಳಾದ ಆರು ಗುಣಗಳಿರುವುದರಿಂದ ಪುರುಷನೆನಿಸಿಕೊಂಡವನು ಯಾವನು ದಿವ್ಯದೃಷ್ಟಿಗೆ ಗೋಚರನಾಗಿದ್ದಾನೋ. ಈತನು ಪೂರ್ಣ ಸುಖಸ್ವರೂಪನಾದುದರಿಂದ ಆತ್ಮನೆನಿಸಿದ ವಾಮನನು, ಎಂದು ಗುರುಗಳು ಹೇಳಿದರು ಈ ಕಣ್ಣಿನೊಳಗಣ ಪುರುಷನು ಸ್ವತ ಏವ ನಿತ್ಯಮುಕ್ತನು. ಸ್ವತಃ ಭಯವಿಲ್ಲದವನು. ಗುಣಪರಿಪೂರ್ಣನು, ಅಸಂಗನು. ಅಂದರೆ—ಯಾವುದರ ಸಂಗವೂ ಇಲ್ಲದವನೂ, ಕಣ್ಣು ಅಸಂಗನಾದ ಶ್ರೀಹರಿಗೆ ಸ್ಥಾನವಾಗಿರುವುದರಿಂದ ಕಣ್ಣಿಗೆ ಯಾವನಾದರೂ ತುಪ್ಪ, ನೀರು ಅಥವಾ ಬೇರೆ ಯಾವುದನ್ನಾದರೂ ಹಾಕಿದರೆ—ಅದು ಕಣ್ಣಿನಲ್ಲಿ ಅಂಟಿಕೊಳ್ಳದೆ ಮೇಲುಕೆಳಗಿನ ರೆಪ್ಪೆಗಳ ಮಾರ್ಗದಲ್ಲಿ ಇಳಿದುಹೋಗುತ್ತವೆ. ॥ ೧ ॥

ಪೀ—ಹೀಗೆ ಶ್ರೀಹರಿಯ ಸ್ಥಾನಶಕ್ತಿಯನ್ನು ಹೇಳಿ ಸ್ವರೂಪಶಕ್ತಿಯನ್ನು ಹೇಳುತ್ತಾರೆ—

**ಉ. ॥ ಏತꣳ ಸಂಯದ್ವಾಮ ಇತ್ಯಾಚಕ್ಷತ ಏತꣳ ಹಿ ಸರ್ವಾಣಿ ವಾಮಾನ್ಯಭಿಸಂಯಂತಿ ಸರ್ವಾಣ್ಯೇನಂ ವಾಮಾನ್ಯಭಿಸಂಯಂತಿ ಯ ಏವಂ ವೇದ ॥ ೨ ॥**

ಅ ॥ ಎಲ್ಲಾ ಮಂಗಲಗಳು ಅಥವಾ ಸೌಂದರ್ಯಗಳು ಕಣ್ಣಿನೊಳಗಣ ವಾಮನನನ್ನೇ ಹೊಂದಿರುವುದರಿಂದ ಈತನನ್ನು ಜ್ಞಾನಿಗಳು ಸಂಯದ್ವಾಮನೆನ್ನುತ್ತಾರೆ. ಹೀಗೆ ತಿಳಿದು ಉಪಾಸನೆ ಮಾಡುವವನಿಗೆ ಎಲ್ಲಾ ಮಂಗಲಗಳೂ ಸೌಂದರ್ಯಗಳೂ ಬರುತ್ತವೆ. ॥ ೨ ॥

**ಉ. ॥ ಏಷ ಉ ಏವ ವಾಮನೀರೇಷ ಹಿ ಸರ್ವಾಣಿ ವಾಮಾನಿ ನಯತಿ ಸರ್ವಾಣಿ ವಾಮಾನಿ ನಯತಿ ಯ ಏವಂ ವೇದ ॥ ೩ ॥**

ಅ || ಚಕ್ಷುರೊಳಗಣ ಶ್ರೀಹರಿಯು, ಸೌಂದರ್ಯಪ್ರಧಾನರಾದ ಸ್ತ್ರೀಯರ ಸಮೂಹಗಳಿಗೆ ಪ್ರೇರಕನಾದುದರಿಂದ ವಾಮನಿಃ ಎನಿಸುತ್ತಾನೆ. ಹೀಗೆ ತಿಳಿದು ಉಪಾಸನೆಮಾಡುವವನು ಈ ಲೋಕದಲ್ಲಿಯೂ ಮೋಕ್ಷದಲ್ಲಿಯೂ ಅನೇಕ ಸ್ತ್ರೀಯರಿಗೆ ಅಧಿಪತಿಯಾಗಿರುತ್ತಾನೆ. || ೩ ||

**ಉ. || ಏಷ ಉ ಏವ ಭಾಮನೀರೇಷ ಹಿ ಸರ್ವೇಷು ಲೋಕೇಷು ಭಾತಿ ಸರ್ವೇಷು ಲೋಕೇಷು ಭಾತಿ ಯ ಏವಂ ವೇದ || ೪ ||**

ಅ || ಚಕ್ಷುರೊಳಗಣ ಶ್ರೀಹರಿಯೇ ಕಾಂತಿಪ್ರಧಾನರಾದ ಪುರುಷರ ಸಮೂಹಗಳಿಗೆ ಪ್ರೇರಕನಾದುದರಿಂದ ಮತ್ತು ಸಮಸ್ತಲೋಕಗಳಲ್ಲಿ ಪ್ರಕಾಶಿಸುವುದರಿಂದ ಭಾಮನಿಃ ಎನಿಸುತ್ತಾನೆ. (ಸಮಸ್ತ ಪುರುಷರಿಗೆ ಪ್ರೇರಕನು) ಹೀಗೆ ತಿಳಿದವನು ಸಮಸ್ತಲೋಕಗಳಲ್ಲಿ ಪ್ರಕಾಶಿಸುತ್ತಾನೆ. || ೪ ||

ಪೀ—ಕಣ್ಣಿನೊಳಗಣ ಶ್ರೀಹರಿಯನ್ನು ತಿಳಿದವನ ಮಹಿಮೆಯನ್ನು ಪ್ರಕಾಶಗೊಳಿಸುತ್ತಾ ಅವನ ಸದ್ಗತಿಮಾರ್ಗವನ್ನು ಹೇಳುತ್ತಾರೆ—

**ಉ. || ಅಥ ಯದು ಚೈವಾಸ್ಮಿಂಚ್ಛವ್ಯಂ ಕುರ್ವಂತಿ ಯದು ಚ ನಾರ್ಚಿಷಮೇವಾಭಿಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ ಷಡುದಙ್ಙೇತಿ ಮಾಸಾꣳಸ್ತಾನ್ ಮಾಸೇಭ್ಯಸ್ಸಂವತ್ಸರꣳ ಸಂವತ್ಸರಾದಾದಿತ್ಯಮಾದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರುಷೋ ಮಾನವಃ || ೫ ||**

ಅ || ಕಣ್ಣಿನೊಳಗಣ ಶ್ರೀಹರಿಜ್ಞಾನಿಯು ಮರಣವನ್ನು ಹೊಂದುತ್ತಿರಲು ಶವಸಂಬಂಧಿಯಾದ ದಹನ ಮೊದಲಾದ ಉತ್ತರಕ್ರಿಯೆಯನ್ನು ಮಾಡಿದರೂ ಮಾಡದಿದ್ದರೂ ಜ್ಞಾನಿಗಳು (ತಮ್ಮ ಜ್ಞಾನದಿಂದ ಸಂತುಷ್ಟನಾದ ಶ್ರೀಹರಿಯ ಸಾಮರ್ಥ್ಯದಿಂದ ಬ್ರಹ್ಮನಾಡಿಯ ಮಾರ್ಗವಾಗಿ ದೇಹದಿಂದ ಹೊರಟು ಹೋದವರಾಗಿ) ಅರ್ಚಿಃ ಎನ್ನುವ ಊರ್ಧ್ವಲೋಕಕ್ಕೆ ಹೋಗುತ್ತಾರೆ. (ಅಲ್ಲಿ ಕೆಲವು ಕಾಲ ನಿಂತು ಪೂಜಿಸಲ್ಪಟ್ಟವರಾಗಿ) ಆ ಅರ್ಚಿರ್ಲೋಕದಿಂದ (ಆತಿವಾಹಿಕ ಎನ್ನುವ ವಾಯುಲೋಕಕ್ಕೆ ಹೋಗಿ ಅಲ್ಲಿಂದ) ಅಹರಭಿಮಾನಿದೇವತಾಲೋಕಕ್ಕೆ ಹೊಗುತ್ತಾರೆ. ಅಲ್ಲಿಂದ ಶುಕ್ಲಪಕ್ಷಾಭಿಮಾನಿ ದೇವತಾಲೋಕಕ್ಕೂ, ಅಲ್ಲಿಂದ ಉತ್ತರಾಯಣಾಭಿಮಾನಿ ದೇವತಾಲೋಕಕ್ಕೂ, ಅಲ್ಲಿಂದ ಸಂವತ್ಸರಾಭಿಮಾನಿ ದೇವತಾಲೋಕಕ್ಕೂ. ಅಲ್ಲಿಂದ (ತಟಿಲ್ಲೋಕ, ವರುಣಲೋಕ, ಪ್ರಜಾಪತಿ ಲೋಕಗಳಿಗೆ ಕ್ರಮದಿಂದ ಹೋಗಿ ಅಲ್ಲಿಂದ) ಆದಿತ್ಯಲೋಕಕ್ಕೂ, ಆ ಲೋಕದಿಂದ ಚಂದ್ರಲೋಕಕ್ಕೂ, ಅಲ್ಲಿಂದ (ವೈಶ್ವಾನರ ಇಂದ್ರ, ಧ್ರುವಲೋಕಗಳನ್ನು ಹೊಂದಿ) ವಿದ್ಯುತ್ ಎನ್ನಿಸುವ ಭಾರತಿಯ ಲೋಕಕ್ಕೂ ಹೋಗುತ್ತಾರೆ. ಅಲ್ಲಿಂದ ಭಾರತೀಪತಿಯಾದ ವಾಯುವಿನ ಲೋಕಕ್ಕೆ ಹೋಗುತ್ತಾರೆ || ೫ ||

**ಉ. || ಸ ಏನಾನ್ ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಖಲು ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ || ಇತಿ ಪಂಚದಶಃ ಖಂಡಃ || ೬-೧೫ || || ೬ ||**

ಅ || ಮುಖ್ಯವಾಯುದೇವರು ಕಣ್ಣಿನೊಳಗಣ ಪುರುಷ ಜ್ಞಾನಿಗಳನ್ನು (ಪ್ರತೀಕಾಲಂಬನರನ್ನು) ಅಪರ ಬ್ರಹ್ಮನ (ಚತುರ್ಮುಖ ಬ್ರಹ್ಮನ) ಸಮೀಪಕ್ಕೂ, ಅಪ್ರತೀಕಾಲಂಬನರನ್ನು ಪರಬ್ರಹ್ಮನ ಸಮೀಪಕ್ಕೂ

ಹೊಂದಿಸಿಕೊಡುತ್ತಾರೆ. *ಪರಬ್ರಹ್ಮನನ್ನು ಹೊಂದತಕ್ಕ ಮಾರ್ಗವು ಅಭಿಮಾನಿಗಳಾದ ಆಯಾಯ ದೇವತೆಗಳ ಅಧೀನದಲ್ಲಿ ಇರುತ್ತದೆ. ಈ ಅರ್ಚಿರಾದಿಮಾರ್ಗದಿಂದ ಪರಬ್ರಹ್ಮನನ್ನು ಹೊಂದುತ್ತಾರೆ. ಮನುಷ್ಯರು ಎಲ್ಲಿ ತಿರುಗಾಡಿಕೊಂಡಿರುತ್ತಾರೋ ಅಂತಹ ಜನನಮರಣಾದಿರೂಪವಾದ ಸಂಸಾರವನ್ನು ಹೊಂದುವುದಿಲ್ಲ ಅವರು ಮುಕ್ತರೇ ಆಗುತ್ತಾರೆ. ‖ ೬ ‖

ಟೀ—೧೧ನೇ ಖಂಡದಲ್ಲಿದ್ದ ಪೃಥಿವ್ಯಾದಿಶಬ್ದಗಳ ಅರ್ಥಹೇಳುತ್ತಾರೆ—

**ಭಾ. ‖ (೧) ಪೃಥುತ್ವಾತ್ಪೃಥಿವೀ ವಿಷ್ಣುರಗ್ನಿಶ್ಚಾಪ್ಯಂಗನೇತೃತಃ । ಅನ್ನಮತ್ತೃತ್ವತೋ ನಿತ್ಯಮಾದಿತ್ಯಶ್ಚಾದಿರೂಪತಃ ‖ (೨) ಆಪ ಆಪಾಲನಾಚ್ಚೈವ ದೇಶನಾದ್ದಿಶ ಏವ ಚ । ಅನನ್ಯರಾಜೋ ನಕ್ಷತ್ರಮಾನಂದತ್ವಾಚ್ಚ ಚಂದ್ರಮಾಃ ‖ (೩) ಪ್ರಾಣೋಽಸೌ ಬಲರೂಪತ್ವಾದಾಕಾಶಃ ಪೂರ್ತಿಹೇತುತಃ । ದ್ಯೌಃ ಪ್ರಕಾಶಸ್ವರೂಪತ್ವಾದ್ವೇದನಾದ್ವಿದ್ಯುದೇವ ಚ ‖ (೪) ಯುಸ್ಸೂರ್ಯಸೋಮವಿದ್ಯುತ್ಸು ತತ್ತನ್ನಾಮಾ ಹರಿಃ ಪರಃ । ಅಹೇಯತ್ವಾದಹಂನಾಮಾ ಗಾರ್ಹಪತ್ಯಾದಿಸಂಸ್ಥಿತಃ ‖ ಇತಿ ತತ್ತ್ವಸಂಹಿತಾಯಾಂ ‖ ೧ ‖**

ಅ ‖ (೧) ವಿಷ್ಣುವು ಸರ್ವತ್ರ ವ್ಯಾಪ್ತನಾದುದರಿಂದ ಪೃಥಿವೀ ಎಂದೂ, ಶರೀರಕ್ಕೆ ಅಥವಾ ಅಪ್ರಧಾನವಾದ ಜಗತ್ತಿಗೆ ಪ್ರೇರಕನಾದುದರಿಂದ ಅಗ್ನಿಯೆಂದೂ, ಸರ್ವಭಕ್ಷಕನಾದುವರಿಂದ ಅನ್ನನೆಂದೂ, ಕಾರಣರೂಪನಾದುದರಿಂದ ಅಥವಾ ಆದಿಯಲ್ಲಿಯೇ ಇರತಕ್ಕವನಾದುದರಿಂದ ಆದಿತ್ಯನೆಂದೂ ಅನಿಸುತ್ತಾನೆ (೨) (೧೨ನೇ ಖಂಡದಲ್ಲಿದ್ದ ಆಪಃ ಇತ್ಯಾದಿಗಳ ಅರ್ಥಹೇಳುತ್ತಾರೆ—) ಶ್ರೀಹರಿಯು ಚೆನ್ನಾಗಿ ರಕ್ಷಿಸುವುದರಿಂದ ಆಪಃ ಎಂದೂ, ಭಕ್ತರಿಗೆ ಅಭೀಷ್ಟವನ್ನು ಕೊಡುವವನಾದುದರಿಂದ ದಿಶಃ ಎಂದೂ, ತನಗೆ ಇನ್ನೊಬ್ಬ ನಿಯಾಮಕನಿಲ್ಲದಿರುವುದರಿಂದ ನಕ್ಷತ್ರನೆಂದೂ, ಆನಂದ ಸ್ವರೂಪನಾದುದರಿಂದ ಚಂದ್ರನೆಂದೂ ಅನಿಸುತ್ತಾನೆ. (೩) (೧೩ನೇ ಖಂಡದ ಪ್ರಾಣಾದಿ ಶಬ್ದಗಳ ಅರ್ಥಹೇಳುತ್ತಾರೆ—) ಶ್ರೀಹರಿಯು ಬಲರೂಪನಾದುದರಿಂದ ಪ್ರಾಣನೆಂದೂ, ಪದಾರ್ಥಗಳನ್ನು ತುಂಬಿಸಲಿಕ್ಕೆ ಅವಕಾಶವನ್ನು ಕೊಡುವುದರಿಂದ ಅಥವಾ ಪೂರ್ಣತೆಗೆ ಕಾರಣನಾದುದರಿಂದ ಆಕಾಶನೆಂದೂ, ಪ್ರಕಾಶ ಸ್ವರೂಪನಾದುದರಿಂದ ದ್ಯೌಃ ಎಂದೂ, ಜ್ಞಾನದಾಯಕನಾದುದರಿಂದ ವಿದ್ಯುತ್ ಎಂದೂ ಎನಿಸುತ್ತಾನೆ. (೪) (೧೧ನೇ ಖಂಡದಲ್ಲಿದ್ದ **ಯ ಏಷ ಆದಿತ್ಯೇ,** ೧೨ನೇ ಖಂಡದಲ್ಲಿದ್ದ **ಯ ಏಷ ಚಂದ್ರಮಸಿ,** ೧೩ನೇ ಖಂಡದಲ್ಲಿದ್ದ **ಯ ಏಷ ವಿದ್ಯುತಿ** ಎಂಬ ಮೂರು ವಾಕ್ಯಗಳಲ್ಲಿ ಗಾರ್ಹಪತ್ಯಾದಿಗಳಿಗೂ ಆದಿತ್ಯಾದಿಗಳಿಗೂ ಐಕ್ಯವು ಹೇಳಲ್ಪಡುತ್ತದೆಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ—) ಸೂರ್ಯ, ಚಂದ್ರ, ಮಿಂಚು ಇವುಗಳಲ್ಲಿದ್ದು ಸೂರ್ಯ, ಚಂದ್ರ, ವಿದ್ಯುತ್ ಎನಿಸಿಕೊಂಡ ಸರ್ವೋತ್ತಮನಾದ ಶ್ರೀಹರಿಯೇ ಯಾರಿಂದಲೂ ಬಿಡಲ್ಪಡದಿರುವುದರಿಂದ ಅಹಂ ಎನಿಸಿಕೊಂಡವನಾಗಿ ಗಾರ್ಹಪತ್ಯಾದಿಗಳಲ್ಲಿರುತ್ತಾನೆ, ಎಂದು ತತ್ತ್ವಸಂಹಿತೆಯಲ್ಲಿ ಹೇಳಿದೆ. ‖ ೧ ‖

* (೧) **ಪ್ರತೀಕಂ ದೇಹ ಉದ್ದಿಷ್ಟಃ ಯೇಷಾಂ ತತ್ರೈವ ದರ್ಶನಂ** । ನ ತು ವ್ಯಾಪ್ತತಯಾ ಕ್ವಾಪಿ ಪ್ರತೀಕಾಲಂಬನಾಸ್ತು ತೇ ‖ ಎಂಬ ಪ್ರಮಾಣದಿಂದ ದೇಹ ಇಂದ್ರಿಯಾದಿಗಳಲ್ಲಿಯೇ ಪರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡವರು ಪ್ರತೀಕಾಲಂಬನರು. (೨) **ಅಪ್ರತೀಕಾ ದೇವತಾಸ್ತು ಋಷೀಣಾಂ ಶತಮೇವ ಚ । ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾಣಾಂ ಶತಂ ತಥಾ । ಏತೇಽಧಿಕಾರಿಣೋ ವ್ಯಾಪ್ತದರ್ಶನೇಽನ್ಯೇ ನ ತು ಕ್ವಚಿತ್** ‖ ಎಂಬ ಪ್ರಮಾಣದಿಂದ **ದೇವತೆಗಳು,** ೧೦೦ ಋಷಿಗಳು, ೧೦೦ ರಾಜರು, ೧೦೦ ಗಂಧರ್ವರು ಇವರು ಅಪ್ರತೀಕಾಲಂಬನರು ಈ ಅಧಿಕಾರಿಗಳು ಸರ್ವತ್ರ ವ್ಯಾಪ್ತವಾದ ಭಗವದ್ರೂಪವನ್ನು ಉಪಾಸನೆ ಮಾಡಲಿಕ್ಕೆ ಯೋಗ್ಯರು ಬೇರೆ ಯಾರೂ ವ್ಯಾಪ್ತ ಭಗವದ್ರೂಪೋಪಾಸನೆಗೆ ಯೋಗ್ಯರಲ್ಲ. (೩) ಸಪ್ರತೀಕಾಶ್ಚತುರ್ಮುಖಮಪ್ರತೀಕಾಃ ಪರಮಿಹೈತೇ ಗಚ್ಛಂತಿ ಎಂದು ವೇದವು.

ಪೀ—ಆದಿತ್ಯನೊಳಗಣ ಶ್ರೀಹರಿಗೂ ಗಾರ್ಹಪತ್ಯನೊಳಗಣ ಶ್ರೀಹರಿಗೂ ಐಕ್ಯ ಹೇಳಲಿಕ್ಕೆ ಈ ವಾಕ್ಯಗಳು ಹೊರಟವೆ ಎಂದು ಏಕೆ ಹೇಳುವುದು? ಗಾರ್ಹಪತ್ಯಾದಿ ಜೀವರಿಗೆ ಆದಿತ್ಯಾದಿ ಜೀವರಿಂದ ಐಕ್ಯವೇ ಹೇಳಲ್ಪಡುತ್ತದೆಂದು ಏಕೆ ಆಗಲಾರದೆಂದರೆ—

**ಭಾ. || (೧) ಜೀವೈಕ್ಯಪಕ್ಷೇ ಆದಿತ್ಯೇ ಪುರುಷಃ ಚಂದ್ರಮಸಿ ವಿದ್ಯುತೀತಿ ಭೇದ-ವ್ಯಪದೇಶೋ ನ ಯುಜ್ಯತೇ || (೨) ಪೃಥಿವ್ಯಗ್ನಿರನ್ನಮಾದಿತ್ಯ ಆದಿತ್ಯೇ ಪುರುಷ ಇತ್ಯಾದಿನಾ ಆದಿತ್ಯಾದಿಶಬ್ದವಾಚ್ಯೌ ಸಪ್ತಮ್ಯರ್ಥಃ ಪ್ರಥಮಾರ್ಥಶ್ಚ ದ್ವೌ ಪ್ರತೀಯೇತೇ । ಅತೋ ನೈಕ್ಯಮುಚ್ಯತೇ || (೩) ಸ ಏವಾಹಮಸ್ಮೀತ್ಯಂತರ್ಯಾಮಿಣೋಃ ಸರ್ವವಿಶೇಷಾಭಾವಜ್ಞಾ-ಪನಾರ್ಥಃ(ರ್ಥಂ)|| (೪) ಪೂರ್ವಂ ಸೋऽಹಮಸ್ಮೀತ್ಯಭೇದೇ ತಾತ್ಪರ್ಯಾಧಿಕ್ಯಜ್ಞಾಪನಾ-ಯ || (೫) ಅಹಮಸ್ಮ್ಯಾದಿಕಾಃ ಶಬ್ದಾ ಅಂತರ್ಯಾಮಿಣಿ ಮುಖ್ಯತಃ । ತತ್ಸಂಬಂಧಾಜ್ಜೀ-ವಗಾಶ್ಚ ತಸ್ಮಾದ್ಭೇದಗತಾ ಹರೌ || (೬) ಅಸ್ಮಚ್ಛಬ್ದೋದಿತೋऽಂತಃಸ್ಥ ಆತ್ಮಾ ವ್ಯಾಪ್ತೋ ಜನಾರ್ದನಃ । ಅಗ್ನಯೋ ದ್ವಿವಿಧಂ ವಿಷ್ಣುಮುಪೋಚನ್ನುಪಕೋಸಲೇ || ಇತಿ ಸಾಮಸಂ-ಹಿತಾಯಾಂ || ೨ ||**

ಅ || (೧) ಗಾರ್ಹಪತ್ಯಾದಿ ಜೀವರಿಗೂ ಆದಿತ್ಯಾದಿ ಜೀವರಿಗೂ ಐಕ್ಯವನ್ನು ಹೇಳುವುದೆಂದಂಗೀ ಕರಿಸಿದರೆ—ಆದಿತ್ಯೇ ಪುರುಷಃ ಆದಿತ್ಯನಲ್ಲಿ ಪುರುಷನು, ಚಂದ್ರಮಸಿ ಪುರುಷಃ ಚಂದ್ರನಲ್ಲಿ ಪುರುಷನು, ವಿದ್ಯುತಿ ಪುರುಷಃ ಮಿಂಚಿನಲ್ಲಿ ಪುರುಷನು ಎಂದು ಸಪ್ತಮೀ ವಿಭಕ್ತಿಯಿಂದ ಭೇದ ಹೇಳಿದ್ದು ಕೂಡ ಲಾರದು. (ಅಂದರೆ—ಹಿಂದೆ ಹೇಳಿದ ಪ್ರಕಾರ ಜೀವರಿಗೆ ಐಕ್ಯವು ಇಷ್ಟವಾಗಿದ್ದರೆ—ಆದಿತ್ಯಃ ಪುರುಷಃ ಆದಿತ್ಯನು ಪುರುಷನು, ಚಂದ್ರಮಾಃ ಪುರುಷಃ ಚಂದ್ರನು ಪುರುಷನು, ಎಂದು ಪ್ರಥಮಾವಿಭಕ್ತಿಯನ್ನು ಹೇಳಬೇಕಿತ್ತು. ಆದಿತ್ಯೇ ಪುರುಷಃ ಇತ್ಯಾದಿಪ್ರಕಾರ ಸಪ್ತಮೀ ವಿಭಕ್ತಿಯನ್ನು ಹೇಳಿದ್ದು ಕೂಡದೆ ಹೋಗುವುದು. ಪರಂತು. ಆದಿತ್ಯನೊಳಗಣ ಪುರುಷರಿಗೆ ಐಕ್ಯವು ಲಭಿಸಿದರೂ ಆದಿತ್ಯಾದಿ ಜೀವರಿಗೆ ಐಕ್ಯವು ಲಭಿಸುವುದಿಲ್ಲ. ಆದಿತ್ಯಾದಿ ಶಬ್ದಗಳು ಸೂರ್ಯಮಂಡಲ ಮೊದಲಾದ ಆಯಾಯ ಮಂಡಲವನ್ನು ಮಾತ್ರ ಹೇಳುತ್ತವೆಂದಂಗೀಕರಿಸಿದರೆ ವ್ಯರ್ಥವಾಗಿ ಮುಖ್ಯಾರ್ಥವನ್ನು ಬಿಟ್ಟಂತೆ ಆಗುವುದು.) (೨) (**ಪೃಥಿವ್ಯಗ್ನಿರನ್ನಮಾದಿತ್ಯಃ** ಇತ್ಯಾದಿಗಳಲ್ಲಿ ಹೇಳಿದ ಆದಿತ್ಯಾದಿಗಳೇ **ಯ ಏಷ ಆದಿತ್ಯೇ** ಇದುಮೊದಲಾದ ಮೇಲಿನ ವಾಕ್ಯದಲ್ಲಿ ಹೇಳಲ್ಪಡುತ್ತಾರೆಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ -) ಪೃಥಿವ್ಯಗ್ನಿಃ ಅನ್ನಮಾದಿತ್ಯಃ ಆದಿತ್ಯೇ ಪುರುಷಃ, ಇತ್ಯಾದಿ ವಾಕ್ಯಗಳಿಂದ ಸಪ್ತಮೀ ವಿಭಕ್ತಿಯಿಂದ ಹೇಳಲ್ಪಡುವವ ನೊಬ್ಬನು, ಪ್ರಥಮಾ ವಿಭಕ್ತಿಯಿಂದ ಹೇಳಲ್ಪಡುವವನಿನ್ನೊಬ್ಬನು, ಹೀಗೆ ಆದಿತ್ಯ ಮೊದಲಾದ ಶಬ್ದ ಗಳಿಂದ ಹೇಳಲ್ಪಡುವವರಿಬ್ಬರು ತೋರುತ್ತಾರೆ. (ಅದುಕಾರಣ ಈ ಪ್ರಕರಣದಲ್ಲಿ ಹಿಂದುಮುಂದಿನ ಆದಿತ್ಯಾದಿ ಶಬ್ದಗಳಿಂದ ಒಬ್ಬರು ಹೇಳಲ್ಪಡುವುದಿಲ್ಲ.) ಹೀಗೆ ಬಾಧಕವಿದ್ದ ಪ್ರಯುಕ್ತ **ಸೋऽಹಮಸ್ಮಿ** ಎಂಬ ವಾಕ್ಯದಿಂದ ಜೀವೈಕ್ಯವು ಹೇಳಲ್ಪಡುವುದಿಲ್ಲ. (೩) (೧೧, ೧೨, ೧೩ ಈ ಮೂರು ಖಂಡಗಳಲ್ಲಿಯೂ **ಸೋऽಹಮಸ್ಮಿ** ಎಂಬ ಹಿಂದಿನ ವಾಕ್ಯದಿಂದಲೇ ಚೇತನಗಳಿಗೆ ಐಕ್ಯವನ್ನು ಹೇಳಿದುದರಿಂದ **ಸ ಏವಾಹ ಮಸ್ಮಿ** ಎಂಬ ವಾಕ್ಯವು ವ್ಯರ್ಥವೆಂದರೆ–) **ಸ ಏವಾಹಮಸ್ಮಿ** ಎಂಬ ವಾಕ್ಯವು ಆದಿತ್ಯಾದಿಗಳೊಳಗಣ ಶ್ರೀಹರಿಗೂ, ಗಾರ್ಹಪತ್ಯಾದಿಗಳೊಳಗಣ ಶ್ರೀಹರಿಗೂ ಯಾವುದೊಂದು ಅತ್ಯಲ್ಪವಾದ ವಿಶೇಷವೂ ಇಲ್ಲವೇ ಇಲ್ಲ, ಎಂದು ತಿಳಿಸಿಕೊಡುವುದಕ್ಕಾಗಿ. (ಅಂದರೆ–ಧರ್ಮನೇ ವಿದುರನು ಇಂದ್ರನೇ ಅರ್ಜುನನು, ಇವರಿಗೆ ಐಕ್ಯವಿದ್ದರೂ ಸ್ವಲ್ಪ ವಿಶೇಷವಿದೆ. ಧರ್ಮನಿಗೆ ಇದ್ದುದೆಲ್ಲವೂ ವಿದುರನಿಗೆ ಇಲ್ಲ. ವಿದುರನಿಗೆ ಇದ್ದು ದೆಲ್ಲವೂ ಯಮನಿಗೆ ಇಲ್ಲ. ಹಾಗೆಯೇ ಇಂದ್ರನಿಗೆ ಇದ್ದುದೆಲ್ಲವೂ ಅರ್ಜುನನಿಗೆ ಇಲ್ಲ. ಅರ್ಜುನನಿಗೆ

ಇದ್ದುದೆಲ್ಲವೂ ಇಂದ್ರನಿಗೆ ಇಲ್ಲ. ಹೀಗೆಯೇ ಇಲ್ಲಿಯೂ **ಸೋಽಹಮಸ್ಮಿ** ಎಂದು ಗಾರ್ಹಪತ್ಯಾದಿಗಳೊಳಗಣ ಶ್ರೀಹರಿಗೆ ಸೂರ್ಯಾದಿಗಳೊಳಗಣ ಶ್ರೀಹರಿಯಿಂದ ಐಕ್ಯ ಹೇಳಿದರೆ—ಧರ್ಮ ವಿದುರ, ಇಂದ್ರ ಅರ್ಜುನ, ಇತ್ಯಾದಿಗಳಂತೆಯೇ ಐಕ್ಯವೆಂದು ಶಂಕಾ ಬರುವುದು. ಅದನ್ನು ಹೋಗಲಾಡಿಸುವುದಕ್ಕಾಗಿ **ಸ ಏವಾಹಮಸ್ಮಿ** ಅವನೇ ನಾನಾಗಿರುತ್ತೇನೆ ಎಂದು ಹೇಳಿದ್ದು. ಈ ಭಗವದ್ರೂಪಗಳಿಗೆ ಅಲ್ಪವೂ ವಿಶೇಷವಿಲ್ಲದ ಐಕ್ಯವು ಎಂದು ತಿಳಿಸುವುದಕ್ಕಾಗಿ **ಸ ಏವಾಹಮಸ್ಮಿ** ಎಂದು ಹೇಳಿದ್ದು. (೪) (ಹಾಗಾದರೆ—ಸ **ಏವಾಹಮಸ್ಮಿ** ಎಂಬ ವಾಕ್ಯದಿಂದಲೇ ಯಾವುದೊಂದು ವಿಶೇಷವೂ ಇಲ್ಲದ ಪೂರ್ಣಾಭೇದವು ಸಿದ್ಧಿಸುವುದರಿಂದ **ಸೋಽಹಮಸ್ಮಿ** ಎಂಬ ಹಿಂದಿನ ವಾಕ್ಯವು ವ್ಯರ್ಥವೆಂದರೆ—) ಆ ಅಂತರ್ಯಾಮಿ ರೂಪಗಳಿಗೆ ಅಭೇದವೆಂದು ಹೇಳುವುದರಲ್ಲಿ **ಸೋಽಹಮಸ್ಮಿ** ಎಂಬ ಹಿಂದಿನ ವಾಕ್ಯಕ್ಕೆ ಮುಖ್ಯ ತಾತ್ಪರ್ಯವಿದೆ ಎಂದು ತಿಳಿಸಿಕೊಡುವುದಕ್ಕಾಗಿ ಆ ವಾಕ್ಯವು ಹೊರಟಿದೆ. (೫) (ಅಂತರ್ಯಾಮಿಯಲ್ಲಿ ಅಹಂ ಮೊದಲಾದ ಶಬ್ದಗಳು ಇವೆ ಎಂಬಲ್ಲಿ ಸ್ಮೃತಿ ಹೇಳುತ್ತಾರೆ—) ಅಹಂ ಅಸ್ಮಿ ಮೊದಲಾದ ಶಬ್ದಗಳು ಮುಖ್ಯವಾಗಿ ಅಂತರ್ಯಾಮಿಯಲ್ಲಿಯೇ ಇರುತ್ತವೆ. ಆ ಶಬ್ದಗಳು ಅಂತರ್ಯಾಮಿಯ ಸಂಬಂಧದಿಂದಲೇ ಜೀವರಲ್ಲಿರುತ್ತವೆ. ಅದುಕಾರಣ ವೇದಗಳಲ್ಲಿರುವ **ಅಹಂ ಅಸ್ಮಿ** ಮೊದಲಾದ ಶಬ್ದಗಳು ಜೀವರೊಳಗಣ ಭಗವದ್ರೂಪವನ್ನು ಹೇಳುತ್ತವೆ. (ಮುಖ್ಯಾರ್ಥವು ಕೂಡದಿರುವ ಸ್ಥಳದಲ್ಲಿಯೇ ಅಮುಖ್ಯವಾದ ಅರ್ಥವನ್ನು ಇಟ್ಟುಕೊಳ್ಳಬೇಕು.) (೬) (೧೦ನೇ ಖಂಡದಲ್ಲಿ **ಪ್ರಾಣೋ ಬ್ರಹ್ಮ ಕಂ** ಎಂಬ ವಿದ್ಯೆಯನ್ನು ೧೧ನೇ ಖಂಡದಲ್ಲಿ **ಪೃಥಿವ್ಯಗ್ನಿರನ್ನಮಾದಿತ್ಯಃ** ಇತ್ಯಾದಿ ವಿದ್ಯೆಗಳನ್ನು ಹೇಳಿ ಮೇಲಿನ ೧೪ನೇ ಖಂಡದಲ್ಲಿ **ಉಪಕೋಸಲೈಷಾ ಸೋಮ್ಯ ತೇಽಸ್ಮದ್ವಿದ್ಯಾ ಚಾತ್ಮವಿದ್ಯಾ ಚ** ಎಂದು ಹೇಳಿದುದರಿಂದ ಒಂದನೇದ್ದು ಬ್ರಹ್ಮವಿದ್ಯೆಯು, ಎರಡನೇದ್ದು ಅಗ್ನಿವಿದ್ಯೆಯೇ ಎಂದು ಪರರು ಹೇಳುವುದು ಆಯುಕ್ತವು. ಏಕೆಂದರೆ **ಅಹಂ** ಮೊದಲಾದ ಶಬ್ದಗಳು ಅಂತರ್ಯಾಮಿ ರೂಪವನ್ನು ಹೇಳುವುದರಿಂದ **ಅಸ್ಮದ್ವಿದ್ಯಾ** ಎಂಬುವುದಕ್ಕೆ ಅಂತರ್ಯಾಮಿವಿದ್ಯೆಯು ಎಂದರ್ಥವು. **ಆತ್ಮವಿದ್ಯಾ** ಎನ್ನುವುದಕ್ಕೆ **ಕಂ ಬ್ರಹ್ಮ** ಇತ್ಯಾದಿಗಳಿಂದ ಹೇಳಲ್ಪಟ್ಟ ವ್ಯಾಪ್ತನಾದ ಶ್ರೀಹರಿಯ ವಿದ್ಯೆಯು ಎಂದರ್ಥವೆನ್ನುತ್ತಾರೆ—ಅಸ್ಮದ್ವಿದ್ಯಾ ಎಂಬುವಲ್ಲಿ ಅಸ್ಮತ್‌ಶಬ್ದದಿಂದ ಹೇಳಲ್ಪಟ್ಟವನು ಅಂತರ್ಯಾಮಿಯು, ಆತ್ಮವಿದ್ಯಾ ಎಂಬಲ್ಲಿ ಆತ್ಮನೆಂದರೆ ವ್ಯಾಪ್ತನಾದ ಶ್ರೀಪರಮಾತ್ಮನು. ಹೀಗೆ ಅಂತರ್ಯಾಮಿಯೂ ವ್ಯಾಪ್ತನೂ ಆದ ಶ್ರೀಹರಿಯನ್ನು ಮೂರು ಅಗ್ನಿ ದೇವತೆಗಳು ಉಪಕೋಸಲನಿಗೆ ಉಪದೇಶಿಸಿರುವರು. ಎಂದು ಸಾಮಸಂಹಿತೆಯಲ್ಲಿ ಹೇಳಿದೆ. (ಮತ್ತು **ಪೃಥಿವ್ಯಗ್ನಿಃ** ಇತ್ಯಾದಿ ವಿದ್ಯೆಗಳನ್ನು ಹೇಳಿ **ಅಪಹತೇ ಪಾಪಕೃತ್ಯಾಂ** ಇತ್ಯಾದಿಗಳಿಂದ ಅಂತರ್ಯಾಮಿಯ ಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಿದೆ. ಅಗ್ನಿಜ್ಞಾನದಿಂದ ಮೋಕ್ಷವಾಗುವುದಿಲ್ಲ. ಅದುಕಾರಣ ಸರ್ವಾಂಗಗಳಿಗೂ ಪ್ರೇರಕನಾದ ಅಗ್ನ್ಯಂತರ್ಯಾಮಿಯ ಜ್ಞಾನದಿಂದಲೇ ಮೋಕ್ಷವೆಂದು ಅವಶ್ಯವಾಗಿ ಹೇಳಬೇಕು. ॥ ೨ ॥

**ಪೀ—ಅಪಹತೇ ಪಾಪಕೃತ್ಯಾಂ** ಎಂಬುದು ಮುಖ್ಯವಾದುದು ಸಂಸಾರಿಯಲ್ಲಿ ಕೂಡುವುದಿಲ್ಲ. ಅಂತೆಯೇ **ನಾಸ್ಯಾಪರಪುರುಷಾಃ ಕ್ಷೀಯಂತೇ** ಎಂಬ ವಾಕ್ಯವೂ ಮುಕ್ತರನ್ನು ಹೇಳುತ್ತದೆಂದೇ ತಿಳಿಸುತ್ತದೆ, ಎನ್ನುತ್ತಾರೆ—

**ಭಾ. ॥ (೧) ನಾಸ್ಯಾಪರಪುರುಷಾಃ ಕ್ಷೀಯಂತೇ ಭೃತ್ಯಾನಾನೇವ ಭವತಿ । ಲೋಕೀ ಭಗವಲ್ಲೋಕೀ ಭವತಿ ॥ (೨) ಇಹ ಚ ಅವ ಚ ಇಹಾವೇ । ಇಹೇತಿ ಮನುಷ್ಯಲೋಕಸ್ಥಾ ಉಚ್ಯಂತೇ ಅವೇತಿ ಪಾತಾಲಸ್ಥಾಃ । ಮಾನುಷಾಸುರೌ ಭಗವಂತಂ ನಿಹ್ನುತ ಏವ ನ ವಕ್ತುಂ ಸಮರ್ಥೌ । ಅತೋ ದೇವಾ ಏವ ಮಾಮನುಶಶಾಸುರಿತ್ಯರ್ಥಃ ॥ (೩) ಈದೃಶಾ ಇತಿ ವರ್ಣತೋ ಜ್ವಾಲಾವರ್ಣಾ ಇತಿ । ಅನ್ಯಾದೃಶಾಶ್ಚ ಕರಶಿರಶ್ಚರಣಾದಿಮಂತಃ ॥ (೪)**

**ಚಂದ್ರಾದಿಸರ್ವನಾಮವತ್ತ್ವಾತ್ । ಯೋ ದೇವಾನಾಂ ನಾಮಧಾ ಏಕ ಏವೇತಿ ಶ್ರುತೇಃ ವಿಷ್ಣೋರೇವ ಸರ್ವನಾಮಾನಿ ॥ ೩ ॥**

ಅ ॥ (೧) ಹಿಂದೆ ಹೇಳಿದ ಪ್ರಕಾರ ಉಪಾಸನೆ ಮಾಡುವವನಿಗೆ ಯಾವಾಗಲೂ ಭೃತ್ಯಜನರು ಇಲ್ಲವೆಂದಾಗುವುದಿಲ್ಲ. ಸರ್ವದಾ ಭೃತ್ಯರುಳ್ಳವನೇ ಆಗುತ್ತಾನೆ. ಸಂಸಾರಿಯು ಕೆಲವು ವೇಳೆ ಭೃತ್ಯರಿಲ್ಲದವನೂ ಆಗಿರುತ್ತಾನೆ. (ಅದುಕಾರಣ ಮುಕ್ತಪರವೆಂದೇ ಸಿದ್ಧಿಸುತ್ತದೆ.) **ಲೋಕೀ**=ವೈಕುಂಠ ಲೋಕವುಳ್ಳವನಾಗುತ್ತಾನೆ. (೨) (೧೪ನೇ ಖಂಡದ ೨ನೇ ಮಂತ್ರದಲ್ಲಿದ್ದ **ಇಹಾವೇ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಇಹ ಚ ಅವ ಚ ಇಹಾವೇ ಎಂದು ವಿಗ್ರಹವು. **ಇಹ** ಎಂಬುವುದರಿಂದ ಮನುಷ್ಯಲೋಕದಲ್ಲಿದ್ದ ಜನರನ್ನು, **ಅವ** ಎಂಬುದರಿಂದ ಪಾತಾಲಲೋಕದಲ್ಲಿದ್ದ ಜನರನ್ನು ಇಟ್ಟುಕೊಳ್ಳಬೇಕು. (ತಾತ್ಪರ್ಯ ಹೇಳುತ್ತಾರೆ—) ಮನುಷ್ಯರು ಮತ್ತು ಅಸುರರು ಶ್ರೀಹರಿಯನ್ನು ಅಪಲಾಪಮಾಡುತ್ತಾರೆ. (ಅಂದರೆ— ಮನುಷ್ಯರು ತಾವು ತಿಳಿಯದಿರುವುದರಿಂದಲೂ ಭ್ರಮೆಯುಳ್ಳವರಾದುದರಿಂದಲೂ ಇನ್ನೊಬ್ಬರಿಗೆ ತಿಳಿಸಲಾರರು. ಅಸುರರು ಸ್ವಭಾವತಃ ವಿಪರೀತ ಜ್ಞಾನವುಳ್ಳವರಾದುದರಿಂದಲೂ ವಿಷ್ಣುವೈಷ್ಣವರಲ್ಲಿ ದ್ವೇಷಿಗಳಾದುದರಿಂದಲೂ ಇನ್ನೊಬ್ಬರಿಗೆ ತಿಳಿಸಲಾರರು. ಅದು ಕಾರಣ ಭಗವತ್ಸ್ವರೂಪವನ್ನು ಹೇಳಲಿಕ್ಕೆ ಶಕ್ತರಲ್ಲ. ದೇವತೆಗಳೇ ನನಗೆ ಉಪದೇಶಿಸಿರುವರು. (೩) (೧೪ನೇ ಖಂಡದ ೨ನೇ ಮಂತ್ರದಲ್ಲಿದ್ದ ಈದೃಶಾಃ, ಅನ್ಯಾದೃಶಾಃ ಎಂಬುದಕ್ಕೆ ಅರ್ಥ ಹೇಳುತ್ತಾರೆ-) ಈದೃಶಾಃ=ಕಣ್ಣಿಗೆ ಕಾಣುವ ಲೋಕಪ್ರಸಿದ್ಧವಾದ ಜಡಾಗ್ನಿಯಂತೆ ಜ್ವಲಿಸುವ ಬಣ್ಣವುಳ್ಳವುಗಳು. ಅನ್ಯಾದೃಶಾಃ=ಜಡಾಗ್ನಿಗಿಂತ ಬೇರೆಯಾದವರು. ಕೈ, ಶಿರಸ್ಸು, ಕಾಲು ಮೊದಲಾದ ಅಂಗಗಳುಳ್ಳವರು. (೪) (೧೧ನೇ ಖಂಡದಲ್ಲಿದ್ದ **ಪೃಥಿವ್ಯಗ್ನಿಃ** ಇದುಮೊದಲಾದ ನಾಮಗಳು ವಿಷ್ಣುವಿಗೇನೇ ಇರುತ್ತವೆಂಬುವಲ್ಲಿ ಯುಕ್ತಿ ಹೇಳುತ್ತಾರೆ—) (ಇಲ್ಲಿ ದೇವತೆಗಳನ್ನು ಹೇಳುವ ಚಂದ್ರ, ಆದಿತ್ಯ, ವಿದ್ಯುತ್ ಶಬ್ದಗಳು ಇದ್ದುದರಿಂದ) ಅಗ್ನಿ ಪೃಥಿವೀ ಮೊದಲಾದ ಸರ್ವನಾಮಗಳು ವಿಷ್ಣುವಿಗೇನೇ. **ಯೋ ದೇವಾನಾಂ ನಾಮಧಾ ಏಕ ಏವ** ಎಂಬ ವೇದದಿಂದ ಚಂದ್ರ ಮೊದಲಾದ ಎಲ್ಲಾ ನಾಮಗಳು ಮುಖ್ಯವಾಗಿ ವಿಷ್ಣುವಿನಲ್ಲಿಯೇ ಇರುತ್ತವೆ. ಆ ನಾಮಗಳಿಗೆ ಅಮುಖ್ಯವಾಗಿ ಆಯಾಯ ದೇವತೆಗಳಲ್ಲಿ ವ್ಯವಹಾರವು. ಏವಂಚ ವಿಷ್ಣುವಿಗೇನೇ ಚಂದ್ರ ಮೊದಲಾದ ಸಮಸ್ತ ನಾಮಗಳಿವೆ ಎಂದು ತಿಳಿದುಬರುವುದರಿಂದ ಆತನಿಗೇನೇ ಪೃಥಿವೀ ಮೊದಲಾದ ಸಮಸ್ತ ನಾಮಗಳು ॥ ೩ ॥

ಪೀ—ಕಣ್ಣಿನೊಳಗಣನು ವಿಷ್ಣುವಾಗಿರುವುದರಿಂದ ೧೫ನೇ ಖಂಡದ ೧ನೇ ಮಂತ್ರದಲ್ಲಿ **ಏತಸ್ಮಿನ್ನ ಕಿಂಚನ ಶ್ಲಿಷ್ಯತಿ** ಎಂದು ಹೇಳಲ್ಪಟ್ಟ ಅಸಂಗನು ವಿಷ್ಣುವೇ, ಚಕ್ಷುಸ್ಸಲ್ಲ. ಅದುಕಾರಣ **ಯದ್ಯಪ್ಯಸ್ಮಿನ್ ಸರ್ಪಿರ್ವಾ** ಎಂಬ ವಾಕ್ಯದಲ್ಲಿ ಚಕ್ಷುಸ್ಸಿಗೆ ಅಸಂಗತ್ವ ಹೇಳಿದುದು ಅಸಂಗತವೆಂದರೆ—

**ಭಾ. ॥ (೧) ಅಸಂಗಭಗವತ್ಸ್ಥಾನತ್ವಾಚ್ಚಕ್ಷುಷೋಽಸಂಗತ್ವಮುಚ್ಯತೇ ॥ (೨) ಯಸ್ಥಾನತ್ವಾದಿದಂ ಚಕ್ಷುರಸಂಗಂ ಸರ್ವವಸ್ತುಷು । ತಸ್ಮೈ ನಮೋ ಭಗವತೇ ವಾಮನಾಯ ಪರಾತ್ಮನೇ ॥ ಇತಿ ಚ ಮಹಾಕೌರ್ಮೇ ॥ (೩) ಇಮಂ ಮಾನವಮಾವರ್ತಂ ನಾವರ್ತಂತೇ । ಮಾನವಾ ಯತ್ರಾವರ್ತಂತೇ ಸ ಮಾನವಾವರ್ತಃ । ತಂ ಮಾನವಾವರ್ತಂ ಪ್ರತಿ ನಾವರ್ತಂತೇ ॥ (೪) ಚಕ್ಷುಃಸ್ಥಂ ವಾಮನಂ ವೇದ ಸ ಪುನರ್ನೈವ ಜಾಯತೇ । ಮುಕ್ತೋ ದುಸ್ತರಸಂಸಾರಾದ್ವಾಮನಂ ಪ್ರಾಪ್ನುತೇಽಚಿರಾತ್ ॥ ಇತಿ ಚ ॥ ಇತಿ ಪಂಚದಶಃ ಖಂಡಃ ॥ ೬—೧೫ ॥ ॥ ೪ ॥**

ಅ || (೧) ಕಣ್ಣು ಅಸಂಗನಾದ ಶ್ರೀಹರಿಗೆ ಸ್ಥಾನವಾಗಿರುವುದರಿಂದ ಅದೂ ಅಸಂಗವೆನಿಸುತ್ತದೆ. (೨) (ಈ ಅರ್ಥದಲ್ಲಿ ಪ್ರಮಾಣ ಹೇಳುತ್ತಾರೆ—) ಈ ಕಣ್ಣು ಯಾವ ವಾಮನನಿಗೆ ಸ್ಥಾನವಾಗಿರುವುದರಿಂದ ಅದಕ್ಕೆ ಸರ್ವವಸ್ತುಗಳ ಸಂಬಂಧವಿಲ್ಲವೋ, ಅಂತಹ ಸರ್ವೋತ್ತಮನಾದ ವಾಮನನಿಗೆ ನಮಸ್ಕಾರವು, ಎಂದು ಮಹಾಕೌರ್ಮದಲ್ಲಿದೆ (೩) (೬ನೇ ಮಂತ್ರದಲ್ಲಿದ್ದ **ಇಮಂ ಮಾನವಮಾವರ್ತಂ ನಾವರ್ತಂತೇ** ಎಂಬುದಕ್ಕೆ ಅರ್ಥ ಹೇಳುತ್ತಾರೆ —)ಮನುಷ್ಯರು ಜನನಮರಣಾದಿರೂಪವಾದ ಯಾವ ಸಂಸಾರದಲ್ಲಿ ತಿರುಗಾಡುತ್ತಿರುತ್ತಾರೋ ಅದು ಮಾನವಾವರ್ತವೆನಿಸುತ್ತದೆ. ಅಂತಹ ಸಂಸಾರಕ್ಕೆ ಮುಕ್ತರಾದ ಮೇಲೆ ತಿರುಗಿ ಬರುವುದಿಲ್ಲ. (೪) ಚಕ್ಷುರೊಳಗಣ ವಾಮನನನ್ನು ತಿಳಿದು ಧ್ಯಾನಿಸುವವನು ತಿರುಗಿ ಹುಟ್ಟುವುದಿಲ್ಲ. ಭಯಂಕರವಾದ ಸಂಸಾರದಿಂದ ಬಿಡುಗಡೆ ಹೊಂದಿ ಮುಕ್ತನಾಗಿ ವಾಮನರೂಪಿ ಶ್ರೀಹರಿಯ ಸಮೀಪದಲ್ಲಿರುತ್ತಾನೆ. || ೬—೧೫ || || ೧ ||

**ಹದಿನೈದನೇ ಖಂಡವು ಮುಗಿಯಿತು.**

## ೧೬ನೇ ಖಂಡವು

**ಪೀ—ವಾಯುರ್ವಾವ ಸಂವರ್ಗಃ ಪ್ರಾಣೋ ಬ್ರಹ್ಮ** ಎಂದು ಅಪರಬ್ರಹ್ಮ ವಿದ್ಯೆಯನ್ನು ಹೇಳಿರುವರು. ಈಗ ಇನ್ನೊಂದು ವಿದ್ಯೆಯನ್ನು ಹೇಳುತ್ತಾರೆ—

**ಉ. || ಏಷ ಹ ವೈ ಯಜ್ಞೋ ಯೋಽಯಂ ಪವತ ಏಷ ಯನ್ನಿದಂ ಸರ್ವಂ ಪುನಾತಿ ಯದೇಷ ಯನ್ನಿದಂ ಸರ್ವಂ ಪುನಾತಿ ತಸ್ಮಾದೇಷ ಏವ ಯಜ್ಞಸ್ತಸ್ಯ ಮನಶ್ಚ ವಾಕ್ಚ ವರ್ತನೀ || ೧ ||**

ಅ || ಬೀಸುವ ಗಾಳಿಗೆ ನಿಯಾಮಕನಾದ ಮುಖ್ಯಪ್ರಾಣನೇ ಸಮಸ್ತ ಯಜ್ಞಗಳಿಗೆ ಅಭಿಮಾನಿಯಾಗಿ ಯಜ್ಞಗಳಲ್ಲಿ ಸನ್ನಿಹಿತನಾಗಿ ಯಜ್ಞನೆನಿಸಿಕೊಂಡವನು. (ಹೇಗೆಂದರೆ—) ಈ ಮುಖ್ಯವಾಯುವು ಸಂಚರಿಸುತ್ತಿರುವಾಗಲೇ ಯೋಗ್ಯವಾದ ಎಲ್ಲಾ ವಸ್ತುಗಳನ್ನು ಪವಿತ್ರೀಕರಿಸುತ್ತಾನೆ. ಆದಕಾರಣ ಇವನೇ ಯಜ್ಞನೆನಿಸಿದವನು. (ಯಜ್ಞಮೂರ್ತಿಯಾದ ವಾಯುವಿನ ಪಾದಗಳಿರುವ ಸ್ಥಾನಗಳನ್ನು ಹೇಳುತ್ತಾರೆ-) ಆ ಮುಖ್ಯ ವಾಯುದೇವರ ಎರಡು ಪಾದಗಳು ಋತ್ವಿಜರ ಮನಸ್ಸು ವಚನಗಳಲ್ಲಿರುತ್ತವೆ. ಅವುಗಳಲ್ಲಿ ಬಲಪಾದವು ಮನಸ್ಸಿನಲ್ಲಿಯೂ, ಎಡಪಾದವು ವಾಗಿಂದ್ರಿಯದಲ್ಲಿಯೂ ಇರುತ್ತದೆ. || ೧ ||

ಪೀ—ಆ ಪಾದಗಳನ್ನು ಪೂಜಿಸುವವರು ಯಾರೆಂದರೆ—

**ಉ. || ತಯೋರನ್ಯತರಾಂ ಮನಸಾ ಸಂಸ್ಕರೋತಿ ಬ್ರಹ್ಮಾ ವಾಚಾ ಹೋತಾಧ್ವರ್ಯುರುದ್ಗಾತಾಽನ್ಯತರಾಂ ಸ (ಅಥ)ಯತ್ರೋಪಾಕೃತೇ ಪ್ರಾತರನುವಾಕೇ ಪುರಾ ಪರಿಧಾನೀಯಾಯಾ ಬ್ರಹ್ಮಾ ವ್ಯಪವದತಿ || ೨ ||**

**ಉ. || ಅನ್ಯತರಾಮೇವ ವರ್ತನೀಂ ಸಂಸ್ಕುರ್ವಂತಿ ಹೀಯತೇಽನ್ಯತರಾ ಸ ಯಥೈಕಪಾದ್ವ್ರಜನ್ರಥೋ ವೈಕೇನ ಚಕ್ರೇಣ ವರ್ತಮಾನೋ ರಿಷ್ಯ-**

**ತ್ಯೇವಮಸ್ಯ ಯಜ್ಞೋ ರಿಷ್ಯತಿ ಯಜ್ಞಂ ರಿಷ್ಯಂತಂ ಯಜಮಾನೋ ನು ರಿಷ್ಯತಿ ಸ ಇಷ್ಟ್ವಾ ಪಾಪೀಯಾನ್ ಭವತಿ　　॥ ೩ ॥**

ಅ ॥ ಆ ಪಾದಗಳ ಮಧ್ಯದಲ್ಲಿ ಮನಸ್ಸಿನಲ್ಲಿರತಕ್ಕ ಬಲಪಾದವನ್ನು ಬ್ರಹ್ಮನೆಂಬ ಋತ್ವಿಜನು ಮನಸ್ಸಿನ ವ್ಯಾಪಾರವಾದ ಮೌನದಿಂದಲೇ ಪೂಜಿಸುತ್ತಾನೆ. ಹೋತೃ, ಅಧ್ವರ್ಯು, ಉದ್ಗಾತೃಗಳೆಂಬ ಮೂರು ಋತ್ವಿಜರಲ್ಲಿ ಹೋತೃವು ಮಂತ್ರೋಚ್ಚಾರಣದಿಂದ, ಅಧ್ವರ್ಯುವು ಹೋಮ ಮೊದಲಾದ ಕರ್ಮ ದಿಂದ, ಉದ್ಗಾತನು ಸಾಮಗಾನದಿಂದ, ಹೀಗೆ ಈ ಮೂವರು ವಾಗಿಂದ್ರಿಯದಲ್ಲಿರತಕ್ಕ ಎಡಪಾದವನ್ನು ಪೂಜಿಸುತ್ತಾರೆ. (ಬ್ರಹ್ಮನೆಂಬ ಋತ್ವಿಜನಿಗೆ ಮೌನವು ಯಾವಾಗ? ಅದು ತಪ್ಪಿಹೋದರೆ ಅನಿಷ್ಟವೇನು? ಎಂದರೆ) ಬ್ರಹ್ಮನೆಂಬ ಋತ್ವಿಜನು ಮೌನ ವ್ರತದಿಂದ ಮುಖ್ಯಪ್ರಾಣನನ್ನು ಪೂಜಿಸಬೇಕು. ಆದುದರಿಂದ ಪ್ರಾತರನುವಾಕವಾದ ಶಸ್ತ್ರವು ಪ್ರಾರಂಭವಾದ ಮೇಲೆ ಯಾಗವನ್ನು ಸಮಾಪ್ತಿಗೊಳಿಸುವ ಅಂತಿಮ ವಾದ ಋಕ್ಕನ್ನು ಜಪಿಸುವುದಕ್ಕಿಂತ ಮೊದಲು ಮಾತನಾಡಿದರೆ ॥ ೨ ॥ ಹೋತೃ ಮೊದಲಾದ ಮೂವರು ಋತ್ವಿಜರು ವಾಗಿಂದ್ರಿಯದಲ್ಲಿರತಕ್ಕ ಎಡಪಾದವನ್ನು ಪೂಜಿಸುತ್ತಿದ್ದರೂ ಬಲಪಾದದ ಪೂಜೆಯಾದ ಮೌನವ್ರತವನ್ನು ಬಿಟ್ಟಪ್ರಯುಕ್ತ ಮನಸ್ಸಿನಲ್ಲಿರತಕ್ಕ ಬಲಪಾದವು ಹಾಳಾಯಿತು. (ಯಜ್ಞದ ಪಾದವು ಹಾಳಾದುದರಿಂದುಂಟಾದ ಅನರ್ಥವನ್ನು ದೃಷ್ಟಾಂತಕೊಟ್ಟು ಹೇಳುತ್ತಾರೆ—) ಹೇಗೆ ಒಂಟಿಕಾಲಿನ ಮನುಷ್ಯನು ಹೋಗುವಾಗ ಬಿದ್ದು ನಾಶಹೊಂದುತ್ತಾನೋ, ಒಂದೇ ಚಕ್ರವಿರುವ ರಥವು ಎಡವಿ ಬೀಳು ತ್ತದೋ ಹಾಗೆಯೇ ಯಜಮಾನನ ಯಾಗವೂ ಕೆಟ್ಟುಹೋಗುತ್ತದೆ ಅದನ್ನನುಸರಿಸಿ ಯಜಮಾನನೂ ನಾಶಹೊಂದುತ್ತಾನೆ. ಅಂದರೆ ಆ ಯಜಮಾನನು ಯಾಗಮಾಡಿ ಪಾಪಿಷ್ಠನಾಗುತ್ತಾನೆ　　॥ ೩ ॥

**ಉ. ॥ ಅಥ ಯತ್ರೋಪಾಕೃತೇ ಪ್ರಾತರನುವಾಕೇನ ಪುರಾ ಪರಿಧಾನೀಯಾಯಾ ಬ್ರಹ್ಮಾ ವ್ಯಪವದತ್ಯುಭೇ ಏವ ವರ್ತನೀ ಸಂಸ್ಕುರ್ವಂತಿ ನ ಹೀಯತೇಽನ್ಯತರಾ　　॥ ೪ ॥**

ಅ ॥ ಬ್ರಹ್ಮನೆಂಬ ಋತ್ವಿಜನು ಮೌನ ಬಿಟ್ಟರೆ ಅನರ್ಥವಿದ್ದ ಪ್ರಯುಕ್ತ ಪ್ರಾತರನುವಾಕವು ಪ್ರಾರಂಭವಾದ ಮೇಲೆ ಯಾಗವು ಸಮಾಪ್ತಿಯಾಗುವುದಕ್ಕಿಂತ ಮೊದಲು ಮೌನಿಯಾಗಿಯೇ ಇದ್ದರೆ ಋತ್ವಿಜರು ಎರಡು ಪಾದಗಳನ್ನು ಪೂಜಿಸುತ್ತಾರೆ. ಎರಡರಲ್ಲಿ ಒಂದೂ ಕೆಟ್ಟುಹೋಗುವುದಿಲ್ಲ.　॥ ೪ ॥

ಪೀ—ಅದರಿಂದುಂಟಾಗತಕ್ಕ ಪುರುಷಾರ್ಥವನ್ನು ದೃಷ್ಟಾಂತ ಕೊಟ್ಟು ಹೇಳುತ್ತಾರೆ—

**ಉ. ॥ ಸ ಯಥೋಭಯಪಾದ್ವ್ರಜನ್ರಥೋ ವೋಭಾಭ್ಯಾಂ ಚಕ್ರಾಭ್ಯಾಂ ವರ್ತಮಾನಃ ಪ್ರತಿತಿಷ್ಠತ್ಯೇವಮಸ್ಯ ಯಜ್ಞಃ ಪ್ರತಿತಿಷ್ಠತಿ ಯಜ್ಞಂ ಪ್ರತಿತಿಷ್ಠಂತಂ ಯಜಮಾನೋ ನು ಪ್ರತಿತಿಷ್ಠತಿ ಸ ಇಷ್ಟ್ವಾ ಶ್ರೇಯಾನ್ಭವತಿ॥ ಇತಿ ಷೋಡಶಃ ಖಂಡಃ ॥ ೬-೧೬ ॥　　॥ ೫ ॥**

ಅ ॥ ಹೇಗೆ ಎರಡು ಪಾದಗಳುಳ್ಳ ಮನುಷ್ಯನು ಸಂಚರಿಸುವಾಗ ನಿರ್ಭಯನಾಗಿರುತ್ತಾನೋ, ಎರಡು ಚಕ್ರಗಳಿಂದೊಡಗೂಡಿದ ರಥವು ಸರಿಯಾಗಿ ನಡೆಯುತ್ತದೋ, ಹಾಗೆಯೇ ಈತನ ಯಜ್ಞವೂ ಚೆನ್ನಾಗಿ ಸಫಲವಾಗುತ್ತದೆ. ಆ ಯಾಗವನ್ನನುಸರಿಸಿ ಯಜಮಾನನೂ ಪುಣ್ಯಫಲವನ್ನು ಹೊಂದುತ್ತಾನೆ. ಹೀಗೆ ಯಜಮಾನನು ಯಾಗಮಾಡಿ ಶ್ರೇಯಸ್ಸುಳ್ಳವನಾಗುತ್ತಾನೆ, ॥ ೬-೧೬ ॥　　॥ ೫ ॥

**ಭಾ. ॥ (೧) ಯಜ್ಞಾಭಿಮಾನೀ ಯಜ್ಞಾಖ್ಯೋ ವಾಯುರ್ಯಜ್ಞೇ ಪ್ರತಿಷ್ಠಿತಃ । ಜ್ಞ ಶುದ್ಧಭಾವ ಇತ್ಯಸ್ಮಾದ್ಯನ್ನಯಂ ಪಾವಯೇದ್ಯತಃ । ಅತೋ ವಾಯುರ್ಯಜ್ಞನಾಮಾ॥ (೨) ತತ್ಪಾದೌ ವಾಙ್ಮನಃಸ್ಥಿತೌ । ದಕ್ಷಿಣೋಽಸ್ಯ ಮನಸ್ಸಂಸ್ಥೋ ಬ್ರಹ್ಮರ್ತ್ವಿಕ್ತಸ್ಯ ಪೂಜಕಃ। ಹೋತ್ರಾದ್ಯಾ ವಾಚಿ ಸಂಸ್ಥಸ್ಯ ವಾಮಪಾದಸ್ಯ ಪೂಜಕಾಃ ॥ (೩) ತಸ್ಮಾತ್ಪ್ರಾತರನುವಾಕ ಪರಿಧಾನ್ಯೋರ್ಯದಂತರಾ । ಬ್ರಹ್ಮಾ ಚೇದುತ್ಸೃಜೇದ್ವಾಚಂ ಯಜ್ಞಪಾಲ್ಲೋಪಕೃದ್ಭವೇತ್ ॥ (೪) ವಾಙ್ಮನಃಪಾದಯಜ್ಞಾಖ್ಯಪ್ರತಿಮೋ ವಾಯುರೀರಿತಃ । ಧ್ಯಾಯನ್ವಾಯುಂ ಹರಿಂ ಚೈವ ತತೋ ಬ್ರಹ್ಮಾ ಮುನಿರ್ಭವೇತ್ ॥ ೧, ೨, ೩, ೪, ೫ ॥ ಇತಿ ಷೋಡಶಃ ಖಂಡಃ ॥ ೬–೧೬ ॥ ॥ ೧ ॥**

ಅ ॥ (೧) ಈ ಮುಖ್ಯವಾಯುವು ಎಲ್ಲಾ ಯಜ್ಞಗಳಿಗೆ ಅಭಿಮಾನಿಯಾಗಿ ಯಜ್ಞಗಳಲ್ಲಿ ಸನ್ನಿಹಿತನಾಗಿ ಯಜ್ಞನೆನಿಸಿಕೊಂಡವನು. (ಮುಖ್ಯಪ್ರಾಣನು ಯಜ್ಞನೆನಿಸಿಕೊಳ್ಳುವುದು ಹೇಗೆಂದರೆ—) **ಜ್ಞ ಶುದ್ಧಭಾವೇ** ಎಂಬ ಧಾತುವ್ಯಾಖ್ಯಾನದಿಂದ ಜ್ಞ ಎಂಬ ಶಬ್ದಕ್ಕೆ ಶುದ್ಧೀಕರಿಸುವುದು ಪವಿತ್ರೀಕರಿಸುವುದು ಎಂದರ್ಥವೆಂದು ತಿಳಿಯುತ್ತದೆ. ಅದುಕಾರಣ ವಾಯುವು ಸಂಚರಿಸುವವನಾಗಿಯೇ ಸರ್ವ ಜಗತ್ತನ್ನು ಪವಿತ್ರೀಕರಿಸುವುದರಿಂದ ಯಜ್ಞನೆನಿಸಿಕೊಳ್ಳುವನು. (೨) ಯಜ್ಞನೆನಿಸಿದ ವಾಯುವಿನ ಪಾದಗಳು ವಾಗಿಂದ್ರಿಯ ಮನಸ್ಸುಗಳಲ್ಲಿವೆ. ಅವುಗಳಲ್ಲಿ ಬಲಪಾದವು ಮನಸ್ಸಿನಲ್ಲಿರುವುದು. ಅದನ್ನು ಬ್ರಹ್ಮನೆಂಬ ಋತ್ವಿಜನು ಪೂಜಿಸುತ್ತಾನೆ. ಹೋತೃ, ಅಧ್ವರ್ಯು, ಉದ್ಗಾತೃಗಳು ವಾಗಿಂದ್ರಿಯದಲ್ಲಿ ಇರತಕ್ಕ ಎಡಪಾದವನ್ನು ಪೂಜಿಸುತ್ತಾರೆ. (೩) ಬ್ರಹ್ಮನೆಂಬ ಋತ್ವಿಜನು ಮೌನವ್ರತದಿಂದಲೇ ಪೂಜಿಸಬೇಕಾದ ಕಾರಣ ಪ್ರಾತರನುವಾಕ ಪ್ರಾರಂಭವಾಗಿ ಕರ್ಮ ಸಮಾಪ್ತಿಯಾಗುವುದಕ್ಕಿಂತ ಮೊದಲು ಅವುಗಳ ಮಧ್ಯದಲ್ಲಿ ಬ್ರಹ್ಮನೆಂಬ ಋತ್ವಿಜನು ಮಾತನಾಡಿದರೆ ಯಜ್ಞದ ಪಾದವನ್ನು ನಾಶಮಾಡುತ್ತಾನೆ. (ಕೆಡಿಸುತ್ತಾನೆ.) (೪) (ಮುಖ್ಯವಾಯುವಿನ ಪಾದವನ್ನು ಪ್ರಾರಂಭಿಸಿ ಯಜ್ಞಪಾದವನ್ನು ಕೆಡಿಸುತ್ತಾನೆಂದು ಹೇಳಿದುದು ಅಸಂಗತವೆಂದರೆ) ಯಜ್ಞಮೂರ್ತಿಯಾದ ಮುಖ್ಯಪ್ರಾಣನಿಗೆ ಋತ್ವಿಜರ ವಾಕ್ ಮನಸ್ಸುಗಳು ಪಾದಗಳು. (ಅಂದರೆ ವಾಕ್ ಮನಸ್ಸುಗಳಿಗೆ ಪ್ರೇರಕಗಳು.) ಯಜ್ಞವು ಪ್ರತಿಮೆಯು. (ಪ್ರತಿಮೆಯ ಸ್ಥಾನವಾದ ಯಜ್ಞಪಾದಕ್ಕೆ ನಾಶವೆಂದು ಹೇಳುವಲ್ಲಿ ಯಜ್ಞದ ದೇವತೆಯಾದ ಮುಖ್ಯವಾಯುವಿನ ಪಾದಕ್ಕೆ ಲೋಪವೆಂದು ಅಮುಖ್ಯಪ್ರಯೋಗವು. (ಅಂದರೆ—ಯಜ್ಞಪಾದವು ಕೆಟ್ಟುಹೋದಪ್ರಯುಕ್ತ ಯಜ್ಞಾಭಿಮಾನಿಯಾದ ಮುಖ್ಯವಾಯುವಿನ ಪಾದವು ನಾಶಹೊಂದಿತೆಂದು ಹೇಳಿದ್ದು.) ಆದಕಾರಣ ಬ್ರಹ್ಮನೆಂಬ ಋತ್ವಿಜನು ಮುಖ್ಯಪ್ರಾಣನನ್ನೂ, ಅವನೊಳಗಣ ಶ್ರೀಹರಿಯನ್ನೂ ಧ್ಯಾನಿಸುವವನಾಗಿಯೇ ಮೌನಿಯಾಗಿರಬೇಕು. ಮಾತಾಡಬಾರದು. ॥ ೬–೧೬ ॥ ॥ ೧ ॥

**ಹದಿನಾರನೇ ಖಂಡವು ಮುಗಿಯಿತು.**

---

## ೧೭ನೇ ಖಂಡವು

**ಪೀ**—ಬ್ರಹ್ಮಾದಿ ಋತ್ವಿಜರಿಗೆ ಮೌನಮಾಡಬೇಕು ಇದುಮೊದಲಾದ ನಿಯಮಗಳು ಜಾಗ್ರತೆಯಿಲ್ಲದೆ ಕೆಟ್ಟುಹೋದರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ವ್ಯಾಹೃತಿಯ ಮಹಿಮೆ ಹೇಳುತ್ತಾ ವ್ಯಾಹೃತಿ ಹೋಮವನ್ನು ಮಾಡಬೇಕೆನ್ನುತ್ತಾರೆ —

**ಉ. ॥ ಪ್ರಜಾಪತಿರ್ಲೋಕಾನಭ್ಯತಪತ್ತೇಷಾಂ ತಪ್ಯಮಾನಾನಾꣳ ರಸಾ-ನ್ಪ್ರಾವೃಹದಗ್ನಿಂ ಪೃಥಿವ್ಯಾ ವಾಯುಮಂತರಿಕ್ಷಾದಾದಿತ್ಯಂ ದಿವಃ ॥ ೧ ॥**

ಅ ॥ ಪರಬ್ರಹ್ಮನು ಪೃಥಿವೀ ಅಂತರಿಕ್ಷ ದ್ಯು ಎಂಬ ಲೋಕಗಳನ್ನು ಶ್ರೇಷ್ಠಗಳೆಂದು ತಿಳಿದನು. ಈ ಲೋಕಗಳಿಗಿಂತ ಶ್ರೇಷ್ಠರಾದವರನ್ನು ನಿಷ್ಕರ್ಷಿಸಿ ತಿಳಿದುಕೊಂಡನು. (ಯಾವ ಯಾವ ಲೋಕಗಳಿಗಿಂತ ಯಾರು ಯಾರನ್ನು ಶ್ರೇಷ್ಠರೆಂದು ನಿಶ್ಚಯಿಸಿಕೊಂಡನೆಂದರೆ —) ಭೂಮಿಗಿಂತ ಅಗ್ನಿಯನ್ನೂ ಅಂತರಿಕ್ಷಲೋಕಕ್ಕಿಂತ ನಾಸಿಕ್ಯವಾಯುವನ್ನೂ ದ್ಯುಲೋಕಕ್ಕಿಂತ ಅದಿತ್ಯನನ್ನೂ ಶ್ರೇಷ್ಠನೆಂದು ತಿಳಿದನು.॥೧॥

**ಉ. ॥ ಸ ಏತಾಸ್ತಿಸ್ರೋ ದೇವತಾ ಅಭ್ಯತಪತ್ತಾಸಾಂ ತಪ್ಯಮಾನಾ-ನಾꣳ ರಸಾನ್ಪ್ರಾವೃಹದಗ್ನೇರ್ಋಚೋ ವಾಯೋರ್ಯಜೂꣳಷಿ ಸಾಮಾನ್ಯಾ-ದಿತ್ಯಾತ್ ॥ ೨ ॥**

ಅ ॥ ಆ ಪರಬ್ರಹ್ಮನು ಅಗ್ನ್ಯಾದಿ ಮೂರು ದೇವತೆಗಳನ್ನು ಶ್ರೇಷ್ಠರೆಂದು ತಿಳಿದುಕೊಂಡನು. ಆ ದೇವತೆಗಳಿಗಿಂತಲೂ ಬೇರೆ ಶ್ರೇಷ್ಠರಾದವರನ್ನು ತಿಳಿದುಕೊಂಡನು. ಹೇಗೆಂದರೆ— ಅಗ್ನಿಗಿಂತ ಋಗ್ವೇದಕ್ಕೆ ಅಭಿಮಾನಿಯಾದ ಬ್ರಹ್ಮನನ್ನೂ, ನಾಸಿಕ್ಯವಾಯುವಿಗಿಂತ ಯಜುರ್ವೇದಾಭಿಮಾನಿಯಾದ ರುದ್ರನನ್ನೂ, ಆದಿತ್ಯನಿಗಿಂತ ಸಾಮವೇದಾಭಿಮಾನಿಯಾದ ಮುಖ್ಯವಾಯುವನ್ನೂ ಶ್ರೇಷ್ಠರೆಂದು ತಿಳಿದುಕೊಂಡನು. ॥ ೨ ॥

**ಉ. ॥ ಸ ಏತಾಂ ತ್ರಯೀಂ ವಿದ್ಯಾಮಭ್ಯತಪತ್ತಸ್ಯಾಸ್ತಪ್ಯಮಾನಾಯಾ ರಸಾನ್ಪ್ರಾವೃಹದ್ಭೂರಿತ್ಯೃಗ್ಭ್ಯೋ ಭುವ ಇತಿ ಯಜುರ್ಭ್ಯಃ ಸ್ವರಿತಿ ಸಾಮಭ್ಯಃ ॥ ೩ ॥**

ಅ ॥ ಆ ಪರಬ್ರಹ್ಮನು ಮೂರು ವೇದಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ಶ್ರೇಷ್ಠರೆಂದು ತಿಳಿದುಕೊಂಡನು. ಆ ದೇವತೆಗಳಿಗಿಂತಲೂ ಇತರರನ್ನು ಶ್ರೇಷ್ಠರನ್ನಾಗಿ ತಿಳಿದುಕೊಂಡನು. ಋಗ್ವೇದಕ್ಕೆ ಅಭಿಮಾನಿಯಾದ ಚತುರ್ಮುಖನಿಗಿಂತ **ಭೂಃ** ಎನಿಸಿಕೊಳ್ಳುವ ವರಾಹನನ್ನೂ, ಯಜುರ್ವೇದಕ್ಕೆ ಅಭಿಮಾನಿಯಾದ ರುದ್ರನಿಗಿಂತ **ಭುವಃ** ಎನಿಸಿಕೊಳ್ಳುವ ನರಸಿಂಹನನ್ನೂ, ಸಾಮವೇದಕ್ಕೆ ಅಭಿಮಾನಿಯಾದ ವಾಯುವಿಗಿಂತ **ಸ್ವಃ** ಎನಿಸಿದ ಕಪಿಲನನ್ನೂ ಶ್ರೇಷ್ಠರೆಂದು ತಿಳಿದನು (ಈ ರೂಪಗಳೆಲ್ಲವೂ ಆ ಪರಬ್ರಹ್ಮನ ಸ್ವರೂಪಗಳೇ ಆಗಿವೆ.) ॥ ೩ ॥

**ಉ. ॥ ತದ್ಯದೃಕ್ತೋ ರಿಷ್ಯೇದ್ಭೂಃ ಸ್ವಾಹೇತಿ ಗಾರ್ಹಪತ್ಯೇ ಜುಹು-ಯಾದೃಚಾಮೇವ ತದ್ರಸೇನರ್ಚಾಂ ವೀರ್ಯೇಣರ್ಚಾಂ ಯಜ್ಞಸ್ಯ ವಿರಿಷ್ಟ (ಷ್ಟಿ)ꣳ ಸಂದಧಾತಿ ॥ ೪ ॥**

ಅ ॥ ವ್ಯಾಹೃತಿಗಳು ಎಲ್ಲಾ ಮಂತ್ರಗಳಿಗಿಂತಲೂ ಶ್ರೇಷ್ಠಗಳಾದ ಕಾರಣ, ಋಗ್ವೇದವನ್ನು ಜಪಿಸದಿರುವುದು, ಮೌನವನ್ನು ಮಾಡದಿರುವುದು, ಇತ್ಯಾದಿಗಳಿಂದ ಯಜ್ಞವು ಕೆಟ್ಟರೆ ಬ್ರಹ್ಮನೆಂಬ ಋತ್ವಿಜನು **ಭೂಃ** ಎನಿಸಿದ ವರಾಹರೂಪಿಶ್ರೀಹರಿಯನ್ನುದ್ದೇಶಿಸಿ **ಭೂಃ ಸ್ವಾಹಾ** ಎಂಬ ಮಂತ್ರದಿಂದ ಗಾರ್ಹಪತ್ಯಾಗ್ನಿಯಲ್ಲಿ ಹೋಮಿಸಬೇಕು. (ಅದಕ್ಕೆ ಅದು ಪ್ರಾಯಶ್ಚಿತ್ತವು.) ಹೀಗೆ **ಭೂಃ ಸ್ವಾಹಾ** ಎಂದು

ಹೇಳಿ ಹೋಮ ಮಾಡಿದರೆ ಋಗ್ವೇದಕ್ಕೆ ಅಭಿಮಾನಿಯಾದ ಚತುರ್ಮುಖನಿಂದ ಶ್ರೇಷ್ಠನಾದ ಅಂದರೆ— ಚತುರ್ಮುಖನಿಗಿಂತ ಬಲವುಳ್ಳ ವರಾಹರೂಪಿ ಶ್ರೀಹರಿಯ ಅನುಗ್ರಹದಿಂದ ಯಜ್ಞಕ್ಕೆ ಋಗ್ವೇದವನ್ನು ಜಪಿಸದಿರುವುದರಿಂದುಂಟಾದ ವೈಗುಣ್ಯವನ್ನು ಪರಿಹರಿಸುತ್ತಾನೆ. (ಋತ್ವಿಜರೆಲ್ಲರನ್ನು ರಕ್ಷಿಸುತ್ತಾನೆ.) ॥ ೪ ॥

ಉ. ॥ ಅಥ ಯದಿ ಯಜುಷ್ಟೋ ರಿಷ್ಯೇದ್ಭುವಃ ಸ್ವಾಹೇತಿ ದಕ್ಷಿಣಾಗ್ನೌ ಜುಹುಯಾದ್ಯಜುಷಾಮೇವ ತದ್ರಸೇನ ಯಜುಷಾಂ ವೀರ್ಯೇಣ ಯಜುಷಾಂ ಯಜ್ಞಸ್ಯ ವಿರಿಷ್ಟ(ಷ್ಟಿ)ಽ ಸಂದಧಾತಿ ॥ ೫ ॥

ಅ ॥ ..............*ಯಜ್ಞದಲ್ಲಿ ಯಜುರ್ವೇದವನ್ನು ಜಪಿಸದಿರುವುದರಿಂದುಂಟಾದ ವೈಗುಣ್ಯವು ಬಂದರೆ **ಭುವಃ** ಎನಿಸಿದ ನರಸಿಂಹನನ್ನುದ್ದೇಶಿಸಿ **ಭುವಃ ಸ್ವಾಹಾ** ಎಂದು **ಹೇಳಿ** ದಕ್ಷಿಣಾಗ್ನಿಯಲ್ಲಿ **ಹೋಮಿಸಬೇಕು.** ಯಜುರ್ವೇದಾಭಿಮಾನಿಯಾದ ರುದ್ರನಿಗಿಂತ ಶ್ರೇಷ್ಠನಾದ ಹೆಚ್ಚು ಬಲವುಳ್ಳ ನರಸಿಂಹನ ಅನುಗ್ರಹದಿಂದ............ ॥ ೫ ॥

ಉ. ॥ ಅಥ ಯದಿ ಸಾಮತೋ ರಿಷ್ಯೇತ್ ಸ್ವಃ ಸ್ವಾಹೇತ್ಯಾಹವನೀಯೇ ಜುಹುಯಾತ್ಸಾಮ್ನಾಮೇವ ತದ್ರಸೇನ ಸಾಮ್ನಾಂ ವೀರ್ಯೇಣ ಸಾಮ್ನಾಂ ಯಜ್ಞಸ್ಯ ವಿರಿ(ಷ್ಟಿ)ಷ್ಟಽ ಸಂದಧಾತಿ ॥ ೬ ॥

ಅ ॥ ಸಾಮವೇದವನ್ನು ಜಪಿಸದಿರುವುದರಿಂದುಂಟಾದ ವೈಗುಣ್ಯವು ಬಂದರೆ— **ಸ್ವಃ** ಎನಿಸಿದ ನರಸಿಂಹನ ಪ್ರೀತಿಗಾಗಿ **ಸ್ವಃ ಸ್ವಾಹಾ** ಎಂದು ಹೇಳಿ ಆಹವನೀಯಾಗ್ನಿಯಲ್ಲಿ ಹೋಮಿಸಬೇಕು. ಸಾಮವೇದಕ್ಕೆ ಅಭಿಮಾನಿಯಾದ ವಾಯುದೇವರಿಗಿಂತ ಶ್ರೇಷ್ಠನಾದ ಬಲವುಳ್ಳ ಕಪಿಲರೂಪಿ ಶ್ರೀಹರಿಯ ಅನುಗ್ರಹದಿಂದ.......... ॥ ೬ ॥

ಪೀ— ಋಗಾದಿಗಳನ್ನು ಜಪಿಸದಿರುವುದರಿಂದುಂಟಾದ ವೈಗುಣ್ಯಪರಿಹಾರವನ್ನು ದೃಷ್ಟಾಂತಕೊಟ್ಟು ಹೇಳುತ್ತಾರೆ —

ಉ. ॥ ತದ್ಯಥಾ ಲವಣೇನ ಸುವರ್ಣಽ ಸಂದಧ್ಯಾತ್ಸುವರ್ಣೇನ ರಜತಽ ರಜತೇನ ತ್ರಪು ತ್ರಪುಣಾ ಸೀಸಽ ಸೀಸೇನ ಲೋಹಂ ಲೋಹೇನ ದಾರು ದಾರು ಚರ್ಮಣಾ ॥ ೭ ॥

ಉ. ॥ ಏವಮೇಷಾಂ ಲೋಕಾನಾಮಾಸಾಂ ದೇವತಾನಾಮಸ್ಯಾಸ್ತ್ರಯ್ಯಾ ವಿದ್ಯಾಯಾ ವೀರ್ಯೇಣ ಯಜ್ಞಸ್ಯ ವಿರಿಷ್ಟ(ಷ್ಟಿ)ಽ ಸಂದಧಾತಿ ಭೇಷಜಕೃತೋ ಹ ವಾ ಏಷ ಯಜ್ಞೋ ಯತ್ರೈವಂವಿದ್ಬ್ರಹ್ಮಾ ಭವತಿ ॥ ೮ ॥

ಅ ॥ ಚಿನಿವಾರನು ತುಂಡುತುಂಡಾದ ಸುವರ್ಣ (ಚಿನ್ನ)ಗಳನ್ನು ಜೇಂಕಿಯಲ್ಲಿ ಪುಟಕ್ಕೆ ಇಟ್ಟು ಟಂ(ಕಂ) ಕಣಕಾರ (ಉಪ್ಪು) ಮೊದಲಾದುದನ್ನು ಕರಗಿಸಿ ಒಯಿದು ಭಂಗಾರವನ್ನು ಒಟ್ಟು ಸೇರಿಸಿ

* ಹಿಂದಿನಂತೆ ಅರ್ಥವು

ದಂತೆಯೇ, ತುಂಡಾಗಿ ಒಟ್ಟು ಸೇರದ ಬೆಳ್ಳಿಯನ್ನು ಚಿನ್ನ ಕರಗಿಸಿ ಆಯ್ದು ಒಟ್ಟು ಸೇರಿಸಿದಂತೆಯೇ (ತ್ರಪು=) ತುಂಡಾದ ತವರವನ್ನು ಬೆಳ್ಳಿ ಕರಗಿಸಿ ಒಯ್ದು ಒಟ್ಟು ಸೇರಿಸಿದಂತೆಯೇ. ತುಂಡಾದ ಸೀಸವನ್ನು ತವರ ಕರಗಿಸಿ ಒಯ್ದು ಒಟ್ಟು ಸೇರಿಸಿದಂತೆಯೇ. ತುಂಡಾದ ಕಬ್ಬಿಣವನ್ನು ಸೀಸ ಕರಗಿಸಿ ಒಯಿದು ಒಟ್ಟು ಸೇರಿಸಿದಂತೆಯೇ, ತುಂಡಾದ ಮರವನ್ನು ಕಬ್ಬಿಣದಿಂದ ಒಟ್ಟಿಗೆ ಸೇರಿಸಿದಂತೆಯೇ, ಮತ್ತು ಮರವನ್ನು ಚರ್ಮದ ಕಟ್ಟುವಿಕೆಯಿಂದ ಒಟ್ಟಿಗೆ ಸೇರಿಸಿದಂತೆಯೇ. ಹೀಗೆಯೇ ಈ ಪೃಥಿವ್ಯಾದಿ ಲೋಕಗಳೂ, ಅಗ್ನಿ ಮೊದಲಾದ ದೇವತೆಗಳೂ, ಮೂರು ವೇದಗಳಿಗೆ ಅಭಿಮಾನಿಗಳಾದ ಚತುರ್ಮುಖಾದಿ ದೇವತೆಗಳೂ ಇವರಿಗಿಂತ ಶ್ರೇಷ್ಠನಾದ **ಭೂಃ ಭುವಃ ಸ್ವಃ** ಎನಿಸಿದ ವರಾಹ, ನರಸಿಂಹ, ಕಪಿಲ ಎಂಬ ಭಗವದ್ರೂಪಗಳ ಅನುಗ್ರಹದಿಂದ ಯಜ್ಞದ ವೈಗುಣ್ಯ (ಕರ್ಮಲೋಪಪ್ರಯುಕ್ತ ದೋಷ) ಕಳೆದು ಕರ್ಮ ಪೂರ್ತಿಯಾಗುವಂತೆ ಮಾಡುತ್ತಾರೆ. ವೈಗುಣ್ಯವಿಲ್ಲದ ಹಾಗೆ ಮಾಡುತ್ತಾರೆ. ಯಾವ ಯಜ್ಞದಲ್ಲಿ ಯಜ್ಞದ ಪಾಪವು ನಾಶವಾದುದಕ್ಕೆ ಈ ರೀತಿಯಾಗಿ ಪರಿಹಾರವಿದೆ, ಎಂದು ತಿಳಿದವನು ಬ್ರಹ್ಮನೆನ್ನುವ ಋತ್ವಿಜನಾಗುತ್ತಾನೋ ಈ ಯಜ್ಞವು ರೋಗಿಯನ್ನು ನಿಪುಣನಾದ ವೈದ್ಯನು ಒಳ್ಳೇ ಮದ್ದನ್ನು ಕೊಟ್ಟು ನೀರೋಗಿಯನ್ನಾಗಿ ಮಾಡುವಂತೆಯೇ ಪ್ರಾಯಶ್ಚಿತ್ತರೂಪ ವ್ಯಾಹೃತಿ ಹೋಮದಿಂದ ಯಜ್ಞವನ್ನು ಸಂಪೂರ್ತಿಗೊಳಿಸುತ್ತಾನೆ　　॥ ೭—೮ ॥

**ಉ. ॥ ಏಷ ಹ ವಾ ಉದಕ್ಪ್ರವಣೋ ಯಜ್ಞೋ ಯತ್ರೈವಂವಿದ್ಬ್ರಹ್ಮಾ ಭವತ್ಯೇವಂವಿದಂ ಹ ವಾ ಏಷಾ ಬ್ರಹ್ಮಾಣಮನುಗಾಥಾ ಯತೋ ಯತ ಆವರ್ತತೇ ತತ್ತದ್ಗಚ್ಛತಿ　　॥ ೯ ॥**

ಅ ॥ ಯಾವ ಯಜ್ಞದಲ್ಲಿ ಹೀಗೆ ತಿಳಿದವನು ಬ್ರಹ್ಮನಾಗುತ್ತಾನೋ ಅಂತಹ ಯಜ್ಞವು ಮೇಲಿನ ಲೋಕಗಳನ್ನು ಹೊಂದಿಸಿಕೊಡಲಿಕ್ಕೆ ಉಪಯುಕ್ತವಾಗುವುದು. (ಹೀಗೆ ತಿಳಿದ ಬ್ರಹ್ಮನಿಗೆ ಇಂತಹ ಸಾಮರ್ಥ್ಯವಿದೆ ಎಂಬಲ್ಲಿ ಹಿಂದಿನ ಗಾಥೆ ಹೇಳುತ್ತಾರೆ—) ಕೆಟ್ಟುಹೋದ ಯಜ್ಞವನ್ನು ಸರಿಪಡಿಸುವ ಪ್ರಕಾರವನ್ನರಿತ ಬ್ರಹ್ಮನೆಂಬ ಋತ್ವಿಜನನ್ನು ಹೊಗಳುವ ಗಾಥೆಯಿದೆ. ಯಜಮಾನನು ಯಜ್ಞ ಮಾಡಿದುದರಿಂದ ಹೊಂದಲು ಶಕ್ಯವಾದ ಯಾವಯಾವ ಪುಣ್ಯಲೋಕದಿಂದ ಯಜ್ಞವು ಕೆಟ್ಟುಹೋದ ಕಾರಣ ಹಿಂತಿರುಗಿ ಬರುತ್ತಾನೋ, ಆಯಾಯ ಸ್ಥಾನಕ್ಕೆ ಹೀಗೆ ತಿಳಿದ ಬ್ರಹ್ಮನೆಂಬ ಋತ್ವಿಜನಿಂದ ಭಗವದ್ಭಕ್ತನಾದ ಯಜಮಾನನು ಹೋಗುತ್ತಾನೆ.　　॥ ೯ ॥

**ಉ. ॥ ಮಾನವೋ ಬ್ರಹ್ಮೈವೈಕ ಋತ್ವಿಕ್ಕುರೂನಶ್ವಾಭಿರಕ್ಷತ್ಯೇವಂವಿದ್ಧ ಹ ವೈ ಬ್ರಹ್ಮಾ ಯಜ್ಞಂ ಯಜಮಾನಂ ಸರ್ವಾಂಶ್ಚರ್ತ್ವಿಜೋಽಭಿರಕ್ಷತಿ ತಸ್ಮಾದೇವಂವಿದಮೇವ ಬ್ರಹ್ಮಾಣಂ ಕುರ್ವೀತ ನಾನೇವಂವಿದಂ ನಾನೇವಂವಿದಂ॥**

**ಇತಿ ಸಪ್ತದಶಃ ಖಂಡಃ ॥ ೬-೧೭ ॥　　॥ ೧೦ ॥**

**ಇತಿ ಶ್ರೀಮಚ್ಛಾಂದೋಗ್ಯೋಪನಿಷದಿ ಷಷ್ಠೋಽಧ್ಯಾಯಃ　　॥ ೬ ॥**

ಅ ॥ ಮೌನವ್ರತದಿಂದ ಶ್ರೀಹರಿಯನ್ನು ಧ್ಯಾನಿಸುವ ಬ್ರಹ್ಮನೆಂಬ ಒಬ್ಬ ಋತ್ವಿಜನೇ ಯಜ್ಞವನ್ನು ಮಾಡುವ ಯಜಮಾನನೇ ಮೊದಲಾದ ಬೇರೆ ಋತ್ವಿಜರನ್ನು ಶೀಘ್ರದಲ್ಲಿ ಅವರವರ ದೋಷಗಳನ್ನು ತಿಳಿದು ಪ್ರಾಯಶ್ಚಿತ್ತ ಹೋಮಮಾಡಿ ರಕ್ಷಿಸುತ್ತಾನೆ ಅಂದರೆ--ಹೀಗೆ ತಿಳಿದ ಬ್ರಹ್ಮನು ಯಜ್ಞವನ್ನೂ ಯಜಮಾನನನ್ನೂ ಎಲ್ಲಾ ಋತ್ವಿಜರನ್ನೂ ರಕ್ಷಿಸುತ್ತಾನೆ. ಆದಕಾರಣ ಕೆಟ್ಟುಹೋದ ಯಜ್ಞವನ್ನು

ಸರಿಪಡಿಸತಕ್ಕ ಶಕ್ತಿಯಿರುವವನನ್ನೇ ಬ್ರಹ್ಮನೆಂಬ ಋತ್ವಿಜನನ್ನಾಗಿ ಮಾಡಬೇಕು. ಪ್ರಾಯಶ್ಚಿತ್ತಾದಿಗಳನ್ನರಿಯದಿರುವವನನ್ನು ಸರ್ವಥಾ ಬ್ರಹ್ಮನೆಂಬ ಋತ್ವಿಜನನ್ನಾಗಿ ಮಾಡಕೂಡದು. ॥ ೬-೧೬ ॥ ॥ ೧೦ ॥

ಪೀ—೧ನೇ ಮಂತ್ರದಲ್ಲಿದ್ದ **ಅಗ್ನಿಂ ಪೃಥಿವ್ಯಾಃ** ಇತ್ಯಾದಿಗಳಿಗೆ ಪ್ರಮಾಣ ಕೊಟ್ಟು ಅರ್ಥ ಹೇಳು

**ಭಾ. ॥ (೧) ಅಗ್ನಿರ್ನಾಸಿಕ್ಯವಾಯುಶ್ಚ ಸೂರ್ಯೋ ಲೋಕರಸಾಸ್ತ್ರಯಃ ॥ (೨) ಅಗ್ನೇ ರಸಸ್ತು ಋಗ್ವೇದಮಾನೀ ಬ್ರಹ್ಮಾ ಪ್ರಕೀರ್ತಿತಃ । ನಾಸಿಕ್ಯವಾಯೋಸ್ತು ರಸೋ ಯಜುರ್ವೇದಾತ್ಮಕೋ ಹರಃ । ಸಾಮವೇದಾಭಿಮಾನೀ ತು ವಾಯುಃ ಸೂರ್ಯರಸಃ ಸ್ಮೃತಃ ॥ (೩) ವರಾಹಸಿಂಹಕಪಿಲಾಸ್ತೇಷಾಂ ಭೂರಾದಿನಾಮಕಾಃ ॥ (೪) ವ್ಯಾಹೃತೀಭಿಸ್ತತೋ ಜುಹ್ವನ್ ಬ್ರಹ್ಮೈವಂವಿದ್ವಿರಿಷ್ಟಿತಃ । ಸರ್ವಾನ್ಸ ಋತ್ವಿಜೋ ರಕ್ಷೇದ್ಬ್ರಹ್ಮೈವಂವಿತ್ತತೋ ಭವೇತ್ ॥ ಇತಿ ಚ ॥ ೧ ॥**

ಅ ॥ (೧) ಅಗ್ನಿಯು, ನಾಸಿಕ್ಯವಾಯುವು, ಸೂರ್ಯನು ಇವರು ಮೂವರು ಲೋಕಗಳಿಗಿಂತ ಶ್ರೇಷ್ಠರು. (೨) (೨ನೇ ಮಂತ್ರದಲ್ಲಿದ್ದ **ಅಗ್ನೇಃ ಋಚಃ** ಇತ್ಯಾದಿಗಳ ಅರ್ಥ ಹೇಳುತ್ತಾರೆ—) ಅಗ್ನಿಗಿಂತ ಋಗ್ವೇದಕ್ಕೆ ಅಭಿಮಾನಿಯಾದ ಚತುರ್ಮುಖನು ಶ್ರೇಷ್ಠನು ನಾಸಿಕ್ಯವಾಯುವಿಗಿಂತ ಯಜುರ್ವೇದಾಭಿಮಾನಿಯಾದ ರುದ್ರನು ಶ್ರೇಷ್ಠನು. ಸೂರ್ಯನಿಗಿಂತ ಸಾಮವೇದಕ್ಕೆ ಅಭಿಮಾನಿಯಾದ ಮುಖ್ಯಪ್ರಾಣನು ಶ್ರೇಷ್ಠನು. (೩) (೩ನೇ ಮಂತ್ರದಲ್ಲಿದ್ದ **ಭೂರಿತ್ಯೃಗ್ಭ್ಯಃ** ಇತ್ಯಾದಿಗಳ ಅರ್ಥ ಹೇಳುತ್ತಾರೆ—) ಆ ದೇವತೆಗಳಿಗಿಂತ **ಭೂಃ ಭುವಃ ಸ್ವಃ** ಎಂದು ಹೆಸರುಳ್ಳ ವರಾಹ, ನರಸಿಂಹ, ಕಪಿಲರು ಶ್ರೇಷ್ಠರು. (೪) (೪ನೇ ಮಂತ್ರದಲ್ಲಿದ್ದ **ತದ್ಯದೃಕ್ತಃ** ಇತ್ಯಾದಿಗಳ ಅರ್ಥ ಹೇಳುತ್ತಾರೆ—) **ಭೂಃ** ಇತ್ಯಾದಿ ವ್ಯಾಹೃತಿಗಳು ಶ್ರೀಹರಿಯ ನಾಮಗಳಾಗಿರುವುದರಿಂದ ಹೀಗೆ ತಿಳಿದು ವ್ಯಾಹೃತಿಗಳಿಂದ ಹೋಮಿಸುವ ಬ್ರಹ್ಮನೆಂಬ ಋತ್ವಿಜನು ಯಜ್ಞಭ್ರಂಶದಿಂದುಂಟಾದ ಅರಿಷ್ಟವನ್ನು ಕಳೆದು ಎಲ್ಲಾ ಋತ್ವಿಜರನ್ನು ರಕ್ಷಿಸುತ್ತಾನೆ. ಅದುಕಾರಣ ಎಲ್ಲವನ್ನೂ ಚೆನ್ನಾಗಿ ತಿಳಿದವನೇ ಬ್ರಹ್ಮನೆಂಬ ಋತ್ವಿಜನಾಗಬೇಕು. ॥ ೧ ॥

ಪೀ—೯ನೇ ಮಂತ್ರದಲ್ಲಿದ್ದ **ಉದಕ್ಪ್ರವಣಃ** ಇತ್ಯಾದಿಗಳ ಅರ್ಥ ಹೇಳುತ್ತಾರೆ—

**ಭಾ. ॥ (೧) ಉದಕ್ಪ್ರವಣ ಊರ್ಧ್ವಪ್ರವಣಃ ಊರ್ಧ್ವಲೋಕಾನುಸಾರೀ । ಯಜ್ಞಸ್ಯ ದುರಿಷ್ಟ್ಯಾ ಯತೋಯತಃ ಸ್ಥಾನಾದಾವರ್ತತೇ ತತ್ತತ್ಸ್ಥಾನಮೇವಂವಿದಾ ಬ್ರಹ್ಮಣಾ ಗಚ್ಛತಿ ॥ (೨) ತದ್ಬ್ರಹ್ಮೈವೈಕಋತ್ವಿಕ್ಕುರೂನ್ಕರ್ತ್ರೂನ್ ಯಜಮಾನಾದೀನಭಿರಕ್ಷತಿ ॥ (೩) ಅಶ್ವಾ ಆಶುಜ್ಞಾನೀ । ವಾ ಗತಿಗಂಧನಯೋರಿತಿ ಧಾತೋಃ । ಗತಿಶಬ್ದಶ್ಚಾವಗತೌ ಭವತಿ । ದೀರ್ಘಬಿಂದುವಿಸರ್ಗಾದೀನಾಂ ಲೋಪೋ ವೇತಿ ಸೂತ್ರಾದಾಶು ವೈ ವಾಶ್ವಾ ॥ ೧,೨,೩,೪,೫,೬,೭,೮, ೯,೧೦ ॥ ಇತಿ ಸಪ್ತದಶಃ ಖಂಡಃ ॥ ೬—೧೭ ॥ ॥ ೨ ॥**

ಅ ॥ (೧) ಉದಕ್ಪ್ರವಣಃ ಎಂಬುದಕ್ಕೆ ಊರ್ಧ್ವಲೋಕವನ್ನು ಹೊಂದಿಸಿಕೊಡತಕ್ಕುದು. ಯಜ್ಞದ ಭ್ರಂಶದಿಂದ ಯಾವಯಾವ ಸ್ಥಾನದಿಂದ ಹಿಂತಿರುಗಿ ಬರುತ್ತಾನೋ, ಆಯಾಯ ಸ್ಥಾನಕ್ಕೆ ಯಜ್ಞಭ್ರಂಶವನ್ನು ಸರಿಪಡಿಸುವ ರೀತಿಯನ್ನು ತಿಳಿದ ಬ್ರಹ್ಮನೆಂಬ ಋತ್ವಿಜನಿಂದ ಹೋಗುತ್ತಾನೆ. (೨) (೧೦ನೇ ಮಂತ್ರದ ಅರ್ಥಹೇಳುತ್ತಾರೆ—) ಬ್ರಹ್ಮನೆಂಬ ಒಬ್ಬ ಋತ್ವಿಜನೇ ಯಜ್ಞವನ್ನು ಮಾಡುವ ಯಜ

ಮಾನನೇ ಮೊದಲಾದವರನ್ನು ಕಾಪಾಡುತ್ತಾನೆ (೩) ಅಶ್ವಾ=ಶೀಘ್ರದಲ್ಲಿ ಆಯಾಯ ದೋಷಗಳನ್ನು ಅಥವಾ ಯಜ್ಞಭ್ರಂಶವನ್ನು ತಿಳಿದವನು. (ಈ ಅರ್ಥವು ಹೇಗೆ ಸಿಗುತ್ತದೆಂದರೆ—) **ವಾ ಗತಿಗಂಧನಯೋಃ,** ಎಂಬ ಧಾತುವ್ಯಾಖ್ಯಾನದಿಂದ **ಅಶ್ವಾ** ಎಂಬಲ್ಲಿದ್ದ **ವಾ** ಎಂಬುದಕ್ಕೆ ಗತಿಯೆಂದು ಅರ್ಥವು. ಗತಿ ಶಬ್ದವು ಅವಗತಿ=ತಿಳಿದುಕೊಳ್ಳುವಿಕೆ ಎಂಬ ಅರ್ಥದಲ್ಲಿದೆ. (ಅಂತೂ ಆಶು=ಶೀಘ್ರದಲ್ಲಿ, **ವಾತಿ**=ತಿಳಿಯು ತ್ತಾನೆ. ಆದುಕಾರಣ ಆಶುವಾ ಎಂದಾಗಬೇಕಿತ್ತು. ಅಶ್ವಾ ಎಂದು ಹೇಗಾಯಿತೆಂದರೆ—) **ದೀರ್ಘ-ಬಿಂದುವಿಸರ್ಗಾದೀನಾಂ ಲೋಪೋ ವಾ** ಎಂಬ ಸೂತ್ರದಿಂದ, ಅಂದರೆ ದೀರ್ಘ, ಅನುಸ್ವಾರ, ವಿಸರ್ಗ, ಸ್ವರ ಮೊದಲಾದವುಗಳಿಗೆ ಲೋಪವೂ ಆಗುವುದು ಎಂಬ ಸೂತ್ರದಿಂದ **ಆಶು** ಎಂಬಲ್ಲಿದ್ದ **ಆ** ಕಾರಕ್ಕೂ **ಉ** ಕಾರಕ್ಕೂ ಲೋಪವು. **ಅಶ್ ವಾ** ಅಶ್ವಾ ಎಂದಾಯಿತು ॥ ೬—೧೭ ॥ ॥ ೨ ॥

ಹದಿನೇಳನೇ ಖಂಡವು ಮುಗಿಯಿತು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಚ್ಛಾಂದೋಗ್ಯ-ಉಪನಿಷದ್ಭಾಷ್ಯೇ ಷಷ್ಠೋಽಧ್ಯಾಯಃ ॥ ೬ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರವರಿಂದ ನಿರ್ಮಿತವಾದ ಶ್ರೀ ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ಆರನೇ ಅಧ್ಯಾಯವು ಮುಗಿದುದು.

**ರಮಾನಾಥಾಯ ಹರಯೇ ಪೂರ್ಣಾನಂದಶರೀರಿಣೇ ।**
**ನಿರ್ದೋಷಗುಣಪೂರ್ಣಾಯ ಸರ್ವಯಜ್ಞಭುಜೇ ನಮಃ ॥**
**ದುರಂತದುರ್ಮತಧ್ವಾಂತಧ್ವಂಸಕೃನ್ಮಧ್ವಭಾಸ್ಕರಃ ।**
**ಬಳಿತ್ಥೇತ್ಯಾದಿಸೂಕ್ತೋಕ್ತಗುಣಃ ಪ್ರೀತೋಽಸ್ತು ನೋ ಸದಾ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**



|| ಶ್ರೀಃ ||

# ಏಳನೇ ಅಧ್ಯಾಯವು

**ದೇವೋತ್ತಮಾಯ ಪ್ರಾಣಾಯ ಪಂಚರೂಪಾಯ ವಿಷ್ಣವೇ ।**
**ವೈಶ್ವಾನರಾಯ ದೇವಾಯ ನಮೋ ಭಗವತೇ ಸದಾ ||**

●

## ೧ನೇ ಖಂಡವು

ಪೀ—ಮುಖ್ಯಪ್ರಾಣನು ಸಂವರ್ಗವಿದ್ಯೆಯಲ್ಲಿ ಅಗ್ನಿ ಮೊದಲಾದವರೆಲ್ಲರನ್ನು ಭಕ್ಷಿಸುವವನೆಂದೂ ಯಜ್ಞವಿದ್ಯೆಯಲ್ಲಿ ಸರ್ವ ಸಿದ್ಧಿಯನ್ನು ಮಾಡುವವನೆಂದೂ ಹಿಂದಿನ ಅಧ್ಯಾಯದಲ್ಲಿ ಹೇಳಿರುತ್ತಾರೆ ಅದು ಕಾರಣ ಆ ಮೋಕ್ಷಾಪೇಕ್ಷಿಗಳಿಗೆ ಮುಖ್ಯಪ್ರಾಣನ ಪ್ರಸಾದವು ಅತ್ಯಾವಶ್ಯಕವಾದುದರಿಂದ ಮುಖ್ಯ ಪ್ರಾಣನ ಸಂಬಂಧಿಯಾದ ಪ್ರಾಣವಿದ್ಯೆಯನ್ನು ಹೇಳುತ್ತಾರೆ—

**ಉ. || ಓಂ || ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ಜ್ಯೇಷ್ಠಶ್ಚ ಹ ವೈ ಶ್ರೇಷ್ಠಶ್ಚ ಭವತಿ ಪ್ರಾಣೋ ವಾವ ಜ್ಯೇಷ್ಠಶ್ಚ ಶ್ರೇಷ್ಠಶ್ಚ || ೧ ||**

ಅ || ಮುಖ್ಯಪ್ರಾಣನೇ ಜ್ಯೇಷ್ಠನೂ ಶ್ರೇಷ್ಠನೂ ಆಗಿರುತ್ತಾನೆ. ಅದುಕಾರಣ ಮುಖ್ಯಪ್ರಾಣನು ಎಲ್ಲಾ ದೇವತೆಗಳಿಗಿಂತಲೂ ವಯಸ್ಸಿನಿಂದ ಜ್ಯೇಷ್ಠನು, ಗುಣಗಳಿಂದ ಉತ್ತಮನು, ಎಂದು ಯಾವ ಅಧಿಕಾರಿಯು ತಿಳಿಯುತ್ತಾನೋ, ಆತನು ಮುಕ್ತನಾಗಿ ಮೋಕ್ಷದಲ್ಲಿ ತನ್ನ ಸಮಾಸಿಕರ ಮಧ್ಯದಲ್ಲಿ ಜ್ಯೇಷ್ಠನೂ ಶ್ರೇಷ್ಠನೂ ನಿಶ್ಚಯವಾಗಿಯೂ ಆಗುತ್ತಾನೆ. || ೧ ||

**ಉ. || ಯೋ ಹ ವೈ ವಸಿಷ್ಠಂ ವೇದ ವಸಿಷ್ಠೋ ಹ ಸ್ವಾನಾಂ ಭವತಿ ವಾಗ್ವಾವ ವಸಿಷ್ಠಃ || ೨ ||**

ಅ || ವಾಗಿಂದ್ರಿಯಕ್ಕೆ ಅಭಿಮಾನಿಯಾದ ವಹ್ನಿಯು ಸಮಾಜದಲ್ಲಿ ಆವಾಸ ಮಾಡುವವರಲ್ಲಿ ಉತ್ತಮನು. ಆತನನ್ನು ಯಾವ ಅಧಿಕಾರಿಯು ವಾಸಮಾಡುವವರಲ್ಲಿ ಉತ್ತಮನನ್ನಾಗಿ ತಿಳಿಯುತ್ತಾನೋ ಆತನು ಸ್ವಕೀಯರ ಮಧ್ಯದಲ್ಲಿ ವಾಸಮಾಡುವವರಲ್ಲಿ ಉತ್ತಮನಾಗುತ್ತಾನೆ || ೨ ||

**ಉ || ಯೋ ಹ ವೈ ಪ್ರತಿಷ್ಠಾಂ ವೇದ ಪ್ರತಿ ಹ ತಿಷ್ಠತ್ಯಸ್ಮಿಂಶ್ಚ ಲೋಕೇಽಮುಷ್ಮಿಂಶ್ಚ ಚಕ್ಷುರ್ವಾವ ಪ್ರತಿಷ್ಠಾ || ೩ ||**

ಅ || ಚಕ್ಷುರಿಂದ್ರಿಯಕ್ಕೆ ಅಭಿಮಾನಿಯಾದ ಸೂರ್ಯನು ಸ್ಥಿತಿ (ಇರುವಿಕೆ) ಗೆ ಕಾರಣವಾದ ಇಂದ್ರಿಯದೇವತೆಯು ಯಾವ ಅಧಿಕಾರಿಯು ಆ ಸೂರ್ಯನನ್ನು ಸ್ಥಿತಿಗೆ ಕಾರಣವಾದ ಇಂದ್ರಿಯಕ್ಕೆ ದೇವತೆಯನ್ನಾಗಿ ತಿಳಿಯುತ್ತಾನೋ, ಆತನು ಈ ಲೋಕದಲ್ಲಿ ಅಥವಾ ಪರಲೋಕದಲ್ಲಿ ಎಲ್ಲಿ ಇರಬೇಕೆಂದು ಇಚ್ಛಿಸುತ್ತಾನೋ, ಅಲ್ಲಿ ಸುಖವಾಗಿ ಇರುತ್ತಾನೆ || ೩ ||

**ಉ. ॥ ಯೋ ಹ ವೈ ಸಂಪದಂ ವೇದ ಸꣳ ಹಾಸ್ಮೈ ಕಾಮಾಃ ಸಂಪ್ರ-ಪದ್ಯಂತೇ ದೈವಾಶ್ಚ ಮಾನುಷಾಶ್ಚ ಶ್ರೋತ್ರಂ ವಾವ ಸಂಪತ್ ॥ ೪ ॥**

ಅ ॥ ಶ್ರೋತ್ರಕ್ಕೆ ಅಭಿಮಾನಿಯಾದ ಇಂದ್ರನು ಸಂಪತ್ತಿಗೆ ಕಾರಣವಾದ ಇಂದ್ರಿಯಕ್ಕೆ ಅಭಿಮಾನಿಯು. ಯಾವ ಅಧಿಕಾರಿಯು ಇಂದ್ರನನ್ನು ಸಂಪತ್ತಿಗೆ ಕಾರಣವಾದ ಇಂದ್ರಿಯಾಭಿಮಾನಿಯನ್ನಾಗಿ ತಿಳಿಯುತ್ತಾನೋ, ಆತನಿಗೆ ದೈವಕಾಮ್ಯಗಳೂ ಮಾನುಷ ಕಾಮ್ಯಗಳೂ ಸಿಗುತ್ತವೆ. (ಅಂದರೆ ಐಹಿಕಾಮುಷ್ಮಿಕನಿಖಿಲ ಸಂಪತ್ತುಗಳೂ ಬರುತ್ತವೆ.) ॥ ೪ ॥

**ಉ. ॥ ಯೋ ಹ ವಾ ಆಯತನಂ ವೇದಾಯತನꣳ ಹ ಸ್ವಾನಾಂ ಭವತಿ ಮನೋ ಹ ವಾ ಆಯತನಂ ॥ ೫ ॥**

ಅ ॥ ಮನಸ್ಸಿಗೆ ಅಭಿಮಾನಿಯಾದ ರುದ್ರನು, (ಆಯತನಂ=) ಗೃಹ ಪ್ರಾಸಾದ ಮೊದಲಾದ ಆಯತನಗಳಿಗೆ ಕಾರಣವಾದ ಇಂದ್ರಿಯಕ್ಕೆ ಅಭಿಮಾನಿಯು. ಯಾವನು ರುದ್ರನನ್ನು ಹೀಗೆ ಆಯತನನನ್ನಾಗಿ ತಿಳಿಯುತ್ತಾನೋ, ಆತನು ತಮ್ಮವರಿಗೆ ಆಶ್ರಯನಾಗಿರುತ್ತಾನೆ. ಮತ್ತು ಸುಂದರಗಳಾದ ಮಂದಿರಾದಿಗಳುಳ್ಳವನೂ ಆಗುತ್ತಾನೆ. ॥ ೫ ॥

**ಪೀ**— ಮುಖ್ಯಪ್ರಾಣನು ನಿಖಿಲ ಜಗತ್ತಿಗೆ ಸಂಹಾರಕನಾದುದರಿಂದ ಅದಕ್ಕೆ ಉಪಯುಕ್ತವಾದ ಅತಿಬಲವೂ ಮುಖ್ಯಪ್ರಾಣನಿಗೆ ಇದೆ ಎಂದು ಹೇಳುತ್ತಾರೆ—

**ಉ. ॥ ಅಥ ಹ ಪ್ರಾಣಾ ಅಹꣳ ಶ್ರೇಯಸಿ ವ್ಯೂದಿರೇಽಹꣳ ಶ್ರೇಯಾ-ನಸ್ಮ್ಯಹꣳ ಶ್ರೇಯಾನಸ್ಮೀತಿ ॥ ೬ ॥**

ಅ ॥ ವಾಗಾದಿ ಇಂದ್ರಿಯಾಭಿಮಾನಿ ದೇವತೆಗಳು ನಾನೇ ಶ್ರೇಷ್ಠನು ನಾನೇ ಶ್ರೇಷ್ಠನು ಎಂದು ತಮ್ಮತಮ್ಮ ಶ್ರೈಷ್ಠ್ಯ ವಿಷಯದಲ್ಲಿ ವಿವಾದಮಾಡಿಕೊಂಡರು. ॥ ೬ ॥

**ಉ. ॥ ತೇ ಹ ಪ್ರಾಣಾಃ ಪ್ರಜಾಪತಿಂ ಪಿತರಮೇತ್ಯೋಚುರ್ಭಗವನ್ ಕೋ ನಃ ಶ್ರೇಷ್ಠ ಇತಿ ತಾನ್ಹೋವಾಚ ಯಸ್ಮಿನ್ವ ಉತ್ಕ್ರಾಂತೇ ಇದಂ ಶರೀರಂ ಪಾಪಿಷ್ಠತರಮಿವ ದೃಶ್ಯೇತ ಸ ವಃ ಶ್ರೇಷ್ಠ ಇತಿ ॥ ೭ ॥**

ಅ ॥ ಹೀಗೆ ವಿವಾದ ಮಾಡಿಕೊಂಡಿರುವ ವಾಗಾದಿ ಇಂದ್ರಿಯಗಳಿಗೆ ಅಭಿಮಾನಿಗಳಾದ ವಹ್ನಿ ಮೊದಲಾದ ದೇವತೆಗಳು ತಂದೆಯಾದ ಬ್ರಹ್ಮದೇವರ ಬಳಿಗೆ ಹೋಗಿ ಎಲೋ ಪೂಜ್ಯರೇ ನಮ್ಮಲ್ಲಿ ಶ್ರೇಷ್ಠರು ಯಾರು ಎಂದು ಕೇಳಿದರು. ಆಗ ಬ್ರಹ್ಮನು ನಿಮ್ಮಲ್ಲಿ ಯಾರು ಹೊರಟುಹೋದೊಡನೆ ಈ ನನ್ನ ಶರೀರವು, ಹೆಣದಂತೆ ತ್ಯಾಜ್ಯವಾಗಿ ಹೋಗುತ್ತದೋ ಆತನು ನಿಮ್ಮಲ್ಲಿ ಶ್ರೇಷ್ಠನು ಎಂದು ಇಂದ್ರಿಯಾಭಿಮಾನಿ ದೇವತೆಗಳಿಗೆ ಹೇಳಿದನು. ॥ ೭ ॥

**ಪೀ**—ಆಗ ದೇವತೆಗಳಲ್ಲಿ ಒಬ್ಬೊಬ್ಬರೇ ಬ್ರಹ್ಮನ ಶರೀರದಿಂದ ಹೊರಟುಹೋದರು ಆದರೂ ಶರೀರವು ಬೀಳಲಿಲ್ಲ. ಮುಖ್ಯಪ್ರಾಣನು ಹೊರಟುಹೋದೊಡನೆ ಶರೀರವು ಬಿದ್ದಿತೆನ್ನುತ್ತಾರೆ —

**ಉ. ‖ ಸಾ ಹ ವಾಗುಚ್ಚಕ್ರಾಮ ಸಾ ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾಽಕಲಾ ಅವದಂತಃ ಪ್ರಾಣಂತಃ ಪ್ರಾಣೇನ ಪಶ್ಯಂತಶ್ಚಕ್ಷುಷಾ ಶೃಣ್ವಂತಃ ಶ್ರೋತ್ರೇಣ ಧ್ಯಾಯಂತೋ ಮನಸೈವಮಿತಿ ಪ್ರವಿವೇಶ ಹ ವಾಕ್ ‖ ೮ ‖**

ಅ ‖ ಹೀಗೆ ಬ್ರಹ್ಮನು ಹೇಳಿದಾಗ ಅದನ್ನು ಪರೀಕ್ಷಿಸುವುದಕ್ಕಾಗಿ ಅವರ ಮಧ್ಯದಲ್ಲಿ ವಾಗಭಿಮಾನಿಯಾದ ಅಗ್ನಿಯು ಬ್ರಹ್ಮನ ಶರೀರದಿಂದ ಹೊರಟುಹೋದನು. ಆದರೂ ಶರೀರವು ಬೀಳಲಿಲ್ಲ. ಆ ಅಗ್ನಿಯು ಸಂವತ್ಸರಪರ್ಯಂತ ದೇಶಾಂತರದಲ್ಲಿ ಆವಾಸಮಾಡಿ ತಿರುಗಿಬಂದು ನಾನಿಲ್ಲದೆ ನೀವು ಜೀವಿಸಲಿಕ್ಕೆ ಹೇಗೆ ಶಕ್ತರಾಗಿರುವಿರಿ, ಎಂದು ಶರೀರದೊಳಗಣ ಬೇರೆ ದೇವತೆಗಳಿಗೆ ಕೇಳಿದನು. ಆಗ ಆ ಶರೀರದೊಳಗಣ ಇಂದ್ರಿಯಾಭಿಮಾನಿ ದೇವತೆಗಳು, ಎಲೋ ಅಗ್ನಿಯೇ ಮೂಕರು ಮಾತನಾಡದಿದ್ದರೂ ಪ್ರಾಣಾದಿಗಳಿಂದ ಶ್ವಾಸಾದಿಗಳನ್ನು ಬಿಡುತ್ತಾ ಅಂದರೆ—ಕಣ್ಣಿನಿಂದ ನೋಡುತ್ತಾ, ಕಿವಿಯಿಂದ ಕೇಳುತ್ತಾ, ಮನಸ್ಸಿನಿಂದ ಧ್ಯಾನಿಸುತ್ತಾ, ಹೇಗೆ ಜೀವಿಸುತ್ತಾರೋ, ಹಾಗೆಯೇ ಜೀವಿಸಿದೆವು, ಎಂದರು. ಆಗ ಆ ಅಗ್ನಿಯು (ನಾನು ಶ್ರೇಷ್ಠನಲ್ಲವೆಂದು ನಿಶ್ಚಯಿಸಿ) ಆ ಬ್ರಹ್ಮನ ಶರೀರದಲ್ಲಿ ಪ್ರವೇಶಮಾಡಿದನು. ‖ ೮ ‖

**ಉ. ‖ ಚಕ್ಷುರ್ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತ ರ್ತೇ ಮಜ್ಜೀವಿತುಮಿತಿ ಯಥಾಽಂಧಾ ಅಪಶ್ಯಂತಃ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಶೃಣ್ವಂತಃ ಶ್ರೋತ್ರೇಣ ಧ್ಯಾಯಂತೋ ಮನಸೈವಮಿತಿ ಪ್ರವಿವೇಶ ಹ ಚಕ್ಷುಃ ‖ ೯ ‖**

ಅ ‖ * ಹೀಗೆಯೇ ಚಕ್ಷುರಭಿಮಾನಿಯೂ .. .... ಕುರುಡರು ನೋಡದಿದ್ದರೂ ಪ್ರಾಣದಿಂದ ಜೀವಿಸುತ್ತಾ ವಾಗಿಂದ್ರಿಯದಿಂದ ಮಾತಾಡುತ್ತಾ........... ‖ ೯ ‖

**ಉ. ‖ ಶ್ರೋತ್ರꣳ ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾ ಬಧಿರಾ ಅಶೃಣ್ವಂತಃ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಪಶ್ಯಂತಶ್ಚಕ್ಷುಷಾ ಧ್ಯಾಯಂತೋ ಮನಸೈವಮಿತಿ ಪ್ರವಿವೇಶ ಹ ಶ್ರೋತ್ರಂ ‖ ೧೦ ‖**

ಅ ‖ ಶ್ರೋತ್ರಾಭಿಮಾನಿಯು............ಕಿವುಡರು ಕೇಳದಿದ್ದರೂ............ ‖ ೧೦ ‖

**ಉ. ‖ ಮನೋ ಹೋಚ್ಚಕ್ರಾಮ ತತ್ಸಂವತ್ಸರಂ ಪ್ರೋಷ್ಯ ಪರ್ಯೇತ್ಯೋವಾಚ ಕಥಮಶಕತರ್ತೇ ಮಜ್ಜೀವಿತುಮಿತಿ ಯಥಾ ಬಾಲಾ ಅಮನಸಃ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಪಶ್ಯಂತಶ್ಚಕ್ಷುಷಾ ಶೃಣ್ವಂತಃ ಶ್ರೋತ್ರೇಣೈವಮಿತಿ ಪ್ರವಿವೇಶ ಹ ಮನಃ ‖ ೧೧ ‖**

---

* ೯—೧೦—೧೧ ಮಂತ್ರಗಳಲ್ಲಿ ಹಿಂದಿನಂತೆ ಅರ್ಥ.

ಅ || ಮನೋಽಭಿಮಾನಿಯು...........ಆರು ತಿಂಗಳಿನೊಳಗಿನ ಬಾಲಕರು, ಪ್ರಾಣನು ವಿನಹ ಬೇರೆ ಮನೋಽಭಿಮಾನಿಗಳಾದ ರುದ್ರಾದಿಗಳಿಂದ ಪ್ರೇರಿಸಲ್ಪಡುವ ಮನಸ್ಸು ಇಲ್ಲದವರಾದರೂ.... ||೧೧||

**ಉ. || ಅಥ ಹ ಪ್ರಾಣ ಉಚ್ಚಿಕ್ರಮಿಷನ್ಸ ಯಥಾ ಸುಹಯಃ ಪಡ್ವೀಶಶಂಕೂನ್ಸಂಖಿದೇದೇವಮಿತರಾನ್ಪ್ರಾಣಾನ್ಸಮಖಿದತ್ತꣳ ಹಾಭಿಸಮೇತ್ಯೋಚುರ್ಭಗವನ್ನೇಧಿ ತ್ವಂ ನಃ ಶ್ರೇಷ್ಠೋಽಸಿ ಮೋತ್ಕ್ರಮೀರಿತಿ || ೧೨ ||**

ಅ || ವಹ್ನಿ ಮೊದಲಾದ ಎಲ್ಲಾ ದೇವತೆಗಳೂ ಶ್ರೇಷ್ಠರಲ್ಲವೆಂದು ನಿಶ್ಚಯವಾದ ಮೇಲೆ ಮುಖ್ಯ ಪ್ರಾಣನು ಬ್ರಹ್ಮನ ಶರೀರದಿಂದ ಹೊರಡಲಿಚ್ಛಿಸಿದವನಾಗಿ ಹೇಗೆ ಲೋಕದಲ್ಲಿ ಒಳ್ಳೇ ಕುದುರೆಯು ಅತಿ ವೇಗದಿಂದ ಓಡುವ ಕುದುರೆಯನ್ನು ಕಟ್ಟತಕ್ಕ ಹಗ್ಗಕ್ಕೆ ಆಶ್ರಯಗಳಾದ ಕೀಲುಗಳನ್ನು (ಕುದುರೆಯು ಕಾಸ್ವಾರನಿಂದ ಹೊಡೆಯಲ್ಪಟ್ಟದ್ದಾಗಿ) ಕಿತ್ತುಕೊಂಡು ಹೋಗುತ್ತದೋ ಹೀಗೆಯೇ ಬೇರೆ ಇಂದ್ರಿಯಾಭಿಮಾನಿ ದೇವತೆಗಳನ್ನೆಲ್ಲಾ ಆ ದೇಹದಿಂದ ಕಿತ್ತುಕೊಂಡು ಹೊರಟನು. (ಆಗ ಆ ದೇವತೆಗಳು ತಮ್ಮ ತಮ್ಮ ಸ್ಥಾನಗಳಲ್ಲಿ ನಿಲ್ಲಲು ಅಶಕ್ತರಾಗಿ) ಮುಖ್ಯಪ್ರಾಣನ ಬಳಿಗೆ ಬಂದು ಎಲೋ ಪೂಜ್ಯರೇ ನೀವು ಈ ಶರೀರದಲ್ಲ ಅಭಿವೃದ್ಧರಾಗಿರಿ. ನಮ್ಮ ಮಧ್ಯದಲ್ಲಿ ಶ್ರೇಷ್ಠರಾಗಿರುತ್ತೀರಿ. ಈ ಶರೀರದಿಂದ ಹೊರಟು ಹೋಗಬೇಡಿರಿ ಎಂದು ಪ್ರಾರ್ಥಿಸಿಕೊಂಡರು. || ೧೨ ||

ಟೀ— ಹಾಗಾದರೆ ನೀವೆಲ್ಲರೂ ನನಗೆ ಪೂಜೆಮಾಡಿರಿ, ಎಂದನು. ಆಗ ದೇವತೆಗಳು ಹಾಗೆಯೇ ಆಗಲಿ ಎಂದು ಮುಖ್ಯಪ್ರಾಣನು ಹೆಚ್ಚು ಗುಣಗಳಿರುವವನೆನ್ನುತ್ತಾರೆ—

**ಉ. || ಅಥ ಹೈನಂ ವಾಗುವಾಚ ಯದಹಂ ವಸಿಷ್ಠಾಽಸ್ಮಿ ತ್ವಂ ತದ್ವಸಿಷ್ಠೋಽಸೀತ್ಯಥ ಹೈನಂ ಚಕ್ಷುರುವಾಚ ಯದಹಂ ಪ್ರತಿಷ್ಠಾಽಸ್ಮಿ ತ್ವಂ ತತ್ಪ್ರತಿಷ್ಠೋಽಸೀತಿ || ೧೩ ||**

ಅ || ಆ ಮೇಲೆ ವಾಗಭಿಮಾನಿಯಾದ ಅಗ್ನಿಯು ಮುಖ್ಯಪ್ರಾಣನನ್ನು ಪ್ರಾರ್ಥಿಸಿಕೊಂಡನು. ಎಲೋ ಮುಖ್ಯಪ್ರಾಣನೇ ನಾನು ವಾಸಮಾಡುವವರಲ್ಲಿ ಉತ್ತಮನಾಗಿರುತ್ತೇನೆಂಬುದು ನೀವೇ ನನ್ನಲ್ಲಿದ್ದು ನನ್ನ ಉತ್ತಮತ್ವಕ್ಕೆ ನಿಯಾಮಕರಾಗಿರುತ್ತೀರಿ. ಆ ಮೇಲೆ ಚಕ್ಷುರಭಿಮಾನಿಯಾದ ಸೂರ್ಯನು ನಾನು ಸರ್ವರ ಸ್ಥಿತಿಗೆ ಕಾರಣನೆಂಬುದು ನಿಮ್ಮ ಅಧೀನವು, ಎಂದು ಹೇಳಿದನು. || ೧೩ ||

**ಉ. || ಅಥ ಹೈನꣳ ಶ್ರೋತ್ರಮುವಾಚ ಯದಹꣳ ಸಂಪದಸ್ಮಿ ತ್ವಂ ತತ್ಸಂಪದಸೀತ್ಯಥ ಹೈನಂ ಮನ ಉವಾಚ ಯದಹಮಾಯತನಮಸ್ಮಿ ತ್ವಂ ತದಾಯತನಮಸೀತಿ || ೧೪ ||**

ಅ || ಆ ಮೇಲೆ ಶ್ರೋತ್ರಾಭಿಮಾನಿಯಾದ ಇಂದ್ರನು ಹೇಳಿದನು ನಾನು ಸಂಪತ್ತಿಗೆ ಕಾರಣನೆಂಬುದು ನಿಮ್ಮ ಅಧೀನವು................ಆ ಮೇಲೆ ಮನೋಽಭಿಮಾನಿಯಾದ ರುದ್ರನು ನಾನು ಸರ್ವರಿಗೆ ಆಶ್ರಯನೆಂಬುದೂ ನಿಮ್ಮ ಅಧೀನವೆಂದು ಪ್ರಾರ್ಥಿಸಿದನು.

ವಿ || ವಾಗಾದಿಗಳಿಗೆ ಅಭಿಮಾನಿಗಳಾದ ವಹ್ನ್ಯಾದಿಗಳಿಗೆ ಉತ್ತಮತ್ವ ಮೊದಲಾದ ಯಾವ ಗುಣಗಳಿವೆಯೋ, ಅವುಗಳೆಲ್ಲವೂ ಮುಖ್ಯಪ್ರಾಣನಿಗೇನೇ ಮುಖ್ಯಗಳು. ವಹ್ನಿ ಮೊದಲಾದ ನಮ್ಮಲ್ಲಿ

ಅಮುಖ್ಯಗಳು. ನಿಮ್ಮ ಅಧೀನಗಳು, ಹೀಗೆ ವಹ್ನಿ ಮೊದಲಾದ ದೇವತೆಗಳು ಮುಖ್ಯಪ್ರಾಣನೊಡನೆ ವಿಜ್ಞಾಪಿಸಿಕೊಂಡರು. || ೧೪ ||

ಪೀ—ವಾಗಾದಿಗಳಲ್ಲಿರತಕ್ಕ ಉತ್ತಮತ್ವ ಮೊದಲಾದುದು ಮುಖ್ಯಪ್ರಾಣನ ಅಧೀನವೆಂಬಲ್ಲಿ ನಿಯಾಮಕ ಹೇಳುತ್ತಾರೆ—

**ಉ. || ನ ವೈ ವಾಚೋ ನ ಚಕ್ಷೂಂಷಿ ನ ಶ್ರೋತ್ರಾಣಿ ನ ಮನಾಂಸೀತ್ಯಾಚಕ್ಷತೇ ಪ್ರಾಣಾ ಇತ್ಯೇವಾಚಕ್ಷತೇ ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ || ಇತಿ ಪ್ರಥಮಃ ಖಂಡಃ || ೭-೧ || || ೧೫ ||**

ಅ || ವಾಕ್ ಚಕ್ಷುಸ್ಸು ಶ್ರೋತ್ರ ಮನಸ್ಸುಗಳಿಗೆ ಅಭಿಮಾನಿಗಳಾದ ಅಗ್ನಿ, ಸೂರ್ಯ, ಇಂದ್ರ, ರುದ್ರರು ವಾಗಾದಿಗಳಾಗುವುದಿಲ್ಲ ಅಂದರೆ—ಸ್ವತಂತ್ರವಾಗಿ ತಮ್ಮತಮ್ಮ ವ್ಯಾಪಾರಗಳನ್ನು ಮಾಡಲಿಕ್ಕೆ ಶಕ್ತರಾಗುವುದಿಲ್ಲ, ಎಂದು ಪ್ರಾಜ್ಞರು ಹೇಳುತ್ತಾರೆ. (ಹಾಗಾದರೆ ಆ ಅಗ್ನ್ಯಾದಿಗಳು ಯಾರ ಅಧೀನ ದಲ್ಲಿದ್ದು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಲಿಕ್ಕೆ ಶಕ್ತರಾಗುತ್ತಾರೆಂದರೆ—) ವಾಕ್ ಮೊದಲಾದ ಇಂದ್ರಿಯಗಳ ಸಮೂಹವನ್ನು ಪ್ರಾಣ ಎಂದೇ ಹೇಳುತ್ತಾರೆ ಅದುಕಾರಣ ವಾಗಾದಿಗಳು ಪ್ರಾಣ, ಎಂದೆ ಎನಿಸಿಕೊಳ್ಳುತ್ತವೆ. ಅಂದರೆ—ಅವುಗಳಿಗೆ ಪ್ರಾಣನು ನಿಯಾಮಕನು. ಪ್ರಾಣನು ಎಲ್ಲಾ ಇಂದ್ರಿಯಾಭಿಮಾನಿ ದೇವತೆಗಳಲ್ಲಿ ಇದ್ದು ಅವರವರಿಗೆ ನಿಯಾಮಕನು ಆಗುತ್ತಾನೆ || ೭-೧ || || ೧೫ ||

ಪೀ—ಪ್ರಮಾಣವನ್ನು ಹೇಳಿ ಈ ಖಂಡದ ಅರ್ಥವನ್ನು ವಿವರಿಸುತ್ತಾರೆ—

**ಭಾ. || ಓಂ || (೧) ಯಃ ಶ್ರೇಷ್ಠಂಜ್ಯೇಷ್ಠಮಖಿಲದೇವಾನಾಂ ವಾಯುಮಂಜಸಾ | ವೇದ ಸ ಸ್ವಸಮಾನಾನಾಂ ಜ್ಯೇಷ್ಠಶ್ರೇಷ್ಠೋ ವಿಮುಕ್ತಿಗಃ || (೨) ಸಮೀಪೇ ವಸತಾಂ ಶ್ರೇಷ್ಠೋ ವಸಿಷ್ಠಸ್ಯೈವ ವೇದನಾತ್ || (೩) ಏಕಸ್ಥಾನೇ ಸ್ಥಿತಿಸ್ತು ಸ್ಯಾತ್ಪ್ರತಿಷ್ಠಾಜ್ಞಸ್ಯ ಚೇಚ್ಛತಃ || (೪) ಸಂಪದ್ವೇತ್ತುಃ ಸಂಪದಃ ಸ್ಯುಃ || (೫) ಗೃಹಂ ಚಾಯತನಂ ವಿದಃ | ಜ್ಯೇಷ್ಠಃ ಶ್ರೇಷ್ಠಃ || ೧ ||**

ಅ || (೧) ಮುಖ್ಯಪ್ರಾಣನು ಎಲ್ಲಾ ದೇವತೆಗಳಿಗಿಂತಲೂ ವಯಸ್ಸಿನಿಂದ ಜ್ಯೇಷ್ಠನು ಗುಣಗಳಿಂದ ಶ್ರೇಷ್ಠನು ಎಂಬ ಚೆನ್ನಾಗಿ ತಿಳಿಯುವವನು ಮೋಕ್ಷದಲ್ಲಿ ತನ್ನ ಸಮಾನಿಕರಲ್ಲಿ ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ. (೨) **ಯೋ ಹ ವೈ ವಸಿಷ್ಠಂ** ಎಂಬ ೨ನೇ ಮಂತ್ರದ ಅರ್ಥ ಹೇಳುತ್ತಾರೆ—) ಅಗ್ನಿಯು ವಾಸಮಾಡುವವರಲ್ಲಿ ಉತ್ತಮನೆಂದು ತಿಳಿಯುವವನು ಸಮೀಪದಲ್ಲಿ ಆವಾಸಮಾಡುವ ಸಮಾನಿಕರಲ್ಲಿ ಉತ್ತಮನಾಗುತ್ತಾನೆ (೩) (**ಯೋ ಹ ವೈ ಪ್ರತಿಷ್ಠಾಂ** ಎಂಬ ೩ನೇ ಮಂತ್ರದ ಅರ್ಥ ಹೇಳುತ್ತಾರೆ—) ಚಕ್ಷುರಭಿಮಾನಿಯಾದ ಸೂರ್ಯನು ಸ್ಥಿತಿಗೆ ಕಾರಣನು, ಎಂದು ತಿಳಿದವನಿಗೆ ತನ್ನ ಇಚ್ಛಾನುಸಾರವಾಗಿ ಒಂದು ಸ್ಥಾನದಲ್ಲಿ ಇರುತ್ತಾನೆ. (ಅದುಕಾರಣ ಒಬ್ಬನು ಏಕಕಾಲದಲ್ಲಿ ಈ ಲೋಕಪರಲೋಕಗಳಲ್ಲಿರುತ್ತಾನೆಂದು ಅರ್ಥವಲ್ಲ ಮತ್ತು ನಮಗೆ ಇಚ್ಛಾನುಸಾರ ಇಷ್ಟಸ್ಥಾನದಲ್ಲಿ ಇರಲು ಸಾಧ್ಯವಿಲ್ಲ. ಸೂರ್ಯನು ಸ್ಥಿತಿಗೆ ಕಾರಣನೆಂದು ತಿಳಿದವನಿಗೆ ಸ್ವೇಚ್ಛಾನುಸಾರ ಎಲ್ಲಿಯೂ ಇರಬಹುದು ) (೪) (**ಸ ಯೋ ಹ ವೈ ಸಂಪದಂ** ಎಂಬ ೪ನೇ ಮಂತ್ರದ ಅರ್ಥ ಹೇಳುತ್ತಾರೆ—) ಶ್ರೋತ್ರಾಭಿಮಾನಿಯಾದ ಇಂದ್ರನು ಸಂಪತ್ತಿಗೆ ಕಾರಣನೆಂದು ತಿಳಿದವನಿಗೆ ಐಹಿಕಾಮುಷ್ಮಿಕ ಎಲ್ಲಾ ಸಂಪತ್ತುಗಳೂ ಬರುತ್ತವೆ. (೫) **ಯೋ ಹವಾ**

**ಆಯತನ ಂವೇದ** ಎಂಬ ೫ನೇ ಮಂತ್ರದ ಅರ್ಥ ಹೇಳುತ್ತಾರೆ—) ರುದ್ರನು ಸಂಪತ್ತಿಗೆ ಕಾರಣನೆಂದು ತಿಳಿದವನಿಗೆ ಇಷ್ಟವಾದ ಮನೆ ಮೊದಲಾದುದು ಸಿಗುತ್ತದೆ. ಇವರಿಗೆಲ್ಲರಿಗಿಂತಲೂ ಮುಖ್ಯಪ್ರಾಣನೇ ಜ್ಯೇಷ್ಠನೂ ಶ್ರೇಷ್ಠನೂ ಆಗಿರುತ್ತಾನೆ. ॥ ೧ ॥

ಪೀ—೧೩, ೧೪ನೇ ಮಂತ್ರಗಳಲ್ಲಿದ್ದ **ಯದಹಂ ವಸಿಷ್ಠಾಽಸ್ಮಿ** ಎಂದಾರಂಭಿಸಿ **ಆಯತನಮಸಿ** ಎಂಬ ಪರ್ಯಂತ ವಾಕ್ಯಗಳ ತಾತ್ಪರ್ಯ ಹೇಳುತ್ತಾರೆ—

**ಭಾ.॥(೧) ವಸಿಷ್ಠಶ್ಚ ಸಂಪದಾಯತನಂ ತಥಾ । ವಾಯುರೇವ ಮಹಾಂಸ್ತಸ್ಯ ಪ್ರಸಾದಾದಗ್ನಿರೇವ ತು ॥ ಉಪಚಾರತೋಽವಸಿಷ್ಠಃ ಸ್ಯಾತ್ಪ್ರತಿಷ್ಠೈವಂ ರವಿಸ್ತತಃ । ಸಂಪದಿಂದ್ರಸ್ತಥೈವೋಕ್ತೋ ರುದ್ರ ಆಯತನಂ ತಥಾ ॥ ಇತಿ ಪ್ರಭಾವೇ ॥ (೨) ಸರ್ವೇಂದ್ರಿಯಾಣಾಂ ವ್ಯಾಪಾರಾನ್ ಪ್ರಾಣ ಏವ ಕರೋತ್ಯಯಂ । ಇಂದ್ರಿಯಸ್ಥಃ ಪೃಥಕ್ವಾಸೌ ಶಕ್ತೋಽಪಿ ಸ್ವಯಮೇವ ತು ॥ (೩) ಷಣ್ಮಾಸಾತ್ಪೂರ್ವಬಾಲಾನಾಂ ಕೇವಲಪ್ರಾಣತೋ ಭವೇತ್ । ವ್ಯಾಪಾರ್ಯಂ ಮನಸಾ ಸರ್ವಮತಃ ಪಶ್ಚಾದಸಂಸ್ಮೃತಿಃ ॥ (೪) ತುರೀಯಾಯಾಮವಸ್ಥಾಯಾಂ ಪ್ರಾಣಾದೇವ ವಿಬೋಧನಂ ॥ (೫) ತಥಾಽಪಿ ಸಂಸ್ಮೃತಿಸ್ತತ್ರ ಪ್ರಾಣವಶ್ಯತಯಾ ಭವೇತ್ ॥ (೬) ಪ್ರಾಣಸ್ಯ ವಶ್ಯತಾ ನಾಮ ಭಕ್ತ್ಯಾ ಸ್ಯಾತ್ತತ್ಪ್ರಸಾದತಃ । ಪ್ರಾಣೇ ವಶ್ಯೇ ಮನೋ ವಶ್ಯಮಿಂದ್ರಿಯಾಣಿ ಚ ಸರ್ವಶಃ ॥ ಇತಿ ಚ ॥ ೧, ೨,....೧೫ ॥ ಇತಿ ಪ್ರಥಮಃ ಖಂಡಃ ॥ ೬–೧ ॥** **॥ ೨ ॥**

ಅ ॥ (೧) ಮುಖ್ಯಪ್ರಾಣನೇ ಮುಖ್ಯವಾಗಿ ವಸಿಷ್ಠಃ ಪ್ರತಿಷ್ಠಾ ಸಂಪತ್ ಆಯತನಂ ಎನಿಸುವನು. (ಹಾಗಾದರೆ **ವಾಗ್ವಾವ ವಸಿಷ್ಠಃ** ಇತ್ಯಾದಿಗಳು ಹೇಗೆ ಕೂಡುತ್ತವೆ ಎಂದರೆ—) ಆ ಮುಖ್ಯಪ್ರಾಣನ ಅನುಗ್ರಹದಿಂದಲೇ ಅಗ್ನಿದೇವತೆಯು ಅಮುಖ್ಯವಾಗಿ ವಸಿಷ್ಠಃ=ವಾಸವಾಡುವವರಲ್ಲಿ ಉತ್ತಮನು, ಅಮುಖ್ಯವಾಗಿಯೇ ಸೂರ್ಯನು ಪ್ರತಿಷ್ಠಾ=ಸ್ಥಿತಿಗೆ ಕಾರಣನು. ಇಂದ್ರನು ಸಂಪತ್=ಸಂಪತ್ತಿಗೆ ಕಾರಣನು. ರುದ್ರನು ಆಯತನಂ=ಗೃಹಾದಿಗಳಿಗೆ ಕಾರಣನು ಇವರೆಲ್ಲರೂ ಮುಖ್ಯಪ್ರಾಣನ ಅನುಗ್ರಹದಿಂದಲೇ ತಮ್ಮ ತಮ್ಮ ಕಾರ್ಯಮಾಡಲಿಕ್ಕೆ ಶಕ್ತರು, ಸ್ವತಃ ಶಕ್ತರಲ್ಲ ಎಂದು ಪ್ರಭಾವ ಎಂಬ ಗ್ರಂಥದಲ್ಲಿದೆ (೨) ಮುಖ್ಯಪ್ರಾಣನು ತಾನೇ ಪ್ರತ್ಯೇಕವಾಗಿ ಆಯಾಯ ಇಂದ್ರಿಯಗಳ ವ್ಯಾಪಾರಗಳನ್ನು ಮಾಡಲಿಕ್ಕೆ ಶಕ್ತನಾದರೂ ಬೇರೆಬೇರೆ ರೂಪಗಳಿಂದ ಆಯಾಯ ಇಂದ್ರಿಯಗಳಲ್ಲಿಯೂ ಇಂದ್ರಿಯಾಭಿಮಾನಿ ದೇವತೆಗಳಲ್ಲಿಯೂ ಇದ್ದು ಎಲ್ಲಾ ಇಂದ್ರಿಯಗಳ ವ್ಯಾಪಾರಗಳನ್ನು ಮಾಡುತ್ತಾನೆ. (೩) (ಮುಖ್ಯಪ್ರಾಣನು ಅಗ್ನ್ಯಾದಿಗಳು ಅಭಿಮಾನಿಗಳಾಗಿ ಉಳ್ಳ ಇಂದ್ರಿಯಗಳಲ್ಲಿದ್ದು ವ್ಯಾಪಾರ ನಡಿಸುವುದಾದರೆ—ಆ ಪ್ರಾಣನಿಂದ ಪ್ರಯೋಜನವಿಲ್ಲವೆಂದಾಗುವುದು. ಅಗ್ನ್ಯಾದಿಗಳು ಅಭಿಮಾನಿಗಳಾಗದ ಇಂದ್ರಿಯಗಳಲ್ಲಿದ್ದು ವ್ಯಾಪಾರ ನಡಿಸುತ್ತಾನೆಂದಾದರೆ-- ಆ ದೇವತೆಗಳಿಂದ ಪ್ರಯೋಜನವಿಲ್ಲವೆಂದಾಗುವುದು ಎಂದರೆ— ಬೇರೆ ದೇವತೆಗಳು ಅಭಿಮಾನಿಗಳಾಗಿ ಉಳ್ಳ ಇಂದ್ರಿಯಗಳಲ್ಲಿದ್ದು ಮುಖ್ಯಪ್ರಾಣನೇ ವ್ಯಾಪಾರ ನಡಿಸುತ್ತಾನೆ ಮತ್ತು ಬೇರೆ ದೇವತೆಗಳ ವ್ಯಾಪಾರವಿಲ್ಲದೇನೂ ಮುಖ್ಯಪ್ರಾಣನೇ ಸರ್ವಕಾರ್ಯಗಳನ್ನು ಮಾಡುತ್ತಾನೆನ್ನುತ್ತಾರೆ—) (ಬೇರೆ ದೇವತೆಗಳು ಇದ್ದರೂ) ಆಯಾಯ ದೇವತೆಗಳ ವ್ಯಾಪಾರಗಳ ಅಪೇಕ್ಷೆಯಿಲ್ಲದೆ ಪ್ರಾಣನಿಂದಲೇ ಆಯಾಯ ವ್ಯಾಪಾರಗಳಾಗುತ್ತವೆ ಆರು ತಿಂಗಳಿಗಿಂತ ಕಡಿಮೆ ವಯಸ್ಸಿನ ಬಾಲಕರಿಗೆ ಪ್ರಾಣನಿಂದಲೇ ಸರ್ವೇಂದ್ರಿಯಗಳಿಂದುಂಟಾಗತಕ್ಕ ಜ್ಞಾನವು ಹುಟ್ಟುತ್ತದೆ ಆರು ತಿಂಗಳು ಆದಮೇಲೆ ವಾಗಾದಿಗಳಿಗೆ ಅಭಿಮಾನಿಗಳಾದ ಅಗ್ನ್ಯಾದಿಗಳಿಂದಲೂ ಆಯಾಯ ಜ್ಞಾನವು ಹುಟ್ಟುತ್ತದೆ.

(ಏಕೆಂದರೆ -) ಆರುತಿಂಗಳುಗಳಿಗಿಂತ ಮೊದಲು ರುದ್ರಾದಿಗಳು ಮನಸ್ಸು ಮೊದಲಾದ ಇಂದ್ರಿಯಗಳಿಗೆ ನಿಯಾಮಕರಾಗದಿರುವುದರಿಂದಲೇ ಆ ಕಾಲದಲ್ಲಿ ಅನುಭೂತವಾದುದು ಮುಂದಕ್ಕೆ ಸ್ಮರಣೆ ಬರುವುದಿಲ್ಲ. (ಇಲ್ಲವಾದರೆ ಮೊದಲು ಅನುಭೂತವಾದ ಪದಾರ್ಥಗಳ ಸ್ಮರಣೆಯು ಬರಬೇಕಾಗುವುದು.) (೪)(ಪ್ರಾಣನು ಬೇರೆ ದೇವತೆಗಳ ಅಪೇಕ್ಷೆಯಿಲ್ಲದೆ ವ್ಯಾಪಾರ ಮಾಡುತ್ತಾನೆಂಬುವುದನ್ನು ಸಮರ್ಥಿಸುತ್ತಾರೆ—) ಮೋಕ್ಷಾವಸ್ಥೆಯಲ್ಲಿ (ಪ್ರಾಕೃತ ಇಂದ್ರಿಯಗಳೇ ಇಲ್ಲದಿರುವುದರಿಂದ ಅಗ್ನ್ಯಾದಿ ದೇವತೆಗಳ ವ್ಯಾಪಾರಗಳಿಲ್ಲ. ಅದುಕಾರಣ) ಮುಖ್ಯಪ್ರಾಣನಿಂದಲೇ ಎಲ್ಲಾ ಇಂದ್ರಿಯಗಳಿಂದುಂಟಾಗತಕ್ಕ ಜ್ಞಾನವು ಬರುತ್ತದೆ. (೫) (ಮೋಕ್ಷಾವಸ್ಥೆಯಲ್ಲಿ ಸ್ವರೂಪೇಂದ್ರಿಯಕ್ಕೆ ನಿಯಾಮಕನಾದ ಮುಖ್ಯಪ್ರಾಣನಿಂದಲೇ ಎಲ್ಲಾ ಇಂದ್ರಿಯಗಳಿಂದುಂಟಾಗತಕ್ಕ ಜ್ಞಾನವು ಹುಟ್ಟುತ್ತದೆಂದಾದರೆ, ಸಂಸಾರಕಾಲದಲ್ಲಿ ಮನಸ್ಸು ಮೊದಲಾದವುಗಳಿಗೆ ಪ್ರವರ್ತಕರಾದ ರುದ್ರಾದಿಗಳು ಮೋಕ್ಷಕಾಲದಲ್ಲಿ ಪ್ರವರ್ತಕರಾಗದಿರುವುದರಿಂದ ಸಂಸಾರದಲ್ಲಿ ಅನುಭೂತವಾದುವು ಮೋಕ್ಷಕಾಲದಲ್ಲಿ ಸ್ಮರಿಸಲ್ಪಡದೆ ಹೋಗುವುದು ಎಂದರೆ—) ಮೋಕ್ಷಕಾಲದಲ್ಲಿ ಬೇರೆ ದೇವತೆಗಳ ವ್ಯಾಪಾರಗಳಿಲ್ಲವಾದರೂ ಕೇವಲ ಪರಮಾತ್ಮನ ಅಧೀನದಲ್ಲಿರುವ ಮುಖ್ಯಪ್ರಾಣನ ಅಧೀನನಾಗಿದ್ದುದರಿಂದ ಸಂಸಾರಕಾಲದಲ್ಲಿ ಅನುಭೂತಗಳಾದ ವಸ್ತುಗಳ ಸ್ಮೃತಿಯು ಆತನಿಗೆ ಬರುವುದು. (೬) ಭಕ್ತಿಯಿಂದ ಮುಖ್ಯಪ್ರಾಣನನ್ನು ಉಪಾಸನೆಮಾಡಿ ಆ ಮುಖ್ಯಪ್ರಾಣನ ಅನುಗ್ರಹವನ್ನು ಸಂಪಾದಿಸಿ ಅದರಿಂದ ಪ್ರಾಣನು ವಶನಾಗುತ್ತಾನೆ ಪ್ರಾಣನನ್ನು ವಶೀಕರಿಸಿಕೊಂಡರೆ ಮನಸ್ಸು ಮತ್ತು ಎಲ್ಲಾ ಇಂದ್ರಿಯಗಳೂ ಅಧೀನಗಳಾಗುತ್ತವೆ. ॥ ೬—೧ ॥ ॥ ೨ ॥

**ಒಂಬನೇ ಖಂಡವು ಮುಗಿಯಿತು.**

## ೨ನೇ ಖಂಡವು

**ಪೀ**—ಎಲೋ ದೇವತೆಗಳೇ ನಾನು ಶ್ರೇಷ್ಠನೆಂದಾದರೆ ನೀವೆಲ್ಲರೂ ನನಗೆ ಅನ್ನವನ್ನು ಕಲ್ಪಿಸಿರಿ, ಎಂದು ಮುಖ್ಯಪ್ರಾಣನು ಹೇಳಿದನು ಎನ್ನುತ್ತಾರೆ —

**ಉ. ॥ ಸ ಹೋವಾಚ ಕಿಂ ಮೇಽನ್ನಂ ಭವಿಷ್ಯತೀತಿ ಯತ್ಕಿಂಚಿದಿದಮಾಶ್ವಭ್ಯ ಆಶಕುನಿಭ್ಯ ಇತಿ ಹೋಚುಸ್ತದ್ವಾ ಏತದನಸ್ಯಾನ್ನಮನೋ ಹ ವೈ ನಾಮ ಪ್ರತ್ಯಕ್ಷಂ ನ ಹ ವಾ ಏವಂವಿದಿ ಕಿಂಚನಾನನ್ನಂ ಭವತೀತಿ ॥ ೧ ॥**

**ಅ** ॥ ನನಗೆ ಯಾವುದು ಅನ್ನವಾಗುವುದು? ಎಂದು ಮುಖ್ಯಪ್ರಾಣನು ಕೇಳಿದನು. ಆಗ ದೇವತೆಗಳು ಎಲೋ ಮುಖ್ಯಪ್ರಾಣನೇ ಜೀವವರ್ಗದಲ್ಲಿ ಉತ್ತಮಜೀವರನ್ನಾರಂಭಿಸಿ ನಾಯಿ ಹಕ್ಕಿಪರ್ಯಂತ ಪ್ರಾಣಿಗಳ ಸಮುದಾಯವು ಯೋಗ್ಯವಾದ ಯಾವ ಅನ್ನವನ್ನು ತಿನ್ನುತ್ತದೋ, ಅದೆಲ್ಲವೂ ನಿನಗೆ ಅನ್ನವು, ಎಂದು ಹೇಳಿದರು. (ಇಂದ್ರಿಯಾಭಿಮಾನಿಗಳಾದ ಅಗ್ನ್ಯಾದಿಗಳು ಮುಖ್ಯಪ್ರಾಣನಿಗೆ ಅನ್ನವನ್ನು ಸಮರ್ಪಿಸಿರುವರು. ಎಂದು ಮುಖ್ಯಪ್ರಾಣನಿಗೆ ಅನ್ನವನ್ನು ಕೊಟ್ಟರೆಂದು ಹೇಳಿದುದು ಮೊದಲೇ ಮುಖ್ಯಪ್ರಾಣನ ಅಧೀನದಲ್ಲಿರುವ ಅನ್ನವನ್ನು ಸಮರ್ಪಿಸಿರುವರು ಎನ್ನುತ್ತಾರೆ—) ಎಲ್ಲಾ ಪ್ರಾಣಿಗಳೂ ತಿನ್ನತಕ್ಕ ಅನ್ನವೆಲ್ಲವೂ ಮುಖ್ಯಪ್ರಾಣನ ಅನ್ನವೇ. (ಹೇಗೆಂದರೆ -) ಮುಖ್ಯಪ್ರಾಣನೇ ಎಲ್ಲಾ ಇಂದ್ರಿಯಗಳಲ್ಲಿಯೂ ಪ್ರೇರಕನಾಗಿ ಪ್ರತ್ಯಕ್ಷನಾಗಿರುವವನು. (ಹೀಗೆ ಪ್ರಾಣನನ್ನು ತಿಳಿದವನಿಗೆ ಫಲಹೇಳುತ್ತಾರೆ—)

ಹೀಗೆ ಪ್ರಾಣನು ಸರ್ವಭೋಕ್ತನೆಂದು ತಿಳಿದವನಿಗೆ ಅನ್ನವಾಗದಿರುವುದು ಯಾವುದೂ ಇಲ್ಲ. ಎಲ್ಲವೂ ಇವನಿಗೆ ಅನ್ನವೇ ಆಗುವುದು. ॥ ೧ ॥

**ಉ. ॥ ಸ ಹೋವಾಚ ಕಿಂ ಮೇ ವಾಸೋ ಭವಿಷ್ಯತೀತ್ಯಾಪ ಇತಿ ಹೋಚುಸ್ತಸ್ಮಾದ್ವಾ ಏತದಶಿಷ್ಯಂತಃ ಪುರಸ್ತಾಚ್ಚೋಪರಿಷ್ಟಾಚ್ಚಾದ್ಭಿಃ ಪರಿದಧತಿ ಲಂಭುಕೋ ಹ ವಾಸೋ ಭವತ್ಯನಗ್ನೋ ಹ ಭವತಿ ॥ ೨ ॥**

ಅ ॥ ಆ ಮೇಲೆ ಮುಖ್ಯಪ್ರಾಣನು ನನಗೆ ವಸ್ತ್ರವು ಯಾವುದೆಂದು ಮರಳಿ ಕೇಳಿದನು. ಆಗ ದೇವತೆಗಳು ಎಲ್ಲಾ ಪ್ರಾಣಿಗಳು ಕುಡಿಯತಕ್ಕ ನೀರು ನಿನಗೆ ವಸ್ತ್ರವು, ಎಂದು ಹೇಳಿದರು. (ಆ ವಿಷಯದಲ್ಲಿ ಜ್ಞಾನಿಗಳ ಆಚಾರವು ಪ್ರಮಾಣವಿದೆ ಎನ್ನುತ್ತಾರೆ ) ನೀರು ಪ್ರಾಣನಿಗೆ ವಸ್ತ್ರವಾದುದರಿಂದಲೇ ಅನ್ನವನ್ನುಣ್ಣುವ ವಿದ್ವಾಂಸರಾದ ಶ್ರೋತ್ರಿಯ ಬ್ರಾಹ್ಮಣರು ಊಟಮಾಡುವುದಕ್ಕಿಂತ ಮೊದಲೂ ಮೇಲೆಯೂ ನೀರಿನಿಂದ ಅನ್ನವನ್ನು ಮುಚ್ಚುತ್ತಾರೆ. ಅಂದರೆ * ಪೂರ್ವೋತ್ತರಗಳಲ್ಲಿ ಆಪೋಶನ ತೆಗೆದುಕೊಳ್ಳುತ್ತಾರೆ. (ಮುಖ್ಯಪ್ರಾಣನಿಗೆ ವಸ್ತ್ರ ಎಂಬ ಬುದ್ಧಿಯಿಂದ ಭೋಜನಮಾಡುವುದಕ್ಕಿಂತ ಮೊದಲೂ ಮೇಲೆಯೂ ಆಪೋಶನ ತೆಗೆದುಕೊಳ್ಳುವವರಿಗೆ ಫಲ ಹೇಳುತ್ತಾರೆ - ) ಜ್ಞಾನಪೂರ್ವಕವಾಗಿ ಆಪೋಶನ ತೆಗೆದುಕೊಳ್ಳುವವನು ದಿವ್ಯವಾದ ವಸ್ತ್ರವನ್ನು ಹೊಂದುತ್ತಾನೆ. ನಗ್ನ (ಬತ್ತಲೆ)ಯಾದವನಾಗುವುದೇ ಇಲ್ಲ. ಅಂದರೆ— ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ದಿವ್ಯ ವಸ್ತ್ರಗಳಿಂದ ಅಲಂಕೃತನಾಗುತ್ತಾನೆ.) ॥ ೨ ॥

ಪೀ— ಈ ಪ್ರಾಣವಿದ್ಯೆಯು ಪರಂಪರೆಯಿಂದ ಬಂದುದು ಎನ್ನುತ್ತಾರೆ—

**ಉ. ॥ ತದ್ಧೈತತ್ಸತ್ಯಕಾಮೋ ಜಾಬಾಲೋ ಗೋಶ್ರುತಯೇ ವೈಯಾಘ್ರಪದ್ಯಾಯೋಕ್ತ್ವೋವಾಚ ಯದ್ಯಪ್ಯೇತಚ್ಛುಷ್ಕಾಯ ಸ್ಥಾಣವೇ ಬ್ರೂಯಾಜ್ಜಾಯೇರನ್ನೇವಾಸ್ಮಿಂಚ್ಛಾಖಾ ಪ್ರರೋಹೇಯುಃ ಪಲಾಶಾನೀತಿ ॥ ೩ ॥**

ಅ ॥ ಈ ಪ್ರಾಣವಿದ್ಯೆಯನ್ನು ಜಬಾಲೆಯ ಮಗನಾದ ಸತ್ಯಕಾಮನು ವ್ಯಾಘ್ರಪಾತ್ ಎಂಬುವನ ಮಗನಾದ ಗೋಶ್ರುತಿ ಎಂಬುವನಿಗೆ ಉಪದೇಶಿಸಿ ಫಲವನ್ನು ಹೇಳಿರುವನು. ಪ್ರಾಣವಿದ್ಯೆಗೆ ಯೋಗ್ಯನಾದ ಅಧಿಕಾರಿಯು ಜನ್ಮಾಂತರ ಕರ್ಮಾನುಸಾರ ಸ್ಥಾಣು (ವೃಕ್ಷ) ಭಾವವನ್ನು ಹೊಂದಿದರೆ ಅಂತಹ ಒಣಗಿದ ಸ್ಥಾಣುವಿಗೂ ಈ ಪ್ರಾಣವಿದ್ಯೆಯನ್ನು ಯೋಗ್ಯನು ಉಪದೇಶಿಸಿದರೆ ಆ ಶುಷ್ಕವೃಕ್ಷದಲ್ಲಿಯೂ ಗೆಲ್ಲುಗಳು ಹುಟ್ಟುತ್ತವೆ. ಎಲೆಗಳು ಬೆಳೆಯುವವು ಎಂದು ಹೇಳಿದರು. ॥ ೩ ॥

ಪೀ— ತನಗೆ ಐಹಿಕ ಪಾರತ್ರಿಕ ಮಹತ್ತ್ವ ಸಿಗಬೇಕೆಂದು ಇಚ್ಛಿಸುವವನು ಪ್ರಾಣಾದಿಗಳೇ ದೇವತೆಯಾಗಿ ಉಳ್ಳ ಹೋಮವನ್ನು ಮಾಡಬೇಕೆನ್ನುತ್ತಾರೆ—

**ಉ. ॥ ಅಥ ಯದಿ ಮಹಜ್ಜಿಗಮಿಷೇದಮಾವಾಸ್ಯಾಯಾಂ ದೀಕ್ಷಿತ್ವಾ**

---

* ಅಮೃತೋಪಸ್ತರಣಮಸಿ ಎಲೋ ನೀರೆ ನೀನು ಹಾಸುವ ವಸ್ತ್ರವಾಗಿರುತ್ತಿ. ಹೀಗೆ ಭೋಜನದ ಆದಿಯಲ್ಲಿ ಆಪೋಶನ ತೆಗೆದುಕೊಂಡು ಆ ಮೇಲೆ ಪ್ರಾಣಾಯ ಸ್ವಾಹಾ ಇತ್ಯಾದಿ ಮಂತ್ರಗಳಿಂದ ಅನ್ನವನ್ನು ಅದರ ಮೇಲೆ ಇಡುವುದು ಕೊನೆಗೆ ಅಮೃತಾಪಿಧಾನಮಸಿ ಎಲೋ ನೀರೇ ನೀನು ಮುಚ್ಚುವ ಬಟ್ಟೆಯಾಗಿದ್ದಿ ಎನ್ನುತ್ತಾ ಅನ್ನವನ್ನು ಮುಚ್ಚುತ್ತಾರೆ.

**ಪೌರ್ಣಮಾಸ್ಯಾಂ ರಾತ್ರೌ ಸರ್ವೌಷಧಸ್ಯ ಮಂಥಂ ದಧಿಮಧುನೋರುಪ-ಮಥ್ಯ ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ ಸಂಪಾತಮವನಯೇತ್ ॥ ೪ ॥**

ಅ ॥ ಐಹಿಕ ಪಾರತ್ರಿಕ ಮಹತ್ತ್ವವನ್ನು ಹೊಂದಲಿಚ್ಛಿಸುವವನು ಅಮಾವಾಸ್ಯಾ ದಿನ ದೀಕ್ಷೆಗೆ ಕುಳಿತುಕೊಂಡು ಅಂದರೆ—ಪಕ್ಷಪರ್ಯಂತ ಕ್ಷೀರವ್ರತಾದಿಗಳನ್ನು ಮಾಡಿ ಮರಳಿ ಪೂರ್ಣಿಮಾದಿನ ರಾತ್ರಿಯಲ್ಲಿ ವ್ರೀಹಿ (ಬತ್ತ) ಯವ ಮೊದಲಾದ ಹತ್ತು ಧಾನ್ಯಗಳ ಜಳ್ಳು ಉಮಿ ತೌಡು ತೆಗೆದು ಕುಟ್ಟಿ ಮಾಡಿದ ಹಿಟ್ಟನ್ನು ಮಸುರು ಜೇನುತುಪ್ಪಗಳಿಂದ ಕಲಸಿ **ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹಾ** ಎಂಬ ಮಂತ್ರದಿಂದ ಅಗ್ನಿಯಲ್ಲಿ ಆ ತುಪ್ಪದಿಂದ ಪರಿಶುದ್ಧವಾದ ಹಿಟ್ಟಿನ ಪಿಂಡವನ್ನು ಹೋಮಿಸಿ ಸ್ರುವ (ದ್ರವದ್ರವ್ಯವನ್ನು ತೆಗೆಯುವ ಸಾಧನ)ದಲ್ಲಿ ಸಂಬದ್ಧವಾದ ತುಪ್ಪವನ್ನು ಹೋಮಿಸಿದ ಹಿಟ್ಟಿನ ಪಿಂಡದಲ್ಲಿ ಧಾರಾಪೂರ್ವಕವಾಗಿ ಎರೆಯಬೇಕು. ॥ ೪ ॥

**ಉ. ॥ ವಸಿಷ್ಠಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ ಸಂಪಾ-ತಮವನಯೇತ್ಪ್ರತಿಷ್ಠಾಯೈ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ ಸಂ-ಪಾತಮವನಯೇತ್ಸಂಪದೇ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ ಸಂಪಾ-ತಮವನಯೇದಾಯತನಾಯ ಸ್ವಾಹೇತ್ಯಗ್ನಾವಾಜ್ಯಸ್ಯ ಹುತ್ವಾ ಮಂಥೇ ಸಂಪಾತಮವನಯೇತ್ ॥ ೫ ॥**

ಅ ॥ ಹೀಗೆಯೇ **ವಸಿಷ್ಠಾಯ ಸ್ವಾಹಾ, ಪ್ರತಿಷ್ಠಾಯೈ ಸ್ವಾಹಾ, ಸಂಪದೇ ಸ್ವಾಹಾ, ಆಯತನಾಯ ಸ್ವಾಹಾ** ಎಂಬ ನಾಲ್ಕು ವಾಕ್ಯಗಳಲ್ಲಿಯೂ ಹೀಗೆಯೇ ಅರ್ಥವನ್ನು ಇಟ್ಟುಕೊಳ್ಳಬೇಕು ॥೫॥

**ಪೀ**—ಹೋಮಮಾಡಿ ಉಳಿದ ಹಿಟ್ಟಿನ ಪಿಂಡವನ್ನು ಏನು ಮಾಡಬೇಕೆಂದರೆ—

**ಉ. ॥ ಅಥ ಪ್ರತಿಸೃಪ್ಯಾಂಜಲೌ ಮಂಥಮಾಧಾಯ ಜಪತ್ಯಮೋನಾ-ಮಾಸ್ಯಮಾಹಿ ತೇ ಸರ್ವಮಿದಂ ಸ ಹಿ ಜ್ಯೇಷ್ಠಃ ಶ್ರೇಷ್ಠೋ ರಾಜಾಽಧಿಪತಿಃ ಸ ಮಾ ಜ್ಯೈಷ್ಠ್ಯಂ ಶ್ರೈಷ್ಠ್ಯಂ ರಾಜ್ಯಮಾಧಿಪತ್ಯಂ ಗಮಯತ್ವ(ತ್ವ)ಹಮೇವೇದಂ ಸರ್ವಮಸಾನೀತಿ ॥ ೬ ॥**

ಅ ॥ ಹೋಮಿಸಿದ ಮೇಲೆ ಹೋಮಿಸಿ ಉಳಿದ ಹಿಟ್ಟಿನ ಪಿಂಡವನ್ನು ತೆಗೆದು ಅಗ್ನಿಗೆ ಸ್ವಲ್ಪ ಹಾಕಿ ಅಂಗೈಯಲ್ಲಿ ಇಟ್ಟುಕೊಂಡು ಯಜ್ಞದೇವತೆಯಾದ ಪ್ರಾಣನನ್ನು ಜಪಿಸಬೇಕು. ಎಲೋ ಮಂಥಾಭಿಮಾನಿಯಾದ ಪ್ರಾಣನೇ ನಿನಗೆ ಅಮನೆಂದು ಹೆಸರು ಸಮಸ್ತ ಜಗತ್ತಿಗೆ ನೀನೇ ಸ್ವಾಮಿಯು ನಿನ್ನಿಂದೊಡಗೂಡಿ ನಿನ್ನ ಅಧೀನದಲ್ಲಿಯೇ ಇರುತ್ತದೆ. ಅದುಕಾರಣ ಮಂಥಾಭಿಮಾನಿಯಾದ ಮುಖ್ಯಪ್ರಾಣನು ವಯಸ್ಸಿನಿಂದ ಜ್ಯೇಷ್ಠನು, ಗುಣಗಳಿಂದ ಶ್ರೇಷ್ಠನು ತೃಪ್ತಿಗೊಳಿಸುವವನು, ಚೆನ್ನಾಗಿ ರಕ್ಷಿಸುವವನು, ಆ ದೇವತೆಯು ನನ್ನನ್ನು ಸಮಾನಿಕರಿಗಿಂತ ಜ್ಯೇಷ್ಠನನ್ನಾಗಿಯೂ ಶ್ರೇಷ್ಠನನ್ನಾಗಿಯೂ ಮಾಡಲಿ, ರಾಜ್ಯವನ್ನು ಆಧಿಪತ್ಯವನ್ನು ಹೊಂದಿಸಿಕೊಡಲಿ. ನಾನು ಸ್ವಯೋಗ್ಯ ಗುಣಗಳಿಂದ ಪೂರ್ಣನಾಗುವಂತೆ ಮಾಡಲಿ ಎಂದು ಜಪಿಸಬೇಕು. ॥ ೬ ॥

ಪೀ—ಹೀಗೆ ಜಪಿಸಿ ಮಂತ್ರವನ್ನು ಹೇಳಿಕೊಂಡು ಅದನ್ನು ಭಕ್ಷಿಸಬೇಕೆನ್ನುತ್ತಾರೆ—

**ಉ. ॥ ಅಥ ಖಲ್ವೇತಯರ್ಚಾ ಪಚ್ಛ ಆಚಾಮತಿ ತತ್ಸವಿತುರ್ವೃಣೀಮಹ ಇತ್ಯಾಚಾಮತಿ ವಯಂ ದೇವಸ್ಯ ಭೋಜನಮಿತ್ಯಾಚಾಮತಿ ಶ್ರೇಷ್ಠಂ ಸರ್ವಧಾತಮಮಿತ್ಯಾಚಾಮತಿ ತುರಂ ಭಗಸ್ಯ ಧೀಮಹೀತಿ ಸರ್ವಂ ಪಿಬತಿ ॥ ॥ ೭ ॥**

ಅ ॥ ಪ್ರಾಣಜಪವನ್ನು ಮಾಡಿದ ಮೇಲೆ ಹೋಮಮಾಡಿ ಉಳಿದ ಮಂಥ (ಹಿಟ್ಟಿನ ಪಿಂಡ) ವನ್ನು ನಾಲ್ಕು ಪಾಲುಮಾಡಿ ಮುಂದೆ ಹೇಳುವ ಋಕ್ಕಿನಿಂದ ಒಂದೊಂದು ಅಂಶವನ್ನು ತಿನ್ನಬೇಕು. **ತತ್ಸವಿತುರ್ವೃಣೀಮಹೇ** ಎಂಬ ಮಂತ್ರದಿಂದ ಒಂದು ಪಾದದಿಂದ ಒಂದನೇ ಕವಳವನ್ನೂ, **ವಯಂ ದೇವಸ್ಯ ಭೋಜನಂ** ಎಂಬ ಪಾದದಿಂದ ಎರಡನೇ ಕವಳವನ್ನೂ **ಶ್ರೇಷ್ಠಂ ಸರ್ವಧಾತಮಂ** ಎಂಬ ಪಾದದಿಂದ ಮೂರನೇ ಕವಳವನ್ನೂ **ತುರಂ ಭಗಸ್ಯ ಧೀಮಹಿ** ಎಂಬ ನಾಲ್ಕನೇ ಪಾದದಿಂದ ನಿಶ್ಶೇಷವಾಗಿಯೂ ಭಕ್ಷಿಸಬೇಕು ಹೀಗೆ ಇಡಾಭಕ್ಷಣ ಮಾಡಬೇಕು. ಸರ್ವಜಗತ್ತನ್ನು ಸೃಷ್ಟಿಸಿರುವ ಶ್ರೀವಿಷ್ಣುವಿನಿಂದ ನಾವು ಭೋಜನವನ್ನೂ, ರಕ್ಷಣೆಯನ್ನೂ, ಸಮಸ್ತ ಭೋಗಗಳನ್ನೂ ಹೊಂದುವೆವು. ಐಶ್ವರ್ಯ ಮೊದಲಾದ ಸಮಸ್ತ ಗುಣಸ್ವರೂಪನಾದ ವಿಷ್ಣುವಿನ ಭೃತ್ಯನಾದ ಮುಖ್ಯಪ್ರಾಣನನ್ನು ಸಮಸ್ತ ದೇವತೆಗಳಲ್ಲಿ ಉತ್ತಮನನ್ನಾಗಿ ಧ್ಯಾನಿಸುವೆವು. ಎಂದು ವಿಶಿಷ್ಟಮಂತ್ರದ ಅರ್ಥವು. ॥ ೭ ॥

**ಉ.॥ ನಿರ್ಣಿಜ್ಯ ಕಂಸಂ ಚಮಸಂ ವಾ ಪಶ್ಚಾದಗ್ನೇಃ ಸಂವಿಶತಿ ಚರ್ಮಣಿ ವಾ ಸ್ಥಂಡಿಲೇ ವಾ ವಾಚಂಯಮೋಽಪ್ರಸಾಹಃ ಸ ಯದಿ ಸ್ತ್ರಿಯಂ ಪಶ್ಯೇತ್ ಸಮೃದ್ಧಂ ಕರ್ಮೇತಿ ವಿದ್ಯಾತ್ ॥ ೮ ॥**

ಅ ॥ ಕಾಂಸ್ಯ (ಕಂಚಿಯ ಪಾತ್ರ) ಮಯವಾದ ಅಥವಾ ಅತ್ತಿಮರದ್ದಾದ ಮಂಥಪಾತ್ರವನ್ನು ತೊಳೆದಿಟ್ಟು ಅಗ್ನಿಯ ಪಡುಭಾಗದಲ್ಲಿ ಕೃಷ್ಣಾಜಿನದಲ್ಲಿ ಅಥವಾ ವ್ಯಾಘ್ರ(ಹುಲಿ)ಚರ್ಮದಲ್ಲಿ ಸ್ಥಂಡಿಲದಲ್ಲಿ (ಕೇವಲ ಭೂಮಿಯಲ್ಲಿ) ಮೌನಿಯಾಗಿ ಪತ್ನೀಸಂಸರ್ಗವಿಲ್ಲದೆ ತಾನೊಬ್ಬನೇ ಯಜಮಾನನು ನಿದ್ರಿಸಬೇಕು. ಆ ಯಜಮಾನನು ಸ್ವಪ್ನಗಳಲ್ಲಿ ಮುತ್ತೈದೆಯರನ್ನು ಕಂಡರೆ ತನ್ನ ಕರ್ಮವು ಸಫಲವಾಯಿತೆಂದು ತಿಳಿಯಬೇಕು ॥ ೮ ॥

ಪೀ—ಸ್ವಪ್ನಕಾಲದಲ್ಲಿ ಮುತ್ತೈದೆಯರನ್ನು ನೋಡುವುದು ಕರ್ಮಸಮೃದ್ಧಿಯನ್ನು ತಿಳಿಸಿಕೊಡುತ್ತದೆ ಎಂಬಲ್ಲಿ ಪ್ರಮಾಣ ಹೇಳುತ್ತಾರೆ—

**ಉ. ॥ ತದೇಷ ಶ್ಲೋಕಃ—ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿಪಶ್ಯತಿ । ಸಮೃದ್ಧಿಂ ತತ್ರ ಜಾನೀಯಾತ್ತಸ್ಮಿನ್ ಸ್ವಪ್ನನಿದರ್ಶನೇ ತಸ್ಮಿನ್ ಸ್ವಪ್ನನಿದರ್ಶನ ಇತಿ ॥ ಇತಿ ದ್ವಿತೀಯಃ ಖಂಡಃ ॥ ೭-೨ ॥ ॥ ೯ ॥**

ಅ ॥ ಆ ಅರ್ಥದಲ್ಲಿ ಮುಂದಿನ ಶ್ಲೋಕವು ಸಮ್ಮತಿಯಾಗುತ್ತದೆ. ಕಾಮ್ಯಕರ್ಮಗಳನ್ನು ಮಾಡುವಾಗ ಸ್ವಪ್ನಗಳಲ್ಲಿ ಸ್ತ್ರೀಯರನ್ನು ಕಂಡರೆ ಅಂತಹ ಸ್ವಪ್ನ ಎಂಬ ದೃಷ್ಟಾಂತವು ಉಂಟಾಗುತ್ತಿರಲು

ಕರ್ಮಸಮೃದ್ಧಿಯನ್ನು ತಿಳಿಯಬೇಕು. ಈ ಅರ್ಥವು ಪ್ರಾಮಾಣಿಕವೆಂದು ತಿಳಿಸುವುದಕ್ಕಾಗಿ ಎರಡು ಸಲ ಹೇಳಿದ್ದು. ॥ ೭—೨ ॥ ॥ ೯ ॥

ಪೀ—೧ನೇ ಮಂತ್ರದ ಅರ್ಥ ಹೇಳುತ್ತಾರೆ—

**ಭಾ. ॥ (೧) ಅಕ್ಷೇಷು ಪ್ರತಿಪ್ರತಿ ಸ್ಥಿತತ್ವಾದನಃ ಪ್ರತ್ಯಕ್ಷಂ ॥ (೨) ಪ್ರಾಣವಿಜ್ಞಾನ-ಯೋಗ್ಯಸ್ತು ರುದ್ರೋ ಮುಖ್ಯತಯಾ ಸ್ಮೃತಃ । ತಸ್ಮಾತ್ಸ ಸರ್ವಭೋಕ್ತಾ ಸ್ಯಾತ್ತದನ್ಯೇಷಾಂ ಸ್ವಯೋಗ್ಯತಃ ॥ ಇತಿ ಚ ॥ (೩) ಸಿದ್ಧಮೇವಾನ್ನವಸ್ತ್ರಾದ್ಯಂ ವಿಷ್ಣೋಃ ಸ್ವಾತಂತ್ರ್ಯತಸ್ಸದಾ। ಸ್ವಾರ್ಥಂ ಸಮರ್ಪಯೇದ್ವಿಷ್ಣೌ ಯಥಾ ಪ್ರಾಣೇ ಸುರಾಃ ಪುರಾ ॥ ಇತಿ ಕರ್ಮಾನುಪೂರ್ವ್ಯಾಂ ॥ (೪) ಪ್ರಾಣಸ್ಯ ವಸ್ತ್ರಬುದ್ಧ್ಯಾ ತು ಭೋಜನೋಭಯತಃ ಪಿಬನ್ । ಸ್ವರ್ಗೇ ಮುಕ್ತೌ ತಥಾ ದಿವ್ಯವಸ್ತ್ರಲಾಭೀ ಭವತ್ಯಲಂ ॥ ಇತಿ ಪ್ರಭಂಜನೇ ॥ ೧ ॥**

ಅ ॥ (೧) ಪ್ರತಿ ಇಂದ್ರಿಯ ಮತ್ತು ಇಂದ್ರಿಯಾಭಿಮಾನಿ ದೇವತೆ ಇವರಲ್ಲಿ ನಿಯಾಮಕನಾಗಿ ಇದ್ದುದರಿಂದ ಮುಖ್ಯಪ್ರಾಣನು ಪ್ರತ್ಯಕ್ಷನೆನಿಸುತ್ತಾನೆ. (೨) (**ನ ಹ ವಾ ಏವಂವಿದಿ ಕಿಂಚನಾನನ್ನಂ ಭವತಿ** ಎಂಬುದರ ಅರ್ಥ ಹೇಳುತ್ತಾರೆ—) ಮುಖ್ಯವಾಗಿ ರುದ್ರನೇ ಪ್ರಾಣನನ್ನು ತಿಳಿಯಲಿಕ್ಕೆ ಯೋಗ್ಯನು ಅದುಕಾರಣ ಅವನೇ ಸರ್ವಭೋಕ್ತನು. ಬೇರೆಯುವರಿಗೆ ಅವರವರ ಯೋಗ್ಯತಾನುಸಾರ ಸರ್ವಭೋಕ್ತೃತ್ವವು (೩) (ಮುಖ್ಯಪ್ರಾಣನಿಗೆ ಅನ್ನವನ್ನೂ ವಸ್ತ್ರವನ್ನೂ ದೇವತೆಗಳು ಕೊಡುತ್ತಾರೆಂದು ಹೇಳಿದುದು ಮೊದಲು ಇದ್ದುದನ್ನೇ ಕೊಡುವುದೋ, ಮೊದಲು ಆ ಮುಖ್ಯಪ್ರಾಣನಿಗೆ ಇಲ್ಲದಿದ್ದನ್ನು ಕೊಡುವುದೋ, ಮೊದಲು ಇದ್ದುದನ್ನೇ ಕೊಡುತ್ತಾರೆಂದು ಹೇಳಲಾಗುವುದಿಲ್ಲ. (ಏಕೆಂದರೆ—) ಮುಖ್ಯಪ್ರಾಣನದ್ದನ್ನೇ ಮುಖ್ಯಪ್ರಾಣನಿಗೆ ಕೊಡುತ್ತಾರೆಂಬುದು ಕೂಡಲಾರದು. ಮುಖ್ಯಪ್ರಾಣನಿಗೆ ಮೊದಲು ಇಲ್ಲದಿದ್ದುದನ್ನು ಕೊಡುತ್ತಾರೆಂಬುದೂ ಕೂಡುವುದಿಲ್ಲ. ಏಕೆಂದರೆ—ಮುಖ್ಯಪ್ರಾಣನು ದೇವತೆಗಳ ಅಧೀನದಲ್ಲಿದ್ದಾನೆಂದು ಅನ್ನಬೇಕಾಗುವುದು. ಎಂದರೆ—) ಶ್ರೀವಿಷ್ಣುವು ಸರ್ವಸ್ವತಂತ್ರನಾದುದರಿಂದ ಮೊದಲೇ ಆತನ ಅಧೀನದಲ್ಲಿರುವ ಅನ್ನವಸ್ತ್ರ ಮೊದಲಾದುದನ್ನು ಭಕ್ತರು ತಮ್ಮ ಪ್ರಯೋಜನಕ್ಕಾಗಿ ಹೇಗೆ ಸಮರ್ಪಿಸುತ್ತಾರೋ, ಹಾಗೆಯೇ ದೇವತೆಗಳೂ ಮೊದಲೇ ಆತನ ಅಧೀನದಲ್ಲಿರುವ ಅನ್ನವಸ್ತ್ರಗಳನ್ನು ಸಮರ್ಪಿಸಿದರು ಹೀಗೆ ಕರ್ಮಾನುಪೂರ್ವೀ ಎಂಬ ಗ್ರಂಥದಲ್ಲಿದೆ (೪) (೨ನೇ ಮಂತ್ರದಲ್ಲಿದ್ದ **ಲಂಭುಕೋ ಹ ವಾಸಃ** ಇತ್ಯಾದಿಗಳ ಅರ್ಥ ಹೇಳುತ್ತಾರೆ—) ಮುಖ್ಯಪ್ರಾಣನಿಗೆ ವಸ್ತ್ರವೆಂಬ ಬುದ್ಧಿಯಿಂದ ಭೋಜನದ ಪೂರ್ವೋತ್ತರಗಳಲ್ಲಿ ಆಪೋಶನ ತೆಗೆದುಕೊಳ್ಳುವವನು ಸ್ವರ್ಗದಲ್ಲಿಯೂ ಮೋಕ್ಷದಲ್ಲಿಯೂ ದಿವ್ಯವಾದ ವಸ್ತ್ರವನ್ನು ನಿಶ್ಚಯವಾಗಿಯೂ ಹೊಂದುತ್ತಾನೆ, ಎಂದು ಪ್ರಭಂಜನವೆಂಬ ಗ್ರಂಥದಲ್ಲಿದೆ. ॥ ೧ ॥

ಪೀ—**ಯದ್ಯಪ್ಯೇತತ್ ಶುಷ್ಕಾಯ ಸ್ಥಾಣವೇ ಬ್ರೂಯಾತ್** ಇತ್ಯಾದಿ ೩ನೇ ಮಂತ್ರದ ಅರ್ಥ ಹೇಳುತ್ತಾರೆ—

**ಭಾ. ॥ (೧) ಯೋಗ್ಯಸ್ಯ ಪ್ರಾಣವಿದ್ಯಾಯಾಂ ಸ್ಥಾಣೋರಪಿ ಹಿ ತಚ್ಛ್ರುತೇಃ । ಪಲಾಶಾದ್ಯಂ ಭವೇದತ್ರ ಪರತೋ ಮುಕ್ತಿರೇವ ಚ ॥ ವಿಷ್ಣೋರ್ಜ್ಞಾನಮನುಪ್ರಾಪ್ಯ ಭವೇನ್ನಾಸ್ತ್ಯತ್ರ ಸಂಶಯಃ । ಇತಿ ಪ್ರಾಣಸಂಹಿತಾಯಾಂ ॥ (೨) ಜ್ಯೇಷ್ಠಶ್ರೇಷ್ಠಾದಿಕೈರ್ಗುಣೈರ್ಜ್ಞಾತ್ವಾ ಪ್ರಾಣಾಯಾತ್ರ ಪರತ್ರ ಚ । ಜ್ಯೇಷ್ಠಃ ಶ್ರೇಷ್ಠಃ ಸಮಾನೇಭ್ಯೋ ಭವೇನ್ನಾತ್ರ ವಿಚಾರಣಾ ॥**

**ಇತಿ ಚ ॥ (೩) ಸವಿತುರ್ಜಗತ್ಪ್ರಸವಿತುರ್ವಿಷ್ಣೋಃ ಸಕಾಶಾದ್ವಯಂ ಭೋಜನಂ ರಕ್ಷಾಂ ಸರ್ವಭೋಗಾಂಶ್ಚ ವೃಣೀಮಹೇ । ಭಗಸ್ಯ ಸಮಗ್ರೈಶ್ವರ್ಯಾದಿಸರ್ವಗುಣಸ್ವರೂಪಸ್ಯ ವಿಷ್ಣೋಃ । ಪುರುಷಂ ತುರಂ ವಾಯುಂ ಶ್ರೇಷ್ಠಂ ಸರ್ವಧಾತೄಣಾಂ ಉತ್ತಮಂ ಚ ಧೀಮಹಿ ॥ (೪) ನಾರಾಯಣೀಯಂ ತಂ ವಾಯುಂ ಚಿಂತಯಿತ್ವೋತ್ತಮೋತ್ತಮಂ । ಜಗತ್ಪ್ರಸವಿತುರ್ವಿಷ್ಣೋಃ ಸಕಾಶಾದ್ಭೋಗಮಾಪ್ನುಮಃ ॥ ಇತಿ ಚ ॥೧....೮॥ ಇತಿ ದ್ವಿತೀಯಃ ಖಂಡಃ ॥ ೭–೨ ॥　　॥ ೨ ॥**

**ಅ** ॥ (೧) ಪ್ರಾಣವಿದ್ಯೆಯಲ್ಲಿ ಯೋಗ್ಯನಾದವನು ಜನ್ಮಾಂತರದ ಕರ್ಮಾನುಸಾರವಾಗಿ ವೃಕ್ಷಜನ್ಮವನ್ನು ಹೊಂದಿದರೆ— ಅಂತಹ *ಮರಕ್ಕೂ ಪ್ರಾಣವಿದ್ಯೆಯನ್ನು ಪದೇಶಿಸಿದರೆ ಆ ಮರದಲ್ಲಿ ಜೀವವುಂಟಾಗಿ ಎಲೆ ಮೊದಲಾದವುಗಳು ತುಂಬುತ್ತವೆ ಆತನು (ವೃಕ್ಷಭಾವವನ್ನು ಬಿಟ್ಟು) ಮನುಷ್ಯನಾಗಿ ಹುಟ್ಟಿ ವಿಷ್ಣುವಿನ ಜ್ಞಾನವನ್ನು ಸಂಪಾದಿಸಿ ಮೋಕ್ಷವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ, ಎಂದು ಪ್ರಾಣಸಂಹಿತೆಯಲ್ಲಿದೆ (೨) (೪, ೫ ಮಂತ್ರಗಳಲ್ಲಿದ್ದ **ಜ್ಯೇಷ್ಠಾಯ ಸ್ವಾಹಾ** ಇತ್ಯಾದಿಗಳ ಅರ್ಥದಲ್ಲಿ ಪ್ರಮಾಣ ಹೇಳುತ್ತಾರೆ—) ಮುಖ್ಯಪ್ರಾಣನನ್ನುದ್ದೇಶಿಸಿ **ಜ್ಯೇಷ್ಠಾಯ ಶ್ರೇಷ್ಠಾಯ ಸ್ವಾಹಾ** ಇತ್ಯಾದಿ ಮಂತ್ರಗಳಿಂದ ಹೋಮಮಾಡಿ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಮಾನಿಕರಿಗಿಂತ ಜ್ಯೇಷ್ಠನೂ ಶ್ರೇಷ್ಠನೂ ಆಗುವನು. ಈ ವಿಷಯದಲ್ಲಿ ಸಂದೇಹವಿಲ್ಲ. (೩) (ಮುಖ್ಯಪ್ರಾಣನೇ ದೇವತೆಯಾಗಿ ಉಳ್ಳ ಯಾಗವನ್ನು ಪ್ರಾರಂಭಿಸಿ **ತತ್ಸವಿತುಃ** ಎಂಬ ಸವಿತೃಮಂತ್ರವನ್ನು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ - ) ಸವಿತುಃ= ಜಗತ್ತನ್ನು ಸೃಷ್ಟಿಮಾಡಿದ ವಿಷ್ಣುವಿನಿಂದ, ನಾವು †ಭೋಜನಂ= ರಕ್ಷಣೆಯನ್ನೂ ಸಮಸ್ತ ಭೋಗಗಳನ್ನೂ ಹೊಂದುವೆವು. ಭಗಸ್ಯ=ಸಂಪೂರ್ಣ ಐಶ್ವರ್ಯಾದಿ ಸರ್ವಗುಣಸ್ವರೂಪನಾದ ವಿಷ್ಣುವಿನ ಭೃತ್ಯನಾದ ಮುಖ್ಯವಾಯುವನ್ನು ಸರ್ವಶ್ರೇಷ್ಠನನ್ನಾಗಿಯೂ, ಸರ್ವಜಗದ್ಧಾರಕರಾದ ರುದ್ರಾದಿದೇವತೆಗಳಲ್ಲಿ ಉತ್ತಮನನ್ನಾಗಿಯೂ ಧ್ಯಾನಿಸುವೆವು, (ಅದುಕಾರಣ ಪ್ರಾಣನಿಗೂ ಆದಿತ್ಯನಿಗೂ ಐಕ್ಯವೆಂಬ ಅಭಿಪ್ರಾಯದಿಂದ ಪ್ರಾಣನೇ ದೇವತೆಯಾಗಿ ಉಳ್ಳ ಯಾಗವನ್ನು ಪ್ರಾರಂಭಿಸಿ ಸಾವಿತ್ರ (ಸೂರ್ಯನ) ಮಂತ್ರವನ್ನು ಹೇಳಿದ್ದು, ಎಂದು ಪರರು ಹೇಳುವುದು ಅಯುಕ್ತವು.) (೪) (ಪರರು ಹೇಳುವ ಅರ್ಥವೇ ಏಕೆ ಆಗಲಾರದೆಂದರೆ—ಈ ಋಕ್ಕಿನ ಅರ್ಥವನ್ನು ಪ್ರಮಾಣ ಹೇಳಿ ದೃಢೀಕರಿಸುತ್ತಾರೆ—) ಶ್ರೀನಾರಾಯಣನ ಭೃತ್ಯನಾದ ಮುಖ್ಯಪ್ರಾಣನನ್ನು ಉತ್ತಮೋತ್ತಮನನ್ನಾಗಿ ಧ್ಯಾನಿಸಿ ಜಗತ್ತನ್ನು ಸೃಷ್ಟಿಸಿರುವ ವಿಷ್ಣುವಿನಿಂದ ನಿಖಿಲಭೋಗಗಳನ್ನು ಹೊಂದುವೆವು. ॥ ೭—೨ ॥　　॥ ೨ ॥

**ಎರಡನೇ ಖಂಡವು ಮುಗಿಯಿತು.**

## ೩ನೇ ಖಂಡವು

**ಪೀ** - ಹಿಂದಿನ ಖಂಡಗಳಲ್ಲಿ ಅಪರಬ್ರಹ್ಮನಾದ ಮುಖ್ಯಪ್ರಾಣನ ವಿದ್ಯೆಯನ್ನು ಹೇಳಿರುವರು. ಈಗ ವೈರಾಗ್ಯವು ಹುಟ್ಟುವುದಕ್ಕಾಗಿ ಪರಬ್ರಹ್ಮನನ್ನು ಹೇಳುವ ಪಂಚಾಗ್ನಿವಿದ್ಯೆಯನ್ನೂ, ಧೂಮಮಾರ್ಗವನ್ನೂ ಅರ್ಚಿರಾದಿ ಮಾರ್ಗವನ್ನೂ ಪ್ರಾಚೀನಕಥೆ ಹೇಳಿಕೊಂಡು ಹೇಳುತ್ತಾರೆ—

---

* ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದಲ್ಲಿ ಸ್ಥಾವರನಾದ ವೃಕ್ಷಜೀವನೂ ಯೋಗ್ಯನಾಗಿದ್ದು ಈ ಪ್ರಾಣವಿದ್ಯೆಯನ್ನು ಕೇಳಿದರೆ ಮೋಕ್ಷವನ್ನು ಹೊಂದುತ್ತಾನೆನ್ನುವಾಗ ಅಧಿಕಾರಿ ಜಂಗಮಜೀವನು ಈ ವಿದ್ಯೆಯನ್ನು ಕೇಳಿದರೆ ಮೋಕ್ಷ ಹೊಂದುತ್ತಾನೆಂಬುದು ಸುತರಾಂ ಸಿದ್ಧಿಸುತ್ತದೆ.

† ಭುಜ ಪಾಲನಾಭ್ಯವಹಾರಯೋಃ ಎಂಬ ಧಾತುವ್ಯಾಖ್ಯಾನದಿಂದ ಈ ಎರಡು ಅರ್ಥಗಳು ಸಿಗುತ್ತವೆ.

**ಉ. || ಶ್ವೇತಕೇತುರ್ಹಾರುಣೇಯಃ ಪಂಚಾಲಾನಾꣳ ಸಮಿತಿಮೇಯಾಯ ತꣳ ಹ ಪ್ರವಾಹಣೋ ಜೈಬಿಲಿರುವಾಚ ಕುಮಾರಾ೩ನು ತ್ವಾಶಿಷತ್ಪಿತೇತ್ಯನು ಹಿ ಭಗವ ಇತಿ || ೧ ||**

ಅ || ಅರುಣಿಯ ಮಗನಾದ ಶ್ವೇತಕೇತು ಎಂಬವನು (ತಂದೆಯವರಿಂದ ವಿದ್ಯಾಭ್ಯಾಸ ಮಾಡಿ ತನ್ನ ಪಾಂಡಿತ್ಯವನ್ನು ತೋರ್ಪಡಿಸುವುದಕ್ಕಾಗಿ) ಪಂಚಾಲ ದೇಶಾಧಿಪತಿಯ ಸಭೆಗೆ ಹೋದನು. ಆಗ ಜಿಬಿಲನ ಮಗನಾದ ಪ್ರವಾಹಣ ರಾಜನು ಶ್ವೇತಕೇತುವಿಗೆ ಎಲೋ ಕುಮಾರನೇ ನಿನ್ನ ತಂದೆಯು ನಿನಗೆ ವಿದ್ಯೆಯನ್ನು ಉಪದೇಶ ಮಾಡಿರುವನೊ ಏನು? ಎಂದು (ಅಹಂಕಾರವನ್ನು ಕಳೆಯುವುದಕ್ಕಾಗಿ) ಕೇಳಿದನು. ಆಗ ಕುಮಾರನು ಪೂಜ್ಯನಾದ ರಾಜನೇ ತಂದೆಯವರು ನನಗೆ ಉಪದೇಶ ಮಾಡಿರುವರು, ಎಂದನು. || ೧ ||

ಪೀ—ಆಗ ಪ್ರವಾಹಣರಾಜನು ಕೇಳುತ್ತಾನೆ—

**ಉ. || ವೇತ್ಥ ಯದಿತೋಽಧಿಪ್ರಜಾಃ ಪ್ರಯಂತೀತಿ ನ ಭಗವ ಇತಿ ವೇತ್ಥ ಯಥಾ ಪುನರಾವರ್ತಂತಾ೩ ಇತಿ ನ ಭಗವ ಇತಿ ವೇತ್ಥ ಪಥೋರ್ದೇವಯಾನಸ್ಯ ಪಿತೃಯಾಣಸ್ಯ ಚ ವ್ಯಾವರ್ತನಾ೩ ಇತಿ ನ ಭಗವ ಇತಿ || ೨ ||**

ಅ || (1) ಈ ಲೋಕದಿಂದ ಲೋಕಾಂತರಕ್ಕೆ ಹೋಗುವ ಪ್ರಜೆಗಳು ಯಾವ ಮಾರ್ಗದಿಂದ ಬ್ರಹ್ಮಲೋಕಕ್ಕಾಗಲೀ ಚಂದ್ರಲೋಕಕ್ಕಾಗಲೀ ಹೋಗುತ್ತಾರೋ ಅಂತಹ ಮಾರ್ಗವನ್ನು ತಿಳಿದಿರುತ್ತೀಯೋ ಏನು? ಎಂದು ಪ್ರವಾಹಣರಾಜನು ಕೇಳಿದನು. ಆಗ ಶ್ವೇತಕೇತುವು ರಾಜನೇ ನಾನು ಅದನ್ನು ತಿಳಿಯಲಿಲ್ಲವೆಂದನು. (2) ಮರಳಿ ರಾಜನು ಪುನರಾವೃತ್ತಿಯುಳ್ಳ ಚಂದ್ರಲೋಕಕ್ಕೆ ಹೋದ ಪ್ರಜೆಗಳು ಯಾವ ಮಾರ್ಗದಿಂದ ಈ ಲೋಕಕ್ಕೆ ತಿರುಗಿಬರುತ್ತಾರೋ ಅದನ್ನು ತಿಳಿದಿರುತ್ತೀಯೋ ಏನು? ಎಂದು ಕೇಳಿದನು. (ಅಂದರೆ—ಹೋದ ಮಾರ್ಗದಿಂದಲೇ ತಿರುಗಿಬರುವುದೋ, ಬೇರೆ ಮಾರ್ಗದಿಂದಲೋ ಎಂದನು.) ಶ್ವೇತಕೇತುವು ಅದನ್ನು ತಿಳಿಯಲಿಲ್ಲವೆಂದನು. (3) ಮರಳಿ ಪ್ರವಾಹಣರಾಜನು ಮೂರನೇ ಪ್ರಶ್ನೆ ಕೇಳುತ್ತಾನೆ. ದೇವಯಾನ (ಅಹರಾದಿಮಾರ್ಗ) ಪಿತೃಯಾನ (ಧೂಮಾದಿಮಾರ್ಗ) ಗಳೆಂಬ ಮಾರ್ಗಗಳ ಮಧ್ಯದಲ್ಲಿ ಹೊಂದಲ್ಪಡತಕ್ಕ ಸ್ಥಾನಗಳು ಯಾವ ರೀತಿಯಾಗಿ ಇರುತ್ತವೋ ಆ ಪ್ರಕಾರವನ್ನು ತಿಳಿದಿರುತ್ತೀಯೋ ಏನು? ಎಂದನು. ಅಥವಾ ದೇವಯಾನವನ್ನು ಹೊಂದುವ ಸಾಧನವನ್ನೂ ಪಿತೃಯಾನವನ್ನು ಹೊಂದುವ ಸಾಧನವನ್ನೂ ತಿಳಿದಿರುತ್ತೀಯೋ ಏನು? ಎಂದನು. ಶ್ವೇತಕೇತುವು ಅದನ್ನು ತಿಳಿಯಲಿಲ್ಲವೆಂದನು. ||೨||

ಪೀ—ನಾಲ್ಕನೇ ಪ್ರಶ್ನೆ ಕೇಳುತ್ತಾನೆ—

**ಉ. || ವೇತ್ಥ ಯಥಾಽಸೌ ಲೋಕೋ ನ ಸಂಪೂರ್ಯತಾ೩ ಇತಿ ನ ಭಗವ ಇತಿ ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತೀತಿ ನೈವ ಭಗವ ಇತಿ || ೩ ||**

ಅ || ಭೂಲೋಕದಿಂದ ಮತ್ತೂಮತ್ತು ಮೇಲಿನ ಲೋಕಕ್ಕೆ ಹೋದವರಿಂದ ಪರಲೋಕವು ತುಂಬದಿರಲು ಕಾರಣವೇನು? ಅದನ್ನು ತಿಳಿದಿರುತ್ತೀಯೋ ಏನು? ಎಂದು ಪ್ರವಾಹಣನ ಪ್ರಶ್ನೆಗೆ ಶ್ವೇತ

ಕೇತುವು ತಿಳಿಯಲಿಲ್ಲವೆಂದು ಉತ್ತರಿಸಿದನು. (೫ನೇ ಪ್ರಶ್ನೆಯನ್ನು ಕೇಳುತ್ತಾನೆ - ) ಯಾವ ಕ್ರಮದಿಂದ ಯಾವ ಪ್ರಕಾರದಿಂದ ಐದನೇ ಆಹುತಿಯು ಹೋಮಿಸಲ್ಪಡುತ್ತಿರಲು (ಅಂದರೆ—ಸ್ತ್ರೀಯರಲ್ಲಿ ರೇತಸ್ಸನ್ನು ಇಟ್ಟಾಗ) ಜಲ ಮೊದಲಾದ ಪಂಚಮಹಾಭೂತಗಳಿಂದ ಕೂಡಿದ ಜೀವರು, ಪುರುಷರು, ಸ್ತ್ರೀಯರು ಎಂಬ ಹೆಸರುಳ್ಳವರಾಗುತ್ತಾರೋ, ಆ ಕ್ರಮವನ್ನು ಆ ಪ್ರಕಾರವನ್ನು ತಿಳಿದಿರುತ್ತೀಯೋ ಏನು? ಎಂದನು. ಆಗ ಶ್ವೇತಕೇತುವು ಅದನ್ನು ನಾನು ತಿಳಿಯಲಿಲ್ಲವೆಂದನು. || ೩ ||

ಪೀ— ಪ್ರವಾಹಣರಾಜನು ಹೇಳುತ್ತಾನೆ—

**ಉ. || ಅಥ ನು ಕಿಮನುಶಿಷ್ಟೋಽವೋಚಥಾ ಯೋ ಹೀಮಾನಿ ನ ವಿದ್ಯಾತ್ಕಥಂ ಸೋಽನುಶಿಷ್ಟೋ ಬ್ರುವೀತೇತಿ ಸ ಹಾಯಸ್ತಃ ಪಿತುರರ್ಧಮೇಯಾಯ ತಂ ಹೋವಾಚಾನನುಶಿಷ್ಯ ವಾವ ಕಿಲ ಮಾ ಭಗವಾನಬ್ರವೀದನುತ್ವಾಶಿಷಮಿತಿ || ೪ ||**

ಅ || ಎಲೋ ಶ್ವೇತಕೇತುವೇ, ಹೀಗೆ ತಿಳಿಯದಿದ್ದ ನೀನು ತಂದೆಯಿಂದ ಉಪದೇಶಿಸಲ್ಪಟ್ಟವನು ಆಗಿರುತ್ತೇನೆಂದು ಹೇಗೆ ಹೇಳಿದಿ, ನಾನು ಹೇಳಿದ ಪ್ರಮೇಯಗಳಲ್ಲಿ ಒಂದನ್ನೂ ತಿಳಿಯದವನು ವಿದ್ವಾಂಸನು, ತಂದೆಯುವರಿಂದ ಉಪದೇಶ ಪಡೆದವನು ಎಂದು ಹೇಗೆ ಹೇಳಿಯಾನು? ಎಂದು ಪ್ರವಾಹಣನು ಕೇಳಿದನು. ಆಗ ಶ್ವೇತಕೇತುವು ಉತ್ತರಕೊಡಲಿಕ್ಕೆ ಅಶಕ್ತನಾಗಿ ದುಃಖದಿಂದ ತನ್ನ ತಂದೆಯ ಸ್ಥಾನಕ್ಕೆ ಹೋಗಿ ತಂದೆಗೆ ಹೇಳಿದನು. ಎಲೋ ಪೂಜ್ಯರೇ ನನಗೆ ಚೆನ್ನಾಗಿ ವಿದ್ಯೋಪದೇಶ ಮಾಡದೇನೇ ನಿನಗೆ ವಿದ್ಯೋಪದೇಶ ಮಾಡಿರುವೆನೆಂದು ನನಗೆ ನೀವು ಹೇಳಿರುವಿರಷ್ಟೆ. || ೪ ||

**ಉ. || ಪಂಚಮಾ ರಾಜನ್ಯಬಂಧುಃ ಪ್ರಶ್ನಾನಪ್ರಾಕ್ಷೀತ್ತೇಷಾಂ ನೈಕಂ ಚನಾಶಕಂ ವಿವಕ್ತುಮಿತಿ ಸ ಹೋವಾಚ ಯಥಾ ಮಾ ತ್ವಂ ತಾತೈತಾನವದೋ ಯಥಾಽಹಮೇಷಾಂ ನೈಕಂಚನ ವೇದ ಯದ್ಯಹಮಿಮಾನವೇದಿಷ್ಯಂ ಕಥಂ ತೇನಾವಕ್ಷ್ಯಮಿತಿ || ೫ ||**

ಅ || *ರಾಜಾಧಮನು ನನ್ನೊಡನೆ ಐದು ಕೇಳಲರ್ಹಗಳಾದ ಪ್ರಮೇಯಗಳನ್ನು ಕೇಳಿರುವನು. ಅವುಗಳಲ್ಲಿ ಒಂದು ಪ್ರಶ್ನೆಗೂ ಉತ್ತರಕೊಡಲಿಕ್ಕೆ ನಾನು ಶಕ್ತನಾಗಲಿಲ್ಲವೆನ್ನುತ್ತಾ ಪ್ರಶ್ನೆ ವಾಕ್ಯಗಳನ್ನೆಲ್ಲಾ ಹೇಳಿ ಅವುಗಳಿಗೆ ಉತ್ತರಕೊಡಬೇಕೆಂದು ಪ್ರಾರ್ಥಿಸಿಕೊಂಡನು. ಆಗ ತಂದೆಯು ಮಗನನ್ನು ಸಮಾಧಾನಗೊಳಿಸಿ ಎಲೋ ಮಗನೇ ಈ ಪ್ರಶ್ನೆಗಳಿಗೆ ಉತ್ತರ ಕೊಡಬೇಕೆಂದು ನನ್ನೊಡನೇ ನೀನು ಕೇಳಿರುತ್ತಿ. ನಾನು ಈ ಪ್ರಶ್ನೆಗಳಲ್ಲಿ ಒಂದಕ್ಕೂ ಉತ್ತರವನ್ನು ತಿಳಿಯಲಾರೆ ನಾನು ತಿಳಿದಿದ್ದರೆ ಪ್ರಿಯನಾದ ನಿನಗೆ ಹೇಗೆ ಹೇಳದಿರುವೆನು. (ತಿಳಿದ ಪ್ರಮೇಯವನ್ನೆಲ್ಲಾ ನಿನಗೆ ನಾನು ಹೇಳಿರುವೆನು. ರಾಜನು ಕೇಳಿದ ವಿದ್ಯೆಯಲ್ಲಿ ಇಚ್ಛೆಯಿದ್ದರೆ ರಾಜನ ಬಳಿಗೆ ಬಾ. ಅಲ್ಲಿ ವಿದ್ಯಾಭ್ಯಾಸಕ್ಕಾಗಿ ಬ್ರಹ್ಮಚರ್ಯವನ್ನು ಕೈಗೊಳ್ಳುವ ಎಂದು ತಂದೆಯು ಹೇಳಿದಾಗ ಮಗನು ನೀವೇ ಹೋಗಿರಿ ಎಂದನು.) || ೫ ||

---

* ಪ್ರವಾಹಣನು ಯದ್ಯಪಿ ಕ್ಷತ್ರಿಯರಲ್ಲಿ ಶ್ರೇಷ್ಠನೇ ಆಗಿರುತ್ತಾನೆ ಆದರೂ ಶ್ವೇತಕೇತುವಿಗೆ ಉತ್ತರಿಸಲಿಕ್ಕೆ ಸಾಧ್ಯವಾಗದಿರುವುದರಿಂದ ಸಿಟ್ಟಿನಿಂದ ರಾಜನ್ಯಬಂಧುಃ= ಕ್ಷತ್ರಿಯಾಭಾಸನೆಂದು ಹೇಳಿದ್ದು

**ಉ. ‖ ಸ ಹ ಗೌತಮೋ ರಾಜ್ಞೋಽರ್ಧಮೇಯಾಯ ತಸ್ಮೈ ಹ ಪ್ರಾಪ್ತಾಯಾರ್ಹಾಂ ಚಕಾರ ಸ ಹ ಪ್ರಾತಃ ಸಭಾಗ ಉದೇಯಾಯ ತꣳ ಹೋವಾಚ ಮಾನುಷಸ್ಯ ಭಗವನ್ ಗೌತಮ ವಿತ್ತಸ್ಯ ವರಂ ವೃಣೀಥಾ ಇತಿ ಸ ಹೋವಾಚ ತವೈವ ರಾಜನ್ಮಾನುಷಂ ವಿತ್ತಂ ಯಾಮೇವ ಕುಮಾರಸ್ಯಾಂತೇ ವಾಚಮಭಾಷಥಾಸ್ತಾಮೇವ ಮೇ ಬ್ರೂಹೀತಿ ‖ ೬ ‖**

ಅ ‖ ಆ ಮೇಲೆ ತಂದೆಯಾದ ಗೌತಮರು ರಾಜನ ಸ್ಥಾನಕ್ಕೆ ಹೋದರು. ರಾಜನು ಬಂದಿರ ತಕ್ಕ ಗೌತಮರಿಗೆ ಪೂಜೆಮಾಡಿದನು. ಗೌತಮರು ಆ ದಿನ ಅಲ್ಲಿ ಉಳಿದು ಮರುದಿನ ಪ್ರಾತಃಕಾಲ ದಲ್ಲಿ ರಾಜನು ಸಭೆಗೆ ಹೋದಾಗ ಕೈಕಾಣಿಕೆ ಹಿಡಿದುಕೊಂಡು ರಾಜನ ಬಳಿಗೆ ಹೋದರು ರಾಜನು ದೈವವಿತ್ತ (ವಿದ್ಯೆ) ವನ್ನಪೇಕ್ಷಿಸಿ ಗೌತಮರು ಬಂದದ್ದೆಂದು ಅವರ ಮನಸ್ಸಿನ ಅಭಿಪ್ರಾಯ ತಿಳಿದು, ಎಲೋ ಗೌತಮರೇ ಆನೆ, ಕುದುರೆ, ಗೋವು, ಹಿರಣ್ಯ ಮೊದಲಾದ ಮಾನುಷವಿತ್ತವನ್ನು ಹೊಂದಿರಿ ಎಂದನು. ಆಗ ಗೌತಮರು ಎಲೋ ರಾಜನೇ ಮನುಷ್ಯವಿತ್ತವೆಲ್ಲವೂ ನಿನಗೇನೇ ಇರಲಿ. ನನ್ನ ಮಗನಿಗೆ ಯಾವ ಪ್ರಶ್ನೆ ಕೇಳಿರುತ್ತೀಯೋ, ಅದನ್ನೇ (ಅದಕ್ಕೆ ಉತ್ತರವನ್ನೇ) ನನಗೆ ಹೇಳು ಎಂದು ಗೌತಮರು ಹೇಳಿದರು. ‖ ೬ ‖

**ಉ. ‖ ಸ ಹ ಕೃಚ್ಛ್ರೀ ಬಭೂವ ತꣳ ಹ ಚಿರಂ ವಸೇತ್ಯಾಜ್ಞಾಪಯಾಂಚಕಾರ ತꣳ ಹೋವಾಚ ಯಥಾ ಮಾ ತ್ವಂ ಗೌತಮಾವದೋ ಯಥೇಯಂ ನ ಪ್ರಾಕ್ತ್ವತ್ತಃ ಪುರಾ ವಿದ್ಯಾ ಬ್ರಾಹ್ಮಣಾನ್ ಗಚ್ಛತಿ ತಸ್ಮಾದು ಸರ್ವೇಷು ಲೋಕೇಷು ಕ್ಷತ್ರಸ್ಯೈವ ಪ್ರಶಾಸನಮಭೂದಿತಿ ತಸ್ಮೈ ಹೋವಾಚ ‖ ಇತಿ ತೃತೀಯಃ ಖಂಡಃ ‖ ೭-೩ ‖ ‖ ೭ ‖**

ಅ ‖ ಆಗ ರಾಜನು ಗೌತಮರು ಕೇಳಿದ ಪ್ರಮೇಯವು ಅತಿ ಗೋಪ್ಯವಾಗಿರುವ ಪ್ರಯುಕ್ತ (ಏನು ಮಾಡುವುದೆಂದು ತಿಳಿಯದೆ) ಕ್ಲೇಶಪಟ್ಟನು (**ನಾಸಂವತ್ಸರವಾಸಿನೇ ಪ್ರಬ್ರೂಯಾತ್** ಸಂವತ್ಸರ ಪರ್ಯಂತ ಆವಾಸಮಾಡದಿರುವವನಿಗೆ ಉಪದೇಶಿಸಬಾರದು, ಎಂಬ ಶಾಸ್ತ್ರಾನುಸಾರ) ರಾಜನು ಆ ಗೌತಮರಿಗೆ ಬಹುಕಾಲ ಆವಾಸ ಮಾಡಿರಿ. ಎಂದರುಹಿದನು ರಾಜನು ಗೌತಮರಿಗೆ ಹೇಳಿದನು. ಎಲೋ ಗೌತಮರೇ ನೀವು ಯಾವ ವಿದ್ಯೆಯನ್ನು ಹೇಳಬೇಕೆಂದು ನನ್ನೊಡನೆ ಹೇಳಿರುವಿರೋ, ಈ ಪಂಚಾಗ್ನಿ ವಿದ್ಯೆಯು ನಿಮಗಿಂತ ಮೊದಲು ಬ್ರಾಹ್ಮಣರಲ್ಲಿ ಇರಲೇ ಇಲ್ಲ. (ಈ ವಿದ್ಯೆಯು ಕ್ಷತ್ರಿಯರಿಗೇನೇ ಅಸಾಧಾರಣವಾದ ವಿದ್ಯೆಯು.) ಈ ವಿದ್ಯೆಯು ಕ್ಷತ್ರಿಯರಲ್ಲಿ ಮಾತ್ರ ಇರತಕ್ಕುದಾದಪ್ರಯುಕ್ತವೇ ಈ ವಿದ್ಯಾಭ್ಯಾಸದಿಂದಲೇ ಎಲ್ಲಾ ಲೋಕಗಳಲ್ಲಿ ಕ್ಷತ್ರಿಯರಿಗೇನೇ ರಾಜ್ಯಪರಿಪಾಲನಾದಿ ಅಧಿಕಾರಗಳು ಬಂದಿವೆ. ಎಂದು ಹೇಳಿ ರಾಜನು ಗೌತಮರಿಗೆ ವಿದ್ಯೆಯನ್ನು ಹೇಳಿದನು. ‖ ೭—೩ ‖ ‖ ೭ ‖

ಮೂರನೇ ಖಂಡವು ಮುಗಿಯಿತು.

## ೪ನೇ ಖಂಡವು

**ಪೀ**—ಪ್ರಥಮದ ನಾಲ್ಕು ಪ್ರಶ್ನೆಗಳಿಗೆ ಉತ್ತರ ಹೇಳಲಿಕ್ಕೆ ಐದನೇ ಪ್ರಶ್ನೆಯ ಉತ್ತರದ ಅಪೇಕ್ಷೆಯಿದ್ದಪ್ರಯುಕ್ತ ಮೊದಲು ಐದನೇ ಪ್ರಶ್ನೆಗೆ ರಾಜನು ಉತ್ತರ ಹೇಳುತ್ತಾ ಅದಕ್ಕೆ ಜೀವರಿಗೆ ವೈರಾಗ್ಯವು ಹುಟ್ಟುವುದಕ್ಕಾಗಿ ಜೀವರು ಸ್ವರ್ಗದಿಂದ ಬರುವ ಪ್ರಕಾರವನ್ನು ಹೇಳುತ್ತಾ ಪಂಚಾಗ್ನಿ ವಿದ್ಯೆಯನ್ನು ಐದು ಖಂಡಗಳಲ್ಲಿ ಹೇಳುತ್ತಾರೆ—

**ಉ. ॥ ಅಸೌ ವಾವ ಲೋಕೋ ಗೌತಮಾಗ್ನಿಸ್ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಽಹರರ್ಚಿಶ್ಚಂದ್ರಮಾ ಅಂಗಾರಾ ನಕ್ಷತ್ರಾಣಿ ವಿಸ್ಫುಲಿಂಗಾಃ ॥ ೧ ॥**

**ಅ** ॥ ಎಲೋ ಗೌತಮರೇ, ಮುಖ್ಯಪ್ರಾಣನಲ್ಲಿರತಕ್ಕ ಪ್ರಕಾಶರೂಪನಾದ ದ್ಯುಲೋಕದಲ್ಲಿದ್ದ ಶ್ರೀನಾರಾಯಣನೇ ಸರ್ವಸಂಹಾರಕನಾದುದರಿಂದಲೂ ಸರ್ವಾಂಗಗಳಿಗೆ ಪ್ರೇರಕನಾದುದರಿಂದಲೂ ಅಗ್ನಿ ಎನಿಸಿಕೊಂಡವನು. (ದ್ಯುಲೋಕದಲ್ಲಿದ್ದ ನಾರಾಯಣನು ಪುನಃ ನಾರಾಯಣಾದಿರೂಪಗಳಿಂದ ಐದು ರೂಪಗಳುಳ್ಳವನು.) ಆ ದ್ಯುಲೋಕದೊಳಗಣ ನಾರಾಯಣನೆಂಬ ಅಗ್ನಿಗೆ ಆಯುಷ್ಯವನ್ನು ತೆಗೆದುಕೊಳ್ಳುವುದರಿಂದ ಆದಿತ್ಯನೆನಿಸಿದ ಆದಿತ್ಯನೊಳಗಣ ನಾರಾಯಣ ನಾರಾಯಣನು ಚೆನ್ನಾಗಿ ಪ್ರಕಾಶಗೊಳಿಸುವುದರಿಂದ ಸವಿತೃ ಎನಿಸಿಕೊಂಡವನು ಸಮಿಧೆಯ ಸ್ಥಾನನು. ಕ್ರೀಡೆ ಸುಖಸ್ವರೂಪನಾದುದರಿಂದ ರಶ್ಮಿ ಎನಿಸಿಕೊಂಡ ರಶ್ಮಿಯೊಳಗಣ ನಾರಾಯಣ ವಾಸುದೇವನು ಭಕ್ತರ ಅಜ್ಞಾನಾದಿಗಳನ್ನು ಕಳೆಯುವುದರಿಂದ ಧೂಮ (ಹೊಗೆ) ನೆನಿಸಿಕೊಂಡವನು, ಧೂಮಸ್ಥಾನನಾಗಿರುವವನು. ತಮ (ಕಗ್ಗತ್ತಲೆ) ಸ್ಪರ್ಶವಿಲ್ಲದವನಾದುದರಿಂದ ಅಹಃ (ಹಗಲು) ಎನಿಸಿಕೊಂಡು ಅಹಸ್ಸಿನಲ್ಲಿ (ಹಗಲಲ್ಲಿ) ಇರುವ ನಾರಾಯಣ ಸಂಕರ್ಷಣನು ಅರ್ಚಿಃ (ಪ್ರಕಾಶ) ಎನಿಸಿಕೊಂಡವನು ಅರ್ಚಿಸ್ಸಿನ ಸ್ಥಾನನು. ಸುಖಸ್ವರೂಪನಾದುದರಿಂದ ಚಂದ್ರನೆನಿಸಿಕೊಂಡ ಚಂದ್ರನಲ್ಲಿರುವ ನಾರಾಯಣಪ್ರದ್ಯುಮ್ನನು ಸರ್ವಾಂಗಗಳಲ್ಲಿಯೂ ಕ್ರೀಡಿಸುವುದರಿಂದ ಅಂಗಾರಾಃ ಎನಿಸಿಕೊಂಡವನು ಅಂಗಾರದಂತಿರುವವನು ಬೇರೆಯವರು ನಿಯಾಮಕರಿಲ್ಲದಿರುವುದರಿಂದ ನಕ್ಷತ್ರನೆನಿಸಿಕೊಂಡ ನಕ್ಷತ್ರದೊಳಗಣ ನಾರಾಯಣಾನಿರುದ್ಧನು ಮತ್ಸ್ಯಾದಿರೂಪದಿಂದ ಬಹುಪ್ರಕಾರ ಪ್ರಕಾಶಿಸುವುದರಿಂದ ವಿಸ್ಫುಲಿಂಗಾಃ ಎನಿಸಿಕೊಂಡವನು. ವಿಸ್ಫುಲಿಂಗ (ಅಗ್ನಿಯ ಕಿಡಿ) ವಂತೆ ಇರುವವನು ॥ ೧ ॥

**ಉ. ॥ ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ತಸ್ಯಾ ಆಹುತೇಃ ಸೋಮೋ ರಾಜಾ ಸಂಭವತಿ ॥ ಇತಿ ಚತುರ್ಥಃ ಖಂಡಃ ॥ ೭-೪ ॥ ॥ ೨ ॥**

**ಅ** ॥ ದ್ಯುಲೋಕದೊಳಗಣ ನಾರಾಯಣನೆನಿಸಿಕೊಂಡ, ನಾರಾಯಣನಾರಾಯಣಾದಿ ಐದು ರೂಪದಿಂದ ಪ್ರತ್ಯೇಕವಾಗಿ ಇರುವ, ಜೀವನೆಂಬ ಹವಿಸ್ಸನ್ನು ಹೋಮಿಸಲಿಕ್ಕೆ ಆಧಾರವಾದ ಅಗ್ನಿಸ್ಥಾನನಾದ ಅಗ್ನಿ ಎನಿಸಿಕೊಂಡ ಶ್ರೀಹರಿಯಲ್ಲಿ ದ್ಯುಲೋಕಕ್ಕೆ ಅಧಿಪತಿಗಳಾದ ದೇವತೆಗಳು ಶ್ರದ್ಧೆಯಿಂದ ಯಜ್ಞಾದಿಗಳನ್ನು ಮಾಡಿದ, ಜಲ ಮೊದಲಾದ ಪಂಚಭೂತ (ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ)ಗಳಿಂದ ಕೂಡಿದ ಜೀವನನ್ನು ಕೊಡುತ್ತಾರೆ. (ಇದರಿಂದ ಯಜಮಾನನ ಉತ್ಕ್ರಮಣಕಾಲದಲ್ಲಿಯೇ ಜಲಾದಿಗಳು ಒಟ್ಟಿಗೆ ಇರುತ್ತವೆಂದು ಸಿದ್ಧಿಸುತ್ತದೆ.) ಆ ನಾರಾಯಣನೆಂಬ ದ್ಯುಲೋಕಾಗ್ನಿಯಿಂದ ದೇವತೆಗಳು ಯಜಮಾನನನ್ನು ಸೋಮರಾಜನ ಲೋಕಕ್ಕೆ ಕಳುಹಿಕೊಡುತ್ತಾರೆ

ವಿ || ಯಾಗಾದಿಗಳನ್ನು ಮಾಡಿದುದರಿಂದುಂಟಾದ ಪುಣ್ಯದಿಂದ ಯಜಮಾನನನ್ನು ದೇವತೆಗಳು ದ್ಯುಲೋಕ (ಸ್ವರ್ಗ)ಕ್ಕೆ ಕಳುಹಿಸುತ್ತಾರೆ. ಆ ಯಜಮಾನನು ಪುಣ್ಯಾವಸಾನಕಾಲದಲ್ಲಿ ಭೂಲೋಕಕ್ಕೆ ಹೊರಡಲು ಉದ್ಯುಕ್ತನಾಗುತ್ತಾನೆ. ಆಗ ಆತನನ್ನು ದೇವತೆಗಳು ದ್ಯುಲೋಕದಿಂದ ಸೋಮ (ಚಂದ್ರ) ಲೋಕಕ್ಕೆ ಕಳುಹಿಸುತ್ತಾರೆ. || ೫—೪ || || ೨ ||

**ನಾಲ್ಕನೇ ಖಂಡವು ಮುಗಿಯಿತು.**

## ೫ನೇ ಖಂಡವು

**ಉ. || ಪರ್ಜನ್ಯೋ ವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂ ಧೂಮೋ ವಿದ್ಯುದರ್ಚಿರಶನಿರಂಗಾರಾ ಹ್ರಾದುನಯೋ ವಿಷ್ಫುಲಿಂಗಾಃ || ೧ ||**

ಅ || ಪರ್ಜನ್ಯನೆನಿಸಿಕೊಂಡ ಮೇಘಚಕ್ರದೊಳಗಣ ವಾಸುದೇವನು ಅಗ್ನಿ ಎನಿಸಿಕೊಂಡವನು, ಅಗ್ನಿಯಂತಿರುವವನು. ಆ ಪರ್ಜನ್ಯನೊಳಗಣ ವಾಸುದೇವನಿಗೆ ವಾಯುವೆನಿಸಿಕೊಂಡ ವಾಯುವಿನಲ್ಲಿರುವ ವಾಸುದೇವನಾರಾಯಣನು ಸಮಿತ್ ಎನಿಸುತ್ತಾನೆ. ಅಭ್ರನೆನಿಸಿಕೊಂಡ ಅಭ್ರ (ಮೇಘ) ದಲ್ಲಿರುವ ವಾಸುದೇವವಾಸುದೇವನು ಧೂಮನೆನಿಸಿದವನು. ವಿದ್ಯುತ್ ಎನಿಸಿಕೊಂಡ ವಿದ್ಯುತ್ (ಮಿಂಚು)ನಲ್ಲಿರುವ ವಾಸುದೇವ ಸಂಕರ್ಷಣನು ಅರ್ಚಿಃ ಎನಿಸುತ್ತಾನೆ. ಅಶನಿ ಎನಿಸಿಕೊಂಡ ಅಶನಿ (ವಜ್ರಾಯುಧ)ಯಲ್ಲಿರತಕ್ಕ ವಾಸುದೇವಪ್ರದ್ಯುಮ್ನನು ಅಂಗಾರಾಃ ಎನಿಸುತ್ತಾನೆ. ಹ್ರಾದುನಿ ಎನಿಸಿಕೊಂಡ ಹ್ರಾದುನಿ (ಮೇಘ ಗರ್ಜನೆ) ಯಲ್ಲಿ ಇರತಕ್ಕ ವಾಸುದೇವಾನಿರುದ್ಧನು ವಿಷ್ಫುಲಿಂಗಾಃ ಎನಿಸುತ್ತಾನೆ. || ೧ ||

**ಉ. || ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮꣳ ರಾಜಾನಂ ಜುಹ್ವತಿ ತಸ್ಯಾ ಆಹುತೇರ್ವರ್ಷꣳ ಸಂಭವತಿ || ಇತಿ ಪಂಚಮಃ ಖಂಡಃ ||೫-೫|| ೨ ||**

ಅ || ನಾರಾಯಣಾದಿ ಐದು ರೂಪಗಳಿಂದ ವಾಯು ಮೊದಲಾದವರಲ್ಲಿರುವ ಪರ್ಜನ್ಯನೊಳಗಣ ವಾಸುದೇವನಲ್ಲಿ ಸೋಮಲೋಕಕ್ಕೆ ಬಂದ ಜೀವನನ್ನು ದೇವತೆಗಳು ಕೊಡುತ್ತಾರೆ. ಆ ಪರ್ಜನ್ಯಾಖ್ಯ ಸ್ಥಾನದಿಂದ ವೃಷ್ಟಿಯಲ್ಲಿದ್ದವನನ್ನಾಗಿ ದೇವತೆಗಳು ಮಾಡುತ್ತಾರೆ. ಅಂದರೆ, ಆ ಜೀವನು ಮಳೆಯೊಳಗೆ ಸೇರುತ್ತಾನೆ. || ೫—೬ || || ೨ ||

**ಐದನೇ ಖಂಡವು ಮುಗಿಯಿತು.**

## ೬ನೇ ಖಂಡವು

**ಉ. || ಪೃಥಿವೀ ವಾವ ಗೌತಮಾಗ್ನಿಸ್ತಸ್ಯಾಃ ಸಂವತ್ಸರ ಏವ ಸಮಿದಾಕಾಶೋ ಧೂಮೋ ರಾತ್ರಿರರ್ಚಿರ್ದಿಶೋಽಂಗಾರಾ ಅವಾಂತರದಿಶೋ ವಿಷ್ಫುಲಿಂಗಾಃ || ೧ ||**

ಅ || ಪೃಥಿವೀ ಎನಿಸಿಕೊಂಡ ಪೃಥಿವಿಯೊಳಗಣ ಸಂಕರ್ಷಣನು ಅಗ್ನಿಯು. ಪೃಥಿವಿಯೊಳಗಣ ಸಂಕರ್ಷಣನಿಗೆ ಸಂವತ್ಸರನೆನಿಸಿಕೊಂಡ ಸಂವತ್ಸರದಲ್ಲಿರುವ ಸಂಕರ್ಷಣ ನಾರಾಯಣನು ಚೆನ್ನಾಗಿ ಪ್ರಕಾಶಗೊಳಿಸುವುದರಿಂದ ಸಮಿತ್ ಎನಿಸಿಕೊಳ್ಳುವನು. ಆಕಾಶನೆನಿಸಿಕೊಂಡ ಆಕಾಶದೊಳಗಣ ಸಂಕರ್ಷಣವಾಸುದೇವನು ಧೂಮನೆನಿಸುವನು ರಾತ್ರಿ ಎನಿಸಿಕೊಂಡ ರಾತ್ರಿಯೊಳಗಣ ಸಂಕರ್ಷಣಸಂಕರ್ಷಣನು ಅರ್ಚಿಃ ಎನಿಸುವನು. ದಿಕ್ ಎನಿಸಿಕೊಂಡ ದಿಕ್ಕುಗಳೊಳಗಣ ಸಂಕರ್ಷಣಪ್ರದ್ಯುಮ್ನನು ಅಂಗಾರಾಃ ಎನಿಸುವನು. ಅವಾಂತರದಿಕ್ ಎನಿಸಿಕೊಂಡ ಅವಾಂತರದಿಕ್ಕುಗಳಲ್ಲಿರುವ ಸಂಕರ್ಷಣಾನಿರುದ್ಧನು ವಿಸ್ಫುಲಿಂಗಾಃ ಎನಿಸುವನು || ೧ ||

**ಉ. || ತಸ್ಮಿನ್ನೇತಸ್ಮಿನ್ನಗ್ನೌ ದೇವಾ ವರ್ಷಂ ಜುಹ್ವತಿ ತಸ್ಯಾ ಆಹುತೇ-ರನ್ನಂ ಸಂಭವತಿ || ಇತಿ ಷಷ್ಠಃ ಖಂಡಃ || ೭–೬ || || ೨ ||**

ಅ || ಸಂವತ್ಸರಾದಿಗಳಲ್ಲಿ ನಾರಾಯಣ ಮೊದಲಾದ ಐದು ರೂಪಗಳಿಂದ ಇರುವ ಪೃಥಿವಿಯೊಳಗಣ ಸಂಕರ್ಷಣನಲ್ಲಿ ದೇವತೆಗಳು ಮಳೆಯೊಳಗೆ ಸೇರಿಸಿದ ಜೀವನನ್ನು ಕೊಡುತ್ತಾರೆ. ಆ ಪೃಥಿವೀಸ್ಥಾನದಿಂದ ತಿನ್ನುವ ವಸ್ತುಗಳೊಳಗೆ ಜೀವನನ್ನು ದೇವತೆಗಳು ಸೇರಿಸುತ್ತಾರೆ. || ೭—೬ || || ೨ ||

**ಆರನೇ ಖಂಡವು ಮುಗಿಯಿತು.**

## ೭ನೇ ಖಂಡವು

**ಉ. || ಪುರುಷೋ ವಾವ ಗೌತಮಾಗ್ನಿಸ್ತಸ್ಯ ವಾಗೇವ ಸಮಿತ್ಪ್ರಾಣೋ ಧೂಮೋ ಜಿಹ್ವಾಽರ್ಚಿಶ್ಚಕ್ಷುರಂಗಾರಾಃ ಶ್ರೋತ್ರಂ ವಿಸ್ಫುಲಿಂಗಾಃ || ೧ ||**

ಅ || ಪುರುಷನೆನಿಸಿಕೊಂಡ ಪುರುಷನೊಳಗಣ ಪ್ರದ್ಯುಮ್ನನು ಅಗ್ನಿಯು. ಆ ಪುರುಷಾಂತರ್ಗತ ಪ್ರದ್ಯುಮ್ನನಿಗೆ ವಾಕ್ ಎನಿಸಿಕೊಂಡ ವಾಗಿಂದ್ರಿಯದೊಳಗಣ ಪ್ರದ್ಯುಮ್ನನಾರಾಯಣನು ಸಮಿತ್ ಎನಿಸುವನು. ಪ್ರಾಣನೆನಿಸಿಕೊಂಡ ಪ್ರಾಣನೊಳಗಣ ಪ್ರದ್ಯುಮ್ನವಾಸುದೇವನು ಧೂಮನೆನಿಸುವನು. ಜಿಹ್ವಾ ಎನಿಸಿಕೊಂಡ ಜಿಹ್ವೆ (ನಾಲಿಗೆ) ಯಲ್ಲಿರುವ ಪ್ರದ್ಯುಮ್ನಸಂಕರ್ಷಣನು ಅರ್ಚಿಃ ಎನಿಸುವನು. ಚಕ್ಷುಃ ಎನಿಸಿಕೊಂಡ ಚಕ್ಷುರೊಳಗಣ ಪ್ರದ್ಯುಮ್ನಪ್ರದ್ಯುಮ್ನನು ಅಂಗಾರಾಃ ಎನಿಸುವನು. ಶ್ರೋತ್ರದೊಳಗಣ ಪ್ರದ್ಯುಮ್ನಾನಿರುದ್ಧನು ವಿಸ್ಫುಲಿಂಗಾಃ ಎನಿಸುತ್ತಾನೆ. || ೧ ||

**ಉ. || ತಸ್ಮಿನ್ನೇತಸ್ಮಿನ್ನಗ್ನೌ ದೇವಾ ಅನ್ನಂ ಜುಹ್ವತಿ ತಸ್ಯಾ ಆಹುತೇ ರೇತಃ ಸಂಭವತಿ || ಇತಿ ಸಪ್ತಮಃ ಖಂಡಃ || ೭–೭ || || ೨ ||**

ಅ || ನಾರಾಯಣಾದಿರೂಪದಿಂದ ಐದು ವಿಧವಾಗಿ ವಾಗಾದಿಗಳಲ್ಲಿರುವ ಪ್ರದ್ಯುಮ್ನನೆನಿಸಿದ ಪುರುಷನೊಳಗಣ ಅಗ್ನಿಯಲ್ಲಿ ತಿನ್ನುವ ವಸ್ತುಗಳೊಳಗಣ ಜೀವನನ್ನು ದೇವತೆಗಳು ಕೊಡುತ್ತಾರೆ. ಪುರುಷನೆಂಬ ಜೀವನನ್ನು ದೇವತೆಗಳು ಸ್ಥಾನದಿಂದ ರೇತಸ್ಸಿನೊಳಗೆ ಸೇರಿಸುತ್ತಾರೆ. || ೭ || || ೨ ||

**ಏಳನೇ ಖಂಡವು ಮುಗಿಯಿತು.**

## ೮ನೇ ಖಂಡವು

**ಉ. ॥ ಯೋಷಾ ವಾವ ಗೌತಮಾಗ್ನಿಸ್ತಸ್ಯಾ ಉಪಸ್ಥ ಏವ ಸಮಿದ್ಯದು-ಪಮಂತ್ರಯತೇ ಸ ಧೂಮೋ ಯೋನಿರರ್ಚಿರ್ಯದಂತಃ ಕರೋತಿ ತೇಽಂ-ಗಾರಾ ಅಭಿನಂದಾ ವಿಸ್ಫುಲಿಂಗಾಃ ॥ ೧ ॥**

**ಅ ॥** ಯೋಷಾ ಎನಿಸಿಕೊಂಡ, ಸ್ತ್ರೀಯರಲ್ಲಿರುವ ಅನಿರುದ್ಧನು ಅಗ್ನಿಯು. ಸ್ತ್ರೀಯರಲ್ಲಿರುವ ಅನಿರುದ್ಧನೆಂಬ ಅಗ್ನಿಗೆ ಉಪಸ್ಥನೆನಿಸಿಕೊಂಡ ಉಪಸ್ಥದೊಳಗಣ ಅನಿರುದ್ಧನಾರಾಯಣನು ಸಮಿತ್ ಎನಿಸುವನು. ಸಂಭೋಗಾರ್ಥವಾದ ಸಂಭಾಷಣೆಯಲ್ಲಿರುವ ಅನಿರುದ್ಧವಾಸುದೇವನು ಧೂಮನೆನಿಸುವನು. ಯೋನಿಯೆನಿಸಿದ ಯೋನಿಯೊಳಗಣ ಅನಿರುದ್ಧಸಂಕರ್ಷಣನು ಅರ್ಚಿಃ ಎನಿಸುವನು. ಸಂಭೋಗ ವ್ಯಾಪಾರದಲ್ಲಿರುವ ಅನಿರುದ್ಧಪ್ರದ್ಯುಮ್ನನು ಅಂಗಾರಾಃ ಎನಿಸಿದವನು ಸಂತೋಷಗೊಳ್ಳುವುದರಿಂದ ಅಭಿನಂದನೆನಿಸಿದ ಅಭಿನಂದದಲ್ಲಿರುವ ಅನಿರುದ್ಧಾನಿರುದ್ಧನು ವಿಸ್ಫುಲಿಂಗಾಃ ಎನಿಸುವನು. ॥ ೧ ॥

**ಉ. ॥ ತಸ್ಮಿನ್ನೇತಸ್ಮಿನ್ನಗ್ನೌ ದೇವಾ ರೇತೋ ಜುಹ್ವತಿ ತಸ್ಯಾ ಆಹುತೇ-ರ್ಗರ್ಭಃ ಸಂಭವತಿ ॥ ಇತ್ಯಷ್ಟಮಃ ಖಂಡಃ ॥ ೭-೮ ॥ ॥ ೨ ॥**

**ಅ ॥** ನಾರಾಯಣಾದಿ ಐದು ರೂಪಗಳಿಂದ ಉಪಸ್ಥಾದಿಗಳಲ್ಲಿ ಇರುವ, ಸ್ತ್ರೀಯರಲ್ಲಿರುವ ಅನಿರುದ್ಧನೆಂಬ ಅಗ್ನಿಯಲ್ಲಿ ರೇತಸ್ಸಿನೊಳಗಣ ಜೀವನನ್ನು ತತ್ತ್ವಾಭಿಮಾನಿಗಳಾದ ದೇವತೆಗಳು ಯೋನಿದ್ವಾರಾ ಪ್ರವೇಶಿಸುತ್ತಾರೆ. ಆ ಜೀವನು ಯೋಷಿತ್ ಎಂಬ ಹೋಮಸ್ಥಾನದಿಂದ ಗರ್ಭದಲ್ಲಿದ್ದು ಶರೀರವುಳ್ಳವನಾಗುತ್ತಾನೆ. ॥ ೭ ॥ ॥ ೨ ॥

**ಎಂಟನೇ ಖಂಡವು ಮುಗಿಯಿತು.**

## ೯ನೇ ಖಂಡವು

**ಪೀ—ವೇತ್ಥ ಯಥಾ ಪಂಚಮ್ಯಾಂ** ಎಂದು ತಾನು ಮಾಡಿದ ಪ್ರಶ್ನೆಗೆ ಆವಶ್ಯಕವಾದುದನ್ನು ವಿವರಿಸಿ ಯೋಷಿತ್ ಎಂಬ ಐದನೇ ಅಗ್ನಿಯನ್ನು ಹೇಳಿ ಈಗ ಆ ಪ್ರಶ್ನೆಗೆ ಉತ್ತರ ಹೇಳುತ್ತಾರೆ—

**ಉ. ॥ ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭ-ವಂತೀತಿ ಸ ಉಲ್ಬಾವೃತೋ ಗರ್ಭೋ ದಶ ವಾ ಮಾಸಾನಂತಃ ಶಯಿತ್ವಾ ಯಾವದ್ವಾಽಥ ಜಾಯತೇ ॥ ೧ ॥**

**ಅ ॥** ಹಿಂದೆ ಹೇಳಿದ ಪ್ರಕಾರ ಐದನೇ ಯೋಷಾ ಎಂಬ ಅಗ್ನಿಯಲ್ಲಿ ಹೋಮಿಸಲ್ಪಡುತ್ತಿರಲು (ಅಂದರೆ ಸ್ತ್ರೀಯರಲ್ಲಿ ರೇತಸ್ಸನ್ನು ಇಡುತ್ತಿರಲು) ಮರಣಕಾಲದಲ್ಲಿ ಜೀವನೊಂದಿಗೆ ಹೋದ ಪಂಚಭೂತಗಳಿಂದ ದೇಹವನ್ನು ಹೊಂದಿದ ಜೀವನು ಪುರುಷನೆಂದು ಹೆಸರುಳ್ಳವನಾಗುತ್ತಾನೆ. (ಹೀಗೆ ೫ನೇ ಪ್ರಶ್ನೆಗೆ ಉತ್ತರ ಹೇಳಿ ಉಳಿದ ೪ ಪ್ರಶ್ನೆಗಳಿಗೂ ಉತ್ತರ ಹೇಳಲಿಕ್ಕೆ ಇಚ್ಛಿಸುತ್ತಾ ಅದಕ್ಕೆ ಉಪಯುಕ್ತ

ವಾದುದನ್ನು ಹೇಳುತ್ತಾರೆ—)ಅಥವಾ ವೈರಾಗ್ಯವು ಹುಟ್ಟುವುದಕ್ಕಾಗಿ ಸ್ವರ್ಗದಿಂದ ಬರತಕ್ಕ ಪ್ರಕಾರವನ್ನು ಹೇಳಿ ಈಗ ಗರ್ಭವಾಸಾದಿ ದುಃಖಗಳನ್ನು ಹೇಳುತ್ತಾರೆ—) ಆ ಗರ್ಭದೊಳಗಣ ಜೀವನು ಗರ್ಭವನ್ನು ಮುಚ್ಚತಕ್ಕ ಚರ್ಮದಿಂದ (ಗರ್ಭದ ಜರಾಯುವೆಂಬ ಚರ್ಮದ ಮುಸುಕಿನಿಂದ) ಮುಚ್ಚಲ್ಪಟ್ಟವನಾಗಿ ೧೦ ತಿಂಗಳಲ್ಲಿ ಅಥವಾ ಎಷ್ಟು ಕಾಲಪರ್ಯಂತ ಇರಬೇಕೋ ಅಷ್ಟುಕಾಲ ತಾಯಿಯ ಹೊಟ್ಟೆಯೊಳಗೆ ಮಲಗಿದ್ದು ಆ ಮೇಲೆ ಹುಟ್ಟುತ್ತಾನೆ.　　|| ೧ ||

**ಉ. || ಸ ಜಾತೋ ಯಾವದಾಯುಷಂ ಜೀವತಿ ತಂ ಪ್ರೇತಂ ದಿಷ್ಟ-ಮಿತೋಽಗ್ನಯ ಏವ ಹರಂತಿ ಯತ ಏವೇತೋ ಯತಃ ಸಂಭೂತೋ ಭವತಿ|| ಇತಿ ನವಮಃ ಖಂಡಃ || ೭-೯ ||　　|| ೨ ||**

ಅ || ಹುಟ್ಟಿದವನು ಆಯುಷ್ಯ ಇರುವಷ್ಟುಕಾಲ ಬದುಕುತ್ತಾನೆ. ಆ ಮೇಲೆ ಸಾಯುತ್ತಾನೆ. ಆ ಮೃತನಾದ ಕರ್ಮಿಯನ್ನು ಹೋತೃಗಳಾದ ದೇವತೆಗಳು ಈ ಲೋಕದಿಂದ ಯಾವ ದ್ಯುಲೋಕವೆಂಬ ಅಗ್ನಿಯಿಂದ ಈ ಲೋಕಕ್ಕೆ ಬಂದಿರುವನೋ ಮತ್ತು ಯಾವ ಯೋಷಿತ್ ಎಂಬ ಅಗ್ನಿಯಿಂದ ಹುಟ್ಟಿರುವನೋ ಅಂತಹ ದ್ಯು ಮೊದಲಾದ ಅಗ್ನಿಗೇನೇ ಒಯ್ಯುತ್ತಾರೆ. (ಅಂದರೆ—ಆ ಜೀವನನ್ನು ದೇವತೆಗಳು ಸ್ವರ್ಗಾದಿಗಳಿಗೆ ಕಳುಹಿಸುತ್ತಾರೆ.) || ೭—೯ ||　　|| ೨ ||

**ಒಂಭತ್ತನೇ ಖಂಡವು ಮುಗಿಯಿತು.**

## ೧೦ನೇ ಖಂಡವು

ಪೀ-- ಯಾವ ಮಾರ್ಗದಿಂದ ಕರೆದುಕೊಂಡು ಹೋಗುತ್ತಾರೆ ಎಂಬ ಶಂಕೆಯನ್ನು ಪರಿಹರಿಸುತ್ತಾ ವೇತ್ಥ ಯಥಾ ದೇವಯಾನಸ್ಯ ಎಂಬ ೩ನೇ ಪ್ರಶ್ನೆಗೆ ಉತ್ತರ ಹೇಳುತ್ತಾರೆ ಇದರಿಂದಲೇ ೧ನೇ ಪ್ರಶ್ನೆಗೂ ೨ನೇ ಪ್ರಶ್ನೆಗೂ ಉತ್ತರವು ಸೂಚಿಸಲ್ಪಡುತ್ತದೆ ಎನ್ನುತ್ತಾರೆ—

**ಉ. || ತದ್ಯ ಇತ್ಥಂ ವಿದುರ್ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯು-ಪಾಸತೇ ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣ-ಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ಷಡುದಙ್ಙೇತಿ ಮಾಸಾಂಸ್ತಾನ್ || ೧ ||**

ಅ || ಕಾಮ್ಯಕರ್ಮವು ಗಮನಾಗಮನಗಳಿಗೆ ಕಾರಣವಾಗಿರುವುದರಿಂದ ಅಲ್ಲಿ ವೈರಾಗ್ಯವನ್ನು ಹೊಂದಿದ ಯಾವ ಅಧಿಕಾರಿಗಳು ಪಂಚಾಗ್ನಿವಿದ್ಯೆಯಲ್ಲಿ ಹೇಳಿದ ಪ್ರಕಾರ ಶ್ರೀಹರಿಯನ್ನು ತಿಳಿದಿರುವರೋ, ಯಾರು ತಪಸ್ಸಿಗೆ ಯೋಗ್ಯವಾದ ಪ್ರದೇಶದಲ್ಲಿ ಶ್ರದ್ಧಾಪೂರ್ವಕವಾಗಿ ನಿವೃತ್ತಕರ್ಮಗಳನ್ನು ಮಾಡುತ್ತಾ ಶ್ರೀಹರಿಯ ಧ್ಯಾನಾದಿಗಳನ್ನು ಮಾಡುತ್ತಾರೋ, ಅಂತಹ ಜ್ಞಾನಪ್ರಧಾನರೂ ಕರ್ಮಪ್ರಧಾನರೂ ಆದವರು ಅರ್ಚಿರ್ಲೋಕವನ್ನು ಹೊಂದುತ್ತಾರೆ ಅರ್ಚಿರ್ಲೋಕದಿಂದ ಅಹರ್ಲೋಕಕ್ಕೂ ಅದರಿಂದ ಶುಕ್ಲಪಕ್ಷಕ್ಕೆ ಅಭಿಮಾನಿಯಾದ ದೇವತಾಲೋಕಕ್ಕೂ, ಅದರಿಂದ ಉತ್ತರಾಯಣಾಭಿಮಾನಿ ದೇವತಾಲೋಕಕ್ಕೂ ಹೋಗುತ್ತಾರೆ.　　|| ೧ ||

**ಉ. ॥ ಮಾಸೇಭ್ಯಃ ಸಂವತ್ಸರꣳ ಸಂವತ್ಸರಾದಾದಿತ್ಯಮಾದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರುಷೋಽಮಾನವಃ ಸ ಏನಾನ್ ಬ್ರಹ್ಮ ಗಮಯತ್ಯೇಷ ದೇವಯಾನಃ ಪಂಥಾ ಇತಿ ॥ ೨ ॥**

ಅ ॥ ಮಾಸಾಭಿಮಾನಿ ದೇವತಾಲೋಕದಿಂದ ಸಂವತ್ಸರಾಭಿಮಾನಿ ದೇವತಾಲೋಕಕ್ಕೂ, ಅದ ರಿಂದ ಆದಿತ್ಯಲೋಕಕ್ಕೂ, ಅದರಿಂದ ಚಂದ್ರಲೋಕಕ್ಕೂ, ಅದರಿಂದ ವಿದ್ಯುದಭಿಮಾನಿ ದೇವತೆಯಾದ ಭಾರತೀಲೋಕಕ್ಕೂ ಕರೆದುಕೊಂಡು ಹೋಗುತ್ತಾರೆ. ಆ ವಿದ್ಯುದಭಿಮಾನಿಯಾದ ಭಾರತೀಪತಿಯಾದ ಮುಖ್ಯಪ್ರಾಣನು ಅರ್ಚಿರ್ಲೋಕವನ್ನಾರಂಭಿಸಿ ವಿದ್ಯುಲ್ಲೋಕಪರ್ಯಂತ ಬಂದವರನ್ನು ಪರಬ್ರಹ್ಮನ ಸಮೀಪಕ್ಕೆ ಕಳುಹಿಸಿಕೊಡುತ್ತಾನೆ. ಇದು ದೇವಯಾನಮಾರ್ಗವು. ॥ ೨ ॥

ಪೀ—ಹೀಗೆ ದೇವಯಾನವನ್ನೂ ಅದರ ಸಾಧನವನ್ನೂ ಹೇಳಿ ಈಗ ಪಿತೃಯಾನವನ್ನೂ ಅದರ ಸಾಧನವನ್ನೂ ಹೇಳುತ್ತಾರೆ—

**ಉ. ॥ ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ ಧೂಮಾದ್ರಾತ್ರಿꣳ ರಾತ್ರೇರಪರಪಕ್ಷಮಪರಪಕ್ಷಾದ್ಯಾನ್ಷಡ್ದಕ್ಷಿಣೈತಿ ಮಾಸಾꣳಸ್ತಾನ್ನೈತೇ ಸಂವತ್ಸರಮಭಿಪ್ರಾಪ್ನುವಂತಿ ॥ ೩ ॥**

ಅ ॥ ಯಾವ ಕಾಮ್ಯಕರ್ಮಿಗಳು ಗ್ರಾಮದಲ್ಲಿದ್ದವರಾಗಿ ಯಾಗ, ಸರೋವರಾದಿ ನಿರ್ಮಾಣ ಸತ್ಪಾತ್ರದಲ್ಲಿ ದಾನ, ಪಿತೃಶ್ರಾದ್ಧ ಮೊದಲಾದುದು, ಇವುಗಳನ್ನು ಮಾಡುತ್ತಾರೋ, ಅಂತಹ ಗ್ರಾಮ ದಲ್ಲಿದ್ದು ಪ್ರವೃತ್ತ (ಕಾಮ್ಯ) ಕರ್ಮ ಮಾಡುವವರು ಧೂಮಾಭಿಮಾನಿ ದೇವತಾಲೋಕಕ್ಕೂ, ಅಲ್ಲಿಂದ ರಾತ್ರ್ಯಭಿಮಾನಿ ದೇವತಾಲೋಕಕ್ಕೂ, ಅದರಿಂದ ಕೃಷ್ಣಪಕ್ಷಾಭಿಮಾನಿ ದೇವತಾಲೋಕಕ್ಕೂ, ಅದರಿಂದ ದಕ್ಷಿಣಾಯನಾಭಿಮಾನಿ ದೇವತಾಲೋಕಕ್ಕೂ ಹೋಗುತ್ತಾರೆ. ಅದರಿಂದ ಸಂವತ್ಸರಾಭಿಮಾನಿ ದೇವತಾ ಲೋಕಕ್ಕೆ ಹೋಗುತ್ತಾರೆ ॥ ೩ ॥

ಪೀ—ಮಾಸಾಭಿಮಾನಿ ದೇವತಾಲೋಕದಿಂದ ಎಲ್ಲಿಗೆ ಹೋಗುತ್ತಾರೆಂದರೆ—

**ಉ. ॥ ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾದಾಕಾಶಮಾಕಾಶಾಚ್ಚಂದ್ರಮಸಮೇಷ ಸೋಮೋ ರಾಜಾ ತದ್ದೇವಾನಾಮನ್ನಂ ತಂ ದೇವಾ ಭಕ್ಷಯಂತಿ ॥ ೪ ॥**

ಅ ॥ ದಕ್ಷಿಣಾಯನ ಎಂದು ಹೆಸರುಳ್ಳ ಮಾಸಾಭಿಮಾನಿ ದೇವತಾಲೋಕದಿಂದ, ಸಂವತ್ಸರಾಭಿ ಮಾನಿ ದೇವತಾಲೋಕಕ್ಕೂ, ಅದರಿಂದ ಪಿತೃಲೋಕಕ್ಕೂ, ಅದರಿಂದ ವಿನಾಯಕ (ಆಕಾಶ) ಲೋಕಕ್ಕೂ, ಅದರಿಂದ ಚಂದ್ರಲೋಕಕ್ಕೂ ಹೋಗುತ್ತಾರೆ. ಈ ಚಂದ್ರನು ಸೋಮಲತೆಗೆ ಅಭಿಮಾನಿಯು. ಆ ಚಂದ್ರನು ದೇವತೆಗಳಿಗೆ ಅಮೃತವೆಂಬ ಅನ್ನಸ್ಥಾನನು. ಆ ಅನ್ನವನ್ನು ದೇವತೆಗಳು ಭಕ್ಷಿಸುತ್ತಾರೆ (ಹೊಂದುತ್ತಾರೆ.) ॥ ೪ ॥

ಪೀ—೩ನೇ ಖಂಡದ ೩ನೇ ಮಂತ್ರದಲ್ಲಿದ್ದ **ವೇತ್ಥ ಯಥಾಽಸೌ ಲೋಕೋ ನ ಸಂಪೂರ್ಯತೇ** ಎಂಬ ಪ್ರಶ್ನೆಗೆ ಉತ್ತರ ಹೇಳುತ್ತಾರೆ—

**ಉ. || ತಸ್ಮಿನ್ಯಾವತ್ಸಂಪಾತಮುಷಿತ್ವಾಽಥೈತಮೇವಾಧ್ವಾನಂ ಪುನರ್ನಿವರ್ತಂತೇ ಯಥೇತಮಾಕಾಶಮಾಕಾಶಾದ್ವಾಯುಂ ವಾಯುರ್ಭೂತ್ವಾ ಧೂಮೋ ಭವತಿ ಧೂಮೋ ಭೂತ್ವಾಽಭ್ರಂ ಭವತಿ || ೫ ||**

**ಅ ||** ಚಂದ್ರನನ್ನು ಹೊಂದಿದ ಕಾಮ್ಯಕರ್ಮಿಗಳು ಚಂದ್ರಲೋಕದಲ್ಲಿ ನಿಯತಕಾಲದಲ್ಲಿ ಆವಾಸ ಮಾಡಿ ಆ ಮೇಲೆ ಕರ್ಮಕ್ಷಯವಾದಾಗ ಈ ಮಾರ್ಗದಲ್ಲಿಯೇ ತಿರುಗಿ ಬರುತ್ತಾರೆ. (ಯಾವ ಮಾರ್ಗದಲ್ಲಿ ಎಂದರೆ—) ಯಾವ ಮಾರ್ಗದಿಂದ ಚಂದ್ರಲೋಕಕ್ಕೆ ಹೋಗಿರುತ್ತಾನೋ ಅದೇ ಮಾರ್ಗದಿಂದ ತಿರುಗಿ ಬರುತ್ತಾರೆ. (ಅಂದರೆ—ಚಂದ್ರಲೋಕದಿಂದ ಆಕಾಶಪರ್ಯಂತ ಲೋಕಕ್ಕೆ ಹೋದಹಾಗೆ ತಿರುಗಿಬರುವುದು. ಆ ಮೇಲೆ ವ್ಯತ್ಯಾಸವಿದೆ ಎನ್ನುತ್ತಾರೆ—) ಆಕಾಶಾಭಿಮಾನಿ ದೇವತಾಲೋಕಕ್ಕೆ ಹೇಗೆ ಹೋಗಿರುತ್ತಾರೋ ಹಾಗೆಯೇ ಆ ಲೋಕಕ್ಕೆ ತಿರುಗಿಬರುತ್ತಾರೆ.) (ಅಂದರೆ—ಚಂದ್ರಲೋಕದಿಂದ ಆಕಾಶಲೋಕಕ್ಕೆ ಬರುತ್ತಾರೆ) ಅದರಿಂದ ವಾಯುದೇವತಾಲೋಕಕ್ಕೂ, ಅದರಿಂದ ಧೂಮಾಭಿಮಾನಿ ದೇವತಾಲೋಕಕ್ಕೂ, ಅದರಿಂದ ಮೇಘಾಭಿಮಾನಿ ದೇವತಾಲೋಕಕ್ಕೂ ಬರುತ್ತಾರೆ.) ಅಂದರೆ—ಆಕಾಶಲೋಕದಿಂದ ಪಿತೃಲೋಕಾದಿಗಳನ್ನು ಹೊಂದದೆ ವಾಯ್ವಾದಿ ದೇವತಾಲೋಕಕ್ಕೆ ಹೋಗುತ್ತಾರೆ—) || ೫ ||

**ಉ. || ಅಭ್ರಂ ಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾ ಪ್ರವರ್ಷತಿ ತ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಮಾಷಾ ಇತಿ ಜಾಯಂತೇ ಅತೋ ವೈ ಖಲು ದುರ್ನಿಷ್ಪ್ರಪತರಂ ಯೋ ಯೋ ಹ್ಯನ್ನಮತ್ತಿ ಯೋ ರೇತಃ ಸಿಂಚತಿ ತದ್ಭೂಯ ಏವ ಭವತಿ || ೬ ||**

**ಅ ||** ಅಭ್ರ (ಶಿಥಿಲಾವಯವವುಳ್ಳದ್ದು) ಅಭಿಮಾನಿ ದೇವತಾಲೋಕದಿಂದ ಮೇಘ (ನಿಬಿಡಾವಯವವುಳ್ಳದ್ದು) ಅಭಿಮಾನಿ ದೇವತಾಲೋಕಕ್ಕೆ ಹೋಗುತ್ತಾರೆ. ಆಮೇಲೆ ವೃಷ್ಟಿ (ಮಳೆ) ಯೊಳಗೆ ಸೇರುತ್ತಾರೆ. ಮಳೆಯೊಳಗಣ ಕರ್ಮಿಗಳು ಈ ಲೋಕಗಳಲ್ಲಿ ಕೆಲವರು ಬತ್ತ, ಯವ ಸಸ್ಯ, ಮರಗಳಾಗಿಯೂ ಕೆಲವರು ಎಳ್ಳು, ಉದ್ದು ಮೊದಲಾದ ಧಾನ್ಯಗಳಾಗಿಯೂ ಹುಟ್ಟುತ್ತಾರೆ (ಅಂದರೆ—ಮತ್ತೊಬ್ಬನ ಮನೆಯಲ್ಲಿ ದಾರಿಹೋಕನು ಪ್ರವೇಶ ಮಾಡಿದಂತೆಯೇ, ಬೇರೆ ಜೀವರು ಅಭಿಮಾನಿಗಳಾಗಿ ಉಳ್ಳ ವ್ರೀಹಿ, ಯವ ಮೊದಲಾದವುಗಳಲ್ಲಿ ಆ ಕರ್ಮಿಗಳು ಪ್ರವೇಶಮಾಡಿದವರಾಗಿ ಇರುತ್ತಾರೆ. ಆ ವ್ರೀಹ್ಯಾದಿಗಳಿಗೆ ಅಭಿಮಾನಿಗಳಾಗುವುದಿಲ್ಲ ಆ ವ್ರೀಹ್ಯಾದಿಗಳು ಹುಟ್ಟಿದಾಗ ಈ ಕರ್ಮಿಗಳು ಹುಟ್ಟಿದರೆನ್ನುತ್ತಾರೆ.) ಆ ವ್ರೀಹ್ಯಾದಿಗಳಲ್ಲಿ ಪ್ರವೇಶಮಾಡಿದ ಮೇಲೆ ಅತಿಕಷ್ಟದಲ್ಲಿ ಬೀಳುತ್ತಾರೆ. (ಅಂದರೆ—ಬಹುಕ್ಲೇಶದಿಂದ ಹುಟ್ಟುತ್ತಾರೆ—) (ಅದನ್ನೇ ವಿವರಿಸುತ್ತಾರೆ—) ಯಾವ ಯಾವ ಜನರು ವ್ರೀಹ್ಯಾದಿರೂಪವಾದ ತಿನ್ನಲು ಯೋಗ್ಯವಾದುದನ್ನು ತಿನ್ನುತ್ತಾರೋ, ಅವರಲ್ಲಿ ಯಾವನು ಸ್ತ್ರೀಯಲ್ಲಿ ರೇತಸ್ಸೇಕಮಾಡುತ್ತಾನೋ, ಅವನನ್ನೇ ಕರ್ಮಿಯು ಪ್ರವೇಶಮಾಡುತ್ತಾನೆ. (ಅಂದರೆ—ತಿನ್ನಲ್ಪಡುವ ಅನ್ನ ಮೊದಲಾದ ವಸ್ತುಗಳ ದ್ವಾರಾ ರೇತಸ್ಸನ್ನು ಸೇಚನಮಾಡುವ ಪುರುಷನಲ್ಲಿ ಪ್ರವೇಶಮಾಡಿ ಅವನು ತಿಂದ ಅನ್ನವು ಪರಿಣಾಮವಾಗಿ ಅನ್ನದ ಸಾರಭೂತವಾದ ರೇತಸ್ಸಿನಲ್ಲಿದ್ದವನಾಗಿ ರೇತೋರೂಪವನ್ನು ಹೊಂದುತ್ತಾನೆ.) || ೬ ||

**ಪೀ—** ಏತಮಧ್ವಾನಮಾವರ್ತಂತೇ ಎಂದು ಹೇಳಿ ಹಿಂದೆ ಬರಲಿಕ್ಕೆ ಆಕಾಶ ವಾಯು ಮೊದಲಾದ ಮಾರ್ಗಗಳನ್ನಾರಂಭಿಸಿ ರೇತಸ್ಸೇಕ ಮಾಡತಕ್ಕ ಪಿತೃಪರ್ಯಂತ ಅನೇಕ ಸ್ಥಾನಗಳನ್ನು ಹೇಳಿರುವರು. ಹಾಗಾದರೆ - ಅನೇಕ ಸ್ಥಾನಗಳಿಗೆ ಹೋಗುವುದರಿಂದ ಕಲ್ಪಪರ್ಯಂತವಾಗಿಯೂ ಕರ್ಮಿಜೀವರು ಈ ಭೂಲೋಕಕ್ಕೆ ಬರುತ್ತಿರುತ್ತಾರೋ ಏನು? ಎಂದರೆ—

ಉ. ॥ ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮ-ಣೀಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾಽಥ ಯ ಇಹ ಕಪೂಯಚರಣಾ ಅಭ್ಯಾಶೋ ಹ ಯ-ತ್ತೇ ಕಪೂಯಾಂ ಯೋನಿಮಾಪದ್ಯೇರಞ್ಶ್ವಯೋನಿಂ ವಾ ಸೂಕರಯೋನಿಂ ವಾ ಚಂಡಾಲಯೋನಿಂ ವಾ ॥ ೭ ॥

ಅ ॥ ಕರ್ಮಿಗಳ ಮಧ್ಯದಲ್ಲಿ ಈ ಭೂಲೋಕದಲ್ಲಿ ಯಾರು ಯೋಗ್ಯ ಯಜ್ಞ ಮೊದಲಾದ ಕರ್ಮಗಳನ್ನು ಮಾಡಿದವರೋ ಅವರು ಈ ಲೋಕದಲ್ಲಿ ನಿರ್ದುಷ್ಟವಾದ ಯೋನಿಯನ್ನು ಅಂದರೆ—ಬ್ರಾಹ್ಮಣ ಅಥವಾ ಕ್ಷತ್ರಿಯ ವೈಶ್ಯರ ಯೋನಿಯನ್ನು ಹೊಂದುವರು. ಅಂತೂ ಸತ್ಕುಲದಲ್ಲಿ ಹುಟ್ಟುತ್ತಾರೆ. ಈ ಜನ್ಮವು *ಒಂದು ಸಂವತ್ಸರದೊಳಗೆ ಶೀಘ್ರದಲ್ಲಿಯೇ ಆಗುವುದು. ಏವಂಚ ಸ್ವರ್ಗಲೋಕದಿಂದ ಕೆಳಗೆ ಇಳಿದವರು ಒಂದು ಸಂವತ್ಸರದೊಳಗೆ ತಾಯಿಯ ಶರೀರಕ್ಕೆ ಪ್ರವೇಶಿಸುತ್ತಾರೆ. ದುರಾಚಾರವುಳ್ಳವರು ಕೆಟ್ಟ ಯೋನಿಯನ್ನು ಅಂದರೆ—ನಾಯಿ, ಹಂದಿ. ಚಂಡಾಲರ ಯೋನಿಯನ್ನು ಹೊಂದುತ್ತಾರೆ. ಅಂದರೆ, ಅತಿ ಹೇಯವಾದ ನಾಯಿ ಮೊದಲಾದ ಜನ್ಮವನ್ನು ಹೊಂದುತ್ತಾರೆ ॥ ೭ ॥

ಪೀ—ವಿದ್ಯೆಯನ್ನು ಸಂಪಾದಿಸಿದ ಜ್ಞಾನಿಗಳಿಗೆ ಬ್ರಹ್ಮಪ್ರಾಪ್ತಿಯು, ಕರ್ಮಿಗಳಿಗೆ ಚಂದ್ರಪ್ರಾಪ್ತಿಯು ಆಗಲಿ ಇವೆರಡೂ ಇಲ್ಲದವರಿಗೆ ಗತಿಯಾವುದೆಂದರೆ—ಅಥವಾ ೪ನೇ ಪ್ರಶ್ನೆಗೆ ಪರಿಹಾರ ಹೇಳುತ್ತಾರೆ—

ಉ. ॥ ಅಥೈತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರ-ಮಿಶ್ರಾಣ್ಯಸಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ ಮ್ರಿಯಸ್ವೇತ್ಯೇ-ತತ್ತೃತೀಯಂ ಸ್ಥಾನಂ ತೇನಾಸೌ ಲೋಕೋ ನ ಸಂಪೂರ್ಯತೇ ತಸ್ಮಾಜ್ಜು-ಗುಪ್ಸೇತ ॥ ೮ ॥

ಅ ॥ **ತದ್ಯ ಇತ್ಥಂ ವಿದುಃ** ಇತ್ಯಾದಿಗಳಿಂದ ಪ್ರಸ್ತುತವಾದ ದೇವಯಾನಮಾರ್ಗ, **ಅಥ ಯ ಇಮೇ ಗ್ರಾಮೇ** ಇತ್ಯಾದಿಗಳಿಂದ ಪ್ರಸ್ತುತವಾದ ಪಿತೃಯಾನಮಾರ್ಗ, ಇವುಗಳಿಗೆ ಸಾಧನಗಳಾದ ಜ್ಞಾನ ಕರ್ಮಗಳಲ್ಲಿ ಜ್ಞಾನವೆಂಬ ದೇವಯಾನ ಮಾರ್ಗೋಪಾಯ, ಕರ್ಮವೆಂಬ ಪಿತೃಯಾಣ ಮಾರ್ಗೋಪಾಯ, ಇವುಗಳಲ್ಲಿ ಒಂದರಲ್ಲಿಯೂ ಯಾರು ಇರುವುದಿಲ್ಲವೋ ಅಂದರೆ—ಜ್ಞಾನವನ್ನಾಗಲೀ ಕರ್ಮವನ್ನಾಗಲೀ ಯಾರು ಸಂಪಾದಿಸುವುದಿಲ್ಲವೋ ಆ ಪ್ರಾಣಿಗಳು ಸುಖದುಃಖ ಮಿಶ್ರಗಳಾಗಿರುತ್ತವೆ. ಯಾವಾಗಲೂ ಗಮನಾಗಮನಾದಿಗಳುಳ್ಳವರು. ಅಂದರೆ—ಮರಳಿಮರಳಿ ಹುಟ್ಟುತ್ತಾರೆ, ಸಾಯುತ್ತಾರೆ, ಎಂಬುವುದು ಸ್ವರ್ಗಮೋಕ್ಷಗಳಿಗಿಂತ ಮೂರನೇ ಸ್ಥಾನವು. ಹೀಗೆ ಸದಾ ತಿರುಗಾಡಿಕೊಂಡಿರುವುದರಿಂದ ಮೂರನೇ ಸ್ಥಾನವು ತುಂಬಲ್ಪಡುವುದಿಲ್ಲ. ಅದುಕಾರಣ ಆ ಮೂರನೇ ಸ್ಥಾನದಲ್ಲಿ ವಿರಕ್ತನಾಗಬೇಕು. ॥ ೮ ॥

ಪೀ—ಪಂಚಾಗ್ನಿವಿದ್ಯೆಯನ್ನು ತಿಳಿದವನಿಗೆ ಪಾತಕಿಗಳ ಸಂಸರ್ಗದಿಂದ ದೋಷವು ಬರುವುದಿಲ್ಲವೆಂದು ಹೇಳುವುದಕ್ಕಾಗಿ ಪಾತಕಿಗಳ ಸಂಸರ್ಗವು ದೋಷವೆಂಬುವಲ್ಲಿ ಪ್ರಮಾಣ ಹೇಳುತ್ತಾರೆ. ಅಥವಾ ಕಪೂಯಚರಣರನ್ನು ಹೇಳುತ್ತಾರೆ

* ಸ್ವರ್ಗಾಲ್ಲೋಕಾದವಾಕ್ಪ್ರಾಪ್ತೋ ವತ್ಸರಾತ್ಪೂರ್ವಮೇವತು । ಮಾತುಃ ಶರೀರಮಾಪ್ನೋತಿ ಪರ್ಯಟನ್ನತ್ರ ತತ್ರ ಚ ॥ ಎಂದು ಪ್ರಮಾಣವು

ಉ. ॥ ತದೇಷ ಶ್ಲೋಕಃ ಸ್ತೇನೋ ಹಿರಣ್ಯಸ್ಯ ಸುರಾಂ ಪಿಬಂಶ್ಚ ಗುರೋಸ್ತಲ್ಪಮಾವಸನ್ ಬ್ರಹ್ಮಹಾ ಚ ॥ ಏತೇ ಪತಂತಿ ಚತ್ವಾರಃ ಪಂಚಮಶ್ಚಾಚರಂಸ್ತೈರಿತಿ ॥ ೯ ॥

ಅ ॥ ಪಾತಕಿಗಳ ಸಂಸರ್ಗವು, ದೋಷವೆಂಬಲ್ಲಿ ಮುಂದಿನ ಶ್ಲೋಕವು ಪ್ರಮಾಣವು. ಸುವರ್ಣವನ್ನು ಕದ್ದುಕೊಂಡವನು, ಮದ್ಯಪಾಯಿ, (ಕಳ್ಳುಕುಡುಕ) ಗುರುಪತ್ನೀ ಸಂಸರ್ಗ ಮಾಡಿದವನು, ಬ್ರಹ್ಮಹತ್ಯಾ ಮಾಡಿದವನು, ಇವರು ನಾಲ್ವರು ಪತಿತರು. ಈ ನಾಲ್ವರೊಂದಿಗೆ ಸಂಸರ್ಗ ಮಾಡಿದವನೂ ಪತಿತನಾಗುವನು. ॥ ೯ ॥

ಪೀ—ಪಂಚಾಗ್ನಿ ವಿದ್ಯೆಯನ್ನು ಸ್ತುತಿಸುತ್ತಾರೆ –

ಉ. ॥ ಅಥ ಹ ಯ ಏತಾನೇವಂ ಪಂಚಾಗ್ನೀನ್ವೇದ ನ ಸಹ ತೈರಪ್ಯಾಚರನ್ ಪಾಪ್ಮನಾ ಲಿಪ್ಯತೇ ಶುದ್ಧಃ ಪೂತಃ ಪುಣ್ಯಲೋಕೋ ಭವತಿ ಯ ಏವಂ ವೇದ ಯ ಏವಂ ವೇದ ॥ ಇತಿ ದಶಮಃ ಖಂಡಃ ॥ ೭–೧೦ ॥ ೧೦ ॥

ಅ ॥ ಹಿಂದೆ ಹೇಳಿದ ಪ್ರಕಾರ ದ್ಯು ಮೊದಲಾದ ಪಂಚಾಗ್ನಿಗಳನ್ನು ತಿಳಿದವನು ಪಂಚಮಹಾಪಾತಕಿಗಳ ಸಂಸರ್ಗ ಮಾಡಿದರೂ ಪಾಪಸಂಬದ್ಧನಾಗುವುದಿಲ್ಲ. ಮತ್ತು ಹೀಗೆ ತಿಳಿದವನು ಒಳಗೂ ಹೊರಗೂ ತಾನು ಪವಿತ್ರನಾಗಿ (ಮನಃಶುದ್ಧಿ ದೇಹಶುದ್ಧಿಗಳುಳ್ಳವನಾಗಿ) ಬೇರೆಯವರನ್ನು ಪವಿತ್ರೀಕರಿಸುತ್ತಾನೆ. ಮತ್ತು ನಿವೃತ್ತ (ಅಕಾಮ್ಯ) ಪುಣ್ಯದಿಂದ ಸಾಧ್ಯವಾದ ವೈಕುಂಠಾದಿಲೋಕವನ್ನು ಹೊಂದುತ್ತಾನೆ. ॥ ೭—೧೦ ॥ ॥ ೧೦ ॥

ಪೀ—ಪಂಚಾಗ್ನಿ ವಿದ್ಯೆಯು ಭಗವತ್ಪರವೇ ಎಂಬಲ್ಲಿ ಪ್ರಮಾಣ ಹೇಳುತ್ತಾ ೪, ೫, ೬, ೭, ೮ ಖಂಡಗಳಲ್ಲಿದ್ದ ಅಗ್ನಿಶಬ್ದದ ಅರ್ಥ ಹೇಳುತ್ತಾರೆ—

ಭಾ. ॥ (೧) ನಾರಾಯಣಾದಯಃ ಪಂಚ ಕ್ರಮಾತ್ಪಂಚಾಗ್ನಯಃ ಸ್ಮೃತಾಃ । ಅದನಾದಂಗನೇತೃತ್ವಾನ್ನಿತರಾಮಚಲತ್ವತಃ ॥ (೨) ಸಮೇಧನಾತ್ಸಮಿದ್ವಿಷ್ಣುರ್ಧೂಕಾರಾದ್ಧೂಮ ಉಚ್ಯತೇ । ಅರಂಚಿತತ್ವಾದರ್ಚಿಶ್ಚ ಸೋಽಂಗಾರೋಽಂಗರತೇರಪಿ ॥ ವಿವಿಧಂ ಸ್ಫುರಣಾಚ್ಚೈವ ವಿಸ್ಫುಲಿಂಗ ಇತೀರಿತಃ । ಪುನರ್ನಾರಾಯಣಾದ್ಯಾತ್ಮಾ ಪ್ರತ್ಯೇಕಂ ಪಂಚರೂಪವಾನ್ ॥ (೩) ಆದಿತ್ಯಸ್ಸ ತಥಾಽಽದಾನಾದ್ರಶ್ಮೀರತಿಶ(ಶ್ಮಿಸ್ಸ ರತಿ)ರೂಪತಃ । ತಮಸಾಽಹನನೀಯತ್ವಾದಹಶ್ಚಂದ್ರಃ ಪರಸ್ಸುಖಂ । ಅನನ್ಯರಾಜೋ ನಕ್ಷತ್ರಂ ॥ (೪) ವಾಯುಜ್ಞಾನಾಯುರೂಪತಃ । ಅಭ್ರಮುಬ್ಭರಣಾದ್ವಿಷ್ಣುರ್ವಿದ್ಯುದ್ವಿದ್ಯೋತನಾದಪಿ । ಅಶನಾದಶನಿಶ್ಚೈವ ನಿಹ್ರಾದಾದ್ಧ್ರಾದುನಿಸ್ತಥಾ ॥ ೧ ॥

ಅ ॥ (೧) ದ್ಯು, ಪರ್ಜನ್ಯ, ಧರಾ, ಪುಂ, ಸ್ತ್ರೀ ಎಂಬ ಐದು ಅಗ್ನಿಗಳು ಕ್ರಮವಾಗಿ ನಾರಾಯಣ ವಾಸುದೇವಾದಿ ರೂಪಗಳೇ ಆಗುತ್ತವೆ. (ಅಗ್ನಿಶಬ್ದಕ್ಕೆ ನಾರಾಯಣಾದಿಗಳಲ್ಲಿ ಅವಯವಾರ್ಥವನ್ನು ತೋರಿಸುತ್ತಾರೆ—) ನಾರಾಯಣನು ಸರ್ವಸಂಹಾರಕನಾದುದರಿಂದ ಅಥವಾ ಸರ್ವಾಂಗಗಳಿಗೆ ಪ್ರೇರಕನಾದುದರಿಂದ ಅಥವಾ ಸ್ವತಃ ಪ್ರವೃತ್ತಿಮಾಡಲಿಕ್ಕೆ ಶಕ್ತಿಯಿಲ್ಲದಿರುವ ಜಗತ್ತಿಗೆ ಪ್ರವರ್ತಕನಾದುದರಿಂದ,

ಮತ್ತು ಅತ್ಯಂತವಾಗಿ ಹಂದಾಡದೆ ಇರುವುದರಿಂದಲೂ ಅಗ್ನಿಯೆನಿಸುವನು. (೨) (ಈಗ ಪ್ರತಿ ಅಗ್ನಿಗಳಿಗೂ ಸಮಿತ್, ಧೂಮ, ಅರ್ಚಿಃ, ಅಂಗಾರ, ವಿಸ್ಫುಲಿಂಗ ಎಂದು ಐದು ಅವಶ್ಯಕಗಳೆಂದು ಹೇಳಿವೆ. ಅವುಗಳ ಅರ್ಥ ಹೇಳುತ್ತಾರೆ.) ವಿಷ್ಣುವು ಚೆನ್ನಾಗಿ ಅಭಿವೃದ್ಧನಾಗಿರುವುದರಿಂದ ಅಂದರೆ, ಸರ್ವೋತ್ತಮನಾದುದರಿಂದ ಸಮಿತ್ ಎಂದೂ, ಶತ್ರುಗಳನ್ನು ನಡುಗಿಸುವುದರಿಂದ ಧೂಮನೆಂದೂ, ಚೆನ್ನಾಗಿ ಪೂಜಿಸಲ್ಪಡುವುದರಿಂದ ಅರ್ಚಿಃ ಎಂದೂ, ಜೀವರ ಶರೀರದಲ್ಲಿ ಕ್ರೀಡಿಸುವುದರಿಂದ ಅಥವಾ ತನ್ನ ಶರೀರದಲ್ಲಿ ಕ್ರೀಡಿಸುವುದರಿಂದ ಅಂಗಾರನೆಂದೂ ಜ್ಞಾನಿಗೆ ಬಹುಪ್ರಕಾರ ಪ್ರಕಾಶಗೊಳ್ಳುವುದರಿಂದ ವಿಸ್ಫುಲಿಂಗನೆಂದೂ ಎನಿಸುತ್ತಾನೆ. ನಾರಾಯಣಾದಿರೂಪನಾದ ವಿಷ್ಣುವು ಪ್ರತಿ ಒಬ್ಬನೂ ಐದೈದು ರೂಪಗಳುಳ್ಳವನು. ಆತನು ಸಮಿತ್ ಇತ್ಯಾದಿ ಪ್ರಕಾರ ಹೇಳಲ್ಪಡುತ್ತಾನೆ. (೩) (೪ನೇ ಖಂಡದ ಪ್ರಥಮಾಗ್ನಿಯಲ್ಲಿ ಹೇಳಿದ ಆದಿತ್ಯ, ರಶ್ಮಿ, ಅಹಃ, ಚಂದ್ರ, ನಕ್ಷತ್ರ ಶಬ್ದಗಳಿಗೆ ಅರ್ಥಹೇಳುತ್ತಾರೆ—) ವಿಷ್ಣುವು ಆಯುಸ್ಸು ಮೊದಲಾದವುಗಳನ್ನು ತೆಗೆದುಕೊಳ್ಳುವುದರಿಂದ ಆದಿತ್ಯನೆಂದೂ ತೃಪ್ತಿ ಮತ್ತು ಸುಖಸ್ವರೂಪನಾದುದರಿಂದ ರಶ್ಮಿಃ ಎಂದೂ, ನಿತ್ಯದಲ್ಲಿಯೂ ಅಜ್ಞಾನಲೇಶವಿಲ್ಲದವನಾದುದರಿಂದ ಅಹಃ ಎಂದೂ, ಪೂರ್ಣಸುಖಸ್ವರೂಪನಾದುದರಿಂದ ಚಂದ್ರನೆಂದೂ, ಇನ್ನೊಬ್ಬ ರಕ್ಷಕನಿಲ್ಲದಿರುವುದರಿಂದ ನಕ್ಷತ್ರನೆಂದೂ ಎನಿಸುತ್ತಾನೆ (೪) (ಈಗ ಐದನೇ ಖಂಡದಲ್ಲಿ ಎರಡನೇ ಪರ್ಜನ್ಯ ಅಗ್ನಿಯಲ್ಲಿ ಹೇಳಿದ ವಾಯು, ಅಭ್ರ, ವಿದ್ಯುತ್, ಅಶನಿ, ಹ್ರಾದುನಿ ಶಬ್ದಗಳಿಗೆ ಅರ್ಥ ಹೇಳುತ್ತಾರೆ—) ಶ್ರೀವಿಷ್ಣುವು ಜ್ಞಾನಸ್ವರೂಪನೂ, ಆಯುಷ್ಯವನ್ನು ಕೊಡುವವನೂ ಆದುದರಿಂದ ವಾಯುವೆಂದೂ, ಜಲಗಳನ್ನು ಹೊತ್ತುಕೊಳ್ಳುವುದರಿಂದ ಅಭ್ರನೆಂದೂ, ವಿಶೇಷವಾಗಿ ಪ್ರಕಾಶಿಸುವುದರಿಂದ ವಿದ್ಯುತ್ ಎಂದೂ, ಸರ್ವವನ್ನು ಭಕ್ಷಿಸುವುದರಿಂದ ಅಶನಿಯೆಂದೂ, ಅತ್ಯಂತವಾಗಿ ಸಂತೋಷಗೊಳ್ಳುವುದರಿಂದ ಹ್ರಾದುನಿ ಎಂದೂ ಅನಿಸುತ್ತಾನೆ. ॥ ೧ ॥

ಪೀ—ಈಗ ೬ನೇ ಖಂಡದಲ್ಲಿ ೩ನೇ ಧರಾ ಎಂಬ ಅಗ್ನಿಯಲ್ಲಿ ಹೇಳಿದ ಸಂವತ್ಸರ, ಆಕಾಶ, ರಾತ್ರಿ, ದಿಕ್, ಅವಾಂತರದಿಕ್ ಎಂಬ ಶಬ್ದಗಳಿಗೆ ಅರ್ಥ ಹೇಳುತ್ತಾರೆ —

**ಭಾ.॥ (೧) ಸಂವತ್ಸರೋ ವಾಸನಾಚ್ಚ ಸ ಆಕಾಶಃ ಪ್ರಕಾಶನಾತ್ । ರಾತ್ರಿಶ್ಚ ರತಿದಾನಾತ್ಸ ದಿಶತೀತಿ ದಿಶಃ ಸ್ಮೃತಃ । ಅವಾಂತರಂ ದಿಶೇದ್ಯಸ್ಮಾದವಾಂತರದಿಗುಚ್ಯತೇ ॥ (೨) ವಚನಾದ್ವಾಕ್ತಥಾ ಪ್ರಾಣಸ್ತ್ವನನಾಚ್ಚಕ್ಷುರುಚ್ಯತೇ । ದರ್ಶನಾಚ್ಛ್ರವಣಾಚ್ಛ್ರೋತ್ರಂ ಜಿಹ್ವಾ ವೈ ಹೋಮತಃ ಸ್ಮೃತಃ ॥ (೩) ಉಪಸ್ಥಿತೇರುಪಸ್ಥಸ್ಸ ಉಪಮಂತ್ರಕೃದೇವ ಸಃ । ಯೋನಿರ್ಯುನಕ್ತಿ ಯಸ್ಮಾತ್ಸ ಸರ್ವಾರ್(ಚಾ)ಂತಃಕೃಚ್ಚ ನಂದನಃ ॥ (೪) ಅಸೌ ಲೋಕಃ ಪ್ರಕಾಶತ್ವಾತ್ಪ್ರಾಣಸ್ಥತ್ವಾಚ್ಚ ಕೇಶವಃ । ಪರ್ಜನ್ಯೋ ಜನಕೋ ಯಸ್ಮಾತ್ ಪೃಥಿವೀ ಪ್ರಥಿತತ್ವತಃ ॥ ಪುರುಷಃ ಪುರು ಯಸ್ಮಾತ್ಸ ಯೋಷಾ ಜೋಷ್ಯೋ ಯತೋಽಖಿಲೈಃ । ಇತಿ ಸಾಮಸಂಹಿತಾಯಾಂ ॥ ೨ ॥**

ಅ ॥ (೧) ವಿಷ್ಣುವು ಚೆನ್ನಾಗಿ ಭಕ್ತರನ್ನು ವಾಸಗೊಳಿಸುವುದರಿಂದ ಅಥವಾ ಸಂತೋಷಗೊಳಿಸುವುದರಿಂದ ಅಥವಾ ಮುಕ್ತರಾದ ಬ್ರಹ್ಮಾದಿಗಳನ್ನು ಚೆನ್ನಾಗಿ ಸಂತೋಷಗೊಳಿಸುವುದರಿಂದ ಸಂವತ್ಸರನೆಂದೂ, ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನೆಂದೂ, ಸುಖವನ್ನು ಕೊಡುವುದರಿಂದ ರಾತ್ರಿ ಎಂದೂ, ಪರತತ್ತ್ವವನ್ನು ಪದೇಶಿಸುವುದರಿಂದ ದಿಕ್ ಎಂದೂ, ಅಪರತತ್ತ್ವವನ್ನು ಪದೇಶಿಸುವುದರಿಂದ ಅವಾಂತರದಿಕ್ ಎಂದೂ ಅನಿಸುತ್ತಾನೆ. (೨)(೭ನೇ ಖಂಡದಲ್ಲಿದ್ದ ೪ನೇ ಪುರುಷ ಎಂಬ ಅಗ್ನಿಯಲ್ಲಿದ್ದ ವಾಕ್, ಪ್ರಾಣ, ಜಿಹ್ವಾಚಕ್ಷುಃ. ಶ್ರೋತ್ರ ಶಬ್ದಗಳಿಗೆ ಅರ್ಥ ಹೇಳುತ್ತಾರೆ - ) ಶ್ರೀಹರಿಯು ಮಾತನಾಡುವುದರಿಂದ ವಾಕ್ ಎಂದೂ, ಚೆನ್ನಾಗಿ ಜಗತ್ತಿನ ವ್ಯಾಪಾರ ನಡಿಸುವುದರಿಂದ ಪ್ರಾಣನೆಂದೂ, ಎಲ್ಲಾದನ್ನೂ ನೋಡುವುದ

ರಿಂದ **ಚಕ್ಷುಃ** ಎಂದೂ, ಕೇಳುವುದರಿಂದ **ಶ್ರೋತ್ರ**ನೆಂದೂ. ಹೋಮಕ್ಕೆ ಆಶ್ರಯನಾದುದರಿಂದ ಅಥವಾ **ಹೋಮವನ್ನು ಮಾಡುವವನಾದುದರಿಂದ ಜಿಹ್ವಾ** ಎಂದೂ ಎನಿಸುತ್ತಾನೆ. (೩) (೮ನೇ ಖಂಡದಲ್ಲಿದ್ದ ೫ನೇ ಯೋಷಾ ಅಗ್ನಿಯಲ್ಲಿ ಹೇಳಿದ ಉಪಸ್ಥಾದಿ ಶಬ್ದಗಳ ಅರ್ಥ ಹೇಳುತ್ತಾರೆ ) ಶ್ರೀಹರಿಯು ಸಮಸ್ತ ಜೀವರ ಹೃದಯದಲ್ಲಿದ್ದು ಸಮೀಪದಲ್ಲಿದ್ದ ಪ್ರಯುಕ್ತ **ಉಪಸ್ಥ**ನೆಂದೂ, ಸಂಭೋಗಕ್ಕಾಗಿ ಮಾಡತಕ್ಕ ಸಂಭಾಷಣೆಯಲ್ಲಿದ್ದುದರಿಂದ **ಉಪಮಂತ್ರಣ**ನೆಂದೂ, ಮಿಶ್ರೀಕರಿಸುವುದರಿಂದ **ಯೋನಿ**ಯೆಂದೂ, ಯೋನಿಯೊಳಗೆ ಸುರತವ್ಯಾಪಾರ ನಡಿಸುವುದರಿಂದ ಅಂತಃಕರಣ ಕರ್ತನೆಂದೂ, ಸಂತೋಷಗೊಳಿಸುವುದರಿಂದ ಅಭಿನಂದನೆಂದೂ ಅನಿಸುತ್ತಾನೆ (೪) (ಐದು ಅಗ್ನಿಗಳಲ್ಲಿ ಹೇಳಿದ ಅಸೌ ಲೋಕ, ಪರ್ಜನ್ಯ, ಪೃಥಿವೀ. ಪುರುಷ ಯೋಷಾ ಶಬ್ದಗಳಿಗೆ ಅರ್ಥ ಹೇಳುತ್ತಾರೆ—) ಶ್ರೀಹರಿಯು ಮುಖ್ಯಪ್ರಾಣನಲ್ಲಿದ್ದ ಪ್ರಯುಕ್ತವೂ ಪ್ರಕಾಶಸ್ವರೂಪನಾದುದರಿಂದಲೂ ಅಸೌಲೋಕನೆಂದೂ, ಸರ್ವಕ್ಕೂ ಸೃಷ್ಟಿಕರ್ತನಾದುದರಿಂದ ಪರ್ಜನ್ಯನೆಂದೂ ಸರ್ವತ್ರ ಪ್ರಸಿದ್ಧನಾದುದರಿಂದ ಪೃಥಿವೀ ಎಂದೂ, ಸರ್ವಗುಣಪರಿಪೂರ್ಣನಾದುದರಿಂದ ಪುರುಷನೆಂದೂ, ಎಲ್ಲರಿಂದಲೂ ಪ್ರೀತಿಯಿಂದ ಸೇವಿಸಲ್ಪಡುವುದರಿಂದ ಯೋಷಾ ಎಂದೂ ಅನಿಸುತ್ತಾನೆ, ಎಂದು ಸಾಮಸಂಹಿತೆಯಲ್ಲಿದೆ ॥ ೨ ॥

ಸೀ— **ಧೂಮೋ ಭೂತ್ವಾಽಭ್ರಂ ಭವತಿ** ಇತ್ಯಾದಿಗಳಲ್ಲಿ ಕರ್ಮಿಗಳಿಗೆ ಧೂಮಾದಿದೇವತೆಗಳಿಂದ ಐಕ್ಯವು ಅಥವಾ ಧೂಮಾದಿದೇವತೆಗಳ ಪದಪ್ರಾಪ್ತಿಯು ಹೇಳಲ್ಪಡುತ್ತದೆ, ಎಂಬುದು ಅಯುಕ್ತವೆಂದು ಪ್ರಮಾಣದಿಂದ ಹೇಳುತ್ತಾರೆ—

**ಭಾ. ॥ (೧) ಅಭ್ರಧೂಮಾದಿಭಾವಸ್ತು ಜೀವಸ್ಯಾಭ್ರಾದಿಸಂಸ್ಥಿತಿಃ । ಅಭ್ರಾದಿಮಾನಿರೂಪಂ ತು ಜ್ಞಾನಿ(ನ)ಪ್ರಾಪ್ಯಂ ಯತೋ ಭವೇತ್ ॥ ಇತಿ ಚ ॥ (೨) ಪರಮಸ್ಯ ಜನ್ಯಮಿತಿ ಪರ್ಜನ್ಯಃ ॥ (೩) ಪಂಚಪಂಚಸ್ವರೂಪೇಣ ಸೂರ್ಯಾದೌ ಸಂಸ್ಥಿತೋ ಹರಿಃ । ಸ್ವರ್ಗಾದೌ ಚಾಪಿ ತನ್ನಾಮಾ ತದ್ಯೋಗಾನ್ನಾಮಿನಃ ಪರೇ ॥ ಇತಿ ಚ ॥ ಇತಿ ದಶಮಃ ಖಂಡಃ ॥ ೭–೧೦ ॥ ॥ ೩ ॥**

ಅ ॥ (೧) ಜೀವನಿಗೆ ಅಭ್ರಧೂಮಾದಿಭಾವವೆಂದರೆ— ಅಭ್ರಾದಿಗಳಲ್ಲಿ ಇರುವುದು (ಅಂದರೆ— ಮೇಘಾದಿಗಳಲ್ಲಿ ಪ್ರವೇಶಮಾಡಿ ಅವುಗಳು ಹೋಗುವಾಗ ಹೋಗುವುದು. ಅವುಗಳು ನಿಲ್ಲುವಾಗ ನಿಲ್ಲುವುದು, ಇತ್ಯಾದಿ ಅವುಗಳ ಧರ್ಮ ಬರುವುದು. ಅಲ್ಲದೆ ಧೂಮಾದಿಗಳಿಂದ ಐಕ್ಯವಾಗಲೀ, ಅವುಗಳ ಪದಪ್ರಾಪ್ತಿಯಾಗಲೀ ಅಲ್ಲವೇ ಅಲ್ಲ.) (ಚೈತ್ರನು ಮೈತ್ರನಾಗುವುದು ಎಲ್ಲಿಯೂ ಕಂಡುಬಾರದಿರುವುದರಿಂದ ಐಕ್ಯವು ಕೂಡದಿದ್ದರೂ ಧೂಮಾದಿ ದೇವತೆಗಳ ಪದಪ್ರಾಪ್ತಿಯು ಕೂಡಬಹುದಷ್ಟೆ, ಎಂದರೆ—) ಅಭ್ರಾದಿ ದೇವತೆಗಳ ಪದಪ್ರಾಪ್ತಿಯು ಅದಕ್ಕೆ ಯೋಗ್ಯರಾದ ಜ್ಞಾನಿಗಳಿಂದಲೇ ಜ್ಞಾನದಿಂದ ಹೊಂದಲ್ಪಡುವುದು. ಕರ್ಮಿಗಳಿಗೆ ಜ್ಞಾನವಿಲ್ಲದಿರುವುದರಿಂದ ಹೊಂದಲು ಶಕ್ಯವಲ್ಲ. (೨) ಉತ್ತಮನಾದ ಚತುರ್ಮುಖನು ಶ್ರೀಹರಿಯಿಂದ ಹುಟ್ಟಿದಪ್ರಯುಕ್ತ ಶ್ರೀಹರಿಯು ಪರ್ಜನ್ಯನೆನಿಸುತ್ತಾನೆ. (೩) (**ತಸ್ಯಾದಿತ್ಯ ಏವ ಸಮಿತ್** ಇತ್ಯಾದಿಗಳಲ್ಲಿ ಹೇಳಿದ ಆದಿತ್ಯ ಮೊದಲಾದ ೨೫ ಶಬ್ದಗಳೂ ಅಸೌಲೋಕಃ ಇದುಮೊದಲಾದ ಐದು ಶಬ್ದಗಳೂ ಅವಯವಾರ್ಥದಿಂದ ಶ್ರೀಹರಿಯನ್ನು ಹೇಳುತ್ತವೆಂದರು. ಈಗ ರೂಢಿಯಿಂದಲೂ ಶ್ರೀಹರಿಯು ಎಂದೇ ಸಿದ್ಧನಾಗುತ್ತಾನೆನ್ನುತ್ತಾರೆ—) ೨೫ ರೂಪಗಳಿಂದ ಸೂರ್ಯಾದಿಗಳಲ್ಲಿಯೂ ಸ್ವರ್ಗಾದಿಗಳಲ್ಲಿಯೂ ಇರುವ ಶ್ರೀಹರಿಯೇ ಆದಿತ್ಯ ಮೊದಲಾದ ಹೆಸರುಗಳುಳ್ಳವನು. ಬೇರೆಯವರು ಅವನ ಅಧೀನದಲ್ಲಿದ್ದುದರಿಂದಲೇ ಆದಿತ್ಯ ಮೊದಲಾದ ಹೆಸರುಳ್ಳವರು. ॥ ೭—೧೦ ॥ ॥ ೩ ॥

**ಹತ್ತನೇ ಖಂಡವು ಮುಗಿಯಿತು.**

# ೧೧ನೇ ಖಂಡವು

ಪೀ—ಸಮಸ್ತಪಾಪಗಳ ಪರಿಹಾರವಾಗಿ ವೈಕುಂಠಾದಿಲೋಕಗಳ ಪ್ರಾಪ್ತಿಗೆ ಕಾರಣವಾದ ಪಂಚಾಗ್ನಿವಿದ್ಯೆಯನ್ನು ಹೇಳಿರುವರು. ಈಗ ೮ ಖಂಡಗಳಿಂದ ವೈಶ್ವಾನರವಿದ್ಯೆಯನ್ನು ಕಥೆಯ ಮೂಲಕ ಹೇಳುತ್ತಾರೆ—

**ಉ. ॥ ಪ್ರಾಚೀನಶಾಲ ಔಪಮನ್ಯವಃ ಸತ್ಯಯಜ್ಞಃ ಪೌಲುಷಿರಿಂದ್ರ-ದ್ಯುಮ್ನೋ ಭಾಲ್ಲವೇಯೋ ಜನಃ ಶಾರ್ಕರಾಕ್ಷ್ಯೋ ಬುಡಿಲ ಆಶ್ವತರಾಶ್ವಿಸ್ತೇ ಹೈತೇ ಮಹಾಶಾಲಾ ಮಹಾಶ್ರೋತ್ರಿಯಾಃ ಸಮೇತ್ಯ ಮೀಮಾಂಸಾಂಚಕ್ರುಃ ಕೋ ನ ಆತ್ಮಾ ಕಿಂ ಬ್ರಹ್ಮೇತಿ ॥ ೧ ॥**

ಅ ॥ ಉಪಮನ್ಯುವಿನ ಮಗನಾದ ಪ್ರಾಚೀನಶಾಲನೆನ್ನುವವನೂ, ಪುಲುಷನ ಮಗನಾದ ಸತ್ಯಯಜ್ಞನೆನ್ನುವವನೂ, ಭಲ್ಲವೆಯ ಮಗನಾದ ಇಂದ್ರದ್ಯುಮ್ನನೆನ್ನುವವನೂ, ಶರ್ಕರಾಕ್ಷನ ಮಗನಾದ ಜನನೆನ್ನುವವನೂ, ಅಶ್ವತರಾಶ್ವನ ಮಗನಾದ ಬುಡಿಲನೆನ್ನುವವನೂ ಪ್ರತಿಸಂವತ್ಸರದಲ್ಲಿ ಚೆನ್ನಾಗಿ ಯಾಗವನ್ನು ಮಾಡಿರುವುದರಿಂದ ಮಹಾಶಾಲಾ ಎನಿಸಿಕೊಂಡ. ಚೆನ್ನಾಗಿ ವೇದವೇದಾರ್ಥಗಳನ್ನು ವಿಚಾರ ಮಾಡಿರುವುದರಿಂದ ಮಹಾಶ್ರೋತ್ರಿಯರೆನಿಸಿಕೊಂಡ ಈ ಐವರು ಒಂದು ಕಡೆ ಒಟ್ಟುಸೇರಿ ನಮ್ಮಿಂದ ಉಪಾಸ್ಯನಾದ ವೈಶ್ವಾನರನಿಗೆ ಏನು ಲಕ್ಷಣವು? ಗುಣಪೂರ್ಣನಾದವನು ಯಾರು? ಎಂದು ವಿಚಾರ ಮಾಡಿದರು. ॥ ೧ ॥

**ಉ.॥ ತೇ ಹ ಸಂಪಾದಯಾಂಚಕ್ರುರುದ್ದಾಲಕೋ ವೈ ಭಗವಂತೋಽಯಮಾರುಣಿಃ ಸಂಪ್ರತೀಮಮಾತ್ಮಾನಂ ವೈಶ್ವಾನರಮಧ್ಯೇತಿ ತಂ ಹಂತಾ-ಭ್ಯಾಗಚ್ಛಾಮೇತಿ ತಂ ಹಾಭ್ಯಾಜಗ್ಮುಃ ॥ ೨ ॥**

ಅ ॥ ಹೀಗೆ ಪರಸ್ಪರವಾಗಿ ಆತ್ಮಸ್ವರೂಪವನ್ನು ವಿಚಾರಮಾಡಿದರೂ ವಿಶೇಷ ನಿರ್ಣಯವನ್ನು ಹೊಂದದಿರುವ ಆ ಐವರು ವಿಶೇಷನಿರ್ಣಯಕ್ಕಾಗಿ ಉದ್ದಾಲಕರ ಸಮೀಪಕ್ಕೆ ಹೋಗಿ ಪರಸ್ಪರವಾಗಿ ಹೇಳಿಕೊಂಡರು.. (ಅಂದರೆ—ತಾವೇ ಮಾತಾಡಿಕೊಂಡರು.) ಎಲೋ ಪೂಜ್ಯರೇ, ಅರುಣನ ಪುತ್ರರಾದ ಉದ್ದಾಲಕರು ಈಗ ನಮಗೆ ಅಭಿಮತನಾದ ಸರ್ವರಿಗೂ ಸ್ವಾಮಿಯಾದ ವೈಶ್ವಾನರನನ್ನು ಚೆನ್ನಾಗಿ ತಿಳಿದಿರುತ್ತಾರೆ. ಸಂತೋಷದಿಂದ ಉದ್ದಾಲಕರ ಸಮೀಪಕ್ಕೆ ಹೋಗುವ, ಎಂದು ಪರಸ್ಪರವಾಗಿ ಹೇಳಿಕೊಂಡರು. ಹೀಗೆ ನಿಶ್ಚಯಮಾಡಿ ಉದ್ದಾಲಕರ ಸಮೀಪಕ್ಕೆ ಹೋದರು. ॥ ೨ ॥

**ಉ. ॥ ಸ ಹ ಸಂಪಾದಯಾಂಚಕಾರ ಪ್ರಕ್ಷ್ಯಂತಿ ಮಾಮಿಮೇ ಮಹಾ-ಶಾಲಾ ಮಹಾಶ್ರೋತ್ರಿಯಾಸ್ತೇಭ್ಯೋ ನ ಸರ್ವಮಿವ ಪ್ರತಿಪತ್ಸ್ಯೇ ಹಂತಾ-ಹಮನ್ಯಮಭ್ಯನುಶಾಸಾನೀತಿ ॥ ೩ ॥**

ಅ ॥ ಆಗ ಉದ್ದಾಲಕರು ಆ ಋಷಿಗಳು ಬಂದ ಉದ್ದೇಶ ತಿಳಿದು ಇವರಿಗೆ ಉಪದೇಶಕನು ಮತ್ತೊಬ್ಬನೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡರು. (ಏಕೆಂದರೆ—) ಪ್ರತಿಸಂವತ್ಸರದಲ್ಲಿ ಯಜ್ಞ ಮಾಡುವ ಮಹಾಶ್ರೋತ್ರಿಯರಾದ ಇವರು ನನಗೆ ಪ್ರಶ್ನೆ ಮಾಡುತ್ತಾರೆ—ಅವರು ಕೇಳಿದುದೆಲ್ಲವನ್ನೂ

ಅವರಿಗೆ ಹೇಳಲಿಕ್ಕೆ ನಾನು ತಿಳಿಯಲಾರೆ. ಅದುಕಾರಣ ಮತ್ತೊಬ್ಬನನ್ನು ಅವರಿಗೆ ಉಪದೇಶಕನನ್ನಾಗಿ ಹೇಳುವೆನು. ಹೀಗೆ ನಿಶ್ಚಯಿಸಿಕೊಂಡು. ॥ ೩ ॥

**ಉ. ॥ ತಾನ್ಹೋವಾಚಾಶ್ವಪತಿರ್ವೈ ಭಗವಂತೋಽಯಂ ಕೈಕೇಯಃ ಸಂಪ್ರತೀಮಮಾತ್ಮಾನಂ ವೈಶ್ವಾನರಮಧ್ಯೇತಿ ತꣳ ಹಾಭ್ಯಾಗಚ್ಛಾಮೇತಿ ತꣳ ಹಾಭ್ಯಾಜಗ್ಮುಃ ॥ ೪ ॥**

ಅ ॥ ಅವರಿಗೆ ಹೇಳಿದರು. ಎಲೋ ಪೂಜ್ಯರೇ ಕೇಕಯದೇಶಕ್ಕೆ ಅಧಿಪತಿಯಾದ ಅಶ್ವಪತಿಯೆಂಬ ರಾಜನು ಈಗ ಈ ವೈಶ್ವಾನರನನ್ನು ಚೆನ್ನಾಗಿ ತಿಳಿದಿರುತ್ತಾನೆ. ಅವನ ಸಮೀಪಕ್ಕೆ ಹೋಗುವ, ಎಂದರು. ಆಗ ಅವರೆಲ್ಲರೂ ಅಶ್ವಪತಿಯ ಸಮೀಪಕ್ಕೆ ಬಂದರು. ॥ ೪ ॥

**ಉ. ॥ ತೇಭ್ಯೋ ಹ ಪ್ರಾಪ್ತೇಭ್ಯಃ ಪೃಥಗರ್ಹಾಣಿ ಕಾರಯಾಂಚಕಾರ ಸ ಹ ಪ್ರಾತಃ ಸಂಜಿಹಾನ ಉವಾಚ ನ ಮೇ ಸ್ತೇನೋ ಜನಪದೇ ನ ಕದರ್ಯೋ ನ ಮದ್ಯಪೋ ನಾನಾಹಿತಾಗ್ನಿರ್ನಾವಿದ್ವಾನ್ನ ಸ್ವೈರೀ ಸ್ವೈರಿಣೀ ಕುತೋ ಯಕ್ಷ್ಯಮಾಣೋ ವೈ ಭಗವಂತೋಽಹಮಸ್ಮಿ ಯಾವದೇಕೈಕಸ್ಮಾ ಋತ್ವಿಜೇ ಧನಂ ದಾಸ್ಯಾಮಿ ತಾವದ್ಭಗವದ್ಭ್ಯೋ ದಾಸ್ಯಾಮಿ ವಸಂತು ಭಗವಂತ ಇತಿ ॥ ೫ ॥**

ಅ ॥ ಬಂದ ಆ ಬ್ರಾಹ್ಮಣರಿಗೆ ರಾಜನು ಪ್ರತ್ಯೇಕ ಪ್ರತ್ಯೇಕ ಅವರವರಿಗೆ ಯೋಗ್ಯಗಳಾದ ಪೂಜೆಗಳನ್ನು (ಭೃತ್ಯರಿಂದ) ಮಾಡಿಸಿದನು. ಆ ರಾಜನು ಮರುದಿನ ಬೆಳಗ್ಗೆ ಹಾಸಿಗೆಯಿಂದ ಎದ್ದೊಡನೆ ಹೇಳಿದನು. (ಎಲೋ ಪೂಜ್ಯರೇ ನೀವೆಲ್ಲರೂ ಬರಲು ಕಾರಣವೇನು? ನನ್ನ ರಾಜ್ಯದಲ್ಲಿ ಕಳ್ಳರು ಮೊದಲಾದವರು ಇಲ್ಲದಿರುವುದರಿಂದ ಅವರಿಂದ ಭಯವು ಬರಲಾರದೆನ್ನುತ್ತಾರೆ ಏಕೆಂದರೆ—) ನನ್ನ ರಾಜ್ಯದಲ್ಲಿ ಕಳ್ಳರಿಲ್ಲ. ಐಶ್ವರ್ಯವಿದ್ದು ದಾನಮಾಡದಿರುವವನೂ, ಅಥವಾ ಆಯಾಯ ಕಾಲದಲ್ಲಿ ಹೇಳಿದ ಸದಾಚಾರಗಳನ್ನು ಮಾಡದಿರುವವನೂ ಇಲ್ಲ. ಕಳ್ಳಕುಡುಕನೂ ಇಲ್ಲ. ಅಗ್ನ್ಯಾಧಾನ (ಅಗ್ನಿಹೋತ್ರಾದಿ) ವಿಲ್ಲದವನೂ ಇಲ್ಲ ವಿದ್ವಾಂಸನಾಗದಿದ್ದವನೂ ಇಲ್ಲ ಜಾರನೂ ಇಲ್ಲ. ಆದುದರಿಂದಲೇ ವ್ಯಭಿಚಾರಿಣಿ ಸ್ತ್ರೀಯರೂ ಸುತರಾಂ ಇಲ್ಲ. (ನೀವು ದ್ರವ್ಯದ ಅಭಿಲಾಷೆಯಿಂದ ಬಂದವರಾದರೆ ದ್ರವ್ಯದಾನ ಮಾಡುವೆನು ಎನ್ನುತ್ತಾನೆ—) ಎಲೋ ಪೂಜ್ಯರೇ ನಾನು ಯಾಗಮಾಡುವೆನು. ಅದರಲ್ಲಿ ಒಬ್ಬೊಬ್ಬ ಋತ್ವಿಜನಿಗೆ ಎಷ್ಟು ದಕ್ಷಿಣೆ ಕೊಡುವೆನೋ, ಅಷ್ಟು ನಿಮಗೆ ಕೊಡುವೆನು ನೀವು ಇಲ್ಲಿಯೇ ಆವಾಸಮಾಡಿರಿ, ಎಂದು ರಾಜನು ಹೇಳಿದನು. ॥ ೫ ॥

**ಉ. ॥ ತೇ ಹೋಚುರ್ಯೇನ ಹೈವಾರ್ಥೇನ ಪುರುಷಶ್ಚರೇತ್ತꣳ ಹೈವ ವದೇದಾತ್ಮಾನಮೇವೇಮಂ ವೈಶ್ವಾನರꣳ ಸಂಪ್ರತ್ಯಧ್ಯೇಷಿ ತಮೇವ ನೋ ಬ್ರೂಹೀತಿ ॥ ೬ ॥**

ಅ ॥ ಆಗ ಆ ಬ್ರಾಹ್ಮಣರು ಹೇಳಿದರು ಜ್ಞಾನವೆಂಬ ಅರ್ಥವನ್ನು ಸಂಪಾದಿಸಿದರೆ ಪುರುಷನು ಮೋಕ್ಷಕ್ಕೆ ಹೋಗುವುದರಿಂದ ಅಂತಹ ಜ್ಞಾನವನ್ನು ನಿನ್ನಂತಹವನು ಉಪದೇಶಿಸಬೇಕು. (ನಾವು

ದ್ರವ್ಯದ ಅಭಿಲಾಷೆಯಿಂದ ಇಲ್ಲಿಗೆ ಬಂದುದಲ್ಲ. ಪರಂತು ಬ್ರಹ್ಮಜ್ಞಾನವನ್ನು ಸಂಪಾದಿಸಬೇಕೆಂಬ ಇಚ್ಛೆಯಿಂದ ಬಂದಿರುತ್ತೇವೆ. ನೀನು) ಸರ್ವಸ್ವಾಮಿಯಾದ ವೈಶ್ವಾನರನನ್ನು ಚೆನ್ನಾಗಿ ತಿಳಿದಿರುತ್ತಿ. ಅವನನ್ನೇ ನಮಗೆ ಉಪದೇಶಿಸು, ಎಂದರು ॥ ೬ ॥

**ಉ. ॥ ತಾನ್ಹೋವಾಚ ಪ್ರಾತರ್ವಃ ಪ್ರತಿವಕ್ತಾಽಸ್ಮೀತಿ ತೇ ಹ ಸಮಿ-ತ್ಪಾಣಯಃ ಪೂರ್ವಾಹ್ಣೇ ಪ್ರತಿಚಕ್ರಮಿರೇ ತಾನ್ಹಾನುಪನೀಯ್ಯೈವೈತದುವಾಚ ಇತ್ಯೇಕಾದಶಃ ಖಂಡಃ ॥ ೭-೧೧ ॥ ॥ ೭ ॥**

ಅ ॥ ಆಗ ರಾಜನು ನಿಮಗೆ ನಾಳೆ ಮುಂಜಾನೆ ನಾನು ಹೇಳುವೆನು, ಎಂದು ಬ್ರಾಹ್ಮಣರಿಗೆ ಹೇಳಿದನು. ಆ ಆರು ಬ್ರಾಹ್ಮಣರು ಮರುದಿವಸ ಮುಂಜಾನೆ ಕೈಗಳಲ್ಲಿ ಸಮಿಧೆ ಹಿಡಿದುಕೊಂಡು ರಾಜನ ಸಮೀಪಕ್ಕೆ ಬಂದರು (ಕ್ಷತ್ರಿಯರಿಗಿಂತ ಬ್ರಾಹ್ಮಣರು ಉತ್ತಮರಾದಪ್ರಯುಕ್ತ) ರಾಜನು ಆ ಆರುಮಂದಿಯನ್ನು ಶಿಷ್ಯರನ್ನಾಗಿ ಸ್ವೀಕರಿಸದೇನೇ ಮುಂದೆ ಹೇಳುವ ಪ್ರಮೇಯವನ್ನು ಹೇಳಿದನು. ॥೭-೧೧॥ ॥೭॥

**ಹನ್ನೊಂದನೇ ಖಂಡವು ಮುಗಿಯಿತು.**

---

## ೧೨ನೇ ಖಂಡವು

**ಪೀ**—ಆ ಆರು ಮಂದಿ ಬ್ರಾಹ್ಮಣರು ತಾವು ವೈಶ್ವಾನರನ ತಿಳಿದ ಅಂಶವನ್ನು ಹೇಳಿದರು. ಆ ಮೇಲೆ ರಾಜನು ಅವನ ಹೆಸರನ್ನೂ ಫಲವನ್ನೂ ತಾನು ಹೇಳುತ್ತಾ ವಿಶೇಷವಾಗಿ ತಿಳಿಯದಿದ್ದರೆ ಬಾಧಕ ಹೇಳುತ್ತಾನೆ—

**ಉ. ॥ ಔಪಮನ್ಯವ ಕಂ ತ್ವಮಾತ್ಮಾನಮುಪಾಸ್ಸ ಇತಿ ದಿವಮೇವ ಭಗ-ವೋ ರಾಜನ್ನಿತಿ ಹೋವಾಚೈಷ ವೈ ಸುತೇಜಾ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತವ ಸುತಂ ಪ್ರಸುತಮಾಸುತಂ ಕುಲೇ ದೃ-ಶ್ಯತೇ ॥ ೧ ॥**

ಅ ॥ ಎಲೋ ಔಪಮನ್ಯವನೇ ಸರ್ವಸ್ವಾಮಿಯಾದ ವೈಶ್ವಾನರನನ್ನು ಏನು ಹೆಸರುಳ್ಳವನನ್ನಾಗಿ ಉಪಾಸನೆ ಮಾಡುತ್ತಿ ಎಂದು ರಾಜನು ಕೇಳಿದನು. ಆಗ ಎಲೋ ರಾಜನೇ ಕ್ರೀಡಾರೂಪನಾದುದರಿಂದ ದ್ಯು ಎನಿಸಿಕೊಂಡ ಸ್ವರ್ಗಕ್ಕೆ ಆಧಾರನಾದ ವೈಶ್ವಾನರನನ್ನು ಉಪಾಸನೆ ಮಾಡುತ್ತೇನೆಂದಿಷ್ಟೇ ಪ್ರಾಚೀನ ಶಾಲನು ಹೇಳಿದನು (ರಾಜನು ವೈಶ್ವಾನರನಲ್ಲಿ ವಿಶೇಷ ಗುಣಗಳನ್ನು ಹೇಳುತ್ತಾನೆ.) ನೀವು ಉಪಾಸನೆ ಮಾಡತಕ್ಕ ದ್ಯುಲೋಕದೊಳಗಣ ವೈಶ್ವಾನರನ. ಎಲ್ಲಾ ಜೀವರಿಗೂ ಅನುಗ್ರಹ ಮಾಡತಕ್ಕವನಾದುದರಿಂದ ವೈಶ್ವಾನರನೆನಿಸಿಕೊಂಡವನು. ವ್ಯಾಪ್ತನು. ಬಹುತೇಜಸ್ಸುಳ್ಳವನು. ನೀವು ದ್ಯುಲೋಕದೊಳಗಣ ವೈಶ್ವಾನರನನ್ನು ಉಪಾಸನೆ ಮಾಡಿರುವುದರಿಂದ ನಿಮ್ಮ ಕುಲದಲ್ಲಿ ಸ್ವರ್ಗಪ್ರಾಪ್ತಿಗಾಗಿ ಸೋಮಲತೆಯು ಹಿಂಡಲ್ಪಡುತ್ತಿದೆ ಪ್ರಾತಃಸವನ, ಮಾಧ್ಯಂಸವನ, ಸಾಯಂಸವನ ಎಂಬ ಮೂರು ಸವನಗಳೂ ಮಾಡಲ್ಪಡುತ್ತಿವೆ. (ಅಂದರೆ—ನಿಮ್ಮ ಕುಲದವರು ಪರಿಶುದ್ಧವಾದ ಕರ್ಮಮಾಡಿದವರು.) ಅಥವಾ ನಿಮ್ಮ ಕುಲದಲ್ಲಿ ಮಕ್ಕಳೂ ಮೊಮ್ಮಕ್ಕಳೂ ಮರಿಮಕ್ಕಳೂ ಕಾಣಲ್ಪಡುತ್ತಾರೆ. ॥ ೧ ॥

**ಉ. ॥ ಅತ್ಸ್ಯನ್ನಂ ಪಶ್ಯಸಿ ಪ್ರಿಯಮಿತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಮೂರ್ಧಾ ತ್ವೇಷ ಆತ್ಮನ ಇತಿ ಹೋವಾಚ ಮೂರ್ಧಾ ತೇ ವ್ಯಪತಿಷ್ಯದ್ಯನ್ಮಾಂ ನಾಗಮಿಷ್ಯ ಇತಿ ॥ ಇತಿ ದ್ವಾದಶಃ ಖಂಡಃ ॥ ೭-೧೨ ॥ ॥ ೨ ॥**

ಅ ॥ ಅನ್ನವನ್ನು ಣ್ಣುತ್ತಿ, ಪ್ರಿಯವಾದುದನ್ನು ನೋಡುತ್ತಿ. ಯಾವನು ನೀವು ಉಪಾಸನೆ ಮಾಡ ತಕ್ಕ ವೈಶ್ವಾನರನನ್ನು ಒಳ್ಳೇ ತೇಜಸ್ಸುಳ್ಳವನು ಇತ್ಯಾದಿ ಪ್ರಕಾರ ಉಪಾಸನೆ ಮಾಡುತ್ತಾನೋ ಅವನು ಇಷ್ಟವಾದ ಅನ್ನವನ್ನು ಣ್ಣುತ್ತಾನೆ ಪ್ರಿಯವಾದುದನ್ನೇ ನೋಡುತ್ತಾನೆ ಈ ಉಪಾಸಕನ ಕುಲದಲ್ಲಿ ಬ್ರಹ್ಮವರ್ಚಸ್ಸು ಹೆಚ್ಚಾಗುತ್ತದೆ ವೈಶ್ವಾನರನ ಶಿರಸ್ಸು ದ್ಯುಲೋಕದಲ್ಲಿರತಕ್ಕದ್ದು. ದ್ಯು ಎಂದು ಹೆಸ ರುಳ್ಳದ್ದು. ಒಳ್ಳೇ ತೇಜಸ್ಸು ಇದ್ದುದರಿಂದ ಸುತೇಜಾಃ ಎಂದು ಹೆಸರುಳ್ಳದ್ದು. (ಒಂದು ಅವಯವವ ನ್ನುಪಾಸನೆ ಮಾಡತಕ್ಕ ನೀನು) ನನ್ನ ಸಮೀಪಕ್ಕೆ ಬಾರದೆ ಇರುತ್ತಿದ್ದರೆ (ಉಪಾಸ್ಯನಾದ ವೈಶ್ವಾನರನ ಶಿರಸ್ಸಿನ ಪರಿಜ್ಞಾನವಿಲ್ಲದಿರುವುದರಿಂದ) ನಿನ್ನ ಶಿರಸ್ಸು ತುಂಡಾಗಿ ಕೆಳಗೆ ಬೀಳುತ್ತಿತ್ತು, ಎಂದು ರಾಜನು ಹೇಳಿದನು. ॥ ೭—೧೨ ॥ ॥ ೨ ॥

ಹನ್ನೆರಡನೇ ಖಂಡವು ಮುಗಿಯಿತು.

---

## ೧೩ನೇ ಖಂಡವು

**ಉ. ॥ ಅಥ ಹೋವಾಚ ಸತ್ಯಯಜ್ಞಂ ಪೌಲುಷಿಂ ಪ್ರಾಚೀನಯೋಗ್ಯ ಕಂ ತ್ವಮಾತ್ಮಾನಮುಪಾಸ್ಸ ಇತ್ಯಾದಿತ್ಯಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ವಿಶ್ವರೂಪ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತವ ಬಹುವಿಶ್ವರೂಪಂ ಕುಲೇ ದೃಶ್ಯತೇ ॥ ೧ ॥**

ಅ ॥ ಪ್ರಾಚೀನಶಾಲನಿಗೆ ಉಪದೇಶ ಮಾಡಿದ ಮೇಲೆ ಪುಲುಷನ ಮಗನಾದ ಸತ್ಯಯಜ್ಞನಿಗೆ ಕೇಳಿದನು. ಎಲೋ ಅನಾದಿಯೋಗ್ಯತೆಯುಳ್ಳವನೇ ನೀನು ಎಂತಹ ವೈಶ್ವಾನರನನ್ನು ಉಪಾಸನೆ ಮಾಡುತ್ತಿ, ಎಂದನು ಆಗ ಸತ್ಯಯಜ್ಞನು ಎಲೋ ರಾಜನೇ ವೈಶ್ವಾನರನು ಜನರ ಆಯುಷ್ಯವನ್ನು ತೆಗೆದುಕೊಳ್ಳುವುದರಿಂದ ಆದಿತ್ಯನೆನಿಸಿದವನು, ಆದಿತ್ಯನೊಳಗಣನು, ಎಂದು ಉಪಾಸನೆ ಮಾಡುತ್ತೇ ನೆಂದನು. ಆಗ ರಾಜನು ನೀನು ಉಪಾಸನೆ ಮಾಡತಕ್ಕ ಆದಿತ್ಯನೆನಿಸಿದ ವೈಶ್ವಾನರನು ಸರ್ವರೂಪ ಗಳನ್ನು ನೋಡುವುದರಿಂದ ವಿಶ್ವರೂಪನೆನಿಸಿದವನು. ವಿಶ್ವರೂಪವನ್ನು ಪಾಸನೆಮಾಡುವುದರಿಂದಲೇ ನಿಮ್ಮ ಮನೆಯಲ್ಲಿ ಬಹುವಸ್ತುಗಳ ಸಮುದಾಯವು ಕಾಣಲ್ಪಡುತ್ತದೆ ॥ ೧ ॥

**ಉ. ॥ ಪ್ರವೃತ್ತೋಽಶ್ವತರೀರಥೋ ದಾಸೀ ನಿಷ್ಕೋಽತ್ಸ್ಯನ್ನಂ ಪಶ್ಯಸಿ ಪ್ರಿಯಮಿತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಚಕ್ಷುಷ್ಟ್ವೇತದಾತ್ಮನ ಇತಿ**

**ಹೋವಾಚಾಂಧೋ ಭವಿಷ್ಯೋ ಯನ್ಮಾಂ ನಾಗಮಿಷ್ಯ ಇತಿ ॥ ಇತಿ ತ್ರಯೋದಶಃ ಖಂಡಃ ॥ ೬-೧೩ ॥ ॥ ೨ ॥**

**ಅ** ॥ ನಿಮ್ಮ ಮನೆಯಲ್ಲಿ ಅಶ್ವತರೀ (ಹೆಣ್ಣು ಕತ್ತೆಯಲ್ಲಿ ಕುದುರೆಯಿಂದ ಹುಟ್ಟಿದ್ದು) ಯಿಂದ ಕೂಡಿದ ರಥವೂ, ದಾಸಿಯರೂ, ಬಹುನಾಣ್ಯಗಳೂ ಇವೆ. ಯಥೇಷ್ಟ ಅನ್ನವನ್ನುಣ್ಣುತ್ತಿ. ಪ್ರಿಯ ವಸ್ತುವನ್ನು ನೋಡುತ್ತಿ. ಎಂದನು. ಹೀಗೆ ತಿಳಿದು ಉಪಾಸನೆ ಮಾಡುವವನು ಯಥೇಷ್ಟ ಅನ್ನವನ್ನುಣ್ಣುತ್ತಾನೆ. ಪ್ರಿಯವಾದುದನ್ನೇ ನೋಡುತ್ತಾನೆ. ಇವನ ಕುಲದಲ್ಲಿ ಬ್ರಹ್ಮವರ್ಚಸ್ಸು ಜಾಸ್ತಿಯಾಗುತ್ತದೆ. ನಿನ್ನಿಂದ ಉಪಾಸನೆಮಾಡಲ್ಪಡುವ ಆದಿತ್ಯನೆನಿಸಿದ ಆದಿತ್ಯನಿಗೆ ಆಧಾರವಾದ ವೈಶ್ವಾನರನ ಅಂಗವು ಚಕ್ಷುಸ್ಸೇ. (ಕಣ್ಣೇ) (ಸರ್ವಾಂಗಗಳಲ್ಲ.) ನೀನು ನನ್ನ ಸಮೀಪಕ್ಕೆ ಬಾರದೆ ಇರುತ್ತಿದ್ದರೆ ಅಂಧನೇ (ಕುರುಡನೇ) ಆಗುತ್ತಿರುವಿ ॥ ೬—೧೩ ॥ ॥ ೨ ॥

**ಹದಿಮೂರನೇ ಖಂಡವು ಮುಗಿಯಿತು.**

## ೧೪ನೇ ಖಂಡವು

**ಉ.** ॥ **ಅಥ ಹೋವಾಚೇಂದ್ರದ್ಯುಮ್ನಂ ಭಾಲ್ಲವೇಯಂ ವೈಯಾಘ್ರಪದ್ಯ ಕಂ ತ್ವಮಾತ್ಮಾನಮುಪಾಸ್ಸ ಇತಿ ವಾಯುಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಪೃಥಗ್ವರ್ತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಾಂ ಪೃಥಗ್ಬಲಯ ಆಯಂತಿ ಪೃಥಗ್ರಥಶ್ರೇಣಯೋಽನುಯಂತಿ ॥ ೧ ॥**

**ಅ** ॥ ಆ ಮೇಲೆ ಭಲ್ಲವೆಯ ಮಗನಾದ ಇಂದ್ರದ್ಯುಮ್ನನಿಗೆ ಕೇಳಿದನು ವ್ಯಾಘ್ರಪಾತ್ ಎಂಬುವನ ಮಗನೇ, *............ವೈಶ್ವಾನರನು, ಜ್ಞಾನರೂಪನೂ ಆಯುಷ್ಯವನ್ನು ಕೊಡುವವನೂ ಆದುದರಿಂದ ವಾಯುವೆನಿಸಿ ವಾಯುವಿಗೆ ಆಧಾರನನ್ನಾಗಿ ತಿಳಿಯುತ್ತೇನೆಂದನು............ನಿನ್ನಿಂದ ಉಪಾಸ್ಯನಾದ ವಾಯುವು ಪ್ರಾಣಾದಿಗಳಿಗೆ ಮಾಡಲಸಾಧ್ಯವಾದ ಕಾರ್ಯವನ್ನು ಮಾಡುವುದರಿಂದ **ಪೃಥಗ್ವರ್ತ್ಮಾ** ಎನಿಸುತ್ತಾನೆ............ವಿಲಕ್ಷಣಗಳಾದ ಪೂಜಾ ಸಾಧನಗಳೂ, ವಿಲಕ್ಷಣಗಳಾದ ರಥಗಳ ಪಂಕ್ತಿಗಳೂ, ಆನೆ ಕುದುರೆ ಮೊದಲಾದವುಗಳೂ ನಿಮ್ಮನ್ನು ಹಿಂಬಾಲಿಸುತ್ತಿವೆ. ॥ ೧ ॥

**ಹೀ**—ಉಪಾಸಕನಿಗೆ ಫಲ ಹೇಳುತ್ತಾರೆ—

**ಉ.** ॥ **ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಪ್ರಾಣಸ್ತ್ವೇಷ ಆತ್ಮನ ಇತಿ ಹೋವಾಚ ಪ್ರಾಣಸ್ತ ಉದಕ್ರಮಿಷ್ಯದ್ಯನ್ಮಾಂ ನಾಗಮಿಷ್ಯ ಇತಿ ॥ ಇತಿ ಚತುರ್ದಶಃ ಖಂಡಃ ॥ ೬-೧೪ ॥ ॥ ೨ ॥**

---

* ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು

ಅ || ............ನಿನ್ನಿಂದ ಉಪಾಸ್ಯನಾದ ವಾಯುವು, ಪ್ರಾಣವಾಯುವು. ಪ್ರಾಣವೆಂಬ ಅವಯವವು............ನಿನ್ನ ಪ್ರಾಣಾಖ್ಯ ಅವಯವವು ಶರೀರದಿಂದ ಹೋಗುತ್ತಿತ್ತು. || ೭—೧೪ || || ೨ ||

ಹದಿನಾಲ್ಕನೇ ಖಂಡವು ಮುಗಿಯಿತು.

## ೧೫ನೇ ಖಂಡವು

**ಉ. || ಅಥ ಹೋವಾಚ ಜನಂ ಶಾರ್ಕರಾಕ್ಷ್ಯಂ ಶಾರ್ಕರಾಕ್ಷ್ಯ ಕಂ ತ್ವಮಾತ್ಮಾನಮುಪಾಸ್ಸ ಇತ್ಯಾಕಾಶಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಬಹುಲ ಆತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ ಬಹುಲೋಽಸಿ ಪ್ರಜಯಾ ಚ ಧನೇನ ಚ || ೧ ||**

ಅ || ಆ ಮೇಲೆ ಶರ್ಕರಾಕ್ಷನ ಮಗನಾದ ಜನನಿಗೆ ಹೇಳಿದನು............ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನೆನಿಸಿದವನು,............ಸರ್ವತ್ರ ವ್ಯಾಪಿಸಿರುವುದರಿಂದ ಬಹುಲನೆನಿಸಿದವನು...............ಬಹುಲನೆಂದು ಉಪಾಸನೆ ಮಾಡಿದುದರಿಂದಲೇ ಬಹುಪ್ರಜೆಗಳೂ ದ್ರವ್ಯವೂ ಉಳ್ಳವನಾಗಿರುತ್ತಿ. || ೧ ||

**ಉ. || ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಸಂದೇ(ದೋ)ಹಸ್ತ್ವೇಷ ಆತ್ಮನ ಇತಿ ಹೋವಾಚ ಸಂದೇ(ದೋ)ಹಸ್ತೇ ವ್ಯಶೀರ್ಯದ್ಯನ್ಮಾಂ ನಾಗಮಿಷ್ಯ ಇತಿ || ಇತಿ ಪಂಚದಶಃ ಖಂಡಃ || ೭-೧೫ || ೨ ||**

ಅ || ............ನಿನ್ನಿಂದ ಉಪಾಸ್ಯವಾದ ಬಹುಲವು ವೈಶ್ವಾನರನ ಮಧ್ಯದೇಹವು............ನಿನ್ನ ಮಧ್ಯದೇಹವು ಪುಡಿಪುಡಿಯಾಗುತ್ತಿತ್ತು. || ೭—೧೫ || || ೨ ||

ಹದಿನೈದನೇ ಖಂಡವು ಮುಗಿಯಿತು.

## ೧೬ನೇ ಖಂಡವು

**ಉ. || ಅಥ ಹೋವಾಚ ಬುಡಿಲಮಾಶ್ವತರಾಶ್ವಿಂ ವೈಯಾಘ್ರಪದ್ಯ ಕಂ ತ್ವಮಾತ್ಮಾನಮುಪಾಸ್ಸ ಇತ್ಯಾಪ ಏವ ಭಗವೋ ರಾಜನ್ನಿತಿ ಹೋವಾಚೈಷ ವೈ ರಯಿರಾತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ ರಯಿಮಾನ್ಪುಷ್ಟಿಮಾನಸಿ || ೧ ||**

ಅ || ಅಶ್ವತರಾಶ್ವನ ಮಗನಾದ ಬುಡಿಲನಿಗೆ............ವ್ಯಾಘ್ರಪಾತ್ ಎಂಬುವನ ಗೋತ್ರದಲ್ಲಿ ಹುಟ್ಟಿದವನೂ............ಸರ್ವತ್ರವ್ಯಾಪ್ತನಾದುದರಿಂದ ಅಪ್ ಎನಿಸಿಕೊಂಡ ಜಲದಲ್ಲಿರುವ ವೈಶ್ವಾನರ

ನನ್ನು ಪಾಸನೆಮಾಡುತ್ತೇನೆ......... ಸಂತೋಷವನ್ನುಂಟುಮಾಡುವುದರಿಂದ ರಯಿ ಎನಿಸಿಕೊಂಡವನು ............ದ್ರವ್ಯವುಳ್ಳವನೂ ಪುಷ್ಟಿಯಾದವನೂ ಆಗಿರುತ್ತಿ. ॥ ೧ ॥

ಉ. ॥ ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ವಸ್ತಿಸ್ತ್ವೇಷ ಆತ್ಮನ ಇತಿ ಹೋವಾಚ ವಸ್ತಿಸ್ತೇ ವ್ಯಭೇತ್ಸ್ಯದ್ಯನ್ಮಾಂ ನಾಗಮಿಷ್ಯ ಇತಿ ॥ ಇತಿ ಷೋಡಶಃ ಖಂಡಃ ॥ ೭ ೧೬ ॥ ॥ ೨ ॥

ಅ ॥ ............ವೈಶ್ವಾನರನ ವಸ್ತಿ (ಕಟಿಪ್ರದೇಶ) ರೂಪವಾದ ಅವಯವವು ಅಥವಾ ಹೊಕ್ಕಳಿನ ಕೆಳಗಿನ ಕಿರಿಹೊಟ್ಟೆ..........ನಿನ್ನ ವಸ್ತಿಯು ತುಂಡಾಗುತ್ತಿತ್ತು. ॥ ೭—೧೬ ॥ ॥ ೨ ॥

ಹದಿನಾರನೇ ಖಂಡವು ಮುಗಿಯಿತು.

---

## ೧೭ನೇ ಖಂಡವು

ಉ. ॥ ಅಥ ಹೋವಾಚೋದ್ದಾಲಕಮಾರುಣಿಂ ಗೌತಮ ಕಂ ತ್ವಮಾತ್ಮಾನಮುಪಾಸ್ಸ ಇತಿ ಪೃಥಿವೀಮೇವ ಭಗವೋ ರಾಜನ್ನಿತಿ ಹೋವಾಚೈಷ ವೈ ಪ್ರತಿಷ್ಠಾಽಽತ್ಮಾ ವೈಶ್ವಾನರೋ ಯಂ ತ್ವಮಾತ್ಮಾನಮುಪಾಸ್ಸೇ ತಸ್ಮಾತ್ತ್ವಂ ಪ್ರತಿಷ್ಠಿತೋಽಸಿ ಪ್ರಜಯಾ ಚ ಪಶುಭಿಶ್ಚ ॥ ೧ ॥

ಅ ॥ ಆ ಮೇಲೆ ಅರುಣನ ಮಗನಾದ ಉದ್ದಾಲಕರಿಗೆ ಹೇಳಿದನು. ಗೌತಮಗೋತ್ರದಲ್ಲಿ ಹುಟ್ಟಿದವನೇ,............ವಿಶಾಲಗಳಾದ ಬಹುಗುಣಗಳು ಇದ್ದುದರಿಂದ ಪೃಥಿವೀ ಎನಿಸಿಕೊಂಡ ಪೃಥಿವಿಯಲ್ಲಿರತಕ್ಕ............ ಸರ್ವರ ಸ್ಥಿತಿಗೆ ಕಾರಣನಾದುದರಿಂದ ಪ್ರತಿಷ್ಠಾ ಎನಿಸಿದವನು............ ಪ್ರಜೆಗಳಿಂದಲೂ ಪಶುಗಳಿಂದಲೂ ಸಮೃದ್ಧನಾಗಿರುತ್ತಿ............ ॥ ೧ ॥

ಉ. ॥ ಅತ್ಸ್ಯನ್ನಂ ಪಶ್ಯಸಿ ಪ್ರಿಯಮತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಮಾತ್ಮಾನಂ ವೈಶ್ವಾನರಮುಪಾಸ್ತೇ ಪಾದೌ ತ್ವೇತಾವಾತ್ಮನ ಇತಿ ಹೋವಾಚ ಪಾದೌ ತೇ ವ್ಯಮ್ಲಾಸ್ಯೇತಾಂ ಯನ್ಮಾಂ ನಾಗಮಿಷ್ಯ ಇತಿ ॥ ಇತಿ ಸಪ್ತದಶಃ ಖಂಡಃ ॥ ೭-೧೭ ॥ ॥ ೨ ॥

ಅ ॥ ........ವೈಶ್ವಾನರನ ಪಾದಗಳು....ನಿನ್ನ ಪಾದಗಳು ತುಂಡಾಗುತ್ತಿದ್ದುವು. ॥೨-೧೭॥ ॥ ೨ ॥

ಹದಿನೇಳನೇ ಖಂಡವು ಮುಗಿಯಿತು.

# ೧೮ನೇ ಖಂಡವು

ಪೀ—ಹೀಗೆ ಆರು ಜನರು ಪ್ರತ್ಯೇಕವಾಗಿ ಉಪಾಸನೆಮಾಡತಕ್ಕ **ಸುತೇಜಃ ಮೊದಲಾದ** ಹೆಸರುಳ್ಳ ಶಿರಸ್ಸು ಮೊದಲಾದ ಅಂಗವನ್ನೇ ಉಪದೇಶಿಸಿ ಸಂಪೂರ್ಣ ವೈಶ್ವಾನರನ ಸ್ವರೂಪವನ್ನೂ ವೈಶ್ವಾನರನ ಉಪಾಸನೆಫಲವನ್ನೂ ರಾಜನು ಹೇಳುತ್ತಾನೆಂದು ವೇದವು ಹೇಳುತ್ತದೆ—

**ಉ. ||** **ತಾನ್ಹೋವಾಚೈತೇ ವೈ ಖಲು ಯೂಯಂ ಪೃಥಗಿವೇಮಮಾತ್ಮಾನಂ ವೈಶ್ವಾನರಂ ವಿದ್ವಾꣳಸೋಽನ್ನಮತ್ಥ ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ** || ೧ ||

ಅ || (ರಾಜನು ಪ್ರತ್ಯೇಕವಾಗಿ ಉಪದೇಶಿಸಿ) ಆ **ಬ್ರಾಹ್ಮಣರಿಗೆ ಹೇಳಿದನು.** (ಎಲೋ ಬ್ರಾಹ್ಮಣರೇ) ಪ್ರಸಿದ್ಧರಾದ ನೀವು ಸರ್ವಸ್ವಾಮಿಯಾದ ಈ ವೈಶ್ವಾನರನ *ಒಂದೊಂದು ಅವಯುವವನ್ನು ತಿಳಿದವರಾಗಿ ಅನ್ನವನ್ನು ತಿನ್ನುವಿರಿ. (ಈಗ ಸಂಪೂರ್ಣ ಆತ್ಮವನ್ನು ಉಪಾಸನೆ ಮಾಡಿದವನಿಗೆ ಫಲ ಹೇಳುತ್ತಾನೆ—) ಯಾವ ಅಧಿಕಾರಿಯು (ದೇವತೆಯು) ಸರ್ವಪ್ರಾಣಿಗಳಲ್ಲಿರುವ ವೈಶ್ವಾನರನನ್ನು ಪ್ರಾದೇಶ (ಅಂಗುಷ್ಠದ ತುದಿಯಿಂದ ತೋರ್ಬೆಟ್ಟಿನ ತುದಿ ವರೆಗಿನ ಒಂದು ಜೋಟು ಉದ್ದ) ಪರಿಮಾಣ (ಅಳತೆಯುಳ್ಳ) ಹೃದಯಕಮಲದಲ್ಲಿ ವ್ಯಾಪಿಸಿಕೊಂಡಿದ್ದ ಪ್ರಯುಕ್ತವೂ, ಪ್ರಾದೇಶ ಪರಿಮಾಣದಲ್ಲಿ ಪ್ರಕಟನಾಗುವುದರಿಂದ ಪ್ರಾದೇಶಮಾತ್ರನೆನಿಸಿಕೊಂಡು, ಸರ್ವತ್ರ ವ್ಯಾಪ್ತನನ್ನಾಗಿ ಹಿಂದೆ ಹೇಳಿದ ಪ್ರಕಾರ ಶಿರಸ್ಸು ಮೊದಲಾದ ಸರ್ವಾಂಗಗಳಿಂದೊಡಗೂಡಿದವನೆಂದು ಉಪಾಸನೆ ಮಾಡುತ್ತಾನೋ, ಅವನು, ಸಮಸ್ತಲೋಕಗಳಲ್ಲಿರತಕ್ಕ ಸಮಸ್ತ ಸ್ಥಾವರಾದಿ ಜಡಗಳಲ್ಲಿರುವ ಚೇತನರಲ್ಲಿದ್ದು ಎಲ್ಲಾ ಅನ್ನವನ್ನು ಉಣ್ಣುತ್ತಾನೆ

ವಿ || (1) ಉಪಾಸಕನು ದೇವತೆಯಾದರೆ ಮುಖ್ಯ ಫಲವು ಇತರರಿಗೆ ಯಥಾಯೋಗ್ಯವಾಗಿ ಫಲವು. (2) ವೈಶ್ವಾನರನೆಂದರೆ—ವಿಷ್ಣುವನ್ನೇ ಇಲ್ಲಿ ಇಟ್ಟುಕೊಳ್ಳಬೇಕು. ಭೂತಾಗ್ನಿಯಾಗಲೀ, ಭೂತಾಗ್ನಿಗೆ ಅಭಿಮಾನಿಯಾದ ದೇವತೆಯಾಗಲೀ ಅಲ್ಲ. || ೧ ||

ಪೀ—ಶ್ರೀಹರಿಯ ಅಂಗಗಳಿಗೆ ಹೇಳಿದ ನಾಮಧೇಯವನ್ನು ಸರ್ವಥಾ ಮನಸ್ಸಿನಲ್ಲಿಟ್ಟುಕೊಳ್ಳಬೇಕೆಂಬ ಅಭಿಪ್ರಾಯದಿಂದ ವೈಶ್ವಾನರನ ಸಂಪೂರ್ಣ ಸ್ವರೂಪವನ್ನು ಹೇಳುತ್ತಾನೆ—

**ಉ. || ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾಽಽತ್ಮಾ ಸಂದೇ(ದೋ)ಹೋ ಬಹುಲೋ ವಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನ ಆಸ್ಯಮಾಹವನೀಯಃ || ಇತ್ಯಷ್ಟಾದಶಃ ಖಂಡಃ || ೭-೧೮ ||** || ೨ ||

* ಶ್ರೀಹರಿಯ ಅವಯುವಗಳಿಗೆ ಭೇದವಿಲ್ಲವೆಂದು ತೋರಿಸುವುದಕ್ಕಾಗಿ ಪೃಥಗಿವ ಎಂದು ಹೇಳಿರುವರು

ಅ || ವೈಶ್ವಾನರವೆನ್ನುವ ಶ್ರೀಹರಿಯ ಶಿರಸ್ಸೇ ಒಳ್ಳೇ ಕಾಂತಿಯಿದ್ದುದರಿಂದ ಸುತೇಜಾಃ ಎಂದು ಹೆಸರುಳ್ಳದ್ದು. ದ್ಯುಲೋಕಕ್ಕೆ ಆಶ್ರಯವು ಆತನ ಕಣ್ಣು ಎಲ್ಲಾ ವಸ್ತುಗಳನ್ನು ತಿಳಿದುಕೊಳ್ಳುವುದರಿಂದ ವಿಶ್ವರೂಪನೆನಿಸಿಕೊಂಡದ್ದು. ವಿಶ್ವರೂಪನೆಂಬ ಆದಿತ್ಯನಿಗೆ ಆಶ್ರಯವು. ಶ್ರೀಹರಿಯ ಪ್ರಾಣವು ಪ್ರಾಣಾದಿಗಳಿಗೆ ಮಾಡಲು ಅಸಾಧ್ಯವಾದ ಕಾರ್ಯವನ್ನು ಮಾಡುವುದರಿಂದ ಪೃಥಗ್ವರ್ತ್ಮಾ ಎಂದು ಹೆಸರುಳ್ಳದ್ದು. ವಾಯುವಿನ ಆಶ್ರಯವು. ಶ್ರೀಹರಿಯ ಮಧ್ಯದೇಹವು ಬಹುಲವೆಂದು ಹೆಸರುಳ್ಳದ್ದು. ಆಕಾಶಕ್ಕೆ ಅಭಿಮಾನಿಯಾದ ವಿನಾಯಕನಿಗೆ ಆಶ್ರಯವು. ಶ್ರೀಹರಿಯ ಹೊಕ್ಕಳಿನ ಕೆಳಭಾಗದಲ್ಲಿದ್ದ ವಸ್ತಿರೂಪ ಅವಯವವು ಸುಖವನ್ನು ಕೊಡುವುದರಿಂದ ರಯಿ ಎನಿಸಿಕೊಂಡದ್ದು. ಜಲಗಳಿಗೆ ಆಶ್ರಯವು. ಆತನ ಪಾದಗಳು ಸರ್ವತ್ರ ಪ್ರಸಿದ್ಧವಾದ ಪ್ರಯುಕ್ತ ಪೃಥಿವೀ ಎನಿಸಿಕೊಂಡಿವೆ. ಪೃಥಿವಿಗೆ ಆಶ್ರಯಗಳು. (ವೈಶ್ವಾನರನಲ್ಲಿ ಹೋಮ ಹೇಳುವುದಕ್ಕಾಗಿ ಅದಕ್ಕೆ ಬೇಕಾದುದನ್ನು ಹೇಳುತ್ತಾರೆ—) ಆ ವೈಶ್ವಾನರನ ವಕ್ಷಃಸ್ಥಳವು ಯಜ್ಞಕುಂಡಕ್ಕೆ ಅಭಿಮಾನಿಯು. ಯಜ್ಞಕುಂಡದಲ್ಲಿ ಆಶ್ರಿತವಾಗಿದೆ. ವೈಶ್ವಾನರನ ರೋಮಗಳು ಬರ್ಹಿಸ್ಸಿಗೆ ಅಭಿಮಾನಿಗಳು. ವೈಶ್ವಾನರನ ಹೃದಯವು ಗಾರ್ಹಪತ್ಯ ಅಗ್ನಿಗೆ ಅಭಿಮಾನಿಯು. ವೈಶ್ವಾನರನ ಮನಸ್ಸು ಅನ್ವಾಹಾರ್ಯಪಚನಾಭಿಮಾನಿಯು. ವೈಶ್ವಾನರನ ಮುಖವು ಆಹವನೀಯಾಗ್ನಿಗೆ ಅಭಿಮಾನಿಯು. ಅಂದರೆ, ವೇದ್ಯಾದಿಗಳಿಗೆ ಅಭಿಮಾನಿಗಳಾದ ದೇವತೆಗಳು ವೈಶ್ವಾನರನ ವಕ್ಷಸ್ಥಳ ಮೊದಲಾದವುಗಳನ್ನು ಆಶ್ರಯಿಸಿರುತ್ತಾರೆ. || ೭ ೧೮ || || ೨ ||

**ಹದಿನೆಂಟನೇ ಖಂಡವು ಮುಗಿಯಿತು.**

## ೧೯ನೇ ಖಂಡವು

**ಪೀ—**ಹೋಮಿಸುವ ಪ್ರಕಾರವನ್ನೂ ಹೋಮವನ್ನೂ ಹೇಳುತ್ತಾರೆ—

**ಉ. || ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ ಸ ಯಾಂ ಪ್ರಥಮಾಮಾಹುತಿಂ ಜುಹುಯಾತ್ತಾಂ ಜುಹುಯಾತ್ಪ್ರಾಣಾಯ ಸ್ವಾಹೇತಿ ಪ್ರಾಣಸ್ತೃಪ್ಯತಿ || ೧ ||**

ಅ || ಭೋಜನಕಾಲದಲ್ಲಿ ಭೋಜ್ಯವಾದ ಯಾವ ಅನ್ನವನ್ನು ಪ್ರಥಮತಃ ಬಾಯಿಯೊಳಗೆ ಹಾಕುತ್ತಾನೋ, ಅದು ಹೋಮಸಾಧನ ದ್ರವ್ಯವು. ಉಣ್ಣುವವನು ಯಾವ ಆಹುತಿಯನ್ನು ಪ್ರಥಮತಃ ಹೋಮಿಸುತ್ತಾನೋ, ಅದನ್ನು **ಪ್ರಾಣಾಯ ಸ್ವಾಹಾ** ಎಂಬ ಮಂತ್ರದಿಂದ ಹೋಮಿಸಬೇಕು. (ಅಂದರೆ—**ಪ್ರಾಣಾಯ ಸ್ವಾಹಾ** ಎಂದು ಹೇಳಿ ಆಹುತಿ ಕೊಡಬೇಕು.) (ಆಹುತಿಯಿಂದ ಸಂತೋಷಗೊಳ್ಳುವ ದೇವತೆಗಳನ್ನು ಹೇಳುತ್ತಾರೆ—) ಪ್ರಾಣವಾಯುವಿಗೆ ಅಭಿಮಾನಿಯಾಗಿರುವ ಆದಿತ್ಯನ ರೂಪವು ಹೃದಯಕಮಲದಲ್ಲಿರುವ ವೈಶ್ವಾನರನ ಪೂರ್ವದ್ವಾರವನ್ನು ರಕ್ಷಿಸುವುದಾಗಿ ಸಂತೋಷಗೊಳ್ಳುತ್ತದೆ. || ೧ ||

**ಉ. || ಪ್ರಾಣೇ ತೃಪ್ಯತಿ ಚಕ್ಷುಸ್ತೃಪ್ಯತಿ ಚಕ್ಷುಷಿ ತೃಪ್ಯತ್ಯಾದಿತ್ಯಸ್ತೃಪ್ಯತ್ಯಾದಿತ್ಯೇ ತೃಪ್ಯತಿ ದ್ಯೌಸ್ತೃಪ್ಯತಿ ದಿವಿ ತೃಪ್ಯಂತ್ಯಾಂ ಯತ್ಕಿಂ ಚ ದ್ಯೌಶ್ಚಾದಿತ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ || ಇತ್ಯೇಕೋನವಿಂಶಃ ಖಂಡಃ||೭-೧೯||**

ಅ || ಪ್ರಾಣಾಭಿಮಾನಿರೂಪವು ಸಂತೋಷಗೊಂಡಾಗ ಚಕ್ಷುಸ್ಸಿಗೆ ಅಭಿಮಾನಿಯಾದ ಆದಿತ್ಯನ ರೂಪವು ಸಂತೋಷಗೊಳ್ಳುತ್ತದೆ. ಚಕ್ಷುಸ್ಸಿಗೆ ಅಭಿಮಾನಿಯಾದ ರೂಪವು ಸಂತೋಷಗೊಂಡಾಗ ಸೂರ್ಯಮಂಡಲಕ್ಕೆ ಅಭಿಮಾನಿಯಾದ ಸೂರ್ಯರೂಪವೂ ಸಂತೋಷಗೊಳ್ಳುತ್ತದೆ. ಮೂರು ರೂಪಗಳುಳ್ಳ ಆದಿತ್ಯನು ಸಂತೋಷಗೊಂಡಾಗ ದ್ಯುಲೋಕಕ್ಕೆ ಅಭಿಮಾನಿನಿಯಾದ ಭಾರತೀದೇವಿಯು ತೃಪ್ತಳಾಗುತ್ತಾಳೆ ಭಾರತಿಯು ಸಂತೋಷಗೊಂಡಾಗ ಲಕ್ಷ್ಮೀದೇವಿಯೂ, ಪ್ರಾಣ ಚಕ್ಷುಮಂಡಲಗಳಿಗೆ ಅಭಿಮಾನಿಯಾದ ಆದಿತ್ಯನೂ ಜ್ಞಾನಾನಂದಸ್ವರೂಪನಾದ ಯಾವ ಪರಬ್ರಹ್ಮನನ್ನು ಆಶ್ರಯಿಸುತ್ತಿರುತ್ತಾರೋ, ಅಂತಹ ಪರಬ್ರಹ್ಮನು ಸಂತೋಷಗೊಳ್ಳುತ್ತಾನೆ. ಪರಬ್ರಹ್ಮನ ತೃಪ್ತಿಯನ್ನನುಸರಿಸಿ ಯಜಮಾನನು ಮಕ್ಕಳಿಂದಲೂ, ಪಶುಗಳಿಂದಲೂ ಅನ್ನಾದಿಗಳಿಂದಲೂ ತೇಜಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಸಂತೋಷಗೊಳ್ಳುತ್ತಾನೆ. || ೭—೧೯ || || ೨ ||

ಹತ್ತೊಂಭತ್ತನೇ ಖಂಡವು ಮುಗಿಯಿತು.

## ೨೦ನೇ ಖಂಡವು

**ಉ. || ಅಥ ಯಾಂ ದ್ವಿತೀಯಾಂ ಜುಹುಯಾತ್ತಾಂ ಜುಹುಯಾದ್ವ್ಯಾನಾಯ ಸ್ವಾಹೇತಿ ವ್ಯಾನಸ್ತೃಪ್ಯತಿ || ೧ ||**

ಅ || ಓಂ ವ್ಯಾನಾಯ ಸ್ವಾಹಾ ಎಂದು ಹೇಳಿ ಎರಡನೇ ಆಹುತಿಯನ್ನು ಕೊಡಬೇಕು ಇದರಿಂದ ದಕ್ಷಿಣದ್ವಾರಕ್ಕೆ ಅಧಿಪತಿಯಾದ ವ್ಯಾನವಾಯು, ಶ್ರೋತ್ರ, ಚಂದ್ರಬಿಂಬಗಳಿಗೆ ಅಭಿಮಾನಿಯಾಗಿ ಮೂರು ರೂಪಗಳುಳ್ಳ, ಚಂದ್ರನು **ವ್ಯಾನಾಯ ಸ್ವಾಹಾ** ಎಂಬ ಮಂತ್ರ ಹೇಳಿ ಕೊಡತಕ್ಕ ಎರಡನೇ ಆಹುತಿಯಿಂದ ತೃಪ್ತನಾಗುತ್ತಾನೆ. || ೧ ||

**ಉ. || ವ್ಯಾನೇ ತೃಪ್ಯತಿ ಶ್ರೋತ್ರಂ ತೃಪ್ಯತಿ ಶ್ರೋತ್ರೇ ತೃಪ್ಯತಿ ಚಂದ್ರಮಾಸ್ತೃಪ್ಯತಿ ಚಂದ್ರಮಸಿ ತೃಪ್ಯತಿ ದಿಶಸ್ತೃಪ್ಯಂತಿ ದಿಕ್ಷು ತೃಪ್ಯಂತೀಷು ಯತ್ಕಿಂ ಚ ದಿಶಶ್ಚಂದ್ರಮಾಶ್ಚಾಧಿತಿಷ್ಠಂತಿ ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯಂತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ || ಇತಿ ವಿಂಶಃ ಖಂಡಃ || ೭-೨೦ || || ೨ ||**

ಅ || ವ್ಯಾನವಾಯುವು ತೃಪ್ತನಾಗುತ್ತಿರಲು ಶ್ರೋತ್ರಾಭಿಮಾನಿಯು ತೃಪ್ತನಾಗುತ್ತಾನೆ. ಅವನು ತೃಪ್ತನಾಗುತ್ತಿರಲು ಚಂದ್ರನು ತೃಪ್ತನಾಗುತ್ತಾನೆ. ಚಂದ್ರನು ತೃಪ್ತನಾಗಲು ದಿಕ್ಕುಗಳಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯು ತೃಪ್ತಳಾಗುತ್ತಾಳೆ. ಅವಳು ತೃಪ್ತಳಾದಾಗ, ಅವಳಿಗೂ ಮೂರು ರೂಪಗಳುಳ್ಳ ಚಂದ್ರನಿಗೂ ಆಶ್ರಯನಾದ ಜ್ಞಾನರೂಪನೂ ಸುಖಸ್ವರೂಪನೂ ಆದ ಪರಬ್ರಹ್ಮನು ತೃಪ್ತನಾಗುತ್ತಾನೆ. ………..|| ೭—೨೦ || || ೨ ||

ಇಪ್ಪತ್ತನೇ ಖಂಡವು ಮುಗಿಯಿತು.

## ೨೧ನೇ ಖಂಡವು

ಪೀ—ಅಪಾನವಾಯು, ವಾಯು, ಭೂತಾಗ್ನಿಗಳಿಗೆ ಅಭಿಮಾನಿಯಾದ ಪಶ್ಚಿಮದ್ವಾರಕ್ಕೆ ಅಧಿಪತಿಯಾದ ಮೂರು ರೂಪಗಳುಳ್ಳ ಅಗ್ನಿ ದೇವತೆಯು **ಅಪಾನಾಯ ಸ್ವಾಹಾ** ಎಂಬ ಮಂತ್ರ ಹೇಳಿ ಕೊಡತಕ್ಕ ಆಹುತಿಯಿಂದ ತೃಪ್ತನಾಗುತ್ತಾನೆನ್ನುತ್ತಾರೆ—

**ಉ. || ಅಥ ಯಾಂ ತೃತೀಯಾಂ ಜುಹುಯಾತ್ತಾಂ ಜುಹುಯಾದಪಾನಾಯ ಸ್ವಾಹೇತ್ಯಪಾನಸ್ತೃಪ್ಯತಿ || ೧ ||**

**ಅ ||** ಅಪಾನಾಯ ಸ್ವಾಹಾ ಎಂದು ಹೇಳಿ ಮೂರನೇ ಆಹುತಿಯನ್ನು ಹೋಮಿಸಬೇಕು. ಅದರಿಂದ ಅಪಾನನು ತೃಪ್ತನಾಗುತ್ತಾನೆ. || ೧ ||

**ಉ. || ಅಪಾನೇ ತೃಪ್ಯತಿ ವಾಕ್ ತೃಪ್ಯತಿ ವಾಚಿ ತೃಪ್ಯಂತ್ಯಾಮಗ್ನಿಸ್ತೃಪ್ಯತ್ಯಗ್ನೌ ತೃಪ್ಯತಿ ಪೃಥಿವೀ ತೃಪ್ಯತಿ ಪೃಥಿವ್ಯಾಂ ತೃಪ್ಯಂತ್ಯಾಂ ಯತ್ಕಿಂ ಚ ಪೃಥಿವೀ ಚಾಗ್ನಿಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ|| ಇತ್ಯೇಕವಿಂಶಃ ಖಂಡಃ|| || ೭–೨೧ || || ೨ ||**

**ಅ ||** ಅಪಾನನು ತೃಪ್ತನಾಗಲು ವಾಗಭಿಮಾನಿಯು ತೃಪ್ತನಾಗುತ್ತಾನೆ ಅವನು ತೃಪ್ತನಾಗುತ್ತಿರಲು ಅಗ್ನಿಯು ತೃಪ್ತನಾಗುತ್ತಾನೆ. ಅಗ್ನಿಯು ತೃಪ್ತನಾಗಲು ಪೃಥಿವೀ ಎನಿಸಿದ ಭೂದೇವಿಯು ತೃಪ್ತಳಾಗುತ್ತಾಳೆ............* || ೭—೨೧ || || ೨ ||

**ಇಪ್ಪತ್ತೊಂದನೇ ಖಂಡವು ಮುಗಿಯಿತು.**

## ೨೨ನೇ ಖಂಡವು

ಪೀ—ಸಮಾನವಾಯು, ಮನಸ್ಸು, ಪರ್ಜನ್ಯಗಳಿಗೆ ಅಭಿಮಾನಿಯಾಗಿ ಮೂರು ರೂಪಗಳುಳ್ಳ ಉತ್ತರದ್ವಾರಕ್ಕೆ ಅಧಿಪತಿಯಾದ ಇಂದ್ರನು **ಸಮಾನಾಯ ಸ್ವಾಹಾ** ಎಂಬ ಮಂತ್ರ ಹೇಳಿ ಕೊಡತಕ್ಕ ಆಹುತಿಯಿಂದ ತೃಪ್ತನಾಗುತ್ತಾನೆನ್ನುತ್ತಾರೆ—

**ಉ. || ಅಥ ಯಾಂ ಚತುರ್ಥೀಂ ಜುಹುಯಾತ್ತಾಂ ಜುಹುಯಾತ್ಸಮಾನಾಯ ಸ್ವಾಹೇತಿ ಸಮಾನಸ್ತೃಪ್ಯತಿ || ೧ ||**

**ಅ || ಸಮಾನಾಯ ಸ್ವಾಹಾ** ಎಂಬ ಮಂತ್ರದಿಂದ ನಾಲ್ಕನೇ ಆಹುತಿಯನ್ನು ತೆಗೆದುಕೊಳ್ಳಬೇಕು. ಅದರಿಂದ ಸಮಾನನು ತೃಪ್ತನಾಗುತ್ತಾನೆ. || ೧ ||

* ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು.

**ಉ. ॥ ಸಮಾನೇ ತೃಪ್ಯತಿ ಮನಸ್ತೃಪ್ಯತಿ ಮನಸಿ ತೃಪ್ಯತಿ ಪರ್ಜನ್ಯಸ್ತೃಪ್ಯತಿ ಪರ್ಜನ್ಯೇ ತೃಪ್ಯತಿ ವಿದ್ಯುತ್ತೃಪ್ಯತಿ ವಿದ್ಯುತಿ ತೃಪ್ಯಂತ್ಯಾಂ ಯತ್ಕಿಂ ಚ ವಿದ್ಯುಚ್ಚ ಪರ್ಜನ್ಯಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ಇತಿ ದ್ವಾವಿಂಶಃ ಖಂಡಃ॥ ॥ ೭-೨೨ ॥　　॥ ೨ ॥**

ಅ ॥ ಸಮಾನನು ತೃಪ್ತನಾಗಲು ಮನಸ್ಸು ತೃಪ್ತವಾಗುತ್ತದೆ. ಮನೋಽಭಿಮಾನಿಯು ತೃಪ್ತನಾಗುತ್ತಿರಲು ಪರ್ಜನ್ಯನು (ಮೇಘಮಂಡಲಾಭಿಮಾನಿಯಾದ ಇಂದ್ರನು) ತೃಪ್ತನಾಗುತ್ತಾನೆ. ಆ ಪರ್ಜನ್ಯನು ತೃಪ್ತನಾಗುತ್ತಿರಲು ವಿದ್ಯುದಭಿಮಾನಿನಿಯಾದ ವಾಯುಪತ್ನಿಯು ತೃಪ್ತಳಾಗುತ್ತಾಳೆ....॥೭-೨೨॥ ॥ ೨ ॥

ಇಪ್ಪತ್ತೆರಡನೇ ಖಂಡವು ಮುಗಿಯಿತು.

## ೨೩ನೇ ಖಂಡವು

ಪೀ—ಉದಾನವಾಯು, ವಾಯು, ಆಕಾಶಗಳಿಗೆ ಅಭಿಮಾನಿಯಾದ ಮೂರು ರೂಪಗಳುಳ್ಳ ಊರ್ಧ್ವ (ಮೇಲಿನ) ದ್ವಾರಕ್ಕೆ ಅಧಿಪತಿಯಾದ ಮುಖ್ಯಪ್ರಾಣನು **ಉದಾನಾಯ ಸ್ವಾಹಾ** ಎಂಬ ಮಂತ್ರದಿಂದ ಕೊಡತಕ್ಕ ಆಹುತಿಯಿಂದ ತೃಪ್ತನಾಗುತ್ತಾನೆನ್ನುತ್ತಾರೆ—

**ಉ. ॥ ಅಥ ಯಾಂ ಪಂಚಮೀಂ ಜುಹುಯಾತ್ತಾಂ ಜುಹುಯಾದುದಾನಾಯ ಸ್ವಾಹೇತ್ಯುದಾನಸ್ತೃಪ್ಯತಿ　　॥ ೧ ॥**

ಪೀ—ಉದಾನಾಯ ಸ್ವಾಹಾ ಎಂಬ ಮಂತ್ರದಿಂದ ಐದನೇ ಆಹುತಿಯನ್ನು ತೆಗೆದುಕೊಳ್ಳಬೇಕು. ಅದರಿಂದ ಉದಾನನು ತೃಪ್ತನಾಗುತ್ತಾನೆ　　॥ ೧ ॥

**ಉ. ॥ ಉದಾನೇ ತೃಪ್ಯತಿ ತ್ವಕ್ ತೃಪ್ಯತಿ ತ್ವಚಿ ತೃಪ್ಯಂತ್ಯಾಂ ವಾಯುಸ್ತೃಪ್ಯತಿ ವಾಯೌ ತೃಪ್ಯತ್ಯಾಕಾಶಸ್ತೃಪ್ಯತ್ಯಾಕಾಶೇ ತೃಪ್ಯತಿ ಯತ್ಕಿಂ ಚ ವಾಯುಶ್ಚಾಕಾಶಶ್ಚಾಧಿತಿಷ್ಠತಸ್ತತ್ತೃಪ್ಯತಿ ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿರನ್ನಾದ್ಯೇನ ತೇಜಸಾ ಬ್ರಹ್ಮವರ್ಚಸೇನೇತಿ ॥ ಇತಿ ತ್ರಯೋವಿಂಶಃ ಖಂಡಃ ॥ ೭-೨೩ ॥　　॥ ೨ ॥**

ಅ ॥ ಉದಾನನು ತೃಪ್ತನಾಗುತ್ತಿರಲು ತ್ವಗಭಿಮಾನಿಯು ತೃಪ್ತನಾಗುತ್ತಾನೆ. ಅವನು ತೃಪ್ತನಾಗಲು ಪ್ರಸಿದ್ಧ ವಾಯ್ವಭಿಮಾನಿಯು ತೃಪ್ತನಾಗುತ್ತಾನೆ. ಅವನು ತೃಪ್ತನಾಗುತ್ತಿರಲು ಆಕಾಶಾಭಿಮಾನಿಯು ತೃಪ್ತನಾಗುತ್ತಾನೆ. ಅವನು ತೃಪ್ತನಾಗುತ್ತಿರಲು ವಾಯ್ವಾಕಾಶಗಳಿಗೆ ಆಶ್ರಯನಾದ ಪರಬ್ರಹ್ಮನು ತೃಪ್ತನಾಗುತ್ತಾನೆ............ ॥ ೭—೨೩ ॥　　॥ ೨ ॥

ಇಪ್ಪತ್ತಮೂರನೇ ಖಂಡವು ಮುಗಿಯಿತು.

## ೨೪ನೇ ಖಂಡವು

ಪೀ—ವೈಶ್ವಾನರನ ಸ್ವರೂಪವನ್ನೂ ಹೋಮವನ್ನೂ ಹೇಳಿದರು. ಈಗ ವೈಶ್ವಾನರನ ಮಹಿಮೆ ತಿಳಿದುಕೊಂಡೇ ಹೋಮವನ್ನು ಅವಶ್ಯವಾಗಿ ಮಾಡಬೇಕು. ತಿಳಿಯದೆ ಮಾಡಿದರೆ ಅನರ್ಥವು ಸಂಭವಿಸುವುದು. ತಿಳಿದು ಹೋಮಿಸಿದರೆ ಫಲವಿಶೇಷವದೆ ಎನ್ನುತ್ತಾರೆ—

**ಉ. ॥ ಸ ಯ ಇದಮವಿದ್ವಾನಗ್ನಿಹೋತ್ರಂ ಜುಹೋತಿ ಯಥಾಽಂಗಾರಾನಪೋಹ್ಯ ಭಸ್ಮನಿ ಜುಹುಯಾತ್ತಾದೃಕ್ತತ್ ಸ್ಯಾತ್ ॥ ೧ ॥**

ಅ ॥ ಉಣ್ಣುವವನು ವೈಶ್ವಾನರನ ಸ್ವರೂಪಾದಿಗಳನ್ನು ತಿಳಿಯದೆ ಪ್ರಾಣಾಗ್ನಿ ಹೋತ್ರವನ್ನು ಮಾಡಿದರೆ ಆತನು ಮಾಡುವ ಪ್ರಾಣಾಗ್ನಿಹೋತ್ರವು ಜ್ವಲಿಸುವ ಅಗ್ನಿ ಬಿಟ್ಟು ಭಸ್ಮದಲ್ಲಿ ಹೋಮಿಸಿದರೆ ಹೇಗೆ ನಿಷ್ಫಲವೋ, ಹಾಗೆಯೇ ಅಜ್ಞಾನಿಯು ಮಾಡಿದ ಪ್ರಾಣಾಗ್ನಿಹೋತ್ರವು ನಿಷ್ಫಲವು. ॥ ೧ ॥

ಪೀ—ಜ್ಞಾನಪೂರ್ವಕವಾಗಿ ಮಾಡಿದರೆ ಫಲ ಹೇಳುತ್ತಾರೆ—

**ಉ. ॥ ಅಥ ಯ ಏತದೇವಂವಿದ್ವಾನಗ್ನಿಹೋತ್ರಂ ಜುಹೋತಿ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸು ಹುತಂ ಭವತಿ ॥ ೨ ॥**

ಅ ॥ ಉಣ್ಣುವವನು ವೈಶ್ವಾನರನ ಸ್ವರೂಪವನ್ನು ತಿಳಿದು ಪ್ರಾಣಾಗ್ನಿಹೋತ್ರ ಮಾಡಿದರೆ ಸರ್ವಲೋಕಗಳಲ್ಲಿರತಕ್ಕ ಸಮಸ್ತಭೂತಗಳಲ್ಲಿ ಅಂತರ್ಗತಗಳಾದ ಎಲ್ಲಾ ಆತ್ಮರಲ್ಲಿ ಹೋಮಿಸಲ್ಪಟ್ಟದ್ದು ಅವನಿಗೇನೇ ಆಗುತ್ತದೆ. ಅಥವಾ ಆತನಿಂದ ಎಲ್ಲಾ ಆತ್ಮರಲ್ಲಿ ಹೋಮಿಸಲ್ಪಡುತ್ತದೆ. ॥ ೨ ॥

ಪೀ—ಫಲವಿಶೇಷ ಹೇಳುತ್ತಾರೆ—

**ಉ. ॥ ತದ್ಯಥೈಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವꣳ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ ಯ ಏತದೇವಂವಿದ್ವಾನಗ್ನಿಹೋತ್ರಂ ಜುಹೋತಿ ॥ ೩ ॥**

ಅ ॥ ಹೇಗೆ ಹತ್ತಿಯ ರಾಶಿಯನ್ನು ಅಗ್ನಿಗೆ ಹಾಕಿದರೆ ಅದು ಭಸ್ಮೀಭೂತವಾಗುತ್ತದೋ ಹೀಗೆಯೇ ವೈಶ್ವಾನರನನ್ನು ತಿಳಿದು ಪ್ರಾಣಾಗ್ನಿಹೋತ್ರಮಾಡುವವನ ಸಮಸ್ತಪಾಪಗಳೂ ನಾಶಹೊಂದುತ್ತವೆ. (ಅಂದರೆ — ಅಪರೋಕ್ಷಜ್ಞಾನವಾದರೆ ಅನಾರಬ್ಧಗಳಾದ ಸಮಸ್ತಪಾಪಗಳೂ, ನಾಶಹೊಂದುತ್ತವೆ. ಪರೋಕ್ಷಜ್ಞಾನವಾದರೆ, ಯಥಾಯೋಗ್ಯವಾಗಿ ನಾಶಹೊಂದುತ್ತದೆ.) ॥ ೩ ॥

**ಉ. ॥ ತಸ್ಮಾದು ಹೈವಂವಿದ್ಯದ್ಯಪಿ ಚಂಡಾಲಾಯೋಚ್ಛಿಷ್ಟಂ ಪ್ರಯಚ್ಛೇದಾತ್ಮನಿ ಹೈವಾಸ್ಯ ತದ್ವೈಶ್ವಾನರೇ ಹುತꣳ ಸ್ಯಾದಿತಿ ॥ ೪ ॥**

ಅ ॥ ಹಿಂದೆ ಹೇಳಿದ ಪ್ರಕಾರ ವೈಶ್ವಾನರನ ಜ್ಞಾನವು ಸಮಸ್ತಪಾಪಕ್ಷಯಾದಿಗಳಿಗೆ ಕಾರಣ

ವಾಗಿರುವುದರಿಂದಲೇ ಹೀಗೆ ತಿಳಿದವನು ಸ್ಮರಣಮಾಡಿಕೊಳ್ಳಲಿಕ್ಕೂ ಅನರ್ಹನಾದ ಚಂಡಾಲನಿಗೆ ತನ್ನ ಉಚ್ಛಿಷ್ಟವನ್ನು ಕೊಟ್ಟರೂ ಅದರಿಂದ ಅವನಿಗೆ ಪಾಪವು ಸಂಭವಿಸುವುದಿಲ್ಲ. ಪರಂತು ಅವನು ಕೊಟ್ಟ ಉಚ್ಛಿಷ್ಟವೂ ಚಂಡಾಲನಲ್ಲಿ ಅಂತರ್ಯಾಮಿಯಾದ ವೈಶ್ವಾನರನಲ್ಲಿ ಹೋಮಿಸಿದಂತೆಯೇ ಆಗುವುದು. ॥ ೪ ॥

ಪೀ—ವೈಶ್ವಾನರನ ಜ್ಞಾನಪೂರ್ವಕವಾಗಿ ಮಾಡಿದ ಪ್ರಾಣಾಗ್ನಿಹೋತ್ರವು ಸರ್ವಲೋಕಗಳಿಗೆ ನಿಯಾಮಕನಾದ ಸಮಸ್ತಪ್ರಾಣಿಗಳ ಅಂತರ್ಯಾಮಿಗೆ ತೃಪ್ತಿಪಡಿಸುವುದು, ಸಮಸ್ತ ಇಷ್ಟವನ್ನು ಕೊಡುವುದು ಎಂಬೀ ಅರ್ಥವನ್ನು ಮಂತ್ರದಿಂದ ದೃಢೀಕರಿಸುತ್ತಾರೆ—

**ಉ. ॥ ತದೇಷ ಶ್ಲೋಕಃ ॥ ಯಥೇಹ ಕ್ಷುಧಿತಾ ಬಾಲಾ ಮಾತರಂ ಪರ್ಯುಪಾಸತೇ । ಏವಂ ಸರ್ವಾಣಿ ಭೂತಾನ್ಯಗ್ನಿಹೋತ್ರಮುಪಾಸತ ಇತ್ಯಗ್ನಿಹೋತ್ರಮುಪಾಸತ ಇತಿ ॥ ಇತಿ ಚತ್ವಾರಿಂಶಃ ಖಂಡಃ ॥ ೭-೨೪ ॥ ೫ ॥**

**ಇತಿ ಶ್ರೀಮಚ್ಛಾಂದೋಗ್ಯೋಪನಿಷದಿ ಸಪ್ತಮೋಽಧ್ಯಾಯಃ ॥ ೭ ॥**

ಅ ॥ ಆ ಪ್ರಮೇಯದಲ್ಲಿ ಮುಂದಿನ ಮಂತ್ರವು ಸಮ್ಮತಿಯಾಗುತ್ತದೆ. ಹೇಗೆ ಹಸಿವೆ ಇದ್ದ ಬಾಲಕರು ತಾಯಿಯನ್ನು ಆಶ್ರಯಿಸುತ್ತಾರೋ, ಹೀಗೆಯೇ ಈ ಲೋಕದಲ್ಲಿ ಯೋಗ್ಯರಾದ ಎಲ್ಲಾ ಜನರೂ ತಂತಮ್ಮ ಇಷ್ಟವನ್ನು ಹೊಂದುವುದಕ್ಕಾಗಿ ಪ್ರಾಣಾಗ್ನಿಹೋತ್ರವನ್ನು ಮಾಡುತ್ತಾರೆ. ॥೭-೪॥ ॥ ೫ ॥

ಪೀ—೧೧ನೇ ಖಂಡದಲ್ಲಿದ್ದ ಮಹಾಶಾಲ ಮಹಾಶ್ರೋತ್ರಿಯ ಶಬ್ದಗಳ ಅರ್ಥ ಹೇಳುತ್ತಾರೆ—

**ಭಾ. ॥ (೧) ಪ್ರತ್ಯಬ್ದಯಜ್ಞಕೃತ್ಸಮ್ಯಙ್ಮಹಾಶಾಲಃ ಪ್ರಕೀರ್ತಿತಃ । ವೇದವೇದಾರ್ಥವಿತ್ಸಮ್ಯಙ್ಮಹಾಶ್ರೋತ್ರಿಯ ಉಚ್ಯತೇ ॥ (೨) ಕ್ರೀಡಾತ್ಮಕತ್ವಾದ್ದ್ಯ್ವಾಖ್ಯಂ ಚ (ಖ್ಯೈವ) ಸುತೇಜಾಶ್ಚಾತಿತೇಜಸಾ । ಸ್ವರ್ಗಾಧಾರಂ ಶಿರೋ ವಿಷ್ಣೋಃ ॥ (೩) ಸರ್ವರೂಪಾತಿದರ್ಶನಾತ್ । ಚಕ್ಷುಸ್ತು ವಿಶ್ವರೂಪಾಖ್ಯಮಾದಾನಾದಾಯುಷಾಮಪಿ । ಆದಿತ್ಯಾಖ್ಯಂ ಚ ಸೂರ್ಯಸ್ಯಾಸ್ಯಾಶ್ರಯಂ ಸರ್ವದಾ ಸ್ಮೃತಂ ॥ (೪) ವಾಯ್ವಾದಿಪ್ರಾಣಶಕ್ಯಂ ನ ಯತ್ತತ್ಕರ್ತಾ ಹರೇರ್ಯತಃ । ಪ್ರಾಣಸ್ತೇನ ಪೃಥಗ್ವರ್ತ್ಮಾ ವಾಯುರ್ಜ್ಞಾನಾಯುರೂಪತಃ । ವಾಯೋರಸ್ಯಾಶ್ರಯೋ ನಿತ್ಯಂ ॥ (೫) ಬಹುತ್ವಾದ್ಬಹುಲಃ ಸ್ಮೃತಃ । ಆಕಾಶನಾಮಾ ಚಾದೀಪ್ತೇರ್ಮಧ್ಯದೇಹೋ ರಮಾಪತೇಃ ॥ ೧ ॥**

ಅ ॥ (೧) ಶಾಸ್ತ್ರದಲ್ಲಿ ಹೇಳಿದಪ್ರಕಾರ ಪ್ರತಿ ಸಂವತ್ಸರದಲ್ಲಿ ಯಜ್ಞಮಾಡಿದವನು ಮಹಾಶಾಲನೆನಿಸುವನು ಚೆನ್ನಾಗಿ ವೇದವೇದಾರ್ಥಗಳನ್ನು ತಿಳಿದವನು ಮಹಾಶ್ರೋತ್ರಿಯನೆನಿಸುತ್ತಾನೆ. (೨) (೧೧ನೇ ಖಂಡದ ೨ನೇ ಮಂತ್ರ ಮೊದಲಾದವುಗಳಲ್ಲಿರುವ ವೈಶ್ವಾನರ ಶಬ್ದದಿಂದ ಅಗ್ನಿಯೇ ಹೇಳಲ್ಪಡುವುದು, ಎಂಬಭ್ರಮೆಯನ್ನು ಹೋಗಲಾಡಿಸುವುದಕ್ಕಾಗಿ ಈ ವಿದ್ಯೆಯು ವಿಷ್ಣುಪರವೇ ಎಂಬಲ್ಲಿ ಪ್ರಮಾಣ ಹೇಳುತ್ತಾರೆ—) (೧೨ನೇ ಖಂಡದ ೧ನೇ ಮಂತ್ರದ ದಿವಂ ಸುತೇಜಾ ಎಂಬ ಶಬ್ದಗಳ ಅರ್ಥ ಹೇಳುತ್ತಾರೆ—) ಕ್ರೀಡಾಸ್ವರೂಪನಾದುದರಿಂದ ದ್ಯೌಃ ಎನಿಸಿದವನು. ಬಹು ತೇಜಸ್ಸು ಇದ್ದುದರಿಂದ ಸುತೇಜಾಃ ಎನಿಸುತ್ತಾನೆ. ಅಥವಾ ವಿಷ್ಣುವಿನ ಶಿರಸ್ಸು ಸ್ವರ್ಗಕ್ಕೆ ಆಧಾರವಾದುದರಿಂದ ದ್ಯೌಃ ಎನಿಸುವುದು. (೩) (೧೩ನೇ

ಖಂಡದ ತಾತ್ಪರ್ಯ ಹೇಳುತ್ತಾರೆ—) ವಿಷ್ಣುವಿನ ಚಕ್ಷುಸ್ಸು ಸಮಸ್ತವಸ್ತುಗಳನ್ನು ನೋಡುವುದರಿಂದ ವಿಶ್ವರೂಪವೆಂದೂ, ಜನರ ಆಯುಷ್ಯವನ್ನು ತೆಗೆದುಕೊಳ್ಳುವುದರಿಂದ ಮತ್ತು ಸೂರ್ಯನಿಗೆ ಸದಾ ಆಶ್ರಯವಾಗಿರುವುದರಿಂದ ಆದಿತ್ಯವೆನಿಸುವುದು. (೪) (೧೪ನೇ ಖಂಡದ ತಾತ್ಪರ್ಯ ಹೇಳುತ್ತಾರೆ—) ಶ್ರೀಹರಿಯ ಪ್ರಾಣವು ವಾಯು ಮೊದಲಾದ ಪ್ರಾಣಗಳಿಂದ ಮಾಡಲಶಕ್ಯಗಳಾದ ಕಾರ್ಯಗಳನ್ನು ಮಾಡುವುದರಿಂದ ಪೃಥಗ್ವರ್ತ್ಮಾ ಎನಿಸುತ್ತದೆ. ಜ್ಞಾನ ಆಯುರೂಪವಾದುದರಿಂದಲೂ ನಿತ್ಯದಲ್ಲಿಯೂ ವಾಯುವಿಗೆ ಆಶ್ರಯವಾದುದರಿಂದಲೂ ವಾಯುಃ ಎನಿಸುತ್ತದೆ. (೫) (೧೫ನೇ ಖಂಡದ ತಾತ್ಪರ್ಯ ಹೇಳುತ್ತಾರೆ—) ಬಹುರೂಪವುಳ್ಳವನಾದುದರಿಂದ ಅಥವಾ ಸರ್ವತ್ರ ವ್ಯಾಪ್ತನಾದುದರಿಂದ ಬಹುಲಃ ಎನಿಸುತ್ತಾನೆ. ಶ್ರೀಹರಿಯ ಮಧ್ಯದೇಹವು ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶ ಎನಿಸುವುದು ॥ ೧ ॥

**ಪೀ**—೧೬ನೇ ಖಂಡದ ತಾತ್ಪರ್ಯ ಹೇಳುತ್ತಾರೆ—

**ಭಾ. ॥ (೧) ವ್ಯಾಪ್ತತ್ವಾದಾಪ ಇತ್ಯುಕ್ತೋ ರಯಿಾ ರತಿಕರತ್ವತಃ । ವಸ್ತಿರಾಕಾಶವಾಯೋರ್ಶ್ಚ ತಾವಾಧಾರೌ ಪ್ರಕೀರ್ತಿತೌ ॥ (೨) ಪ್ರಥನಾತ್ಪೃಥಿವೀನಾಮಾ ಪ್ರತಿಷ್ಠಾ ಚ ಪ್ರತಿಷ್ಠಿತೇಃ । ಪಾದೌ ಭಗವತೋ ವಿಷ್ಣೋಃ ಪೃಥಿವ್ಯಾಶ್ರಯ ಏವ ಚ ॥ (೩) ಉತ್ತಮಾನಾಂ ಹಿ ಪಾದೇನ ಸರ್ವಂ ರೂಪಂ ಹಿ ಕಥ್ಯತೇ । ವಿಷ್ಣೋಃ ಪದಮಿತಿ ಹ್ಯಸ್ಮಾತ್ಪೃಥಿವೀರ್ವೈದಿಕೀ ಸ್ಮೃತಾ ॥ (೪) ಪ್ರಾಣಶ್ಚಕ್ಷುಸ್ತಥಾಽಽದಿತ್ಯ ಇತ್ಯೇಕಾ ದೇವತಾ ಸ್ಮೃತಾ । ಪೂರ್ವದ್ವಾರಪತಿರ್ವಿಷ್ಣೋಃ ॥ (೫) ವ್ಯಾನಃ ಶ್ರೋತ್ರಂ ಚ ಚಂದ್ರಮಾಃ । ದಕ್ಷಿಣದ್ವಾರಪಸ್ತ್ವೇಕೋ ॥ (೬) ವಾಗಪಾನೋಽಗ್ನಿರೇವ ಚ । ಪಶ್ಚಿಮದ್ವಾರಪೋಽಪ್ಯೇಕಃ ॥ (೭) ಸಮಾನೋ ಮನ ಏವ ಚ । ಇಂದ್ರ ಇತ್ಯೇಕ ಏವೋಕ್ತ ಉತ್ತರದ್ವಾರರಕ್ಷಕಃ ॥ (೮) ಉದಾನೋ ವಾಯುರಿತ್ಯೇಕ ಊರ್ಧ್ವದ್ವಾರಾಧಿಪಶ್ಚ ಸಃ । ಸ ಏವಾಕಾಶನಾಮಾ ಚ ಲಕ್ಷ್ಮ್ಯೈವಿಷ್ಣೋ ವಿಶೇಷತಃ ॥ ೨ ॥**

**ಅ** ॥ (೧) ಶ್ರೀಹರಿಯ ಕಟಿಪ್ರದೇಶವು ಅಥವಾ ಹೊಕ್ಕಳಿನ ಕೆಳಗಿನ ಕಿರಿಹೊಟ್ಟೆಯು ಸರ್ವತ್ರ ವ್ಯಾಪಿಸಿಕೊಂಡಿದ್ದ ಪ್ರಯುಕ್ತ ಆಪಃ ಎನಿಸಿರುವುದು. ಭಕ್ತರಿಗೆ ಸಂತೋಷವನ್ನುಂಡುಮಾಡುವುದರಿಂದ ರಯಿಃ ಎನಿಸುವುದು ಶ್ರೀಹರಿಯ ಮಧ್ಯದೇಹ ಕಟಿಪ್ರದೇಶಗಳು ಆಕಾಶ ಜಲಗಳಿಗೆ ಆಶ್ರಯಗಳು. (ಆದ ಕಾರಣ ಮಧ್ಯದೇಹಕ್ಕೆ ಆಕಾಶವೆಂದೂ, ಕಟಿಪ್ರದೇಶಕ್ಕೆ ಅಪ್ ಎಂದೂ ಹೆಸರು.) (೨) (೧೭ನೇ ಖಂಡದ ತಾತ್ಪರ್ಯ ಹೇಳುತ್ತಾರೆ—) ಪೂರ್ಣಗುಣಗಳು ಇದ್ದುದರಿಂದ ವಿಷ್ಣುವಿನ ಪಾದಗಳು ಪೃಥಿವೀ ಎನಿಸುತ್ತವೆ. ಚೆನ್ನಾಗಿ ಇಷ್ಟವನ್ನು ಕೊಡುತ್ತಿರುವುದರಿಂದ ಪಾದವು ಪ್ರತಿಷ್ಠಾ ಎನಿಸುತ್ತದೆ. ಪೃಥಿವಿಗೆ ಮುಖ್ಯವಾಗಿ ಆಶ್ರಯವಾಗಿರುತ್ತವೆ. (೩) (**ತದ್ವಿಷ್ಣೋಃ ಪರಮಂ ಪದಂ, ದಿವೀವ ಚಕ್ಷುರಾತತಂ** ಎಂಬ ವೇದದಲ್ಲಿ ವಿಷ್ಣುವಿನ ಪಾದವು ಸರ್ವತ್ರ ವ್ಯಾಪ್ತವಾಗಿದೆ. ಎಂದು ಹೇಳಿದೆ. ವಿಷ್ಣುವಿನ ಪಾದವು ಪೃಥಿವಿಗೆ ಆಶ್ರಯವಾಗಿರುವುದರಿಂದ ಪೃಥಿವಿಯಲ್ಲಿ ಮಾತ್ರ ಇರುತ್ತದೆಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ—) ಪಾದಶಬ್ದದಿಂದ ಉತ್ತಮರ ಸರ್ವಸ್ವರೂಪವೂ ಹೇಳಲ್ಪಡುತ್ತದೆ. (ಪಾದಮಾತ್ರವು ಹೇಳಲ್ಪಡುವುದಲ್ಲ.) ಆದಕಾರಣ **ವಿಷ್ಣೋಃ ಪದಂ** ಎಂದು ವೈದಿಕಪ್ರಸಿದ್ಧಿಯು ಇದೆ. (ಏವಂಚ 'ವಿಷ್ಣುವಿನ ಸ್ವರೂಪವು ಸರ್ವತ್ರ ವ್ಯಾಪಿಸಿಕೊಂಡಿದೆ. ಎಂದು ಆ ವೇದದ ಅರ್ಥವು. ಆದಕಾರಣ ಪಾದವು ಪೃಥಿವಿಯಲ್ಲಿದೆ ಎಂದು ಹೇಳಿದ್ದೂ ಕೂಡುತ್ತದೆ.) (೪) (೧೯ನೇ ಖಂಡದಲ್ಲಿ ಹೇಳಿದ ಪ್ರಾಣಾಹುತಿಯಿಂದ ತೃಪ್ತಿಯನ್ನು ಹೊಂದತಕ್ಕ ಪ್ರಾಣ ಚಕ್ಷುಃ ಆದಿತ್ಯರಿಗೆ ಭೇದವಿಲ್ಲವೆನ್ನುತ್ತಾರೆ—) ಪ್ರಾಣಾಭಿಮಾನಿ ಚಕ್ಷು

ರಭಿಮಾನಿ, ಆದಿತ್ಯರು ಒಂದೇ ದೇವತೆಯು. ಅವರಿಗೆ ಭೇದವಿಲ್ಲ. ಈ ಮೂರು ರೂಪಗಳುಳ್ಳ ಆದಿತ್ಯನು ವೈಶ್ವಾನರನ ಪೂರ್ವದ್ವಾರಕ್ಕೆ ಅಧಿಪತಿಯು. (೫) (೨೦ನೇ ಖಂಡದಲ್ಲಿ ಹೇಳಿದ ವ್ಯಾನಾಹುತಿಯಿಂದ ತೃಪ್ತರಾಗುವ ವ್ಯಾನ ಶ್ರೋತ್ರ ಚಂದ್ರರಿಗೆ ಭೇದವಿಲ್ಲವೆನ್ನುತ್ತಾರೆ -) ವ್ಯಾನಾಭಿಮಾನಿ ಶ್ರೋತ್ರಾಭಿಮಾನಿ ಚಂದ್ರರಿಗೆ ಭೇದವಿಲ್ಲ. ಈ ಮೂರು ರೂಪಗಳುಳ್ಳ ಚಂದ್ರನು ದಕ್ಷಿಣದ್ವಾರಕ್ಕೆ ಅದಿಪತಿಯು. (೬) (೨೧ನೇ ಖಂಡದಲ್ಲಿ ಹೇಳಿದ ಅಪಾನಾಹುತಿಯಿಂದ ತೃಪ್ತರಾಗತಕ್ಕ ಅಪಾನಾದಿಗಳಿಗೆ ಭೇದವಿಲ್ಲವೆನ್ನುತ್ತಾರೆ—) ವಾಕ್, ಅಪಾನ, ಅಗ್ನಿ, ಈ ಮೂರು ರೂಪಗಳುಳ್ಳ ಅಗ್ನಿದೇವತೆಯು ಪಶ್ಚಿಮದ್ವಾರಕ್ಕೆ ಅಧಿಪತಿಯು. (೭) ಸಮಾನ ವಾಯು, ಮನಸ್ಸು, ಪರ್ಜನ್ಯರಿಗೆ ಅಭಿಮಾನಿಯಾದ ಇಂದ್ರನು ಉತ್ತರ ದ್ವಾರಕ್ಕೆ ಅಧಿಪತಿಯು (೮) ಉದಾನವಾಯು, ವಾಯು, ಆಕಾಶಗಳಿಗೆ, ಅಭಿಮಾನಿಯಾದ ಮುಖ್ಯ ಪ್ರಾಣನು ಊರ್ಧ್ವ(ಮೇಲಿನ) ದ್ವಾರಕ್ಕೆ ಅಧಿಪತಿಯು. ಆತನೇ ಆಕಾಶನೆನಿಸುತ್ತಾನೆ. (ವಾಯುವಿಗೇನೇ ಆಕಾಶವೆಂದು ನಾಮವಾದರೆ, ೨೩ನೇ ಖಂಡದ ೨ನೇ ಮಂತ್ರದಲ್ಲಿ **ವಾಯುಶ್ಚಾಕಾಶಶ್ಚ** ಎಂದು ಪ್ರತ್ಯೇಕ ವಚನದಿಂದ ಭೇದ ಹೇಳಿದ್ದು ಕೂಡದೆ ಹೋಗುವುದು ಎಂದರೆ—) ಮುಖ್ಯಪ್ರಾಣನಲ್ಲಿ ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನವಿರುವಾಗ ಮುಖ್ಯಪ್ರಾಣನು ಆಕಾಶನೆನಿಸುತ್ತಾನೆ (ಏವಂಚ ಕೇವಲ ವಾಯುವು ವಾಯುಶಬ್ದದಿಂದ ಹೇಳಲ್ಪಡುತ್ತಾನೆ. ಲಕ್ಷ್ಮಿದೇವಿಯ ವಿಶೇಷ ಸನ್ನಿಧಾನವಿದ್ದರೆ ಆತನೇ ಆಕಾಶನೆನಿಸುತ್ತಾನೆ.) ॥ ೨ ॥

ಪೀ— ೧೯ನೇ ಖಂಡದ ೨ನೇ ಮಂತ್ರದಲ್ಲಿ **ದ್ಯೌಶ್ಚಾದಿತ್ಯಶ್ಚ** ೨೦ನೇ ಖಂಡದ ೨ನೇ ಮಂತ್ರದಲ್ಲಿ **ದಿಶಶ್ಚ ಚಂದ್ರಮಾಶ್ಚ** ೨೧ನೇ ಖಂಡದ ೨ನೇ ಮಂತ್ರದಲ್ಲಿ **ಪೃಥಿವೀ ಚಾಗ್ನಿಶ್ಚ** ೨೨ನೇ ಖಂಡದ ೨ನೇ ಮಂತ್ರದಲ್ಲಿ **ವಿದ್ಯುಚ್ಚ ಪರ್ಜನ್ಯಶ್ಚ** ಎಂಬಲ್ಲಿ ಹೇಳಲ್ಪಟ್ಟ ದ್ಯು ದಿಕ್ ಪೃಥಿವೀ ವಿದ್ಯುತ್ ಶಬ್ದಗಳಿಗೆ ಅರ್ಥಹೇಳುತ್ತಾರೆ—

**ಭಾ. ॥ (೧) ಪೃಥಿವೀನಾಮಿಕಾ ಶ್ರೀಸ್ತು ದ್ಯೌರ್ದಿಶೋ ವಿದ್ಯುದೇವ ಚ । ವಾಯುಪತ್ನೀ ಸಮುದ್ದಿಷ್ಟಾ ॥ (೨) ತತ್ತದ್ದ್ವಾರಾಧಿಪಾಶ್ಚ ತೇ ॥ (೩) ಅಧಿತಿಷ್ಠಂತಿ ತೇ ಸರ್ವೇ ನಾರಾಯಣಮನಾಮಯಂ । ಯದ್ವಿಷ್ಣುಜ್ಞಾನರೂಪತ್ವಾತ್ ಕಿಮಾನಂದಸ್ವರೂಪತಃ । ಏತೇಷು ತೃಪ್ತೇಷು ಪರಿಸ್ತೃಪ್ಯತ್ಯೇಷಾಂ ಪ್ರಿಯೋ ಹ್ಯಸೌ ॥ (೪) ಸೂರ್ಯಪ್ರಸಾದಾತ್ತು ನರಾಃ ಪೂರ್ವದ್ವಾರೇಣ ಕೇಶವಂ । ಪ್ರಾಪ್ನುವಂತ್ಯಥ ಸೋಮಸ್ಯ ಪ್ರಸಾದಾತ್ಪಿತರಸ್ತಥಾ ॥ ದ್ವಾರೇಣ ದಕ್ಷಿಣೇನೈವ ಗಂಧರ್ವಾಃ ಪಶ್ಚಿಮೇನ ತು । ಅಗ್ನಿಪ್ರಸಾದಾದೃಷಯ ಉತ್ತರೇಣೇಂದ್ರಸಂಶ್ರಯಾತ್ । ಶಿವಾದ್ಯಾ ವಾಯುಮಾಶ್ರಿತ್ಯ ಯಾಂತ್ಯೂರ್ಧ್ವೇಣ ಹರಿಂ ಸುರಾಃ॥ (೫) ವೈಶ್ವಾನರಾಖ್ಯವಿಷ್ಣೋಸ್ತು ಸಮ್ಯಗ್ಜ್ಞಾನೇನ ಸರ್ವಶಃ । ವೈಶ್ವಾನರಜ್ಞಾನಯೋಗ್ಯಾಃ ಸಾಕ್ಷಾದೇವ ಸುರಾಃ ಸ್ಮೃತಾಃ । ತಸ್ಮಾತ್ತೇಷಾಂ ಫಲಂ ಸರ್ವಮನ್ಯೇಷಾಂ ತು ಸ್ವಯೋಗ್ಯತಃ ॥ ಇತಿ (ಇತ್ಯಾದಿ) ವೈಶ್ವಾನರವಿದ್ಯಾಯಾಂ ॥ ೩ ॥**

ಅ ॥ (೧) ದ್ಯುಲೋಕಕ್ಕೆ ಅಭಿಮಾನಿನಿಯು ಲಕ್ಷ್ಮೀದೇವಿಯು ದಿಕ್ ಎಂದು ಹೆಸರುಳ್ಳವಳು ಲಕ್ಷ್ಮೀದೇವಿಯು. ಪೃಥಿವೀ ಎಂದು ಹೆಸರುಳ್ಳವಳು ಭೂದೇವಿಯು. ಮಿಂಚಿಗೆ ಅಭಿಮಾನಿನಿಯು ವಾಯುಪತ್ನಿಯಾದ ಭಾರತೀದೇವಿಯು. ಅಥವಾ ದ್ಯೌಃ=ಭಾರತಿಯು. ದಿಶಃ=ಭಾರತಿಯು. ಪೃಥಿವೀ=ಲಕ್ಷ್ಮೀದೇವಿಯು. ವಿದ್ಯುತ್=ವಾಯು ಪತ್ನಿಯು. (೨) ಪೃಥಿವೀ ಮೊದಲಾದ ಹೆಸರುಳ್ಳ ದೇವತೆಗಳು ಆಯಾಯ ದ್ವಾರಗಳಿಗೆ ಅಧಿಪತಿಗಳು. (ಅದರಲ್ಲಿ ಪೃಥಿವೀ ಎನಿಸಿದ ಲಕ್ಷ್ಮೀದೇವಿಯು ಪಶ್ಚಿಮ

ದ್ವಾರಕ್ಕೂ ವಾಯುಪತ್ನಿಯಾದ ಭಾರತಿಯು ಪೂರ್ವ ದಕ್ಷಿಣ ಉತ್ತರ ದ್ವಾರಗಳಿಗೂ ಅಧಿಪತಿಯರು.) (೩) (ಆದಿತ್ಯಾದಿಗಳು ಪೃಥಿವ್ಯಾದಿಗಳು ದ್ವಾರಪಾಲಕರೆಂದು ಇಲ್ಲಿ ಹೇಳಲಿಲ್ಲವೆಂದರೆ—) ಅವರೆಲ್ಲರೂ ನಿರ್ದೋಷನಾದ ನಾರಾಯಣನನ್ನು ಅಶ್ರಯಿಸಿರುತ್ತಾರೆ. ವಿಷ್ಣುವು ಜ್ಞಾನಸ್ವರೂಪನಾದುದರಿಂದ **ಯತ್** ಎಂದೂ, ಆನಂದಸ್ವರೂಪನಾದುದರಿಂದ ಕಿಂ ಎಂದೂ ಎನಿಸುತ್ತಾನೆ. (ತತ್ತೃಪ್ಯತಿ ಎಂಬ ಐದು ವಾಕ್ಯಗಳ ಅರ್ಥ ಹೇಳುತ್ತಾರೆ—) ಈ ದೇವತೆಗಳಿಗೆ ಶ್ರೀಹರಿಯು ಪ್ರಿಯನಾಗಿರುವುದರಿಂದ ಈ ದೇವತೆಗಳು ತೃಪ್ತರಾಗುತ್ತಿರಲು ಶ್ರೀಹರಿಯು ತೃಪ್ತನಾಗುತ್ತಾನೆ. (೪) (**ತಸ್ಯಾನುತೃಪ್ತಿಂ ತೃಪ್ಯತಿ ಪ್ರಜಯಾ ಪಶುಭಿಃ** ಇದು ಮೊದಲಾದ ಐದು ವಾಕ್ಯಗಳಿಂದ ಉಪಾಸಕನಿಗೆ ಐಹಿಕಫಲ ಮಾತ್ರ ಹೇಳಲ್ಪಡುವುದಲ್ಲ. ಪರಂತು **ಪ್ರತಿಪದ್ಯತೇ ಸ್ವರ್ಗಂ ಲೋಕಂ ಯ ಏತಾನೇವಂ ಪಂಚ ಬ್ರಹ್ಮಪುರುಷಾನ್ವೇದ** ಎಂಬುವುದರಿಂದ ಮೋಕ್ಷದಲ್ಲಿಯೂ ವಿಶೇಷ ಫಲವಿದೆನ್ನುತ್ತಾರೆ—) ಪೂರ್ವ ದ್ವಾರಪಾಲಕರನ್ನು ಪಾಸನೆಮಾಡತಕ್ಕ ಮನುಷ್ಯರು ಸೂರ್ಯನ ಪ್ರಸಾದದಿಂದ ಪೂರ್ವದ್ವಾರದಿಂದಲೂ, ಪಿತೃಗಳು ಚಂದ್ರನ ಪ್ರಸಾದದಿಂದ ದಕ್ಷಿಣದ್ವಾರದಿಂದಲೂ, ಗಂಧರ್ವರು ಅಗ್ನಿಯ ಪ್ರಸಾದದಿಂದ ಪಶ್ಚಿಮದ್ವಾರದಿಂದಲೂ, ಋಷಿಗಳು ಇಂದ್ರನ ಪ್ರಸಾದದಿಂದ ಉತ್ತರದ್ವಾರದಿಂದಲೂ ಕೇಶವನನ್ನು ಹೊಂದುತ್ತಾರೆ. ರುದ್ರಾದಿ ದೇವತೆಗಳು ಮುಖ್ಯಪ್ರಾಣನನ್ನು ಆಶ್ರಯಿಸಿ ಮೇಲಿನ ದ್ವಾರದಿಂದ ಶ್ರೀಹರಿಯನ್ನು ಹೊಂದುತ್ತಾರೆ. (ಹೃದಯದಲ್ಲಿರತಕ್ಕ ಪೂರ್ವದ್ವಾರಪಾಲಕರನ್ನು ಪಾಸನೆ ಮಾಡಿದುದರಿಂದ ಶ್ವೇತದ್ವೀಪಾದಿಲೋಕಗಳಲ್ಲಿ ಪೂರ್ವ ದ್ವಾರದಿಂದ ಕೇಶವನನ್ನು ಹೊಂದುತ್ತಾರೆ-) (೫) (ಕೇವಲ ಸೂರ್ಯಾದಿಗಳ ಪ್ರಸಾದದಿಂದಲೇ ಶ್ರೀಹರಿಯನ್ನು ಹೊಂದುವುದಲ್ಲವೆನ್ನುತ್ತಾರೆ—) ವೈಶ್ವಾನರನೆಂಬ ವಿಷ್ಣುವಿನ ಯಥಾರ್ಥಜ್ಞಾನದಿಂದ ಮುಖ್ಯವಾಗಿಯೇ ವೈಶ್ವಾನರನ ಉಪಾಸನೆಗೆ ಯೋಗ್ಯರಾದವರೆಲ್ಲರೂ ಮುಖ್ಯವಾಗಿ ದೇವತೆಗಳು ಆಗಿರುವರು. ಆದಕಾರಣ ಅವರೀಗೇನೆ ಸಂಪೂರ್ಣ ಫಲವು. ಇತರರಿಗೆ ಅವರವರ ಯೋಗ್ಯತಾನುಸಾರ ಫಲವೆಂದು ವೈಶ್ವಾನರವಿದ್ಯೆಯಲ್ಲಿ ಹೇಳಿದೆ. ॥ ೩ ॥

ಪೀ—ವೈಶ್ವಾನರವಿದ್ಯೆಯು ಭಗವತ್ಪರವೆಂದು ಹೇಳಿದ ಪ್ರಯುಕ್ತ ವಿಷ್ಣುವೇ ವೈಶ್ವಾನರನು. ದೇವತೆಯಾಗಲೀ ಭೂತಾಗ್ನಿಯಾಗಲೀ ಅಲ್ಲ, ಎಂದು ಹೇಳಿದರು. ಈಗ ಈ ಪ್ರಕರಣದಿಂದಲೂ ಇದಕ್ಕೆ ಸಮವಾದ ಉಕ್ತಿಯು ಬೇರೆ ಕಡೆ ಇದ್ದ ಪ್ರಯುಕ್ತವೂ ಹೀಗೆಯೇ ಸಿದ್ಧವಾಗುತ್ತದೆ ಎನ್ನುತ್ತಾರೆ—

**ಭಾ.॥ (೧) ಕೋ ನ ಆತ್ಮಾ ಕಿಂ ಬ್ರಹ್ಮ ಸೋಽಯಮಾತ್ಮಾ ಚತುಷ್ಪಾತ್ । ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ ॥ (೨) ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ ॥ ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ । ಇತ್ಯಾದೇಶ್ಚ ವೈಶ್ವಾನರೋ ವಿಷ್ಣುರಿತಿ ಸಿದ್ಧಂ ॥ (೩) ಸ ವಾಯುಃ ಸ ಆಕಾಶಃ ವಾಯುಶ್ಚಾಕಾಶಶ್ಚಾಧಿತಿಷ್ಠತ ಇತಿ ವಚನಾದ್ವಾಯೋಃ ರೂಪಮನ್ಯಾಧಿಷ್ಠಿತಮಾಕಾಶಾಖ್ಯಂ ವಾಯೋಃ ಸ್ವರೂಪಮಿತಿ ವಿಜ್ಞಾಯತೇ ॥ (೪ ಆಕಾಶನಾಮಾ ವಿಷ್ಣ್ವೇಶೋ ವಾಯುಶ್ಚಾಕಾಶಕಃ ಸ್ಮೃತಃ । ಆಕಾಶ ಇತಿ ಲಕ್ಷ್ಮೀಶ್ಚ ತಥಾಽಽಕಾಶೋ ಹರಿಃ ಸ್ವಯಂ ॥ ಇತಿ ಶಬ್ದನಿರ್ಣಯೇ ॥ (೫) ಸುತೇಜೋ ವಿಶ್ವರೂಪಾದಿಭೇದೇನಾಂಗಾನಿ ಮಾಪತೇಃ । ಅಭಿನ್ನಾನ್ಯಪಿ ಕಥ್ಯಂತೇ ಲೋಕದೃಷ್ಟಿವಿಭೇದತಃ ॥ ಇತಿ ಚ ॥ ಇತಿ ಚತ್ವಾರಿಂಶಃ ಖಂಡಃ ॥ ೭–೨೪ ॥ ॥ ೪ ॥**

ಅ ॥ (೧) ಆತ್ಮನೆಂದರೆ ಯಾವನು? ಬ್ರಹ್ಮನೆಂದರೆ ಯಾವನು? (ಎಂದು ವಿಚಾರಪೂರ್ವಕವಾಗಿ ವೈಶ್ವಾನರವಿದ್ಯೆಯನ್ನು ಆರಂಭಿಸಿ ಹೇಳಿದುದರಿಂದಲೂ ವಿಷ್ಣುಪ್ರಕರಣವಾದುದರಿಂದಲೂ ವೈಶ್ವಾನರನು

ವಿಷ್ಣುವೆಂದು ಸಿದ್ಧವಾಯಿತು.) ಓಂ ಎನಿಸಿಕೊಂಡ ಲಕ್ಷ್ಮ್ಯಾದಿಗಳಿಗೆ ನಿಯಾಮಕನಾದ ಶ್ರೀಹರಿಯು ಸ್ವರೂಪಭೂತಗಳಾದ ನಾಲ್ಕು ಅಂಶಗಳುಳ್ಳವನು. ಶುಭಭೋಗಗಳನ್ನುಣ್ಣುವವನು. ವೈಶ್ವಾನರನು ಒಂದನೇ ರೂಪನು. (ಮಾಂಡೂಕದಲ್ಲಿ **ಸ್ಥೂಲಭುಗ್ವೈಶ್ವಾನರಃ** ಎಂದು ವಿಷ್ಣುವಿನಲ್ಲಿ ವೈಶ್ವಾನರ ಎಂಬ ಶಬ್ದಪ್ರಯೋಗವಿದ್ದುದರಿಂದ ಇಲ್ಲಿಯೂ ವೈಶ್ವಾನರನೆಂದರೆ ವಿಷ್ಣುವೆಂದು ಸಿದ್ಧವಾಯಿತು. ಮತ್ತು **ಸೋಽಯಮಾತ್ಮಾ** ಎಂದು ಉಪಕ್ರಮದಲ್ಲಿ ಆತ್ಮಶಬ್ದವಿದ್ದಪ್ರಯುಕ್ತವೂ ಇದು **ವಿಷ್ಣುಪ್ರಕರಣವೆಂದು** ಸಿದ್ಧಿಸುತ್ತದೆ.) (೨) (1) **ಆತ್ಮಾನಂ ವೈಶ್ವಾನರಂ** ಎಂದು ಹೇಳಿದ ವೈಶ್ವಾನರನು ವಿಷ್ಣುವೇ. ಅಗ್ನಿಯಲ್ಲಿಯೂ ವಿಷ್ಣುವಿನಲ್ಲಿಯೂ ಇರುವ ವೈಶ್ವಾನರಶಬ್ದದಲ್ಲಿ ವಿಷ್ಣುವಿನಲ್ಲಿಯೇ ಪ್ರಸಿದ್ಧವಾದ ಆತ್ಮಶಬ್ದ ವಿಶೇಷಣವಿದೆ. (2) ಮತ್ತು ನಾನು ವೈಶ್ವಾನರನಾಗಿ ಪ್ರಾಣಿಗಳ ದೇಹವನ್ನು ಆಶ್ರಯಿಸಿರುತ್ತೇನೆಂದು (ಗೀತೆಯಲ್ಲಿ ಅರ್ಜುನನಿಗೆ ಕೃಷ್ಣನ ಉಪದೇಶವು.) ಇದುಮೊದಲಾದ ಪ್ರಮಾಣಗಳಿಂದಲೂ ವೈಶ್ವಾನರನೆಂದರೆ ವಿಷ್ಣುವೇ ಎಂದು ಸಿದ್ಧಿಸುತ್ತದೆ. (೩) (ದೇವಸುಷಿ ವಿದ್ಯೆಯಲ್ಲಿ) **ಸ ಉದಾನಃ ಸ ವಾಯುಃ ಸ ಆಕಾಶಃ** ಎಂದು ಭೇದವಿಲ್ಲವೆಂದು ಹೇಳಿದುದರಿಂದ ಆಕಾಶನೆಂದರೆ ವಾಯುವೇ. ಇಲ್ಲಿ **ವಾಯುಶ್ಚ ಆಕಾಶಶ್ಚ** ಎಂದು ಭೇದ ಹೇಳತಕ್ಕ ವಾಕ್ಯದಿಂದ ಆಕಾಶವೆನ್ನುವ ವಾಯುರೂಪದಲ್ಲಿ ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನವಿದೆ. ಲಕ್ಷ್ಮಿಯ ವಿಶೇಷ ಸನ್ನಿಧಾನವಿಲ್ಲದ ಮುಖ್ಯಪ್ರಾಣನದ್ದು ಇನ್ನೊಂದು ರೂಪವು ವಾಯುವೆನಿಸುತ್ತದೆ. (೪) (ಲಕ್ಷ್ಮೀದೇವಿಯ ಸನ್ನಿಧಾನ ವಿಶೇಷವಿದ್ದುದರಿಂದ ವಾಯುವಿಗೆ ಆಕಾಶವೆಂದು ಹೆಸರು ಎಂದು ಹೇಳಿದೆ. ಲಕ್ಷ್ಮೀದೇವಿಗೂ ವಾಯುದೇವರಿಗೂ ಆಕಾಶ ಎಂದು ಹೆಸರು ಬರಲಿಕ್ಕೆ ಪ್ರಮಾಣ ಹೇಳುತ್ತಾರೆ — ) ವಿನಾಯಕನಿಗೂ, ವಾಯುವಿಗೂ, ಲಕ್ಷ್ಮೀದೇವಿಗೂ, ಶ್ರೀಹರಿಗೂ ಆಕಾಶವೆಂಬ ಹೆಸರಿದೆ, ಎಂದು ಶಬ್ದನಿರ್ಣಯದಲ್ಲಿದೆ. (೫) ಶ್ರೀಹರಿಯ ಅಂಗಗಳಿಗೆ ಭೇದವಿಲ್ಲವಾದರೂ ಉಪಾಸಕರ ದೃಷ್ಟ್ಯನುಸಾರವಾಗಿ ಸುತೇಜಾಃ ವಿಶ್ವರೂಪ ಮೊದಲಾದ ಪ್ರಕಾರ ಭೇದದಿಂದಲೇ ಹೇಳಲ್ಪಡುತ್ತವೆ. ॥ ೮ ॥

ಇಪ್ಪತ್ತನಾಲ್ಕನೇ ಖಂಡವು ಮುಗಿಯಿತು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಚ್ಛಾಂದೋಗ್ಯ ಉಪನಿಷದ್ಭಾಷ್ಯೇ ಸಪ್ತಮೋಽಧ್ಯಾಯಃ ॥ ೭ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಮತ್ ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ಏಳನೇ ಅಧ್ಯಾಯವು ಮುಗಿಯಿತು. ॥ ೭ ॥

**ಶ್ರೀಮದಾನಂದತೀರ್ಥಾರ್ಯಹೃದಯಾಮಲಮಂದಿರಂ ।**
**ಜಾನಕೀಜಾನಿಮಾನಂದಸಾಂದ್ರಂ ವಂದೇ ನಿರಂತರಂ ॥**

**॥ ಶ್ರೀ ಕೃಷ್ಣಾರ್ಪಣಮಸ್ತು ॥**

|| ಶ್ರೀಃ ||

# ಎಂಟನೇ ಅಧ್ಯಾಯವು

**ತಸ್ಮೈ ನಮೋ ಭಗವತೇ ಚಿದಚಿತ್ಪರಮಾಯ ತೇ ।**
**ಪುರುಷೋತ್ತಮಾಯ ದೇವಾಯ ಪೂರ್ಣಾನಂದೈಕರೂಪಿಣೇ ॥**

## ೧ನೇ ಖಂಡವು

**ಪೀ—** ಶ್ರೀಹರಿಯು ಜೀವಜಡಗಳೆಂಬ ಪ್ರಪಂಚದಿಂದ ಪಾರಮಾರ್ಥಿಕವಾಗಿಯೇ ಅತ್ಯಂತ ಭಿನ್ನನು. ಪೂರ್ಣಗುಣಗಳುಳ್ಳವನು, ಸರ್ವೋತ್ತಮನೆಂದು ತಿಳಿದವರಿಗೆ ಮೋಕ್ಷ, ಮೋಕ್ಷೇತರ ಫಲವುಳ್ಳ ಉಪಾಸನೆಗಳನ್ನು ಹಿಂದೆ ಹೇಳಿರುವರು. ಈ ಅಧ್ಯಾಯದಲ್ಲಿ ಜೀವೇಶ್ವರರಿಗೆ ಭೇದವಿಷಯದಲ್ಲಿ ಯಾರಿಗೆ ಸಂದೇಹವಿದೆಯೋ, ಯಾರು ವ್ಯತ್ಯಾಸವಾಗಿ ತಿಳಿದಿರುವನೋ, ಆತನಿಗೆ ಭೇದಜ್ಞಾನವು ಮೋಕ್ಷಕ್ಕೆ ಉಪಯುಕ್ತವು, ಎಂದು ಯುಕ್ತಿಗಳಿಂದ ತಿಳಿಸುತ್ತಾರೆ. ಅದರಲ್ಲಿ ಶ್ವೇತಕೇತುವನ್ನು ನಿಮಿತ್ತವಾಗಿ ಇಟ್ಟು ಕೊಂಡು ಎಲ್ಲಾ ಜೀವರಿಗೂ ಶ್ರೀಹರಿಯಿಂದ ಭೇದವದೆ, ಎಂದು ತಿಳಿಸುತ್ತಾ ಅಭೇದಪ್ರಸಕ್ತಿಯಿಲ್ಲದೆ ಭೇದವನ್ನು ಹೇಳಲಾಗದಿರುವುದರಿಂದ ಅಭೇದದ ಪ್ರಸಕ್ತಿ ಮಾಡಿಕೊಂಡು ಭೇದವನ್ನು ಹೇಳುತ್ತಾರೆ—

**ಉ. ॥ ಓಂ ॥ ಶ್ವೇತಕೇತುರ್ಹಾರುಣೇಯ ಆಸ ತಂ ಹ ಪಿತೋವಾಚ ಶ್ವೇತಕೇತೋ ವಸ ಬ್ರಹ್ಮಚರ್ಯಂ ನ ವೈ ಸೋಮ್ಯಾಸ್ಮತ್ಕುಲೀನೋಽನನೂಚ್ಯ ಬ್ರಹ್ಮಬಂಧುರಿವ ಭವತೀತಿ ॥ ೧ ॥**

**ಅ ॥** ಅರುಣನ ಮೊಮ್ಮಗನಾದ ಅಥವಾ ಅರುಣಿಯ ಮಗನಾದ ಶ್ವೇತಕೇತುವೆನ್ನುವವನು ಇರುತ್ತಿದ್ದನು. ಅವನಿಗೆ ತಂದೆಯಾದ ಉದ್ದಾಲಕರು ಹೇಳಿದರು. ಎಲೋ ಶ್ವೇತಕೇತುವೇ ವೇದಾಧ್ಯಯನಕ್ಕಾಗಿ ಗುರುಕುಲದಲ್ಲಿ ಆವಾಸಮಾಡು. (ವೇದಾಧ್ಯಯನಾದಿಗಳನ್ನು ಮಾಡು.) ಎಲೋ ಸುಂದರನೇ ನಮ್ಮ ಕುಲದಲ್ಲಿ ಹುಟ್ಟಿದವನು ಯಾವನಾದರೂ ವೇದಗಳನ್ನು ಅಧ್ಯಯನಮಾಡದೆ *ಬ್ರಾಹ್ಮಣಾಭಾಸನಂತೆ ಆಗಿರುವುದಿಲ್ಲ, ಹೀಗೆ ಹೇಳಿದನು. ॥ ೧ ॥

**ಉ. ॥ ಸ ಹ ದ್ವಾದಶವರ್ಷ ಉಪೇತ್ಯ ಚತುರ್ವಿಂಶತಿವರ್ಷಸ್ಸರ್ವಾನ್ ವೇದಾನಧೀತ್ಯ ಮಹಾಮನಾ ಅನೂಚಾನಮಾನೀ ಸ್ತಬ್ಧ ಏಯಾಯ ತಂ ಹ ಪಿತೋವಾಚ ಶ್ವೇತಕೇತೋ ಯನ್ನು ಸೋಮ್ಯೇದಂ ಮಹಾಮನಾ ಅನೂಚಾನಮಾನೀ ಸ್ತಬ್ಧೋಽಸ್ಯುತ ತಮಾದೇಶಮಪ್ರಾಕ್ಷ್ಯಃ ॥ ೨ ॥**

**ಅ ॥** ಆಗ ಶ್ವೇತಕೇತುವು ಹನ್ನೆರಡು (೧೨) ವರ್ಷದವನು ಗುರುಗಳ ಮನೆಗೆ ಹೋಗಿ ಇಪ್ಪತ್ತನಾಲ್ಕು (೨೪) ವರ್ಷಪರ್ಯಂತ ಎಲ್ಲಾ ವೇದಗಳನ್ನು ಕಲಿತು, ನಾನು ಷಡಂಗಸಹಿತ ಎಲ್ಲಾ ವೇದ

---

* ಬ್ರಾಹ್ಮಣರನ್ನು ಬಂಧುಗಳೆನ್ನುತ್ತಾನೆ, ಸ್ವಯಂ ಬ್ರಾಹ್ಮಣನಲ್ಲ, ಅಥವಾ ಬ್ರಾಹ್ಮಣಿಯಲ್ಲಿ ಬ್ರಾಹ್ಮಣನಿಂದ ವ್ಯಭಿಚಾರದಿಂದ ಹುಟ್ಟಿದವನು, ಅಥವಾ ಸಂಸ್ಕಾರವಾಗದಿದ್ದವನು ಬ್ರಹ್ಮಬಂಧವೆನಿಸುವನು

ಗಳನ್ನು ಅಧ್ಯಯನ ಮಾಡಿರುತ್ತೇನೆ, ಎಂದಹಂಕಾರವುಳ್ಳವನಾಗಿ, ತನ್ನಲ್ಲಿ ಅತಿಮಹತ್ತ್ವ ಬುದ್ಧಿಯುಳ್ಳವನಾಗಿ (ವಿನಯವಿಲ್ಲದವನಾಗಿ) ತಂದೆಯ ಬಳಿಗೆ ಬಂದನು. ಆಗ ತಂದೆಯು ಮಗನು ತನಗೆ ಅನುಕೂಲನಾಗಿಲ್ಲವೆಂದು ಅರಿತು (ತಾನೇ ಸ್ವತಂತ್ರನೆಂದು ದುರಭಿಮಾನವುಳ್ಳ ಮಗನ ಅಹಂಕಾರವನ್ನು ಕಳೆಯುವುದಕ್ಕಾಗಿ) ಹೇಳಿದನು. ಎಲೋ ಸೋಮ್ಯನೇ ನೀನು ಈಗ ಎಲ್ಲಾ ಶಾಸ್ತ್ರಗಳನ್ನು ಕಲಿತಿರುವೆನೆಂದು ದುರಹಂಕಾರವುಳ್ಳವನೂ ತಾನೇ ಸರ್ವಶ್ರೇಷ್ಠನೆಂದು ಬುದ್ಧಿಯುಳ್ಳವನೂ, ದರ್ಪಪೂರ್ಣನೂ ಆಗಿರುತ್ತಿ. ಸರ್ವವೇದಪ್ರಸಿದ್ಧನಾದ ನಾರಾಯಣನನ್ನು ತಿಳಿದಿರುತ್ತಿಯೋ ಏನು?

ವಿ || ಉಪಾಧ್ಯಾಯರಿಂದ ೧೨ ವರ್ಷ ಪರ್ಯಂತ ಯಜ್ಞ ಮೊದಲಾದ ಸಮಸ್ತ ಕರ್ಮಗಳನ್ನೂ ದೇವತೆಗಳನ್ನೂ ಹೇಳುವ ಎಲ್ಲಾ ವೇದಗಳನ್ನೂ ನೀನು ಕಲಿತಿದ್ದರೂ ಅದೆಲ್ಲವೂ ವ್ಯರ್ಥವೇ. ಏಕೆಂದರೆ, ಸರ್ವಸ್ವಾಮಿಯಾದ ನಾರಾಯಣನನ್ನು ಪ್ರಾಯಶಃ ನೀನು ತಿಳಿದಿರಲಿಲ್ಲ. ಆತನನ್ನು ತಿಳಿದಿದ್ದರೆ ಸರ್ವಥಾ ನಿನಗೆ ಹೀಗೆ ಅಹಂಕಾರವು ಬರುತ್ತಿರಲಿಲ್ಲ. || ೨ ||

**ಉ. || ಯೇನಾಶ್ರುತꣳ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮಿತಿ ಕಥಂ ನು ಭಗವಃ ಸ ಆದೇಶೋ ಭವತೀತಿ || ೩ ||**

ಅ || ಯಾವ ಶ್ರೀಹರಿಯನ್ನು ಗುರುಮುಖದಿಂದ ಕೇಳಿ ತಿಳಿದರೆ ಕೇಳಲ್ಪಡದಿರುವ ದೇವತಾಕರ್ಮ ಮೊದಲಾದುದು ಕೇಳಲ್ಪಟ್ಟಂತೆ ಆಗುತ್ತದೋ, ಯಾವ ಶ್ರೀಹರಿಯನ್ನು ಮನನ (ನಿರಂತರದಲ್ಲಿಯೂ ಮತ್ತೂಮತ್ತು ಆಲೋಚಿಸುವುದು.) ಮಾಡಿದರೆ ಮನನಮಾಡಲ್ಪಡದಿದ್ದ ದೇವತಾಕರ್ಮಾದಿಗಳು ಮನನ ಮಾಡಲ್ಪಟ್ಟಂತೆ ಆಗುವುದೋ, ಯಾವ ಶ್ರೀಹರಿಯನ್ನು ಧ್ಯಾನಿಸಿದರೆ ಧ್ಯಾನಿಸಲ್ಪಡದಿದ್ದ ದೇವತಾದಿಗಳು ಧ್ಯಾನಿಸಲ್ಪಟ್ಟಂತೆ ಆಗುವುದೋ, ಅಂತಹ ಶ್ರೀಹರಿಯನ್ನು ಕೇಳಿ ತಿಳಿದಿರುತ್ತಿಯೋ ಏನು? (ಅಂದರೆ— ಯಾವ ಶ್ರೀಹರಿಯ ಶ್ರವಣ ಮನನ ಧ್ಯಾನಗಳಿಂದ ಕರ್ಮದೇವತಾದಿ ಜಗತ್ತಿನ ಶ್ರವಣಾದಿಗಳು ಆದಂತೆ ಆಗುತ್ತದೋ, ಅಂತಹ ಶ್ರೀಹರಿಯನ್ನು ಕೇಳಿತಿಳಿದಿರುತ್ತಿಯೋ? ಪ್ರಾಯಶಃ ನೀನು ಕೇಳಿತಿಳಿಯಲಿಲ್ಲ. ಕೇಳಿತಿಳಿದಿದ್ದರೆ ಇಂತಹ ದುರಹಂಕಾರವು ಬರುತ್ತಿರಲಿಲ್ಲ.) (ಆಗ ಶ್ವೇತಕೇತುವು) ಎಲೋ ಪೂಜ್ಯರೇ ಶ್ರೀಹರಿಯ ಜ್ಞಾನದಿಂದ ದೇವತಾಕರ್ಮಾದಿಗಳ ಜ್ಞಾನವಾಗುತ್ತದೆಂಬ ಉಪದೇಶವು ಹೇಗೆ ಯುಕ್ತವಾಗುತ್ತದೆ? ಅಥವಾ ಒಬ್ಬನ ಜ್ಞಾನದಿಂದ ಇನ್ನೊಬ್ಬನ ಜ್ಞಾನವಾಗುತ್ತದೆಂಬ ಉಪದೇಶವು ಎಂತಹುದು? ಎಂದು ಮಗನು ಕೇಳಿದನು. (ಒಂದು ವಸ್ತುವಿನ ಜ್ಞಾನದಿಂದ ಇನ್ನೊಂದು ವಸ್ತುವಿನ ಜ್ಞಾನವು ಎಲ್ಲಿಯೂ ತೋರಿಬರಲಿಲ್ಲವಷ್ಟೆ.) || ೩ ||

ಹೀ—ಆಗ ತಂದೆಯಾದ ಉದ್ದಾಲಕರು ಒಂದು ವಸ್ತುವಿನ ಜ್ಞಾನದಿಂದ ಇನ್ನೊಂದು ವಸ್ತುವಿನ ಜ್ಞಾನವು ಉಂಟಾಗುತ್ತದೆಂಬುದನ್ನು ಆರು ದೃಷ್ಟಾಂತಗಳಿಂದ ಹೇಳುತ್ತಾರೆ—

**ಉ. || ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತꣳ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ || ೪ ||**

ಅ || ಎಲೋ ಮಗನೇ ಒಂದು ಮಣ್ಣಿನ ಹೆಂಟೆಯನ್ನು ತಿಳಿದುದರಿಂದ ಮಣ್ಣಿನಿಂದ ಮಾಡಿದುದೆಲ್ಲವೂ ತಿಳಿಯಲ್ಪಟ್ಟಂತೆ ಆಗುತ್ತದೋ, ಹೀಗೆಯೇ ಶ್ರೀಹರಿಯ ಜ್ಞಾನದಿಂದ ದೇವತಾ, ಕರ್ಮಾದಿಗಳ ಜ್ಞಾನವು ಆಗುತ್ತದೆಂಬ ಉಪದೇಶವೂ ಕೂಡುತ್ತದೆ. (ಅಂದರೆ—ಒಂದು ಮಣ್ಣಿನ ಹೆಂಟೆಯನ್ನು

ತಿಳಿಯುತ್ತಿರಲು ಮಣ್ಣಿನಿಂದ ಮಾಡಿದ ಪದಾರ್ಥಗಳನ್ನು ಉಪದೇಶವಿಲ್ಲದೇನೇ ತಿಳಿದು, ಆ ತಿಳಿದ ಮಣ್ಣಿನ ಹೆಂಟೆಯು ಸಾದೃಶ್ಯದಿಂದ ಇವುಗಳು ಮಣ್ಣಿನ ಜಾತೀಯಗಳೆಂದು ತಿಳಿಯಲ್ಪಡುತ್ತವೋ, ಹಾಗೆಯೇ ಶ್ರೀಹರಿಯು ಸತ್ಯ, ಜ್ಞಾನ, ಆನಂದರೂಪನು ಇತ್ಯಾದಿಪ್ರಕಾರ ತಿಳಿಯಲ್ಪಡುತ್ತಿರಲು ಸತ್ಯತ್ವ, ಪ್ರಾಮಾಣಿಕತ್ವ, ಮೊದಲಾದ ಗುಣಸಾದೃಶ್ಯದಿಂದ ಪ್ರಪಂಚವೂ ಹಾಗೆಯೇ ಎಂದು ತಿಳಿಯಲ್ಪಡುತ್ತದೆ) (ಶ್ರೀಹರಿಯು ಪ್ರಧಾನನು. ಜಗತ್ತು ಅಪ್ರಧಾನವು. ಪ್ರಧಾನಜ್ಞಾನದಿಂದ ಅಪ್ರಧಾನದ ಜ್ಞಾನವೂ ಬಂದಂತೆ ಆಗುತ್ತದೆ ಎಂಬುದನ್ನು ದೃಷ್ಟಾಂತಕೊಟ್ಟು ಹೇಳುತ್ತಾರೆ—) ವಾಗಿಂದ್ರಿಯದಿಂದ ಸಂಸ್ಕೃತವಲ್ಲದ ಮಣ್ಣು ಮೊದಲಾದ ಭಾಷಾಶಬ್ದಗಳ ಉಚ್ಚಾರಣವು ಹುಟ್ಟಿದ್ದು ವಿಕಾರವುಳ್ಳದ್ದು. ಅನಿತ್ಯವು. ಅದುಕಾರಣ ಅವುಗಳು ಅನಿತ್ಯಗಳು. ಮೃತ್ತಿಕಾ ಮೊದಲಾದ ಸಂಸ್ಕೃತನಾಮವು ವಿಕಾರವುಳ್ಳದ್ದಲ್ಲ. ನಿತ್ಯವಾದುದು.

ವಿ || ಅದುಕಾರಣ ನಿತ್ಯವಾದಪ್ರಯುಕ್ತ ಸಂಸ್ಕೃತನಾಮಧೇಯವು ಪ್ರಧಾನವು. ಸಂಸ್ಕೃತವಲ್ಲದ ಬೇರೆ ನಾಮಗಳು ಪುರುಷರ ಭೇದದಿಂದ ವಿಕಾರಹೊಂದುವುದರಿಂದ ಅನಿತ್ಯಗಳು. ಅಪ್ರಧಾನಗಳು. (2) ಸಂಸ್ಕೃತವಲ್ಲದ ಅಪಭ್ರಂಶಭಾಷಾಶಬ್ದಜ್ಞಾನದಿಂದ ಆಗತಕ್ಕ ಫಲವು ಸಂಸ್ಕೃತಶಬ್ದಜ್ಞಾನದಿಂದ ಹೇಗೆ ಆಗುತ್ತದೋ ಹಾಗೆಯೇ ಕರ್ಮದೇವತಾದಿಜಗಜ್ಜ್ಞಾನದಿಂದ ಆಗತಕ್ಕ ಫಲವೆಲ್ಲವೂ ಪ್ರಧಾನಭೂತನಾದ ಶ್ರೀಹರಿಯ ಜ್ಞಾನದಿಂದ ಆಗುತ್ತದೆ, ಎಂಬ ಅಭಿಪ್ರಾಯದಿಂದ, **ಯೇನಾಶ್ರುತಂ ಶ್ರುತಂ ಭವತಿ** ಎಂದು ಉದ್ದಾಲಕರು ಹೇಳಿರುವರು || ೪ ||

ಪೀ—ಕೇವಲ ಸದೃಶವಸ್ತುವಿನ ಜ್ಞಾನದಿಂದ ಅದಕ್ಕೆ ಸದೃಶವಾದ ಇನ್ನೊಂದು ವಸ್ತುವಿನ ಜ್ಞಾನವು ಬರುತ್ತದೆಂಬಲ್ಲಿ ದೃಷ್ಟಾಂತ ಹೇಳಿ ಈಗ ಪ್ರಧಾನವಾದ ಸದೃಶವಸ್ತುವಿನ ಜ್ಞಾನದಿಂದ ಅಪ್ರಧಾನವಾದ ಸದೃಶವಸ್ತುವಿನ ಜ್ಞಾನವು ಹುಟ್ಟುತ್ತದೆಂಬಲ್ಲಿ ದೃಷ್ಟಾಂತ ಹೇಳುತ್ತಾರೆ—

**ಉ. || ಯಥಾ ಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತꣳ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಲೋಹಮಣಿರಿತ್ಯೇವ ಸತ್ಯಂ || ೫ ||**

ಅ || ಎಲೋ ಮಗನೇ ಹೇಗೆ ಲೋಹಗಳಲ್ಲಿ ಪ್ರಧಾನವಾದ ಸುವರ್ಣ (ಚಿನ್ನ) ವನ್ನು ತಿಳಿದರೆ (ಅಂದರೆ—ಸಾಧನ (ಕಾರಣ) ವಾದ ಸುವರ್ಣದ ಜ್ಞಾನದಿಂದ) ಅದರಿಂದ ಹುಟ್ಟಿದ ಲೋಹಮಯವಾದ ಕಟಕ, ಮುಕುಟಾದಿಗಳೆಲ್ಲವೂ ತಿಳಿಯಲ್ಪಡುತ್ತವೆ. ಹೀಗೆಯೇ ಪ್ರಧಾನನಾದ ವಿಷ್ಣುವನ್ನು ತಿಳಿದರೆ ಅಪ್ರಧಾನವಾದ ಕರ್ಮ, ದೇವತಾ ಮೊದಲಾದ ಜಗತ್ತನ್ನು ತಿಳಿಯದಿದ್ದರೂ ತಿಳಿದ ಫಲವು ಬರುತ್ತದೆ. ಅಥವಾ ಜ್ಞಾನಾನಂದಾದಿ ಸಾದೃಶ್ಯದಿಂದ ಜೀವನೂ ತಿಳಿಯಲ್ಪಟ್ಟಂತೆ ಆಗುತ್ತಾನೆ. ........(ಈ ವಿಷಯದಲ್ಲಿ ದೃಷ್ಟಾಂತ ಹೇಳುತ್ತಾರೆ—) ಲೋಹಮಣಿಯೆಂಬುವುದೇ ವೇದದಲ್ಲಿದ್ದ ನಾಮಧೇಯವು ನಿತ್ಯವು. (ಬೇರೆ ಎಲ್ಲವೂ ಲೋಕದ ಹೆಸರು ಅನಿತ್ಯವು) || ೫ ||

ಪೀ—ಸಾದೃಶ್ಯದಿಂದ ಒಂದರ ಜ್ಞಾನದಿಂದ ಎಲ್ಲವೂ ತಿಳಿಯುತ್ತದೆ ಎಂಬಲ್ಲಿ ಇನ್ನೊಂದು ದೃಷ್ಟಾಂತ ಹೇಳುತ್ತಾರೆ—

**ಉ. || ಯಥಾ ಸೋಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತꣳ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಕಾರ್ಷ್ಣಾಯಸಮಿತ್ಯೇವ ಸತ್ಯಮೇವꣳ ಸೋಮ್ಯ ಸ ಆದೇಶೋ ಭವತೀತಿ || ೬ ||**

**ಅ ||** ಅತ್ಯಲ್ಪವಾದ ಉಗುರುಕತ್ತಿಯನ್ನು ತಿಳಿದರೆ ಅದರ ಸಾದೃಶ್ಯದಿಂದ ಕಬ್ಬಿಣದಿಂದ ಮಾಡಿದ್ದೆಲ್ಲವೂ ತಿಳಿಯಲ್ಪಡುತ್ತದೆ. ಹೀಗೆ ಇರಲು ಸರ್ವೋತ್ತಮನಾದ ಶ್ರೀಹರಿಯನ್ನು ಸತ್ಯನು ಚಿದ್ರೂಪನು ಇತ್ಯಾದಿ ಪ್ರಕಾರ ತಿಳಿಯುತ್ತಿರಲು ಆ ಗುಣಸಾಮ್ಯದಿಂದ ಜೀವ ಜಡಮೊದಲಾದುದೆಲ್ಲವೂ ತಿಳಿಯಲ್ಪಡುತ್ತದೆಂದು ಸುತರಾಂ ಸಿದ್ಧಿಸುತ್ತದೆ, ಎಂಬ ಅಭಿಪ್ರಾಯದಿಂದ **ಯೇನಾಶ್ರುತಂ** ಇತ್ಯಾದಿಗಳನ್ನು ಹೇಳಿರುವರು. (ಪ್ರಧಾನಜ್ಞಾನದಿಂದ ಅಪ್ರಧಾನವಾದ ವಸ್ತುವಿನ ಜ್ಞಾನಫಲವು ಆಗುತ್ತದೆಂಬಲ್ಲಿ ಇನ್ನೊಂದು ದೃಷ್ಟಾಂತ ಹೇಳುತ್ತಾರೆ —)............ **ಕಾರ್ಷ್ಣಾಯಸಂ** ಎಂಬ ಸಂಸ್ಕೃತಶಬ್ದವೇ ಸತ್ಯವು. ನಿತ್ಯವು. ಬೇರೆ ಭಾಷಾಶಬ್ದಗಳು ಅನಿತ್ಯಗಳು. ಹೀಗೆಯೇ **ಯೇನಾಶ್ರುತಂ ಶ್ರುತಂ ಭವತಿ** ಎಂಬ ಉಪದೇಶವು.

**ವಿ ||** (I) **ವಾಚಾರಂಭಣಂ** ಮೊದಲಾದ ಮೂರು ದೃಷ್ಟಾಂತಗಳು, ಲೋಹಮಣಿ ದೃಷ್ಟಾಂತ ಒಂದು, ಹೀಗೆ ನಾಲ್ಕು ದೃಷ್ಟಾಂತಗಳು ಒಂದೇ ಅರ್ಥದಲ್ಲಿ ಏತಕ್ಕೆ ಎಂದರೆ— ತತ್ತ್ವವನ್ನು ತಿಳಿಯುವುದು ಪ್ರಯಾಸಸಾಧ್ಯವಾಗಿರುವುದರಿಂದ ಅನೇಕ ದೃಷ್ಟಾಂತಗಳನ್ನು ಹೇಳಿರುವರು. || ೬ ||

**ಹೀ**— ಆಗ ಮಗನು ಹೇಳುತ್ತಾನೆ —

**ಉ. || ನ ವೈ ನೂನಂ ಭಗವಂತಸ್ತ ಏತದವೇದಿಷುರ್ಯದ್ಧ್ಯೇತದವೇದಿಷ್ಯನ್ಕಥಂ ಮೇ ನಾವಕ್ಷ್ಯನ್ನಿತಿ ಭಗವಾಂಸ್ತ್ವೇವಮೇತದ್ಬ್ರವೀತ್ವಿತಿ ತಥಾ ಸೋಮ್ಯೇತಿ ಹೋವಾಚ || ಇತಿ ಪ್ರಥಮಃ ಖಂಡಃ || ೮-೧ || || ೭ ||**

**ಅ ||** ಪೂಜಾರ್ಹರಾದ ಆ ನನ್ನ ಗುರುಗಳು ನಿಶ್ಚಿತವಾಗಿಯೂ ನೀವು ಹೇಳಿದ ಏಕವಿಜ್ಞಾನರೂಪ ತತ್ತ್ವವನ್ನು ತಿಳಿಯಲೇ ಇಲ್ಲ. ಏಕೆಂದರೆ —ಅವರು ಈ ಪ್ರಮೇಯವನ್ನು ತಿಳಿದಿದ್ದರೆ ಪ್ರಿಯಶಿಷ್ಯನಾದ ನನಗೆ ಹೇಗೆ ಹೇಳದೆ ಇರುತ್ತಿದ್ದರು? ಅದುಕಾರಣ ನೀವೇ ನನಗೆ ವಾಚಾರಂಭಣ ದೃಷ್ಟಾಂತದಿಂದ ಶ್ರೀಹರಿಗೆ ಹೇಳಿದ ಪ್ರಾಧಾನ್ಯ ಮೊದಲಾದುದನ್ನು ವಿಶೇಷಾಕಾರವಾಗಿ ಉಪದೇಶಿಸಿರಿ ಎಂದು ಪ್ರಾರ್ಥಿಸಿದನು ಆಗ ತಂದೆಯು ಹಾಗೆಯೇ ಆಗಲಿ ಎಂದು ಹೇಳಿದನು. || ೮—೧ || || ೭ ||

**ಹೀ**—೧೨-೨೪ ವರ್ಷ ಪರ್ಯಂತ ಶ್ವೇತಕೇತುವು ಎಲ್ಲಾವೇದಗಳನ್ನು ಕಲಿತು ತಂದೆಯ ಬಳಿಗೆ ಬಂದನೆಂದು ಹೇಳಿದ್ದು ಅಯುಕ್ತವು. ಏಕೆಂದರೆ —**ಸರ್ವಾನ್ ವೇದಾನ್ ಶ್ವೇತಕೇತುರಧೀತ್ಯ ದ್ವಾದಶಾಬ್ದಕಃ | ಪಿತುಃ ಸಮೀಪಮೇಯಾಯ** ಇದುಮೊದಲಾದ ಭಾರತವಾಕ್ಯದಲ್ಲಿ ಷಡಂಗವೇದಗಳನ್ನು ಪೂರ್ಣ ಕಲಿತು ಮರಳಿಬಂದ ಶ್ವೇತಕೇತುವಿಗೆ ಹುಟ್ಟಿದಂದಿನಿಂದಲೇ ೧೨ ವರ್ಷವೆಂದು ತೋರುತ್ತದೆ, ಎಂದರೆ ಅದರ ಅಭಿಪ್ರಾಯವನ್ನು ಹೇಳುತ್ತಾರೆ—

**ಭಾ. || ಓಂ || ಅಧೀತ್ಯಬ್ದದ್ವಾದಶತ್ವಾದ್ದ್ವಾದಶಾಬ್ದ ಇತೀರಿತಃ | ಶ್ವೇತಕೇತುರ್ಭಾರತೇ ತು ನೋತ್ಪತ್ತಿದ್ವಾದಶತ್ವತಃ || ಇತಿ ವಾಕ್ಯನಿರ್ಣಯೇ || ೧ ||**

**ಅ ||** ಷಡಂಗವೇದಗಳನ್ನು ಕಲಿತು ಮರಳಿಬಂದ ಶ್ವೇತಕೇತುವಿಗೆ ಅಧ್ಯಯನಸಂವತ್ಸರಗಳು ಹನ್ನೆರಡು ಆದಪ್ರಯುಕ್ತ (ಅಂದರೆ—೧೨ ಸಂವತ್ಸರ ಗುರುಗಳ ಮನೆಯಲ್ಲಿ ಕಲಿತಪ್ರಯುಕ್ತ) ಭಾರತದಲ್ಲಿ ದ್ವಾದಶಾಬ್ದ (೧೨ ವಯಸ್ಸುಳ್ಳವನು) ನೆನಿಸುತ್ತಾನೆ. ಹುಟ್ಟಿದಂದಿನಿಂದ ೧೨ ಸಂವತ್ಸರವುಳ್ಳವನು ಎಂದು ಭಾರತದಲ್ಲಿ ಹೇಳಿದ್ದಲ್ಲ. (ಆದುದರಿಂದಲೇ **ದ್ವಾದಶವರ್ಷ ಉಪೇತ್ಯ ಚತುರ್ವಿಂಶತಿವರ್ಷಃ** ಎಂದು **ಹೇಳಿದೆ** ) || ೧ ||

ಪೀ— **ಯಥಾ ಸೋಮ್ಯ** ಇತ್ಯಾದಿಗಳಿಗೆ ಮಾಯಾವಾದಿಗಳು ಹೀಗೆ ಅರ್ಥ ಹೇಳುತ್ತಾರೆ—**ಸರ್ವಂ ಖಲ್ವಿದಂ ಬ್ರಹ್ಮ** ಎಂಬುವುದರಿಂದ ಜಗತ್ತೆಲ್ಲವೂ ಪರಬ್ರಹ್ಮಸ್ವರೂಪವು ಎಂದು ಹೇಳಿದೆ. ಅದು ಹೇಗೆಂದರೆ—**ತಜ್ಜಲಾನಿತಿ ಶಾಂತ ಉಪಾಸೀತ** ಪರಬ್ರಹ್ಮನಿಂದ ಹುಟ್ಟಿದ್ದು, ಪರಬ್ರಹ್ಮನಲ್ಲಿ ಲಯ ಹೊಂದತಕ್ಕುದು, ಅವನಿಂದಲೇ ಚೇಷ್ಟೆಮಾಡತಕ್ಕುದು, ಎಂದು ಉಪಾಸನೆ ಮಾಡಬೇಕು. ಇಲ್ಲಿ ಸಮಸ್ತ ಪ್ರಪಂಚಕ್ಕೂ ಬ್ರಹ್ಮನು ಉಪಾದಾನಕಾರಣನು. ಅಂದರೆ—ಬ್ರಹ್ಮನೇ ಜಗದ್ರೂಪನಾಗಿ ಪರಿಣಾಮ ಹೊಂದಿದವನು, ಜಗತ್ತೂ ಬ್ರಹ್ಮನಲ್ಲಿ ಆರೋಪಿತವು, ಬ್ರಹ್ಮ ಹೊರತು ಜಗತ್ತು ಇಲ್ಲ, ಎಂದು ಹೇಳಿದೆ. ಮತ್ತು ಒಬ್ಬ ಜ್ಞಾನಿಯು ಊಟಮಾಡಿದರೆ—ಎಲ್ಲಾ ಜಗತ್ತು ಸಂತೋಷಗೊಳ್ಳುತ್ತದೆ, ಎಂದು ಸಮಸ್ತ ಪ್ರಾಣಿಗಳೊಳಗಣ ಆತ್ಮರಿಗೆ ಐಕ್ಯ ಹೇಳಿದೆ. ಅವೆರಡನ್ನು ವಿಸ್ತರಿಸಿ ಹೇಳಲಿಕ್ಕೆ ಈ ಎಂಟನೇ ಅಧ್ಯಾಯವು ಆರಂಭವಾಗಿದೆ. ಅದರಲ್ಲಿ ಶ್ವೇತಕೇತುವಿಗೆ ಉದ್ದಾಲಕರು ಬ್ರಹ್ಮಜ್ಞಾನದಿಂದ ಸರ್ವವಸ್ತುಗಳ ಜ್ಞಾನವೂ ಆಗುತ್ತದೆಂದರು. ಆಗ ಶ್ವೇತಕೇತುವು ಒಬ್ಬನ ಜ್ಞಾನದಿಂದ ಇನ್ನೊಬ್ಬನ ಜ್ಞಾನವು ಎಲ್ಲಿಯೂ ತೋರಿಬಾರದಿರುವುದರಿಂದ ಇದು ಹೇಗೆ ಕೂಡುತ್ತದೆಂದು ಆಕ್ಷೇಪಿಸಿದನು ಆಗ ಉದ್ದಾಲಕರು *ಕಾರ್ಯಕ್ಕೂ ಉಪಾದಾನಕಾರಣಕ್ಕೂ ಭೇದವಿಲ್ಲ, ಎಂಬ ಅಭಿಪ್ರಾಯದಿಂದ ಮೃತ್ಪಿಂಡಾದಿ ದೃಷ್ಟಾಂತಗಳನ್ನು ಶ್ವೇತಕೇತುವಿಗೆ ಹೇಳಿರುವರು. ಒಂದು ಮಣ್ಣಿನ ಹೆಂಟೆಯನ್ನು ತಿಳಿದಾಗ ಬೇರೆ ಎಲ್ಲಾ ಮಣ್ಣಿನ ವಿಕಾರವಾದ ಮಡಿಕೆ ಮೊದಲಾದುದೆಲ್ಲವೂ ತಿಳಿಯಲ್ಪಡುತ್ತದೆ. ಕಾರ್ಯಕ್ಕೂ ಕಾರಣಕ್ಕೂ ಅಭೇದವೆಂದಾದರೆ ಇದು ಕಾರಣವು, ಇದು ಇದರ ವಿಕಾರವು ಎಂಬುದು ಹೇಗೆ? ಎಂದರೆ—ವಾಚಾರಂಭಣಂ=ಮಾತಿನಿಂದ ಹೇಳಲಿಕ್ಕೆ ಮಾತ್ರ ಇದೆ, ವಿಕಾರವಸ್ತು ಹೆಸರಿಗೆ ಮಾತ್ರ ಪಾರಮಾರ್ಥಿಕವಾಗಿ ವಿಕಾರಹೊಂದಿರತಕ್ಕ ವಸ್ತುವೇ ಇಲ್ಲ ಮೃತ್ತಿಕಾ ಎಂಬುದೇ ಸತ್ಯವಸ್ತು ಇದೆ, ಎಂದು ಅದ್ವೈತಿಗಳು ಹೇಳುತ್ತಾರೆ—ಅದು ಯುಕ್ತವಲ್ಲ. ಏಕೆಂದರೆ—**ಸರ್ವಂ ಖಲ್ವಿದಂ** ಎಂಬುದಕ್ಕೆ ಅದ್ವೈತಿಗಳು ಹೇಳಿದ ಅರ್ಥವಾಗುವುದಿಲ್ಲವೆಂದು ಮೊದಲೇ ಪುಟ ೧೬೭ ರಲ್ಲಿ ಹೇಳಿರುತ್ತದೆ. ಎಲ್ಲಾ ವಸ್ತುಗಳೂ ಪರಬ್ರಹ್ಮನ ಅಧೀನದಲ್ಲಿರತಕ್ಕವು ಎಂದು ಅರ್ಥವಾಗಬೇಕೆಂದು ಮೊದಲೇ ಹೇಳಿರುತ್ತದೆ ಮತ್ತು ಪರಬ್ರಹ್ಮನ ಜ್ಞಾನವು ಬಂದಾಗ ಬ್ರಹ್ಮನು ಹೊರತು ಬೇರೆ ಜಗತ್ತು ಇಲ್ಲವೆಂದಾಗುತ್ತದೆ ಎಂಬ ಅರ್ಥವು ಅಯುಕ್ತವು. ಅಧಿಷ್ಠಾನದ ಯಥಾರ್ಥ ಜ್ಞಾನವು ಬಂದಾಗ § ಆರೋಪಿತವಾದ ಜಗತ್ತಿನ ಜ್ಞಾನವು ಎಲ್ಲಿಯೂ ತೋರಿ ಬರಲಿಲ್ಲ. ಅದುಕಾರಣ ಸಾದೃಶ್ಯ, ಪ್ರಾಧಾನ್ಯಗಳಿಂದಲೇ ಒಂದು ಪ್ರಧಾನವಸ್ತುವಿನ ಜ್ಞಾನವು ಬಂದಾಗ ಅಪ್ರಧಾನವಾದ ಸಮಸ್ತ ವಸ್ತುಗಳ ಜ್ಞಾನವು ಬರುತ್ತದೆ. ಅದರಲ್ಲಿ ಸಾದೃಶ್ಯವಿಷಯದಲ್ಲಿ ದೃಷ್ಟಾಂತ ಹೇಳಲಿಕ್ಕೆ **ಯಥಾ ಸೋಮ್ಯ** ಇದುಮೊದಲಾದುದು ಈ ಮೂರು ವಾಕ್ಯಗಳು ಪ್ರಾಧಾನ್ಯವಿಷಯದಲ್ಲಿ ದೃಷ್ಟಾಂತ ಹೇಳುವುದಕ್ಕಾಗಿ **ವಾಚಾರಂಭಣ** ಮೂರು ವಾಕ್ಯಗಳು. ಹಾಗಾದರೆ—ಮೂರು ದೃಷ್ಟಾಂತಗಳನ್ನು ಹೇಳಿದ್ದು ಏಕೆಂದರೆ ಜ್ಞಾನವು ದೃಢವಾಗುವುದಕ್ಕಾಗಿ. ದಾರ್ಷ್ಟಾಂತಿಕದಲ್ಲಿ ಅನೇಕ ಅಭೇದವು ತಿಳಿಯುವುದಕ್ಕಾಗಿ ಹೇಳಿದ್ದೆಂದರೆ—ಕಾರ್ಯಕಾರಣಗಳಿಗೆ ಅಭೇದವೆಂಬುದು ಒಂದರಿಂದಲೇ ತಿಳಿಯುವುದರಿಂದ ಇದು ವ್ಯರ್ಥವೇ. ಮತ್ತು ಕಾರ್ಯಕಾರಣಗಳಿಗೆ ಅಭೇದವೆಂಬಲ್ಲಿ ಪ್ರಮಾಣವಿಲ್ಲ ಮತ್ತು ಪ್ರಮಾಣವಿರೋಧವೂ ಇದೆ, ಎಂಬ ಅಭಿಪ್ರಾಯದಿಂದ **ಯಥಾ ಸೋಮ್ಯ** ಇದುಮೊದಲಾದ ಮೂರು ದೃಷ್ಟಾಂತ ವಾಕ್ಯಗಳಲ್ಲಿಯೂ ಅಭಿಪ್ರಾಯ ವಿಶೇಷವಿದೆ ಎಂಬಲ್ಲಿ ಪ್ರಮಾಣ ಹೇಳುತ್ತಾರೆ—

---

* ಮಣ್ಣಿನಿಂದ ಮಡಿಕೆ ಮಾಡುವಾಗ ಮಡಿಕೆ ಕಾರ್ಯವು, ಮಣ್ಣು ಉಪಾದಾನವು. ಹಾಗೆಯೇ ಬಟ್ಟೆ ಕಾರ್ಯವು. ನೂಲು ಉಪಾದಾನ ಕಾರಣವು ಅಂದರೆ—ತಾನೇ ರೂಪಾಂತರವನ್ನು ಹೊಂದಿ ಕಾರಣವಾದುದು.

§ ಶುಕ್ತಿಯನ್ನು ನೋಡಿ ರಜತವೆಂದು ಜ್ಞಾನವು ಬರುವಾಗ ಅಧಿಷ್ಠಾನ-ಶುಕ್ತಿ (ಮುತ್ತಿನ ಚಿಪ್ಪು) ಆರೋಪಿತ ರಜತ (ಬೆಳ್ಳಿ) ಚಿಪ್ಪಿಯನ್ನು ಕಂಡು ಬೆಳ್ಳಿಯೆಂದು ತಿಳಿಯುವುದು ಭ್ರಮೆ ಚಿಪ್ಪಿಯನ್ನು ಚಿಪ್ಪಿಯೆಂದೇ ತಿಳಿದಾಗ ಬೆಳ್ಳಿಯೆಂಬ ಜ್ಞಾನವು ಎಂದಿಗೂ ಬರಲಾರದು ಅದರಂತೆ ಅಧಿಷ್ಠಾನನಾದ ಬ್ರಹ್ಮನ ಜ್ಞಾನವು ಬಂದಾಗ ಆರೋಪಿತವಾದ ಜಗತ್ತು ಎಂಬ ಜ್ಞಾನವು ಬರಲಿಕ್ಕಿಲ್ಲ

ಭಾ. ॥ (೧) ಯಥಾ ಮೃತ್ಪಿಂಡವಿಜ್ಞಾನಾತ್ಸಾದೃಶ್ಯಾದೇವ ಮೃಣ್ಮಯಾಃ । ವಿಜ್ಞಾಯಂತೇ ತಥಾ ವಿಷ್ಣೋಃ ಸಾದೃಶ್ಯಾಜ್ಜಗದೇವ ಚ ॥ (೨) ಯಥಾ ಸ್ವರ್ಣಸ್ಯ ವಿಜ್ಞಾನಾತ್ ಸರ್ವೇ ಲೋಹಮಯಾಸ್ತಥಾ । ಪ್ರಾಧಾನ್ಯಾದ್ವಿಷ್ಣುವಿಜ್ಞಾನಾದ್ವಿಜ್ಞಾತಂ ಸ್ಯಾಜ್ಜಗತ್ಸದಾ॥ (೩) ಅತ್ಯಲ್ಪೇಽಪಿ ಹಿ ವಿಜ್ಞಾತೇ ಸದೃಶೇ ತಾದೃಶಂ ಬಹು । ಜ್ಞಾಯತೇ ನಖಕೃಂತನ್ಯಾ ಯಥಾ ಸರ್ವಮಯೋಮಯಂ ॥ ಕಿಮು ವಿಷ್ಣೋರ್ಬಹೋರ್ಜ್ಞಾನಾದತ್ಯಲ್ಪಂ ಜಗದೀದೃಶಂ । ಅನನ್ಯಾಧೀನವಿಜ್ಞಾನಾದನ್ಯಾಧೀನಂ ತಥೈವ ಚ । ಮೃದಯೋಲೋಹ ನಾಮ್ನಾಂ ಹಿ ಜ್ಞಾನಾತ್ಸಾಂಕೇತಿಕಂ ಯಥಾ ॥ ಇತ್ಯಾದಿ ಸಾಮಸಂಹಿತಾಯಾಂ ॥ ೨ ॥

ಅ ॥ (೧) ಒಂದು ಮಣ್ಣಿನ ಹೆಂಟೆಯನ್ನು ತಿಳಿದುದರಿಂದ ಮೃತ್ತ್ವ (ಮಣ್ಣಿನ ಜಾತೀಯ) ಮೊದಲಾದ ಸಾದೃಶ್ಯ ಮಾತ್ರದಿಂದಲೇ ಮಣ್ಣಿನ ವಿಕಾರಗಳಾದ ಎಲ್ಲಾ ವಸ್ತುಗಳೂ ಹೇಗೆ ತಿಳಿಯಲ್ಪಡುತ್ತವೋ? ಹಾಗೆಯೇ ಶ್ರೀಹರಿಯು ಸದ್ರೂಪನು ಎಂದು ತಿಳಿಯಲ್ಪಡುತ್ತಿರಲು, (ವಿಷ್ಣುವು ಇದ್ದಾನೆಂಬುವಲ್ಲಿ ಪ್ರಮಾಣವಿದೆ, ಜಗತ್ತೂ ಇದೆ ಎಂಬಲ್ಲಿಯೂ ಪ್ರಮಾಣವಿದೆ ಹೀಗೆ) ಪ್ರಾಮಾಣಿಕತ್ವ (ಪ್ರಮಾಣ ಪ್ರಸಿದ್ಧಿ) ಸಾದೃಶ್ಯದಿಂದ ಜಗತ್ತು ತಿಳಿಯಲ್ಪಡುತ್ತದೆ. (ಸದೃಶವಾದ ಒಂದು ವಸ್ತುವಿನ ಜ್ಞಾನಮಾತ್ರದಿಂದ ಕೇವಲ ಸದೃಶವಾದ ಇನ್ನೊಂದು ವಸ್ತುವಿನ ಜ್ಞಾನವು ಹುಟ್ಟುತ್ತದೆಂಬಲ್ಲಿ ಒಂದನೇ ದೃಷ್ಟಾಂತವು) (೨) ಸುವರ್ಣವು ಪ್ರಧಾನವಾದುದರಿಂದ ಅದನ್ನು ತಿಳಿಯೋಣದರಿಂದ ಲೋಹದಿಂದ ಮಾಡಿದ ಪದಾರ್ಥಗಳೆಲ್ಲವೂ ಲೋಹಜಾತೀಯಗಳೆಂದು ಹೇಗೆ ತಿಳಿಯಲ್ಪಡುತ್ತವೋ ಹಾಗೆಯೇ ವಿಷ್ಣುವಿಗೆ ಪ್ರಾಧಾನ್ಯವಿದ್ದುದರಿಂದ ಪ್ರಧಾನನಾದ ವಿಷ್ಣುವಿನ ಜ್ಞಾನದಿಂದ ಜಗತ್ತು ತಿಳಿಯಲ್ಪಡುತ್ತದೆ. ಅಂದರೆ— ವಿಷ್ಣುವು ಜ್ಞಾನಾನಂದಾದಿರೂಪನು ಎಂದು ತಿಳಿದುದರಿಂದ ಚೇತನತ್ವಸಾದೃಶ್ಯದಿಂದ ಜೀವರೂ ಜ್ಞಾನಾನಂದಾದಿ ರೂಪರೆಂದು ತಿಳಿಯಲ್ಪಡುತ್ತಾರೆ. (ಏವಂಚ ಪ್ರಧಾನವಾದ ಸದೃಶವಸ್ತುವಿನ ಜ್ಞಾನದಿಂದ ಅಪ್ರಧಾನವಾದ ಸದೃಶವಸ್ತುಗಳ ಜ್ಞಾನವಾಗುತ್ತದೆಂಬಲ್ಲಿ ಇದು ದೃಷ್ಟಾಂತವು.) (ಚೇತನತ್ವವೆಂಬ ಹೇತುವಿನಿಂದ ಈಶ್ವರನನ್ನು ದೃಷ್ಟಾಂತೀಕರಿಸಿಕೊಂಡು ಜ್ಞಾನಾನಂದಾದಿಗಳನ್ನು ಹೇಳಲಾಗುವುದಿಲ್ಲ. ಏಕೆಂದರೆ— ಅದೇ ಹೇತುವಿನಿಂದ ಅಲ್ಪಾನಂದಾದಿಗಳಿರುವವೆಂದೂ ಅನುಮೇಯಿಸಬಹುದು, ಎಂದರೆ— ಶಾಸ್ತ್ರಾದಿಗಳ ಬಾಧವಿಲ್ಲದಿರುವ ವಿಷಯದಲ್ಲಿಯೇ ಅನುಮಾನವು ಪ್ರವೃತ್ತವಾಗುವುದು.) (೩) (ಇನೇ ದೃಷ್ಟಾಂತದಲ್ಲಿ ಅಭಿಪ್ರಾಯವಿಶೇಷ ಹೇಳುತ್ತಾರೆ—) ಅತ್ಯಲ್ಪವಾದ ಸದೃಶವಾದ ವಸ್ತುವು ತಿಳಿಯಲ್ಪಡುತ್ತಿರಲು ಅಂತಹ ಅದಕ್ಕೆ ಸದೃಶವಾದ ಬಹುವಸ್ತುವು ತಿಳಿಯಲ್ಪಡುತ್ತದೆ. ಉಗುರುಕಡ್ಡಿಯನ್ನು ತಿಳಿದುದರಿಂದ ಕಬ್ಬಿಣದಿಂದ ಮಾಡಿದ ಎಲ್ಲಾ ವಸ್ತುವೂ ಕಬ್ಬಿಣಜಾತಿಯದ್ದೆಂದು ತಿಳಿಯಲ್ಪಡುತ್ತದೆ (ವಿಷ್ಣುವು ಗುಣಪೂರ್ಣ ಸ್ವರೂಪನಾದುದರಿಂದ ಜಗತ್ತು ಅತ್ಯಲ್ಪವಾದುದರಿಂದಲೂ ಈ ದೃಷ್ಟಾಂತವು ಪ್ರಕೃತಕ್ಕೆ ಉಪಯುಕ್ತವಲ್ಲ, ಎಂದರೆ—) ಗುಣಪೂರ್ಣನಾದ ವಿಷ್ಣುವಿನ ಜ್ಞಾನದಿಂದ ಅತ್ಯಲ್ಪವಾದ ಜಗತ್ತು ಹೀಗೆಯೇ ಆಗಿದೆ ಎಂದು ಸುತರಾಂ ಸಿದ್ಧವು (೪) (ವಾಚಾರಂಭಣಂ ಇದುಮೊದಲಾದ ಮೂರು ವಾಕ್ಯಗಳಿಗೆ ತಾತ್ಪರ್ಯ ಹೇಳುತ್ತಾರೆ—) ಪರಾಧೀನನಾಗದೆ ಸರ್ವಸ್ವತಂತ್ರನಾದ ವಿಷ್ಣುವಿನ ಜ್ಞಾನದಿಂದ ವಿಷ್ಣುವಿನ ಅಧೀನದಲ್ಲಿರುವ ಪರತಂತ್ರವಾದ ಜಗತ್ತಿನ ಜ್ಞಾನವು ಬಂದಂತೆ ಆಗುತ್ತದೆ. ಮೃತ್ತಿಕಾ ಅಯಃ (ಕಬ್ಬಿಣ) ಲೋಹಗಳ ಜ್ಞಾನದಿಂದ ಸಾಂಕೇತಿಕ ಭಾಷಾಶಬ್ದಗಳ ಜ್ಞಾನವು ಬಂದರೆ ಹೇಗೆ ಆಗುತ್ತದೋ, ಹಾಗೆಯೇ. ಇದುಮೊದಲಾದುದು ಸಾಮಸಂಹಿತೆಯಲ್ಲಿದೆ.

ವಿ ॥ ವಾಚಾರಂಭಣ ವಾಕ್ಯವನ್ನು ಮೂರಾವರ್ತಿ ಏಕೆ ಹೇಳಿದ್ದು ಎಂದರೆ— ಮೃತ್ಪಿಂಡಾದಿ ಮೂರು ದೃಷ್ಟಾಂತಗಳನ್ನು ಅವಶ್ಯವಾಗಿ ಹೇಳಬೇಕಾದುದರಿಂದ ಅದಕ್ಕಾಗಿ ವಾಚಾರಂಭಣ ವಾಕ್ಯವನ್ನು ಮೂರಾವರ್ತಿ ಹೇಳಿದ್ದು. ॥ ೬ ॥

**ಟೀ**—ಲೋಹಮಣಿ ಶಬ್ದಕ್ಕೆ ಸುವರ್ಣವೆಂದು ಅರ್ಥ ಹೇಳಿರುತ್ತದೆ. ಅದಕ್ಕೆ ಕೋಶ ಹೇಳುತ್ತಾರೆ—

**ಭಾ. ॥ (೧) ಸ್ವರ್ಣಂ ಲೋಹಮಣಿಶ್ಚೈವ ಪುರಟಂ ಚಾಭಿಧೀಯತೇ । ಇತಿ ಶಬ್ದನಿರ್ಣಯೇ ॥ (೨) ವಿಕಾರತ್ವವಿವಕ್ಷಾಯಾಮೇಕಪಿಂಡಮಣಿಶಬ್ದಾ ವ್ಯರ್ಥಾಃ ಸ್ಯುಃ ॥ ೩ ॥**

**ಅ** ॥ (೧) ಸುವರ್ಣವೇ ಲೋಹಮಣಿ ಎಂದೂ, ಪುರಟ ಎಂದೂ, ಹೇಳಲ್ಪಡುತ್ತದೆ, ಎಂದು ಶಬ್ದನಿರ್ಣಯದಲ್ಲಿದೆ. (೨) **ಯಥಾ ಸೋಮ್ಯ** ಇತ್ಯಾದಿಗಳಿಗೆ ಪ್ರಮಾಣ ಹೇಳಿ ನಮ್ಮ ರೀತಿಯಾಗಿ ಅರ್ಥವನ್ನು ವಿವರಿಸಿ ಪರರು ಹೇಳಿದ ಅರ್ಥವು ಅಯುಕ್ತವೆನ್ನುತ್ತಾರೆ—) **ಯಥಾ ಸೋಮ್ಯ** ಇತ್ಯಾದಿ ವಾಕ್ಯಗಳಲ್ಲಿ ಮೃಣ್ಮಯಾದಿಗಳು ಮೃತ್ತಿಕಾದಿಗಳ ವಿಕಾರಗಳೆಂದು ಇಟ್ಟುಕೊಂಡರೆ ಏಕ ಪಿಂಡ ಮಣಿಶಬ್ದಗಳು ವ್ಯರ್ಥಗಳು. (ಅವುಗಳಿಗೆ ಅರ್ಥಗಳಿಲ್ಲ. ವಿರುದ್ಧಗಳಾದ ಅರ್ಥಗಳು ಬರುವವು.)

**ವಿ** ॥ (1) ಮೃದಾ **ವಿಜ್ಞಾತಯಾ ಮೃಣ್ಮಯಂ ವಿಜ್ಞಾತಂ ಸ್ಯಾತ್** ಮಣ್ಣನ್ನು ತಿಳಿದರೆ ಮಣ್ಣಿನಿಂದ ಮಾಡಿದ್ದು ತಿಳಿಯಲ್ಪಡುತ್ತದೆ **ಲೋಹೇನ ವಿಜ್ಞಾತೇನ ಲೋಹಮಯಂ ವಿಜ್ಞಾತಂ ಸ್ಯಾತ್** ಲೋಹವನ್ನು ತಿಳಿದರೆ ಲೋಹದಿಂದ ಮಾಡಿದ್ದೆಲ್ಲವೂ ತಿಳಿಯಲ್ಪಡುತ್ತದೆ. **ಕೃಷ್ಣಾಯಸೇನ ವಿಜ್ಞಾತೇನ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್** ಕಬ್ಬಿಣವನ್ನು ತಿಳಿದರೆ ಕಬ್ಬಿಣದಿಂದ ಮಾಡಿದ್ದೆಲ್ಲವೂ ತಿಳಿಯಲ್ಪಡುತ್ತದೆ, ಎಂದಿಷ್ಟೇ ಸಾಕಾಗುವುದು. ಈ ಮೂರು ವಾಕ್ಯಗಳಲ್ಲಿದ್ದ **ಏಕ** ಶಬ್ದಗಳಿಗೂ, ಪಿಂಡ, ಮಣಿ ನಖನಿಕೃಂತನ ಶಬ್ದಗಳಿಗೂ ಮೂರು ವಾಕ್ಯಗಳಲ್ಲಿದ್ದ **ಸರ್ವ** ಶಬ್ದಗಳಿಗೂ ಅರ್ಥವಿಲ್ಲವೆಂದಾಗುವುದು. ಮತ್ತು ಎಲ್ಲಾ ಮೃಣ್ಮಯಾದಿಗಳೂ ಒಂದೇ ಮೃತ್ಪಿಂಡದಿಂದ ಮಾಡಿದ್ದಲ್ಲವಾದ ಕಾರಣ ಒಂದು ಮೃತ್ಪಿಂಡದ ವಿಕಾರವಲ್ಲ. ಅದು ಕಾರಣ ಏಕೇನ ಎಂದು ಹೇಳಿದ್ದಕ್ಕೆ ವಿರುದ್ಧವಾದ ಅರ್ಥವು ಬರಬೇಕಾಗುವುದು (2) ಮತ್ತು ಬ್ರಹ್ಮನು ಜಗದಾರೋಪಕ್ಕೆ ಅಧಿಷ್ಠಾನನು (ಬ್ರಹ್ಮನಲ್ಲಿ ಜಗತ್ತು ಆರೋಪಿತವು.) ಎಂಬಲ್ಲಿ ಇದು ದೃಷ್ಟಾಂತವಾಗಲಾರದು. ಏಕೆಂದರೆ ಯಾವುದಾದರೂ ಒಂದು ಮೃಣ್ಮಯವೂ ಒಂದು ಮೃತ್ಪಿಂಡದಲ್ಲಿ ಆರೋಪಿತವಲ್ಲ. ಮತ್ತು ಕಾರಣ ಹೊರತು ಕಾರ್ಯವಿಲ್ಲೆಂದು ಅರ್ಥವು ಇಷ್ಟವಾದರೆ ಮೃಣ್ಮಯವು ಮೃದ್ರೂಪವಾಗಿ ಇದ್ದಂತೆಯೇ ಜಗತ್ತು ಪರಬ್ರಹ್ಮರೂಪವಾಗಿ ಇರಬೇಕಾಗುವುದು. ನಮ್ಮ ಮತದಲ್ಲಿ ಸಾದೃಶ್ಯವೆಂದು ಅರ್ಥವನ್ನು ಇಟ್ಟುಕೊಂಡದರಿಂದ ಏಕಶಬ್ದ ಮತ್ತು ಸರ್ವಶಬ್ದಗಳು ಸಾರ್ಥಕಗಳೇ ಆಗಿವೆ. ಹೇಗೆಂದರೆ—ಒಂದು ಮೃತ್ಪಿಂಡದ ಸಾದೃಶ್ಯದಿಂದ ಮಣ್ಣಿನಿಂದ ಮಾಡಿದ ಎಲ್ಲಾ ವಸ್ತುಗಳೂ ಹಾಗೆಯೇ ಎಂದು ತಿಳಿಯಲ್ಪಡುತ್ತವೆ ಅದಕ್ಕಾಗಿ **ಏಕ** ಶಬ್ದ, **ಸರ್ವ** ಶಬ್ದಗಳು ಸಾರ್ಥಕಗಳಾಗಿವೆ. ಮತ್ತು **ಪಿಂಡ**ಶಬ್ದ ಕೊಡದಿದ್ದರೆ-ಒಂದು ಮಣ್ಣಿನ ಸಾದೃಶ್ಯವು ಇನ್ನೊಂದು ಮಣ್ಣಿನಿಂದ ಮಾಡಿದ ವಸ್ತುವಿನಲ್ಲಿದೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಸಂಬಂಧಿ ಪ್ರತಿ ಸಂಬಂಧಿಗಳು (ಅನುಯೋಗಿ ಪ್ರತಿಯೋಗಿಗಳು) ಬೇರೆ ಬೇರೆಯಾಗಿರಬೇಕು ಇಲ್ಲಿ ಒಂದೇ ರೀತಿಯಾಗಿ ಇವೆ. ಒಂದು ಮೃತ್ತ್ವವು (ಮಣ್ಣಿನ ಧರ್ಮವು) ಮೃಣ್ಮಯವಾದ ವಸ್ತುಗಳಲ್ಲಿಯೂ ಇದೆ. ಅದುಕಾರಣ ಅನುಯೋಗಿಯಲ್ಲಿದ್ದ ಧರ್ಮವೂ ಪ್ರತಿಯೋಗಿಯಲ್ಲಿದ್ದ ಧರ್ಮವೂ ಒಂದೇ ಆಗುವುದು ಆದಕಾರಣ ಮಣ್ಣಿನ ಜ್ಞಾನದಿಂದ ಮೃಣ್ಮಯಗಳ ಜ್ಞಾನವು ಬಾರದೇ ಹೋಗುವುದು. ಆದಕ್ಕಾಗಿ **ಪಿಂಡ** ಶಬ್ದ ಕೊಟ್ಟರೆ ಮೃತ್ತ್ವವು ಮೃಣ್ಮಯ ವಸ್ತುಗಳಲ್ಲಿದ್ದರೂ, ಪಿಂಡತ್ವವು ಮೃಣ್ಮಯ ವಸ್ತುಗಳಲ್ಲಿಲ್ಲ ಅದಕ್ಕಾಗಿ **ಪಿಂಡ** ಶಬ್ದವು ಆವಶ್ಯಕವೇ. ಮತ್ತು ಪ್ರತಿಯೋಗಿಯಾದ ಸುವರ್ಣಕ್ಕೆ ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿಯೇ **ಲೋಹಮಣಿ** ಎಂಬಲ್ಲಿ ಮಣಿಶಬ್ದವನ್ನು ಹೇಳಿದ್ದು. ಉಗುರು ಕಡ್ಡಿಯು ಅತ್ಯಲ್ಪವಾದುದು ಎಂದು ತಿಳಿಸುವುದಕ್ಕಾಗಿಯೇ **ನಖಕೃಂತನ** ಶಬ್ದವನ್ನು ಹೇಳಿದ್ದು. **ಮಣಿರ್ಮುಖಂ ಪ್ರಧಾನಂ ಚ** ಎಂಬ ಪ್ರಮಾಣದಿಂದ ಮಣಿಶಬ್ದಕ್ಕೆ ಪ್ರಾಧಾನ್ಯವೆಂಬ ಅರ್ಥವಿದೆ ಎಂದು ತಿಳಿಯುತ್ತದೆ. ನಖನಿಕೃಂತನಸ್ವರೂಪವು ಅತ್ಯಲ್ಪವಾದುದು. ॥ ೩ ॥

**ಟೀ**—ಹೀಗೆ **ಯಥಾ ಸೋಮ್ಯ** ಇತ್ಯಾದಿ ವಾಕ್ಯಗಳಿಗೆ ಪರರು ಹೇಳಿದ ಅರ್ಥವು ಕೂಡುವುದಿಲ್ಲ ವೆಂದು ಹೇಳಿದರು. ಈಗ **ವಾಚಾರಂಭಣಂ** ಇತ್ಯಾದಿ ಮೂರು ವಾಕ್ಯಗಳಿಗೆ ಪರರು ಹೇಳಿದ ಅರ್ಥವು ಸರ್ವಥಾ ಕೂಡುವುದಿಲ್ಲವೆನ್ನುತ್ತಾರೆ—

**ಭಾ. ॥ (೧) ಮೃತ್ತಿಕೇತಿ ಲೋಹಮಣಿರಿತಿ ಕಾರ್ಷ್ಣಾ(ಕೃಷ್ಣಾ)ಯಸಮಿತ್ಯತ್ರೇತಿಶಬ್ದಾ ನಾಮಧೇಯಶಬ್ದಾಶ್ಚ ವ್ಯರ್ಥಾಃ ಸ್ಯುಃ ॥ (೨) ವಿಕಾರಮಿಥ್ಯಾತ್ವವಿವಕ್ಷಾಯಾಂ ಮೃತ್ತಿಕೈವ ಸತ್ಯಂ ಲೋಹ ಏವ ಸತ್ಯಂ ಕಾರ್ಷ್ಣಾ(ಕೃಷ್ಣಾ)ಯಸಮೇವ ಸತ್ಯಮಿತ್ಯೇವ ಸ್ಯಾತ್ । ನ ತು ನಾಮಧೇಯಾದಿಶಬ್ದಾಃ ॥ ೪ ॥**

ಅ ॥ (೧) **ಮೃತ್ತಿಕೇತ್ಯೇವ ಸತ್ಯಂ, ಲೋಹಮಣಿರಿತ್ಯೇವ ಸತ್ಯಂ, ಕಾರ್ಷ್ಣಾಯಸಮಿತ್ಯೇವ ಸತ್ಯಂ** ಎಂಬಲ್ಲಿದ್ದ ಮೂರು ಇತಿ ಶಬ್ದಗಳೂ, ಈ ಮೂರು ವಾಕ್ಯಗಳಲ್ಲಿದ್ದ ಮೂರು **ನಾಮಧೇಯ** ಶಬ್ದಗಳೂ ವ್ಯರ್ಥಗಳು ಆಗುವುವು. (೨) (ಹೇಗೆಂದರೆ—) (ವಾಚಾರಂಭಣ ವಾಕ್ಯದಲ್ಲಿ) ವಿಕಾರಕ್ಕೆ ಮಿಥ್ಯಾತ್ವವನ್ನು ಇಟ್ಟುಕೊಂಡರೆ (1) **ವಾಚಾರಂಭಣಂ ವಿಕಾರೋ ಮೃತ್ತಿಕೈವ ಸತ್ಯಂ,** (2) **ವಾಚಾರಂಭಣಂ ವಿಕಾರೋ ಲೋಹಮಣಿರೇವ ಸತ್ಯಂ,** (3) **ವಾಚಾರಂಭಣಂ ವಿಕಾರಃ ಕಾರ್ಷ್ಣಾಯಸಮೇವ ಸತ್ಯಂ,** ಹಿಂದೆ ಹೇಳಬೇಕಿತ್ತು. ನಾಮಧೇಯ ಶಬ್ದಗಳೂ ಇತಿಶಬ್ದಗಳೂ ವ್ಯರ್ಥಗಳು (ಏಕೆಂದರೆ— **ನಾಮಧೇಯಂ** ಎಂಬುದಕ್ಕೆ ನಾಮ್ನೈವ ಕೇವಲಂ=ಕೇವಲ ಹೆಸರೇ, ಎಂದು ಅದ್ವೈತಿಗಳು ಅರ್ಥ ಹೇಳಿರುವುದರಿಂದ ವಾಚಾರಂಭಣಂ ಎಂಬುದರಿಂದ ಪುನರುಕ್ತವಾಗುತ್ತದೆ. (ಅಂದರೆ ನಾಮಧೇಯಂ ಎಂಬುದರಿಂದ ಹೇಳಿದುದನ್ನೇ ವಾಚಾರಂಭಣಂ ಎಂಬುದರಿಂದಲೂ ಹೇಳುವುದರಿಂದ ಒಂದರ್ಥವನ್ನು ಎರಡು ಸಲ ಹೇಳಿದಂತೆ ಆಗುವುದು )

ವಿ ॥ (1) ಮೃತ್ತಿಕಾಶಬ್ದವು ಶಬ್ದಪರವೆಂದು ಇಟ್ಟುಕೊಳ್ಳದೆ ಅಂದರೆ ಮೃತ್ತಿಕಾ ಎಂಬುದಕ್ಕೆ ಮೃತ್ತಿಕಾ ಶಬ್ದವು ಎಂದಿಟ್ಟುಕೊಳ್ಳದೆ ಅರ್ಥಪರವೆಂದು ಮಣ್ಣು ಎಂದು ಇಟ್ಟುಕೊಂಡರೆ ಇತಿಶಬ್ದವು ಬೇಕಾಗಿಯೇ ಇಲ್ಲ. ಇತಿಶಬ್ದವು ಪ್ರಕರಣದಿಂದ ಬಂದ ಅರ್ಥದ ವ್ಯತ್ಯಾಸವನ್ನು ಹೇಳುತ್ತದೆ ಹೇಗೆಂದರೆ— ಶಬ್ದಪ್ರಕರಣದಲ್ಲಿದ್ದ ಇತಿಶಬ್ದವು ಶಬ್ದವೆಂಬ ಅರ್ಥವನ್ನು ಹೇಳದೆ, ಶಬ್ದದ ಅರ್ಥವನ್ನು ಹೇಳುತ್ತದೆ. ಅರ್ಥಪ್ರಕರಣದಲ್ಲಿದ್ದ ಇತಿಶಬ್ದವು ಶಬ್ದವನ್ನು ಮಾತ್ರ ಹೇಳುತ್ತದೆ ಈ ಉಪನಿಷತ್ತು ಅರ್ಥಶಾಸ್ತ್ರವಾದುದರಿಂದ ಇತಿಶಬ್ದವಿಲ್ಲದೇನೆ ಪ್ರಕರಣದಿಂದಲೇ ಮೃತ್ತಿಕಾಶಬ್ದಕ್ಕೆ ಮಣ್ಣು ಎಂಬ ಅರ್ಥವು ಸಿದ್ಧಿಸುವಾಗ ಇತಿಶಬ್ದವು ವ್ಯರ್ಥವೇ ಆಗಬೇಕಾಗುವುದು. ನಮ್ಮ (ದ್ವೈತಿಗಳ) ಪಕ್ಷದಲ್ಲಿ ಇದು ಅರ್ಥಶಾಸ್ತ್ರವಾದುದರಿಂದ ಶಬ್ದ ಎಂಬ ಅರ್ಥವನ್ನು ತಿಳಿಸುವುದಕ್ಕಾಗಿ ಇತಿಶಬ್ದವು ಸಾರ್ಥಕವೇ ಆಗುತ್ತದೆ. (2) ಮತ್ತು ವಾಚಾರಂಭಣವಾಕ್ಯದಲ್ಲಿ ಮಿಥ್ಯಾತ್ವವನ್ನು ಹೇಳತಕ್ಕ ಶಬ್ದವಿಲ್ಲದಿರುವುದರಿಂದ ಈ ವಾಕ್ಯವು ವಿಕಾರಕ್ಕೆ ಮಿಥ್ಯಾತ್ವವನ್ನು ತಿಳಿಸುವುದು ಹೇಗೆ? ಮಿಥ್ಯಾತ್ವವನ್ನು ತಿಳಿಸುವುದು ವಾಚಾರಂಭಣ ಶಬ್ದವಿದೆ ಎಂದರೆ— ಕೋಶ ಮೊದಲಾದುದು ಇಲ್ಲದಿರುವುದರಿಂದ ವಾಚಾರಂಭಣ ಶಬ್ದಕ್ಕೆ ಮಿಥ್ಯೆಯೆಂಬುದು ಶಬ್ದದಿಂದ ಸಿಗತಕ್ಕ ಅರ್ಥವಲ್ಲ. ಅವಯವಶಕ್ತಿಯಿಂದ ಮಿಥ್ಯೆಯೆಂಬ ಅರ್ಥವು ಸಿಗದಿರುವುದರಿಂದ ವಾಚಾರಂಭಣ ಶಬ್ದಕ್ಕೆ ಮಿಥ್ಯೆಯೆಂಬುದು ಯೌಗಿಕಾರ್ಥವೂ ಅಲ್ಲ. ॥ ೪ ॥

**ಟೀ**—**ಅನ್ನಮಾತ್ರಂ ಭುಕ್ತಂ** ಅನ್ನವನ್ನು ಮಾತ್ರ ಉಂಡದ್ದು ಎಂದು ಹೇಳಿದರೆ ಪಲ್ಯಕಾಯಿ ಮೊದಲಾದುದು ಯಾವುದೂ ಇರಲಿಲ್ಲ ಎಂದು ಹೇಗೆ ಅರ್ಥವು ಸಿಗುತ್ತದೋ ಹಾಗೆಯೇ ವಾಚಾರಂಭಣ ಮಾತ್ರಂ ಎಂದು ಹೇಳಿದರೆ, ಮಾತಿನಲ್ಲಿ ಹೇಳಲಿಕ್ಕೆ ಮಾತ್ರ ಇದೆ. ವಸ್ತುತಃ ಇಲ್ಲವೆಂದು ಸಿಗುತ್ತದೆ ಎಂದರೆ—

**ಭಾ. ॥ (೧) ನ ಚ ವಾಚಾರಂಭಣಮಾತ್ರಮಿತಿ ಮಾತ್ರಶಬ್ದೋಽಸ್ತಿ ॥ (೨) ನ ಚಾ-ರಭ್ಯಸ್ಯಾರಂಭಣಮಿತಿ ಯುಜ್ಯತೇ ಶಬ್ದಃ । ಕ್ರಿಯಾ ಹ್ಯಾರಂಭಣಂ ॥ (೩) ಅತೋ ವಾಚಾ ನಾಮ್ನಾಮಾರಂಭಣಂ ವಿಕಾರೋ ವಿವಿಧಾಕಾರೋ ವಿಕ್ರಿಯಮಾಣಃ ॥ (೪) ಸತ್ಯಂ ನಾ-ಮಧೇಯಂ ಸರ್ವದಾ ವಿದ್ಯಮಾನಂ ನಾಮಧೇಯಂ ಮೃತ್ತಿಕೇತ್ಯಾದಯ ಇತ್ಯರ್ಥಃ ॥ (೫) ಸತ್ತ್ವೇನ ಕಾಲತಸ್ತತಂ ಜ್ಞಾಯತೇ ವಿದ್ವದ್ಭಿರಿತಿ ನಿತ್ಯತ್ವೇನ ಪ್ರಸಿದ್ಧಮೇವ ಸತ್ಯಮಿ-ತ್ಯತ್ರ ವಿವಕ್ಷಿತಂ ॥ ೫ ॥**

ಅ ॥ (೧) ವಾಚಾರಂಭಣಮಾತ್ರಂ ಎಂದು ಮಾತ್ರಶಬ್ದವು ಇಲ್ಲ. (ಇಲ್ಲಿ ಮಾತ್ರಶಬ್ದವು ಇರುತ್ತಿದ್ದರೆ ಹೀಗೆ ಆಗುತ್ತಿತ್ತು. ಇಲ್ಲಿ ವಾಚಾರಂಭಣಂ ಎಂದಿಷ್ಟು ಮಾತ್ರ ಇದೆ **ಮಾತ್ರ** ಎಂಬ ಶಬ್ದವು ಇಲ್ಲ. ಅದುಕಾರಣ ಅಶ್ರುತಕಲ್ಪನವು=(ಹೇಳದಿದ್ದುದನ್ನು ಕಲ್ಪಿಸಿಕೊಳ್ಳುವುದು) ದೋಷವೂ ಬರುವುದು. ಮತ್ತು ಅಬ್ಭಕ್ಷಃ, (ನೀರು ಮಾತ್ರ ಕುಡಿಯುವವನು,) ವಾಯುಭಕ್ಷಃ (ಗಾಳಿ ಮಾತ್ರ ಸೇವಿಸುತ್ತಿರುವವನು) ಇತ್ಯಾದಿಗಳಂತೆ ಮಾತ್ರ ಶಬ್ದವನ್ನು ಕಲ್ಪಿಸಲಿಕ್ಕೆ ಬೇಕಾದ ಯಾವ ಅಂಶವೂ ಪ್ರಕೃತದಲ್ಲಿ ಇಲ್ಲ. (೨) (ಮತ್ತು ವಾಚಾ ಕೇವಲಮಸ್ತೀತ್ಯಾರಭ್ಯತೇ=ಮಾತಿನಿಂದ ಮಾತ್ರ ಉಂಟೆಂದು ಆರಂಭಿಸಲ್ಪತಕ್ಕುದು, ಎಂದು ಯೋಗ(ಅವಯವಾರ್ಥ)ವನ್ನು ಇಟ್ಟುಕೊಂಡು ವಾಚಾರಂಭಣಂ=ವಾಗಾಲಂಬನ ಮಾತ್ರವು ಮಾತಿನಲ್ಲಿ ಹೇಳಲಿಕ್ಕೆ ಮಾತ್ರ ಇದೆ, ಎಂದು ಅರ್ಥ ಹೇಳಿದ್ದು ಯುಕ್ತವಲ್ಲ. ಏಕೆಂದರೆ ಆರಂಭಣಂ ಎಂಬ ಶಬ್ದವು ಲ್ಯುಟ್ ಪ್ರತ್ಯಯಾಂತವಾದುದು ಆರಭ್ಯತೇ ಎಂಬ ಕರ್ಮಾರ್ಥದಲ್ಲಿ ಲ್ಯುಟ್‌ಪ್ರತ್ಯಯವನ್ನು ಸೂತ್ರದಲ್ಲಿ ವಿಧಿಸಲೇ ಇಲ್ಲ, ಎನ್ನುತ್ತಾರೆ—) ಆರಂಭಿಸಲ್ಪಡತಕ್ಕುದಕ್ಕೆ ಆರಂಭಣಂ ಎಂಬ ಶಬ್ದವು ಕೂಡಲಾರದಷ್ಟೆ. (ಆರಭ್ಯವಾದುದು (ಆರಂಭಿಸಲ್ಪಡತಕ್ಕುದು) ಆರಂಭಣವಾಗಲಾರದು.) ಪರಂತು ಆರಂಭಣವೆಂದರೆ ಕ್ರಿಯೆಯು. ಅಂದರೆ ಉತ್ಪಾದನ (ಹುಟ್ಟಿಸುವಿಕೆ) ವೆಂಬ ಆರಂಭಣ ಕ್ರಿಯೆಯೇ ಆರಂಭಣಶಬ್ದದಿಂದ ಹೇಳಲ್ಪಡುತ್ತದೆ. (ಲ್ಯುಟ್ ಪ್ರತ್ಯಯವು ಭಾವಾರ್ಥ (ಧಾತ್ವರ್ಥ) ದಲ್ಲಿ ಇರತಕ್ಕುದು ಎಂದು ಪ್ರಸಿದ್ಧವಾಗಿದೆ.) (೩) (ಹೀಗೆ ವಾಚಾರಂಭಣವೆಂಬ ವಾಕ್ಯಕ್ಕೆ ಪರರು ಹೇಳಿದ ಅರ್ಥವು ಅಯುಕ್ತವೆಂದು ಹೇಳಿ ಈಗ ತಾನು ಅದರ ಅರ್ಥ ಹೇಳುತ್ತಾರೆ ) ಪರರು ಹೇಳಿದ ಅರ್ಥವು ಕೂಡದಿರುವುದರಿಂದ (ವಾಚಾ=) ವಾಗಿಂದ್ರಿಯದಿಂದ,(ನಾಮ್ನಾಂ=) ಸಂಸ್ಕೃತ ಹೊರತಾದ ಭಾಷಾಶಬ್ದಗಳ, (ಆರಂಭಣಂ=) ಉಚ್ಚಾರಣವು, (ವಿಕಾರಃ=) ಅನೇಕಪ್ರಕಾರದಿಂದ ಉಚ್ಚರಿಸಲ್ಪಡತಕ್ಕುದು. (೪) (**ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ** ಎಂಬುದಕ್ಕೆ ಅರ್ಥ ಹೇಳುತ್ತಾರೆ-) ಸತ್ಯಂ=ಯಾವಾಗಲೂ ಇರತಕ್ಕ ನಾಮಧೇಯಗಳು ಮೃತ್ತಿಕಾ ಮೊದಲಾದವುಗಳು. (೫) (**ಏತತ್ಸತ್ಯಂ ಬ್ರಹ್ಮಪುರಂ** ಎಂದು ನಿತ್ಯವೆಂಬ ಅರ್ಥದಲ್ಲಿ ಸತ್ಯಶಬ್ದವನ್ನು ಮುಂದಕ್ಕೆ ಹೇಳುವುದರಿಂದ ರೂಢಿಯಿದೆ, ಎಂದು ಸಿದ್ಧಿಸುತ್ತದೆ. ಯೋಗವೂ (ಅವಯವಾರ್ಥವೂ) ಇದೆ ಎನ್ನುತ್ತಾರೆ---) (ಸತ್ಯಂ ಎಂಬಲ್ಲಿ ಸತ್=ಸದ್ರೂಪವಾಗಿ, ತ್=ಸರ್ವಕಾಲದಲ್ಲಿ ವ್ಯಾಪಿಸಿಕೊಂಡಿರುವುದಾಗಿ, ಯಂ=ಜ್ಞಾನಿಗಳಿಂದ ತಿಳಿಯಲ್ಪಡುತ್ತದೆ, ಹೀಗೆ ಸತ್ಯಂ ಎಂಬುದರಿಂದ ನಿತ್ಯವೆಂದು ಪ್ರಸಿದ್ಧವಾದುದನ್ನೇ ಇಲ್ಲಿ ಇಟ್ಟುಕೊಳ್ಳಬೇಕು ॥ ೫ ॥

ಶಿ—ಸಂಸ್ಕೃತವಲ್ಲದ ಭಾಷಾಶಬ್ದಗಳ ಆರಂಭಣವು ವಿವಿಧವಾಗಿ ಮಾಡಲ್ಪಡುತ್ತದೆಂದು ಹೇಳಿದ್ದು ಹೇಗೆ? ಎಂದರೆ—

**ಭಾ. ॥ (೧) ಸಂಕೇತೇನ ಕ್ರಿಯಮಾಣಾನಿ ಹ್ಯನ್ಯಾನಿ ನಾಮಾನಿ । ಅತೋ ವಿಕಾ-ರರೂಪಾಣಿ ॥ (೨) ವಿಕಾರಶಬ್ದಸ್ಯ ನಿಯತಪುಲ್ಲಿಂಗತ್ವಾದಾರಂಭಣಂ ವಿಕಾರ ಇತಿ ವೇದಾಃ ಪ್ರಮಾಣಮಿತಿವದ್ಯುಜ್ಯತೇ ॥ (೩) ನ ಚ ಮೃತ್ತಿಕಾದಿನಾಮವಿಕಾರಃ ಸಾಂಕೇತಿಕಂ ನಾಮ॥**

**(೪) ಪ್ರಾಧಾನ್ಯಮೇವಾತ್ರ ಮೃತ್ತಿಕಾದಿನಾಮವದ್ಭಗವತೋ ವಿವಕ್ಷಿತಂ । ಸೃಷ್ಟಿಶ್ಚ ಪ್ರಾ-ಧಾನ್ಯಾರ್ಥಮೇವಾತ್ರೋಚ್ಯತೇ ॥೧,೨,೩,೪,೫,೬,೭॥ ಇತಿ ಪ್ರಥಮಃ ಖಂಡಃ ॥೮–೧॥೬॥**

ಅ ॥ (೧) ಸಂಸ್ಕೃತವಲ್ಲದ ಭಾಷಾಶಬ್ದಗಳು ಪುರುಷರ ಬುದ್ಧ್ಯನುಸಾರವಾಗಿ ಮಾಡಿಕೊಂಡ ಸಂಕೇತ(ಈ ವಸ್ತುವಿಗೆ ಈ ಹೆಸರು ಎಂದು ನಿಶ್ಚಯಮಾಡಿ ವ್ಯವಹರಿಸಲ್ಪಡತಕ್ಕುದು.) ದಿಂದ ಮಾಡಲ್ಪಡ ತಕ್ಕವುಗಳು, ಅದುಕಾರಣ ವಿಕಾರರೂಪಗಳು. ಬಹುವಿಧವಾಗಿ ಮಾಡಲ್ಪಡತಕ್ಕವುಗಳು. ಆದುದರಿಂದ ಅನಿತ್ಯಗಳು (೨).(ಆರಂಭಣಂ ಎಂಬುದು ನಪುಂಸಕಲಿಂಗವು. ವಿಕಾರ: ಎಂಬುದು ಪುಲ್ಲಿಂಗವು. ಆದ ಕಾರಣ ಆರಂಭಣಂ ವಿಕಾರಃ ಎಂದು ವಿಶೇಷಣ ವಿಶೇಷ್ಯಭಾವವು ಹೇಗೆ ಎಂದರೆ –) (ಭಾವಾರ್ಥದಲ್ಲಿರ ತಕ್ಕ ಲ್ಯುಟ್ ಪ್ರತ್ಯಯಾಂತವಾದ ಆರಂಭಣಂ ಎಂಬ ಶಬ್ದವು ನಿತ್ಯ ನಪುಂಸಕಲಿಂಗವಾಗಿದೆ) ವಿಕಾರಃ ಎಂಬ ಶಬ್ದವು ಘಞ್ ಪ್ರತ್ಯಯಾಂತವಾದುದು. ನಿಯಮೇನ ಪುಲ್ಲಿಂಗವೇ ಆಗಿದೆ. ಆದಕಾರಣ ಆರಂಭಣಂ ವಿಕಾರಃ ಎಂದು ವಿಶೇಷಣ ವಿಶೇಷ್ಯಭಾವವು *ವೇದಾಃ ಪ್ರಮಾಣಂ ಇತ್ಯಾದಿಗಳಂತೆಯೇ ಕೂಡುತ್ತದೆ. (೩) (ಸಂಸ್ಕೃತನಾಮದ ವಿಕಾರವು ಸಾಂಕೇತಿಕ ನಾಮವು ಎಂದೇ ಏತಕ್ಕೆ ಹೇಳಬಾರದು ಎಂದರೆ—) ಸಾಂಕೇತಿಕನಾಮವು ಮೃತ್ತಿಕಾದಿ ನಾಮಗಳ ವಿಕಾರವಲ್ಲ, (ಮಣ್ಣು ಮೊದಲಾದ ಸಾಂಕೇತಿಕ ನಾಮಗಳು ಸಂಸ್ಕೃತದ ತದ್ಭವಗಳು ಅಪಭ್ರಷ್ಟಗಳೆನಿಸುತ್ತವೆ. ಅವುಗಳಿಗೆ ಸಂಸ್ಕೃತವು ಉಪಾದಾನಕಾರಣವಲ್ಲ. ಏಕೆಂದರೆ—ಸಂಸ್ಕೃತಶಬ್ದಗಳಿಗೂ ಸಾಂಕೇತಿಕ ಶಬ್ದಗಳಿಗೂ ಎರಡಕ್ಕೂ ಆಕಾಶವು ಉಪಾದಾನಕಾರಣವು ಮತ್ತು ಅವುಗಳೆರಡೂ ಪರಸ್ಪರವಾಗಿ ಬೇರೆಯಾಗಿ ತೋರುತ್ತವೆ.) (೪) (ವಾಚಾರಂಭಣ ದೃಷ್ಟಾಂತದಿಂದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನೆಂದು ಇಷ್ಟನಾಗದಿದ್ದರೆ ಬೇರೆ ಯಾವ ಅರ್ಥವು ಇಷ್ಟವಾದುದು ಎಂದರೆ—) ಮೃತ್ತಿಕಾ ಮೊದಲಾದ ನಾಮಗಳಂತೆಯೇ ಶ್ರೀಹರಿಗೆ ಸರ್ವರಿಗಿಂತ ಪ್ರಾಧಾನ್ಯವೇ ಇಷ್ಟವಾಗಿದೆ ಸಾಂಕೇತಿಕ ನಾಮಗಳಂತೆಯೇ ಜಗತ್ತಿಗೆ ಅಪ್ರಾಧಾನ್ಯವೂ ಇಷ್ಟವಾಗಿದೆ ಶ್ರೀಹರಿಗೆ ಸರ್ವರಿಗಿಂತ ಪ್ರಾಧಾನ್ಯ (ಉತ್ತಮತ್ವ) ವನ್ನು ಹೇಳುವುದಕ್ಕಾಗಿಯೇ ಸೃಷ್ಟಿ ಯನ್ನು ಇಲ್ಲಿ ಹೇಳಿದ್ದು.

ವಿ ॥ (1) ವಿಕಾರವಾಗಿರುವುದರಿಂದ ಸಾಂಕೇತಿಕ ನಾಮವು ಅನಿತ್ಯವು. ಸಂಸ್ಕೃತನಾಮವು ನಿತ್ಯವು. ಆದಕಾರಣ ಅನಿತ್ಯವಾದ ಕಾರಣ ಸಾಂಕೇತಿಕ ನಾಮವು ಅಪ್ರಧಾನವು. ನಿತ್ಯವಾದ ಪ್ರಯುಕ್ತ ಸಂಸ್ಕೃ ತವು ಪ್ರಧಾನವು ಎಂದು ಸಿಗುತ್ತದೆ. ಆ ದೃಷ್ಟಾಂತದಿಂದ ಬ್ರಹ್ಮನಿಗೆ ಪ್ರಾಧಾನ್ಯವೂ ಜಗತ್ತಿಗೆ ಅಪ್ರಾ ಧಾನ್ಯವೂ ಸಿಗುತ್ತದೆ. ಏವಂಚ ಸಂಸ್ಕೃತವು ಪ್ರಧಾನವಾದುದರಿಂದ ಅದರ ಜ್ಞಾನಮಾತ್ರದಿಂದ ಸಾಂಕೇ ತಿಕನಾಮವು ತಿಳಿಯಲ್ಪಡುತ್ತದೆ. ಅಂದರೆ—ವಿದ್ವಾನ್ ಇತ್ಯಾದಿ ವ್ಯವಹಾರವು ಸಂಸ್ಕೃತ ಪಂಡಿತರಿಗೆ ಸಂಸ್ಕೃತಜ್ಞಾನದಿಂದಲೇ ಸಿದ್ಧಿಸುತ್ತದೆ. ಹಾಗೆಯೇ ಶ್ರೀಹರಿಯು ಪ್ರಧಾನನಾದುದರಿಂದ ಶ್ರೀಹರಿಯ ಜ್ಞಾನ ದಿಂದಲೇ ಅಪ್ರಧಾನವಾದ ದೇವತಾ ಕರ್ಮಾದಿರೂಪವಾದ ಎಲ್ಲಾ ಜಗತ್ತೂ ತಿಳಿಯಲ್ಪಡುತ್ತದೆ ಅಂದರೆ— ದೇವತಾ ಕರ್ಮಾದಿಗಳ ಜ್ಞಾನದಿಂದುಂಟಾಗತಕ್ಕ ಫಲವು ಶ್ರೀಹರಿಯ ಜ್ಞಾನದಿಂದಲೇ ಆಗುತ್ತದೆ. (2) ಇಲ್ಲಿ ಜಗತ್ತು ಪರಬ್ರಹ್ಮನ ವಿಕಾರವೆಂಬುವುದು ಇಷ್ಟವಲ್ಲವಾದರೆ ಮುಂದೆ **ಸದೇವ ಸೋಮ್ಯೇದಮಗ್ರ ಆಸೀತ್** ಇತ್ಯಾದಿಗಳಲ್ಲಿ ಸೃಷ್ಟಿಯನ್ನು ಹೇಳುವುದು ಅಸಂಗತವಾಗಬೇಕಾಗುವುದು. ಆ ವಾಕ್ಯವು ಜಗತ್ತು ಬ್ರಹ್ಮನ ವಿಕಾರವು ಎಂಬುವುದನ್ನು ವಿಸ್ತರಿಸಲಿಕ್ಕೆ ಹೊರಟದ್ದು, ಎಂದರೆ—ಹಾಗೆ ಹೇಳಕೂಡದು. ಏಕೆಂದರೆ— ಶ್ರೀಹರಿಯು ಸರ್ವರಿಗಿಂತ ಪ್ರಧಾನನು ಎಂದು ಹೇಳುವುದಕ್ಕಾಗಿಯೇ ಸೃಷ್ಟಿಯನ್ನು ಹೇಳಿದ್ದು. ಅಂದರೆ, ಇಲ್ಲಿ ಜಗತ್ತು ಬ್ರಹ್ಮನ ವಿಕಾರವು, ಎಂಬುದನ್ನು ವಿಸ್ತರಿಸಿ ಹೇಳಲಿಕ್ಕೆ ಸೃಷ್ಟಿಯನ್ನು ಹೇಳಿದ್ದಲ್ಲ. ಪರಂತು ಮೃತ್ತಿಕಾದಿ ನಾಮಗಳಂತೆ ಶ್ರೀಹರಿಗೆ ಪ್ರಾಧಾನ್ಯವು ಇಷ್ಟವಾಗಿದೆ. ಹೇಗೆಂದರೆ - ಶ್ರೀಹರಿಯು ಜಗತ್ತಿಗೆ

* ವೇದಾಃ ಎಂದು ನಿತ್ಯಪುಲ್ಲಿಂಗ. ಪ್ರಮಾಣಂ ಎಂಬುದು ನಿತ್ಯನಪುಂಸಕ.

*ನಿಮಿತ್ತಕಾರಣನು, ಇತ್ಯಾದಿಪ್ರಕಾರ ಶ್ರೀಹರಿಗೆ ಜಗತ್ತಿಗಿಂತ ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿಯೇ ಜಗತ್ಸೃಷ್ಟಿಯನ್ನು ಹೇಳಿರುತ್ತಾರೆ. (೩) ಮತ್ತು ‡ಉಪಾದಾನಕಾರಣ ಸಮುದಾಯವು ಅಥವಾ ಎಲ್ಲಾ ಕಾರಣಗಳೂ ಸತ್ಯಗಳೆಂದು **ಯಥಾ ಸೋಮ್ಯೈಕೇನ ಮೃತ್ಪಿಂಡೇನ** ಎಂಬ ಮೃತ್ತಿಕಾಶ್ರುತಿಯು ಹೇಳುತ್ತದೆ. ಕಾಷ್ಣಾರ್ಯಸ ಶ್ರುತಿಯು ಎಲ್ಲಾ ಕಾರ್ಯವೂ ಸತ್ಯವೆಂದು ತಿಳಿಸುತ್ತದೆ. ಉಪಾದಾನ ಕಾರಣವು ಸತ್ಯವಾಗುವಾಗ ಕಾರ್ಯವೂ ಸತ್ಯವೆಂದೇ ಅವಶ್ಯವಾಗಿ ಹೇಳಬೇಕು. ಉಪಾದಾನ ಉಪಾದೇಯಗಳಿಗೆ ಭೇದವಿಲ್ಲದಿರುವುದರಿಂದ ಅವುಗಳಲ್ಲಿ ಒಂದು ಸತ್ಯವಾದರೆ ಇನ್ನೊಂದೂ ಸತ್ಯವೆಂದು ಅವಶ್ಯವಾಗಿ ಹೇಳಬೇಕು ಕಾರ್ಯಕಾರಣರೂಪವಾದ ಅಂದರೆ—ನಾಮರೂಪಾತ್ಮಕವಾದ ಈ ಜಗತ್ತು ಅನಾದ್ಯನಂತಕಾಲಗಳಲ್ಲಿಯೂ ಏಕಪ್ರಕಾರವಾಗಿಯೇ ಇರತಕ್ಕುದು, ಇತ್ಯಾದಿಪ್ರಕಾರ ಅರ್ಥಗಳನ್ನು ತಿಳಿಯಬೇಕು. ॥ ೮—೧ ॥ ॥ ೬ ॥

**ಒಂದನೇ ಖಂಡವು ಮುಗಿಯಿತು.**

# ೨ನೇ ಖಂಡವು

**ಪೀ**—ಸರ್ವರಿಗಿಂತಲೂ ಪ್ರಧಾನನಾದ ಪರಬ್ರಹ್ಮನನ್ನು ತಿಳಿದಾಗ ಅಪ್ರಧಾನವಾದ ಜಗತ್ತನ್ನು ತಿಳಿದಂತೆ ಆಗುತ್ತದೆ, ಎಂದು ಹೇಳಿದರು. ಬ್ರಹ್ಮನಿಗೆ ಪ್ರಾಧಾನ್ಯವೂ ಜಗತ್ತಿಗೆ ಅಪ್ರಾಧಾನ್ಯವೂ ಹೇಗೆ ಎಂದರೆ—ಅದಕ್ಕಾಗಿ ಸೃಷ್ಟಿಯನ್ನು ಹೇಳುತ್ತಾರೆ—

**ಉ. ॥ ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ ತ-ದ್ಧೈಕ ಆಹುರಸದೇವೇದಮಗ್ರ ಆಸೀದೇಕಮೇವಾದ್ವಿತೀಯಂ ತಸ್ಮಾದಸತಃ ಸಜ್ಜಾಯತ ಇತಿ ॥ ೧ ॥**

**ಅ ॥** ಎಲೋ ಶ್ವೇತಕೇತುವೇ ಜಗತ್ತು ಸೃಷ್ಟಿಯಾಗುವುದಕ್ಕಿಂತ ಮೊದಲು ಪ್ರಲಯಕಾಲದಲ್ಲಿ ಸರ್ವೋತ್ತಮನಾದುದರಿಂದ ಸತ್ ಎಂದು ಹೆಸರುಳ್ಳ ನಾರಾಯಣನೆಂಬ ಪರಬ್ರಹ್ಮನು ಮಾತ್ರ ಇರುತ್ತಿದ್ದನು. (ನಾರಾಯಣನ ಅವಯವ ಗುಣ ಕರ್ಮ ಮೊದಲಾದವುಗಳು ಇದ್ದಪ್ರಯುಕ್ತ ಸದೇವ ಎಂದು ಹೇಳಿದ್ದು ಹೇಗೆ ಎಂದರೆ—) ಆ ಪರಬ್ರಹ್ಮನು ತನ್ನ ಗುಣ ಕರ್ಮರೂಪಾದಿಗಳಿಂದ ಭೇದವಿಲ್ಲದವನು. ತನಗೆ ಸಮಾನಿಕನೂ ಅಧಿಕನೂ ಇಲ್ಲದವನು. (ತಾನು ಹೇಳಿದ ಅರ್ಥವು ದೃಢವಾಗುವುದಕ್ಕಾಗಿ ಶೂನ್ಯವಾದಿಗಳ ಪಕ್ಷವನ್ನು ವೇದವು ದೂಷಿಸುತ್ತದೆ.) ಜಗತ್ತಿನ ಸೃಷ್ಟಿವಿಷಯದಲ್ಲಿ ಶೂನ್ಯವಾದಿಗಳು ಪ್ರಲಯಕಾಲದಲ್ಲಿ ಜಗತ್ತು ಶೂನ್ಯಾತ್ಮಕವಾಗಿಯೇ ಇತ್ತು. ಭೇದವಿಲ್ಲದೇನೇ ಇತ್ತು. ಅಂದರೆ ಬೇರೆ ಯಾವುದೂ ಇರಲಿಲ್ಲ. ಶೂನ್ಯಕ್ಕೆ ಸಹಕಾರಿಕಾರಣವಾದ ಎರಡನೇ ವಸ್ತುವೂ ಇಲ್ಲ. ಅಂತಹ ಶೂನ್ಯದಿಂದ ಸತ್ತಾದ ಜಗತ್ತು ಹುಟ್ಟಿತು, ಎಂದು ಹೇಳುತ್ತಾರೆ ॥ ೧ ॥

**ಪೀ**—ಶೂನ್ಯವಾದಿಗಳ ಪಕ್ಷವು ಅಯುಕ್ತವೆನ್ನುತ್ತಾರೆ—

* ಮಣ್ಣು ಮಡಿಕೆಯಾಗುವಂತೆ ತಾನು ಜಗತ್ತಿನ ರೂಪವನ್ನು ಹೊಂದದೆ ಚೇತನ ಅಚೇತ ಎಲ್ಲಾ ಜಗತ್ತನ್ನು ಸೃಷ್ಟಿಸುವವನು.

‡ ಮಣ್ಣು ಮಡಿಕೆಯಾಗುವುದು, ನೂಲು ಬಟ್ಟೆಯಾಗುವುದು, ಹೀಗೆ ರೂಪಾಂತರವನ್ನು ಹೊಂದಿ ಕಾರಣವಾದುದು,

ಉ. ॥ ಕುತಸ್ತು ಖಲು ಸೋಮ್ಯೈವಂ ಸ್ಯಾದಿತಿ ಹೋವಾಚ ಕಥಮ-ಸತಃ ಸಜ್ಜಾಯೇತೇತಿ ಸ ತ್ವೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿ-ತೀಯಂ ॥ ೨ ॥

ಅ ॥ ಎಲೋ ಮಗನೇ ಪ್ರಲಯಕಾಲದಲ್ಲಿ ಅಸತ್ತು ಇತ್ತು ಎಂಬುದು ಹೇಗೆ ಕೂಡುವುದು? (ಸರ್ವಥಾ ಕೂಡಲಾರದು. ಏಕೆಂದರೆ – ಮೇ ಮಾತಾ ವಂಧ್ಯಾ=ನನ್ನ ತಾಯಿಯು ಬಂಜೆಯು, ಎಂಬ ಮಾತಿನಂತೆ ತನ್ನ ಮಾತೇ ತನಗೆ ವಿರುದ್ಧವಾಗುವುದು. ಮತ್ತು ಆ ವಿಷಯದಲ್ಲಿ ಪ್ರಮಾಣವೂ ಇಲ್ಲ.) (ಹೀಗೆ ತಂದೆಯಾದ ಉದ್ದಾಲಕರು ಮಗನಿಗೆ ಹೇಳಿದರು.) ಮತ್ತು ಅಸತ್ತಿನಿಂದ ಸತ್ತಾದುದು ಹುಟ್ಟುತ್ತದೆ ಎಂಬುವುದು ಹೇಗೆ ಕೂಡುವುದು? (ಸರ್ವಥಾ ಕೂಡಲಾರದು. ಹಾಗೆ ಎಲ್ಲಿಯೂ ತೋರಿಬಾರದಿರುವುದರಿಂದ ಅಸತ್ತು ಕಾರಣವಾಗಲಾರದು.) ಎಂದು ತಂದೆಯವರು ಹೇಳಿದರು (ಹೀಗೆ ಪರಮತವು ಅಯುಕ್ತವೆಂದು ಹೇಳಿ ಮರಳಿ ತಮ್ಮ ಮತವನ್ನೇ ಸ್ಥಿರೀಕರಿಸುತ್ತಾರೆ—) ಸರ್ವೋತ್ತಮನೇ ಆದ ಪರಬ್ರಹ್ಮನು ಪ್ರಲಯ ಕಾಲದಲ್ಲಿ ಒಬ್ಬನೇ ಅಸದೃಶನಾಗಿ ಸಮನೂ ಅಧಿಕನೂ ಇಲ್ಲದವನಾಗಿ ಇದ್ದನು. ತು ಶಬ್ದದಿಂದ ಸ್ವರೂಪ ಸಮೇತನಾಗಿ ಇದ್ದಾನೆ ಮತ್ತು ಜಗತ್ಕರ್ತನು ಎಂಬುವುದೂ ಯುಕ್ತವೆಂದು ಸೂಚಿತವಾಯಿತು. ॥ ೨ ॥

ಪೀ—ಪ್ರಲಯಕಾಲದಲ್ಲಿರತಕ್ಕ ಸದ್ರೂಪನಾದ ಪರಬ್ರಹ್ಮನಿಗೆ ಪ್ರಲಯಕಾಲದ ಅಂತ್ಯಭಾಗದಲ್ಲಿ ಅಂದರೆ ಸೃಷ್ಟಿಕಾಲವು ಬರುವಾಗ ಸೃಷ್ಟಿಮಾಡಬೇಕೆಂದು ವಿಚಾರವು ಉಂಟಾಯಿತು ಎನ್ನುತ್ತಾರೆ—

ಉ. ॥ ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ ತತ್ತೇಜ ಐಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತದಪೋಽಸೃಜತ ತಸ್ಮಾ-ದ್ಯತ್ರ ಕ್ವ ಚ ಶೋಚತಿ ಸ್ವೇದತೇ ವಾ ಪುರುಷಸ್ತೇಜಸ ಏವ ತದಧ್ಯಾಪೋ ಜಾಯಂತೇ ॥ ೩ ॥

ಅ ॥ ಸತ್ ಎನಿಸಿದ ಬ್ರಹ್ಮನು ನಾನು ಜಗತ್ತಿಗೆ ನಿಯಾಮಕನಾಗಿ ಬಹು ರೂಪಗಳುಳ್ಳವನಾಗು ವೆನು. ಅದಕ್ಕಾಗಿ ನಿಯಮ್ಯಗಳಾದ ಬಹು ವಸ್ತುಗಳನ್ನು ಸೃಷ್ಟಿಸುವೆನು, ಹೀಗೆ ವಿಚಾರ ಮಾಡಿದನು. ಆಗ ಬ್ರಹ್ಮನು ತೇಜಃ=(ತೇ=ವ್ಯಾಪ್ತನಾದ ಶ್ರೀಹರಿಯ ಅಧೀನಳಾಗಿ ಸರ್ವದಾ ಹುಟ್ಟದೆ ಇರುವ ಅಥವಾ ವ್ಯಾಪ್ತನಾದ ಶ್ರೀಹರಿಯಿಂದ ಪ್ರಕಟಳಾಗುವ, ಅಥವಾ ಜಗತ್ತನ್ನು ಸೃಷ್ಟಿಸುವ, ವಿದ್ಯೆ ಎಂಬ ರೂಪದಿಂದ ಪ್ರಾದುರ್ಭವಿಸುವ) ಲಕ್ಷ್ಮೀದೇವಿಯನ್ನು ಅವಳಿಂದ ಅಭಿಮನ್ಯಮಾನವಾದ ಪಂಚ ಭೂತಗಳಲ್ಲಿ ಸೇರಿದ ತೇಜಸ್ಸನ್ನು ಸೃಷ್ಟಿಮಾಡಿದನು. ತೇಜಸ್ಸಿಗೆ ಅಭಿಮಾನಿನಿಯಾದ ಲಕ್ಷ್ಮೀ ದೇವಿಯು ಬಹುರೂಪಗಳುಳ್ಳವಳು ಆಗುವೆನೆಂದು ಆಲೋಚಿಸಿ ಜಲಗಳಿಗೆ ಅಭಿಮಾನಿಯಾದ ಅಪ್ ಎನಿಸಿದ ಪ್ರಾಣನನ್ನೂ, ಪ್ರಾಣನಿಂದ ಅಭಿಮನ್ಯಮಾನಗಳಾದ ಜಲಗಳನ್ನೂ ಸೃಷ್ಟಿಮಾಡಿದಳು. (ಜಲಗಳು ತೇಜಸ್ಸಿನಿಂದಲೇ ಹುಟ್ಟಿದವುಗಳೆಂಬುದು ಅನುಭವಸಿದ್ಧವೆನ್ನುತ್ತಾರೆ—) ನೀರು ತೇಜಸ್ಸಿ ನಿಂದಲೇ ಹುಟ್ಟತಕ್ಕುದಾದ ಪ್ರಯುಕ್ತ ಈಗಲೂ ಯಾವನಾದರೂ ಪುರುಷನು ಯಾವದೊಂದು ದೇಶ ದಲ್ಲಿ ಆಗಲೀ ಕಾಲದಲ್ಲಿಯಾಗಲೀ ಮರುಗಿದರೆ ಆತನಿಗೆ ತಾಪವುಂಟಾದರೆ ಅಥವಾ ಬೆವರು ಹುಟ್ಟಿದರೆ ಆಗ ಆ ಜಲಗಳು ತೇಜಸ್ಸಿನಿಂದಲೇ ಹುಟ್ಟುತ್ತವೆಂದು ಪ್ರಸಿದ್ಧವು. ॥ ೩ ॥

ಉ. ॥ ತಾ ಆಪ ಐಕ್ಷಂತ ಬಹ್ವ್ಯಃ ಸ್ಯಾಮ ಪ್ರಜಾಯೇಮಹೀತಿ ತಾ

**ಅನ್ನಮಸೃಜಂತ ತಸ್ಮಾದ್ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತ್ಯದ್ಭ್ಯ ಏವ ತದಧ್ಯನ್ನಾದ್ಯಂ ಜಾಯತೇ ॥ ಇತಿ ದ್ವಿತೀಯಃ ಖಂಡಃ ॥೮-೨॥೪॥**

ಅ ॥ ಆ ಜಲಗಳಿಗೆ ಅಭಿಮಾನಿಯಾದ ಮುಖ್ಯಪ್ರಾಣನು ಬಹುರೂಪಗಳುಳ್ಳವನಾಗುವೆನೆಂದು ಆಲೋಚಿಸಿ ಅನ್ನ ಎನಿಸಿದ ಪೃಥಿವಿಗೆ ಅಭಿಮಾನಿಯಾದ ರುದ್ರನನ್ನೂ, ರುದ್ರನಿಂದ ಅಭಿಮನ್ಯಮಾನವಾದ ಪೃಥಿವೀ ಎಂಬ ಭೂತವನ್ನೂ ಸೃಷ್ಟಿಮಾಡಿದನು. (ಪೃಥಿವಿಯು ಜಲಗಳಿಂದ ಹುಟ್ಟಿದ್ದೆಂಬುವುದು ಅನುಭವಸಿದ್ಧವೆನ್ನುತ್ತಾರೆ—) ಪೃಥಿವಿಯು ಜಲದಿಂದ ಹುಟ್ಟಿದ ಪ್ರಯುಕ್ತವೇ ಎಲ್ಲಿ ಮಳೆಯು ಸಮೃದ್ಧಿ ಬರುತ್ತದೋ, ಅಲ್ಲಿಯೇ ಬಹಳವಾದ ಅನ್ನವು (ಪಾರ್ಥಿವವಸ್ತುಗಳ ಸಮುದಾಯವು) ಸಮೃದ್ಧವಾಗುತ್ತದೆ. ಜಲಗಳಿಂದಲೇ ಅನ್ನ ಮೊದಲಾದ ಪಾರ್ಥಿವವಸ್ತುವು ಹುಟ್ಟುತ್ತದೆ. (ಬೇರೆ ಯಾವುದರಿಂದಲೂ ಹುಟ್ಟುವುದಲ್ಲ. ॥ ೮—೨ ॥ ॥ ೪ ॥

ಪೀ—**ಏಕಮೇವಾದ್ವಿತೀಯಂ** ಎಂಬ ವಾಕ್ಯಕ್ಕೆ ಶಂಕರಾಚಾರ್ಯರು ಹೀಗೆ ಅರ್ಥ ಹೇಳಿರುವರು. ತನ್ನಿಂದ ಸೃಷ್ಟವಸ್ತುಗಳಲ್ಲಿ ಬೇರೆ ಯಾವುದೂ ವಸ್ತುವು ಇಲ್ಲದಿರುವುದರಿಂದ **ಏಕಮೇವ** ಎಂದು ಹೇಳಲ್ಪಡುತ್ತದೆ. ಘಟಾದಿಗಳಿಗೆ ಮಣ್ಣು ಉಪಾದಾನಕಾರಣ. ಘಟಕ್ಕೂ ಮಣ್ಣಿಗೂ ಅಭೇದವು ಆದರೆ ಮಣ್ಣು ಹೊರತು ಮಣ್ಣಿಗೆ ಘಟಾದಿರೂಪವಾಗಿ ಪರಿಣಮಿಸಲಿಕ್ಕೆ ಕುಲಾಲಾದಿಗಳು ನಿಮಿತ್ತಕಾರಣರಾಗಿ ಕಂಡಂತೆ ಇಲ್ಲಿ ಸತ್ ರೂಪನಾದ ಬ್ರಹ್ಮನು ಹೊರತು ಸತ್ತಿಗೆ ಸಹಕಾರಿ ಕಾರಣವಾದುದು ಎರಡನೇದ್ದು ಇಲ್ಲ. ಏವಂಚ, ಅದ್ವಿತೀಯಂ=ಎರಡನೇದ್ದು ಬೇರೆ ವಸ್ತುವು ಇಲ್ಲ. ಹೀಗೆ ಅರ್ಥ ಹೇಳಿರುವರು. ಅದು ಅಯುಕ್ತವು. **ಅದ್ವಿತೀಯ** ಎಂಬ ಪದದಿಂದಲೇ ಕಾರ್ಯ ಕಾರಣ ಮೊದಲಾದ ಎರಡನೇ ವಸ್ತುವನ್ನೇ ನಿಷೇಧಿಸುವಾಗ ಏಕಮೇವ ಎಂಬ ಪದವು ವ್ಯರ್ಥವೇ ಆಗುವುದು. ಇನ್ನೊಬ್ಬನು ಹೀಗೆ ಹೇಳಿರುವನು. **ವೃಕ್ಷಸ್ಯ ಸ್ವಗತೋ ಭೇದಃ ಪತ್ರಪುಷ್ಪಫಲಾದಿಭಿಃ । ವೃಕ್ಷಾಂತರಾತ್ಸಜಾತೀಯೋ ವಿಜಾತೀಯಃ ಶಿಲಾದಿತಃ ॥ ತಥಾ ಸದ್ವಸ್ತುನೋ ಭೇದತ್ರಯಂ ಪ್ರಾಪ್ತಂ ನಿಷಿಧ್ಯತೇ । ಐಕ್ಯಾವಧಾರಣದ್ವೈತಪ್ರತಿಷೇಧೈಸ್ತ್ರಿಭಿಃ ಕ್ರಮಾತ್** ॥ ವೃಕ್ಷದಲ್ಲಿ ಮೂರು (೩) ಭೇದಗಳಿವೆ. (1) ಪತ್ರ ಪುಷ್ಪ ಫಲ ಮೊದಲಾದವುಗಳಿಂದ ಸ್ವಗತ (ತನ್ನಲ್ಲಿದ್ದ) ಭೇದ. (2) ಈ ವೃಕ್ಷಕ್ಕೆ ಮತ್ತೊಂದು ವೃಕ್ಷದಿಂದ ಸಜಾತೀಯ ಭೇದ. (3) ಕಲ್ಲು ಮೊದಲಾದವುಗಳಿಂದ ವಿಜಾತೀಯ ಭೇದ. ಹೇಗೋ ಹಾಗೆಯೇ ಸದ್ರೂಪನಾದ ಬ್ರಹ್ಮನಿಗೆ ಪ್ರಾಪ್ತಗಳಾದ ಮೂರು ಭೇದಗಳು. (1) ಐಕ್ಯ (2) ಅವಧಾರಣ (3) ದ್ವೈತ ಪ್ರತಿಷೇಧ ಅಂದರೆ **ಏಕಂ ಏವ ಅದ್ವಿತೀಯಂ** ಎಂಬ ಮೂರು ಪದಗಳಿಂದ ನಿಷೇಧಿಸಲ್ಪಡುತ್ತವೆ, ಎಂದು ಕೆಲವರು ಹೇಳುವರು. ಅದೂ ಅಯುಕ್ತವೆಂಬ ಅಭಿಪ್ರಾಯದಿಂದ ಯೋಗ್ಯವಾದ ಅರ್ಥಹೇಳುತ್ತಾರೆ—

**ಭಾ. ॥ (೧) ಏಕಮೇವಾದ್ವಿತೀಯಂ ಸ್ವಗತಭೇದವರ್ಜಿತಂ ಸಮಾನವರ್ಜಿತಂ ಚ ॥ (೨) ಏಕಮೇವಾದ್ವಿತೀಯಂ ತತ್ಸಮಾಭ್ಯಧಿಕವರ್ಜನಾತ್ । ಸ್ವಗತಾನಾಂ ಚ ಭೇದಾನಾಮಭಾವಾದ್ಬ್ರಹ್ಮ ಶಾಶ್ವತಂ ॥ ಇತಿ ಪ್ರವೃತ್ತೇ ॥ (೩) ಭೇದಾಭೇದನಿವೃತ್ತ್ಯರ್ಥಮೇವಶಬ್ದೋಽವಧಾರಕಃ । ಸಮಾಧಿಕನಿವೃತ್ತ್ಯರ್ಥಮದ್ವಿತೀಯಪದಂ ತಥಾ ॥ (೪) ಭೇದಾಭೇದೋಽಪ್ಯೇಕಶಬ್ದೋ ಯತೋಽವಯವಿನಿ ಸ್ಥಿತಃ । ಏಕಮೇವೇತ್ಯತಃ ಪ್ರಾಹ ನಾರಾಯಣಮಿಯಂ ಶ್ರುತಿಃ ॥ ಸಮೋ ದ್ವಿತೀಯಶಬ್ದಃ ಸ್ಯಾದದ್ವಿತೀಯೋಽಸಮತ್ವತಃ । ಸಾಧಿಕಃ ಕುತ ಏವ ಸ್ಯಾದಿತ್ಯಾಹ ಪರಮಾಶ್ರುತಿಃ ॥ ಇತಿ ಸಾಮಸಂಹಿತಾಯಾಂ ॥ ೧ ॥**

**ಅ ||** (೧) ಶ್ರೀಹರಿಯು ಏಕಮೇವ=ತನ್ನ ಅವಯವ, ಗುಣ, ಕರ್ಮ ರೂಪಾದಿಗಳಿಂದ ಬೇಧವಿಲ್ಲದವನು ಅದ್ವಿತೀಯಂ=ಸಮಾನಿಕನಿಲ್ಲದವನು (೨) (ತಾನು ಹೇಳಿದ ಅರ್ಥವನ್ನು ಆಚಾರ್ಯರು ಪ್ರಮಾಣ ಹೇಳಿ ದೃಢೀಕರಿಸುತ್ತಾರೆ-) ಶಾಶ್ವತನಾದ ಪರಬ್ರಹ್ಮನು ತನ್ನ ಅವಯವ ಗುಣಾದಿಗಳಿಂದ ಭೇದವಿಲ್ಲದಿರುವುದರಿಂದ ಏಕಮೇವ ಎಂದೂ, ತನಗೆ ಸಮಾನಿಕನೂ ತನ್ನಿಂದ ಉತ್ತಮನೂ ಇಲ್ಲದಿರುವುದರಿಂದ ಅದ್ವಿತೀಯನೆಂದೂ ಅನಿಸುತ್ತಾನೆ. (೩) (ಈ ಅರ್ಥವನ್ನೇ ಇನ್ನೊಂದು ಪ್ರಮಾಣಹೇಳಿ ದೃಢೀಕರಿಸುತ್ತಾರೆ-) (ಶ್ರೀಹರಿಗೆ ತನ್ನ ಅವಯವ ಗುಣಕರ್ಮಾದಿಗಳಿಂದ ಅಭೇದವೆಂದು ತಿಳಿಸುವುದಕ್ಕಾಗಿ **ಏಕಂ** ಎಂಬ ಶಬ್ದವು.) ಭೇದಾಭೇದವನ್ನು ಹೋಗಲಾಡಿಸುವುದಕ್ಕಾಗಿ ಅವಧಾರಣಾರ್ಥಕವಾದ (ನಿಶ್ಚಯಾರ್ಥಕವಾದ) ಏವ ಶಬ್ದವು. ಸಮಾನಿಕನೂ ಉತ್ತಮನೂ ಇಲ್ಲವೆಂದು ತೋರಿಸುವುದಕ್ಕಾಗಿ **ಅದ್ವಿತೀಯಂ** ಎಂಬ ಪದವು. (೪) (ಹಾಗಾದರೆ— ಏಕಂ=ಭೇದವಿಲ್ಲದಿದ್ದುದು, ಎಂದು ಏಕಶಬ್ದದಿಂದಲೇ ಭೇದವಿಲ್ಲವೆಂದಾಗುವಾಗ ಇದರಿಂದಲೇ ಭೇದಾಭೇದವೂ ಇಲ್ಲವೆಂದಾಗುವುದರಿಂದ **ಏಕಮೇವ** ಎಂಬುವಲ್ಲಿದ್ದ ಅವಧಾರಣಾರ್ಥಕವಾದ ಏವ ಶಬ್ದವು ವ್ಯರ್ಥವೆಂದರೆ—) ಅವಯವಿಯಾದ ಘಟಾದಿಗಳಲ್ಲಿ ಭೇದಾಭೇದವಿದ್ದರೂ ಅಂದರೆ ಪಟ (ವಸ್ತ್ರ)ಕ್ಕೆ ನೂಲಿನಿಂದ ಭೇದ, ನೇಯಲ್ಪಟ್ಟ ನೂಲಿನ ಸಮುದಾಯದಿಂದ ಅಭೇದ ಹೀಗೆ ಭೇದಾಭೇದವಿದ್ದರೂ, ಏಕಂ ಎಂಬ ಶಬ್ದವು ಇದೆ. (ಅದು ಅಭೇದವನ್ನು ಮಾತ್ರ ತಿಳಿಸುತ್ತದೆ. ಭೇದ ನಿರಾಸಕವಾಗುವುದಿಲ್ಲ.) ಆದಕಾರಣ ಅದರಂತೆಯೇ ಇಲ್ಲಿಯೂ **ಏಕಂ** ಎಂಬ ಪದದಿಂದ ನಾರಾಯಣನಿಗೂ ಆತನ ಅವಯವಾದಿಗಳಿಗೂ ಭೇದಾಭೇದವು ಎಂದು ಪ್ರಸಕ್ತವಾಗುವಾಗ, ಅದನ್ನು ಹೋಗಲಾಡಿಸುವುದಕ್ಕಾಗಿ ಈ ವೇದವು **ಏಕಮೇವ** ಎಂದು ಹೇಳಿರುತ್ತದೆ. (೫) (ಸಮಾನಿಕನೂ ಉತ್ತಮನೂ ಇಲ್ಲ) ಎಂದು ತಿಳಿಸುವುದಕ್ಕಾಗಿ **ಅದ್ವಿತೀಯಂ** ಎಂಬ ಪದವನ್ನು ಹೇಳಿದ್ದು ಎಂಬುದು ಅಯುಕ್ತವು. ಏಕೆಂದರೆ— **ಅದ್ವಿತೀಯಂ** ಎಂಬ ಪದದಿಂದ ಎರಡನೇ ವಸ್ತುವು ಮಾತ್ರ ಇಲ್ಲವೆಂದು ತೋರುತ್ತದೆ. ಎಂದರೆ—) ಸಮಾನಿಕನು ಎಂಬ ಅರ್ಥದಲ್ಲಿ **ದ್ವಿತೀಯ** ಎಂಬ ಶಬ್ದವಿದೆ. ಸಮಾನಿಕನು ಇಲ್ಲದಿರುವುದರಿಂದ ಅದ್ವಿತೀಯನೆನಿಸುತ್ತಾನೆ. ಅಧಿಕನು (ಉತ್ತಮನು) ಸುತರಾಂ ಇರಲಾರನು, ಎಂದು ಪರಮಶ್ರುತಿಯಲ್ಲಿ ಹೇಳಿದೆ, ಎಂದು ಸಾಮಸಂಹಿತೆಯಲ್ಲಿದೆ.

**ವಿ ||** (1) **ಅಸ್ಯ ಗೋರ್ದ್ವಿತೀಯೋನ ಭಾವ್ಯಂ** ಈ ಗೋವಿಗೆ ಇನ್ನೊಂದು ಎರಡನೇದ್ದು ಇರಬೇಕು, ಎಂದು ಹೇಳಿದಾಗ ಈ ಗೋವಿಗೆ ಸದೃಶವಾದ ಇನ್ನೊಂದು ಗೋವನ್ನೇ ತೆಗೆದುಕೊಳ್ಳಬೇಕಲ್ಲದೆ ಇನ್ನೊಂದು ಕುದುರೆಯನ್ನಾಗಲೀ ಕತ್ತೆಯನ್ನಾಗಲೀ ತರುವುದಲ್ಲ, ಎಂದು ಮಹಾಭಾಷ್ಯದಲ್ಲಿ ಹೇಳಿದೆ. ಆದಕಾರಣ **ದ್ವಿತೀಯ** ಎಂಬುದಕ್ಕೆ ಸಮಾನಿಕನೆಂದೇ ಅರ್ಥವು (2) ದ್ವಿತೀಯ ಪದದಿಂದ ಎರಡನೇ ವಸ್ತುವನ್ನು ಮಾತ್ರ ಹೇಳಿದರೆ— **ಅದ್ವಿತೀಯ** ಪದದಿಂದಲೇ ತಾನು ಹೊರತು ಬೇರೆ ಎಲ್ಲಾ ವಸ್ತುಗಳನ್ನೂ, ನಿಷೇಧಿಸಲಿಕ್ಕೆ ಬರುವುದರಿಂದ ಸಜಾತೀಯಗಳನ್ನು ನಿಷೇಧಿಸತಕ್ಕ **ಏವ** ಶಬ್ದಾದಿಗಳು ವ್ಯರ್ಥವು. ಏವ ಶಬ್ದಕ್ಕೆ ವೈಯರ್ಥ್ಯವು ಬರಬಾರದೆಂಬುದಕ್ಕಾಗಿ **ದ್ವಿತೀಯ** ಎಂಬ ಶಬ್ದವು ವಿಜಾತೀಯವಾದ ಎರಡನೇ ವಸ್ತುಪರವೆಂದು ಸಂಕೋಚ ಮಾಡಿಕೊಳ್ಳುವುದಾದರೆ ಸಮವಾದ ಎರಡನೇ ವಸ್ತುವು ಇಲ್ಲವೆಂದೂ ಸಂಕೋಚ ಮಾಡಬೇಕಾಗುವುದು. (3) ಹಾಗಾದರೆ **ಅದ್ವಿತೀಯಂ** ಎಂಬುದಕ್ಕೆ ಸಮಾನಿಕನಿಲ್ಲವೆಂದೇ ಅರ್ಥವಾಗಲಿ. ಅಧಿಕನು ಇಲ್ಲವೆಂದು ಅರ್ಥವು ಸಿದ್ಧಿಸದಿರಲಿ, ಎಂದರೆ— ಸಮಾನಿಕನೇ ಇಲ್ಲದಿರುವಾಗ ಅಧಿಕನು ಇಲ್ಲವೆಂದು ಸುತರಾಂ ಸಿದ್ಧಿಸುತ್ತದೆ. || ೧ ||

**ಪೀ**— ಹೀಗೆ **ಅದ್ವಿತೀಯಂ** ಎಂಬುವುದಕ್ಕೆ ತಾನು ಅರ್ಥ ಹೇಳಿ, ಈಗ ವಿಜಾತೀಯ ವಸ್ತುಗಳಿಂದ ಭೇದವಿಲ್ಲವೆಂದು ಅದ್ವಿತೀಯ ಶಬ್ದಾರ್ಥವು, ಎಂದು ಪರರು ಹೇಳಿದ್ದು ಅಯುಕ್ತವೆನ್ನುತ್ತಾರೆ—

**ಭಾ. || (೧) ನ ಚ ವಿಜಾತೀಯಭೇದವರ್ಜನಂ ನಾಮ ಕುತ್ರಚಿತ್ಪ್ರಸಿದ್ಧಂ || (೨)**

**ತತ್ಪ್ರಮಾಣಾಭಾವಾಚ್ಚ ॥ (೩) ಏಕ ಏವಾದ್ವಿತೀಯೋ ಭಗವಾಂಸ್ತತ್ಸದೃಶಃ ಪರೋ ನಾಸ್ತೀತಿ ಚ ಶ್ರುತಿಃ । ಏಕೋ ಭಗವಾಂಸ್ತತ್ಸದೃಶಪರೌ ನ ಸ್ತಃ । ಇತಿ ಚ ॥ (೪) ವಿಜಾತೀಯಾಭಾವೇ ಯೇನಾಶ್ರುತಂ ಶ್ರುತಂ ಭವತೀತ್ಯಾದಿವಿಶೇಷಣಂ ಚ ವ್ಯರ್ಥಂ ॥ (೫) ಯಸ್ಯ ಕಸ್ಯಚಿಜ್ಜ್ಞಾನಂ ತಜ್ಜ್ಞಾನಮೇವ ಭವತೀತಿ ॥ (೬) ಅಜ್ಞಾನಮಪಿ ಜ್ಞಾನಮೇವ ಭವತಿ । ಭೇದಾಭಾವಾತ್ ॥ ೨ ॥**

**ಅ** ॥ (೧) ವಿಜಾತೀಯ ವಸ್ತುಗಳಿಂದ ಭೇದವಿಲ್ಲವೆಂಬುವುದು ಎಲ್ಲಿಯೂ ಪ್ರಸಿದ್ಧವಲ್ಲ. (ಅಂದರೆ, ವಿಜಾತೀಯ ವಸ್ತುಗಳಿಂದ ಭೇದವಿಲ್ಲವೆಂಬುದು ಎಲ್ಲಿಯಾದರೂ ಪ್ರಸಿದ್ಧವಾಗಿದ್ದರೆ— **ಅದ್ವಿತೀಯಂ** ಎಂಬ ಪದಕ್ಕೆ ವಿಜಾತೀಯ ಭೇದವಿಲ್ಲ ಎಂಬ ಅರ್ಥವಾಗುತ್ತಿತ್ತು. ಆ ಅರ್ಥವೇ ಅಪ್ರಸಿದ್ಧವಾಗಿರುವಾಗ ಆ ಅರ್ಥದಿಂದ ಈ ಪದಕ್ಕೆ ಆ ಅರ್ಥವಿದೆ ಎಂಬುದು ಕೂಡಲಾರದು. ಏಕೆಂದರೆ—ವ್ಯುತ್ಪತ್ತಿಯೇ (ಅವಯವಾರ್ಥವನ್ನು ಹೇಳುವುದೇ) ಕೂಡಲಾರದು. ಅದು ಪ್ರಸಿದ್ಧವೇ ಅಲ್ಲ ಏಕೆಂದರೆ—ವಿಜಾತೀಯಗಳಾದ ಶಿಲಾದಿಗಳಿಂದ ವೃಕ್ಷಕ್ಕೆ ಭೇದವಿದ್ದರೂ ಆ ಭೇದವಿಲ್ಲವೆಂಬುದು ಎಲ್ಲಿಯೂ ಇಲ್ಲ. ಭೇದವಿಲ್ಲದಿದ್ದರೆ ವೃಕ್ಷವೇ ಶಿಲೆಯಾಗಬೇಕಾಗುವುದು. ಆಗ ಭೇದದಿಂದ ಕೂಡಿದ ವಿಜಾತೀಯ ಎಂಬುದೇ ಕೂಡದೆ ಹೋಗುವುದು.) (ಹಾಗಾದರೆ—ಶಶವಿಷಾಣಾದಿಗಳು ಅಪ್ರಸಿದ್ಧಗಳಾದರೂ ಶಶವಿಷಾಣಾದಿಪದಗಳಿಗೆ ಮೊಲದ ಕೋಡು ಎಂಬ ಅರ್ಥವಿದ್ದಂತೆಯೇ ವಿಜಾತೀಯ ಭೇದವಿಲ್ಲವೆಂಬುದು ಅಪ್ರಸಿದ್ಧವಾದರೂ **ಅದ್ವಿತೀಯಂ** ಎಂಬ ಪದಕ್ಕೆ ಆ ಅರ್ಥವು ಏಕೆ ಆಗಲಾರದೆಂದರೆ ಹಾಗೆ ಹೇಳಕೂಡದು. ಹಾಗೆ ಇಟ್ಟುಕೊಂಡರೆ ನಮ್ಮ ಇಷ್ಟವು ಸಿದ್ಧವಾಯಿತು. ಹೇಗೆಂದರೆ—ವಿಜಾತೀಯ ಭೇದವಿಲ್ಲವೆಂಬುವಲ್ಲಿ ಪ್ರಮಾಣವಿಲ್ಲವಾದರೆ—ವಿಜಾತೀಯ ಭೇದವಿದೆ ಎಂಬ ವಿಷಯದಲ್ಲಿ ಪ್ರಮಾಣವಿದೆ ಎಂದಾಗ ಬೇಕಾಯಿತು. (೨) (ಇನ್ನೊಂದು ದೂಷಣ ಹೇಳುತ್ತಾರೆ-) **ಅದ್ವಿತೀಯಂ** ಎಂಬ ಶಬ್ದಕ್ಕೆ ವಿಜಾತೀಯವಾದ ಭೇದವಿಲ್ಲ, ಎಂಬ ಅರ್ಥದಲ್ಲಿ ಪ್ರಮಾಣವಿಲ್ಲ. (ಅಂದರೆ ಶಶವಿಷಾಣಾದಿಶಬ್ದಗಳನ್ನು ಕೇಳಿದ ಒಡನೆಯೇ ಮೊಲದ ಕೋಡು ಇತ್ಯಾದಿ ಅರ್ಥಗಳು ತೋರುವುದರಿಂದ ಶಶವಿಷಾಣಾದಿಶಬ್ದಗಳಿಗೆ ಮೊಲದ ಕೋಡು ಇದು ಮೊದಲಾದ ಅರ್ಥಗಳಿವೆ, ಎಂಬಲ್ಲಿ ಪ್ರಮಾಣವಿದ್ದಂತೆ ಇಲ್ಲಿ ಅಂತಹ ಪ್ರಮಾಣವಿಲ್ಲ.) (೩) ವೇದವಿರೋಧವಿದ್ದ ಪ್ರಯುಕ್ತವೂ ಅದ್ವಿತೀಯಶಬ್ದಕ್ಕೆ ಅದ್ವೈತಿಗಳು ಹೇಳಿದ ಅರ್ಥವು ಕೂಡುವುದಿಲ್ಲ. ಪರಂತು ನಾವು ಹೇಳಿದ ಅರ್ಥವೇ ಯುಕ್ತವು, ಎಂಬ ಅಭಿಪ್ರಾಯದಿಂದ ಎರಡು (1) ವೇದವಾಕ್ಯಗಳನ್ನು ಹೇಳುತ್ತಾರೆ.) ಶ್ರೀಹರಿಯು ಒಬ್ಬನೇ. ಅವನಿಗೆ ಸದೃಶನಾದವನು ಇನ್ನೊಬ್ಬನಿಲ್ಲ ಎಂದು ವೇದವು (2) ಶ್ರೀಹರಿಯು ಒಬ್ಬನೇ. ಅವನಿಗೆ ಸಮಾನಿಕನೂ ಉತ್ತಮನೂ ಇಲ್ಲ, ಎಂದೂ ವೇದಪ್ರಮಾಣವಿದೆ (೪)(ವಿಜಾತೀಯವೇ ಇಲ್ಲದಿರುವುದರಿಂದ ವಿಜಾತೀಯಭೇದವೂ ಇಲ್ಲ ಎಂದು ಹೇಳುತ್ತೇವೆ ಎನ್ನಕೂಡದು. ಏಕೆಂದರೆ—ವಿಜಾತೀಯವಿಲ್ಲವಾದರೂ ವಿಜಾತೀಯ ಭೇದವನ್ನು ಒಡಂಬಡಬೇಕು. ಭೇದವನ್ನು ಒಡಂಬಡದಿದ್ದರೆ—ಪಾರಮಾರ್ಥಿಕದಲ್ಲಿಯೂ, ಅನಿರ್ವಚನೀಯದಲ್ಲಿಯೂ ಅಸದ್ವೈಲಕ್ಷಣ್ಯವು ಸಿದ್ಧಿಸದೆ ಹೋಗುವುದು.) (ಇನ್ನೊಂದು ದೋಷ ಹೇಳುತ್ತಾರೆ—) ವಿಜಾತೀಯವಿಲ್ಲವಾದರೆ **ಯೇನಾಶ್ರುತಂ ಶ್ರುತಂ ಭವತಿ** ಇದುಮೊದಲಾದ ವಿಶೇಷಣವೂ ವ್ಯರ್ಥವಾಗುವುದು (ಅಂದರೆ— ಬ್ರಹ್ಮನಿಂದ ವಿಲಕ್ಷಣವಾದ ಎರಡನೇ ವಸ್ತುವು ಇದ್ದರೆ ಬ್ರಹ್ಮನಿಗೆ ಅಶ್ರುತತ್ವ ಮೊದಲಾದ ವಿಶೇಷಣವು ಕೂಡುವುದು. ಎರಡನೇ ವಸ್ತುವೇ ಇಲ್ಲವಾದರೆ—ಅಶ್ರುತತ್ತ್ವ ಮೊದಲಾದ ವಿಶೇಷಣಗಳು ವಿರುದ್ಧವಾದ ಅರ್ಥವುಳ್ಳವುಗಳಾಗುವವು ) (೫) (ವಿಜಾತೀಯವಾದುದು ಯಾವುದಾದರೊಂದನ್ನು ಒಡಂಬಟ್ಟು ಭೇದಮಾತ್ರವನ್ನೂ ನಿಷೇಧಿಸುತ್ತೇವೆಂದೂ ಹೇಳಕೂಡದು. ಏಕೆಂದರೆ— ) (ವಿಜಾತೀಯವನ್ನು ಅಂಗೀಕರಿಸಿ ವಿಜಾತೀಯ ಭೇದಮಾತ್ರವನ್ನು ನಿರಾಕರಿಸುವುದಾದರೆ—ಘಟಾದಿಗಳಿಗೂ ಬ್ರಹ್ಮನಿಗೂ ಭೇದವಿಲ್ಲದಿರುವುದರಿಂದ ಯಾವುದಾದರೂ ಘಟಪಟಾದಿಗಳ ಜ್ಞಾನವೇ ಬ್ರಹ್ಮಜ್ಞಾನವು ಆಗಬೇಕಾಗುವುದು. (ಅದಕಾರಣ

**ಯೇನ ವಿಜ್ಞಾತೇನ ಅವಿಜ್ಞಾತಂ ವಿಜ್ಞಾತಂ ಸ್ಯಾತ್** ಎಂಬುದು ಕೂಡದೆ ಹೋಗುವುದು ಏಕೆಂದರೆ– ಘಟಜ್ಞಾನವು ಬಂದೊಡನೆ ಎಲ್ಲಾ ವಸ್ತುಗಳ ಜ್ಞಾನವು ಬರುವುದಿಲ್ಲವಷ್ಟೆ.) (೬) (**ಇನ್ನೊಂದು ದೋಷ ಹೇಳುತ್ತಾರೆ** —) ವಿಜಾತೀಯ ಭೇದವೇ ಇಲ್ಲವಾದರೆ ಜ್ಞಾನ ಮತ್ತು ಅಜ್ಞಾನಗಳು ಪರಸ್ಪರ ವಿಜಾತೀಯ ಗಳಾಗಿದ್ದು ಅವುಗಳಿಗೆ ಭೇದವಿಲ್ಲದಿರುವುದರಿಂದ ಅಜ್ಞಾನವೂ ಜ್ಞಾನವೇ ಆಗಬೇಕಾಗುವುದು. (ಏವಂಚ **ಅವಿಜ್ಞಾತಂ** ತಿಳಿಯಲ್ಪಡದಿದ್ದುದು) **ವಿಜ್ಞಾತಂ** (ತಿಳಿಯಲ್ಪಟ್ಟದ್ದು) **ಸ್ಯಾತ್** ಎಂಬ ಉಕ್ತಿಯು ಕೂಡದೆ ಹೋಗುವುದು.) (ಅಥವಾ ವಿಜಾತೀಯ ಭೇದವಿಲ್ಲವಾದರೆ— ಜಗತ್ತಿಗೂ ಉಪಾದಾನಕಾರಣನಾದ ಬ್ರಹ್ಮ ನಿಗೂ ಭೇದವಿಲ್ಲದಿರುವುದರಿಂದ ಅಜ್ಞಾನವೂ ಜ್ಞಾನರೂಪನಾದ ಬ್ರಹ್ಮನೇ ಆಗಬೇಕಾಗುವುದು ‖ ೨ ‖

**ಪೀ**— ಯಾವುದಾದರೊಂದು ವಸ್ತುವಿನ ಜ್ಞಾನವೇ ಬ್ರಹ್ಮಜ್ಞಾನವೆಂದು ಹೇಳಿದ್ದು ಅಯುಕ್ತವು. ಘಟಪಟಾದಿಗಳು ಮಿಥ್ಯೆಯು, ಬ್ರಹ್ಮನು ಸತ್ಯನು, ಎಂದು ಅವುಗಳಿಗೆ ಭೇದವಿದೆ ಆದುದರಿಂದಲೇ ಅಜ್ಞಾನವೂ ಬ್ರಹ್ಮನೇ ಎಂದು ಹೇಳಿದ್ದು ಅಯುಕ್ತವು, ಎಂದರೆ—

**ಭಾ. ‖ (೧) ನ ಚ ಮಿಥ್ಯಾ ಸತ್ಯಮಿತಿ ಭೇದಃ । ತಸ್ಯೈವ ವಿಜಾತೀಯತ್ವಪ್ರಾಪ್ತೇಃ‖ (೨) ತದ್ಭೇದಸ್ಯ ಮಿಥ್ಯಾತ್ವೇ ತದಭೇದಸ್ಯ ಸತ್ಯತ್ವಪ್ರಸಂಗಾಚ್ಚ ‖ (೩) ಮಿಥ್ಯಾಸತ್ಯಯೋ- ರೈಕ್ಯೇ ಇದಂ ಮಿಥ್ಯಾ ಇದಂ ಸತ್ಯಮಿತಿ ಭೇದಾಭಾವಾಜ್ಜೀವೇಶಭೇದಾದೇರಪಿ ಸತ್ಯತ್ವಪ್ರ- ಸಂಗಃ ‖ (೪) ಅತಃ ಪರಮಾರ್ಥಂ ಬ್ರಹ್ಮಾನ್ಯನ್ಮಿಥ್ಯೇತ್ಯಪಿ ನ ಯುಜ್ಯತೇ ‖ (೫) ಅತಃ ಸಜಾತೀಯಃ ಸ್ವಗತಭೇದೋಽಧಿಕಾಖ್ಯಂ ವಿಜಾತೀಯಂ ಚಾತ್ರ ನಿಷಿಧ್ಯತೇ ‖ ೩ ‖**

ಅ ‖ (೧) ಮಿಥ್ಯೆಯು, ಸತ್ಯವು, ಎಂಬ ಭೇದವಿಲ್ಲ. ಏಕೆಂದರೆ ಅದೇ **ವಿಜಾತೀಯವಾಗ** ಬೇಕಾಗುವುದು. (ಅಂದರೆ ಘಟಾದಿಗಳಿಗೂ ಬ್ರಹ್ಮನಿಗೂ ಮಿಥ್ಯಾತ್ವ ಸತ್ಯತ್ವಗಳಿಂದ ಭೇದವನ್ನು ಅಂಗೀಕರಿಸಿದರೆ ಬ್ರಹ್ಮನಿಂದ ಭಿನ್ನವಾದ ಮಿಥ್ಯೆಯಾದ ಘಟಾದಿಗಳು ಅಥವಾ ಅಜ್ಞಾನ ಇವು ಗಳಿಗೆ **ವಿಜಾತೀಯತ್ವವನ್ನು** ಒಡಂಬಡಬೇಕಾಗುವುದರಿಂದ ವಿಜಾತೀಯ ಭೇದವಿಲ್ಲದಿರುವುದು **ಅದ್ವಿತೀಯಂ** ಎಂಬ ಶಬ್ದದ ಅರ್ಥವು ಎಂಬುವುದು ಕೂಡುವುದಿಲ್ಲವೆಂದಾಯಿತು) (೨) (**ಮಿಥ್ಯಾ ಸತ್ಯ** ಗಳಿಗೆ ಇದ್ದ ಭೇದವು ಸತ್ಯವಾಗಿದ್ದರೆ ನೀವು ಹೇಳಿದ್ದು ಆಗುತ್ತಿತ್ತು ಭೇದವು ಸತ್ಯವಲ್ಲ. ಪರಂತು ಆ ಭೇದವೂ ಮಿಥ್ಯೆಯೇ. ಏವಂಚ ಮಿಥ್ಯಾಭೂತವಾದ ವಿಜಾತೀಯ ಭೇದವು ಇದ್ದರೂ ಅದೂ ಮಿಥ್ಯೆ ಯಾದುದರಿಂದ **ಅದ್ವಿತೀಯಂ** ಎಂಬ ನಿಷೇಧವು ಯುಕ್ತವಾಗುತ್ತದೆ, ಎಂದರೆ—) ಮಿಥ್ಯಾ ಸತ್ಯಗಳಿಗೆ ಇದ್ದ ಭೇದವೂ ಮಿಥ್ಯೆಯು (ಸುಳ್ಳು) ಎಂದಾದರೆ— ಮಿಥ್ಯಾ ಸತ್ಯಗಳ ಅಭೇದವು ಸತ್ಯವಾಗಬೇಕಾಗು ವುದು (ಪರಸ್ಪರ ವಿರುದ್ಧಗಳಾದ ಎರಡರಲ್ಲಿ ಒಂದನ್ನು ನಿಷೇಧಿಸಿದಾಗ ಮತ್ತೊಂದು ಸಿದ್ಧವಾಗುವುದು. ಶುಕ್ತಿ (ಮುತ್ತಿನ ಚಿಪ್ಪು) ಯಲ್ಲಿ ಶುಕ್ತಿಭೇದವು ಸುಳ್ಳಾದಾಗ ಶುಕ್ತ್ಯಭೇದವು ಸತ್ಯವೆಂದು ಸಿದ್ಧವಾಗುತ್ತದೆ. ಏವಂಚ ಘಟಪಟಾದಿಗಳಿಗೆ ಬ್ರಹ್ಮತ್ವವೂ, ಅಜ್ಞಾನಕ್ಕೆ ಜ್ಞಾನತ್ವವೂ, ಬರಬೇಕಾಗುವುದೆಂದು ಹೇಳಿದ್ದು ಯುಕ್ತವಾದೀತು) (ಇದರಿಂದಲೇ ಸಜಾತೀಯ ವಸ್ತುಗಳಿಂದ ಭೇದವಿಲ್ಲದಿರುವುದು **ಏಕಮೇವ** ಎಂಬು ವಲ್ಲಿದ್ದ **ಏವ** ಎಂಬ ಅವಧಾರಣದ ಅರ್ಥವು, ಎಂದು ಪರರು ಹೇಳಿದ್ದು ಅಯುಕ್ತವೆಂದು ಸಿದ್ಧವಾಯಿತು. ಹೇಗೆಂದರೆ— ಸಜಾತೀಯ ವಸ್ತುಗಳಿಂದ ಭೇದವಿಲ್ಲವೆಂಬುದು ಎಲ್ಲಿಯೂ ಪ್ರಸಿದ್ಧವಾಗಿಲ್ಲ. ಒಂದು ವೃಕ್ಷಕ್ಕೆ ಮತ್ತೊಂದು ವೃಕ್ಷದಿಂದ ಭೇದವಿದೆ. ಪರಂತು ಭೇದವಿಲ್ಲವೆಂಬುವುದು ಎಲ್ಲಿಯೂ ಇಲ್ಲ. ಭೇದ ವಿಲ್ಲವೆಂದಂದಗೀಕರಿಸಿದರೆ– ಒಂದು ವೃಕ್ಷಕ್ಕೆ ಇನ್ನೊಂದು ವೃಕ್ಷನಿಂದ ಅಭೇದವು ಬರಬೇಕಾಗುವುದು. ಆದುದ ರಿಂದ ಸಾಜಾತ್ಯವೇ (ಆ ಮರವು ಸದೃಶ ಜಾತೀಯದ್ದು ಎಂಬುದೇ) ಕೂಡದೆ ಹೋಗುವುದು.) (೩) (ಹೀಗೆ ಸಜಾತೀಯ ವಿಜಾತೀಯ ಸ್ವರೂಪಗಳನ್ನು ಒಡಂಬಟ್ಟು ಈಗ ಅವುಗಳಿಗೆ ಭೇದಮಾತ್ರ ಅಂಗೀಕರಿಸದಿದ್ದರೆ

ಇನ್ನೊಂದು ದೋಷ ಹೇಳುತ್ತಾರೆ-) ಮಿಥ್ಯೆ ಸತ್ಯಗಳು ಒಂದೇಯಾದರೆ ಇದು ಸತ್ಯವು, ಇದು ಮಿಥ್ಯೆಯು, ಎಂಬ ಭೇದವಿಲ್ಲದ್ದರಿಂದ ಜೀವೇಶ, ಜೀವ ಪರಮಾತ್ಮ ಭೇದ ಮೊದಲಾದವುಗಳೂ ಸತ್ಯವಾಗಬೇಕಾಗುವುವು. (ಸತ್ಯನೇ ಎಂದು ಒಡಂಬಟ್ಟ ಬ್ರಹ್ಮನಿಗೂ ಮಿಥ್ಯಾತ್ವವು ಬರಬೇಕಾಗುವುದು) (ಅಂದರೆ—ಮಿಥ್ಯೆಯಾದ ಸಜಾತೀಯಕ್ಕೂ ವಿಜಾತೀಯಕ್ಕೂ ಸತ್ಯನಾದ ಬ್ರಹ್ಮನಿಗೂ ಐಕ್ಯವನ್ನಂಗೀಕರಿಸಿದರೆ-ಆಗ ಎಲ್ಲಾ ವಸ್ತುಗಳೂ ಮಿಥ್ಯೆಯೇ ಆಗಬೇಕಾಗುವುವು. ಅಥವಾ ಎಲ್ಲವೂ ಸತ್ಯವೇ ಆಗಬೇಕಾಗುವುವು. ಇದು ಮಿಥ್ಯೆಯು, ಇದು ಸತ್ಯವು, ಎಂಬ ಭೇದ ಜ್ಞಾನವು ಇಲ್ಲವಷ್ಟೆ ಏವಂಚ ಒಂದೇ ಪ್ರಕಾರವಾದುದರಲ್ಲಿ ಇದು ಸತ್ಯ ಇದು ಮಿಥ್ಯೆಯೆಂಬ ಭೇದವಿಲ್ಲದಿರುವುದರಿಂದ ಬ್ರಹ್ಮನಿಗೂ ಮಿಥ್ಯಾತ್ವವಾಗಲೀ ಜೀವೇಶ ಭೇದಾದಿಗಳಿಗೆ ಸತ್ಯತ್ವವಾಗಲೀ ಬರಬೇಕಾಗುವುದು.) (೪) (ಹಾಗೆ ಇಟ್ಟುಕೊಂಡರೆ ಬ್ರಹ್ಮನೊಬ್ಬನೇ ಪರಮಾರ್ಥ ಸತ್ಯನು, ಬೇರೆ ಎಲ್ಲವೂ ಮಿಥ್ಯೆಯು, ಎಂಬ ಅದ್ವೈತಿಗಳ ಸಿದ್ಧಾಂತವು ಕೂಡದೇ ಹೋಗುವುದೆನ್ನುತ್ತಾರೆ—) ಬ್ರಹ್ಮನಿಗೆ ಮಿಥ್ಯಾತ್ವವನ್ನೂ ಜೀವೇಶ ಭೇದಾದಿಗಳಿಗೆ ಸತ್ಯತ್ವವನ್ನೂ ಅಂಗೀಕರಿಸಿದುದರಿಂದ ಪರಬ್ರಹ್ಮನೊಬ್ಬನೇ ಪಾರಮಾರ್ಥಿಕ ಸತ್ಯನು. ಬೇರೆ ಎಲ್ಲವೂ ಮಿಥ್ಯೆಯಾದುದು. (ಸುಳ್ಳು) ಎಂಬುದು ಕೂಡುವುದಿಲ್ಲ. (೫) ಆದಕಾರಣ ಸಜಾತೀಯವಾದ ಸ್ವಗತ ಭೇದವೂ ವಿಜಾತೀಯವಾದ ಉತ್ತಮವಾದುದೂ ಈ ವಾಕ್ಯದಲ್ಲಿ ನಿಷೇಧಿಸಲ್ಪಡುತ್ತದೆ. ಅಂದರೆ—**ಏಕಮೇವಾದ್ವಿತೀಯಂ** ಎಂಬ ವೇದ ವಾಕ್ಯದಲ್ಲಿ **ಅದ್ವಿತೀಯಂ** ಎಂಬ ಪದದಿಂದ ಸದೃಶವಾದ ಸಜಾತೀಯವೂ, **ಏಕಮೇವ** ಎನ್ನುವುದರಿಂದ ಸ್ವಗತ ಭೇದವೂ **ಅದ್ವಿತೀಯ** ಪದದಿಂದಲೇ ಅಧಿಕ (ಉತ್ತಮ) ವಾದ ವಿಜಾತೀಯವೂ ನಿಷೇಧಿಸಲ್ಪಡುತ್ತದೆ: ಎಂದೇ ಅರ್ಥವನ್ನು ಇಟ್ಟುಕೊಳ್ಳಬೇಕು. (ನಿಕೃಷ್ಟವಾದ ವಿಜಾತೀಯವು ಇದ್ದ ಪ್ರಯುಕ್ತ ಅಧಿಕಾಖ್ಯಂ ಎಂದು ಹೇಳಿರುವರು. ಅಂದರೆ—ಹೀನವಾದ ವಿಜಾತೀಯವು ಇದೆ. ಉತ್ತಮವಾದ ವಿಜಾತೀಯವು ಇಲ್ಲ) ‖ ೩ ‖

**ಟೀ**—ಕೇಳುವವನ ಮನಸ್ಸು ಕಳವಳಪಡಬಾರದೆಂಬ ಅಭಿಪ್ರಾಯದಿಂದ **ಏಕಮೇವಾದ್ವಿತೀಯಂ** ಎಂಬುದಕ್ಕೆ ಅರ್ಥಹೇಳಿ ಈಗ ಅಪ್ರತಿಪತ್ತಿ (ಶಬ್ದಾರ್ಥಗಳು ತಿಳಿಯದಿರುವಿಕೆ) ವಿಪ್ರತಿಪತ್ತಿ (ವಿರುದ್ಧಾರ್ಥಗಳನ್ನು ಹೇಳುವ ಎರಡು ವಾಕ್ಯಗಳಿಂದುಂಟಾಗುವ ಸಂಶಯ) ಗಳನ್ನು ಹೋಗಲಾಡಿಸುವುದಕ್ಕಾಗಿ **ಸದೇವ ಸೋಮ್ಯ** ಇದು ಮೊದಲಾದ ಪ್ರಕರಣಕ್ಕೆ ಪ್ರಮಾಣವನ್ನು ಹೇಳಿ ಅರ್ಥಹೇಳುತ್ತಾರೆ—

**ಭಾ. ‖ (೧) ಸರ್ವೋತ್ತಮತ್ವಾತ್ಸನ್ನಾಮಾ ಹರಿರ್ನಾರಾಯಣಃ ಪ್ರಭುಃ ‖ (೨) ಸೋಽಸೃಜತ್ಪ್ರಥಮಂ ದೇವೀಂ ತೇಜಆಖ್ಯಾಂ ಶ್ರಿಯಂ ಸತೀಂ ‖ (೩) ತತೇ(ತ್ರ) ಸ್ಥಿತೇನ ರೂಪೇಣ ಸಾಽಜ್ವೈವ ಹಿ ಯತಃ ಸದಾ । ತೇಜ ಇತ್ಯುಚ್ಯತೇ ತಸ್ಮಾಜ್ಜನೇರ್ವಾ ತತ ಏವ ತು ‖ (೪) ಯದಸ್ಯಾಃ ಸೃಷ್ಟಿಕೃದ್ರೂಪಂ ವಿದ್ಯಾಖ್ಯಂ ಜಾಯತೇ ಹರೇಃ ‖ (೫) ಮನ್ವಾಖ್ಯಃ ಪ್ರಾಣ ಏವಾಸ್ಯಾ ಅಮ್ನಾಮಾ ಜಾಯತೇಽಥ ಚ (ಹರೇಃ) । ಬ್ರಾಹ್ಮಣಾದಿಚತುರ್ವರ್ಣಾಃ‖ (೬) ತತಶ್ಚಾನ್ನಾಭಿಧೋ ಹರಃ ‖ (೭) ತೇಜಸ್ಸಂಸ್ಥಾ ಚ ಸಾ ದೇವೀ ಪ್ರಾಣೋಽಪ್ಸು ಸ್ಥಿತ ಏವ ಚ । ತತಸ್ತೇಜಸ ಏವಾಽಪೋ ಜಾಯಂತೇ ‖ (೮) ಽನ್ನಸ್ಥಿತೋ ಹರಃ । ಜಾಯತೇಽತೋಽದ್ಭ್ಯ ಏವಾನ್ನಂ ಪೃಥಿವೀ ತ್ವನ್ನರೂಪಿಣೀ ‖ ೧,೨,೩,೪ ‖ ಇತಿ ದ್ವಿತೀಯಃ ಖಂಡಃ ‖ ‖ ೮—೪ ‖** **‖ ೪ ‖**

**ಅ** ‖ (೧) ಸರ್ವಸಮರ್ಥನಾದ ನಾರಾಯಣನು †ಸರ್ವೋತ್ತಮನಾದುದರಿಂದ **ಸತ್** ಎನಿಸುತ್ತಾನೆ.

† (1) **ಸತ್ ಇತ್ಯಸ್ತಿತಾಮಾತ್ರಂ ಸೂಕ್ಷ್ಮಂ ನಿರ್ವಿಶೇಷಂ ಸರ್ವಗತಮೇಕಂ ನಿರಂಜನಂ ನಿತ್ಯಂ ನಿರವಯವಂ**

(೨) (ಹೀಗೆ ತತ್ತೇಜೋಽಸೃಜತ ಎಂಬ ವಾಕ್ಯದಲ್ಲಿದ್ದ ತಚ್ಛಬ್ದದಿಂದ ಸತ್ ಶಬ್ದದಿಂದ ಹೇಳಲ್ಪಡತಕ್ಕ ನಾರಾಯಣನನ್ನೇ ಇಟ್ಟುಕೊಳ್ಳಬೇಕೆಂದು ಹೇಳಿ ಆ ವಾಕ್ಯಕ್ಕೆ ಅರ್ಥಹೇಳುತ್ತಾರೆ–) *ಆ ನಾರಾಯಣನು ಪ್ರಥಮತಃ, ಪ್ರಕಾಶಿಸಿಕೊಂಡಿರುವುದರಿಂದ §ತೇಜಃ ಎನಿಸಿಕೊಂಡ ಅನಾದಿಯಿಂದ ಒಂದೇರೀತಿಯಾಗಿರತಕ್ಕ ಲಕ್ಷ್ಮೀದೇವಿಯನ್ನು ಪ್ರಕಟಿಸಿದನು (೩) (ಲಕ್ಷ್ಮೀದೇವಿಯು ಅನಾದಿಯಿಂದ ಇರುವವಳಾದರೆ ಪರಬ್ರಹ್ಮನಿಂದ ಅವಳಿಗೆ ಸೃಷ್ಟಿಯಾಯಿತೆಂಬುದು ಕೂಡಲಾರದು, ಎಂದು ಹೇಳಕೂಡದು. ಒಂದು ರೂಪದಿಂದ ಶ್ರೀಹರಿಯ ಸಮೀಪದಲ್ಲಿ ಸರ್ವದಾ ಲಕ್ಷ್ಮೀದೇವಿಯು ಇದ್ದಾಳೆ ಮತ್ತೊಂದು ರೂಪದಿಂದ ಅವಳಿಗೆ ಸೃಷ್ಟಿಯು ಕೂಡುತ್ತದೆ. ತೇಜಃ ಎಂಬ ಶಬ್ದವೇ ಆ ಎರಡು ಅರ್ಥಗಳನ್ನು ತಿಳಿಸುತ್ತದೆ. ಎನ್ನುತ್ತಾರೆ–) ಒಂದು ರೂಪದಿಂದ ಲಕ್ಷ್ಮೀದೇವಿಯು ಸರ್ವತ್ರ ವ್ಯಾಪ್ತನಾದ ನಾರಾಯಣನ ಸಮೀಪದಲ್ಲಿ ಸರ್ವದಾ ಇರುವುದರಿಂದ ಯಾವಾಗಲೂ ಹುಟ್ಟದೇನೇ ಇರುವುದರಿಂದ ತೇಜಃ ಎನಿಸುತ್ತಾಳೆ (ಇದರಿಂದ ತೇ ನ ಜಾಯತೇ= ವ್ಯಾಪ್ತನಾದ ಶ್ರೀಹರಿಯ ಸಮೀಪದಲ್ಲಿ ಸರ್ವದಾ ಇರುವುದರಿಂದ ಹುಟ್ಟದಿರುವವಳು. ಆದುದರಿಂದ ತೇಜಃ ಎನಿಸುತ್ತಾಳೆಂದು ಸಿದ್ಧವಾಯಿತು.) ಮತ್ತು ವ್ಯಾಪ್ತನಾದ ಶ್ರೀಹರಿಯಿಂದ ಲಕ್ಷ್ಮೀದೇವಿಯು ರೂಪವಿಶೇಷದಿಂದ ಅಭಿವ್ಯಕ್ತಳಾಗುವುದರಿಂದ ತೇಜಃ ಎನಿಸುತ್ತಾಳೆ. (೪) (ಅದನ್ನೇ ವಿವರಿಸಿ ಹೇಳುತ್ತಾರೆ—) ಜಗತ್ ಸೃಷ್ಟಿಯನ್ನು ಮಾಡತಕ್ಕ ವಿದ್ಯಾ ಎನಿಸಿಕೊಳ್ಳತಕ್ಕ ಲಕ್ಷ್ಮೀದೇವಿಯ ರೂಪವು ಶ್ರೀಹರಿಯಿಂದ ಪ್ರಕಟವಾಗುತ್ತದೆ. ಅಂದರೆ ಆ ರೂಪದಿಂದ ಲಕ್ಷ್ಮೀದೇವಿಯು ಅವತರಿಸುತ್ತಾಳೆ. (೫) ತದಪೋಽಸೃಜತ ಎಂಬುದಕ್ಕೆ ಅರ್ಥಹೇಳುತ್ತಾರೆ–) ಅಪ್ ಎನಿಸಿದವನು ಎಂದು ಹೆಸರುಳ್ಳ ಮುಖ್ಯಪ್ರಾಣನೇ ಲಕ್ಷ್ಮೀದೇವಿಯಿಂದ ಹುಟ್ಟಿ

---

ಯುದವಗಮ್ಯತೇ ಸರ್ವವೇದಾಂತೇಭ್ಯಃ ಎಂದು ಸೂಕ್ಷ್ಮತ್ವಾದಿ ವಿಶೇಷಣಗಳಿಂದ ಕೂಡಿದ್ದು ಸತ್ತೇ, ಅಸತ್ತಲ್ಲ ಎಂದು ಸಮಸ್ತ ವೇದಾಂತಗಳಿಂದ ತಿಳಿಯಲ್ಪಡುತ್ತದೆ, ಎಂದು ಅದ್ವೈತಿಗಳು ಅರ್ಥ ಹೇಳಿರುವರು. ಅದು ಅಯುಕ್ತವು ಸಚ್ಛಬ್ದ ಉತ್ತಮಂ ಬ್ರೂಯಾತ್ ಎಂಬ ಪ್ರಮಾಣದಿಂದ ಸರ್ವೋತ್ತಮನೆಂದೇ ಅರ್ಥ ಹೇಳಬೇಕು (2) ಸದೇವ ಎಂಬ ವೇದದಲ್ಲಿ ಮಾತ್ರಶಬ್ದವು ಇಲ್ಲದಿರುವುದರಿಂದ ಅಸ್ತಿತಾಮಾತ್ರಂ ಎಂದು ಅರ್ಥ ಹೇಳಿದ್ದು ಕೂಡುವುದಿಲ್ಲ (3) ಸೂಕ್ಷ್ಮತ್ವಾದಿಗಳು ಸತ್ ಶಬ್ದದ ಅರ್ಥವೆಂಬಲ್ಲಿ ಪ್ರಮಾಣವೂ ಇಲ್ಲ (4) ಅಸ್ತಿತಾಮಾತ್ರಂ ಎಂಬಲ್ಲಿದ್ದ ಮಾತ್ರಶಬ್ದದಿಂದ ಅಸತ್ತು ಅಲ್ಲವೆಂದು ಸಿಕ್ಕಿದರೂ ಸ್ಥೌಲ್ಯಾದಿಗಳು ಇಲ್ಲವೆಂದು ಅರ್ಥ ಸಿಗುವುದಿಲ್ಲ ಅದು ಸ್ವರೂಪವಸ್ತುವನ್ನು ಮಾತ್ರ ಹೇಳುತ್ತದೆಂದಾದರೆ ಸೂಕ್ಷ್ಮತ್ವಾದಿಗಳೇ ವಿಶೇಷಣವಾಗಿರುವುದರಿಂದ ನಿರ್ವಿಶೇಷಂ ಎಂದು ಅರ್ಥ ಹೇಳಿದ್ದು ವಿರುದ್ಧವಾಗುವುದು. (5) ಮತ್ತು ಅದ್ವೈತಿಗಳು ಬ್ರಹ್ಮನಿಗೆ ಅಘಟಿತಘಟಕ ಐಶ್ವರ್ಯವನ್ನು ಅಂಗೀಕರಿಸದಿರುವುದರಿಂದ ಸೂಕ್ಷ್ಮವೆಂದು ಹೇಳುವುದೂ ಸರ್ವಗತವೆಂದು ಹೇಳುವುದೂ ಅವರ ಮತದಲ್ಲಿ ವಿರುದ್ಧವಾಗುವುದು ಮತ್ತು ಉಪನಿಷತ್ತುಗಳಿಗೆ ಅಲ್ಲಲ್ಲಿ ವೇದಗಳಲ್ಲಿಯೇ ಬೇರೆ ಪ್ರಕಾರವೇ ಅರ್ಥ ಹೇಳಿಯದೆ ಆದಕಾರಣ ಅದ್ವೈತಿಗಳು ಹೇಳಿದ ಅರ್ಥವು ಸರ್ವಥಾ ಕೂಡದಿರುವುದರಿಂದ ಸರ್ವಗುಣಪರಿಪೂರ್ಣನಾದ ಪರಬ್ರಹ್ಮನೆನಿಸಿದ ಶ್ರೀನಾರಾಯಣನೇ ಸತ್ ಎನಿಸುತ್ತಾನೆ.

* ಸದೇವ ಎಂಬುವಲ್ಲಿದ್ದ ಸತ್ ಶಬ್ದದಿಂದ ನಿರ್ವಿಶೇಷ ಬ್ರಹ್ಮನನ್ನು ಇಟ್ಟುಕೊಂಡರೆ, ತದೈಕ್ಷತ ತತ್ತೇಜೋಽಸೃಜತ ಇತ್ಯಾದಿಗಳಲ್ಲಿದ್ದ ತತ್‌ಶಬ್ದದಿಂದ ನಿರ್ವಿಶೇಷ ಬ್ರಹ್ಮನನ್ನು ಇಟ್ಟುಕೊಳ್ಳಲಿಕ್ಕೆ ಆಗುವುದಿಲ್ಲ ಏಕೆಂದರೆ ನಿರ್ವಿಶೇಷವಾದುದು ಸೃಷ್ಟಿಮಾಡುತ್ತದೆಂಬುದು ಕೂಡುವುದಿಲ್ಲ ಶಬಲಬ್ರಹ್ಮನು ಸತ್ ಎಂಬ ಶಬ್ದದಿಂದ ಹೇಳಲ್ಪಡುವುದಿಲ್ಲ

§ ತೇಜಃ ಅಬನ್ನಶಬ್ದಗಳು ಪಂಚಭೂತಗಳಲ್ಲಿ ಸೇರಿದ ಪೃಥಿವೀ ಜಲ ತೇಜಸ್ಸುಗಳನ್ನು ಮಾತ್ರ ಹೇಳುತ್ತವೆಂಬ ಪರರು ಹೇಳಿದ ಅರ್ಥವು ಅಯುಕ್ತವೆಂದು ತೇಜ ಆಖ್ಯಾಂ ಶ್ರಿಯಂ ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಯಿತು ಮತ್ತು ತತ್ತೇಜ ಐಕ್ಷತ ತೇಜಸ್ಸು ಕಂಡಿತು,ಎಂದಿದ್ದ ಪ್ರಯುಕ್ತ ಚೇತನವೆಂದೇ ಇಟ್ಟುಕೊಳ್ಳಬೇಕು ಜಡಪದಾರ್ಥಕ್ಕೆ ನೋಡುವ ಶಕ್ತಿಯಿಲ್ಲ. ಮತ್ತು ಅಭಿಮಾನಿವ್ಯಪದೇಶಸ್ತು ಎಂಬ ಅಧಿಕರಣನ್ಯಾಯದಿಂದ ತೇಜಸ್ಸು ಅಪ್ ಅನ್ನಶಬ್ದಗಳು ಅಭಿಮಾನಿಗಳಾದ ದೇವತೆಗಳನ್ನು ಹೇಳುತ್ತವೆ ಮತ್ತು ಈ ಉಪನಿಷತ್ತಿನಲ್ಲಿ ಇಮಾಸ್ತಿಸ್ರೋ ದೇವತಾಃ ಎಂದು ಅನೇಕಸಲ ಈ ಮೂರು ದೇವತೆಗಳನ್ನೇ ಹೇಳಿರುತ್ತದೆ. ಮತ್ತು ಪಂಚಭೂತಗಳ ಸೃಷ್ಟಿಯೇ ಇಷ್ಟವೆಂದಾಗಿದ್ದರೆ ಆತ್ಮನ ಆಕಾಶಃ ಸಂಭೂತಃ ಇತ್ಯಾದಿಗಳಂತೆಯೇ ಆಕಾಶಾದಿಗಳನ್ನು ಆರಂಭಿಸಿಯೇ ಸೃಷ್ಟಿಯನ್ನು ಹೇಳಬೇಕಿತ್ತು ಇದುಮೊದಲಾದ ದೋಷಗಳು ಇರುವುದರಿಂದ ಪರರು ಹೇಳುವ ಅರ್ಥವು ಅಯುಕ್ತವೇ ಆದಕಾರಣ ಶ್ರೀಹರಿಯಿಂದ ಪ್ರಥಮದಲ್ಲಿ ಅಭಿವ್ಯಕ್ತರಾದ ಲಕ್ಷ್ಮೀ ಮೊದಲಾದವರೇ ತೇಜಃ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಹೇಳಲ್ಪಡುತ್ತಾರೆ ಅಮುಖ್ಯವಾಗಿ ಭೂತ(ಜಡ)ಗಳನ್ನು ಇಟ್ಟುಕೊಳ್ಳಬೇಕು

ಇನ್ನೊಂದು ದೋಷ ಹೇಳುತ್ತಾರೆ–) ಮಿಥ್ಯೆ ಸತ್ಯಗಳು ಒಂದೇಯಾದರೆ ಇದು ಸತ್ಯವು, ಇದು ಮಿಥ್ಯೆಯು, ಎಂಬ ಭೇದವಿಲ್ಲದ್ದರಿಂದ ಜೀವೇಶ, ಜೀವ ಪರಮಾತ್ಮ ಭೇದ ಮೊದಲಾದವುಗಳೂ ಸತ್ಯವಾಗಬೇಕಾಗುವುವು. (ಸತ್ಯನೇ ಎಂದು ಒಡಂಬಟ್ಟ ಬ್ರಹ್ಮನಿಗೂ ಮಿಥ್ಯಾತ್ವವು ಬರಬೇಕಾಗುವುದು) (ಅಂದರೆ—ಮಿಥ್ಯೆಯಾದ ಸಜಾತೀಯಕ್ಕೂ ವಿಜಾತೀಯಕ್ಕೂ ಸತ್ಯನಾದ ಬ್ರಹ್ಮನಿಗೂ ಐಕ್ಯವನ್ನಂಗೀಕರಿಸಿದರೆ-ಆಗ ಎಲ್ಲಾ ವಸ್ತುಗಳೂ ಮಿಥ್ಯೆಯೇ ಆಗಬೇಕಾಗುವುವು. ಅಥವಾ ಎಲ್ಲವೂ ಸತ್ಯವೇ ಆಗಬೇಕಾಗುವುವು. ಇದು ಮಿಥ್ಯೆಯು, ಇದು ಸತ್ಯವು, ಎಂಬ ಭೇದ ಜ್ಞಾನವು ಇಲ್ಲವಷ್ಟೆ ಏವಂಚ ಒಂದೇ ಪ್ರಕಾರವಾದುದರಲ್ಲಿ ಇದು ಸತ್ಯ ಇದು ಮಿಥ್ಯೆಯೆಂಬ ಭೇದವಿಲ್ಲದಿರುವುದರಿಂದ ಬ್ರಹ್ಮನಿಗೂ ಮಿಥ್ಯಾತ್ವವಾಗಲೀ ಜೀವೇಶ ಭೇದಾದಿಗಳಿಗೆ ಸತ್ಯತ್ವವಾಗಲೀ ಬರಬೇಕಾಗುವುದು.) (೪) (ಹಾಗೆ ಇಟ್ಟುಕೊಂಡರೆ ಬ್ರಹ್ಮನೊಬ್ಬನೇ ಪರಮಾರ್ಥ ಸತ್ಯನು, ಬೇರೆ ಎಲ್ಲವೂ ಮಿಥ್ಯೆಯು, ಎಂಬ ಅದ್ವೈತಿಗಳ ಸಿದ್ಧಾಂತವು ಕೂಡದೇ ಹೋಗುವುದೆನ್ನುತ್ತಾರೆ—) ಬ್ರಹ್ಮನಿಗೆ ಮಿಥ್ಯಾತ್ವವನ್ನೂ ಜೀವೇಶ ಭೇದಾದಿಗಳಿಗೆ ಸತ್ಯತ್ವವನ್ನೂ ಅಂಗೀಕರಿಸಿದುದರಿಂದ ಪರಬ್ರಹ್ಮನೊಬ್ಬನೇ ಪಾರಮಾರ್ಥಿಕ ಸತ್ಯನು. ಬೇರೆ ಎಲ್ಲವೂ ಮಿಥ್ಯೆಯಾದುದು. (ಸುಳ್ಳು) ಎಂಬುದು ಕೂಡುವುದಿಲ್ಲ. (೫) ಆದಕಾರಣ ಸಜಾತೀಯವಾದ ಸ್ವಗತ ಭೇದವೂ ವಿಜಾತೀಯವಾದ ಉತ್ತಮವಾದುದೂ ಈ ವಾಕ್ಯದಲ್ಲಿ ನಿಷೇಧಿಸಲ್ಪಡುತ್ತದೆ. ಅಂದರೆ— **ಏಕಮೇವಾದ್ವಿತೀಯಂ** ಎಂಬ ವೇದ ವಾಕ್ಯದಲ್ಲಿ **ಅದ್ವಿತೀಯಂ** ಎಂಬ ಪದದಿಂದ ಸದೃಶವಾದ ಸಜಾತೀಯವೂ, **ಏಕಮೇವ** ಎನ್ನುವುದರಿಂದ ಸ್ವಗತ ಭೇದವೂ **ಅದ್ವಿತೀಯ** ಪದದಿಂದಲೇ ಅಧಿಕ (ಉತ್ತಮ) ವಾದ ವಿಜಾತೀಯವೂ ನಿಷೇಧಿಸಲ್ಪಡುತ್ತದೆ: ಎಂದೇ ಅರ್ಥವನ್ನು ಇಟ್ಟುಕೊಳ್ಳಬೇಕು. (ನಿಕೃಷ್ಟವಾದ ವಿಜಾತೀಯವು ಇದ್ದ ಪ್ರಯುಕ್ತ ಅಧಿಕಾಖ್ಯಂ ಎಂದು ಹೇಳಿರುವರು. ಅಂದರೆ—ಹೀನವಾದ ವಿಜಾತೀಯವು ಇದೆ. ಉತ್ತಮವಾದ ವಿಜಾತೀಯವು ಇಲ್ಲ) ॥ ೩ ॥

ಟೀ—ಕೇಳುವವನ ಮನಸ್ಸು ಕಳವಳಪಡಬಾರದೆಂಬ ಅಭಿಪ್ರಾಯದಿಂದ **ಏಕಮೇವಾದ್ವಿತೀಯಂ** ಎಂಬುದಕ್ಕೆ ಅರ್ಥಹೇಳಿ ಈಗ ಅಪ್ರತಿಪತ್ತಿ (ಶಬ್ದಾರ್ಥಗಳು ತಿಳಿಯದಿರುವಿಕೆ) ವಿಪ್ರತಿಪತ್ತಿ (ವಿರುದ್ಧಾರ್ಥಗಳನ್ನು ಹೇಳುವ ಎರಡು ವಾಕ್ಯಗಳಿಂದುಂಟಾಗುವ ಸಂಶಯ) ಗಳನ್ನು ಹೋಗಲಾಡಿಸುವುದಕ್ಕಾಗಿ **ಸದೇವ ಸೋಮ್ಯ** ಇದು ಮೊದಲಾದ ಪ್ರಕರಣಕ್ಕೆ ಪ್ರಮಾಣವನ್ನು ಹೇಳಿ ಅರ್ಥಹೇಳುತ್ತಾರೆ—

**ಭಾ. ॥ (೧) ಸರ್ವೋತ್ತಮತ್ವಾತ್ಸನ್ನಾಮಾ ಹರಿರ್ನಾರಾಯಣಃ ಪ್ರಭುಃ ॥ (೨) ಸೋऽಸೃಜತ್ಪ್ರಥಮಂ ದೇವೀಂ ತೇಜಆಖ್ಯಾಂ ಶ್ರಿಯಂ ಸತೀಂ ॥ (೩) ತತ್ರ(ತ್ರ) ಸ್ಥಿತೇನ ರೂಪೇಣ ಸಾऽಜ್ಞೈವ ಹಿ ಯತಃ ಸದಾ । ತೇಜ ಇತ್ಯುಚ್ಯತೇ ತಸ್ಮಾಜ್ಜನೇರ್ನಾ ತತ ಏವ ತು ॥ (೪) ಯದಸ್ಯಾಃ ಸೃಷ್ಟಿಕೃದ್ರೂಪಂ ವಿದ್ಯಾಖ್ಯಂ ಜಾಯತೇ ಹರೇಃ ॥ (೫) ಮನ್ವಾಖ್ಯಃ ಪ್ರಾಣ ಏವಾಸ್ಯಾ ಅಮ್ನಾಮಾ ಜಾಯತೇऽಥ ಚ (ಹರೇಃ) । ಬ್ರಾಹ್ಮಣಾದಿಚತುರ್ವರ್ಣಃ॥ (೬) ತತಶ್ಚಾನ್ನಾಭಿಧೋ ಹರಃ ॥ (೭) ತೇಜಸ್ಸಂಸ್ಥಾ ಚ ಸಾ ದೇವೀ ಪ್ರಾಣೋऽಪ್ಸು ಸ್ಥಿತ ಏವ ಚ । ತತಸ್ತೇಜಸ ಏವಾऽಪೋ ಜಾಯಂತೇ ॥ (೮) ऽನ್ನಸ್ಥಿತೋ ಹರಃ । ಜಾಯತೇऽತೋऽದ್ಭ್ಯ ಏವಾನ್ನಂ ಪೃಥಿವೀ ತ್ವನ್ನರೂಪಿಣೀ ॥ ೧,೨,೩,೪ ॥ ಇತಿ ದ್ವಿತೀಯಃ ಖಂಡಃ ॥ ॥ ೮–೪ ॥ ॥ ೪ ॥**

ಅ ॥ (೧) ಸರ್ವಸಮರ್ಥನಾದ ನಾರಾಯಣನು †ಸರ್ವೋತ್ತಮನಾದುದರಿಂದ **ಸತ್** ಎನಿಸುತ್ತಾನೆ.

† (1) **ಸತ್ ಇತ್ಯಸ್ತಿತಾಮಾತ್ರಂ ಸೂಕ್ಷ್ಮಂ ನಿರ್ವಿಶೇಷಂ ಸರ್ವಗತಮೇಕಂ ನಿರಂಜನಂ ನಿತ್ಯಂ ನಿರವಯವಂ**

(೨) (ಹೀಗೆ ತತ್ತ್ತೇಜೋಽಸೃಜತ ಎಂಬ ವಾಕ್ಯದಲ್ಲಿದ್ದ ತಚ್ಛಬ್ದದಿಂದ ಸತ್ ಶಬ್ದದಿಂದ ಹೇಳಲ್ಪಡತಕ್ಕ ನಾರಾಯಣನನ್ನೇ ಇಟ್ಟುಕೊಳ್ಳಬೇಕೆಂದು ಹೇಳಿ ಆ ವಾಕ್ಯಕ್ಕೆ ಅರ್ಥಹೇಳುತ್ತಾರೆ–) *ಆ ನಾರಾಯಣನು ಪ್ರಥಮತಃ, ಪ್ರಕಾಶಿಸಿಕೊಂಡಿರುವುದರಿಂದ §ತೇಜಃ ಎನಿಸಿಕೊಂಡ ಅನಾದಿಯಿಂದ ಒಂದೇರೀತಿಯಾಗಿರ ತಕ್ಕ ಲಕ್ಷ್ಮೀದೇವಿಯನ್ನು ಪ್ರಕಟಿಸಿದನು. (೩) (ಲಕ್ಷ್ಮೀದೇವಿಯು ಅನಾದಿಯಿಂದ ಇರುವವಳಾದರೆ ಪರಬ್ರಹ್ಮ ನಿಂದ ಅವಳಿಗೆ ಸೃಷ್ಟಿಯಾಯಿತೆಂಬುದು ಕೂಡಲಾರದು, ಎಂದು ಹೇಳಕೂಡದು. ಒಂದು ರೂಪದಿಂದ ಶ್ರೀಹರಿಯ ಸಮೀಪದಲ್ಲಿ ಸರ್ವದಾ ಲಕ್ಷ್ಮೀದೇವಿಯು ಇದ್ದಾಳೆ ಮತ್ತೊಂದು ರೂಪದಿಂದ ಅವಳಿಗೆ ಸೃಷ್ಟಿಯು ಕೂಡುತ್ತದೆ. ತೇಜಃ ಎಂಬ ಶಬ್ದವೇ ಆ ಎರಡು ಅರ್ಥಗಳನ್ನು ತಿಳಿಸುತ್ತದೆ, ಎನ್ನುತ್ತಾರೆ–)ಒಂದು ರೂಪದಿಂದ ಲಕ್ಷ್ಮೀದೇವಿಯು ಸರ್ವತ್ರ ವ್ಯಾಪ್ತನಾದ ನಾರಾಯಣನ ಸಮೀಪದಲ್ಲಿ ಸರ್ವದಾ ಇರುವುದ ರಿಂದ ಯಾವಾಗಲೂ ಹುಟ್ಟದೇನೇ ಇರುವುದರಿಂದ **ತೇಜಃ** ಎನಿಸುತ್ತಾಳೆ (ಇದರಿಂದ ತೇ ನ ಜಾಯತೇ= ವ್ಯಾಪ್ತನಾದ ಶ್ರೀಹರಿಯ ಸಮೀಪದಲ್ಲಿ ಸರ್ವದಾ ಇರುವುದರಿಂದ ಹುಟ್ಟದಿರುವವಳು. ಆದುದರಿಂದ ತೇಜಃ ಎನಿಸುತ್ತಾಳೆಂದು ಸಿದ್ಧವಾಯಿತು.) ಮತ್ತು ವ್ಯಾಪ್ತನಾದ ಶ್ರೀಹರಿಯಿಂದ ಲಕ್ಷ್ಮೀದೇವಿಯು ರೂಪವಿಶೇಷ ದಿಂದ ಅಭಿವ್ಯಕ್ತಳಾಗುವುದರಿಂದ ತೇಜಃ ಎನಿಸುತ್ತಾಳೆ. (೪) (ಅದನ್ನೇ ವಿವರಿಸಿ ಹೇಳುತ್ತಾರೆ— ) ಜಗತ್ ಸೃಷ್ಟಿಯನ್ನು ಮಾಡತಕ್ಕ ವಿದ್ಯಾ ಎನಿಸಿಕೊಳ್ಳತಕ್ಕ ಲಕ್ಷ್ಮೀದೇವಿಯ ರೂಪವು ಶ್ರೀಹರಿಯಿಂದ ಪ್ರಕಟ ವಾಗುತ್ತದೆ. ಅಂದರೆ ಆ ರೂಪದಿಂದ ಲಕ್ಷ್ಮೀದೇವಿಯು ಅವತರಿಸುತ್ತಾಳೆ.(೫)**ತದಪೋಽಸೃಜತ** ಎಂಬುದಕ್ಕೆ ಅರ್ಥಹೇಳುತ್ತಾರೆ–) ಅಪ್ ಎನಿಸಿದ ಮನು ಎಂದು ಹೆಸರುಳ್ಳ ಮುಖ್ಯಪ್ರಾಣನೇ ಲಕ್ಷ್ಮೀದೇವಿಯಿಂದ ಹುಟ್ಟಿ

---

ಯದವಗಮ್ಯತೇ ಸರ್ವವೇದಾಂತೇಭ್ಯಃ ಎಂದು ಸೂಕ್ಷ್ಮತ್ವಾದಿ ವಿಶೇಷಣಗಳಿಂದ ಕೂಡಿದ್ದು ಸತ್ತೇ, ಅಸತ್ತಲ್ಲ ಎಂದು ಸಮಸ್ತ ವೇದಾಂತಗಳಿಂದ ತಿಳಿಯಲ್ಪಡುತ್ತದೆ, ಎಂದು ಅದ್ವೈತಿಗಳು ಅರ್ಥ ಹೇಳಿರುವರು. ಅದು ಅಯುಕ್ತವು ಸಚ್ಛಬ್ದ ಉತ್ತಮಂ ಬ್ರೂಯಾತ್ ಎಂಬ ಪ್ರಮಾಣದಿಂದ ಸರ್ವೋತ್ತಮನೆಂದೇ ಅರ್ಥ ಹೇಳಬೇಕು (2) ಸದೇವ ಎಂಬ ವೇದ ದಲ್ಲಿ ಮಾತ್ರಶಬ್ದವು ಇಲ್ಲದಿರುವುದರಿಂದ ಅಸ್ತಿತಾಮಾತ್ರಂ ಎಂದು ಅರ್ಥ ಹೇಳಿದ್ದು ಕೂಡುವುದಿಲ್ಲ (3) ಸೂಕ್ಷ್ಮತ್ವಾದಿ ಗಳು ಸತ್ ಶಬ್ದದ ಅರ್ಥವೆಂಬಲ್ಲಿ ಪ್ರಮಾಣವೂ ಇಲ್ಲ (4) ಅಸ್ತಿತಾಮಾತ್ರಂ ಎಂಬಲ್ಲಿದ್ದ ಮಾತ್ರಶಬ್ದದಿಂದ ಅಸತ್ತು ಅಲ್ಲ ವೆಂದು ಸಿಕ್ಕಿದರೂ ಸ್ಥೌಲ್ಯಾದಿಗಳು ಇಲ್ಲವೆಂದು ಅರ್ಥ ಸಿಗುವುದಿಲ್ಲ ಅದು ಸ್ವರೂಪವಸ್ತುವನ್ನು ಮಾತ್ರ ಹೇಳುತ್ತದೆಂದಾದರೆ ಸೂಕ್ಷ್ಮತ್ವಾದಿಗಳೇ ವಿಶೇಷಣವಾಗಿರುವುದರಿಂದ ನಿರ್ವಿಶೇಷಂ ಎಂದು ಅರ್ಥ ಹೇಳಿದ್ದು ವಿರುದ್ಧವಾಗುವುದು. (5) ಮತ್ತು ಅದ್ವೈತಿಗಳು ಬ್ರಹ್ಮನಿಗೆ ಅಘಟಿತಘಟಕ ಐಶ್ವರ್ಯವನ್ನು ಅಂಗೀಕರಿಸದಿರುವುದರಿಂದ ಸೂಕ್ಷ್ಮವೆಂದು ಹೇಳುವುದೂ ಸರ್ವ ಗತವೆಂದು ಹೇಳುವುದೂ ಅವರ ಮತದಲ್ಲಿ ವಿರುದ್ಧವಾಗುವುದು ಮತ್ತು ಉಪನಿಷತ್ತುಗಳಿಗೆ ಅಲ್ಲಲ್ಲಿ ವೇದಗಳಲ್ಲಿಯೇ ಬೇರೆ ಪ್ರಕಾರವೇ ಅರ್ಥ ಹೇಳಿಯದೆ ಆದಕಾರಣ ಅದ್ವೈತಿಗಳು ಹೇಳಿದ ಅರ್ಥವು ಸರ್ವಥಾ ಕೂಡದಿರುವುದರಿಂದ ಸರ್ವಗುಣಪರಿ ಪೂರ್ಣನಾದ ಪರಬ್ರಹ್ಮನೆನಿಸಿದ ಶ್ರೀನಾರಾಯಣನೇ ಸತ್ ಎನಿಸುತ್ತಾನೆ.

* ಸದೇವ ಎಂಬುವಲ್ಲಿದ್ದ ಸತ್ ಶಬ್ದದಿಂದ ನಿರ್ವಿಶೇಷ ಬ್ರಹ್ಮನನ್ನು ಇಟ್ಟುಕೊಂಡರೆ, ತದೈಕ್ಷತ ತತ್ತೇಜೋಽಸೃಜತ ಇತ್ಯಾದಿಗಳಲ್ಲಿದ್ದ ತತ್ ಶಬ್ದದಿಂದ ನಿರ್ವಿಶೇಷ ಬ್ರಹ್ಮನನ್ನು ಇಟ್ಟುಕೊಳ್ಳಲಿಕ್ಕೆ ಆಗುವುದಿಲ್ಲ ಏಕೆಂದರೆ ನಿರ್ವಿಶೇಷವಾದುದು ಸೃಷ್ಟಿಮಾಡುತ್ತದೆಂಬುದು ಕೂಡುವುದಿಲ್ಲ ಶಬಲಬ್ರಹ್ಮನು ಸತ್ ಎಂಬ ಶಬ್ದದಿಂದ ಹೇಳಲ್ಪಡುವುದಿಲ್ಲ

§ ತೇಜಃ ಅಬನ್ನಶಬ್ದಗಳು ಪಂಚಭೂತಗಳಲ್ಲಿ ಸೇರಿದ ಪೃಥಿವೀ ಜಲ ತೇಜಸ್ಸುಗಳನ್ನು ಮಾತ್ರ ಹೇಳುತ್ತವೆಂಬ ಪರರು ಹೇಳಿದ ಅರ್ಥವು ಅಯುಕ್ತವೆಂದು ತೇಜ ಅಖ್ಯಾಂ ಶ್ರಿಯಂ ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಯಿತು ಮತ್ತು ತತ್ತೇಜ ಐಕ್ಷತ ತೇಜಸ್ಸು ಕಂಡಿತು,ಎಂದಿದ್ದ ಪ್ರಯುಕ್ತ ಚೇತನವೆಂದೇ ಇಟ್ಟುಕೊಳ್ಳಬೇಕು ಜಡಪದಾರ್ಥಕ್ಕೆ ನೋಡುವ ಶಕ್ತಿಯಿಲ್ಲ. ಮತ್ತು ಅಭಿಮಾನಿವ್ಯಪದೇಶಸ್ತು ಎಂಬ ಅಧಿಕರಣನ್ಯಾಯದಿಂದ ತೇಜಸ್ಸು ಅಪ್ ಅನ್ನಶಬ್ದಗಳು ಅಭಿಮಾನಿಗಳಾದ ದೇವತೆ ಗಳನ್ನು ಹೇಳುತ್ತವೆ ಮತ್ತು ಈ ಉಪನಿಷತ್ತಿನಲ್ಲಿ ಇಮಾಸ್ತಿಸ್ರೋ ದೇವತಾಃ ಎಂದು ಅನೇಕಸಲ ಈ ಮೂರು ದೇವತೆಗ ಳನ್ನೇ ಹೇಳಿರುತ್ತದೆ. ಮತ್ತು ಪಂಚಭೂತಗಳ ಸೃಷ್ಟಿಯೇ ಇಷ್ಟವೆಂದಾಗಿದ್ದರೆ ಆತ್ಮನ ಆಕಾಶಃ ಸಂಭೂತಃ ಇತ್ಯಾದಿಗ ಳಂತೆಯೇ ಆಕಾಶಾದಿಗಳನ್ನು ಆರಂಭಿಸಿಯೇ ಸೃಷ್ಟಿಯನ್ನು ಹೇಳಬೇಕಿತ್ತು ಇದುಮೊದಲಾದ ದೋಷಗಳು ಇರುವುದರಿಂದ ಪರರು ಹೇಳುವ ಅರ್ಥವು ಅಯುಕ್ತವೇ ಆದಕಾರಣ ಶ್ರೀಹರಿಯಿಂದ ಪ್ರಥಮದಲ್ಲಿ ಅಭಿವ್ಯಕ್ತರಾದ ಲಕ್ಷ್ಮೀ ಮೊದಲಾದವರೇ ತೇಜಃ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಹೇಳಲ್ಪಡುತ್ತಾರೆ ಅಮುಖ್ಯವಾಗಿ ಭೂತ(ಜಡ)ಗಳನ್ನು ಇಟ್ಟುಕೊಳ್ಳಬೇಕು

ದನು. ಮುಖ್ಯಪ್ರಾಣನು ಹುಟ್ಟಿದ ಮೇಲೆ ಬ್ರಾಹ್ಮಣಾದಿ ನಾಲ್ಕು ವರ್ಣಗಳಿಗೆ ಅಭಿಮಾನಿಯಾದ ‡ ಚತುರ್ಮುಖಬ್ರಹ್ಮನೂ ಲಕ್ಷ್ಮೀದೇವಿಯಿಂದ ಹುಟ್ಟಿದನು. (೬) (**ತಾ ಅನ್ನಮಸೃಜಂತ** ಎಂಬುದಕ್ಕೆ **ಅರ್ಥಹೇಳುತ್ತಾರೆ** –) ಜಲಗಳಿಗೆ ಅಭಿಮಾನಿಯಾದ ವಾಯುವಿನಿಂದ ಅನ್ನ (ಪೃಥಿವೀ) ಕ್ಕೆ ಅಭಿಮಾನಿಯಾದ ರುದ್ರನು ಹುಟ್ಟಿದನು. (೭) (ಇಲ್ಲಿ ತೇಜಸ್ಸು ಮೊದಲಾದ ಶಬ್ದಗಳು ದೇವತೆಗಳನ್ನು ಹೇಳುವುದಾದರೆ **ತಸ್ಮಾದ್ಯತ್ರ ಕ್ವ ಚ ಶೋಚತಿ ಸ್ವೇದತೇ ವಾ ಪುರುಷಃ ತೇಜಸಃ ಅಪೋ ಜಾಯಂತೇ** ಇತ್ಯಾದಿ ಮಾತು ಅಯುಕ್ತವಾಗಬೇಕಾಗುವುದು. ಒಬ್ಬ ದೇವತೆಯಿಂದ ಇನ್ನೊಬ್ಬ ದೇವತೆಯು ಹುಟ್ಟಿದನೆಂಬುವುದಕ್ಕೆ ಭೂತಗಳಿಗೆ ಕಾರ್ಯಕಾರಣಭಾವ ಹೇಳಿದ್ದು ಪ್ರಮಾಣವಾಗಲಾರದು, ಎಂದರೆ—ಅಭಿಮಾನಿಗಳಾದ ದೇವತೆಗಳನ್ನು ಅಭಿಮನ್ಯಮಾನ (ನಿಯಮ್ಯ)ಗಳಾದ ತೇಜಸ್ಸು ಮೊದಲಾದ ಭೂತ (ಜಡ) ಗಳನ್ನು ಸೃಷ್ಟಿಮಾಡಿದನೆಂದು ಇಟ್ಟುಕೊಳ್ಳಬೇಕೆನ್ನುತ್ತಾರೆ–) ಲಕ್ಷ್ಮೀದೇವಿಯು ತೇಜಸ್ಸಿಗೆ ನಿಯಾಮಕಳಾಗಿ ತೇಜಸ್ಸಿನಲ್ಲಿರುವವಳು ಮುಖ್ಯಪ್ರಾಣನು ಜಲಗಳಿಗೆ ನಿಯಾಮಕನಾಗಿ ಜಲಗಳಲ್ಲಿರುವವನು. ಆದಕಾರಣ ಘರ್ಮ (ತಾಪಾ) ದಿ ರೂಪವಾದ ಪ್ರಸಿದ್ಧ ತೇಜಸ್ಸಿನಿಂದಲೇ ಸ್ವೇದಾ (ಬೆವರು) ದಿ ರೂಪಗಳಾದ ಜಲಗಳು ಹುಟ್ಟುತ್ತವೆ. (೮) (**ತಸ್ಮಾದ್ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ** ಎಂಬುವ ವಾಕ್ಯಾರ್ಥವನ್ನು ಸಂಬಂಧಕೊಟ್ಟು ವಿವರಿಸುತ್ತಾರೆ –) ಅನ್ನಾ (ಪೃಥಿವೀ) ಭಿಮಾನಿಯಾದ ರುದ್ರನು ಜಲಾಭಿಮಾನಿಯಾದ ಪ್ರಾಣನಿಂದಲೇ ಹುಟ್ಟುತ್ತಾನೆ ಜಲಗಳಿಂದಲೇ ಅನ್ನವು ಹುಟ್ಟುತ್ತದೆ. (ಹಾಗಾದರೆ ಬೇರೆ ಕಡೆ ವೇದದಲ್ಲಿ **ಅದ್ಭ್ಯಃ ಪೃಥಿವೀ । ಪೃಥಿವ್ಯಾಃ ಓಷಧಯಃ । ಓಷಧಿಭ್ಯೋಽನ್ನಂ** ಎಂದು ಓಷಧಿಗಳಿಂದ ಅನ್ನವು ಹುಟ್ಟಿದ್ದೆಂದು ಹೇಳಿದೆ. ಇಲ್ಲಿ ಜಲಗಳಿಂದ ಅನ್ನಸೃಷ್ಟಿಯೆಂದು ಹೇಳಿದೆ. ವಿರುದ್ಧವಾದ ಪ್ರಯುಕ್ತ ಇದು ಹೇಗೆ ಕೂಡುತ್ತದೆಂದರೆ–) ಇಲ್ಲಿ ಅನ್ನ ಶಬ್ದದಿಂದ ಪ್ರಸಿದ್ಧಾನ್ನವನ್ನು ಹೇಳುವುದಲ್ಲ. ಪೃಥಿವಿಯನ್ನೇ ಇಟ್ಟುಕೊಳ್ಳಬೇಕು. ಪಂಚಭೂತಗಳನ್ನೇ ಹೇಳುತ್ತಾ ಬಂದುದು **ಯತ್ಕೃಷ್ಣಂ ತದನ್ನಸ್ಯ** ಎಂದು ಅನ್ನಕ್ಕೆ ಕಪ್ಪುರೂಪವು ತೋರುತ್ತದೆ. ಆ ರೂಪವು ಪೃಥಿವಿಯಲ್ಲಿಯೇ ಇರುವುದು. ಮತ್ತು **ಪೃಥಿವೀ ವಾ ಅನ್ನಂ** ಎಂದು ಅನ್ನಶಬ್ದದಿಂದ ಪೃಥಿವಿಯನ್ನು ಇಟ್ಟುಕೊಳ್ಳಬೇಕೆಂದೂ **ಹೇಳಿಯದೆ**. ಆದುಕಾರಣ ಇಲ್ಲಿ ಅನ್ನಶಬ್ದದಿಂದ ಪೃಥಿವಿಯನ್ನೇ ಇಟ್ಟುಕೊಳ್ಳಬೇಕು.
॥ ೨–೨ ॥ ॥ ४ ॥

**ಎರಡನೇ ಖಂಡವು ಮುಗಿಯಿತು.**

## ೩ನೇ ಖಂಡವು

**ಪೀ**—ತೇಜಸ್ಸು, ಅಪ್ ಅನ್ನಾಭಿಮಾನಿ ದೇವತೆಗಳಿಗೂ ಆ ಭೂತ (ಜಡ) ಗಳಿಗೂ ಉತ್ಪತ್ತಿ ಹೇಳಿ ಅವುಗಳಿಗೆ ಸರ್ವ ವಸ್ತುಗಳಿಗಿಂತಲೂ ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿ ಅವುಗಳು ಸಮಸ್ತಭೂತಗಳಿಗೂ ಕಾರಣಗಳಾಗಿವೆ, ಎಂಬ ಮಹಿಮೆ ಹೇಳುತ್ತಾರೆ–

**ಉ. ॥ ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವಂತ್ಯಂಡಜಂ ಜೀವಜಮುದ್ಭಿಜ್ಜಮಿತಿ ॥ ೧ ॥**

‡ ವಾಯುವೇ ಮುಂದೆ ಬ್ರಹ್ಮನಾಗುವುದೆಂದು ತೋರಿಸುವುದಕ್ಕಾಗಿ ವಾಯುವಿನ ಸೃಷ್ಟಿಯನ್ನು ಮೊದಲು ಹೇಳಿದು. ವಾಯುರೇವ ಯತೋ ಬ್ರಹ್ಮಪದಂ ನಿಯಮತೋ ವ್ರಜೇತ್ ಎಂದು ಬ್ರಹ್ಮತರ್ಕದಲ್ಲಿದೆ.

ಅ || ಪ್ರಸಿದ್ಧರಾದ ಮುಂದೆ ಹೇಳುವ ಅಂದರೆ ಅಂಡಜ (ಮೊಟ್ಟೆಯಲ್ಲಿ ಹುಟ್ಟುವ) ಪಕ್ಷಿ ಮೊದಲಾದುದು, ಜರಾಯು (ಗರ್ಭದ ಮುಸುಕು) ನಿಂದ ಹುಟ್ಟತಕ್ಕ ಮನುಷ್ಯ ಮೊದಲಾದವರು, ಭೂಮಿಯನ್ನು ಭೇದಿಸಿಕೊಂಡು ಹುಟ್ಟತಕ್ಕ ವೃಕ್ಷ ಮೊದಲಾದುದು, ಸ್ವೇದ (ಬೆವರು) ದಿಂದ ಹುಟ್ಟತಕ್ಕ ಹೇನು ತಗಣೆ ಮೊದಲಾದುದು. ಹೀಗೆ ಎಲ್ಲಾ ಪ್ರಾಣಿಗಳಿಗೆ ಹಿಂದೆ ಹೇಳಿದ ಮೂರು ತೇಜೋಬನ್ನಗಳೇ ಕಾರಣಗಳಾಗಿ ಇವೆ. || ೧ ||

ಪೀ—ಭೂತಗಳಿಂದೊಡಗೂಡಿದ ತೇಜಃ ಅಪ್ ಅನ್ನವೆಂಬ ಮೂರು ದೇವತೆಗಳನ್ನು ಸೃಷ್ಟಿಮಾಡಿದ ಮೇಲಿನ ಭಗವದ್ವ್ಯಾಪಾರಗಳನ್ನು ವೇದವು ಹೇಳುತ್ತದೆ—

ಉ. || ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾऽತ್ಮನಾऽನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ || ೨ ||

ಅ || ಸದೇವ ಎಂಬಲ್ಲಿ ಹೇಳಲ್ಪಟ್ಟ ತೇಜೋऽಬನ್ನಗಳನ್ನು ಸೃಷ್ಟಿಮಾಡಿರತಕ್ಕ ವಿಷ್ಣ್ವಾಖ್ಯ ದೇವತೆಯು, 'ನಾನು ಭೂತಗಳಿಂದೊಡಗೂಡಿದ ತೇಜೋಬನ್ನ ಎಂಬ ಶಬ್ದಗಳಿಂದ ಹೇಳಲ್ಪಡತಕ್ಕ ಲಕ್ಷ್ಮೀ, ಪ್ರಾಣ, ರುದ್ರರೆಂಬ ದೇವತೆಗಳಲ್ಲಿ ಜೀವನೆನಿಸಿದ ಅನಿರುದ್ಧನೆಂಬ ಅಂತರ್ಯಾಮಿರೂಪದಿಂದ ಪ್ರವೇಶಿಸಿ ಶಬ್ದ ಅರ್ಥಗಳೆಂಬ ಪ್ರಪಂಚಗಳೆರಡನ್ನು ಸೃಷ್ಟಿಸುವೆನು' ಎಂದು ಆಲೋಚಿಸಿದನು. || ೨ ||

ಪೀ —ವಿಚಾರಾಂತರವನ್ನು ಹೇಳುತ್ತಾರೆ—

ಉ. || ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ ಸೇಯಂ ದೇವತೇಮಾಸ್ತಿಸ್ರೋ ದೇವತಾ ಅನೇನೈವ ಜೀವೇನಾऽತ್ಮನಾऽನುಪ್ರವಿಶ್ಯ ನಾಮರೂಪೇ ವ್ಯಾಕರೋತ್ || ೩ ||

ಅ || ಶಬ್ದ ಅರ್ಥಗಳೆಂಬ ಜಗತ್ತನ್ನು ಸೃಷ್ಟಿಸುವುದಕ್ಕಾಗಿ ಆ ದೇವತೆಗಳಲ್ಲಿ ಒಬ್ಬೊಬ್ಬರನ್ನೂ, ಮತ್ತು ಆ ದೇವತೆಗಳು ಅಭಿಮಾನಿಗಳಾಗ್ಯುಳ್ಳ ತೇಜಸ್ಸು ಮೊದಲಾದವುಗಳಲ್ಲಿ ಒಂದೊಂದನ್ನೂ ಮೂರು ಮೂರರಿಂದ ಕೂಡಿದ್ದನ್ನಾಗಿ (ಪರಸ್ಪರ ಪ್ರವೇಶಮಾಡಿದುದನ್ನಾಗಿ) ಮಾಡುವೆನೆಂದೂ, ಮೂರು ದೇವತೆಗಳಿಂದ ಮೂರು ಚೇತನಾಂಶಗಳನ್ನೂ ತೇಜಸ್ಸು ಜಲ ಪೃಥಿವಿಗಳಿಂದ ಮೂರು ಜಡಾಂಶಗಳನ್ನೂ ತೆಗೆದು ಆ ಆರು ಅಂಶಗಳನ್ನು ಮಿಶ್ರೀಕರಿಸಿ, ತೇಜಸ್ಸು ಜಲ ಪೃಥಿವಿಗಳನ್ನು ಪರಸ್ಪರ ಮಿಶ್ರಗಳಾಗಿರುವ ಮೂರು ವಸ್ತುಗಳನ್ನಾಗಿ ಮಾಡುವೆನೆಂದೂ ಶ್ರೀಹರಿಯು ಆಲೋಚಿಸಿದನು. ಆಮೇಲೆ ಆ ಶ್ರೀಹರಿಯು ಈ ದೇವತೆಗಳಲ್ಲಿ ಅನಿರುದ್ಧರೂಪದಿಂದ ಪ್ರವೇಶಿಸಿ ಆ ಮೂರು ದೇವತೆಗಳಿಂದ ಇಂದ್ರಾದಿಗಳಿಗೆ ನಾಮರೂಪಗಳನ್ನು ಮಾಡಿದನು. ಆ ದೇವತೆಗಳ ಮಧ್ಯದಲ್ಲಿ ಒಬ್ಬೊಬ್ಬರನ್ನು ಮೂವರುಮೂವರಿಂದ ಕೂಡಿದವರನ್ನಾಗಿಯೂ ಪರಸ್ಪರ ಪ್ರವೇಶಮಾಡಿದವರನ್ನಾಗಿಯೂ ಮಾಡಿದನು. ಹೀಗೆಯೇ ಅಗ್ನಿ ಸೋಮ ಸೂರ್ಯಾದಿಗಳಿಗೂ ನಾಮರೂಪಗಳನ್ನು ಮಾಡಿದನು ಈ ಪ್ರಕಾರ ನಿಯಮ್ಯಗಳಾದ ಭೂತಗಳಿಂದೊಡಗೂಡಿದ ದೇವತೆಗಳನ್ನು ಪ್ರವೇಶಮಾಡಿ, ದೇವಾದಿಗಳಿಗೆ ಇಂದ್ರಾಗ್ನ್ಯಾದಿ ನಾಮಗಳನ್ನೂ, ಆಯಾಯ ಶರೀರಾದಿರೂಪ ವಸ್ತುಗಳನ್ನೂ ಸೃಷ್ಟಿಸಿದನು. ಅದರಂತೆಯೇ ದಾನವರಿಗೂ ಮನುಷ್ಯರಿಗೂ ನಾಮರೂಪಗಳನ್ನಿತ್ತನು||೩||

ಉ. || ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋದ್ಯಥಾ ತು ಖಲು

**ಸೋಮ್ಯೇಮಾಸ್ತಿಸ್ರೋ ದೇವತಾಸ್ತ್ರಿವೃತ್ತ್ರಿವೃದೇಕೈಕಾ ಭವತಿ ತನ್ಮೇ ವಿಜಾನೀ-ಹೀತಿ ॥ ಇತಿ ತೃತೀಯಃ ಖಂಡಃ ॥ ೮–೩ ॥ ॥ ೪ ॥**

**ಅ** ॥ ಆ ದೇವತೆಗಳಲ್ಲಿ ಒಬ್ಬೊಬ್ಬರನ್ನು ಮೂವರು ಮೂವರಿಂದ ಕೂಡಿದವರನ್ನಾಗಿ ಶ್ರೀಹರಿಯು ಮಾಡಿದನು. ಹೇಗೆಂದರೆ—ಎಲೋ ಮಗನೇ, ಈ ಮೂರು ದೇವತೆಗಳು ಒಬ್ಬೊಬ್ಬರು ಮೂವರು ಮೂವರಿಂದ ಕೂಡಿದವರು ಹೇಗೆ ಆಗುತ್ತಾರೋ, ಹೇಗೆ ಎಲ್ಲಾ ವಸ್ತುವೂ ಅವರಿಂದಲೇ ಹುಟ್ಟಿದ್ದು ಎಂಬುದು ಆಗುತ್ತದೋ, ಸರ್ವ ಪ್ರಾಣಿಗಳ ನಾಮರೂಪಗಳೂ ಆ ಮೂವರು ದೇವತೆಗಳ ಅಧೀನಗಳು ಎಂಬುದು ಹೇಗೋ, ಅವೆಲ್ಲವನ್ನೂ ನಾನು ನಿನಗೆ ಹೇಳುತ್ತೇನೆ: ನನ್ನಿಂದ ತಿಳಿದುಕೋ (ತಿಳಿದರೆ ನಾನು ಮಹಾ ಪ್ರಾಜ್ಞನು, ಯಾರಿಗೂ ನಮಸ್ಕರಿಸಲಿಕ್ಕಿಲ್ಲ ಎಂಬ ದುರಹಂಕಾರವನ್ನು ಬಿಟ್ಟು ಬಿಡುವಿ.) ಎಂದು ತಂದೆಯಾದ ಉದ್ದಾಲಕರು ಹೇಳಿದರು.

**ವಿ** ॥ (1) ಇಲ್ಲಿ ದೇವತೆಗಳನ್ನು ಮೂವರು ಮೂವರಿಂದ ಕೂಡಿದವರನ್ನಾಗಿ ಮಾಡಿದ ಮೇಲೆ ನಾಮರೂಪಗಳನ್ನು ಮಾಡಿದನು ಎಂದು ಹೇಳಿದುದರಿಂದ ಪೂರ್ವದಲ್ಲಿ ತ್ರಿವೃತ್ಕರಣ, ಆ ಮೇಲೆ ಶಬ್ದ ಪ್ರಪಂಚ, (ಹೆಸರಿಡುವುದು) ಅರ್ಥಪ್ರಪಂಚ (ವಸ್ತುಸೃಷ್ಟಿ) ಗಳನ್ನು ಮಾಡಿದ್ದು, ಎಂದು ತಿಳಿಯ ಬೇಕು. ತ್ರಿವೃತ್ಕರಣ ಪೂರ್ವಕವಾಗಿ ನಾಮರೂಪಗಳನ್ನು ಮಾಡಿದವನು ಶ್ರೀವಿಷ್ಣುವೇ. (2) ಪೂರ್ವ ದಲ್ಲಿ ಅಭಿಮನ್ಯಮಾನಗಳಾದ ತೇಜಸ್ಸು ಮೊದಲಾದವುಗಳಿಂದೊಡಗೂಡಿದ ಲಕ್ಷ್ಮ್ಯಾದಿಗಳಲ್ಲಿ ಪ್ರವೇಶ ಮಾಡಿ ಅವರವರ ಅಂಶಗಳಿಂದ ಒಬ್ಬೊಬ್ಬರನ್ನು ಮೂವರು ಮೂವರನ್ನು ಸೇರಿಸಿ *ಅವರಿಂದ ಇಂದ್ರ ಮೊದಲಾದ ನಾಮ ರೂಪಗಳನ್ನು ಮಾಡಿದನು. ಅವರಲ್ಲಿಯೂ ತೇಜಸ್ಸು ಮೊದಲಾದ ದೇವತೆಗಳ ಅಂಶ ಗಳಿಂದ ಪ್ರವೇಶಿಸಿ ಆ ಅಂಶಗಳನ್ನು ಮಿಶ್ರೀಕರಿಸಿ ಆ ದೇವತೆಗಳಿಂದ ಅಗ್ನಿ ಮೊದಲಾದ ನಾಮರೂಪ ಗಳನ್ನು ಸೃಷ್ಟಿಸಿದನು. ಪುನಃ ಅಗ್ನಿ ಮೊದಲಾದ ಎಲ್ಲಾ ದೇವತೆಗಳಲ್ಲಿಯೂ ತೇಜಸ್ಸು ಅಪ್ ಅನ್ನ ದೇವತೆಗಳನ್ನು ಪ್ರವೇಶಿಸಿದರು. (3) ಹೀಗೆ ಅಗ್ನಿ ಮೊದಲಾದವರೆಲ್ಲರೂ, ಸಾಕ್ಷಾತ್ತಾಗಿ ಅಥವಾ ಪರಂಪರೆಯಾಗಿ ತೇಜೋಬನ್ನರೆಂಬ ಲಕ್ಷ್ಮೀ ಪ್ರಾಣರುದ್ರರಿಂದಲೇ ಹುಟ್ಟಿದವರು. (4) ಎಲ್ಲಾ ಪ್ರಾಣಿಗಳ ನಾಮರೂಪಗಳೂ ಕೂಡ ತೇಜಸ್ಸು ಅಪ್ ಅನ್ನಾದಿಗಳಿಗೆ ಅಭಿಮಾನಿಗಳಾದ ಲಕ್ಷ್ಮೀ ಪ್ರಾಣ ರುದ್ರಾದಿ ಗಳಿಂದಲೇ ಹುಟ್ಟಿದ ಪ್ರಯುಕ್ತ ಅವರ ಅಧೀನಗಳೇ ಆಗಿವೆ. ಇವೆರಡೂ ಮಗನ ಮನಸ್ಸಿನಲ್ಲಿ ದೃಢ ವಾಗುವುದಕ್ಕಾಗಿ **ಯಥಾ ತು ಖಲು ಸೋಮ್ಯ,** ಎಂದು ತಂದೆಯವರು ಹೇಳಿರುತ್ತಾರೆ ॥೮-೩॥ ॥ ೪ ॥

**ಪೀ— ಸೇಯಂ ದೇವತಾ...... ನಾಮರೂಪೇ ವ್ಯಾಕರೋತ್** ಎಂಬ ವಾಕ್ಯಕ್ಕೆ, ಪ್ರಸಿದ್ಧ ಜೀವ ರೂಪದಿಂದಲೇ ಪ್ರವೇಶಿಸುವುದು, ಎಂಬ ಪ್ರತೀತಿಯನ್ನು ಹೋಗಲಾಡಿಸಿ ಅರ್ಥ ಹೇಳುತ್ತಾರೆ—

**ಭಾ. ॥ (೧) ಸೃಷ್ಟ್ವೇಷ್ವೇತೇಷು ಭಗವಾನೀಕ್ಷಾಂಚಕ್ರೇ ಸ ಕೇಶವಃ ॥ (೨) ಜೀವಾ-ತ್ಮೇನ್ಯೆವ ರೂಪೇಣ ಯೋಽನಿರುದ್ಧ ಇತಿ ಸ್ಮೃತಃ । ತೇನ ರೂಪೇಣ ಲಕ್ಷ್ಮ್ಯಾದೀನ್ ಪ್ರ-ವಿಷ್ಟೋ ರೂಪನಾಮನೀ । ಕರಿಷ್ಯೇ ॥ (೩) ತ್ರಿವೃತಶ್ಚೈತಾನೇಕೈಕಂ ಕರವಾಣಿ ಚ । ಇತಿ ಮತ್ವಾ ಪ್ರವಿಶ್ಯಾಥ ತೇಭ್ಯ ಇಂದ್ರಾದಿನಾಮಪಿ ॥ ನಾಮರೂಪಾಣಿ ಕೃತವಾಂಸ್ತಾಂಶ್ಚಾ-ನ್ಯೋನ್ಯಪ್ರವೇಶಿನಃ ॥ (೪) ಕೃತ್ವಾಽಗ್ನಿಸೋಮಸೂರ್ಯಾದಿಷ್ವೇತಾಂಸ್ತ್ರೀನ್ವಿದಧೇ ಪುನಃ ॥ ॥ ೧, ೨, ೩, ೪ ॥ ಇತಿ ತೃತೀಯಃ ಖಂಡಃ ॥ ೮–೩ ॥ ॥ ೧ ॥**

* ಎಲ್ಲಾ ಪ್ರಾಣಿಗಳಲ್ಲಿಯೂ ಪೃಥಿವೀ ಜಲ ತೇಜಸ್ಸುಗಳ ಭಾಗಗಳಿವೆ. ನಿಯಾಮಕರಾಗಿ ಆ ಲಕ್ಷ್ಮ್ಯಾದಿ ದೇವತೆ ಗಳೂ ಇರುತ್ತಾರೆ.

ಅ ॥ (೧) ಶ್ರೀಹರಿಯು ಈ ಮೂರು ದೇವತೆಗಳನ್ನು ಸೃಷ್ಟಿಮಾಡಿದ ಮೇಲೆ ಆಲೋಚಿಸಿದನು. (೨) ಆ ಮೇಲೆ ಜೀವ ಎಂಬ ರೂಪದಿಂದ ಯಾವನು ಅನಿರುದ್ಧನಿದ್ದಾನೋ ಅಂತಹ ಅನಿರುದ್ಧನೆಂಬ ಅಂತರ್ಯಾಮಿ ರೂಪದಿಂದ ಲಕ್ಷ್ಮ್ಯಾದಿಗಳಲ್ಲಿ ಪ್ರವೇಶಿಸಿ ರೂಪ (ವಸ್ತುಗಳು) ನಾಮ (ಘಟಪಟ ಮೊದಲಾದ ಹೆಸರು) ಗಳನ್ನು ಮಾಡುವೆನು. (೩) ಇವರಲ್ಲಿ ಒಬ್ಬೊಬ್ಬರನ್ನು ಮೂವರು ಮೂವರಿಂದ ಕೂಡಿದವರನ್ನಾಗಿಯೂ ಮಾಡುವೆನು. ಹೀಗೆ ತಿಳಿದು ಆ ದೇವತೆಗಳಲ್ಲಿ ತಾನು ಪ್ರವೇಶಮಾಡಿ ಆ ಮೇಲೆ ಆ ದೇವತೆಗಳಿಂದ ಇಂದ್ರಾದಿ ದೇವತೆಗಳಿಗೆ ನಾಮರೂಪಗಳನ್ನು ಕೊಟ್ಟನು. ಲಕ್ಷ್ಮೀ ಮೊದಲಾದ ದೇವತೆಗಳನ್ನು ಪರಸ್ಪರವಾಗಿ ಪ್ರವೇಶ ಮಾಡಿದವರನ್ನಾಗಿ ಮಾಡಿದನು. (೪) ಆ ದೇವತೆಗಳನ್ನು ಪರಸ್ಪರವಾಗಿ ಪ್ರವೇಶಿಸಿ ಅಗ್ನಿ ಸೋಮ ಸೂರ್ಯ ಮೊದಲಾದ ದೇವತೆಗಳಲ್ಲಿ ಮರಳಿ ಲಕ್ಷ್ಮ್ಯಾದಿದೇವತೆಗಳನ್ನು ಪ್ರವೇಶಮಾಡಿಸಿದನು. ॥ ೮—೩ ॥ ॥ ೧ ॥

ಮೂರನೇ ಖಂಡವು ಮುಗಿಯಿತು.

## ೪ನೇ ಖಂಡವು

ಪೀ—ಮಗನ ದುರಹಂಕಾರವನ್ನು ಕಳೆಯುವುದಕ್ಕಾಗಿ ತಾನು ಪ್ರತಿಜ್ಞೆಮಾಡಿದ್ದನ್ನು ಹೇಳುತ್ತಾರೆ-

**ಉ. ॥ ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದಗ್ನೇರಗ್ನಿತ್ವಂ ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ ॥ ೧ ॥**

ಅ ॥ ಅಗ್ನಿಗೆ ಯಾವುದು ಲೋಹಿತ (ಕೆಂಪು) ರೂಪವಿದೆಯೋ, ಅದು ತೇಜಸ್ಸಿನ ರೂಪವು. ತೇಜಸ್ಸಿನ ರೂಪದಿಂದ ಹುಟ್ಟಿದ್ದು. ತೇಜಃ ಎನಿಸಿದ ಲಕ್ಷ್ಮೀದೇವಿಯ ರೂಪದಿಂದ ಹುಟ್ಟಿದ್ದು. ಆ ಲಕ್ಷ್ಮೀದೇವಿಯ ಅಧೀನವಾದುದು, ಎಂದು ತಿಳಿಯಬೇಕು. ಅಗ್ನಿಗೆ ಯಾವುದು ಶುಕ್ಲ (ಬಿಳಿಪು) ರೂಪವೋ, ಅದು ಜಲದ ರೂಪವು ನೀರಿನ ರೂಪದಿಂದ ಹುಟ್ಟಿದ್ದು. ನೀರಿಗೆ ಅಭಿಮಾನಿಯಾದ ಪ್ರಾಣನ ಅಧೀನವಾದುದು, ಎಂದು ತಿಳಿಯಬೇಕು. ಅಗ್ನಿಗೆ ಯಾವುದು ಕೃಷ್ಣ (ಕಪ್ಪು) ರೂಪವೋ, ಅದು ಪೃಥಿವಿಯ ರೂಪವು. ಪೃಥಿವೀದೇವತೆಯಾದ ಶಿವನ ರೂಪದಿಂದ ಹುಟ್ಟಿದ್ದು. ಶಿವನ ಅಧೀನವಾದುದು, ಎಂದು ತಿಳಿಯಬೇಕು. (ರೂಪವು ಮಾತ್ರ ಇನ್ನೊಬ್ಬರ ಅಧೀನವಾಗಿರುವುದರಿಂದ ಅಮುಖ್ಯವೆಂದಲ್ಲ. ಪರಂತು ನಾಮವೂ ಕೂಡ ಅಮುಖ್ಯವೇ ಎನ್ನುತ್ತಾರೆ—) ಹೀಗೆ ಅಗ್ನಿಯು ತೇಜೋಬನ್ನರ ಅಧೀನವಾಗಿರುವುದರಿಂದ ಅಗ್ನಿಗೆ ಅಗ್ನಿಯೆಂಬ ನಾಮದ ಪ್ರವೃತ್ತಿಗೆ ಕಾರಣವಾದ ಅತ್ತೃತ್ವವು (ಸರ್ವಭಕ್ಷಣವು) ಅಗ್ನಿಯ ಸಕಾಶದಿಂದ ಹೋಗಿದೆ. (ಅಂದರೆ ಅಗ್ನಿಗೆ ಮುಖ್ಯವಾಗಿ ಇಲ್ಲ. ಅಗ್ನಿಗೆ ಅಗ್ನಿಯೆಂಬ ಹೆಸರೂ ಮುಖ್ಯವಾಗಿ ಇಲ್ಲ. ಲಕ್ಷ್ಮ್ಯಾದಿಗಳಿಗೇನೇ ಮುಖ್ಯವಾಗಿ ಇರುತ್ತದೆ. ಹೇಗೆ ಲೋಕದಲ್ಲಿ ಪ್ರಸಿದ್ಧರಾದ ಸ್ತ್ರೀಪುರುಷರಲ್ಲಿ ಲಕ್ಷ್ಮೀ, ನಾರಾಯಣ ಮೊದಲಾದ ಹೆಸರು ಸಾಂಕೇತಿಕವೋ, ಅಮುಖ್ಯವೋ, ಹಾಗೆಯೇ ಇಲ್ಲಿಯೂ) ಅಗ್ನಿಗೆ ಅಗ್ನಿಯೆಂಬ ಹೆಸರು ವಾಗಿಂದ್ರಿಯದಿಂದ ಹುಟ್ಟಿದ್ದು. (ಲಕ್ಷ್ಮ್ಯಾದಿಗಳಿಂದ ಸೆಳೆದು ಅಗ್ನ್ಯಾದಿಗಳಲ್ಲಿ ವ್ಯವಹಾರಮಾತ್ರವು. ಸಂಕೇತಮಾತ್ರವು. ಅನಾದಿಯಿಂದ ಅಗ್ನ್ಯಾದಿಗಳಲ್ಲಿ ಇರತಕ್ಕುದಲ್ಲ. ಲಕ್ಷ್ಮ್ಯಾದಿಗಳಿಗೇನೇ ಮುಖ್ಯವು ಅಗ್ನ್ಯಾದಿಗಳಲ್ಲಿ) ವಿಕಾರಃ=ಅಮುಖ್ಯವು. (ಎಲ್ಲಿ ಮುಖ್ಯವಾಗಿ ಇರುತ್ತವೆಂದರೆ—) ತೇಜಸ್ಸು ಅಪ್ ಅನ್ನರೆಂಬ ಶಬ್ದಗಳಿಂದ ಹೇಳಲ್ಪಡುವ ಲಕ್ಷ್ಮೀ ಪ್ರಾಣ ಶಿವರೆಂಬ ಮೂರು ದೇವತೆಗಳೇ ಅಗ್ನಿಯೆಂಬ ಶಬ್ದದಿಂದ ಮುಖ್ಯವಾಗಿ ಹೇಳಲ್ಪಡುವವರು. ॥ ೧ ॥

**ಉ. ॥ ಯದಾದಿತ್ಯಸ್ಯ ರೋಹಿತꣳ ರೂಪಂ ತೇಜಸಸ್ತದ್ರೂಪಂ ಯ-ಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದಾದಿತ್ಯಾದಾದಿತ್ಯತ್ವಂ ವಾ-ಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ॥೨॥**

ಅ ॥ ಸೂರ್ಯನದ್ದು *........ಆದಿತ್ಯತ್ವಂ=ಆಯುಷ್ಯವನ್ನು ತೆಗೆದುಕೊಳ್ಳುವಿಕೆ........ ॥ ೨ ॥

**ಉ. ॥ ಯಚ್ಚಂದ್ರಮಸೋ ರೋಹಿತꣳ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾಚ್ಚಂದ್ರಾಚ್ಚಂದ್ರತ್ವಂ ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ ॥ ೩ ॥**

ಅ ॥ ಚಂದ್ರನಿಗೆ... ಚಂದ್ರತ್ವಂ=ಜನರನ್ನು ಸಂತೋಷಗೊಳಿಸುವಿಕೆ, ತೃಪ್ತಿಗೊಳಿಸುವಿಕೆ....॥ ೩ ॥

**ಉ. ॥ ಯದ್ವಿದ್ಯುತೋ ರೋಹಿತꣳ ರೂಪಂ ತೇಜಸಸ್ತದ್ರೂಪಂ ಯ-ಚ್ಛುಕ್ಲಂ ತದಪಾಂ ಯತ್ಕೃಷ್ಣಂ ತದನ್ನಸ್ಯಾಪಾಗಾದ್ವಿದ್ಯುತೋ ವಿದ್ಯುತ್ತ್ವಂ ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ ॥ ೪ ॥**

ಅ ॥ ...........ಮಿಂಚಿಗೆ ವಿದ್ಯುತ್ತ್ವಂ=ವಿಶೇಷವಾಗಿ ಪ್ರಕಾಶಗೊಳಿಸುವಿಕೆ... ........ (ಹೀಗೆಯೇ ಮಿತ್ರಾದಿ ದೇವತೆಗಳಿಗೆ ಯಾವುದು ರೋಹಿತ ಮೊದಲಾದ ರೂಪಗಳಿವೆಯೋ, ಅವೆಲ್ಲವೂ ಲಕ್ಷ್ಮ್ಯಾದಿಗಳ ಅಧೀನವೆಂದೇ ಇಟ್ಟುಕೊಳ್ಳಬೇಕು.) ॥ ೪ ॥

ಪೀ—ಒಬ್ಬನ ಜ್ಞಾನದಿಂದ ಸಮಸ್ತವಿಜ್ಞಾನಾದಿಗಳು ಆಗುತ್ತವೆಂಬುದು ಉಪದೇಶಪರಂಪರೆಯಿಂದ ಬಂದದ್ದೆನ್ನುತ್ತಾರೆ—ಅಥವಾ ಹೇಳಿದುದನ್ನು ವಿದ್ವಾಂಸರ ಸಮ್ಮತಿ ಹೇಳಿ ಅದನ್ನು ದೃಢೀಕರಿಸುತ್ತಾರೆ—

**ಉ. ॥ ಏತದ್ಧ ಸ್ಮ ವೈ ತದ್ವಿದ್ವಾꣳಸ ಆಹುಃ ಪೂರ್ವೇ ಮಹಾಶಾಲಾ ಮಹಾಶ್ರೋತ್ರಿಯಾ ನ ನೋಽದ್ಯ ಕಶ್ಚನಾಶ್ರುತಮಮತಮವಿಜ್ಞಾತಮುದಾ-ಹರಿಷ್ಯತೀತಿ ಹ್ಯೇಭ್ಯೋ ವಿದಾಂಚಕ್ರುಃ ॥ ೫ ॥**

ಅ ॥ ಸಾದೃಶ್ಯಪ್ರಾಧಾನ್ಯಗಳಿಂದ ಪರಬ್ರಹ್ಮನ ಜ್ಞಾನವನ್ನು ಸಂಪಾದಿಸಿ ಅದರಿಂದ ಕರ್ಮದೇವತಾ ಮೊದಲಾದ ಎಲ್ಲಾ ಜಗತ್ತೂ ತಿಳಿದಂತೆ ಆಗುತ್ತದೆ, ಶ್ರೀಹರಿಯು ಸಮಸ್ತಜಗತ್ತನ್ನು ಸೃಷ್ಟಿಮಾಡಿದುದರಿಂದ ಪ್ರಧಾನನು. ತೇಜೋಬನ್ನದೇವತೆಗಳು ತ್ರಿವೃತ್ಕರಣದಿಂದ ಕರ್ತೃಗಳಾಗಿರುತ್ತಾರೆ, ಇದುಮೊದಲಾದ ಪ್ರಮೇಯವನ್ನು ತಿಳಿದಿರುವ, ಪ್ರತಿಸಂವತ್ಸರದಲ್ಲಿ ಯಜ್ಞಮಾಡುತ್ತಿರುವ, ಚೆನ್ನಾಗಿ ವೇದ ವೇದಾರ್ಥಗಳನ್ನು ತಿಳಿದಿರುವ ವಿದ್ವಾಂಸರು ಮೊದಲಿನವರು, ನಮಗೆ ಈಗ ನಮ್ಮ ಗುರುಗಳು ಉಪದೇಶಮಾ

* ೨, ೩, ೪, ಈ ಮೂರು ಮಂತ್ರಗಳಲ್ಲಿಯೂ ಹಿಂದಿನಂತೆಯೇ ಅರ್ಥ ಇಟ್ಟುಕೊಳ್ಳಬೇಕು.

ಡಿದ ಮೇಲೆ ಬ್ರಹ್ಮನಿಂದ ಬೇರೆಯಾದುದು ಯಾವುದೊಂದೂ ಕೇಳಲ್ಪಡದಿದ್ದುದು, ವಿಚಾರಿಸಲ್ಪಡದಿದ್ದುದು, ತಿಳಿಯಲ್ಪಡದಿದ್ದುದು ಇದೆ ಎಂದು ಯಾರೊಬ್ಬರೂ ಈಗಿನವರು ಹೇಳುವುದಿಲ್ಲ. (ಏಕೆಂದರೆ—ಪರಬ್ರಹ್ಮನ ಶಾಸ್ತ್ರಶ್ರವಣ ಮನನ ವಿಜ್ಞಾನಗಳಿಂದ ಸಮಸ್ತವಸ್ತುಗಳ ಶ್ರವಣ ಮನನ ವಿಜ್ಞಾನಗಳ ಫಲವು ಸಿಗುತ್ತದೆ, ಎಂದು ಹೇಳುತ್ತಾರೆ) ಈ ಪ್ರಮೇಯವನ್ನು ತಿಳಿದಿರುವ ಮುಂಚಿನವರಿಂದ ಬೇರೆ ವಿದ್ವಾಂಸರು ಒಬ್ಬನ ಜ್ಞಾನದಿಂದ ಸಮಸ್ತ ವಸ್ತುಗಳ ವಿಜ್ಞಾನಾದಿಗಳ ಪ್ರಕಾರವನ್ನು ತಿಳಿದಿರುವರು. ॥ ೫ ॥

ಪೀ—ಅವರು ತಿಳಿದ ಪ್ರಕಾರವನ್ನು ಲೇಶವಾಗಿ ವೇದವು ಹೇಳುತ್ತದೆ -

**ಉ. ॥ ಯದು ರೋಹಿತಮಿವಾಭೂದಿತಿ ತೇಜಸಸ್ತದ್ರೂಪಮಿತಿ ತದ್ವಿದಾಂಚಕ್ರುರ್ಯದು ಶುಕ್ಲಮಿವಾಭೂದಿತ್ಯಪಾಂ ರೂಪಮಿತಿ ತದ್ವಿದಾಂಚಕ್ರುರ್ಯದು ಕೃಷ್ಣಮಿವಾಭೂದಿತ್ಯನ್ನಸ್ಯ ರೂಪಮಿತಿ ತದ್ವಿದಾಂಚಕ್ರುಃ ॥ ೬ ॥**

ಅ ॥ ಯಾವುದು ಕೆಂಪು ರೂಪದಂತೆ ಆಗುವುದೋ ಅದು ತೇಜಸ್ಸಿನ ರೂಪದಿಂದ ಹುಟ್ಟಿದ್ದು. ಲಕ್ಷ್ಮಿಯ ಅಧೀನವಾದುದು, ಎಂದು ಜ್ಞಾನಿಗಳು ತಿಳಿದಿರುವರು ಬಿಳಿಪಿನಂತೆ ಯಾವುದು ಆಯಿತೋ ಅದು ನೀರಿನ ರೂಪದಿಂದ ಹುಟ್ಟಿದ್ದು ಪ್ರಾಣನ ಅಧೀನವಾದುದು, ಎಂದು ತಿಳಿದಿರುವರು ಕಪ್ಪುಬಣ್ಣದಂತೆ ಯಾವುದು ಆಯಿತೋ ಅದು ಪೃಥಿವಿಯ ರೂಪದಿಂದ ಹುಟ್ಟಿದ್ದು. ಅದು ರುದ್ರನ ಅಧೀನವಾದುದು, ಎಂದು ತಿಳಿಯುತ್ತಾರೆ. ॥ ೬ ॥

**ಉ. ॥ ಯದ್ವವಿಜ್ಞಾತಮಿವಾಭೂದಿತ್ಯೇತಾಸಾಮೇವ ದೇವತಾನಾಂ ಸಮಾಸ ಇತಿ ತದ್ವಿದಾಂಚಕ್ರುರ್ಯಥಾ ತು ಖಲು ಸೋಮ್ಯೇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತನ್ಮೇ ವಿಜಾನೀಹೀತಿ ॥ ಇತಿ ಚತುರ್ಥಃ ಖಂಡಃ ॥ ೮ ೪ ॥ ॥ ೭ ॥**

ಅ ॥ ಯಾವ ರೂಪವು ತೇಜೋರೂಪವಾಗಿ ಅಥವಾ ಕಾಣುವ ರೂಪವಾಗಿ ಚೆನ್ನಾಗಿ ತಿಳಿಯಲ್ಪಡದೆ ಇದ್ದ ಹಾಗೆ ಇದ್ದು ಸ್ವಲ್ಪ ಕೆಂಪು ಮೊದಲಾದ ರೂಪದಿಂದ ತಿಳಿಯಲ್ಪಡುವುದೋ, ಅದೂ ಕೂಡ ಈ ತೇಜೋಬನ್ನರೆಸಿಸಿದ ದೇವತೆಗಳ ಸಮುದಾಯವು. (ಅಂದರೆ ಅದೂ ಕೂಡ ಈ ಮೂರು ದೇವತೆಗಳ ರೂಪಗಳಿಂದ ಹುಟ್ಟಿದ್ದು.) ಎಂದು ಜ್ಞಾನಿಗಳು ತಿಳಿಯುತ್ತಾರೆ. (ಹೀಗೆ ಅಧಿದೈವತದಲ್ಲಿ ತೇಜೋಬನ್ನರೆಸಿಸಿದ ದೇವತೆಗಳಿಗೆ ತ್ರಿವೃತ್ಕರಣಪ್ರಕಾರವನ್ನು ಹೇಳಿ ಈಗ ಅಧ್ಯಾತ್ಮದಲ್ಲಿಯೂ ಅದನ್ನು ಹೇಳುವುದಕ್ಕಾಗಿ ಪ್ರಸ್ತವಿಸುತ್ತಾರೆ —) ಎಲೋ ಮಗನೇ ತೇಜೋಬನ್ನಗಳಿಗೆ ಅಭಿಮಾನಿಗಳಾದ ಲಕ್ಷ್ಮೀ ಪ್ರಾಣ ಶಿವರೆಂಬ ಮೂರು ದೇವತೆಗಳು ಜೀವರ ಶರೀರವನ್ನು ಹೊಂದಿ ಯಾವ ಪ್ರಕಾರ ಒಬ್ಬೊಬ್ಬರು ಮೂವರುಮೂವರಿಂದ ಕೂಡಿದವರು ಆಗುತ್ತಾರೋ, ಅದನ್ನು ನಾನು ನಿನಗೆ ಹೇಳುತ್ತೇನೆ. ನನ್ನಿಂದ ನೀನು ಅದನ್ನು ತಿಳಿದುಕೋ, ಎಂದು ತಂದೆಯಾದ ಉದ್ದಾಲಕರು ಹೇಳಿದರು ॥ ೮-೪ ॥ ॥ ೭ ॥

ಪೀ—ಯದಗ್ನೇ ರೋಹಿತಂ ರೂಪಂ ಇತ್ಯಾದಿಗಳಿಗೆ ಅರ್ಥ ಹೇಳುತ್ತಾರೆ—

**ಭಾ. ॥ (೧) ಅತೋ ಯಲ್ಲೋಹಿತಂ ರೂಪಂ ಶ್ರಿಯಸ್ತದ್ರೂಪಸಂಭವಂ । ಯಚ್ಛುಕ್ಲಂ ವಾಯುಜಂ ವಿದ್ಯಾತ್ಕೃಷ್ಣಂ ಚೈವ ಶಿವೋದ್ಭವಂ ॥ (೨) ತಸ್ಮಾದಗ್ನೇರ್ಯದ-**

**ತ್ತೃತ್ವಮಗ್ನಿನಾಮಪ್ರವರ್ತಕಂ । ಲಕ್ಷ್ಮ್ಯಾದಿದೇವತಾನಾಂ ತನ್ನೈವಾಗ್ನೇರಗ್ನಿತಾ ತತಃ । ಮುಖ್ಯಾ ॥ (೪) ಏವಮಾದದಾನತ್ವಮಾದಿತ್ಯಸ್ಯ ತದುದ್ಭವಂ । ಅತ ಆದಿತ್ಯನಾಮ್ನೈಷಾಂ ನೈವಾದಿತ್ಯಸ್ಯ ಮುಖ್ಯತಃ ॥ (೩) ಯಚ್ಚಂದ್ರಾಹ್ಲಾದಕತ್ವಂ ಚ ತತ್ತೇಷಾಂ ಚಂದ್ರತಾ ತಥಾ.॥ (೫) ವಿದ್ಯುದ್ವಿದ್ಯೋತನಂ ತೇ(ಚ್ಚೈ)ಷಾಂ ತತಸ್ತೇ ಸರ್ವನಾಮಿನಃ ॥ (೬) ತಥೈವ ಸರ್ವರೂಪಂ ಚ ತದ್ರೂಪಪ್ರತಿಬಿಂಬಿತಂ । ಸರ್ವರೂಪಾಶ್ಚ ತೇ ತಸ್ಮಾಲ್ಲೋಹಿತಾದಿ-ಕ್ರಮೇಣ ತು ॥ ೧ ॥**

**ಅ** ॥ (೧) ಅಗ್ನ್ಯಾದಿಗಳಲ್ಲಿ ಲಕ್ಷ್ಮ್ಯಾದಿಗಳು ಪ್ರವೇಶಮಾಡಿದುದರಿಂದ ಅಗ್ನಿ ಸೋಮ ಸೂರ್ಯಾದಿಗಳಲ್ಲಿ ಯಾವುದು ಕೆಂಪುರೂಪವಿದೆಯೋ ಅದು ಲಕ್ಷ್ಮೀದೇವಿಯ ರೂಪದಿಂದ ಹುಟ್ಟಿದ್ದು. ಬಿಳೀರೂಪವು ವಾಯುವಿನ ರೂಪದಿಂದ ಹುಟ್ಟಿದ್ದು. ಕಪ್ಪುರೂಪವು ಶಿವನ ರೂಪದಿಂದ ಹುಟ್ಟಿದ್ದು. (೨) (**ಅಪಾಗಾದಗ್ನೇರಗ್ನಿತ್ವಂ** ಎಂಬುದಕ್ಕೆ ಸಂಗತಿ ಹೇಳಿ ಅರ್ಥ ಹೇಳುತ್ತಾರೆ—) ಅಗ್ನಿಗೆ ಲಕ್ಷ್ಮೀ ವಾಯು ಶಿವರ ರೂಪಗಳಿಂದ ಹುಟ್ಟಿದ ರೂಪವಿರುವುದರಿಂದ ಅವನು ಅವರ ಅಧೀನನಾದ ಕಾರಣ ಆ ಅಗ್ನಿಗೆ ಅಗ್ನಿಯೆಂಬ ಹೆಸರು ಬರಲಿಕ್ಕೆ ಕಾರಣವಾದುದು ಯಾವುದು ಸರ್ವಭಕ್ಷಣವಿದೆಯೋ.ಅದು ಲಕ್ಷ್ಮ್ಯಾದಿ ದೇವತೆಗಳಿಗೇನೇ ಮುಖ್ಯವು. (ಅದುಕಾರಣ ಆ ದೇವತೆಗಳಿಗೇನೇ ಅಗ್ನಿಯೆಂಬ ಹೆಸರು ಮುಖ್ಯವು.) ಆದಕಾರಣ ಅಗ್ನಿಯೆಂಬ ನಾಮದ ಪ್ರವೃತ್ತಿಗೆ ಕಾರಣವಾದ ಅತ್ತೃತ್ವವು ಅಗ್ನ್ಯಾದಿದೇವತೆಗಳಲ್ಲಿ ಪ್ರವೇಶಿಸಿದ ಲಕ್ಷ್ಮ್ಯಾದಿಗಳಲ್ಲಿಯೇ ಮುಖ್ಯವಾಗಿರುವುದರಿಂದ ಅಗ್ನಿಗೆ ಅಗ್ನಿತ್ವ (ಅತ್ತೃತ್ವ-ಸರ್ವಭಕ್ಷಣ) ವು ಮುಖ್ಯವಾದುದು ಅಲ್ಲವೇ ಅಲ್ಲ (ಅದುಕಾರಣ ಅಗ್ನಿಯೆಂಬ ಹೆಸರು ಅಗ್ನಿಯಲ್ಲಿ ಮುಖ್ಯವಲ್ಲ.) (೩) (**ಅಪಾಗಾದಾದಿತ್ಯಾದಾದಿತ್ಯತ್ವಂ** ಇತ್ಯಾದಿಗಳಿಗೂ ಹೀಗೆಯೇ ಅರ್ಥ ಹೇಳಬೇಕೆನ್ನುತ್ತಾರೆ—) ಅಗ್ನಿತ್ವದಂತೆಯೇ ಆದಿತ್ಯನಿಗೆ ಆದಿತ್ಯ ಎಂಬ ನಾಮದ ಪ್ರವೃತ್ತಿಗೆ ಕಾರಣವಾದ ಆಯುಷ್ಯವನ್ನು ತೆಗೆದುಕೊಳ್ಳುವಿಕೆ ಎಂಬುದೂ ಲಕ್ಷ್ಮ್ಯಾದಿ ದೇವತೆಗಳಿಗೇನೇ ಮುಖ್ಯವು ಆದಿತ್ಯನಿಗೆ ಮುಖ್ಯವಲ್ಲ. (ಏಕೆಂದರೆ ) ಆದಿತ್ಯನ ರೂಪವೂ ಲಕ್ಷ್ಮ್ಯಾದಿ ದೇವತೆಗಳ ರೂಪಗಳಿಂದಲೇ ಹುಟ್ಟಿದ್ದು ಅದುಕಾರಣ ಆದಿತ್ಯನೆಂಬ ಹೆಸರು ಲಕ್ಷ್ಮ್ಯಾದಿ ದೇವತೆಗಳಿಗೇನೇ ಮುಖ್ಯವಾಗಿ ಇರುತ್ತದೆ ಆದಿತ್ಯನಿಗೆ ಮುಖ್ಯವಾಗಿ ಇಲ್ಲ. (೪) ಆಯುಷ್ಯವನ್ನು ತೆಗೆದುಕೊಳ್ಳುವಿಕೆ ಎಂಬುವಂತೆ ಚಂದ್ರನಿಗೆ ಸಂತೋಷಗೊಳಿಸುವಿಕೆಯು ಚಂದ್ರ ಎಂಬ ಶಬ್ದವು ಪ್ರವೃತ್ತಿಯಾಗಲಿಕ್ಕೆ ಕಾರಣವು. ಅದು ಲಕ್ಷ್ಮ್ಯಾದಿಗಳಿಗೇನೇ ಮುಖ್ಯವು (ಚಂದ್ರನಿಗೆ ಮುಖ್ಯವಲ್ಲ ಚಂದ್ರನ ರೂಪವು ಲಕ್ಷ್ಮ್ಯಾದಿಗಳ ರೂಪದಿಂದ ಹುಟ್ಟಿದಪ್ರಯುಕ್ತ ಚಂದ್ರನು ಲಕ್ಷ್ಮ್ಯಾದಿಗಳ ಅಧೀನನೇ. ಅದುಕಾರಣ ಅವರಿಗೇನೇ ಚಂದ್ರ ಎಂಬ ನಾಮವು ಮುಖ್ಯವು ಚಂದ್ರನಿಗೆ ಮುಖ್ಯವಲ್ಲ ) (೫) (**ಅಪಾಗಾದ್ವಿದ್ಯುತೋ ವಿದ್ಯುತ್ತ್ವಂ** ಎಂಬುದರ ತಾತ್ಪರ್ಯ ಹೇಳುತ್ತಾರೆ )ಮಿಂಚಿಗೆ ಪ್ರಕಾಶಗೊಳಿಸುವಿಕೆಯೂ ಲಕ್ಷ್ಮ್ಯಾದಿಗಳಿಗೇನೇ ಮುಖ್ಯವು ಮಿಂಚಿಗೆ ಅಲ್ಲ. ಅದುಕಾರಣ ವಿದ್ಯುತ್ ಎಂಬ ಹೆಸರು ಲಕ್ಷ್ಮ್ಯಾದಿಗಳಿಗೇನೇ. ಮಿಂಚಿಗೆ ಮುಖ್ಯವಾಗಿ ಅಲ್ಲ (ಇದರಿಂದ **ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ** ಎಂಬ ನಾಲ್ಕು ವಾಕ್ಯಗಳಿಗೂ ತಾತ್ಪರ್ಯವನ್ನು ಹೇಳಿದರು.) (ಹಿಂದೆ ಹೇಳಿದ ಪ್ರಕಾರ ಲಕ್ಷ್ಮ್ಯಾದಿಗಳು ಅಗ್ನಿ ಮೊದಲಾದ ನಾಲ್ಕು ನಾಮಗಳಿಗೆ ಮುಖ್ಯ ವಾಚ್ಯರೆಂದು ಅರ್ಥ ಸಿಕ್ಕಿತು. ಅದರಿಂದ ಅವರಿಗೆ ವಿಶೇಷವೇನು? ಎಂದರೆ ) ಆಯಾಯ ದೇವತೆಗಳನ್ನು ಹೇಳುವ ಶಬ್ದಗಳು ಪ್ರವೃತ್ತಿಯಾಗಲಿಕ್ಕೆ ಕಾರಣವು ಲಕ್ಷ್ಮ್ಯಾದಿಗಳಲ್ಲಿಯೇ ಮುಖ್ಯವಾಗಿರುವುದರಿಂದ ಆ ಲಕ್ಷ್ಮ್ಯಾದಿಗಳೇ ಸಮಸ್ತ ದೇವತೆಗಳ ನಾಮಗಳಿಂದ ಮುಖ್ಯವಾಗಿ ಹೇಳಲ್ಪಡುತ್ತಾರೆ. (೬) (ಆಯಾಯ ದೇವತೆಗಳನ್ನು ಹೇಳುವ ಶಬ್ದಗಳ ಪ್ರವೃತ್ತಿನಿಮಿತ್ತವು ಲಕ್ಷ್ಮ್ಯಾದಿಗಳಲ್ಲಿಯೇ ಮುಖ್ಯವೆಂಬುದು ಹೇಗೆ? ಎಂದರೆ) ಹೇಗೆ ಅಗ್ನ್ಯಾದಿಗಳ ರೂಪವು ಲಕ್ಷ್ಮ್ಯಾದಿಗಳ ರೂಪಗಳಿಂದ ಹುಟ್ಟಿದ್ದೋ, ಹಾಗೆಯೇ ಸಮಸ್ತದೇವತೆ

ಗಳ ಕೆಂಪು ಮೊದಲಾದುದು ರೂಪವು ಲಕ್ಷ್ಮ್ಯಾದಿಗಳ ರೂಪದಿಂದ ಹುಟ್ಟಿದ್ದು. (ಅದುಕಾರಣ ಆಯಾಯ ಶಬ್ದಗಳ ಪ್ರವೃತ್ತಿನಿಮಿತ್ತವು ಆ ಲಕ್ಷ್ಮ್ಯಾದಿದೇವತೆಗಳಿಗೇನೇ ಮುಖ್ಯವು. ಆಯಾಯ ದೇವತೆಗಳಿಗೆ ಅಮುಖ್ಯವು.) ಅಗ್ನಿ ಮೊದಲಾದ ಸಮಸ್ತ ದೇವತೆಗಳ ರೂಪವು ಲಕ್ಷ್ಮ್ಯಾದಿಗಳ ರೂಪಗಳಿಂದ ಹುಟ್ಟಿದ ಕಾರಣದಿಂದಲೇ ಅಗ್ನಿ ಮೊದಲಾದ ಸಮಸ್ತದೇವತೆಗಳು ರೋಹಿತಾದಿ ರೂಪಗಳ ಕ್ರಮದಿಂದ ಎಲ್ಲಾ ರೂಪಗಳುಳ್ಳವರು ಆಗಿರುತ್ತಾರೆ ॥ ೧ ॥

ಪೀ—ಈಗ ವಾಚಾರಂಭಣಂ ವಿಕಾರೋ **ನಾಮಧೇಯಂ** ಎಂಬುವುದಕ್ಕೆ ಸ್ಪಷ್ಟವಾಗಿ ಅರ್ಥ ಹೇಳುತ್ತಾರೆ -

**ಭಾ. ॥ (೧) ಅತೋಽನ್ಯನಾಮಧೇಯಂ ತು ವಾಚಾರಂಭಣಹೇತುತಃ । ಸಾಂಕೇತ್ಯೇನ ವಿಕಾರಃ ಸ್ಯಾತ್ತ್ರಯಾಣಾಮೇವ ನಿತ್ಯತಾ ॥ (೨) ಯಥಾ ಲಕ್ಷ್ಮ್ಯಾದಿಕಾನಾಂ ಚ ನಾಮ-ಸಂಕೇತತೋಽನ್ಯಗಂ । ವಾಚಾರಂಭಣಹೇತೋಸ್ತದ್ವಿಕಾರೋ ನ್ಯೈವ ಮುಖ್ಯತಃ । (೩) ಮುಖ್ಯಂ ನಾಮ ತ್ರಿರೂಪಾಣೀತ್ಯಾದ್ಯಂ ವೇದೋದಿತಂ ಪರಂ । ಅತಸ್ತದೇವ ಸತ್ಯೋಕ್ತಂ ಮುಖ್ಯಂ ಸತ್ಯಮಿತೀರ್ಯತೇ ॥ (೪) ಇಂದ್ರಾದಿನಾಮರೂಪಾಣಿ ಯಥೈವ ತ್ರಿಷು ಮುಖ್ಯತಃ । ತದಧೀನತ್ವತಸ್ತೇಷಾಮೇಷಾಮುಚ್ಚಬಲತ್ವತಃ ॥ ಶಿವನಾಮಾನಿ ರೂಪಾಣಿ ತಥಾ ವಾಯೋಽಸ್ತು ಮುಖ್ಯತಃ । ತದೀಯಾನಿ ತಥಾ ಲಕ್ಷ್ಮ್ಯಾಸ್ತದೀಯಾನಿ ಹರೇಸ್ತಥಾ ॥ ತಸ್ಮಾತ್ಸ ಏವ ಸರ್ವೇಶಃ ಸರ್ವರೂಪಃ ಸ ಏವ ಚ । ಸರ್ವನಾಮಾ ಸ ಏವೈಕಃ ಸರ್ವ-ಶಕ್ತಿಸ್ತಥೈವ ಚ ॥ ೨ ॥**

ಅ ॥ (೧) ಅಗ್ನಿ ಮೊದಲಾದ ನಾಮಧೇಯವು ಅಗ್ನಿ ಮೊದಲಾದ ದೇವತೆಗಳನ್ನು ಹೇಳುತ್ತದೆಂದು ಪ್ರಸಿದ್ಧವಾಗಿದ್ದರೂ, (ಅಗ್ನ್ಯಾದಿಗಳಲ್ಲಿ) ವಿಕಾರಃ-ಅಮುಖ್ಯವೇ, ಏಕೆಂದರೆ- -ಮಾತಿನಿಂದ ಉಂಟೆಂದು ಆರಂಭವಾಗಿರುವುದರಿಂದ ಏವಂಚ ಸಂಕೇತಮಾಡಿದ್ದಾದುದರಿಂದ ಅಮುಖ್ಯವೇ. (ಅಂದರೆ—ಅಗ್ನಿ ಮೊದಲಾದ ಶಬ್ದಗಳ ಪ್ರವೃತ್ತಿಗೆ ಕಾರಣವಾದ ಅಗ್ನಿತ್ವಾ (ಸರ್ವಭಕ್ಷಣಾ) ದಿಗಳು ಲಕ್ಷ್ಮ್ಯಾದಿಗಳಲ್ಲಿಯೇ ಮುಖ್ಯವಾಗಿರುವುದರಿಂದ ಅಗ್ನ್ಯಾದಿ ನಾಮಗಳು ಮುಖ್ಯವಾಗಿ ಲಕ್ಷ್ಮ್ಯಾದಿಗಳ ಹೆಸರು. ಆದುದರಿಂದ ಅಗ್ನ್ಯಾದಿ ದೇವತೆಗಳಲ್ಲಿ ಸಂಕೇತವು. (ಈ ಪದದಿಂದ ಈತನನ್ನು ತಿಳಿಯಬೇಕ , ಎಂದು ವ್ಯವಹಾರಮಾತ್ರವು-) (**ತ್ರೀಣಿ** ರೂಪಾಣೀತ್ಯೇವ **ಸತ್ಯಂ** ಎಂಬುವ ವಾಕ್ಯದ ತಾತ್ಪರ್ಯ ಹೇಳುತ್ತಾರೆ–) ಲಕ್ಷ್ಮೀ ಪ್ರಾಣ ರುದ್ರ ಈ ಮೂವರೇ ಅಗ್ನಿ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಹೇಳಲ್ಪಡುತ್ತಾರೆ–(೨)(ವಾಚಾರಂಭಣ ವಾಕ್ಯದ ಅರ್ಥವನ್ನೇ ದೃಷ್ಟಾಂತಕೊಟ್ಟು ವಿವರಿಸುತ್ತಾರೆ—) ಹೇಗೆ ಲಕ್ಷ್ಮೀ ಮುಖ್ಯಪ್ರಾಣ ಮೊದಲಾದವರದ್ದೇ ಆದ ಲಕ್ಷ್ಮೀ ಮೊದಲಾದ ಹೆಸರು ಲೋಕದಲ್ಲಿ ಮಾತಿನಿಂದ ಉಂಟೆಂದು ಆರಂಭವಾಗಿರುವ ಪ್ರಯುಕ್ತ ಈ ಶಬ್ದದಿಂದ ಈತನನ್ನು ತಿಳಿದುಕೊಳ್ಳಬೇಕೆಂದು ವ್ಯವಹಾರದಿಂದ ಬೇರೆ ಸ್ತ್ರೀಪುರುಷಾದಿಗಳಲ್ಲಿ ಇದೆ. ಆದಕಾರಣ ಆ ಹೆಸರು ಸಂಕೇತದಿಂದ ಬೇರೆಯವರಲ್ಲಿದ್ದಕಾರಣ ಅಲ್ಲಿ ಅಮುಖ್ಯವೇ. ಮುಖ್ಯವಾಗಿ ಇಲ್ಲವೋ, ಹಾಗೆಯೇ ಅಗ್ನ್ಯಾದಿಗಳ ನಾಮಧೇಯವೂ ಅಗ್ನ್ಯಾದಿಗಳಲ್ಲಿ ಅಮುಖ್ಯವು. (೩) (ಅಗ್ನ್ಯಾದಿ ನಾಮಗಳೂ ಲಕ್ಷ್ಮ್ಯಾದಿಗಳಲ್ಲಿ ಮುಖ್ಯಗಳಾದರೆ--**ತ್ರೀಣಿರೂಪಾಣೀತ್ಯೇವ ಸತ್ಯಂ** ಎಂದು **ತ್ರೀಣಿ** ರೂಪಾಣಿ ಎಂಬ ನಾಮಧೇಯಕ್ಕೇನೇ ಮುಖ್ಯತ್ವವನ್ನು ಹೇಳಿದ್ದು ವಿರುದ್ಧವು ಎಂದರೆ—) **ತ್ರೀಣಿರೂಪಾಣಿ** ಎಂದು ವೇದದಲ್ಲಿ ಹೇಳಿದ ನಾಮವು ಪರಮಮುಖ್ಯವು. (ಅಂದರೆ—ಶ್ರೀಪರಮಾತ್ಮನಲ್ಲಿಯೇ ಹೇಗೆ ನಾರಾಯಣ ಮೊದಲಾದ ನಾಮಧೇಯವಿರುವುದೋ, ಹಾಗೆಯೇ ಬೇರೆ ದೇವತೆಗಳಲ್ಲಿ ಸಂಕೇತ

ವಿಲ್ಲದೆ ಆ ಲಕ್ಷ್ಮೀ ಪ್ರಾಣ ರುದ್ರರಿಗೇನೇ ತ್ರೀಣಿರೂಪಾಣಿ ಎಂಬ ಹೆಸರು. ಬೇರೆ ದೇವತೆಗಳಿಗೆ ಆ ಹೆಸರು ಇಲ್ಲ.) ಆದಕಾರಣ ಅಗ್ನ್ಯಾದಿನಾಮಗಳೂ ಲಕ್ಷ್ಮ್ಯಾದಿಗಳಲ್ಲಿಯೇ ಮುಖ್ಯಗಳಾದರೂ ಆ ನಾಮಗಳು ಅಗ್ನ್ಯಾದಿ ದೇವತೆಗಳಲ್ಲಿ ಅಮುಖ್ಯವಾಗಿ ಇರುತ್ತವೆ. ತ್ರೀಣಿ ರೂಪಾಣಿ ಎಂಬುವುದು ಅಮುಖ್ಯವಾಗಿಯೂ ಬೇರೆಯವರಲ್ಲಿ ಇಲ್ಲ. ಅದುಕಾರಣ **ತ್ರೀಣಿ ರೂಪಾಣಿ** ಎಂಬುವುದೇ **ಸತ್ಯಂ** ಎನ್ನಿಸುತ್ತದೆ. ಸತ್ಯವೆಂದರೆ ಮುಖ್ಯವೆನಿಸುತ್ತದೆ. (೪) (ಇಂದ್ರಾದಿಗಳು ಅಗ್ನ್ಯಾದಿಗಳು ಹೀಗೆ ಎಲ್ಲಾ ದೇವತೆಗಳ ನಾಮರೂಪಗಳು ಲಕ್ಷ್ಮ್ಯಾದಿಗಳಲ್ಲಿಯೇ ಮುಖ್ಯಗಳೆಂದು ಹೇಳಿದೆ. ಹಾಗೆ ಹೇಳಿದರೆ ಆ ಮೂವರಿಗೆ ಸಾಮ್ಯವು ಬರಬೇಕಾಗುವುದು ಎಂದರೆ—) ಇಂದ್ರಾದಿ ದೇವತೆಗಳು ಲಕ್ಷ್ಮ್ಯಾದಿಗಳ ಅಧೀನದಲ್ಲಿರುವವರು. ಲಕ್ಷ್ಮೀ, ಪ್ರಾಣ, ರುದ್ರರು ಸರ್ವೋತ್ಕೃಷ್ಟವಾದ ಜ್ಞಾನಾದಿ ಬಲವುಳ್ಳವರು. ಅದುಕಾರಣ ಇಂದ್ರಾದಿದೇವತೆಗಳ ನಾಮರೂಪಗಳು ಲಕ್ಷ್ಮ್ಯಾದಿಗಳಲ್ಲಿಯೇ ಹೇಗೆ ಮುಖ್ಯವಾಗಿ ಇರುವವುಗಳೋ, ಹಾಗೆಯೇ ರುದ್ರನ ನಾಮಗಳೂ, ರೂಪಗಳೂ ವಾಯುವಿಗೇನೇ ಮುಖ್ಯವಾಗಿ ಇರುತ್ತವೆ ಹಾಗೆಯೇ ಮುಖ್ಯಪ್ರಾಣನ ನಾಮಗಳೂ ರೂಪಗಳೂ ಲಕ್ಷ್ಮೀದೇವಿಗೆ ಮುಖ್ಯಗಳು. ಹಾಗೆಯೇ ಲಕ್ಷ್ಮೀದೇವಿಯ ನಾಮಗಳೂ, ರೂಪಗಳೂ ಶ್ರೀಹರಿಗೇನೇ ಮುಖ್ಯಗಳು. **ನಾಮಾನಿ ಸರ್ವಾಣಿ ಯಮಾವಿಶಂತಿ** ಇತ್ಯಾದಿ ವೇದಗಳಿಂದ ಎಲ್ಲಾ ನಾಮರೂಪಗಳೂ ಶ್ರೀಹರಿಯಲ್ಲಿಯೇ ಮುಖ್ಯಗಳಾಗಿರುವುದರಿಂದ ಶ್ರೀಹರಿಯೇ ಸಮಸ್ತರೂಪಗಳುಳ್ಳವನು. ಎಲ್ಲಾ ಹೆಸರುಗಳುಳ್ಳವನು, ಅವನೊಬ್ಬನೇ ಸರ್ವರಿಗೂ ನಿಯಾಮಕನು. ಸರ್ವಶಕ್ತನು ॥ ೨ ॥

ಹೀ—ಶ್ರೀಹರಿಗೇನೇ ಸಮಸ್ತರೂಪಗಳು, ಸಮಸ್ತನಾಮಗಳು ಎಂಬುವುದು ಅಯುಕ್ತವು. ಬೇರೆಯವರಿಗೂ ರೂಪಾದಿಗಳಿವೆ, ಎಂದರೆ—

**ಭಾ. ॥ (೧) ಅನ್ಯೇಷಾಂ ಯಚ್ಚ ರೂಪಾದ್ಯಂ ತತ್ತಸ್ಯಾಪ್ರತಿಬಿಂಬಿತಂ ॥ (೨) ಏಕ ಏವಾದ್ವಿತೀಯೋಽಸಾವತಃ ಸರ್ವೋತ್ತಮತ್ವತಃ । ಮುಖ್ಯತ್ವಾದೇವ ಸನ್ನಾಮಾ ಸತ್ತ್ವತಿ- ಜ್ಞಾನರೂಪತಃ । ಸತ್ಯಮಿತ್ಯುಚ್ಯತೇ ವಿಷ್ಣುಸ್ಸತ್ವಂ ನಾಸಿ ಕಥಂಚನ ॥ (೩) ಅತೋಽನೂಚಾನಮಾನೀ ತ್ವಂ ಸ್ತಬ್ಧೋಽಸಿ ಕುತ ಏವ ತು । ತ್ವತ್ತೋಽಧಿಕಾ ಅಪೀಂದ್ರಾದ್ಯಾಸ್ತದುಚ್ಚಾಶ್ಚ ಶ್ರಿಯಾದಯಃ । ಸರ್ವೋಚ್ಚೋ ಭಗವಾನ್ವಿಷ್ಣುರ್ನ ಸ್ತಂಭೋಽಸ್ಯಾಪಿ ಹಿ ಕ್ವಚಿತ್ ॥ (೪) ಅತೋ ನ ವಿದ್ವನ್ಮಾನೀ ಸ್ಯಾ ಮಹಾನಸ್ಮೀತಿ ವಾ ಮನಃ । ನ ತೇ ಸ್ಯಾ- ನ್ನೈವ ಚ ಸ್ತಂಭೋ ಜ್ಞಾತ್ವಾ ವಿಷ್ಣೋಃ ಬಲಂ ಪರಂ ॥ ನ ಹಿ ವಿಷ್ಣೋರ್ಬಲಂ ಜ್ಞಾತ್ವಾ ಸ್ತಂಭಹೇತುಃ ಕಥಂಚನ ॥ ಇತ್ಯಾದಿ ಸಾಮಸಂಹಿತಾಯಾಂ ॥ ೧, ೨, ೩, ೪, ೫, ೬, ೭ ॥ ಇತಿ ಚತುರ್ಥಃ ಖಂಡಃ ॥ ಅ—೪ ॥ ॥ ೩ ॥**

ಅ ॥ (೧) ಬೇರೆಯವರ ರೂಪಾದಿಗಳೆಲ್ಲವೂ ಶ್ರೀಹರಿಯ ರೂಪಾದಿಗಳಿಂದಲೇ ಹುಟ್ಟಿದ್ದು. (೨) (ತಾನು ಸಾಕ್ಷಾತ್ ದೇವನೋ ಕೇಶವನ ಅಂಶನೋ, ಎಂದು ತಿಳಿದಿರತಕ್ಕ ದುರಹಂಕಾರವುಳ್ಳ ಶ್ವೇತಕೇತುವಿನ ಅಹಂಕಾರ ಕಳೆಯುವುದಕ್ಕಾಗಿ **ಸದೇವ ಸೋಮ್ಯ** ಇತ್ಯಾದಿ ಉಪದೇಶವು. ಇದರಿಂದ ಅಹಂಕಾರನಿವೃತ್ತಿಯು ಹೇಗೆ ಉಂಟಾಯಿತು, ಎಂದರೆ—) ಶ್ರೀಹರಿಯೊಬ್ಬನೇ ಸರ್ವೋತ್ತಮನಾದುದರಿಂದ ಅದ್ವಿತೀಯನೆನಿಸುತ್ತಾನೆ. ಮುಖ್ಯನಾದುದರಿಂದಲೇ ಸತ್ ಎನಿಸುತ್ತಾನೆ. ದೋಷಲೇಶರಹಿತನೂ ಸರ್ವತ್ರವ್ಯಾಪ್ತನೂ ಜ್ಞಾನಸ್ವರೂಪನೂ ಆದುದರಿಂದ ಸತ್ಯಂ ಎನಿಸುತ್ತಾನೆ. ಅಂತಹ ವಿಷ್ಣುವು ನೀನು ಸರ್ವಥಾ ಆಗಲಾರೆ. (೩) ಅದುಕಾರಣ ನೀನು ಷಡಂಗವೇದಗಳನ್ನು ಕಲಿತವನೆಂದು ಅಭಿಮಾನವುಳ್ಳವನೂ ಅವಿನೀತನೂ ಏಕೆ ಆಗಿರುತ್ತಿ? ನಿನಗಿಂತ ಇಂದ್ರಾದಿ ದೇವತೆಗಳು ಉತ್ತಮರಾಗಿರುತ್ತಾರೆ. ಅವರ

ಗಿಂತಲೂ ಲಕ್ಷ್ಮ್ಯಾದಿಗಳು ಉತ್ತಮರು ವಿಷ್ಣುವು ಸರ್ವರಿಗಿಂತಲೂ ಉತ್ತಮೋತ್ತಮನು. ವಿಷ್ಣುವಿಗೆ ಸದೃಶನು ಎಲ್ಲಿಯೂ ಇಲ್ಲ. (೪) ಅದುಕಾರಣ ನಾನು ವಿದ್ವಾಂಸನೆಂಬ ಅಭಿಮಾನವನ್ನು ಬಿಟ್ಟುಬಿಡು. ಸರ್ವರಿಗಿಂತ ಶ್ರೇಷ್ಠನಾಗಿರುತ್ತೇನೆಂಬ ಮನಸ್ಸು ನಿನಗೆ ಉಂಟಾಗಬಾರದು. ವಿಷ್ಣುವಿನ ಸರ್ವೋಚ್ಛವಾದ ಐಶ್ವರ್ಯಾದಿ ಬಲವನ್ನು ತಿಳಿದು ವಿನಯವನ್ನು ಹೊಂದು. ಅವಿನೀತನಾಗಬೇಡ. ವಿಷ್ಣುವಿನ ಬಲವನ್ನು ತಿಳಿದು ಹೇಗೂ ಅವಿನಯ ಉಂಟಾಗಬಾರದು, ಎಂದು ನಾಮಸಂಹಿತೆಯಲ್ಲಿ ಹೇಳಿದೆ. || ೮—೪ || || ೩ ||

**ನಾಲ್ಕನೇ ಖಂಡವು ಮುಗಿಯಿತು.**

## ೫ನೇ ಖಂಡವು

**ಪೀ— ತನ್ಮೇ ವಿಜಾನೀಹಿ** ಎಂದು **ಪ್ರತಿಜ್ಞೆ**ಮಾಡಿದುದನ್ನು ತೋರಿಸುತ್ತಾರೆ—

**ಉ. || ಅನ್ನಮಶಿತಂ ತ್ರೇಧಾ ವಿಧೀಯತೇ ತಸ್ಯ ಯಃ ಸ್ಥವಿಷ್ಠೋ ಧಾತುಸ್ತತ್ಪುರೀಷಂ ಭವತಿ ಯೋ ಮಧ್ಯಮಸ್ತನ್ಮಾಂಸಂ ಯೋಽಣಿಷ್ಠಸ್ತನ್ಮನಃ || ೧ ||**

**ಅ ||** ತಿನ್ನಲಿಕ್ಕೆ ಯೋಗ್ಯವಾದ ಪಾರ್ಥಿವ ವಸ್ತುವು ಪ್ರಾಣಿಗಳಿಂದ ತಿನ್ನಲ್ಪಟ್ಟದ್ದಾಗಿ ಮೂರು ಪಾಲಾಗುತ್ತದೆ. ಅದರಲ್ಲಿ ತಿಂದ ವಸ್ತುವಿನ ಅತಿ ಸ್ಥೂಲವಾದ ಭಾಗವು ಅಮೇಧ್ಯ (ಮಲ) ವಾಗುತ್ತದೆ. ತಿಂದ ವಸ್ತುವಿನ ಮಧ್ಯಮ ಭಾಗ (ಸಾಮಾನ್ಯಸಾರ) ವು ಮಾಂಸವಾಗುತ್ತದೆ. ಅತಿಸೂಕ್ಷ್ಮ ಸಾರಭಾಗವು ಹಿತ ಎಂಬ ನಾಡಿಗಳಲ್ಲಿ ಪ್ರವೇಶಿಸಿ ವಾಗಾದಿಗಳು ಇರುವಂತೆ ಮಾಡಿ ಮನಸ್ಸು ಆಗುತ್ತದೆ.

**ವಿ ||** (1) ಅನ್ನಪದದಿಂದ ಪೃಥಿವಿಯು ಪ್ರಸ್ತುತವಾಗಿದ್ದರೂ ಅದು ತಿನ್ನಲಿಕ್ಕೆ ಅಯೋಗ್ಯವಾಗಿದ್ದುದರಿಂದ ಪೃಥಿವಿಯಲ್ಲಿ ಹುಟ್ಟಿದ ತಿನ್ನಲು ಯೋಗ್ಯವಾದ ವಸ್ತುವನ್ನು ಇಟ್ಟುಕೊಳ್ಳಬೇಕು. (2) ಇಲ್ಲಿ ಅನ್ನ ಅಪ್ ಮೊದಲಾದ ಶಬ್ದಗಳಿಂದ ಪೃಥಿವೀ ಅಪ್ ತೇಜಸ್ಸುಗಳಿಗೆ ಅಭಿಮಾನಿಗಳಾದ ದೇವತೆಗಳ ಅಂಶಗಳಿಂದೊಡಗೂಡಿದ ತಿನ್ನುವ ಜಡವಸ್ತುಗಳನ್ನು ಇಟ್ಟುಕೊಳ್ಳಬೇಕು. (3) ಮತ್ತು ಪ್ರಸಿದ್ಧಾನ್ನದಲ್ಲಿ ಅಭಿಮಾನಿಗಳಾಗಿರತಕ್ಕ ಶಿವಾದಿಗಳನ್ನು ಇಟ್ಟುಕೊಳ್ಳಬೇಕು. ಅಂತಹ ಅಭಿಮಾನ್ಯಂಶಗಳನ್ನು ತಿನ್ನುವುದೆಂದರೆ–ಅವರನ್ನು ಉಪಜೀವಿಸಿಕೊಂಡಿರುವುದು. ಅವರನ್ನಾಶ್ರಯಿಸುತ್ತಿರುವುದು. (4) ಚೇತನಾಚೇತನಗಳಿಂದ ಕೂಡಿದ ಅನ್ನಾದಿಗಳನ್ನು ತಿಂದರೆ ತಮ್ಮತಮ್ಮ ಅಂಶಗಳಿಂದ ಮೂರು ಪಾಲಾಗಿ ಮಾಂಸಾದಿಗಳು ಆಗುತ್ತವೆ. ಅಂದರೆ—ಚೇತನಾಂಶಕ್ಕೆ ಮಾಂಸಾದಿ ಭಾವವೆಂದರೆ ಮಾಂಸಾದಿಗಳಲ್ಲಿ ವಿಶೇಷ ಸನ್ನಿಧಾನವಿರುವುದು. (5) ಪ್ರನಿತಿತ್ಯವೂ ಉಂಡ ಅನ್ನಾದಿಗಳ ಮಧ್ಯಮ ಅತ್ಯಣು ಭಾಗಗಳಿಂದ ಮಾಂಸ ಮನಸ್ಸು ಮೊದಲಾದವುಗಳಿಗೆ ಅಭಿವೃದ್ಧಿಯು. (6) ತಾಯಿಯು ಉಂಡ ಅನ್ನಾದಿಗಳೇ ಗರ್ಭದಲ್ಲಿ ಕೆಲವು ವಸ್ತುಗಳಾಗಿ ಪರಿಣಾಮಗಳಾಗುತ್ತವೆ. ಕೆಲವು ವಸ್ತುಗಳಿಗೆ ಪುಷ್ಟಿಯನ್ನು ಮಾಡುತ್ತವೆ. || ೧ ||

**ಉ. || ಆಪಃ ಪೀತಾಸ್ತ್ರೇಧಾ ವಿಧೀಯಂತೇ ತಾಸಾಂ ಯಃ ಸ್ಥವಿಷ್ಠೋ ಧಾತುಸ್ತನ್ಮೂತ್ರಂ ಭವತಿ ಯೋ ಮಧ್ಯಮಸ್ತಲ್ಲೋಹಿತಂ ಯೋಽಣಿಷ್ಠಃ ಸ ಪ್ರಾಣಃ || ೨ ||**

**ಅ ||** ಜಲಗಳಿಗೆ ಅಭಿಮಾನಿಗಳಾದ ದೇವತೆಗಳ ಅಂಶಗಳಿಂದೊಡಗೂಡಿದ ಜಲಗಳನ್ನು ಕುಡಿದರೆ

ಅವು ಚೇತನಾಂಶ ಜಡಾಂಶಗಳಿಂದ ಮೂರು ಪಾಲಾಗುತ್ತವೆ. ಅವುಗಳಲ್ಲಿ ಅತಿ ಸ್ಥೂಲಭಾಗವು ಮೂತ್ರವಾಗಿಯೂ, ಮಧ್ಯಮ ಭಾಗವು ರಕ್ತವಾಗಿಯೂ ಆಗುತ್ತದೆ ಅತ್ಯಣು ಸಾರಭಾಗವು ಪ್ರಾಣವಾಗುತ್ತದೆ.

ವಿ || (1) ಅಮೇಧ್ಯ ಮೂತ್ರಗಳಿಗೆ ಅಪಭ್ರಷ್ಟ ದೇವತೆಗಳ ಅಂಶಗಳು ಅಭಿಮಾನಿಗಳೆಂದು ಕೆಲವರು ಹೇಳುತ್ತಾರೆ ಇನ್ನಿತರರು, ಅನ್ನಾಭಿಮಾನಿಗಳಾದ ದೇವತೆಗಳ ಅಂಶಗಳೇ ಅಭಿಮಾನಿಗಳಾಗಿ ಇರುತ್ತಾರೆ. ಆವರು ನಿರ್ಲಿಪ್ತರಾಗಿರುವುದರಿಂದ ಅವರಿಗೆ ದೋಷವಿಲ್ಲವೆನ್ನುತ್ತಾರೆ. || ೨ ||

**ಉ. || ತೇಜೋಽಶಿತಂ ತ್ರೇಧಾ ವಿಧೀಯತೇ ತಸ್ಯ ಯತ್ ಸ್ಥವಿಷ್ಠೋ ಧಾತುಸ್ತದಸ್ಥಿ ಭವತಿ ಯೋ ಮಧ್ಯಮಃ ಸ ಮಜ್ಜಾ ಯೋಽಣಿಷ್ಠಃ ಸಾ ವಾಕ್ || ೩ ||**

ಅ || ತುಪ್ಪ ಮೊದಲಾದ ತೈಜಸ ಸಾರವಸ್ತುಗಳನ್ನು ತಿಂದರೆ ಅದರಲ್ಲಿ ಅತಿ ಸ್ಥೂಲ ಭಾಗವು ಎಲುಬು ಆಗುತ್ತದೆ. ಮಧ್ಯಮ ಭಾಗವು ಮಜ್ಜಾ (ಎಲುಬುಗಳೊಳಗಣ ಸ್ನೇಹ) ಆಗುತ್ತದೆ. ಅತ್ಯಣು ಭಾಗವು ವಾಗಿಂದ್ರಿಯವಾಗುತ್ತದೆ. (ಘೃತಾದಿಗಳ ಭಕ್ಷಣದಿಂದ ಮಾತಾಡುವ ಶಕ್ತಿಯು ಹೆಚ್ಚುತ್ತದೆಂಬುವುದು ಲೋಕಪ್ರಸಿದ್ಧ.) || ೩ ||

ಪೀ - ಈ ದೇವತೆಗಳಿಗೆ ಪುರೀಷ (ಅಮೇಧ್ಯ) ಮಾಂಸಾದಿಗಳಲ್ಲಿ ಎಲ್ಲಾ ಒಂದೇ ರೀತಿಯಾಗಿ ಅಭಿಮಾನವಲ್ಲ. ಪರಂತು ಮನಃಪ್ರಾಣಾದಿಗಳಲ್ಲಿ ಮುಖ್ಯವಾಗಿ ಅಭಿಮಾನವೆನ್ನುತ್ತಾರೆ—

**ಉ. || ಅನ್ನಮಯꣳ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ || ಇತಿ ಪಂಚಮಃ ಖಂಡಃ || ೮-೫ || || ೪ ||**

ಅ || ಎಲೋ ಮಗನೇ, ಮನಸ್ಸು ಪ್ರಧಾನವಾಗಿ ಅನ್ನ ಎನಿಸಿಕೊಂಡ ರುದ್ರಾದಿಗಳೇ ಅಭಿಮಾನಿಗಳಾಗಿ ಉಳ್ಳದ್ದು. ಪ್ರಮಾಣಪ್ರಸಿದ್ಧವು. ಪ್ರಾಣವು ಪ್ರಧಾನವಾಗಿ ಅಪ್ ಎಂದು ಹೆಸರುಳ್ಳ ವಾಯ್ವಾದಿಗಳೇ ಅಭಿಮಾನಿಗಳಾಗಿ ಉಳ್ಳದ್ದು. ವಾಗಿಂದ್ರಿಯವು ಪ್ರಧಾನವಾಗಿ ತೇಜಃ ಎನಿಸಿದ ಲಕ್ಷ್ಮ್ಯಾದಿಗಳೇ ಅಭಿಮಾನಿಗಳಾಗಿ ಉಳ್ಳದ್ದು, ಹೀಗೆ ತಂದೆಯಿಂದ ಉಪದೇಶಿಸಿಕೊಂಡ ಶ್ವೇತಕೇತುವು ತಂದೆಯೊಡನೆ **ಅನ್ನಮಯಂ ಹಿ** ಇತ್ಯಾದ್ಯುಕ್ತವಾದ ತತ್ತ್ವವನ್ನೇ ಸ್ಪಷ್ಟವಾಗಿ ನನಗೆ ತಾವು ಮರಳಿ ದೃಷ್ಟಾಂತವನ್ನು ಹೇಳಿ ವಿಶೇಷವಾಗಿ ವಿವರಿಸಿ ತಿಳಿಸಬೇಕು, ಎಂದು ವಿಜ್ಞಾಪಿಸಿಕೊಂಡನು. ಆಗ ತಂದೆಯವರು ಹಾಗೆಯೇ ಆಗಲಿ ಎಂದರು. || ೮—೫ || || ೫ ||

ಪೀ—ಈ ಪ್ರಕರಣವು ದೇವತೆಗಳನ್ನು ತಿಳಿಸುತ್ತದೆ ಎಂದು ಅರ್ಥಹೇಳಿದ್ದು ಯುಕ್ತವಲ್ಲ. ಏಕೆಂದರೆ—**ಯೋ ಮಧ್ಯಮಸ್ತನ್ಮಾಂಸಂ** ಎಂದು ಮಾಂಸಾದಿ ಶಬ್ದಗಳು ಶ್ರುತಗಳಾಗಿವೆ. ಅವುಗಳು ಪ್ರಸಿದ್ಧ ಮಾಂಸಾದಿಗಳನ್ನೇ ಹೇಳತಕ್ಕವುಗಳು ಎಂದರೆ—

**ಭಾ. || (೧) || ದೇವತಾ ಏವ ಮಾಂಸಾದಿಶಬ್ದವಾಚ್ಯಾಃ | ತತ್ರ ಪ್ರವೇಶಾತ್ || (೨) ಅಶ್ಯಮಾನಾಶ್ಚೋಪಜೀವ್ಯತ್ವಾತ್ | (೩) ನ ಚ ದುಃಖಂ ತಾಸಾಂ | ಐಶ್ವರ್ಯಾತ್ || (೪) ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದಿತಿ ಪ್ರಸ್ತುತತ್ವಾತ್ | (೫) ಜೀವ**

**ಇತಿ ಭಗವತೋಽನಿರುದ್ಧಸ್ಯಾಖ್ಯಾ । ಇತಿ ಚ ಶ್ರುತಿಃ ॥ (೬) ಪ್ರಾಣಸ್ಯ ಪ್ರಾಣಶ್ಚಕ್ಷುಷಶ್ಚ-ಕ್ಷುರ್ಜೀವಸ್ಯ ಜೀವಃ ಪ್ರಧಾನಸ್ಯ ಪ್ರಧಾನಂ ಭಗವಾಂಶ್ಚತುರ್ಮೂರ್ತಿಃ॥ ಇತಿ ಚ ॥ (೭) ಪ್ರಾಣಾಧಾರೋ ಹರಿರ್ನಾನ್ಯೋ ಜೀವಶಬ್ದಸ್ತತೋ ಹರೌ । ಸಂಸಾರಿಕೋ ಜೀವತಾ ತು ಜನನಾದ್ಯಾನತಸ್ತಥಾ ॥ ಇತಿ ಚ ॥** ॥ ೧ ॥

**ಅ** ॥ (೧) ತೇಜಃ-ಅಪ್-ಅನ್ನರೆನಿಸಿದ ಲಕ್ಷ್ಮೀ ಪ್ರಾಣ ರುದ್ರರೇ ಮಾಂಸಾದಿ ಶಬ್ದಗಳಿಂದ ಮುಖ್ಯವಾಗಿ ಹೇಳಲ್ಪಡುತ್ತಾರೆ (ಅದು ಹೇಗೆಂದರೆ=) ಮಾಂಸಾದಿಗಳಲ್ಲಿ ದೇವತೆಗಳು ನಿಯಾಮಕರಾಗಿ ಪ್ರವೇಶಿಸಿಕೊಂಡಿರುತ್ತಾರೆ. (ನಿಯಮ್ಯಗಳನ್ನು ಹೇಳತಕ್ಕ ಶಬ್ದಗಳು ನಿಯಾಮಕರಲ್ಲಿ ಮುಖ್ಯವಾಗಿ ಇರುತ್ತವೆ.) (೨) (ಆದರೂ ಅನ್ನಾದಿ ಶಬ್ದಗಳಿಂದ ಹೇಳಲ್ಪಡುವವರು ದೇವತೆಗಳಲ್ಲ. ಏಕೆಂದರೆ—ಅನ್ನವು ತಿನ್ನಲ್ಪಡತಕ್ಕದು, ಜಲವು ಕುಡಿಯಲ್ಪಡತಕ್ಕದು, ಅದು ದೇವತೆಯಾಗಲಿಕ್ಕಿಲ್ಲವಷ್ಟೆ! ಎಂದರೆ—) ದೇವತೆಗಳೇ ಉಪಜೀವ್ಯರಾದುದರಿಂದ (ನಿಯಾಮಕರಾಗಿರುವುದರಿಂದ) ಅಶ್ಯಮಾನರೆನಿಸುತ್ತಾರೆ. (ಹೀಗೆ ಅರ್ಥ ಮಾಡದಿದ್ದರೆ—**ತೇಜೋಽಶಿತಂ** ಎಂದು ಪ್ರಸಿದ್ಧ ತೇಜಸ್ಸೂ ಅಶ್ಯಮಾನ (ತಿನ್ನಲ್ಪಡತಕ್ಕದು) ಎಂದು ಅರ್ಥಹೇಳಿದ್ದು ಅಯುಕ್ತವಾಗಬೇಕಾಗುವುದು ಆದಕಾರಣ ಅಲ್ಲಿ ತೇಜಃಶಬ್ದದಿಂದ ದೇವತೆಯನ್ನು ಇಟ್ಟು ಕೊಳ್ಳಬೇಕಾಗಿರುವುದರಿಂದ ಅದರಂತೆಯೇ ಇಲ್ಲಿಯೂ ದೇವತೆಗಳನ್ನೇ ಇಟ್ಟುಕೊಳ್ಳಬೇಕು. (೩) (ತಿನ್ನಲ್ಪಡತಕ್ಕ ವಸ್ತುಗಳೊಳಗಣ ದೇವತೆಗಳನ್ನು ಭಕ್ಷಿಸುವಾಗ ದೇವತೆಗಳಿಗೆ ದುಃಖವು ಬರಬೇಕಾಗುವುದು. ಮನೆಯು ಸುಡುವಾಗ ಅದರೊಳಗಿದ್ದವನೂ ಸುಟ್ಟುಹೋಗುವನಷ್ಟೇ, ಎಂದರೆ-) ಅನ್ನವನ್ನು ತಿನ್ನುವಾಗ ಅನ್ನದೊಳಗಣ ದೇವತೆಗಳಿಗೆ ದುಃಖವು ಬರುವುದಿಲ್ಲ. (ಹೇಗೆಂದರೆ—ಸುಟ್ಟುಹೋಗುವ ಮನೆಯೊಳಗಿದ್ದವನಿಗೂ ಅಗ್ನಿಸ್ತಂಭನ ಮಾಡತಕ್ಕ ಶಕ್ತಿಯಿದ್ದರೆ ಹೇಗೆ ಆತನು ಸುಟ್ಟುಹೋಗುವುದಿಲ್ಲವೋ, ಹಾಗೆಯೇ ಆ ದೇವತೆಗಳಿಗೆ) ಅಘಟಿತಘಟಕ ಸಾಮರ್ಥ್ಯವಿದ್ದುದರಿಂದ ದುಃಖವಿರುವುದಿಲ್ಲ (೪) (ಅನ್ನಾದಿಗಳು ದೇವತೆಗಳೆಂದು ಏಕೆ ಇಟ್ಟುಕೊಳ್ಳಬೇಕು, ಪ್ರಸಿದ್ಧ ಅನ್ನಾದಿಗಳನ್ನೇ ಏಕೆ ಇಟ್ಟುಕೊಳ್ಳಬಾರದೆಂದರೆ—೪ನೇ ಖಂಡದ ೭ನೇ ಮಂತ್ರದಲ್ಲಿ) **ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ ತ್ರಿವೃತ್** ಎಂದು ದೇವತೆಗಳೇ ಪ್ರಸ್ತುತರಾಗಿರುತ್ತಾರೆ (ಪ್ರಸಿದ್ಧವಾದ ಅರ್ಥ ಇಟ್ಟುಕೊಂಡರೆ ಅದು ಅಯುಕ್ತವಾಗಬೇಕಾಗುವುದು.) (೫) (ಮತ್ತು ಈ ಪ್ರಕರಣದಲ್ಲಿ ಅನ್ನ ಮೊದಲಾದ ಶಬ್ದಗಳಿಂದ ಪ್ರಸಿದ್ಧವಾದ ಅನ್ನಾದಿಗಳನ್ನು ಮಾತ್ರ ಒಡಂಬಟ್ಟರೆ **ಇಮಾಃ ತಿಸ್ರೋ ದೇವತಾಃ ಅನೇನ ಜೀವೇನ** ಎಂಬ ವಾಕ್ಯವೂ ಅಯುಕ್ತವಾಗಬೇಕಾಗುವುದೆಂಬ ಅಭಿಪ್ರಾಯದಿಂದ ಜೀವಶಬ್ದವು ಭಗವಂತನನ್ನು ಹೇಳುತ್ತದೆಂಬುವಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ—) ಜೀವ ಎಂಬ ಶಬ್ದವು ಷಡ್ಗುಣಪರಿಪೂರ್ಣನಾದ ಅನಿರುದ್ಧರೂಪಿ ಶ್ರೀಹರಿಗೆ ಹೆಸರು ಎಂದು ವೇದವೂ ಇದೆ. (೬) (ಅನಿರುದ್ಧನಿಗೆ ಜೀವನಿಂದ ಅಭೇದವಿದ್ದಪ್ರಯುಕ್ತ ಜೀವ ಎಂಬ ಹೆಸರು ಅಲ್ಲ. ಪರಂತು ಜೀವರಿಗೆ ಜೀವತ್ವ (ಪ್ರಾಣಧಾರಣ)ವನ್ನು ಕೊಡುವುದರಿಂದ ಜೀವ ಎಂಬ ಹೆಸರು ಎಂಬ ಅಭಿಪ್ರಾಯದಿಂದ ವೇದ ಹೇಳುತ್ತಾರೆ-) ವಾಸುದೇವಾದಿನಾಲ್ಕು ರೂಪಗಳುಳ್ಳ ಶ್ರೀಹರಿಯು ಮುಖ್ಯಪ್ರಾಣನಿಗೆ ಚೆನ್ನಾಗಿ ಚೇಷ್ಟಕತ್ವವನ್ನೂ ಚಕ್ಷುಸ್ಸಿಗೆ ನೋಡುವ ಶಕ್ತಿಯನ್ನೂ, ಜೀವನಿಗೆ ಜೀವತ್ವ (ಪ್ರಾಣಧಾರಣೆ)ವನ್ನೂ ಪ್ರಧಾನಕ್ಕೆ ಪ್ರಾಧಾನ್ಯ ಶಕ್ತಿಯನ್ನೂ ಕೊಡುವವನು ಎಂದು ವೇದವು. (೭) (ಜೀವ ಎಂಬ ಶಬ್ದದ ಪ್ರವೃತ್ತಿಗೆ ಕಾರಣವಾದ ಪ್ರಾಣಧಾರಕತ್ವವು ಶ್ರೀಹರಿಗೇನೇ ಕೂಡುವುದರಿಂದ ಶ್ರೀಹರಿಯೇ ಜೀವನೆನಿಸುತ್ತಾನೆ, ಎಂಬುವಲ್ಲಿ ಸ್ಮೃತಿಪ್ರಮಾಣ ಹೇಳುತ್ತಾರೆ—) ಪ್ರಾಣನಿಗೆ ಆಶ್ರಯನಾದವನು ಶ್ರೀಹರಿಯೇ. (ಇಚ್ಛೆಯು ಇಲ್ಲದಿದ್ದರೂ ಮರಣವು ಕಾಣುತ್ತಿರುವುದರಿಂದ) ಮತ್ತೊಬ್ಬನಲ್ಲ. ಅದುಕಾರಣ ಶ್ರೀಹರಿಯಲ್ಲಿಯೇ ಜೀವ ಎಂಬ ಶಬ್ದವು. (ಹಾಗಾದರೆ—ಸಂಸಾರಿಗಳಲ್ಲಿ ಜೀವ ಎಂಬ ಶಬ್ದವಿರುವುದು ಹೇಗೆ ಎಂದರೆ—) ಹುಟ್ಟುವುದರಿಂದ **ಜೀ**, ಲೋಕಾಂತರಕ್ಕೆ ಹೋಗುವುದರಿಂದ **ವಃ**, ಹೀಗೆ ಸಂಸಾರಿಯು **ಜೀವ**ನೆನಿಸುತ್ತಾನೆ. ॥ ೧ ॥

**ಪ್ರ**—ಜೀವಶಬ್ದಕ್ಕೆ ಶ್ರೀಹರಿಯಲ್ಲಿ ಶಕ್ತಿಯಿದ್ದರೂ ಶ್ರೀಹರಿಯನ್ನು ಏಕೆ ಇಟ್ಟುಕೊಳ್ಳಬೇಕು. ಸಂಸಾರಿಯಾದ ಜೀವನನ್ನೇ ಏಕೆ ಇಟ್ಟುಕೊಳ್ಳಬಾರದು, ಎಂದರೆ—

**ಭಾ. ॥ (೧) ಜೀವಶಬ್ದೇನ (ಬ್ರಹ್ಮ) ಸಂಸಾರಿವಿವಕ್ಷಾಯಾಂ (ಪಯತ್ನೇ) ತತ್ತೇಜ ಐಕ್ಷತೇತ್ಯಾದಿನಾ ತೇಷಾಮೇವ ಚೇತನತ್ವಾವಗತೇರ್ನಾಮರೂಪವ್ಯಾಕರಣೇ ಜೀವಾಂತರ-ಪ್ರವೇಶೋ ನಾಪೇಕ್ಷಿತಃ ॥ (೨) ಪ್ರಸುಪ್ತಲೋಕತಂತ್ರಾಣಾಂ ನಿಶಾಮ್ಯ ಗತಿಮೀಶ್ವರಃ । ತ್ರಯೋವಿಂಶತಿತತ್ತ್ವಾನಾಂ ಗಣಂ ಯುಗಪದಾವಿಶತ್ ॥ ಇತಿ ॥ (೩) ಯಾವದ್ಬಲಿಂ ತೇಽಜ ಹರಾಮ ಕಾಲೇ ಯಥಾ ವಯಂ ಚಾನ್ನಮದಾಮ ಯತ್ರ । ಯಥೋಭಯೇಷಾಂ ತ ಇಮೇ ಹ ಲೋಕಾ ಬಲಿಂ ಹರಂತೋಽನ್ನಮದಂತ್ಯನೂಹಾಃ ॥ ತ್ವಂ ನಃ ಸ ಚಕ್ಷುಃ ಪರಿದೇಹಿ ಶಕ್ತ್ಯಾ ದೇವಕ್ರಿಯಾರ್ಥೇ ಯದನುಗ್ರಹೇಣ । ಇತಿ ತತ್ತ್ವಾನಾಂ ಪ್ರಾರ್ಥನಾ-ನಂತರಂ ಭಗವತ ಏವ ತೇಷು ಪ್ರವೇಶೋಕ್ತೇರ್ಭಾಗವತೇ । ಯತಶ್ಚ ಸ ಏವ (ಷ) ಜೀವೇನಾತ್ಮನಾನುಪ್ರಭೂತಃ ಪೇಪೀಯಮಾನೋ ಮೋದಮಾನಸ್ತಿಷ್ಠತೀತಿ ಭಗವತ್ಯೇವ ಜೀವಶಬ್ದಃ ಪ್ರಯುಜ್ಯತೇ ॥ (೪) ನ ಹ್ಯಚೇತನಸ್ಯ ಮೋದಮಾನತ್ವಮಸ್ತಿ । ಅತೋಽಂತ-ರ್ಯಾಮಿರೂಪ ಏವ ಜೀವಶಬ್ದಃ ॥ ೨ ॥**

**ಅ** ॥ (೧) ಜೀವ ಎಂಬ ಪದದಿಂದ ಸಂಸಾರಿಯನ್ನು ಇಟ್ಟುಕೊಂಡರೆ-**ತತ್ತೇಜ ಐಕ್ಷತ, ತಾ ಆಪ ಐಕ್ಷಂತ** ಇತ್ಯಾದಿ ವಾಕ್ಯಗಳಿಂದ **ಇಮಾಸ್ತಿಸ್ರಃ** ಎಂದು ಹೇಳಲ್ಪಟ್ಟವರು ಚೇತನರೆಂದು ತಿಳಿದು ಬರುವುದರಿಂದ ನಾಮರೂಪಗಳನ್ನು ಮಾಡಲಿಕ್ಕೆ ಜೀವಾಂತರನಲ್ಲಿ ಪ್ರವೇಶವು ಆವಶ್ಯಕವಲ್ಲ. (ಅಂದರೆ— **ಇಮಾಸ್ತಿಸ್ರಃ** ಎಂದು ಹೇಳಲ್ಪಟ್ಟ ತೇಜಸ್ಸು ಅಪ್, ಅನ್ನಗಳು ಅಚೇತನಗಳೆಂದಾದರೆ ಆಗ ಚೇತನಗಳಿಂದೊಡಗೂಡದೆ ಇದ್ದ ತೇಜಸ್ಸು ಮೊದಲಾದವುಗಳು ಕಾರ್ಯಮಾಡಲಿಕ್ಕೆ ಅಶಕ್ತಗಳಾಗಿರುವುದರಿಂದ ನಾಮ ರೂಪಗಳನ್ನು ಸೃಷ್ಟಿಸಲಿಕ್ಕೆ ಸಂಸಾರಿಜೀವರಲ್ಲಿ ಪ್ರವೇಶವು ಆವಶ್ಯಕವಾಗುತ್ತಿತ್ತು. ಹಾಗೆ ಇಲ್ಲ. ಐಕ್ಷತ= ನೋಡುತ್ತಾನೆಂದು ಹೇಳಿದುದರಿಂದಲೂ, **ಇಮಾಸ್ತಿಸ್ರೋ ದೇವತಾಃ** ಎಂಬೀ ವೇದದಿಂದಲೂ, ಚೇತನರೆಂದೇ ತಿಳಿಯುತ್ತದೆ. ಚೇತನರಲ್ಲಿ ಚೇತನಾಂತರಕ್ಕೆ ಪ್ರವೇಶವು ಅನಾವಶ್ಯಕವು. ಅದುಕಾರಣ ಇಲ್ಲಿ ಜೀವ ಶಬ್ದವು ಸಂಸಾರಿಗಳನ್ನು ಹೇಳುವುದಿಲ್ಲ.) (೨) (ಹೀಗಾದರೆ—ಶ್ರೀಹರಿಯು ಪ್ರವೇಶಿಸಿದನು, ಎಂಬುವುದೂ ವ್ಯರ್ಥವಾಗುವುದೆಂದರೆ— ಹಾಗೆ ಹೇಳಕೂಡದು. ಏಕೆಂದರೆ —ಚೇತನಗಳಿಗೂ ಸ್ವತಃ ಪ್ರವೃತ್ತಿಮಾಡಲಿಕ್ಕೆ ಶಕ್ತಿಯಿಲ್ಲದಿರುವುದರಿಂದ ಈಶ್ವರ ಪ್ರವೇಶವು ಆವಶ್ಯಕವೇ ಎಂಬ ಅಭಿಪ್ರಾಯದಿಂದ ಪ್ರಮಾಣ ಹೇಳುತ್ತಾರೆ) ಲೋಕಗಳನ್ನು ಸೃಷ್ಟಿಸತಕ್ಕ ಶಕ್ತಿಯ ಆವಿರ್ಭಾವವಿಲ್ಲದಿರುವ ದೇವತೆಗಳ ಸ್ಥಿತಿಯನ್ನು ಶ್ರೀಹರಿಯು ನೋಡಿ ಇಪ್ಪತ್ತಮೂರು ತತ್ತ್ವಗಳ ಸಮೂಹವನ್ನು ಪ್ರವೇಶಿಸಿದನು. (ಅಂದರೆ—**ಶಬ್ದಾದ್ಯಾಃ ನಭ ಆದ್ಯಾಶ್ಚ ಮನೋಯುಕ್ತೇಂದ್ರಿಯಾಣಿ ಚ । ಅಹಂಕಾರೋ ಮಹಾಂಶ್ಚೈವ ತ್ರಯೋವಿಂಶತಿಕೋ ಗಣಃ** ॥ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ಪೃಥಿವೀ, ಜಲ, ತೇಜಸ್ಸು, ವಾಯು, ಮನಸ್ಸು, ಚಕ್ಷುಃ, ಶ್ರೋತ್ರಃ, ಘ್ರಾಣ ರಸನಾ, ತ್ವಕ್, ವಾಕ್, ಹಸ್ತ, ಪಾದ, ಗುದ, ಗುಹ್ಯೇಂದ್ರಿಯ, ಅಹಂಕಾರತತ್ತ್ವ, ಮಹತ್ತತ್ತ್ವ, ಹೀಗೆ ಭಾಗವತದಲ್ಲಿ ಸ್ವತಃ ಪ್ರವೃತ್ತಿಮಾಡಲಿಕ್ಕೆ ಅಸಮರ್ಥಗಳಾದ ತತ್ತ್ವಗಳಲ್ಲಿ ಶ್ರೀಹರಿಗೆ ಪ್ರವೇಶಗಳನ್ನು ಹೇಳಿದುದರಿಂದ ಈಶ್ವರನು ಪ್ರವೇಶಿಸುತ್ತಾನೆಂಬುವುದು ವ್ಯರ್ಥವಲ್ಲ.) (೩) (ಇಪ್ಪತ್ತಮೂರು ತತ್ತ್ವಗಳೂ ಅಚೇತನಗಳೆಂದು ಏಕೆ ಆಗಲಾರದು. ಅವುಗಳಿಗೆ ಸ್ವತಃ ಪ್ರವೃತ್ತಿ ಮಾಡಲಿಕ್ಕೆ ಶಕ್ತಿಇಲ್ಲದಿರುವುದರಿಂದ ಶ್ರೀಹರಿಯು ಪ್ರವೇಶಿಸುತ್ತಾನೆಂದು ಹೇಳಿದರೆ ಶ್ರೀಹರಿಯು ಪ್ರವೇಶಿಸುತ್ತಾನೆಂಬುದು ಸಾರ್ಥಕವಾಗುತ್ತದೆ ಎಂದರೆ-) ಯಾವದ್ಬಲಿಂ ಇತ್ಯಾದಿಗಳಲ್ಲಿ ತತ್ತ್ವಗಳು ಪ್ರಾರ್ಥಿಸಿದ

ಮೇಲೆ ಶ್ರೀಹರಿಯು ಅವುಗಳಲ್ಲಿ ಪ್ರವೇಶಿಸುತ್ತಾನೆಂದು ತೋರುತ್ತದೆ. (ಅಚೇತನಗಳು ಪ್ರಾರ್ಥಿಸಲಾರವು.) (1) ಶ್ರೀಹರಿಯೇ ನಾವು ಎಲ್ಲಿದ್ದು ಕಾಲಾಂತರದಲ್ಲಿ ಹೇಗೆ ನಿನಗೆ ಬಲಿ (ಅನ್ನ) ಯನ್ನು ಕೊಡುವೆವೋ. ನಾವು ಹೇಗೆ ಅನ್ನವನ್ನು ತಿನ್ನುವೆವೋ, ಅಂತಹ ನಿನಗೂ ನಮಗೂ ಮೂಢರಾಗದೆ ಇದ್ದ ಈ ಜನರು ಬಲಿಯನ್ನು ಕೊಡುತ್ತಾ ಅನ್ನವನ್ನು ತಿನ್ನುತ್ತಾರೆ ಅಂತಹ ನಿನ್ನ ವ್ಯಾಪಾರವನ್ನು ಲೋಕಗಳನ್ನು ಸೃಷ್ಟಿಸಬೇಕೆಂಬ ಇಚ್ಛೆಯಿಂದ ನಾವು ನಿನ್ನಿಂದ ಸೃಷ್ಟಿಸಲ್ಪಟ್ಟವರಾದರೂ ಮಾಡಲು ಶಕ್ತರಲ್ಲ. (2) ಎಲೋ ಶ್ರೀಹರಿಯೇ ಯಾವ ಶ್ರೀಹರಿಯ ಅನುಗ್ರಹದಿಂದ ನಮ್ಮಲ್ಲಿ ಪ್ರವೇಶಿಸಿದುದರಿಂದಲೇ ನಾವು ವ್ಯಾಪಾರಮಾಡಲಿಕ್ಕೆ ಶಕ್ತರಾಗಿರುತ್ತೇವೋ (ಸ್ವತಃ ನಮಗೆ ಪ್ರವೃತ್ತಿ ಮಾಡಲಿಕ್ಕೆ ಸಾಮರ್ಥ್ಯವಿಲ್ಲ) ಅಂತಹ ನೀನು ನಮಗೆ ದಿವ್ಯವಾದ ದೃಷ್ಟಿಯನ್ನು ಕೊಡು, ಹೀಗೆ ತತ್ವಾಭಿಮಾನಿ ದೇವತೆಗಳು ಪ್ರಾರ್ಥಿಸಿದ ಮೇಲೆ ಶ್ರೀಹರಿಯು ಆ ತತ್ವಗಳಲ್ಲಿ ಪ್ರವೇಶಿಸಿರುತ್ತಾನೆ. ಎಂದು ಭಾಗವತದಲ್ಲಿ ಹೇಳಿದೆ (**ಅನೇನ ಜೀವೇನ** ಎಂದು ಹೇಳಿದ ಜೀವಶಬ್ದವು ಭಗವಂತನನ್ನು ಹೇಳುತ್ತದೆಂಬುವಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ-) ಏಕೆಂದರೆ ಸಂಸಾರಿಯೇ ಅನಿರುದ್ಧರೂಪಿ ಶ್ರೀಹರಿಯಿಂದ ಪ್ರವಿಷ್ಟನಾಗಿ ಮತ್ತೂಮತ್ತೂ ಪಾನಮಾಡಿದವನಾಗಿ ಸಂತೋಷದಿಂದ ಇರುತ್ತಾನೆ, ಎಂದು ಶ್ರೀಹರಿಯಲ್ಲಿಯೇ ಜೀವ ಎಂಬ ಶಬ್ದವು ಮೇಲಿನ ವಾಕ್ಯದಲ್ಲಿ ಪ್ರಯುಕ್ತವಾಗಿದೆ. (ಆದಕಾರಣ ಜೀವಶಬ್ದವು ಭಗವಂತನನ್ನೇ ಹೇಳುತ್ತದೆ.) (೩)(ಅಲ್ಲಿಯೂ ಜೀವಶಬ್ದವು ಶ್ರೀಹರಿಯನ್ನು ಹೇಳುತ್ತದೆಂದು ಏಕೆ ಹೇಳಬೇಕು? ಸಂಸಾರಿಯನ್ನು ಹೇಳುತ್ತದೆಂದು ಏಕೆ ಆಗಬಾರದು? **ಪೇಪೀಯಮಾನಃ** ಎಂದು ಹೇಳಿದ ವೃಕ್ಷಜೀವ ಶರೀರದಲ್ಲಿ ಸಂಸಾರಿಜೀವನ ಪ್ರವೇಶವು ಆವಶ್ಯಕವು, ಎಂದರೆ-ಜಡವಾದುದಕ್ಕೆ ಸಂತೋಷವು ಕೂಡಲಾರದು- (ಅಂದರೆ—ಪೇಪೀಯಮಾನಃ ಮೋದಮಾನಃ ಎಂಬುದರಿಂದ ವೃಕ್ಷಶರೀರವನ್ನು ಹೇಳಲಾಗುವುದಿಲ್ಲ. (ಏಕೆಂದರೆ—) ಜಡವಾದುದಕ್ಕೆ ಸಂತೋಷಾದಿಗಳ ಕೂಡಲಾರವು ಮೋದಮಾನ ಶಬ್ದದಿಂದ ಹೇಳಲ್ಪಡತಕ್ಕ ಸುಖದ ಅನುಭವಗಳು ಚೇತನಧರ್ಮಗಳೆಂದು ಪ್ರಸಿದ್ಧಗಳಾಗಿವೆ ಸುಖಾನುಭವಗಳು ಅಂತಃಕರಣಪರಿಣಾಮಗಳಾದರೂ ಅವುಗಳಿಗೆ ಚೇತನರು ನಿಯಾಮಕರು. ಅದುಕಾರಣ ಪಾನಮಾಡುತ್ತಿದ್ದು ಸಂತೋಷಗೊಳ್ಳುವವನು ಸಂಸಾರಿಯೇ ಏವಂಚ **ಜೀವೇನಾನುಪ್ರಭೂತಃ** ಎಂದು ಹೇಳಲ್ಪಡತಕ್ಕ ಸಂಸಾರಿಯಲ್ಲಿ ಪ್ರವೇಶವು ವ್ಯರ್ಥವಾಗುವುದು. ಅದುಕಾರಣ ಇಲ್ಲಿ ಜೀವಶಬ್ದದಿಂದ ಸಂಸಾರಿಯನ್ನು ಇಟ್ಟುಕೊಳ್ಳಕೂಡದು. ಶ್ರೀಹರಿಯನ್ನೇ ಇಟ್ಟುಕೊಳ್ಳಬೇಕೆಂದು ನಿಶ್ಚಯವಾಯಿತು.) (೪ (ಆದರೂ **ಅನೇನ ಜೀವೇನ ಸ ಏಷ ಜೀವೇನ** ಎಂಬುವಲ್ಲಿದ್ದ ಜೀವಶಬ್ದವು ಶ್ರೀಹರಿಯನ್ನು ಹೇಳುವುದಿಲ್ಲ. ಏಕೆಂದರೆ ಶ್ರೀಹರಿಯು ಶರೀರದೊಳಗೆ ಪ್ರವೇಶಿಸಿಕೊಂಡು ವ್ಯಾಪಾರ ನಡಿಸುವುದಾದರೆ ಹೊರಗಿನ ವ್ಯಾಪಾರವು ಕೂಡಲಾರದೆಂಬ ಆಶಂಕೆಯನ್ನು ಪರಿಹರಿಸುತ್ತಾರೆ—) ಇಲ್ಲಿ ಜೀವಶಬ್ದಕ್ಕೆ ಸಂಸಾರಿಯೆಂದು ಅರ್ಥ ಹೇಳಲಾಗದಿರುವುದರಿಂದ ಜೀವಶಬ್ದವು ಅಂತರ್ಯಾಮಿಯಾದ ಶ್ರೀಹರಿಯ ರೂಪವನ್ನೇ ಹೇಳುತ್ತದೆ. ಈ ರೂಪವು ಆಂತರವ್ಯಾಪಾರಗಳನ್ನು ನಡಿಸುತ್ತದೆ (**ಸೇಯಂ ದೇವತಾ ಸ ಏಷಃ** ಎಂದು ಹೇಳಿದ ಸತ್ ಎನಿಸಿದ ಬಾಹ್ಯರೂಪವು ಬಾಹ್ಯವ್ಯಾಪಾರಗಳನ್ನು ನಡಿಸುತ್ತದೆ. ಆದುದರಿಂದ ಯಾವ ಅನುಪಪತ್ತಿಯೂ ಇಲ್ಲ. || ೨ ||

ಟೀ—ಜೀವ ಎಂದು ಹೆಸರುಳ್ಳ ಶ್ರೀಹರಿಯು ಶರೀರದ ಒಳಗಿದ್ದು ಆಂತರವ್ಯಾಪಾರಗಳನ್ನೂ ಸತ್ ಎನಿಸಿದವನು ಶರೀರದಿಂದ ಹೊರಗಿದ್ದು ಬಾಹ್ಯವ್ಯಾಪಾರಗಳನ್ನೂ ಮಾಡುತ್ತಾನೆಂಬುವಲ್ಲಿ ಸ್ಮೃತಿ ಪ್ರಮಾಣ ಹೇಳುತ್ತಾರೆ—

**ಭಾ. || (೧) ಭೋಕ್ತಾಸ್ತು ಸುಖದುಃಖಾನಾಮಂತಸ್ಥೋ ಜೀವನಾಮಕಃ | ಬಹಿಃಸ್ಥಿತಸ್ತು ಸನ್ನಾಮಾ ಭಗವಾನ್ಪುರುಷೋತ್ತಮಃ || ಇತಿ ತತ್ತ್ವವಿವೇಕೇ || (೨) ಅಗ್ನೇರಗ್ನಿ-**

**ರಿತಿ ನಾಮ ಮುಖ್ಯತೋ ನಾಸ್ತಿ । ಅಗ್ನಿನಾಮಾನಿ ತ್ರೀಣಿ ರೂಪಾಣೀತಿ ನಾಮಧೇಯಂ ಸತ್ಯಂ ಇತ್ಯಾದಿ ॥ ಇತಿ ಪಂಚಮಃ ಖಂಡಃ ॥ ೮—೫ ॥** **॥ ೩ ॥**

ಅ ॥ (೧) ಶ್ರೀಹರಿಯು ಸುಖದುಃಖಗಳನ್ನುಣ್ಣುವ ಜೀವನ ಅಂತರ್ಗತನಾಗಿ ಜೀವನೆನಿಸಿದವನು. ಹೊರಗೆ ಇದ್ದು ವ್ಯಾಪಾರಗಳನ್ನು ನಡಿಸುವವನು ಸತ್ ಎನಿಸುತ್ತಾನೆ, ಎಂದು ತತ್ತ್ವವಿವೇಕ ಎಂಬ ಗ್ರಂಥದಲ್ಲಿದೆ. (೨) (**ವಾಚಾರಂಭಣಂ ವಿಕಾರೋ ನಾಮಧೇಯಂ** ಎಂಬುದಕ್ಕೆ **ಅತೋಽನ್ಯನಾಮಧೇಯಂ ತು ವಾಚಾರಂಭಣಹೇತುತಃ । ಸಾಂಕೇತ್ಯೇನ ವಿಕಾರಃ ಸ್ಯಾತ್** ಎಂದು **ಅನ್ಯ** ಎಂದು ಇಲ್ಲದಿದ್ದ ಪದವನ್ನು ಇಟ್ಟುಕೊಂಡು **ಅನ್ಯನಾಮಧೇಯಂ** ಎಂದು ಅರ್ಥ ಹೇಳಿದ್ದು ಯುಕ್ತವಲ್ಲ. ಎಂದರೆ **ವಿಕಾರೋ ನಾಮಧೇಯಂ** ಎಂದಿಷ್ಟಕ್ಕೆ ಅರ್ಥ ಹೇಳುತ್ತಾರೆ—) ಅಗ್ನಿಗೆ ಅಗ್ನಿಯೆಂಬ ಹೆಸರೂ ಮುಖ್ಯವಾಗಿ ಇಲ್ಲ. (ಹೀಗೆಯೇ ಎಲ್ಲಾ ದೇವತೆಗಳಿಗೂ ಆಯಾಯ ಹೆಸರು ಮುಖ್ಯವಾಗಿ ಇಲ್ಲ.) (ಅದ ಕಾರಣ **ನಾಮಧೇಯಂ** ಎಂಬುವುದಕ್ಕೆ ನಾಮವೆಂದು ಅರ್ಥವು. **ಅನ್ಯನಾಮಧೇಯಂ** ಎಂದು ಹೇಳುವುದಿಲ್ಲ. **ವಿಕಾರಃ** ಎಂಬುದಕ್ಕೆ ಮುಖ್ಯವಾಗಿ ಇಲ್ಲ ಎಂದು ಅರ್ಥವು. ಅದುಕಾರಣ ಹೇಳದಿದ್ದುದನ್ನು ಕಲ್ಪಿಸಿಕೊಳ್ಳುವುದಿಲ್ಲ.) (೩) (ಆದರೂ **ತ್ರೀಣಿ ರೂಪಾಣೀತ್ಯೇವ ಸತ್ಯಂ** ಎಂಬುವ ವಾಕ್ಯಕ್ಕೆ ಮೂವರಿಗೇನೇ ನಿತ್ಯತ್ವವೆಂದು ತಾತ್ಪರ್ಯ ಹೇಳಿದ್ದು ಯುಕ್ತವಲ್ಲ. ವೇದದಲ್ಲಿ **ತ್ರೀಣಿ ರೂಪಾಣಿ** ಎಂಬ ನಾಮಧೇಯವೇ ಲಕ್ಷ್ಮ್ಯಾದಿಗಳಲ್ಲಿ ಮುಖ್ಯವೆಂದು ಹೇಳಿದುದರಿಂದ ಅಗ್ನಿ ಎಂಬ ಶಬ್ದವು ಲಕ್ಷ್ಮ್ಯಾದಿಗಳಲ್ಲಿ ಮುಖ್ಯವಾಗಲಾರದು, ಎಂದರೆ—) ಅಗ್ನಿಯೆಂದು ಹೆಸರುಳ್ಳ **ತ್ರೀಣಿ ರೂಪಾಣಿ** ಎಂಬ ನಾಮಧೇಯವು ಲಕ್ಷ್ಮೀ ಮೊದಲಾದ ಮೂವರಿಗೇನೇ ಮುಖ್ಯವು. (ಅಗ್ನಿಯೆಂಬ ನಾಮಮಾತ್ರ ಮುಖ್ಯವೆಂದು ಅಲ್ಲ. ಎಲ್ಲಾ ನಾಮಧೇಯವೂ ಮುಖ್ಯವೇ. ಏವಂಚ ಅಗ್ನಿ ಆದಿತ್ಯ ಮೊದಲಾದ ಎಲ್ಲಾ ನಾಮಗಳೂ ಆ ಲಕ್ಷ್ಮ್ಯಾದಿಗಳಿಗೇನೇ ಮುಖ್ಯಗಳಾಗಿರುವುದರಿಂದ ಅವರೇ ಆ ಶಬ್ದಗಳಿಂದ ಮುಖ್ಯವಾಗಿ ಹೇಳಲ್ಪಡುವವರು. ॥ ೮—೫ ॥ ॥ ೩ ॥

**ಐದನೇ ಖಂಡವು ಮುಗಿಯಿತು.**

## ೬ನೇ ಖಂಡವು

**ಪೀ**—ಹಿಂದೆ ಹೇಳಿದ ಅರ್ಥವನ್ನು ದೃಷ್ಟಾಂತಕೊಟ್ಟು ವಿವರಿಸುತ್ತಾರೆ—

**ಉ. ॥ ದಧ್ನಃ ಸೋಮ್ಯ ಮಥ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ತತ್ಸರ್ಪಿರ್ಭವತಿ** **॥ ೧ ॥**

ಅ ॥ ಎಲೋ ಮಗನೇ, ಹೇಗೆ ಮೊಸರನ್ನು ಕಡೆಯುವಾಗ ಹೊಸ ಬೆಣ್ಣೆಯೆಂಬ ಸೂಕ್ಷ್ಮಭಾಗವು ಎಲ್ಲಾ ವಸ್ತುಗಳಿಗಿಂತಲೂ ಶ್ರೇಷ್ಠವಾಗಿ ಮೇಲಕ್ಕೆ ಬರುತ್ತದೆ- ಅದು ತುಪ್ಪವಾಗುತ್ತದೆ. ॥ ೧ ॥

**ಉ. ॥ ಏವ ಮೇವ ಖಲು ಸೋಮ್ಯಾನ್ನಸ್ಯಾಶ್ಯಮಾನಸ್ಯ ಯೋಽಣಿಮಾ ಸಊರ್ಧ್ವಃ ಸಮುದೀಷತಿ ತನ್ಮನೋ ಭವತಿ** **॥ ೨ ॥**

ಅ ॥ ಹೀಗೆಯೇ ತಿನ್ನಲ್ಪಡತಕ್ಕ ಅನ್ನದ ಸಾರಾಂಶವು ಮೇಲಕ್ಕೆ ಬರುತ್ತದೆ. ಅದು ಮನಸ್ಸಿನಲ್ಲಿ ಪ್ರವೇಶಮಾಡಿ ಮನಸ್ಸು ಮೊದಲಾದುದು ವೃದ್ಧಿಹೊಂದಲಿಕ್ಕೆ ಕಾರಣವಾಗುತ್ತದೆ. ॥ ೨ ॥

**ಉ. ॥ ಅಪಾಂ ಸೋಮ್ಯ ಪೀಯಮಾನಾನಾಂ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ಸ ಪ್ರಾಣೋ ಭವತಿ ॥ ೩ ॥**

ಅ ॥ ನೀರನ್ನು ಕುಡಿಯುವಾಗ ಅದರ ಸಾರಾಂಶವು ಮೇಲೆ ಬಂದು ಪ್ರಾಣವು ಆಗುತ್ತದೆ. ॥ ೩ ॥

**ಉ. ॥ ತೇಜಸಃ ಸೋಮ್ಯಾಶ್ಯಮಾನಸ್ಯ ಯೋಽಣಿಮಾ ಸ ಊರ್ಧ್ವಃ ಸಮುದೀಷತಿ ಸಾ ವಾಗ್ಭವತಿ ॥ ೪ ॥**

ಅ ॥ ತೈಜಸವಾದ ತುಪ್ಪ ಮೊದಲಾದುದನ್ನು ತಿನ್ನುವಾಗ ಅದರ ಸಾರಾಂಶವು ಮೇಲಕ್ಕೆ ಬಂದುದಾಗಿ ವಾಗಿಂದ್ರಿಯುವಾಗುತ್ತದೆ. ॥ ೪ ॥

**ಉ. ॥ ಅನ್ನಮಯ ಂಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯಿೀ ವಾಗಿತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ಇತಿ ಷಷ್ಠಃ ಖಂಡಃ ॥ ೬ ॥ ॥ ೭ ॥**

ಅ ॥ ಮನಸ್ಸಿಗೆ ರುದ್ರನು ಅಭಿಮಾನಿಯು. ಪ್ರಾಣಕ್ಕೆ ವಾಯುವು ಅಭಿಮಾನಿಯು. ವಾಗಿಂದ್ರಿಯಕ್ಕೆ ಲಕ್ಷ್ಮಿಯು ಅಭಿಮಾನಿನಿಯು. ಹೀಗೆ ತಂದೆಯವರು ಉಪದೇಶಿಸಿದಾಗ ಶ್ವೇತಕೇತುವು ನನಗೆ ಚೆನ್ನಾಗಿ ಇದರ ಅನುಭವ ಬರುವಂತೆ ವಿವರಿಸಿ ಹೇಳಿರಿ, ಎಂದು ಪ್ರಾರ್ಥಿಸಿದನು, ಆಗ ತಂದೆಯು ಹಾಗೆಯೇ ಆಗಲಿ ಎಂದನು. ॥ ೮--೬ ॥ ॥ ೫ ॥

ಆರನೇ ಖಂಡವು ಮುಗಿಯಿತು.

## ೭ನೇ ಖಂಡವು

**ಉ. ॥ ಷೋಡಶಕಲಃ ಸೋಮ್ಯ ಪುರುಷಃ ಪಂಚದಶಾಹಾನಿ ಮಾಶೀಃಕಾಮಮಪಃ ಪಿಬಾಪೋಮಯಃ ಪ್ರಾಣೋ ನ ಪಿಬತೋ ವಿಚ್ಛೇತ್ಸ್ಯತ ಇತಿ ॥ ೧ ॥**

ಅ ॥ ಎಲೋ ಮಗನೇ ಜೀವನು ಹದಿನಾರುಕಲೆಗಳುಳ್ಳವನು (ಅವುಗಳ ಮಧ್ಯದಲ್ಲಿ ಮನಸ್ಸು ಒಂದು ಕಲೆಯು, ಅದರಲ್ಲಿ ಮನಸ್ಸು ಅನ್ನಮಯವಾಗಬೇಕೆಂದು ಪ್ರತ್ಯಕ್ಷವಾಗಿ ನೋಡಲಿಕ್ಕೆ ಇಚ್ಛಿಸಿದರೆ-) ಹದಿನೈದು ದಿವಸಗಳಲ್ಲಿ ಅನ್ನವನ್ನು ಉಣ್ಣಬೇಡ ಇಚ್ಛಾನುಸಾರವಾಗಿ ನೀರನ್ನು ಕುಡಿ. ಪ್ರಾಣವು ಜಲಮಯವು. ಅದಕ್ಕೆ ವಾಯುವು ಅಭಿಮಾನಿಯು. ನೀರು ಕುಡಿಯದಿದ್ದರೆ ಪ್ರಾಣವು ಹೋಗುವುದು.

**ವಿ ॥ (1)** ಪ್ರಾಣ ಶ್ರದ್ಧೆ, ಆಕಾಶ, ವಾಯು, ಜ್ಯೋತಿಸ್ಸು, ಜಲ ಪೃಥಿವೀ, ಇಂದ್ರಿಯ, ಮನಸ್ಸು ಅನ್ನ, ವೀರ್ಯ, ತಪಸ್ಸು, ಮಂತ್ರ ಕರ್ಮ, ಲೋಕ ನಾಮ ಹೀಗೆ ೧೬ ಕಲೆಗಳು, ಇವುಗಳಿಗೆ ಪ್ರಾಣ, ಸರಸ್ವತೀ, ವಿನಾಯಕ, ಪ್ರಾಣನ ಮಗನಾದ ವಾಯುವು, ಅಗ್ನಿ, ಬುಧ, ಶನಿ. ಇಂದ್ರ. ರುದ್ರ, ಚಂದ್ರ ವರುಣ, ವಹ್ನಿ, ಸ್ವಾಹಾ, ಪುಷ್ಕರ, ಪರ್ಜನ್ಯ ಉಷಾ ಎಂದು ೧೬ ದೇವತೆಗಳು ಅಭಿಮಾನಿಗಳು. ॥ ೧ ॥

**ಉ. ॥ ಸ ಹ ಪಂಚದಶಾಹಾನಿ ನಾ(ಶೀದಥ)ಶಾಥ ಹೈನಮುಪಸಸಾದ ಕಿಂಬ್ರವೀಮಿ ಭೋ ಇತ್ಯೃಚಃ ಸೋಮ್ಯ ಯಜೂಂಷಿ ಸಾಮಾನೀತಿ ಸ ಹೋವಾಚ ನ ವೈ ಮಾ ಪ್ರತಿಭಾಂತಿ ಭೋ ಇತಿ ॥ ೨ ॥**

ಅ ॥ ಆಗ ಮಗನು (ಮನಸ್ಸು ಅನ್ನಮಯ ಎಂಬುವುದನ್ನು ತನ್ನ ಅನುಭವಕ್ಕೆ ತರುವುದಕ್ಕಾಗಿ) ೧೫ ದಿವಸಗಳಲ್ಲಿ ಅನ್ನವನ್ನು ಉಣ್ಣಲಿಲ್ಲ. ನೀರು ಕುಡಿದನು. ೧೬ನೇ ದಿನದಲ್ಲಿ ತಂದೆಯ ಬಳಿಗೆ ಬಂದು ಹೇಳಿದನು. ಎಲೋ ತಂದೆಯೇ ಕಲಿತ ಗ್ರಂಥಗಳ ಮಧ್ಯದಲ್ಲಿ ಯಾವುದನ್ನು ಹೇಳಲಿ, ಎಂದನು. ಆಗ ತಂದೆಯು ಋಗ್ವೇದವನ್ನೂ, ಯಜುರ್ವೇದವನ್ನೂ, ಸಾಮವೇದವನ್ನೂ ಹೇಳು ಎಂದನು. ಆಗ ಮಗನು ಎಲೋ ಪೂಜ್ಯರಾದ ತಂದೆಯವರೇ ಋಗ್ವೇದ ಮೊದಲಾದವುಗಳು ನನ್ನ ಮನಸ್ಸಿನಲ್ಲಿ ಯಾವುದೂ ತೋರುವುದೇ ಇಲ್ಲವೆಂದು ಹೇಳಿದನು. ॥ ೨ ॥

**ಉ. ॥ ತಂ ಹೋವಾಚ ಯಥಾ ಸೋಮ್ಯ ಮಹತೋಽಭ್ಯಾಹಿತಸ್ಯೈಕೋಽಂಗಾರಃ ಖದ್ಯೋತಮಾತ್ರಃ ಪರಿಶಿಷ್ಟಃ ಸ್ಯಾತ್ತೇನ ತತೋಽಪಿ ವ ಬಹು ದಹೇದೇವಂ ಸೋಮ್ಯ ತೇ ಷೋಡಶಾನಾಂ ಕಲಾನಾಮೇಕಾ ಕಲಾಽತಿಶಿಷ್ಟಾ ಸ್ಯಾತ್ತಯೈತರ್ಹಿ ವೇದಾನ್ನಾನುಭವಸ್ಯಶಾನ ॥ ೩ ॥**

ಅ ॥ ಆಗ ತಂದೆಯು ಹೇಳಿದನು. (ಕಾರಣ ಹೇಳುತ್ತೇನೆ. ಕೇಳು) ಎಲೋ ಮಗನೇ ದೊಡ್ಡದಾದ ಅಭಿವೃದ್ಧವಾದ ಬೆಂಕಿಯ ರಾಶಿಯಲ್ಲಿ ಒಂದೊಂದೇ ಕೆಂಡಗಳು ಹೋಗಿ ಒಂದು ಕೆಂಡವು ಮಿಣುಕು ಹುಳದಷ್ಟು ಮಿಣುಗುತ್ತಿದ್ದರೆ (ಅದರಿಂದ ಅಷ್ಟು ಚಿಕ್ಕ ವಸ್ತುವನ್ನೇ ಸುಡಬಹುದು. ಹುಲ್ಲು ಮೊದಲಾದ ಸಹಕಾರಿಗಳಿಲ್ಲದಿರುವುದರಿಂದ) ಅದಕ್ಕಿಂತ ಹೆಚ್ಚಿನ ವಸ್ತುಗಳನ್ನು ಸುಡಲಾರದು. ಹೀಗೆಯೇ ನಿನ್ನ ೧೬ ಕಲೆಗಳ ಮಧ್ಯದಲ್ಲಿ ಪ್ರಾಣವೆಂಬ ಒಂದು ಕಲೆಯು ಮಾತ್ರ ಉಳಿದಿರುವುದು. (ಬೇರೆ ಕಲೆಗಳು ಬಳಲಿ ಬೆಂಡಾಗಿವೆ. ಅದುಕಾರಣ ಮಿಣುಕು ಹುಳದಷ್ಟು ಚಿಕ್ಕದಾದ ಕೆಂಡಕ್ಕೆ ಸಮವಾದ) ಕಲೆಯಿಂದ ಈಗ (ಹಂದಾಡಿಕೊಂಡು ಮಾತ್ರ ಇರುತ್ತಿ. ಅನ್ನವೆಂಬ ಸಹಕಾರಿಯಿಲ್ಲದಿರುವುದರಿಂದ) ಮನಸ್ಸಿನಿಂದ ವೇದಗಳನ್ನು ತಿಳಿಯುವುದಿಲ್ಲ. (ಅನ್ನವಿಲ್ಲವಾದರೆ ಮನಸ್ಸಿನ ವ್ಯಾಪಾರವು ಇರಲಾರದು.) ಅದುಕಾರಣ ಈಗ ಉಣ್ಣು. (ಉಂಡರೆ ಮನೋವ್ಯಾಪಾರವು ಸರಿಯಾಗಿ ನಡಿಯುವುದು) ಇದರಿಂದ ಮನಸ್ಸು ಅನ್ನದಿಂದ ಬೆಳೆಯುತ್ತದೆ ಎಂದು ಸ್ಪಷ್ಟವಾಗುತ್ತದೆ. ॥ ೩ ॥

**ಉ. ॥ ಅಥ ಮೇ ವಿಜ್ಞಾಸ್ಯಸೀತಿ ಸ ಹಾ(ಶೀದಥ)ಶಾಥ ಹೈನಮುಪಸಸಾದ ತಂ ಹ ಯತ್ಕಿಂ ಚ (ಚಿತ್ಪ) ಪಪ್ರಚ್ಛ ಸರ್ವಂ ಹ ಪ್ರತಿಪೇದೇ ತಂ ಹೋವಾಚ ॥ ೪ ॥**

ಅ ॥ ಉಂಡ ಮೇಲೆ ನಾನು ಕೇಳಿದ್ದೆಲ್ಲವನ್ನೂ ತಿಳಿಯುವಿ, ಎಂದು ತಂದೆಯು ಹೇಳಿದನು ಆ ಮೇಲೆ ಮಗನು ಉಂಡು ತಂದೆಯ ಬಳಿಗೆ ಬಂದನು. ಆ ಮಗನೊಡನೆ ತಂದೆಯು ಯಾವುದನ್ನು ಕೇಳಿದನೋ ಅವೆಲ್ಲ ಋಗ್ವೇದಾದಿಗಳನ್ನು ಮಗನು ಮನಸ್ಸಿನಿಂದ ತಿಳಿದನು. ಮುಖದಿಂದ ಹೇಳಿದನು. ಆ ಮಗನಿಗೆ ತಂದೆಯು ಹೇಳಿದನು. ॥ ೫ ॥

**ಉ. ॥ ಯಥಾ ಸೋಮ್ಯ ಮಹತೋಽಭ್ಯಾಹಿತಸ್ಯೈಕಮಂಗಾರಂ ಖದ್ಯೋತಮಾತ್ರಂ ಪರಿಶಿಷ್ಟಂ ತಂ ತೃಣೈರುಪಸಮಾಧಾಯ ಪ್ರಜ್ವಲಯೇತ್ತೇನ ತತೋಽಪಿ ಬಹು ದಹೇತ್ ॥ ೫ ॥**

ಅ ॥ ಎಲೋ ಮಗನೇ ಹೆಚ್ಚು ಅಭಿವೃದ್ಧಿ ಹೊಂದಿದ ಬೆಂಕಿಯ ಒಂದು ಕಿಡಿಯು ಮಿಣುಕುಹುಳದಷ್ಟು ಉಳಿಯುತ್ತದೆ. ಅದನ್ನು ಹುಲ್ಲುಗಳಿಂದ ವೃದ್ಧಿಗೊಳಿಸುತ್ತಾನೆ. ಅದರಿಂದ (ಸಹಕಾರಿಯು ಲಭಿಸಿರುವುದರಿಂದ ಹೆಚ್ಚು ವಸ್ತುಗಳನ್ನು ಸುಡುವ ಶಕ್ತಿಯುಳ್ಳದ್ದಾಗುತ್ತದೆ. ॥ ೫ ॥

**ಉ. ॥ ಏವಂ ಸೋಮ್ಯ ತೇ ಷೋಡಶಾನಾಂ ಕಲಾನಾಮೇಕಾ ಕಲಾಽತಿಶಿಷ್ಟಾಽಭೂತ್ಸಾಽನ್ನೇನೋಪಸಮಾಹಿತಾ ಪ್ರಾಜ್ವಾಲೀತ್ತಯೈತರ್ಹಿ ವೇದಾನನುಭವಸ್ಯನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯೀ ವಾಗಿತಿ ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ ॥ ೬ ॥**

ಅ ॥ ಎಲೋ ಮಗನೇ ನಿನ್ನ ೧೬ ಕಲೆಗಳ ಮಧ್ಯದಲ್ಲಿ ಒಂದು ಕಲೆಯು ಉಳಿದಿದೆ. ಅದು ಅನ್ನದಿಂದ ಅಭಿವೃದ್ಧವಾಗಿ ಜ್ವಲಿಸುವುದು. ಅನ್ನದಿಂದ ವೃದ್ಧಿಹೊಂದಿದ ೧೬ನೇ ಕಲೆಯಿಂದ ಈಗ ವೇದಗಳನ್ನು ಮನಸ್ಸಿನಿಂದ ತಿಳಿಯುತ್ತಿ. ಮುಖದಿಂದ ಹೇಳುತ್ತಿ. ಎಲೋ ಮಗನೇ ಮನಸ್ಸು ಅನ್ನಮಯವೆಂಬುದು ಹೇಗೆ ಸಿದ್ಧವಾಯಿತೋ ಹಾಗೆಯೇ ಪ್ರಾಣವು ಜಲಮಯವು, ವಾಗಿಂದ್ರಿಯವು ತೇಜೋಮಯವು. ಹೀಗೆ ಮನಸ್ಸು ಮೊದಲಾದುದು ಅನ್ನಾದಿಗಳ ಅಂಶಗಳಿಂದ ವೃದ್ಧಿಹೊಂದುತ್ತದೆ. ಅನ್ನ ದೇವತಾದಿಗಳ ಅಧೀನವಾದುದು. ಎಂದು ಶ್ವೇತಕೇತುವು ತಿಳಿದನು

ವಿ ॥ (1) ಹೀಗೆ ತಂದೆಯಿಂದ ಉಪದೇಶಿಸಿಕೊಂಡ ಶ್ವೇತಕೇತುವು ಸಂಪೂರ್ಣ ಅಭೇದಜ್ಞಾನವನ್ನು ಕಳೆದುಕೊಂಡವನಾಗಿ ತಂದೆಯ ಉಪದೇಶಪ್ರಕಾರ ಶ್ರೀಹರಿಯೇ ಸರ್ವರಿಗಿಂತಲೂ ಪ್ರಧಾನನು ಎಂದು ಸರಿಯಾಗಿ ತಿಳಿದುಕೊಂಡನು. (2) ಈ ವಿದ್ಯೆಯಲ್ಲಿ ಹೇಳಿದ ಎಲ್ಲಾ ಪ್ರಮೇಯವೂ ಪ್ರಾಮಾಣಿಕವು (ಪ್ರಮಾಣಸಿದ್ಧವು.) ಎಂದು ತಿಳಿಸುವುದಕ್ಕಾಗಿ ಎರಡು ಸಲ ಹೇಳಿದ್ದು. ॥ ೬ ॥

**ಉ. ॥ ತದೇಷ ಶ್ಲೋಕಃ ॥ ಪಂಚೇಂದ್ರಿಯಸ್ಯ ಪುರುಷಸ್ಯ ಯದೇವ ಸ್ಯಾದನಾವೃತಂ । ತದಸ್ಯ ಪ್ರಜ್ಞಾ ಸ್ರವತಿ ದೃತೇಃ ಪಾದಾದಿವೋದಕಂ ದೃತೇಃ ಪಾದಾದಿವೋದಕಂ (ಇತಿ ಕ್ವಚಿತ್ಪಾಠ ಇತಿ ವೇದೇಶೀಯೇ) ॥ ಇತಿ ಸಪ್ತಮಃ ಖಂಡಃ ॥ ೮-೭ ॥ ॥ ೭ ॥**

ಅ ॥ ಮನಸ್ಸು ಅನ್ನದಿಂದ ಅಭಿವೃದ್ಧಿಯನ್ನು ಹೊಂದುತ್ತದೆ ಎಂಬುವ ವಿಷಯದಲ್ಲಿ ಈ ಶ್ಲೋಕವು ಸಮ್ಮತಿಯಾಗುತ್ತದೆ. ಕಣ್ಣು ಮೊದಲಾದ ಐದು ಇಂದ್ರಿಯಗಳಿದ್ದರೂ ಪುರುಷರ ಮನಸ್ಸು ಯಾವಾಗ ಅನ್ನದಿಂದ ವೃದ್ಧಿ ಹೊಂದುವುದಿಲ್ಲವೋ ಆಗ ಆತನ ಪ್ರಜ್ಞೆಯು (ಜ್ಞಾನವಿಶೇಷವು) ಚರ್ಮದ ಚೀಲದ ತೂತಿನಿಂದ ನೀರು ಸುರಿದುಹೋದಂತೆ ಹರಿದುಬೀಳುತ್ತದೆ. ॥ ೮ ೭ ॥ ॥ ೭ ॥

ಏಳನೇ ಖಂಡವು ಮುಗಿಯಿತು.

# ೮ನೇ ಖಂಡವು

ಪೀ—ತಾನು ಮಹಾಜ್ಞಾನಿಯಾಗಿರುವುದರಿಂದ ಈಶ್ವರನೇ ಆಗಿದ್ದೇನೆಂದು ತಿಳಿದಿರುವ ಶ್ವೇತಕೇತುವಿಗೆ, ಈಶ್ವರನೇ ಸರ್ವರಿಗಿಂತಲೂ ಪ್ರಧಾನನು, ಶ್ವೇತಕೇತುವು ಅಪ್ರಧಾನನು, ಎಂದೂ ತಿಳಿಸಿ, ಶ್ವೇತಕೇತುವಿಗೆ ಸುಷುಪ್ತ್ಯಾದಿಗಳಲ್ಲಿ ಅಭೇದವೆಂಬ ಶಂಕೆಯನ್ನು ಸುಷುಪ್ತಿಯಲ್ಲಿಯೂ, ಈಶ್ವರನ ಅಧೀನನಾಗಿಯೇ ಇರುತ್ತಾನೆಂದು ಪರಿಹರಿಸುತ್ತಾ ಭೇದವನ್ನೇ ತಂದೆಯವರು ಮಗನಿಗೆ ಉಪದೇಶಿಸಿದರು, ಎಂದು ವೇದವು ಹೇಳುತ್ತದೆ—

**ಉ. ॥ ಉದ್ದಾಲಕೋ ಹಾರುಣಿಃ ಶ್ವೇತಕೇತುಂ ಪುತ್ರಮುವಾಚ ಸ್ವಪ್ನಾಂತಂ ಮೇ ಸೋಮ್ಯ ವಿಜಾನೀಹೀತಿ ಯತ್ರೈತತ್ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ತಸ್ಮಾದೇನꣳ ಸ್ವಪಿತೀತ್ಯಾಚಕ್ಷತೇ ಸ್ವꣳ ಹ್ಯಪೀತೋ ಭವತಿ ॥ ೧ ॥**

ಅ ॥ ಅರುಣನ ಮಗನಾದ ಉದ್ದಾಲಕನು ಮಗನಾದ ಶ್ವೇತಕೇತುವಿಗೆ ಎಲೋ ಮಗನೇ, ಸುಷುಪ್ತಿಯ (ಗಾಢನಿದ್ದೆ) ಸ್ವರೂಪವನ್ನು ನನ್ನಿಂದ ತಿಳಿ, ಎಂದು ಮಗನಿಗೆ ಹೇಳಿದನು. (ಸುಷುಪ್ತಿಯಲ್ಲಿ ವಿಶೇಷವು ಯಾವುದು? ಏಕೆ ತಿಳಿಯಬೇಕೆಂದರೆ—) ಯಾವ ಕಾಲದಲ್ಲಿ ಈ ಜೀವನು ಮಲಗುತ್ತಾನೋ, ಆಗ ಪರಮಾತ್ಮನೊಡನೆ ಇರುತ್ತಾನೆ. (ಸ್ವಪ್ನದಲ್ಲಿ ಸ್ವಪಿತಿ ಎಂಬ ಶಬ್ದಪ್ರಯೋಗವೇ ಪ್ರಮಾಣವೆನ್ನುತ್ತಾರೆ—) ಗಾಢನಿದ್ರೆ ಕಾಲದಲ್ಲಿ ಹೃದಯ ಕಮಲದಲ್ಲಿರತಕ್ಕ ಸರ್ವ ಸ್ವತಂತ್ರನಾದ ಶ್ರೀಹರಿಯನ್ನು ಹೊಂದುತ್ತಾನೆ (ಬೇರೆಯವರಿಗೆ ತಿಳಿಯದಂತೆ ಪ್ರವೇಶಿಸುತ್ತಾನೆ) ಆದುದರಿಂದಲೇ ಗಾಢನಿದ್ದೆಯಲ್ಲಿರತಕ್ಕವನನ್ನು ವಿದ್ವಾಂಸರು ಸ್ವಪಿತಿ ಎಂದು ಹೇಳುತ್ತಾರೆ. (ಸ್ವಪಿತಿ ಎಂಬ ಶಬ್ದಪ್ರಯೋಗದಿಂದಲೇ ಗಾಢನಿದ್ದೆಯಲ್ಲಿದ್ದವನಿಗೆ ಸ್ವ ಎನಿಸಿದ ಶ್ರೀಹರಿಯ ಪ್ರಾಪ್ತಿಯಾಗುತ್ತದೆಂದು ತಿಳಿಯುತ್ತದೆ) (ಇದು ಮುಕ್ತಪರವೂ ಆಗುತ್ತದೆ.) ಹೇಗೆಂದರೆ—ಸ್ವಪ್ನ ಶಬ್ದದಿಂದ ಜೀವನ್ಮುಕ್ತಿರೂಪವಾದ ಸಂಧ್ಯಾವಸ್ಥೆಯನ್ನು ಇಟ್ಟುಕೊಳ್ಳಬೇಕು. ಮೋಕ್ಷವನ್ನು ನನಗೆ ತಿಳಿಸು ಯಾವಾಗ ಅಮುಕ್ತ ಜೀವನು ಮುಕ್ತನಾಗುತ್ತಾನೋ, ಆಗಶ್ರೀಹರಿಯ ಅತೀಸಾಮಿಪ್ಯವನ್ನು ಹೊಂದುತ್ತಾನೆ. ಮೋಕ್ಷದಲ್ಲಿ ಸ್ವತಂತ್ರನಾದ ಶ್ರೀಹರಿಯನ್ನು ಸಂಸಾರಿಗಳಿಗೆ ತಿಳಿಯದ ಹಾಗೆ ಪ್ರವೇಶಿಸುತ್ತಾನೆ. ಅಂದರೆ—ಅತಿಸಾಮಿಪ್ಯವನ್ನು ಹೊಂದುತ್ತಾನೆ.

ವಿ ॥ ಜಾಗ್ರದವಸ್ಥೆ ಸ್ವಪ್ನಾವಸ್ಥೆಗಳಲ್ಲಿ ಬಳಲಿದ ಜೀವನನ್ನು ಸುಷುಪ್ತಿಯಲ್ಲಿ ಬಳಲುವಿಕೆಯನ್ನು ಕಳೆಯುವುದಕ್ಕಾಗಿ ಶ್ರೀಹರಿಯು ತನ್ನೊಡನೆ ಸೇರಿಸಿಕೊಳ್ಳುತ್ತಾನೆ ಆಗಲೂ ಕೇವಲ ಈಶ್ವರನ ಅಧೀನನಾಗಿಯೇ ಇರುತ್ತಾನೆ. ಸ್ವತಂತ್ರನಾಗಿ ಇರುವುದೇ ಇಲ್ಲ. ॥ ೧ ॥

ಪೀ—ಹೀಗೆ ಜಾಗ್ರದವಸ್ಥೆ, ಸ್ವಪ್ನಾವಸ್ಥೆಗಳಲ್ಲಿ ಸಂಸಾರದಲ್ಲಿ ಆಗಲೀ ಬಳಲಿದ ಜೀವನಿಗೆ ಶ್ರಮವನ್ನು ಕಳೆಯುವುದಕ್ಕಾಗಿ ಜೀವನು ಸುಷುಪ್ತಿಯಲ್ಲಿ ಅಥವಾ ಮೋಕ್ಷದಲ್ಲಿ ಶ್ರೀಹರಿಯನ್ನು ಆಶ್ರಯಿಸಿರುತ್ತಾನೆ. ವಿಶೇಷವಾಗಿ ಈಶ್ವರಾಧೀನನಾಗಿರುತ್ತಾನೆಂಬುದನ್ನು ದೃಷ್ಟಾಂತಕೊಟ್ಟು ಹೇಳುತ್ತಾರೆ—

**ಉ. ॥ ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧೋ ದಿಶಂದಿಶಂ ಪತಿತ್ವಾನ್ಯತ್ರಾಯತನಮಲಬ್ಧ್ವಾ ಬಂಧನಮೇವೋಪಾಶ್ರಯತ ಏವಮೇವ ಖಲು**

**ಸೋಽಮ್ಯ ತನ್ಮನೋ ದಿಶಂದಿಶಂ ಪತಿತ್ವಾನ್ಯತ್ರಾಯತನಮಲಬ್ಧ್ವಾ ಪ್ರಾಣ-ಮೇವೋಪಶ್ರಯತೇ ಪ್ರಾಣಬಂಧನಂ ಹಿ ಸೋಽಮ್ಯ ಮನ ಇತಿ || ೨ ||**

ಅ || ಪ್ರಸಿದ್ಧ ದೃಷ್ಟಾಂತವು ಹೇಗೆಂದರೆ— ಹಕ್ಕಿಯು ಬೇಡನ ಬಲೆಗೆ ಸಿಲುಕಿ ಅವನಿಂದ ಕಟ್ಟಲ್ಪಟ್ಟ (ಬಂಧನದಿಂದ ಬಿಡುಗಡೆ ಹೊಂದುವುದಕ್ಕಾಗಿ) ಪ್ರತಿದಿಕ್ಕಿನಲ್ಲಿಯೂ ಹಾರಿ ಆ ಬಂಧನದಿಂದ ಬಿಡುಗಡೆ ಹೊಂದದೆ ಬಂಧನ (ತನ್ನ ಪಾದದಲ್ಲಿ ಸಂಬದ್ಧವಾದ ಹಗ್ಗವನ್ನು ಕಟ್ಟುವ ಗೂಟ) ವನ್ನೇ ಬಳಲುವಿಕೆಯನ್ನು ಹೋಗಲಾಡಿಸುವುದಕ್ಕಾಗಿ ಆಶ್ರಯಿಸುತ್ತದೋ, ಹಾಗೆಯೇ ಎಲೋ ಮಗನೇ, ತಿಳಿದುಕೊಳ್ಳುವುದರಿಂದ ಮನಃ ಎನಿಸಿದ ಜೀವನು ಸ್ವಪ್ನಾವಸ್ಥೆ ಜಾಗ್ರದವಸ್ಥೆಗಳಲ್ಲಿ ಅಥವಾ ಸಂಸಾರದಲ್ಲಿ ಪ್ರತಿದಿಕ್ಕುಗಳಲ್ಲಿ ತಿರುಗಾಡಿ ಪ್ರಾಣನು ಹೊರತು ಬೇರೆ ಆಶ್ರಯವನ್ನು ಹೊಂದದೆ ಚೆನ್ನಾಗಿ ವ್ಯಾಪಾರಗಳನ್ನು ನಡಿಸುವುದರಿಂದ ಪ್ರಾಣನೆನಿಸಿದ ಶ್ರೀಹರಿಯನ್ನೇ ಹೊಂದುತ್ತಾನೆ ಏಕೆಂದರೆ ಜೀವನು ಪ್ರಾಣನೆನಿಸಿದ ಶ್ರೀಹರಿಯಿಂದ ಕಟ್ಟಲ್ಪಟ್ಟವನಾಗಿ (ಅಂದರೆ ಶ್ರೀಹರಿಯ ಅಧೀನನಾಗಿಯೇ) ಇರುತ್ತಾನೆ. || ೨ ||

ಪೀ— ಹೀಗೆ ಸುಷುಪ್ತಿಯಲ್ಲಿಯೂ ಮೋಕ್ಷದಲ್ಲಿಯೂ ಜೀವನು ಶ್ರೀಹರಿಯ ಅಧೀನದಲ್ಲಿರುವವನೆಂದು ಹೇಳಿ ಈಗ ಜಾಗ್ರದವಸ್ಥೆಯಲ್ಲಿಯೂ ಜೀವನು ಈಶ್ವರನ ಅಧೀನದಲ್ಲಿರುತ್ತಾನೆಂದು ತಿಳಿಸುತ್ತಾರೆ—

**ಉ. || ಅಶನಾಯಾಪಿಪಾಸೇ ಸೋಽಮ್ಯ ವಿಜಾನೀಹೀತಿ ಯತ್ರೈತತ್ಪು-ರುಷೋಽಶಿಶಿಷತಿ ನಾಮಾಪ ಏವ ತದಶಿತಂ ನಯಂತೇ ತದ್ಯಥಾ ಗೋನಾ-ಯೋಽಶ್ವನಾಯಃ ಪುರುಷನಾಯ ಇತ್ಯೇವಂ ತದಪ ಆಚಕ್ಷತೇಽಶನಾಯೇತಿ ತತ್ರೈತಚ್ಛುಂಗಮುತ್ಪತಿತಂ ಸೋಽಮ್ಯ ವಿಜಾನೀಹಿ ನೇದಮಮೂಲಂ ಭವಿ-ಷ್ಯತೀತಿ || ೩ ||**

ಅ || ಎಲೋ ಮಗನೇ ಭೋಜನಮಾಡಬೇಕೆಂಬ ಇಚ್ಛೆಯೂ, ಕುಡಿಯಬೇಕೆಂಬ ಇಚ್ಛೆಯೂ ಇವೆರಡೂ (ಜೀವರ ಅಧೀನಗಳಲ್ಲ, ಅದುಕಾರಣ ಯಾರ ಅಧೀನದಲ್ಲಿರತಕ್ಕವುಗಳು ಎಂಬುವುದನ್ನು ಹೇಳುತ್ತೇನೆ. ಅದನ್ನು) ತಿಳಿ. (ಯಾರ ಅಧೀನಗಳು, ಅದನ್ನು ತಿಳಿಸು ಎಂದು ಮಗನು ಪ್ರಾರ್ಥಿಸಿದಾಗ ತಂದೆಯು ಹೇಳುತ್ತಾನೆ.) ಯಾವಾಗ ಈ ಸಂಸಾರಿಯು ಅನ್ನವನ್ನು ಉಣ್ಣಲು ಇಚ್ಛಿಸುತ್ತಾನೋ, ಆಗ ಜಲಾಭಿಮಾನಿಯಾದ ಪ್ರಾಣನೇ ಅನ್ನದ ಇಚ್ಛೆಯನ್ನು ಹುಟ್ಟಿಸಿ ಆ ಮೇಲೆ ಉಂಡ ಅನ್ನವನ್ನು ತೇಜ (ಜಾಠರಾಗ್ನಿ) ಸ್ಸಂಯೋಗದಿಂದ ರಸ, ವೀರ್ಯಾದಿ ರೂಪದಿಂದ * ಪರಿಣಮಿಸುತ್ತಾನೆ. (ಇದನ್ನು ದೃಷ್ಟಾಂತಕೊಟ್ಟು ವಿವರಿಸುತ್ತಾರೆ.) ಹೇಗೆಂದರೆ ಗೋವಳನು ಗೋವುಗಳನ್ನು ರಕ್ಷಿಸುವುದರಿಂದ ಗೋನಾಯಃ ಎನ್ನಿಸುತ್ತಾನೆ, ಕುದುರೆಯ ಕಾಸ್ಕಾರನು ಕುದುರೆಗಳನ್ನು ಕಾಪಾಡುವುದರಿಂದ ಅಶ್ವನಾಯಃ ಎನಿಸುತ್ತಾನೆ, ರಾಜನು ಅಥವಾ ಸೇನಾಪತಿಯು ಪ್ರಜೆಗಳನ್ನು ಕಾಪಾಡುವುದರಿಂದ ಪುರುಷನಾಯಃ ಎನಿಸುತ್ತಾನೆ ಹೇಗೋ, ಹಾಗೆಯೇ ಭೋಜನ ಮಾಡಲಿಕ್ಕೆ ಪ್ರೇರಕನಾದುದರಿಂದ ಜಲಾಭಿಮಾನಿಯಾದ ಪ್ರಾಣದೇವತೆಯನ್ನು ಅಶನಾಯಾ ಎಂದು ವಿದ್ವಾಂಸರು ಹೇಳುತ್ತಾರೆ. (ಇದರಿಂದ ಜೀವನು ಜಲಾಭಿಮಾನಿಯಾದ ಪ್ರಾಣನ ಅಧೀನನೆಂದು ಸಿದ್ಧಿಸಿದರೂ ಭಗವದಧೀನನೆಂದು ಹೇಗೆ ಸಿದ್ಧಿಸುವುದೆಂದರೆ—) ಎಲೋ ಮಗನೇ ಪಕ್ವವಾದ ಗೋಳೀಬೀಜದಿಂದ ಅಂಕುರ ಹುಟ್ಟಿದಂತೆಯೇ ಉಂಡ ಅನ್ನವು ನೀರಿನಿಂದ ರಸಾದಿ ರೂಪವಾಗಿ ಜೀರ್ಣವಾಗಲು ಅದು ರೇತಸ್ಸಿನ ರೂಪವಾಗಿ ಅದರ ದ್ವಾರಾ ಈ ಪ್ರತ್ಯಕ್ಷಸಿದ್ಧವಾದ

---

* ಅನ್ನಂ ರಸಾದಿರೂಪೇಣ ಪ್ರಾಣಃ ಪರಿಣಯತ್ಯಸೌ ಎಂದು ಪ್ರಮಾಣವು.

ಶಿಶುಶರೀರವನ್ನು ಹುಟ್ಟಿಸುತ್ತದೆ, ಎಂದು ತಿಳಿ. ಈ ಹುಟ್ಟಿದ ಶರೀರವೆಂಬ ಕಾರ್ಯವು ಕರ್ತನು ಇಲ್ಲದಿರುವುದಾಗುವುದಿಲ್ಲವೆಂದೂ ತಿಳಿ, ಆ ಸರ್ವಕರ್ತನು ಈಶ್ವರನೆಂದೇ ತಿಳಿಯಬೇಕು.

ವಿ || (1) (ಜಲಾಭಿಮಾನಿಯಾದ ಪ್ರಾಣನು ತೇಜಸ್ಸಿಗೆ ಅಭಿಮಾನಿನಿಯಾದ ಲಕ್ಷ್ಮೀದ್ವಾರಾ ಶ್ರೀಹರಿಯ ಅಧೀನನು, ಎಂದು ಸಿದ್ಧವೇ ಆಯಿತು.) (2) **ಸದೇವ ಸೋಮ್ಯ** ಇತ್ಯಾದಿಗಳಿಂದ ಶ್ರೀಹರಿಯು ಸರ್ವಜಗತ್ಕರ್ತನಾದುದರಿಂದ ಪ್ರಧಾನನು. ನೀನು ಅವನಿಂದ ಸೃಷ್ಟಿಸಲ್ಪಟ್ಟವನಾದುದರಿಂದ ಅಪ್ರಧಾನನು. ಅದುಕಾರಣ ನೀನು ಆ ಶ್ರೀಹರಿಯಿಂದ ಭಿನ್ನನು, ಅವನ ಅಧೀನನು, ಎಂದು ಹೇಳಿದ ಅರ್ಥದಲ್ಲಿ ಮುಖ್ಯತಾತ್ಪರ್ಯ ಇಟ್ಟುಕೊಳ್ಳಬೇಕೆಂದು ತಿಳಿಸುವುದಕ್ಕಾಗಿ **ತತ್ರೈತಚ್ಛುಂಗಂ** ಇತ್ಯಾದಿಗಳನ್ನು ಹೇಳಿರುವರು. (3) ಭಗವಂತನು ಜಗತ್ಕರ್ತನು ಎಂಬ ವಿಷಯದಲ್ಲಿಯೂ ಸರ್ವರಿಗಿಂತ ಪ್ರಧಾನನು ಎಂಬುವ ವಿಷಯದಲ್ಲಿಯೂ ಅಂಕುರ (ಮೊಳಕೆ) ವೆಂಬ ಕಾರ್ಯವು ಜ್ಞಾಪಕವಾಗುತ್ತದೆ. (4) ಜಗತ್ತೆಂಬ ವೃಕ್ಷದ ಅಂಕುರಕ್ಕೆ ಕಾರಣವಿಲ್ಲವೆಂದಲ್ಲ. ಕಾರಣ ಇದ್ದೇ ಇದೆ. ಆ ಕಾರಣನು ಶ್ರೀಹರಿಯು || ೩ ||

ಪೀ ಹೀಗೆ ಶರೀರವು ಕಾರ್ಯವಾಗಿರುವುದರಿಂದ ಒಬ್ಬ ಕರ್ತನಿರಲೇಬೇಕೆಂದು ತಿಳಿದು ಬೇರೆ ಯಾವುದೂ ಕೂಡದಿರುವುದರಿಂದ ಅನ್ನವೇ ಕಾರಣವಾಗಬೇಕೆನ್ನುತ್ತಾರೆ—

**ಉ. || ತಸ್ಯ ಕ್ವ ಮೂಲꣳ ಸ್ಯಾದನ್ಯತ್ರಾನ್ನಾದೇವಮೇವ ಖಲು ಸೋಮ್ಯಾನ್ನೇನ ಶುಂಗೇನಾಪೋ ಮೂಲಮನ್ವಿಚ್ಛಾದ್ಭಿಃ ಸೋಮ್ಯ ಶುಂಗೇನ ತೇಜೋಮೂಲಮನ್ವಿಚ್ಛ ತೇಜಸಾ ಸೋಮ್ಯ ಶುಂಗೇನ ಸನ್ಮೂಲಮನ್ವಿಚ್ಛ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ || || ೪ ||**

ಅ || ಈ ಕಾರಣದಿಂದ ಶರೀರಕ್ಕೆ ಪೃಥಿವ್ಯಭಿಮಾನಿಯಾದ ರುದ್ರನಿಗಿಂತ ಬೇರೆ ಯಾವುದು ಮೂಲಕಾರಣವಾಗುವುದು? (ಯಾವುದೂ ಆಗಲಾರದು ಅದುಕಾರಣ ಅನ್ನ ಎನಿಸಿದ ಶಿವನೇ ಮೂಲಕಾರಣನು.) (ಅನ್ನವೂ ಕಾರ್ಯವಾಗಿರುವುದರಿಂದ ಅಂಕುರದಂತೆ ಅದಕ್ಕೂ ಕಾರಣವು ಅವಶ್ಯಕವೆಂದರೆ ಅಪ್ (ಜಲವು)ಕಾರಣವು ಎನ್ನುತ್ತಾರೆ-) ಶರೀರಕ್ಕೆ ಕಾರಣವು ಹೇಗೆ ಅವಶ್ಯಕವೋ ಹೀಗೆಯೇ ಅನ್ನವು ಕಾರ್ಯವಾಗಿರುವುದರಿಂದ ಅಂಕುರ ದೃಷ್ಟಾಂತದಿಂದ ಕರ್ತನಾವಶ್ಯಕನೆಂದು ತಿಳಿದು ಅವಕ್ಕೆ ಜಲವು (ಜಲಾಭಿಮಾನಿಯಾದ ಪ್ರಾಣನು) ಕಾರಣನೆಂದು ತಿಳಿ ಎಂದರು. ಹೀಗೆಯೇ ಜಲವೂ ಕಾರ್ಯವಾಗಿರುವುದರಿಂದ ಅಂಕುರ ದೃಷ್ಟಾಂತದಿಂದ ಕರ್ತನು ಇದ್ದಾನೆಂದು ತಿಳಿದು ಅದಕ್ಕೆ ತೇಜಸ್ಸು (ಅಂದರೆ ಪ್ರಾಣನಿಗೆ ತೇಜೋಭಿಮಾನಿನಿಯಾದ ಲಕ್ಷ್ಮೀದೇವಿಯು)ಕಾರಣಳೆಂದು ತಿಳಿ ಎಂದರು. ಹೀಗೆಯೇ ತೇಜಸ್ಸೂ ಕಾರ್ಯವಾಗಿರುವುದರಿಂದ ಅಂಕುರ ದೃಷ್ಟಾಂತದಿಂದ ಕರ್ತನಿದ್ದಾನೆಂದು ತಿಳಿದು ಅವಳಿಗೆ ಪರಬ್ರಹ್ಮನು ಮೂಲಕಾರಣನೆಂದು ತಿಳಿ ಎಂದರು. (ಹಾಗಾದರೆ ಸತ್ ಎನಿಸಿದ ಬ್ರಹ್ಮನು ಲಕ್ಷ್ಮೀದೇವಿಗೆ ಮಾತ್ರ ಕಾರಣನೆಂದಾಯಿತು. ಸರ್ವರಿಗೆ ಕಾರಣನೆಂದಾಗಲಿಲ್ಲ ಎಂದರೆ --) ಎಲೋ ಮಗನೇ ಈ ಎಲ್ಲಾ ಪ್ರಜೆಗಳಿಗೆ ಸತ್ ಎನಿಸಿದ ಪರಬ್ರಹ್ಮನೇ ಕರ್ತನು (ಮೂಲಕಾರಣನು.) ಪರಬ್ರಹ್ಮನೇ ಆಶ್ರಯನು. (ಜೀವರು ಸಂಸಾರದಲ್ಲಿ ಮಾತ್ರ ಶ್ರೀಹರಿಯ ಅಧೀನದಲ್ಲಿ ಇರುವವರೆಂದಲ್ಲ, ಮತ್ತೆ ಮೋಕ್ಷದಲ್ಲಿಯೂ ಕೂಡ ಶ್ರೀಹರಿಯ ಅಧೀನರಾಗಿಯೇ ಇರುತ್ತಾರೆನ್ನುತ್ತಾರೆ ) ಮುಕ್ತರೂ ಕೂಡ ಪರಬ್ರಹ್ಮನೇ ಸ್ಥಾಪಕನಾಗಿ ಉಳ್ಳವರು. ಅಂದರೆ ಪರಬ್ರಹ್ಮನಿಂದಲೇ ನಿಯಮ್ಯ (ಪರಬ್ರಹ್ಮನ ಅಧೀನ)ರಾಗಿರುತ್ತಾರೆ. || ೪ ||

**ಪೀ**— ಹೀಗೆ ಅಶನೇಚ್ಛೆಯ ಸ್ವರೂಪವನ್ನು ಆಲೋಚಿಸಿ ಜೀವರು ಶ್ರೀಹರಿಯ ಅಧೀನರೆಂದು ಹೇಳಿ ಈಗ ಪಾನೇಚ್ಛೆಯ ಸ್ವರೂಪವನ್ನು ಆಲೋಚಿಸಿದರೂ ಜೀವರು ಭಗವದಧೀನರೆಂದು ಸಿದ್ಧಿಸುತ್ತದೆಂದು ಹೇಳುತ್ತಾರೆ—

**ಉ. ॥ ಅಥ ಯತ್ರೈತತ್ಪುರುಷಃ ಪಿಪಾಸತಿ ನಾಮ ತೇಜ ಏವ ತತ್ಪೀತಂ ನಯತೇ ತದ್ಯಥಾ ಗೋನಾಯೋಽಶ್ವನಾಯಃ ಪುರುಷನಾಯ ಇತ್ಯೇವಂ ತತ್ತೇಜ ಆಚಷ್ಟ ಉದನ್ಯೇತಿ ತತ್ರೈತದೇವ ಶುಂಗಮುತ್ಪತಿತಂ ಸೋಮ್ಯ ವಿಜಾನೀಹಿ ನೇದಮಮೂಲಂ ಭವಿಷ್ಯತೀತಿ ॥ ೫ ॥**

ಅ ॥ ಯಾವಾಗ ಸಂಸಾರಿಯು ಪಾನಮಾಡಲಿಚ್ಛಿಸುತ್ತಾನೋ ಆಗ ತೇಜಸ್ಸಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯೇ ಪಾನೇಚ್ಛೆಯನ್ನು ಹುಟ್ಟಿಸಿ ಕುಡಿದ ನೀರು ಮೊದಲಾದುದನ್ನು ರಸವೀರ್ಯಾದಿ ರೂಪವಾಗಿ ಹೊಂದಿಸುತ್ತಾಳೆ........ಹೀಗೆಯೇ ಆ ತೇಜಸ್ಸನ್ನು (ತೇಜಸ್ಸಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯನ್ನು) ಪ್ರಾಣನಿಗೆ ಪ್ರೇರಕಳಾದುದರಿಂದ ಉದನ್ಯಾ ಎಂದು ವಿದ್ವಾಂಸರು ಹೇಳುತ್ತಾರೆ........ ॥ ೫ ॥

**ಪೀ** —ಹಿಂದೆ ಹೇಳಲ್ಪಟ್ಟ ತೇಜಸ್ಸು ಅಪ್, ಅನ್ನಗಳಿಗೆ ಅಭಿಮಾನಿಗಳಾದ ಲಕ್ಷ್ಮೀ ಪ್ರಾಣ ರುದ್ರರು ಶರೀರವನ್ನು ಹೊಂದಿ ಶರೀರದ ರಕ್ತ ಮೊದಲಾದ ಧಾತುಗಳನ್ನು ಹೇಗೆ ಮಾಡುತ್ತಾರೆಂದರೆ ಹಿಂದೆ ಹೇಳಿದುದನ್ನೇ ಇಟ್ಟುಕೊಳ್ಳಬೇಕೆನ್ನುತ್ತಾರೆ—

**ಉ ॥ ತಸ್ಯ ಕ್ವ ಮೂಲಂ ಸ್ಯಾದನ್ಯತ್ರಾದ್ಭ್ಯೋಽದ್ಭಿಃ ಸೋಮ್ಯ ಶುಂಗೇನ ತೇಜೋಮೂಲಮನ್ವಿಚ್ಛ ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾ ಯಥಾ ಖಲು ಸೋಮ್ಯೇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತದುಕ್ತಂ ಪುರಸ್ತಾದೇವ ಭವತ್ಯಸ್ಯ ಸೋಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ ॥ ೬ ॥**

ಅ ॥ ....*... ಜಲಾಭಿಮಾನಿಯಾದ ಪ್ರಾಣನಿಗೆ ತೇಜಸ್ಸಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯು ಮೂಲವೆಂದು ತಿಳಿ. ಅವಳಿಗೆ ಪರಬ್ರಹ್ಮನು ಕಾರಣನು. ........ಎಲೋ ಮಗನೇ ತೇಜಸ್ಸು, ಅಪ್, ಅನ್ನಗಳಿಗೆ ಅಭಿಮಾನಿಗಳಾದ ಲಕ್ಷ್ಮೀ ಪ್ರಾಣ ಶಿವರು ಶರೀರವುಳ್ಳ ಜೀವನನ್ನು ಹೊಂದಿ ಹೇಗೆ ಒಬ್ಬೊಬ್ಬರು ಮೂವರುಮೂವರಿಂದ ಕೂಡುತ್ತಾರೋ, ಆ ಪ್ರಮೇಯವನ್ನು ಮೊದಲೇ **ಅನ್ನಮಶಿತಂ ತ್ರೇಧಾ ವಿಧೀಯತೇ** ಇತ್ಯಾದಿಗಳಿಂದ ಹೇಳಿರುತ್ತದೆ. ಅದನ್ನೇ ಇಲ್ಲಿಯೂ ಇಟ್ಟುಕೊಳ್ಳಬೇಕು. (ಏವಂಚ ಶ್ರೀಹರಿಯು ಲಕ್ಷ್ಮ್ಯಾದಿಗಳಿಗೂ ನಿಯಾಮಕನಾಗಿರುವುದರಿಂದ ಅವಶ್ಯವಾಗಿ ಆತನನ್ನು ಮೋಕ್ಷವನ್ನು ಬಯಸುವವನು ತಿಳಿದು ಧ್ಯಾನಿಸಲೇಬೇಕು.) (ಮೋಕ್ಷದಲ್ಲಿ ದೇವತೆಗಳು ಶ್ರೀಹರಿಯ ಅತಿ ಸಾಮೀಪ್ಯವನ್ನು ಹೊಂದುತ್ತಾರೆ ಆದುಕಾರಣ ಜೀವರು ಶ್ರೀಹರಿಯ ಅಧೀನರೆಂದು ಸಿದ್ಧವಾಯಿತೆಂಬ ಅಭಿಪ್ರಾಯದಿಂದ ದೇವತೆಗಳ ದೇಹವು ಲಯವಾಗುವ ಪ್ರಕಾರವನ್ನು ಹೇಳುತ್ತಾರೆ—) (ಅಥವಾ ಮರಣ ಮುಕ್ತಿಗಳು

---

* ಹಿಂದಿನಂತೆಯೇ ಅರ್ಥ ಇಟ್ಟುಕೊಳ್ಳಬೇಕು.

ಎರಡೂ ಈಶ್ವರನ ಅಧೀನಗಳಾಗಿರುವುದರಿಂದ ನೀನು ಈಶ್ವರನಿಂದ ಅಭಿನ್ನನಲ್ಲ ಭಿನ್ನನೇ ಎನ್ನುತ್ತಾರೆ.) ಚತುರ್ಮುಖನು ಮುಕ್ತನಾಗುವಾಗ (ಅಂದರೆ ಚತುರ್ಮುಖನಿಗೆ ಮುಕ್ತಿಕಾಲವು ಬಂದಾಗ) ಎಲ್ಲಾ ದೇವತೆಗಳೂ ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಪಾರ್ವತಿಯಲ್ಲಿಯೂ, ಅವಳು ಮನಸ್ಸಿಗೆ ಅಭಿಮಾನಿಯಾದ ರುದ್ರನಲ್ಲಿಯೂ, ರುದ್ರನು ಮುಖ್ಯಪ್ರಾಣನಲ್ಲಿಯೂ ಸೇರುತ್ತಾರೆ (ಅಂದರೆ ವಿಶೇಷವಾಗಿ ಅವರ ಅಧೀನರಾಗಿರುತ್ತಾರೆ.) ಆತನು ಲಕ್ಷ್ಮೀದೇವಿಯಲ್ಲಿಯೂ ಸೇರುತ್ತಾನೆ. (ಚತುರ್ಮುಖನಿಗೆ ಶ್ರೀಹರಿಯನ್ನು ಹೊಂದಲಿಕ್ಕೆ ಲಕ್ಷ್ಮೀದೇವಿಯು ದ್ವಾರ ಮಾತ್ರ ಅಂದರೆ ಅವಳ ಮೂಲಕ ಚತುರ್ಮುಖನು ಶ್ರೀಹರಿಯನ್ನು ಹೊಂದುವನು) ಲಕ್ಷ್ಮೀದೇವಿಯು ಶ್ರೀಹರಿಯಲ್ಲಿ ಸೇರುವಳು. (ಅಂದರೆ **ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ** ಎಂಬ ಸ್ಮೃತಿಯಿಂದ ಲಕ್ಷ್ಮಿಗೆ ಲಯವೆಂದರೆ ಶ್ರೀಹರಿಯ ಅತಿಸಮೀಪದಲ್ಲಿ ಇರುವುದೇ, ಬೇರೆಯಲ್ಲ.) (ಅಥವಾ ಜೀವರೆಲ್ಲರೂ ಸಾಯುವಾಗಲೂ ಶ್ರೀಹರಿಯ ಅಧೀನದಲ್ಲಿಯೇ ಇರುತ್ತಾರೆಂದು ತಿಳಿಯಬೇಕೆಂಬ ಅಭಿಪ್ರಾಯದಿಂದ ತತ್ತ್ವಾಭಿಮಾನಿಗಳಾದ ದೇವತೆಗಳು ಜೀವರ ಶರೀರದಲ್ಲಿ ವ್ಯಾಪಾರಮಾಡುತ್ತಿದ್ದರೆ ಜೀವರಿಗೆ ಮರಣವೇ ಕೂಡಲಾರದು ಅದುಕಾರಣ ಆಯಾಯ ದೇವತೆಗಳ ವ್ಯಾಪಾರವು ಶರೀರದಲ್ಲಿ ಅವಸಾನವಾಗುವ ಪ್ರಕಾರ ಹೇಳುತ್ತಾರೆ–) ಸಾಯಲು ಸನ್ನದ್ಧನಾದ ಮನುಷ್ಯನ ವಾಗಿಂದ್ರಿಯವು ಮನಸ್ಸಿನಲ್ಲಿಯೂ, ವಾಗಭಿಮಾನಿನಿಯಾದ ಪಾರ್ವತಿಯು ಮನಸ್ಸಿಗೆ ಅಭಿಮಾನಿಯಾದ ರುದ್ರನಲ್ಲಿಯೂ ಸೇರುತ್ತಾಳೆ. (ಅಂದರೆ ವಾಗಿಂದ್ರಿಯದ ವ್ಯಾಪಾರವು ಇಲ್ಲದೆ ಹೋಗುತ್ತದೆ.) ಹೀಗೆಯೇ ರುದ್ರನು ಪ್ರಾಣನಲ್ಲಿಯೂ, ಪ್ರಾಣನು ಲಕ್ಷ್ಮೀದೇವಿಯಲ್ಲಿಯೂ, ಲಕ್ಷ್ಮೀದೇವಿಯು ಶ್ರೀಹರಿಯಲ್ಲಿಯೂ ಸೇರುತ್ತಾರೆ. (ಹೀಗೆ ಮನುಷ್ಯರು ಸಾಯುವಾಗ ವಾಗ್ದೇವಿಯಾದ ಪಾರ್ವತಿಯನ್ನು ಹೊಂದಿ ಪರಂಪರೆಯಿಂದ ಈಶ್ವರನನ್ನು ಹೊಂದುತ್ತಾರೆ) || ೬ ||

ಟೀ—ಹೀಗೆ ಸರ್ವಪ್ರಕಾರದಿಂದಲೂ ಜೀವನು ಶ್ರೀಹರಿಯ ಅಧೀನನಾಗಿರುವುದರಿಂದ ಜೀವನು ಈಶ್ವರನಿಂದ ಅಭಿನ್ನನು ಎಂದು ಶಂಕಾಮಾಡಕೂಡದು, ಎಂದು ಹೇಳಿದರು. ಈಗ ಶ್ರೀಹರಿಯು ಸರ್ವರಿಗೆ ನಿಯಾಮಕನಾಗಿರುವುದರಿಂದಲೂ ಶ್ವೇತಕೇತುವಿಗೆ ನೀನು ಈಶ್ವರನಲ್ಲವೆನ್ನುತ್ತಾರೆ—

**ಉ. || ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯಂ ಸ ಆತ್ಮಾತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ || ಇತ್ಯಷ್ಟಮಃ ಖಂಡಃ ||೮-೮|| || ೭ ||**

ಅ || ಪರದೇವತೆಯಾದ ಶ್ರೀವಿಷ್ಣುವು ಸರ್ವರಿಗಿಂತ ಶ್ರೇಷ್ಠನಾದುದರಿಂದ **ಸಃ** ಎಂದೂ, ನಿಯಾಮಕನಾದುದರಿಂದ ಅಥವಾ ಜ್ಞಾನಸ್ವರೂಪನಾದುದರಿಂದ **ಯಃ** ಎಂದೂ, ಸರ್ವರಿಗೆ ಪ್ರಿಯನಾದುದರಿಂದ ಅಥವಾ ಸತ್ಯಸಂಕಲ್ಪನಾದುದರಿಂದ **ಏಷಃ** ಎಂದೂ, ಸೂಕ್ಷ್ಮಜ್ಞಾನಕ್ಕೆ ವಿಷಯನಾದುದರಿಂದ ಅಣಿಮಾ ಎಂದೂ, ಅನ್ನಿಸುತ್ತಾನೆ. ಈ ಜಗತ್ತೆಲ್ಲವೂ ಶ್ರೀಹರಿಯೇ ಸ್ವಾಮಿಯಾಗಿ ಉಳ್ಳದ್ದು. ಅಥವಾ ಶ್ರೀಹರಿಯ ಅಧೀನದಲ್ಲಿಯೇ ಇರುವುದು. ಆ ಶ್ರೀಹರಿಯು ಸರ್ವತ್ರವ್ಯಾಪ್ತನಾದುದರಿಂದ **ತತ್** ಎಂದೂ, ಉತ್ಕೃಷ್ಟ ಆನಂದ ಸ್ವರೂಪನಾದುದರಿಂದ ಅಥವಾ ಸಾಧುಸ್ವರೂಪನಾದುದರಿಂದ ಸತ್ಯನೆಂದೂ, ದುರ್ಜನರನ್ನು ನಾಶಗೊಳಿಸುವುದರಿಂದ **ಸಃ** ಎಂದೂ ಪೂರ್ಣಗುಣಗಳುಳ್ಳವನಾದುದರಿಂದ **ಆತ್ಮಾ** ಎಂದೂ ಎನಿಸುತ್ತಾನೆ. ಆದಕಾರಣ ಎಲೋ ಶ್ವೇತಕೇತುವೇ ನಿನ್ನಲ್ಲಿ ಶ್ರೀಹರಿಯಲ್ಲಿರುವ ಗುಣಗಳು ಯಾವುದೂ ಇಲ್ಲದಿರುವುದರಿಂದ (ನೀನು ಯಥಾರ್ಥವಾಗಿಯೂ ಆ ಶ್ರೀಹರಿಯಿಂದ ಭಿನ್ನನು ಆಗಿರುತ್ತಿ. ಹೀಗೆ ತಂದೆಯು ಹೇಳಿದಾಗ ಮಗನು ಎಲೋ ತಂದೆಯೇ **ಸ ಯಃ** ಇತ್ಯಾದಿಗಳಿಂದ ಶ್ರೀಹರಿಯು ನಿಯಾಮಕನಾಗಿ ಜೀವರಲ್ಲಿ ಇದ್ದಾನೆಂದೂ, **ಸತಾ ಸೋಮ್ಯ** ಇತ್ಯಾದಿಗಳಿಂದ ಸುಷುಪ್ತಿಯಲ್ಲಿ ಹೊಂದಲ್ಪಡುವವನೆಂದೂ ಹೇಳಿರು

ವಿರಿ, ಹಾಗಾದರೆ ಶ್ರೀಹರಿಯು ಏಕೆ ಕಾಣುವುದಿಲ್ಲ.) ಅದನ್ನು ಹೇಳಿರಿ, ಎಂದನು. ಆಗ ತಂದೆಯು ನೀನು ಕೇಳಿದ ಪ್ರಮೇಯಕ್ಕೆ ಉತ್ತರ ಹೇಳುತ್ತೇನೆಂದು ಹೇಳಿದನು. ॥ ೭—೮ ॥　　॥ ೭ ॥

ಪೀ—ಪೂರ್ವದಲ್ಲಿ ಜೀವೇಶ್ವರರಿಗೆ ಅತ್ಯಂತ ಭೇದವನ್ನು ತಿಳಿಸುವುದಕ್ಕಾಗಿ ಶ್ರೀಹರಿಯೊಬ್ಬನೇ ಲಕ್ಷ್ಮೀಪ್ರಾಣ ರುದ್ರ ಮೊದಲಾದವರಿಗೆಲ್ಲಾ ನಿಮಿತ್ತಕಾರಣನು. ಜೀವನು ಸರ್ವರಿಗೆ ಕಾರಣನೆಂಬುವುದು ಸರ್ವಥಾ ಕೂಡಲಾರದು, ಇಂತಹ ಮಹಾಮಹಿಮೆಯನ್ನು ಹೇಳಿರುವರು. ಇದನ್ನು ವೇದದಿಂದ ಮಾತ್ರ ತಿಳಿಯಬೇಕಲ್ಲದೆ ಇದು ಪ್ರತ್ಯಕ್ಷಾನುಭವಕ್ಕೆ ಬರಲಾರದು. ಅದುಕಾರಣ ಜಾಗ್ರದವಸ್ಥೆಯಲ್ಲಿ ಜೀವರಿಗೆ ನಾವು ಸ್ವತಂತ್ರರೆಂಬ ಅಭಿಮಾನವಿರುತ್ತದೆ. ಗಾಢನಿದ್ದೆಯಲ್ಲಿ ಆ ಅಭಿಮಾನವಿರುವುದಿಲ್ಲ. ಅದು ಕಾರಣ ಆ ಸುಷುಪ್ತಿಯಲ್ಲಿ ಜೀವನು ಶ್ರೀಹರಿಯನ್ನು ಆಶ್ರಯಿಸಿರುತ್ತಾನೆಂಬುದನ್ನು ಅನುಭವಕ್ಕೆ ತರುವುದಕ್ಕಾಗಿ ಈ ಖಂಡವು ಹೊರಟದ್ದು—

**ಭಾ. ॥ (೧) ಸ್ವಪ್ನಸ್ಯಾಂತಃ ಸುಷುಪ್ತಿಃ ॥ (೨) ಸ್ವಾತಂತ್ರ್ಯಾತ್ಸ್ವಸ್ತ್ವ ಇತಿ ಪ್ರೋಕ್ತೋ ವಿಷ್ಣುಃ ಸರ್ವೇಶ್ವರೇಶ್ವರಃ । ತಂ ಪ್ರಾಪ್ನೋತಿ ಮನೋನಾಮಾ ಸಂಸಾರೀ ಸ್ವಪಿತೀತ್ಯತಃ ॥ ಇತಿ ಚ ॥ (೩) ಮನನಾನ್ಮನೋನಾಮಾ ಸಂಸಾರೀ ॥ (೪) ಶುಂಗಮಿತ್ಯಂಕುರಂ ಪ್ರೋಕ್ತಂ ತನ್ಮೂಲಂ ಭಗವಾನ್ಹರಿಃ । ಜಗತೋ ಮೂಲಮಪ್ಯೇಷ ನಿಮಿತ್ತಂ ನ ವಿಕಾರವಾನ್ ॥ (೫) ಬೀಜಜೀವೋ ಯಥಾ ಮೂಲಮಂಕುರಸ್ಯಾವಿಕಾರತಃ । ಯಥಾ ಪಿತಾ ಪುತ್ರತನ್ವಾಸ್ತದ್ದೇಹೋ ಹಿ ವಿಕಾರವಾನ್ । ಏವಂ ಹರಿರ್ಮೂಲಮಪಿ ನ ವಿಕಾರೀ(ರೀ) ಕಥಂಚನ ॥ ಇತಿ ಚ**　　॥ ೧ ॥

ಅ ॥ (೧) (ಇಲ್ಲಿ **ಸ್ವಪ್ನಾಂತ ಉಚ್ಚಾವಚಮೀಯಮಾನಃ** ಇತ್ಯಾದಿಗಳಲ್ಲಿದ್ದಂತೆ **ಸ್ವಪ್ನಾಂತ** ಶಬ್ದದಿಂದ ಸ್ವಪ್ನಾವಸ್ಥೆಯನ್ನು ಇಟ್ಟುಕೊಂಡರೆ **ಸತಾ ಸೋಮ್ಯ ತದಾ ಸಂಪನ್ನೋ ಭವತಿ** ಎಂಬ ಮೇಲಿನ ವಾಕ್ಯವು ಕೂಡದೇ ಹೋಗುವುದು. ಏಕೆಂದರೆ—ಸ್ವಪ್ನಾವಸ್ಥೆಯಲ್ಲಿ ಪರಮಾತ್ಮ ಪ್ರವೇಶವಿಲ್ಲ, ಎಂದರೆ—ಸ್ವಪ್ನಾಂತ ಶಬ್ದಕ್ಕೆ ಅರ್ಥಹೇಳುತ್ತಾರೆ—) ಸ್ವಪ್ನದ ಅವಸಾನವು ಸುಷುಪ್ತಿಯು (ಗಾಢನಿದ್ದೆ) (ಸ್ವಪ್ನವಾದ ಮೇಲೆ ಸುಷುಪ್ತಿ. ಆ ಮೇಲೆ ಜಾಗ್ರದವಸ್ಥೆ. ಹೀಗೆ ಮೂರು ಅವಸ್ಥೆಗಳು. ಈ ಕ್ರಮವನ್ನು ಇಟ್ಟುಕೊಂಡು ಹೀಗೆ ಹೇಳಿದ್ದು.) (೨) (**ಸ್ವಮಪೀತೋ ಭವತಿ** ಎಂಬುವಲ್ಲಿ ಜೀವನು ಸ್ವರೂಪಭೂತನಾದ ಪರಬ್ರಹ್ಮನನ್ನು ಹೊಂದುತ್ತಾನೆಂದು ಬ್ರಹ್ಮನಲ್ಲಿ **ಸ್ವ** ಎಂಬ ಶಬ್ದಪ್ರಯೋಗ ಇದ್ದುದರಿಂದ ಐಕ್ಯವೆಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ **ಸ್ವ** ಎಂಬ ಶಬ್ದದ ಅರ್ಥ ಹೇಳುತ್ತಾರೆ—) ಸರ್ವರಿಗೆ ನಿಯಾಮಕರಾದ ರುದ್ರಾದಿಗಳಿಗೆ ನಿಯಾಮಕನಾದ ಶ್ರೀವಿಷ್ಣುವು ಸರ್ವಸ್ವತಂತ್ರನಾದುದರಿಂದ ಸ್ವ ಎನಿಸುತ್ತಾನೆ. ಮನಃ ಎನಿಸಿದ ಸಂಸಾರಿಯು ಪ್ರಾಣನೆನಿಸಿದ ಆ ಶ್ರೀಹರಿಯನ್ನು ಹೊಂದುತ್ತಾನೆ. ಅದು ಕಾರಣ ಜೀವನನ್ನು ಸ್ವಪಿತಿ ಎಂದು ಜ್ಞಾನಿಗಳು ಹೇಳುತ್ತಾರೆ. (೩) (ಮನಃ ಎನಿಸಿದವನು ಸಂಸಾರಿಯು. ಪ್ರಾಣ ಎನಿಸಿದವನು ಶ್ರೀಹರಿಯು ಎಂದು ಹೇಳಿದ್ದು ಅಯುಕ್ತವು ಆ ಪದಗಳಿಗೆ ಆ ಅರ್ಥಗಳಲ್ಲಿ ರೂಢಿ (ಪ್ರಸಿದ್ಧಿ) ಇಲ್ಲ, ಎಂದರೆ ಯೋಗ (ಅವಯವಾರ್ಥ) ವನ್ನು ತೋರಿಸುತ್ತಾರೆ—) ತಿಳಿದುಕೊಳ್ಳುವುದರಿಂದ ಮನಃ ಎನಿಸಿದವನು ಸಂಸಾರಿಯು (ಚೇಷ್ಟೆಯನ್ನು ಮಾಡಿಸುವುದರಿಂದ ಶ್ರೀಹರಿಯು ಪ್ರಾಣನೆನಿಸಿದವನು.) (ಯೋಗ ವೃತ್ತಿಯು *ಲಕ್ಷಣಾ (ಅಮುಖ್ಯ)ವೃತ್ತಿಯಿಂದ ಪ್ರಧಾನವೆಂದು ಹೇಳಿದ ಕಾರಣ ಮನಃ ಪ್ರಾಣ ಶಬ್ದಗಳಿಂದ ಮನಃ ಪ್ರಾಣರಲ್ಲಿ ಪ್ರವೇಶಮಾಡಿದ ಜೀವ ಪರಮಾತ್ಮರನ್ನು ಲಕ್ಷಣಾ

* ಗಂಗಾಯಾಂ ಘೋಷಃ=ಗಂಗೆಯ ತೀರದಲ್ಲಿ ಗೊಲ್ಲರ ಕೇರಿ ಎಂಬುವುದು ಲಕ್ಷಣಾ ವೃತ್ತಿಯಿಂದ ಸಿದ್ಧವಾದ ಅರ್ಥವು. ಶಕ್ಯ ಸಂಬಂಧವು ಲಕ್ಷಣಾ ಎನಿಸುತ್ತದೆ ಶಕ್ಯಾರ್ಥವು ಪ್ರವಾಹವು. ತೀರವು ಲಕ್ಷ್ಯಾರ್ಥವು ಶಬ್ದದಿಂದ ಸಿಗತಕ್ಕ ಅರ್ಥವಲ್ಲ.

ವೃತ್ತಿಯಿಂದ ಇಟ್ಟುಕೊಳ್ಳಬೇಕೆಂಬುದು ಅಯುಕ್ತವೆಂದು ಸಿದ್ಧವಾಯಿತು) (೪) (**ತತ್ರೈತಚ್ಛುಂಗಮುತ್ಪತಿತಂ** ಎಂಬುವಲ್ಲಿದ್ದ ಶುಂಗಶಬ್ದಾರ್ಥವನ್ನು ಹೇಳುತ್ತಾರೆ—) ಶುಂಗವು ಎಂದರೆ ಅಂಕುರವೆನಿಸುತ್ತದೆ. ಅದಕ್ಕೆ ಮೂಲಕಾರಣನು ಶ್ರೀ ಭಗವಂತನು. (ಅಂಕುರವು ಘಟದಂತೆ ಕಾರ್ಯವಾಗಿರುವುದರಿಂದ ಮೂಲಕಾರಣವು ಆವಶ್ಯಕವೇ) ಶ್ರೀಹರಿಯ ಶರೀರ ಅನ್ನ ಅಪ್ ತೇಜಸ್ಸುಗಳಿಗೆ ಅನ್ನಾದಿಗಳ ಮೂಲಕ ನಿಮಿತ್ತ ಕಾರಣನೂ (ಅಂಕುರಕ್ಕೂ ಜಗತ್ತಿಗೂ ಶ್ರೀಹರಿಯು ಉಪಾದಾನಕಾರಣನು (ಪರಿಣಾಮಕಾರಣನು) ಎಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ—) ಅಂಕುರಕ್ಕೂ ಜಗತ್ತಿಗೂ ಶ್ರೀಹರಿಯು ಕಾರಣನಾದರೂ ನಿಮಿತ್ತಕಾರಣನು. ಆಗಿರುತ್ತಾನೆ ವಿಕಾರವುಳ್ಳವನಲ್ಲ, (ಅಂದರೆ ಶ್ರೀಹರಿಯು ಜಗದ್ರೂಪವಾಗಿ ಪರಿಣಾಮವನ್ನು ಹೊಂದುವವನಲ್ಲ.) (೫) (ಹಾಗಾದರೆ ಅಂಕುರಾದಿಗಳಿಗೆ ಉಪಾದಾನ ಕಾರಣವಾದ ಬೀಜಾದಿಗಳಲ್ಲಿಯೇ **ಮೂಲ** ಎಂಬ ಶಬ್ದಪ್ರಯೋಗವು ಕಂಡದೆ. ನಿಮಿತ್ತ ಕಾರಣದಲ್ಲಿ **ಬೀಜ** ಎಂಬ ಶಬ್ದಪ್ರಯೋಗವು ಕಾಣುವುದಿಲ್ಲ, ಎಂದರೆ -ಎರಡು ದೃಷ್ಟಾಂತಗಳಿಂದ ನಿಮಿತ್ತ ಕಾರಣನಲ್ಲಿಯೂ ಬೀಜ ಶಬ್ದ ಪ್ರಯೋಗವಿದೆ ಎನ್ನುತ್ತಾರೆ—) (1) ಬೀಜದಲ್ಲಿದ್ದ ಜೀವನು ಹೇಗೆ ಅಂಕುರಕ್ಕೆ ನಿರ್ವಿಕಾರನಾಗಿ (ತಾನು ಪರಿಣಾಮಿಯಾಗದೆ) ನಿಮಿತ್ತಕಾರಣನೋ, (2) ಪಿತೃಜೀವನು ಮಗನ ಶರೀರಕ್ಕೆ ವಿಕಾರವಿಲ್ಲದೇನೇ ಹೇಗೆ ಕಾರಣನೋ, ಹೀಗೆಯೇ ಶ್ರೀಹರಿಯು ನಿಮಿತ್ತ ಕಾರಣನು. (ಹಾಗಾದರೆ ಅವುಗಳಿಗೆ ವಿಕಾರ ಕಾರಣವು (ಉಪಾದಾನ ಕಾರಣವು) ಯಾವುದೆಂದರೆ—) ಬೀಜದಲ್ಲಿರತಕ್ಕ ಜೀವನ ದೇಹವಾದ ಬೀಜವು ಅಂಕುರಕ್ಕೆ ಉಪಾದಾನ ಕಾರಣವು. ತಂದೆಯ ಶರೀರವು ಅಂದರೆ-ರೇತೋರೂಪವಾದ ಪಿತೃಶರೀರದ ಧಾತುವು ಮಗನ ಶರೀರಕ್ಕೆ ಉಪಾದಾನ ಕಾರಣವು. ಶ್ರೀಹರಿಯು ಜಗತ್ತಿಗೆ ನಿಮಿತ್ತ ಕಾರಣನಲ್ಲದೆ ಹೇಗೂ ವಿಕಾರಕಾರಣನು ಆಗಲಾರನು.

ವಿ || **ಸನ್ಮೂಲಾಃ ಸೋಮ್ಯ** ಎಂಬುದಕ್ಕೆ ಮಡಿಕೆಗೆ ಮಣ್ಣು ಉಪಾದಾನ ಕಾರಣವು. (ಅಂದರೆ ಮಣ್ಣೇ ಮಡಿಕೆಯಾಗುವುದು.) ಹಗ್ಗದಲ್ಲಿ ಹಾವು ಎಂಬುದು ಅವಿದ್ಯೆಯಿಂದ ಆರೋಪಿತವು) ಅದರಂತೆಯೇ ಸತ್ ಎನಿಸಿದ ಪರಬ್ರಹ್ಮನೇ ಸ್ಥಾವರ ಜಂಗಮ ಸಮಸ್ತಪ್ರಾಣಿಗಳಿಗೆ ಉಪಾದಾನ ಕಾರಣನು. ಅಂದರೆ—ಬ್ರಹ್ಮನೇ ಜಗದ್ರೂಪವಾಗಿ ಪರಿಣಾಮ ಹೊಂದುತ್ತಾನೆ, ಎಂದು ಅದ್ವೈತಿಗಳು ಅರ್ಥಹೇಳಿರುವರು. ಅದು ಹಿಂದೆ ಹೇಳಿದ ಪ್ರಮಾಣಗಳಿಂದ ಅಯುಕ್ತವೆಂದು ಸಿದ್ಧವಾಯಿತು. ಮತ್ತು **ಮೂಲ** ಎಂಬ ಶಬ್ದಕ್ಕೆ ಉಪಾದಾನ ಕಾರಣವೆಂಬುವುದೇ ಅರ್ಥವೆಂದಲ್ಲ. ಪರಂತು ಕಾರಣವೆಂದಿಷ್ಟು ಮಾತ್ರ ಅರ್ಥವು. ಆಗ ವೇದಾದಿ ಪ್ರಮಾಣಗಳನ್ನು ಅನುಸರಿಸಿ ಬೀಜಜೀವನು ಅಂಕುರಕ್ಕೆ ಹೇಗೆ ನಿಮಿತ್ತಕಾರಣನೋ ಹಾಗೆಯೇ ಶ್ರೀಹರಿಯು ನಿಮಿತ್ತಕಾರಣನೆಂದೇ ತಿಳಿಯಬೇಕು. (2) ಮತ್ತು **ಘಟಸ್ಯ ಮೃದಿವ** ಮಡಿಕೆಗೆ ಮಣ್ಣಿನಂತೆ ಎಂಬುವುದೂ ಅಯುಕ್ತವು ಏಕೆಂದರೆ ಅದ್ವೈತಿಗಳ ಮತದಲ್ಲಿ ಶುದ್ಧಬ್ರಹ್ಮನು ಉಪಾದಾನಕಾರಣನಲ್ಲ. (3) ಮಾಯಾವಿಶಿಷ್ಟನಾದ ಬ್ರಹ್ಮನು ಜಗತ್ತಿಗೆ ಉಪಾದಾನ ಕಾರಣನು ಎಂಬುವಲ್ಲಿ ಘಟಸ್ಯ ಮೃದಿವ ಎಂಬುವುದು ೧ನೇ ದೃಷ್ಟಾಂತವು. ಶುದ್ಧ ಬ್ರಹ್ಮನು ಜಗತ್ತಿಗೆ ಉಪಾದಾನ ಕಾರಣನು ಎಂಬುವಲ್ಲಿ ಭುಜಂಗಸ್ಯ ರಜ್ಜುರಿವ ಎಂಬುವುದು ೨ನೇ ದೃಷ್ಟಾಂತವು, ಎಂದು ಹೇಳಕೂಡದು. (1) ಮಾಯೆಯೇ ಜಗತ್ತಿಗೆ ಉಪಾದಾನ ಕಾರಣವೆಂದು ಕೂಡುವಾಗ ಬ್ರಹ್ಮನಿಗೂ ಉಪಾದಾನಕಾರಣತ್ವವಿದೆ ಎಂಬುವಲ್ಲಿ ಪ್ರಮಾಣವಿಲ್ಲ, ಆ ವಿಷಯದಲ್ಲಿ ವೇದಾದಿಪ್ರಮಾಣಗಳಿಲ್ಲವೆಂದು ಬೇರೆ ಕಡೆ ಹೇಳಿದೆ. (2) ಭುಜಂಗಸ್ಯ ರಜ್ಜುರಿವ ಎಂಬುವುದೂ ಅಯುಕ್ತವು. ಹಗ್ಗವನ್ನು ನೋಡಿ ಹಾವು ಎಂದು ಜ್ಞಾನ ಬರುವಾಗ ಹಗ್ಗದಲ್ಲಿ ಹಾವಿಗೆ ಆರೋಪವು. ಹಗ್ಗವು ಅಧಿಷ್ಠಾನವು. ಹೀಗೆ ರಜ್ಜುವಿನಲ್ಲಿ ಸರ್ಪಾರೋಪಕ್ಕೆ ರಜ್ಜುವು ಅಧಿಷ್ಠಾನವು, ಎಂದು ವ್ಯವಹಾರವು ಇದ್ದರೂ ಅದು ಉಪಾದಾನಕಾರಣವೆಂದು ವ್ಯವಹಾರವಿಲ್ಲ. || ೧ ||

ಪೀ—**ತಸ್ಯ ಕ್ವ ಮೂಲಂ ಸ್ಯಾದನ್ಯತ್ರಾನ್ನಾತ್** ಇತ್ಯಾದಿಗಳಲ್ಲಿ ಶರೀರಕ್ಕೆ ಅನ್ನವು, ಅದಕ್ಕೆ ನೀರು,

ಆದಕ್ಕೆ ತೇಜಸ್ಸು ಮೂಲವು ಎಂದು ಹೇಳುತ್ತದೆ. ಮೂಲವೆಂದರೆ ಉಪಾದಾನಕಾರಣವೆಂದೇ **ಹೇಳ** ಬೇಕು. ಏವಂಚ **ತೇಜಸಾ ಸೋಮ್ಯ ಶುಂಗೇನ ಸನ್ಮೂಲಮನ್ವಿಚ್ಛ** ಏಂಬುವಲ್ಲಿಯೂ **ಸತ್** ಎನಿಸಿದವನು ಜಗತ್ತಿಗೆ ಉಪಾದಾನಕಾರಣನೆಂದೇ ಹೇಳಬೇಕು, ಎಂದು ಪರರು ಹೇಳುವುದೂ ಅಯುಕ್ತವು. ಅನ್ನ ಮೊದಲಾದ ಶಬ್ದಗಳಿಂದ ದೇವತೆಗಳನ್ನೇ ಇಟ್ಟುಕೊಳ್ಳಬೇಕಾಗಿರುವುದರಿಂದ ಅವರು ಶರೀರಾದಿಗಳಿಗೆ ಉಪಾದಾನಕಾರಣರು ಆಗಲಾರರು ಏಕೆಂದರೆ— **ಯಥಾ ಖಲು ಸೋಮ್ಯೇಮಾಸ್ತಿಸ್ರೋ ದೇವತಾಃ** ಎಂದು ದೇವತಾಶಬ್ದಪ್ರಯೋಗವಿದೆ, ಎಂದು ಇನ್ನೊಂದು ಹೇತುವನ್ನು ಹೇಳುತ್ತಾರೆ—

**ಭಾ. ॥ (೧) ಪ್ರಾಥಮ್ಯಾಚ್ಚ ತೇಜಆದ್ಯಾ ಲಕ್ಷ್ಮ್ಯಾದಯ ಇತಿ ಸಿದ್ಧಂ ॥ (೨) ತೇಜೋಽಭಿಮಾನಿನೀ ಲಕ್ಷ್ಮೀಃ ಪ್ರಾಣಸ್ತ್ವಬಭಿಮಾನವಾನ್ । ಅನ್ನಾಭಿಮಾನೀ ರುದ್ರಶ್ಚ ತಿಸ್ರಸ್ತಾ ದೇವತಾಃ ಪುರಾ ॥ ಇತಿ ಚ ಬ್ರಹ್ಮಾಂಡೇ ॥ (೩) ಯತ್ರೈತತ್ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತೀತಿ ಸಂಸಾರಿಣೋ ಬ್ರಹ್ಮಪ್ರಾಪ್ತಿಮುಕ್ತ್ವಾ ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧ ಇತಿ ತಸ್ಯೋಪಪಾದನಾನ್ಮನೋನಾಮಾ ಪುರುಷಃ । ಪ್ರಾಣನಾಮಾ ಭಗವಾನ್ ॥ (೪) ಸನ್ಮೂಲಾಃ ಸೋಮ್ಯೇಮಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾ ಇತ್ಯುಪಸಂಹಾರಾತ್ ॥ (೫) ಪ್ರಜಾಶಬ್ದಶ್ಚ ಚೇತನೇಷ್ವೇವ ಪ್ರಸಿದ್ಧಃ । ಪ್ರಜಾನಾಂ ಸುಖದುಃಖೇನ ರಾಜಾಽಽಪ್ನೋತಿ ಶುಭಾಶುಭಂ ॥ ಇತ್ಯಾದೇಶ್ಚ ॥೨॥**

**ಅ** ॥ (೧) ಕ್ರಮವಾಗಿ ಪ್ರಥಮದಲ್ಲಿ ಹುಟ್ಟಿದ ಪ್ರಯುಕ್ತವೂ, ಹಿಂದೆ ಹೇಳಿದ ವೇದಾದಿ ಪ್ರಮಾಣಗಳಿಂದಲೂ ತೇಜಸ್ಸು ಮೊದಲಾದ ಶಬ್ದಗಳಿಂದ ಹೇಳಲ್ಪಡುವವರು ಲಕ್ಷ್ಮೀ ಪ್ರಾಣ ರುದ್ರರೆಂದು ಸಿದ್ಧವಾಯಿತು. ((1) ಇಲ್ಲಿ ಲಕ್ಷ್ಮೀದೇವಿಗೆ ಸೃಷ್ಟಿಯೆಂದರೆ— **ಸಿಸೃಕ್ಷುತ್ವವಿಶೇಷಂ ತತ್ಸಾಕ್ಷಾದ್ಭಗವದಿಚ್ಛಯಾ । ಪ್ರಾಪ್ತ್ಯೈವ ಸೃಷ್ಟೇತ್ಯುದಿತಾ** ಎಂಬ ಪ್ರಮಾಣದಿಂದ ಸಾಕ್ಷಾತ್ ಶ್ರೀಹರಿಯ ಇಚ್ಛೆಯನ್ನನುಸರಿಸಿ, ತಾನು ಜಗತ್ತನ್ನು ಸೃಷ್ಟಿಸುತ್ತೇನೆ, ಎಂಬ ಇಚ್ಛಾವಿಶೇಷವನ್ನು ಹೊಂದುವುದೇ, ಬೇರೆಯಲ್ಲ (2) ಆದಿಸೃಷ್ಟಿಯಲ್ಲಿ ಶ್ರೀಭಗವಂತನು ಕ್ರಮವಾಗಿ ತೇಜಸ್ಸು ಮೊದಲಾದುದನ್ನು ಪ್ರಥಮದಲ್ಲಿ ಸೃಷ್ಟಿಮಾಡಿದನು ಎಂದು ತೋರುತ್ತದೆ ಆದಿಯಲ್ಲಿ ಶ್ರೀಹರಿಯು ಯಾವುದುಯಾವುದನ್ನು ಸೃಷ್ಟಿಸಿದನೋ, ಅದು ಉತ್ತಮವೆಂದು ಪ್ರಮಾಣಸಿದ್ಧ. ಆದುಕಾರಣ ತೇಜಃ ಅಪ್ ಅನ್ನಗಳು ಕ್ರಮವಾಗಿ ಸರ್ವೋತ್ತಮಗಳಾಗಬೇಕು. ಸರ್ವೋತ್ತಮನಾದ ಶ್ರೀಹರಿಯಿಂದ ಅತಿರಿಕ್ತಗಳಾದ ವಸ್ತುಗಳಲ್ಲಿ ಲಕ್ಷ್ಮೀ ಪ್ರಾಣ ರುದ್ರರನ್ನು ಬಿಟ್ಟು ಬೇರೆ ಯಾವುದೂ ಸರ್ವೋತ್ಕೃಷ್ಟವಾದುದು ಇಲ್ಲ. ಆದಕಾರಣ ತೇಜಸ್ಸು ಮೊದಲಾದ ಶಬ್ದಗಳಿಂದ ಲಕ್ಷ್ಮೀ ಪ್ರಾಣ ರುದ್ರರನ್ನೇ ಇಟ್ಟುಕೊಳ್ಳಬೇಕು.) (೨) (ತೇಜಸ್ಸು ಮೊದಲಾದ ಶಬ್ದಗಳಿಂದ ಹೇಳಲ್ಪಡತಕ್ಕ ಲಕ್ಷ್ಮ್ಯಾದಿಗಳೇ ಪ್ರಥಮತಃ ಹುಟ್ಟಿದವರು, ಎಂಬುವಲ್ಲಿ ಸ್ಮೃತಿಯನ್ನು **ಹೇಳುತ್ತಾರೆ**-) ತೇಜಸ್ಸಿಗೆ ಅಭಿಮಾನಿನಿಯಾದವಳು ಲಕ್ಷ್ಮೀದೇವಿಯು, ಜಲಕ್ಕೆ ಅಭಿಮಾನಿಯಾದವನು ಪ್ರಾಣನು, ಅನ್ನಕ್ಕೆ (ಪೃಥಿವಿಗೆ) ಅಭಿಮಾನಿಯಾದವನು ರುದ್ರನು. ಆ ಮೂರು ದೇವತೆಗಳು ಸರ್ವರಿಗಿಂತಲೂ ಮೊದಲು ಸೃಷ್ಟಿಸಲ್ಪಟ್ಟವರು, ಎಂದು ಬ್ರಹ್ಮಾಂಡಪುರಾಣದಲ್ಲಿದೆ. (೩) (**ಪ್ರಾಣಬಂಧನಂ ಹಿ ಸೋಮ್ಯ ಮನಃ** ಎಂಬಲ್ಲಿ **ಮನಃ** ಎನಿಸಿದವನು ಸಂಸಾರಿಯು, **ಪ್ರಾಣ** ಎನಿಸಿದವನು ಶ್ರೀಭಗವಂತನು, ಎಂದು **ಹೇಳಿವೆ**. ಆದರೆ **ಮನನಾನ್ಮನ ಉದ್ದಿಷ್ಟಃ ಪ್ರಾಣಃ ಪ್ರಣಯನಾದೇಷಃ** ಎಂಬ ಪ್ರಮಾಣಗಳಿಂದ ಅಲ್ಲಿ ಹಾಗೆ ಅರ್ಥ ಹೇಳುವುದು ಯುಕ್ತವಾಗುವುದಾದರೂ **ಯತ್ರೈತತ್ಪುರುಷಃ** ಎಂಬಲ್ಲಿ ಹಾಗೆ ಅರ್ಥ ಹೇಳಲಿಕ್ಕೆ ಜ್ಞಾಪಕವಾದ ಪದವು ಇಲ್ಲದಿರುವುದರಿಂದ ಹೀಗೆ ಅರ್ಥ ಹೇಳುವುದು ಯುಕ್ತವಲ್ಲವೆಂದರೆ —) **ಯತ್ರೈತತ್ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತಿ** ಎಂಬುವುದರಿಂದ ಸಂಸಾರಿಯು ಪರಬ್ರಹ್ಮ

ವನ್ನು ಹೊಂದಿದನು ಎಂದು ಹೇಳಿ **ಸ ಯಥಾ ಶಕುನಿಃ ಸೂತ್ರೇಣ ಪ್ರಬದ್ಧಃ** ಎಂಬುವುದರಿಂದ ಹಿಂದೆ ಹೇಳಿದುದನ್ನೇ ವಿವರಿಸಿ ಸಮರ್ಥಿಸಿದುದರಿಂದ ಮನಃ ಎನಿಸಿದವನು ಜೀವನು ಪ್ರಾಣನೆನಿಸಿದವನು ಶ್ರೀಹರಿಯು. (ಒಂದು ವಿಷಯದಲ್ಲಿ ದೃಷ್ಟಾಂತ ಹೇಳಿ ದಾರ್ಷ್ಟಾಂತಿಕದಲ್ಲಿ ಬೇರೆ ಒಂದು ಹೇಳುವುದು ಎಂಬುವುದು ಕೂಡಲಾರದಷ್ಟೆ.) (೪) (ಉಪಕ್ರಮದಲ್ಲಿ (ಬುಡದಲ್ಲಿ ಹೇಳಿದುದನ್ನು ನೋಡುವಾಗ ಮನಃ ಎಂದರೆ ಜೀವನೆಂದಾಗಬೇಕೆಂದು ಹೇಳಿ ಉಪಸಂಹಾರ (ಅಂತ್ಯ) ದಲ್ಲಿ ಹೇಳಿದ ಪ್ರಕಾರವೂ ಹಾಗೆಯೇ ಇಟ್ಟುಕೊಳ್ಳಬೇಕೆನ್ನುತ್ತಾರೆ) **ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ** ಎಂದು ಅಂತಿಮ ವಾಕ್ಯ ದಲ್ಲಿ (ಪ್ರಜಾ ಶಬ್ದದಿಂದ ಹೇಳಲ್ಪಟ್ಟ ಜೀವರು ಸತ್ ಎನಿಸಿದ ಶ್ರೀಹರಿಯನ್ನು ಆಶ್ರಯಿಸಿರುತ್ತಾರೆಂದು ಹೇಳಿದುದರಿಂದ ಇಲ್ಲಿಯೂ ಮನಃ ಪ್ರಾಣಶಬ್ದಗಳಿಂದ ಜೀವ ಪರಮಾತ್ಮರನ್ನೇ ಇಟ್ಟುಕೊಳ್ಳಬೇಕು ) (೫) (ಉಪಸಂಹಾರ ವಾಕ್ಯದಲ್ಲಿದ್ದ **ಸತ್** ಶಬ್ದವನ್ನು ಇಟ್ಟುಕೊಂಡು ಪ್ರಾಣ ಶಬ್ದವು ಭಗವತ್ಪರವೆಂದು ಹೇಳುವುದಾದರೂ ಪ್ರಜಾ ಶಬ್ದವನ್ನು ಇಟ್ಟುಕೊಂಡು ಮನಃಶಬ್ದವು ಜೀವಪರವೆಂದು ಹೇಳಲಾಗುವುದಿಲ್ಲ ಪ್ರಜಾಶಬ್ದದಿಂದ ಸ್ಥಾವರಜಂಗಮರೂಪಗಳಾದ ಅಚೇತನಗಳನ್ನೆಲ್ಲಾ ಇಟ್ಟುಕೊಳ್ಳುತ್ತೇವೆ. ಎಂದರೆ ಹಾಗೆ ಹೇಳಕೂಡದು. ಏಕೆಂದರೆ—) ಪ್ರಜಾಶಬ್ದವು ಚೇತನಗಳಲ್ಲಿಯೇ ಪ್ರಸಿದ್ಧವಾಗಿದೆ. (ಆ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ) ಪ್ರಜೆಗಳ ಸುಖದುಃಖಗಳಿಂದ ರಾಜನು ಶುಭ ಅಶುಭಗಳನ್ನು ಹೊಂದುತ್ತಾನೆ. (ಅಚೇತನಕ್ಕೆ ಸುಖದುಃಖಗಳು ಇರುವುದಿಲ್ಲವಷ್ಟೆ) ಇತ್ಯಾದಿ ಪ್ರಮಾಣಗಳಿಂದ ಪ್ರಜಾ ಶಬ್ದದಿಂದ ಚೇತನರನ್ನೇ ಇಟ್ಟುಕೊಳ್ಳಬೇಕು || ೨ ||

**ಪೀ**—೬ನೇ ಮಂತ್ರದಲ್ಲಿ **ಯಥಾ ಖಲು ಸೋಮ್ಯ** ಎಂದಾರಂಭಿಸಿ—**ತದುಕ್ತಂ ಪುರಸ್ತಾತ್** ಎಂಬ ಪರ್ಯಂತ ವಾಕ್ಯವು ಏತಕ್ಕೆ? ಹಿಂದಿನ ವಾಕ್ಯದಿಂದಲೇ ತಿಳಿದುಕೊಳ್ಳಬಹುದು ಎಂದರೆ ಪ್ರಮಾಣ ವನ್ನು ಹೇಳಿ ಅದರ ಅಭಿಪ್ರಾಯ ಹೇಳುತ್ತಾರೆ—

**ಭಾ. || (೧) ಶರೀರಧಾತುಕೃತ್ತ್ವೇನ ಲಕ್ಷ್ಮ್ಯಾದ್ಯಾಶ್ಚ ಮುಮುಕ್ಷುಣಾ | ಧ್ಯೇಯಾಸ್ತದೀಶಿತೃತ್ವೇನ ಭಗವಾನ್ಪುರುಷೋತ್ತಮಃ || ಇತಿ ವಚನಾದನುಸಂಧಾನಕರ್ತವ್ಯತಾ-ಜ್ಞಾಪನಾರ್ಥಂ ತದುಕ್ತಂ ಪುರಸ್ತಾದಿತ್ಯುಕ್ತಂ || (೨) ಮುಕ್ತಾವುಮಾ ತು ವಾಗಾಖ್ಯಾ ರುದ್ರಂ ಯಾತಿ ಮನೋಽಭಿಧಂ | ವಾಯುಂ ಯಾತಿ ಶಿವಶ್ಚಾಪಿ ವಾಯುಸ್ತೇಜೋಽಭಿಧಾಂ ಶ್ರಿಯಂ || ವಾಯುಮಾದಾಯ ಸಾ ದೇವೀ ಯಾತಿ ವಿಷ್ಣುಂ ಪರಾತ್ಪರಂ | ದ್ವಾರಮಾತ್ರಾ ತು ಸಾ ದೇವೀ ವಾಯುಪ್ರಾಪ್ಯೋ ಜನಾರ್ದನಃ || ಮೃತಿಕಾಲೇ ಚ ಮುಕ್ತೌ ಚ ಪುರುಷಾ ವಾಚಮಾಪ್ನುಯುಃ | ಇತಿ ಸತ್ತತ್ತ್ವೇ || ೩ ||**

**ಅ** || (೧) ಶರೀರದಲ್ಲಿ ರಕ್ತ ಧಾತು ಮೊದಲಾದವುಗಳನ್ನು ಮಾಡುವವರಾದುದರಿಂದ ಲಕ್ಷ್ಮೀ ಪ್ರಾಣ ಶಿವರೆಂಬ ದೇವತೆಗಳನ್ನು ಮೋಕ್ಷವನ್ನು ಬಯಸುವವನು ಧ್ಯಾನಿಸಬೇಕು. ಅವರಿಗೂ ನಿಯಾಮಕನು (ಪ್ರೇರಕನು) ಎಂದು ಶ್ರೀಹರಿಯನ್ನು ಅವಶ್ಯವಾಗಿ ಮೋಕ್ಷೇಚ್ಛುವು ಧ್ಯಾನಿಸಬೇಕು, ಎಂಬ ಪ್ರಮಾಣದಿಂದ ಲಕ್ಷ್ಮ್ಯಾದಿಗಳನ್ನೂ ಶ್ರೀಹರಿಯನ್ನೂ ಸರ್ವದಾ ಅನುಸಂಧಾನ ಮಾಡಿಕೊಳ್ಳಬೇಕೆಂದು ತಿಳಿಸುವುದಕ್ಕಾಗಿ **ತದುಕ್ತಂ ಪುರಸ್ತಾತ್** ಮೊದಲೇ ಆ ಪ್ರಮೇಯವು ಹೇಳಲ್ಪಟ್ಟಿದೆ ಎಂದು ಹೇಳಿದ್ದು, ಎಂದು ತಿಳಿಯುತ್ತದೆ. (೨) (೬ನೇ ಮಂತ್ರದಲ್ಲಿ **ಅಸ್ಯ ಸೋಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ** ಎಂಬುವಲ್ಲಿ ವಾಗಾದಿ ಶಬ್ದಗಳು ಜಡಗಳಾದ ವಾಗಾದಿ ಇಂದ್ರಿಯಗಳನ್ನು ಹೇಳುತ್ತವೆ, ಎಂದು ಪರರು ಹೇಳುವುದು ಅಯುಕ್ತವು ಏಕೆಂದರೆ **ಪರಸ್ಯಾಂ ದೇವತಾಯಾಂ** ಎಂದು **ಸತ್** ಶಬ್ದದಿಂದ ಹೇಳಲ್ಪಡತಕ್ಕದು ಪರದೇವತೆಯೆಂದು ಹೇಳಿದುದರಿಂದ ವಾಗಾದಿಗಳು ದೇವತೆಗಳೆಂದೇ ತಿಳಿಯುತ್ತವೆ ಈ ವೇದ

ವಾಕ್ಯವು ದೇವತೆಗಳಿಗೆ ಮೋಕ್ಷಹೊಂದಲಿಕ್ಕೆ ಆವಶ್ಯಕವಾದ ಮಾರ್ಗ. ಇತರರ ಮರಣದ ಮಾರ್ಗ ವನ್ನು ಹೇಳಲಿಕ್ಕೆ ಹೊರಟದ್ದು ಹಾಗೆಯೇ ಸೂತ್ರಕಾರರು **"ವಾಙ್ಮನಸಿ ದರ್ಶನಾಚ್ಛಬ್ದಾಚ್ಚ"** ಇತ್ಯಾದಿಗಳಲ್ಲಿ ವಾಗಾದ್ಯಭಿಮಾನಿ ದೇವತೆಗಳಿಗೆ ಮೋಕ್ಷಕಾಲದಲ್ಲಿ ಅನ್ಯೋನ್ಯ ದೇಹಲಯವು ಆಗು ತ್ತದೆಂದು ನಿರ್ಣಯಿಸಿರುವರು. ಮತ್ತು **ಪುರುಷಂ ಸೋಮ್ಯೋಪತಾಪಿನಂ** ಎಂಬ ಮೇಲಿನ ಖಂಡ ದಿಂದಲೂ ಇದು ಮರಣಪರವೆಂದೇ ತಿಳಿಯುತ್ತದೆ, ಎಂಬ ಅಭಿಪ್ರಾಯದಿಂದ ಮೋಕ್ಷ, ಮರಣ ಎರ ಡನ್ನೂ ಹೇಳುತ್ತದೆಂಬಲ್ಲಿ ಪ್ರಮಾಣವನ್ನು ಹೇಳಿ ಅರ್ಥಹೇಳುತ್ತಾರೆ—) **ಮೋಕ್ಷದಲ್ಲಿಯೂ ಮರಣ ದಲ್ಲಿಯೂ ವಾಕ್** ಎಂದು ಹೆಸರುಳ್ಳ ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ **ಪಾರ್ವತಿಯಾದರೂ ಮನಃ** ಎನಿಸಿದ ಮನಸ್ಸಿಗೆ ಅಭಿಮಾನಿಯಾದ ರುದ್ರನನ್ನು ಹೊಂದುತ್ತಾಳೆ (ಅಂದರೆ—ರುದ್ರನಲ್ಲಿ ದೇಹಲಯ ವನ್ನು ಹೊಂದುತ್ತಾಳೆ. ಅಂದರೆ ವ್ಯಾಪಾರವಿಲ್ಲದವಳು ಆಗುತ್ತಾಳೆ) ರುದ್ರನು ವಾಯುದೇವರನ್ನು ಹೊಂದುತ್ತಾನೆ. ವಾಯುದೇವರು ತೇಜಃ ಎನಿಸಿದ ತೇಜಸ್ಸಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ಹೊಂದುತ್ತಾರೆ. ಆ ಲಕ್ಷ್ಮೀದೇವಿಯು ವಾಯುದೇವರನ್ನು ಕರೆದುಕೊಂಡು ಸರ್ವೋತ್ತಮನಾದ ವಿಷ್ಣು ವನ್ನು ಹೊಂದುತ್ತಾಳೆ. ಆ ದೇವಿಯು ಚತುರ್ಮುಖನಿಗೆ ದ್ವಾರಮಾತ್ರಳು, ಅಂದರೆ-ಚತುರ್ಮುಖನು ಆ ದೇವಿಯನ್ನು ಹೊಂದುವುದು ಮಾತ್ರ. (ಅಲ್ಲಿ ಲಯವಲ್ಲ.) ಚತುರ್ಮುಖನಿಂದ ಹೊಂದಲ್ಪಡುವವನು ಶ್ರೀಹರಿಯು. ಮರಣಕಾಲದಲ್ಲಿಯೂ ಮೋಕ್ಷಕಾಲದಲ್ಲಿಯೂ ಸಾಯುವವರೂ ಮೋಕ್ಷವನ್ನು ಹೊಂದು ವವರೂ ಕೂಡ ವಾಗಭಿಮಾನಿನಿಯಾದ ಪಾರ್ವತಿಯನ್ನು ಹೊಂದುತ್ತಾರೆ. ಎಂದು ಸತ್ತತ್ವವೆಂಬ ಗ್ರಂಥ ದಲ್ಲಿದೆ.

ವಿ || (1) ಮೋಕ್ಷವೆಂಬ ಕಲ್ಪದಲ್ಲಿ ಉಮಾ ಶಬ್ದದಿಂದ ವಾರುಣೀ ಸುಪರ್ಣಿಯರೂ, ರುದ್ರಶಬ್ದದಿಂದ ಗರುಡ ಶೇಷರೂ, ವಾಯುಶಬ್ದದಿಂದ ಚತುರ್ಮುಖ ಇವರನ್ನು ಇಟ್ಟುಕೊಳ್ಳಬೇಕು (2) **ಪ್ರಾಣಸ್ತೇಜಸಿ** ಎಂಬುವುದರಿಂದ ಚತುರ್ಮುಖನಿಗೆ ಲಕ್ಷ್ಮೀದೇವಿಯಲ್ಲಿ ದೇಹಲಯವನ್ನು ಹೇಳಕೂಡದು. ಹಾಗೆ ಹೇಳಿ ದರೆ ಚತುರ್ಮುಖನಿಗೆ ಮರಳಿ ಸಂಸಾರವು ಬರಬೇಕಾಗುವುದು, ಎಂದರೆ-**ಪ್ರಾಣಸ್ತೇಜಸಿ** ಎಂಬುವುದಕ್ಕೆ ತಾತ್ಪರ್ಯ ಹೇಳುತ್ತಾರೆ—ಚತುರ್ಮುಖನಿಗೆ ಲಕ್ಷ್ಮಿಯಲ್ಲಿ ಲಯವೆಂದರೆ—ಲಕ್ಷ್ಮಿಯ ಸಮೀಪವನ್ನು ಹೊಂದುವುದು ಮಾತ್ರ. ಅವಳಲ್ಲಿ ದೇಹಲಯವಲ್ಲ. ಚತುರ್ಮುಖನಿಗೆ ಸಾಕ್ಷಾತ್ತಾಗಿ ಪರಮಾತ್ಮ ನಲ್ಲಿಯೇ ಲಯವು ಚತುರ್ಮುಖನೇ ಪೂರ್ವದಲ್ಲಿ ಮುಖ್ಯಪ್ರಾಣನಾಗಿದ್ದಾಗ ಲಕ್ಷ್ಮಿಯಲ್ಲಿಯೇ ಮುಖ್ಯ ಪ್ರಾಣನಿಗೆ ಲಯವು. ಎಂಬ ವಿಶೇಷಾರ್ಥವನ್ನು ತೋರಿಸುವುದಕ್ಕಾಗಿ **ದ್ವಾರಮಾತ್ರಾ ತು** ಎಂಬುವಲ್ಲಿದ್ದ **ತು** ಶಬ್ದವು. (3) ಹೀಗಾದರೆ ಪಾರ್ವತ್ಯಾದಿಗಳಿಂದ ಬೇರೆಯಾದ ಕೆಳಗಿನವರಿಗೆ ದೇಹಲಯವೇ ಇಲ್ಲ ದಿರುವುದರಿಂದ ಮೋಕ್ಷವೇ ಇಲ್ಲವೆಂದಾಗುವುದು. ಮತ್ತೂ ಮರಣಕಾಲದಲ್ಲಿ ಸಾಯುವವರು ಶ್ರೀಹರಿ ಯನ್ನು ಹೊಂದದಿರುವುದರಿಂದ **ಪ್ರಾಜ್ಞೇನಾತ್ಮನಾನ್ವಾರೂಢಃ** ಇತ್ಯಾದಿಗಳೂ ವಿರುದ್ಧವೂ ಆಗುವವು ಎಂದರೆ ಪಾರ್ವತ್ಯಾದಿಗಳಿಂದ ಕೆಳಗಿನವರು ಪಾರ್ವತಿಯನ್ನು ಹೊಂದುತ್ತಾರೆ. ಅವರಿಗೆ ಅವಳಲ್ಲಿ ದೇಹ ಲಯವು. ಅಂದರೆ ಕೆಳಕೆಳಗಿನ ದೇವತೆಗಳು ಮೇಲುಮೇಲಿನ ದೇವತೆಗಳ ಅಧೀನವಲ್ಲಿರುತ್ತಾರೆಂದು ಧ್ಯಾನಿಸುವುದು. || ೩ ||

ಪೀ—**ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ** ಎಂಬ ವಾಕ್ಯಕ್ಕೆ ಅದ್ವೈತಿಗಳು ಹೀಗೆ ಅರ್ಥ ಹೇಳಿರುವರು. ಸತ್ ಎನಿಸಿದ ಅಣು (ಪರಬ್ರಹ್ಮ)ವಿನ ಧರ್ಮವು ಜಗತ್ತಿಗೆ ಮೂಲವು. ಸತ್ ಎನಿಸಿದ ಆತ್ಮನಿಂದ ಈ ಎಲ್ಲಾ ಜಗತ್ತು ಆತ್ಮವುಳ್ಳದ್ದು. ಜಗತ್ತಿನಲ್ಲಿ ಬೇರೆ ಆತ್ಮನು (ಸಂಸಾರಿಯು) ಇಲ್ಲ. ಯಾವ ಆತ್ಮನಿಂದ ಈ ಎಲ್ಲಾ ಜಗತ್ತು ಆತ್ಮನುಳ್ಳದ್ದು ಆಗಿದೆಯೋ ಅಂತಹ ಸತ್ ಎನಿಸಿದ ಕಾರ ಣವೇ ಪಾರಮಾರ್ಥಿಕ ಸತ್ಯವು. ಅದುಕಾರಣ ಸದ್ರೂಪನಾದ ಆತ್ಮನು ಜಗತ್ತಿಗೆ ಪ್ರತ್ಯಕ್ ಸ್ವರೂಪನು.

(ಅಂತರ್ಗತನು) ಆ ಸದ್ರೂಪತತ್ವವು ಯಥಾರ್ಥವು. ಆದುಕಾರಣ ಎಲೋ ಶ್ವೇತಕೇತುವೇ ಅಂತಹ ಸತ್ ಎನಿಸಿದವನು ನೀನು ಆಗಿರುತ್ತಿ, ಅವನಿಗೂ ನಿನಗೂ ಭೇದವಿಲ್ಲ ಎಂದು ಅರ್ಥ ಹೇಳಿರುವರು. ಅದು ಸರ್ವಥಾ ಯುಕ್ತವಲ್ಲ. **ಸ ಯ ಏಷಃ** ಎಂಬುವುದು ಹಿಂದೆ ಹೇಳಿದುದನ್ನು ಅನುವಾದಮಾಡಿದ್ದೆಂದಾದರೆ **ಸಃ** ಎಂಬ ತಚ್ಛಬ್ದವು ವ್ಯರ್ಥವು ಮತ್ತು ಅಣುವೇ (ಬ್ರಹ್ಮನೇ) ಜಗತ್ತಿಗೆ ಮೂಲಕಾರಣವಾಗಿರುವುದರಿಂದ ಅಣುಭಾವವು (ಅಣುವಿನ ಧರ್ಮವು) ಜಗತ್ತಿಗೆ ಮೂಲಕಾರಣವೆಂಬುದು ಯುಕ್ತವಲ್ಲ. ಅಲ್ಲದೆ ಇದ್ದ ಪದಗಳಿಂದಲೇ ಅರ್ಥವು ಸರಿಯಾಗಿ ಸಿಗುವಾಗ **ಜಗತೋ ಮೂಲಂ** ಎಂದು ಅಧ್ಯಾಹಾರವು (ಇಲ್ಲದಿರುವ ಪದವನ್ನು ಸೇರಿಸಿಕೊಂಡು ಅರ್ಥಹೇಳುವುದು) ಯುಕ್ತವಲ್ಲ, ಎಂಬ ಅಭಿಪ್ರಾಯದಿಂದ **ಸ ಯ** ಇದುಮೊದಲಾದ ವಾಕ್ಯಕ್ಕೆ ಪ್ರಮಾಣವನ್ನು ಹೇಳಿ ಅರ್ಥ ಹೇಳುತ್ತಾರೆ—

**ಭಾ. ॥ ಯೋಽಸೌ ನಿಯಮನಾದ್ವಿಷ್ಣುಃ ಸಾರತ್ವಾತ್ಸ ಇತಿ ಸ್ಮೃತಃ । ಅಣಿಮಾ ಸೂಕ್ಷ್ಮತೋ ಗಮ್ಯ ಐತದಾತ್ಮ್ಯಂ ಚ ತದ್ವಶಂ ॥ ೪ ॥**

ಅ ॥ (**ನಾಮಾನಿ ಸರ್ವಾಣಿ ಯಮಾವಿಶಂತಿ** ಎಂಬ ವೇದ ಪ್ರಮಾಣದಿಂದ **ಸ ಯಃ** ಇತ್ಯಾದಿ ವಾಕ್ಯವು ಶ್ರೀಹರಿಯ ನಾಮಧೇಯವೇ ಎಂಬ ಅಭಿಪ್ರಾಯದಿಂದ **ಸ ಯ** ಇತ್ಯಾದಿ ಪದಗಳ ಅರ್ಥಗಳನ್ನು ವಿವರಿಸಿ ಹೇಳುವರು.) ಶ್ರೀವಿಷ್ಣುವು ಪ್ರತಿಕಾರ್ಯಗಳನ್ನು ಮಾಡಲಿಕ್ಕೆ ಪ್ರೇರಿಸುವುದರಿಂದ **ಯಃ** ಎಂದೂ, ಸರ್ವರಿಗಿಂತಲೂ ಶ್ರೇಷ್ಠನಾಗಿರುವುದರಿಂದ **ಸಃ** ಎಂದೂ, ಎಲ್ಲಾ ಭಕ್ತರಿಗೂ ಇಷ್ಟವನ್ನು ಕೊಡುವವನಾದುದರಿಂದ **ಏಷಃ** ಎಂದೂ, **ಸೂಕ್ಷ್ಮ**ಜ್ಞಾನಕ್ಕೆ ವಿಷಯನಾದುರಿಂದ **ಅಣಿಮಾ** ಎಂದೂ ಅನ್ನಿಸುತ್ತಾನೆ. (ಮತ್ತು ಸರ್ವರ ಸಮೀಪದಲ್ಲಿದ್ದ ಪ್ರಯುಕ್ತ, **ಏಷಃ**, ಸಾರಭಾಗವನ್ನು ತೆಗೆದುಕೊಳ್ಳುವುದರಿಂದ **ಆತ್ಮಾ** ಇತ್ಯಾದಿಗಳಿಂದ ಏಷ ಚಾಸೌ ಆತ್ಮಾ ಚ **ಏತದಾತ್ಮಾ** ಏತದಾತ್ಮೈವ ಐತದಾತ್ಮ್ಯಂ ಅಂದರೆ— ಸರ್ವರ ಸಮೀಪದಲ್ಲಿದ್ದು ಸಾರಭಾಗವನ್ನೇ ಹೊಂದುತ್ತಿರುವುದರಿಂದ, **ಐತದಾತ್ಮ್ಯ**ನೆಂದೂ, ಜ್ಞಾನಿಗಳಿಗೆ ಪ್ರತ್ಯಕ್ಷನಾಗುವುದದರಿಂದ **ಇದಂ** ಎಂದೂ ಸರ್ವಗುಣಪೂರ್ಣನಾದುದರಿಂದ **ಸರ್ವಂ** ಎಂದೂ, ಎನಿಸುತ್ತಾನೆ. ಹೀಗೆ **ಪ್ರತಿ**ಪದಗಳೂ ಭಗವತ್ಪರಗಳೆಂದು ಹೇಳಲು ಶಕ್ಯಗಳೇ ಆಗಿವೆ. ಆದರೂ ಸಂಪೂರ್ಣ ವಾಕ್ಯಕ್ಕೆ **ಅನ್ವಯ**ವೆಂಬ ಪಕ್ಷ ಇಟ್ಟುಕೊಂಡು ಅರ್ಥಹೇಳುತ್ತಾರೆ—) ಈ ಎಲ್ಲಾ ಜಗತ್ತು ಶ್ರೀಹರಿಯ ಅಧೀನದಲ್ಲಿ ಇರುವುದು. ಅವನ **ಪ್ರೇ**ರಣೆಯಂತೆ ಪ್ರವೃತ್ತಿ ಮಾಡುತ್ತಿರುವುದು.

**ವಿ ॥ (1)** ಏಷಃ ಆತ್ಮಾ ಯಸ್ಯ ಸಃ ಸದ್ರೂಪನಾದ ಶ್ರೀಹರಿಯು ಸ್ವಾಮಿಯಾಗಿ ಉಳ್ಳದ್ದು. ಈ ಎಲ್ಲಾ ಜಗತ್ತಿಗೆ ಸತ್ ಎನಿಸಿದ ಶ್ರೀಹರಿಯು ಸ್ವಾಮಿಯು. ಅಂದರೆ ಆ ಶ್ರೀಹರಿಯ ಅಧೀನದಲ್ಲಿ ಜಗತ್ತು ಇದೆ. **(2)** ಅಥವಾ ಏಷ ಚಾಸಾವಾತ್ಮಾ ಚ ಏತದಾತ್ಮಾ ಏತದಾತ್ಮನಃ ಇದಂ ಐತದಾತ್ಮ್ಯಂ=ಸರ್ವಸ್ವಾಮಿಯಾದ ಶ್ರೀಹರಿಯಿಂದ ನಿಯಮ್ಯವಾದುದು, ಜಗತ್ತು. ಏವಂಚ **ಐತದಾತ್ಮ್ಯಮಿದಂ ಸರ್ವಂ** ಎಂಬ ವಾಕ್ಯವು ಜೀವೇಶ್ವರರಿಗೆ ಐಕ್ಯ ಹೇಳಲಿಕ್ಕೆ ಸರ್ವಥಾ ಹೊರಟದ್ದಲ್ಲ. ॥ ೪ ॥

**ಪೀ—ತತ್ಸತ್ಯಂ** ಎಂಬುವುದಕ್ಕೆ **ತದೇವ ಸತ್ಯಂ** ಎಂದು ಪರರು ಅರ್ಥ ಹೇಳಿರುವರು. ಇದು ಅಯುಕ್ತವು. ಏಕೆಂದರೆ ಇಲ್ಲದಿರುವ **ಏವ**ಕಾರವನ್ನು ಕಲ್ಪಿಸಿರುವರು. ಮತ್ತು ಎಲ್ಲವೂ ಪಾರಮಾರ್ಥಿಕ ಸತ್ಯವೆಂದೇ ವ್ಯವಸ್ಥೆ ಮಾಡಲ್ಪಟ್ಟಿದೆ, ಎಂಬ ಅಭಿಪ್ರಾಯದಿಂದ **ತತ್ಸತ್ಯಂ** ಎಂಬುದಕ್ಕೆ ಅರ್ಥ ಹೇಳುತ್ತಾರೆ—

**ಭಾ. ॥** (೧) **ಪರಾನಂದತ್ವತಃ ಸತ್ಯ ಆತ್ಮಾ ಪೂರ್ಣಗುಣತ್ವತಃ ॥ (೨) ಸತ್ಮತೋ ನಾಸಿ ತತ್ತ್ವಂ ಹಿ ಮಾಭೂತ್ತೇ ಸ್ತಬ್ಧತಾ ತತಃ ॥ (೩) ಅಸುರಾಃ ಸ್ತಬ್ಧತಾಂ ಯಾತಾ ಬ್ರ-**

**ಹ್ಯಾಹಮಿತಿ ಮಾನಿನಃ । ಅಸತ್ಯಂ ಜಗದಿತ್ಯಾಹುಃ ಸಿದ್ಧೋऽಹಂ ಬಲವಾನಿತಿ । ಅನೀಶ್ವರಂ ಜಗತ್ಪ್ರಾ(ಚ್ಚಾ)ಹುರಪ್ರತಿಷ್ಠಂ ತಥೈವ ಚ ॥ ೫ ॥**

ಅ ॥ (೧) ಸತ್ ಎನಿಸಿದ ಪರಬ್ರಹ್ಮನು ಉತ್ಕೃಷ್ಟವಾದ ಆನಂದವುಳ್ಳವನಾದುದರಿಂದ **ಸತ್ಯ**ನೆಂದೂ (ವ್ಯಾಪ್ತನಾಗಿರುವುದರಿಂದ **ತತ್** ಎಂದೂ) ಎನಿಸುತ್ತಾನೆ (ಮತ್ತು ಸ ಆತ್ಮಾ ತತ್ತ್ವಂ **ಯಾಥಾತ್ಮ್ಯಂ**= **ಪ್ರತ್ಯಕ್** ಸ್ವರೂಪವು ಯಥಾರ್ಥವು, ಎಂದು ಅರ್ಥ ಹೇಳಿದರೆ—ತತ್ಸತ್ಯಂ ಎಂಬುವುದರಿಂದ **ಹೇಳಿದು**ದನ್ನೇ ಇದರಿಂದಲೂ ಹೇಳಿದ ಕಾರಣ ಪುನರುಕ್ತಿಯು. (ಎರಡು ಸಲ ಹೇಳಿದಂತೆಯೇ ಆಗುವುದು.) **ತತ್ತ್ವಂ** ಎಂದು ಇಟ್ಟುಕೊಳ್ಳದೆ. ಸಃ=ಅಣುವಾದವನೇ ಆತ್ಮಾ=ಜೀವನು ಎಂದು ಜೀವಬ್ರಹ್ಮರಿಗೆ **ಐಕ್ಯ**ವೆಂದು ಅರ್ಥವನ್ನು ಒಡಂಬಟ್ಟರೆ **ಐತದಾತ್ಮ್ಯಂ** ಎಂದು ಮೊದಲೇ ಹೇಳಿದುದರಿಂದ ಇದು **ವ್ಯರ್ಥವೇ** ಎಂಬ ಅಭಿಪ್ರಾಯದಿಂದ ಹೇಳುತ್ತಾರೆ—) ಪೂರ್ಣ ಗುಣಗಳುಳ್ಳವನಾದುದರಿಂದ **ಆತ್ಮ**ನೆಂದೂ, (ದುರ್ಜನರನ್ನು ನಿರಾಕರಿಸಿದುದರಿಂದ **ಸಃ** ಎಂದೂ) ಎನಿಸುತ್ತಾನೆ. (೨) (ತತ್ತ್ವಮಸಿ ಎಂಬುವುದರಿಂದ **ಐಕ್ಯವು** ಹೇಳಲ್ಪಡುತ್ತದೆ, ಎಂಬುವುದು ಯುಕ್ತವಲ್ಲ. ಏಕೆಂದರೆ **ಐತದಾತ್ಮ್ಯಂ** ಇತ್ಯಾದಿಗಳಿಂದ **ಹೇಳಿದುದನ್ನೇ** ಹೇಳಿದುದು ಎಂದಾಗಬೇಕಾಗುವುದು. ಮತ್ತು ಪದಸಮನ್ವಯ ಎಂಬ ಕಲ್ಪದಲ್ಲಿ **ಪ್ರತಿಪದಗಳೂ ಭಗ**ವಂತನನ್ನು ಹೇಳುತ್ತವೆಂದು ಹೇಳುವುದರಿಂದ ಇದೂ ಭಗವನ್ನಾಮವೇ ಆಗುವುದು. ಅಥವಾ ಸಂಪೂರ್ಣ ವಾಕ್ಯಕ್ಕೆ ಅನ್ವಯವು ಎಂಬ ಕಲ್ಪದಲ್ಲಿಯೂ **ಅತತ್** ತ್ವಂ ಅಸಿ ಎಂದು ಪದಗಳನ್ನು **ವಿಂಗಡಿಸಿಕೊಂಡು** ಜೀವೇಶ್ವರರಿಗೆ ಭೇದವನ್ನು ಹೇಳುತ್ತದೆಂದೇ ತಿಳಿಯುತ್ತದೆ, ಎಂಬ ಅಭಿಪ್ರಾಯದಿಂದ **ಅತತ್ ತ್ವಂ** ಎಂದೂ, ತತ್ತ್ವಂ ಎಂದೂ ಎರಡು ಪ್ರಕಾರವಾಗಿಯೂ ಪದಚ್ಛೇದವಿಟ್ಟುಕೊಂಡು ಅರ್ಥ ಹೇಳುತ್ತಾರೆ—) ಎಲೋ ಶ್ವೇತಕೇತುವೇ, ತತ್ತ್ವಂ=ಯಥಾರ್ಥವಾಗಿ ನೀನು ಶ್ರೀಹರಿಯಿಂದ ಬೇರೆ **ವಸ್ತುವು** ಆಗಿರುತ್ತೀ. (ಉಪದೇಶಕ್ಕೆ ಪ್ರಯೋಜನ ಹೇಳುತ್ತಾರೆ—) (ನೀನು ಪರಬ್ರಹ್ಮನಾಗಿದ್ದರೆ ಅಂತಹ ಜ್ಞಾನದಿಂದ **ಅವಿನ**ಯವನ್ನು (ನಾನೇ ಬ್ರಹ್ಮನೆಂಬ ಅಹಂಕಾರವನ್ನು) ಹೊಂದಬಹುದಿತ್ತು. ಅಂತಹ ಬ್ರಹ್ಮತ್ವವೇ ನಿನಗೆ ಸರ್ವಥಾ ಇಲ್ಲ.) ಆದುಕಾರಣ ನಿನಗೆ ಸ್ತಬ್ಧತ್ವವು (**ಅವಿನಯುವು**,) ಸರ್ವಥಾ ಬರಬಾರದು. (೩) (ನಿನಗೆ ಅವಿನಯವು ಉಂಟಾದರೆ ನೀನೂ ಅಸುರನಾಗುವಿ ಎಂಬ ಅಭಿಪ್ರಾಯದಿಂದ **ಅಸುರರು** ತಿಳಕೊಂಡ ಪ್ರಕಾರವನ್ನು ಹೇಳುತ್ತಾರೆ) ಅಸುರರು ನಾನೇ ಪರಬ್ರಹ್ಮನೆಂಬ ಅಭಿಮಾನವುಳ್ಳವರಾಗಿ **ಸ್ತಬ್ಧತ್ವ** (ಅವಿನಯ) ವನ್ನು ಹೊಂದಿರುತ್ತಾರೆ. (ಸುಖದುಃಖಾದಿರೂಪವಾದ ಜಗತ್ತು ಸತ್ಯವಾದರೆ ನಾನೇ ಬ್ರಹ್ಮನೆಂಬ ಅಭಿಮಾನವು ಅವರಿಗೆ ಹೇಗೆ ಉಂಟಾಗುವುದು ಎಂದರೆ—) ಅವರು, ಜಗತ್ತು ಸತ್ಯವಲ್ಲ ಸುಳ್ಳು ಎನ್ನುತ್ತಾರೆ ಪ್ರತ್ಯಕ್ಷಾದಿ ಪ್ರಮಾಣದಿಂದ ಜಗತ್ತು ಸತ್ಯವೆಂದು **ತಿಳಿಯುವುದರಿಂದ** ಹೀಗೆ ಹೇಳುವುದು ಹೇಗೆಂದರೆ—) ನಾನೇ ತಪಸ್ಸಿದ್ಧಿಯನ್ನು ಹೊಂದಿದವನಾದುದರಿಂದ (ನನ್ನ ಮಾತೇ ಸತ್ಯವು. ತನ್ನ ಮಾತಿಗೆ ವಿರುದ್ಧವಾದ ಪ್ರತ್ಯಕ್ಷಾದಿಗಳು ಪ್ರಮಾಣಗಳಲ್ಲ) (ಹಾಗಾದರೆ ಪ್ರಮಾಣ ಸಿದ್ಧಗಳಾದ ಪದಾರ್ಥಗಳನ್ನು ಅಪಲಾಪ ಮಾಡುವವರಿಗೆ ರಾಜಾದಿಗಳ ಭಯವು ಹೇಗೆ ಇಲ್ಲ ಎಂದರೆ ) ನಾನೇ ಬಲಿಷ್ಠನು. (ಬೇರೆ ಯಾರೂ ಇಲ್ಲ,) ಜಗತ್ತಿಗೆ ಈಶ್ವರನೇ ಇಲ್ಲ. ಹಾಗೆಯೇ ಜಗತ್ತು ಜ್ಞಾನದಿಂದ **ಬಾಧ್ಯವಾಗುತ್ತದೆ. (ಅಂದರೆ-ಜ್ಞಾನವು ಬಂದ ಮೇಲೆ ಜಗತ್ತೇ ಇಲ್ಲವೆಂದೇ ಆಗುತ್ತದೆ.)** ಎನ್ನುತ್ತಾರೆ. ॥೫॥

**ಪೀ**—ಹಾಗಾದರೆ ಜೀವೇಶ್ವರರಿಗೆ ಭೇದವನ್ನು ಹೇಳುವ ವೇದಪ್ರಮಾಣಗಳಿದ್ದುದರಿಂದ ಹೀಗೆ ಹೇಗೆ ಹೇಳುವದೆಂದರೆ—

**ಭಾ. ॥ (೧) ಚೇತನೈಕತ್ವವಿಷಯಾನ್ವೇದಾನಾಹುಶ್ಚ ಸರ್ವಶಃ । ಕುತರ್ಕಪರಮಾನಿತ್ಯಂ ॥ (೨) ನ ಸಹಂತೇ ಗುಣಾನ್ ಹರೇಃ ॥ (೩) ಶಾಸ್ತ್ರತತ್ತ್ವಮವಿಜ್ಞಾಯ ಬ್ರೂಯು-**

**ವೇದೇಷು ಚೈಕತಾಂ ॥ (೪) ಯಾಂತಿ ಚೈವ ತಮೋ ಘೋರಂ ಪರಮಾತ್ಮವಿನಿಂದಕಾಃ ॥ (೫) ಆಲಂಬ್ಯ ತನ್ಮತಂ ನ ತ್ವಮೇಕತ್ವಂ ವಿದ್ಧಿ ವಿಷ್ಣುನಾ ॥ (೬) ಏಕತ್ವಾ(ತಾ)ಭಾವತೋ ನೈವ ಭವೇಥಾಶ್ಚ ಮಹಾಮನಾಃ ॥ (೭) ತನ್ನಿಷ್ಠಾ ಹಿ ಪ್ರಜಾ ಯಸ್ಮಾತ್ತತ್ಪ್ರತಿಷ್ಠಾಶ್ಚ ಮೋಕ್ಷಗಾಃ । ತನ್ಮೂಲಾಶ್ಚ ಯತಸ್ತಾಸಾಂ ಸದ್ಭಾವಃ(ತದ್ಭೂತಃ) ಕುತ ಏವ ತು ॥ ೧,೨,೩, ೪,೫,೬,೭॥ ಇತ್ಯಷ್ಟಮಃ ಖಂಡಃ ॥ ೮–೮ ॥** **॥ ೬ ॥**

ಅ ॥ (೧) **ವಿಮತಾನಿ ಶರೀರಾಣಿ ಚೈತ್ರಸ್ಯೈವ ಭೋಗಾಯತನಾನಿ** ಎಲ್ಲಾ ಶರೀರಗಳೂ ಚೈತ್ರನಿಗೇನೇ ಭೋಗಿಸಲಿಕ್ಕೆ ಉಪಯುಕ್ತಗಳು. ಇದುವೊದಲಾದ ಕುತರ್ಕದಲ್ಲಿಯೇ ಆಸಕ್ತಿಯಿರುವವರು, ಎಲ್ಲಾ ವೇದಗಳೂ ಚೇತನನು ಒಬ್ಬನೇ ಎನ್ನುತ್ತವೆಂದು ಹೇಳುತ್ತಾರೆ. (೨) (**ಯಃ ಸರ್ವಜ್ಞಃ** ಇತ್ಯಾದಿ ವೇದಗಳಿಂದ ಸಿದ್ಧಗಳಾದ ಸಾರ್ವಜ್ಞಾದಿಗುಣಗಳುಳ್ಳ ಶ್ರೀಹರಿಯಿಂದ ಐಕ್ಯ ಹೇಳುವುದು ಹೇಗೆಂದರೆ—) ಶ್ರೀಹರಿಯು ಗುಣವಂತನೆಂಬುವುದನ್ನು ಸಹಿಸಲಾರರು. ಪರಬ್ರಹ್ಮನು ನಿರ್ಗುಣನೆನ್ನುತ್ತಾರೆ. (೩) (**ತತ್ತ್ವಮಸಿ** ಇತ್ಯಾದಿ ವೇದಗಳಲ್ಲಿಯೇ ಐಕ್ಯ ಹೇಳಿರುವುದರಿಂದ ಇದು ಅಸುರರ ಪಕ್ಷವೆನ್ನುವುದು ಹೇಗೆಂದರೆ—) **ತತ್ತ್ವಮಸಿ** ಇತ್ಯಾದಿ ಶಾಸ್ತ್ರಗಳ ಸತ್ಯಾರ್ಥವನ್ನು ತಿಳಿಯದೆ ಎಲ್ಲಾ ವೇದಗಳಲ್ಲಿ ಜೀವಬ್ರಹ್ಮೈಕ್ಯವೇ ಹೇಳಲ್ಪಡುತ್ತದೆಂದು ಹೇಳುತ್ತಾರೆ. (೪) ಶ್ರೀಹರಿಯನ್ನು ನಿಂದಿಸುವವರು ದ್ವೇಷಿಸುವವರು ಭಯಂಕರವಾದ ಅಂಧಂತಮಸ್ಸನ್ನು ಹೊಂದುತ್ತಾರೆ. (೫) ಎಲೋ ಶ್ವೇತಕೇತುವೇ ನೀನು ಆ ಅಸುರರ ಮತವನ್ನು ಆಶ್ರಯಿಸಿಕೊಂಡು ಶ್ರೀವಿಷ್ಣುವಿನಿಂದ ಐಕ್ಯವನ್ನು ತಿಳಿಯಬೇಡ. ಸ್ತಬ್ಧನು (ಅವಿನೀತನು) ಆಗಬೇಡ (೬) (ಹೀಗೆ ಅವಿನೀತನಾಗಬೇಡವೆಂದು ಹೇಳಿ ನಾನೇ ಸರ್ವೋತ್ಕೃಷ್ಟನು ಎಂದು ಮನಸ್ಸು ಉಳ್ಳವನು ಆಗಬೇಡ ಎನ್ನುತ್ತಾರೆ—) ಜೀವಬ್ರಹ್ಮೈಕ್ಯವು ಕೂಡದಿರುವುದರಿಂದ ನಾನೇ ಸರ್ವೋತ್ಕೃಷ್ಟನು ಎಂದು ಮನಸ್ಸುಳ್ಳವನು ಆಗಬೇಡ. (೭) (ಐಕ್ಯವು ಕೂಡುವುದಿಲ್ಲ ಎಂಬುವಲ್ಲಿ **ತನ್ಮೂಲಾಃ** ಎಂಬುವಲ್ಲಿಯೇ ಹೇಳಿದ ಯುಕ್ತಿಯನ್ನು ಹೇಳುತ್ತಾರೆ—) ಪ್ರಜೆಗಳೆಲ್ಲರೂ ಪರಬ್ರಹ್ಮನೇ ಕರ್ತನಾಗಿ ಉಳ್ಳವರು, ಬ್ರಹ್ಮನಲ್ಲಿಯೇ ಆಸಕ್ತಿಯಿರುವವರು. ಅಂದರೆ—ಆಶ್ರಯಿಸಿಕೊಂಡಿರುವವರು. ಮೋಕ್ಷದಲ್ಲಿರುವವರೂ ಪರಬ್ರಹ್ಮನ ಅಧೀನರಾಗಿರುತ್ತಾರೆ. ಅದುಕಾರಣ ಎಲ್ಲಾ ಪ್ರಜೆಗಳಿಗೆ ಪರಬ್ರಹ್ಮಭಾವವು (ಐಕ್ಯವು.) ಹೇಗೆ ಸಿಗುವುದು? ॥ ೮–೮ ॥ ॥ ೬ ॥

ಎಂಟನೇ ಖಂಡವು ಮುಗಿಯಿತು.

## ೯ನೇ ಖಂಡವು

**ಉ ॥ ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠಂತಿ ನಾನಾತ್ಯಯಾನಾಂ ವೃಕ್ಷಾಣಾꣳ ರಸಾನಾꣳ ಸಮವಹಾರಮೇಕತಾಂ ಗಮಯಂತಿ॥೧॥**

ಅ ॥ ಎಲೋ ಶ್ವೇತಕೇತುವೇ ಹೇಗೆ ಭ್ರಮರ(ತುಂಬಿ)ಗಳು ಪರಸ್ಪರ ವಿಲಕ್ಷಣಗಳಾದ ವೃಕ್ಷಗಳ ಪುಷ್ಪರಸಗಳನ್ನು ಮಿಶ್ರೀಕರಿಸಿ ಜೇನುತುಪ್ಪವನ್ನು ನಿರ್ಮಿಸುತ್ತವೋ, ಹಾಗೆಯೇ. ॥ ೧ ॥

**ಉ ॥ ತೇ ಯಥಾ ತತ್ರ ನ ವಿವೇಕಂ ಲಭಂತೇಽಮುಷ್ಯಾಹಂ ವೃಕ್ಷಸ್ಯ ರಸೋಽಸ್ಮ್ಯಮುಷ್ಯಾಹಂ ವೃಕ್ಷಸ್ಯ ರಸೋಽಸ್ಮೀತ್ಯೇವಮೇವ ಖಲು ಸೋಮ್ಯೇ-**

**ಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪತ್ಸ್ಯಾಮಹ ಇತಿ || ೨ ||**

ಅ || ಹೇಗೆ ಅನೇಕ ವಿಧಗಳಾದ ವೃಕ್ಷಗಳ ಪುಷ್ಪರಸಗಳು ಮಿಶ್ರಗಳಾದರೂ ನಾನು ಈ ಮರದ ರಸವು, ನಾನು ಈ ಮರದ ರಸವು, ನಾನು ಈ ಮರದ ರಸವು, ಎಂದು ಅದರಲ್ಲಿ ಇರತಕ್ಕ ಪರಸ್ಪರ ಭೇದ ವನ್ನು ತಿಳಿಯುವುದಿಲ್ಲವೋ ಹೀಗೆಯೇ ಈ ಎಲ್ಲಾ ಜೀವರೂ ಶ್ರೀಹರಿಯ ಶಕ್ತಿಗಳಿಂದಲೇ ತಮ್ಮತಮ್ಮ ಶರೀರದಲ್ಲಿರತಕ್ಕ ಸತ್ ಎನಿಸಿದ ಶ್ರೀಹರಿಯಲ್ಲಿ ಅವನೊಡನೆ ಸೇರಿ ಆ ಶ್ರೀಹರಿಯೊಡನೆ ನಾವು ಮುಂದೆ ಸೇರುವೆವು, ಹಿಂದೆ ಸೇರಿದ್ದೆವು. ಈಗ ಸೇರುತ್ತೇವೆಂದು ತಿಳಿಯುವುದಿಲ್ಲ. || ೨ ||

ಟೀ—ಹಾಗೆ ತಿಳಿಯದಿರುವುದರಿಂದುಂಟಾದ ಅನರ್ಥ ಹೇಳುತ್ತಾರೆ—

**ಉ. || ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವಂತಿ ತತ್ತದಾ ಭವಂತಿ || ೩ ||**

ಅ || ಜೀವರು ಶ್ರೀಹರಿಯನ್ನು ತಿಳಿಯದಿರುವುದರಿಂದ ಈ ಲೋಕದಲ್ಲಿ ಪ್ರಸಿದ್ಧಗಳಾದ ಹುಲಿ, ಸಿಂಹ, ತೋಳ, ಹಂದಿ, ಕೀಟ, ಹಾತೆ, ನುಸಿ ಇದುಮೊದಲಾದುದು ಯಾವುದು ಇವೆಯೋ ಅವುಗಳಾಗಿ ಹುಟ್ಟುತ್ತಾರೆ. || ೩ ||

ಟೀ—ಸ್ವತಃ ಭಿನ್ನನಾದ ನಿಯಾಮಕನಿದ್ದಾನೆಂದು ಹೇಳಿದ್ದು ಯುಕ್ತವೆನ್ನುತ್ತಾರೆ—

**ಉ. || ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ || ಇತಿ ನವಮಃ ಖಂಡಃ ||೮-೯||೪||**

ಅ || ಹಿಂದಿನಂತೆಯೇ ಅರ್ಥ ಇಟ್ಟುಕೊಳ್ಳಬೇಕು.

ವಿ || (1) ಈ ಪ್ರಮೇಯದಲ್ಲಿ ಮುಖ್ಯ ತಾತ್ಪರ್ಯವಿದೆಯೆಂದು ತಿಳಿಸುವುದಕ್ಕಾಗಿ **ಸ ಯಃ** ಇತ್ಯಾದಿ ಗಳನ್ನು ಅನೇಕ ಸಲ ಹೇಳಿದ್ದು. (2) **ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ** ಎಂದು ಹೇಳಿದ ಶ್ರವಣಾದಿಗಳನ್ನು ಅಗ್ನಿಷ್ಟೋಮಾದಿಗಳಂತೆ ಒಂದಾವರ್ತಿ ಮಾಡಿದುದರಿಂದ ಫಲವು ಸಿಗಲಾರದು. ಆವೃತ್ತಿ ಮಾಡಬೇಕೆಂದು ತಿಳಿಸುವುದಕ್ಕಾಗಿ ಅನೇಕಾವರ್ತಿ ಉಪದೇಶ ಮಾಡಿರುವರು. (3) ಹೀಗೆ ತಂದೆಯು ಉಪದೇಶಿಸಿದಾಗ ಶ್ವೇತಕೇತುವು ಅಚೇತನಗಳಾದ ನಾನಾ ವೃಕ್ಷರಸಗಳಿಗೆ ಭೇದಜ್ಞಾನ ವಿಲ್ಲದೆ ಹೋಗಲಿ, ಚೇತನಗಳಿಗೆ ಭೇದಜ್ಞಾನವು ಇರಬಹುದಷ್ಟೆ. ಅವುಗಳು ತಿಳಿಯದಿರುವುದು ಹೇಗೆ ಎಂಬ ಅಭಿಪ್ರಾಯದಿಂದ ಮರಳಿ ಉಪದೇಶಿಸಿರಿ ಎಂದು ಬೇಡಿದನು. ಹಾಗೆಯೇ ಆಗಲಿ ಉಪದೇಶಿ ಸುತ್ತೇನೆ ಎಂದು ತಂದೆಯವರು ಹೇಳಿದರು. || ೪ || || ೯ ||

ಟೀ—ಮರಳಿ ಮಗನು ಪ್ರಶ್ನಿಸಲಿಕ್ಕೆ ಕಾರಣವೇನಂದರೆ —ಅದರ ಅಭಿಪ್ರಾಯವನ್ನು ಭಾಷ್ಯಕಾರರು ಪ್ರಮಾಣವನ್ನುದಾಹರಿಸಿ ಹೇಳುತ್ತಾರೆ—

**ಭಾ. ॥ (೧) ಯದಿ ಸ್ವತೋಽನ್ಯಃ ಪರಮೋ ದೇಹೇಽಸ್ಮಿನ್ಸಂವ್ಯವಸ್ಥಿತಃ । ನ ದೃಶ್ಯತೇ ಕುತ ಇತಿ ಭೂಯಃ ಪಪ್ರಚ್ಛ ಪುತ್ರಕಃ ॥ (೨) ಅಜ್ಞೈರದೃಶ್ಯಮಾನೋಽಪಿ ನ ಭೇದೋ ನಾಸ್ತಿ ಪುತ್ರಕ ॥ (೩) ಯಥಾ ಪುಷ್ಪರಸಾ ಯುಕ್ತಾ ಅಜಾನಂತೋಽಪಿ ಭೇದಿನಃ । ಅಜಾನಂತೋಽಪಿ ಪುರುಷಾಸ್ತಥಾ ವಿಷ್ಣೋರ್ಹಿ ಭೇದಿನಃ ॥ (೪) ಇತಿ ಪಿತ್ರೋಪದಿಷ್ಟಃ ಸನ್ ಪುತ್ರಃ ಪಪ್ರಚ್ಛ ತಂ ಪುನಃ । ಚೇತನಾನಾಮವಿಜ್ಞಾನಂ ಕಥಮಿತ್ಯೇವ ಚಿಂತಯನ್ । ತಂ ಪ್ರತ್ಯಾಹ ॥ ೧, ೨, ೩, ೪ ॥ ಇತಿ ನವಮಃ ಖಂಡಃ ॥ ೮–೯ ॥ ॥ ೧ ॥**

ಅ ॥ (೧) ತನ್ನಿಂದ ಇನ್ನೊಬ್ಬನು ಸರ್ವೋತ್ತಮನು ಈ ಶರೀರದಲ್ಲಿದ್ದರೆ ತನ್ನಿಂದ ಬೇರೆಯಾಗಿ ಏಕೆ ಕಾಣುವುದಿಲ್ಲ. (**ನ ಮತ್ತಃ ಅನ್ಯಃ ಅಸ್ಮಿನ್ ದೇಹೇ ಅಸ್ತಿ ಮಯಾ ಭೇದೇನ ಅನುಪಲಭ್ಯಮಾನತ್ವಾತ್ ಯೋಽಯಮಾತ್ಮನೋ ಭೇದೇನ ನ ಪಶ್ಯತಿ ಸ ತತೋ ನ ಭಿದ್ಯತೇ** ನನ್ನಿಂದ ಬೇರೆಯಾದವನನ್ನು ನಾನು ಕಾಣದಿರುವುದರಿಂದ ನಾನು ಹೊರತು ಇನ್ನೊಬ್ಬನು ಈ ಶರೀರದಲ್ಲಿ ಇಲ್ಲ. ಯಾರು ಯಾರನ್ನು ತನ್ನಿಂದ ಬೇರೆಯಾಗಿ ಕಾಣುವುದಿಲ್ಲವೋ ಅವನು ಅವನಿಗಿಂತ) ಬೇರೆಯಿಲ್ಲವೆಂದು ಯುಕ್ತಿಯು ಸೂಚಿತವಾಯಿತು.) (೨) (1) (ಇಲ್ಲಿ ಜ್ಞಾನಿಗಳು ಕಾಣುವುದಿಲ್ಲವೆನ್ನುತ್ತೀರೋ (2) ಅಜ್ಞಾನಿಗಳು ಕಾಣುವುದಿಲ್ಲವೆನ್ನುತ್ತೀರೋ ಜ್ಞಾನಿಗಳು ಬೇದವಿದೆ ಎಂದೇ ಕಾಣುವುದರಿಂದ ೧ನೇದ್ದು ಅಯುಕ್ತವು. (೩) (ಅಜ್ಞಾನಿಗಳು ಕಾಣುವುದಿಲ್ಲವೆನ್ನುತ್ತೀವೆ ಎಂದರೆ—) ಎಲೋ ಮಗನೇ ಅಜ್ಞಾನಿಗಳಿಂದ ಕಾಣಲ್ಪಡದಿದ್ದರೂ ಭೇದವು ಇಲ್ಲವೆಂದಲ್ಲ. (ಹೇಗೆಂದರೆ—) ಪುಷ್ಪರಸಗಳು ಒಟ್ಟು ಮಿಶ್ರಗಳಾಗಿ ನಾನು ಇದರ ರಸ, ನಾನು ಇದರ ರಸ, ಎಂದು ತಿಳಿಯದಿದ್ದರೂ ಹೇಗೆ ಅವುಗಳಿಗೆ ಭೇದವಿದೆಯೋ, ಹಾಗೆಯೇ ಪುರುಷರು ವಿಷ್ಣುವಿನಿಂದ ತಮಗೆ ಭೇದ ತಿಳಿಯದಿದ್ದರೂ ಭೇದವುಳ್ಳವರೇ ಆಗಿರುತ್ತಾರೆ. (೪) ಹೀಗೆ ತಂದೆಯಿಂದ ಉಪದೇಶಿಸಿಕೊಂಡ ಮಗನು (ಅಚೇತನಗಳಾದ ನಾನಾವೃಕ್ಷ ರಸಗಳಿಗೆ ಭೇದಜ್ಞಾನವಿಲ್ಲವಾದರೂ) ಚೇತನಗಳಿಗೆ ಜ್ಞಾನವಿಲ್ಲದಿರುವುದು ಹೇಗೆ ಎಂದು ಆಲೋಚಿಸುತ್ತಾ ಮರಳಿ ತಂದೆಯೊಡನೆ ಕೇಳಿದನು. ಅದಕ್ಕೆ ತಂದೆಯು ಉತ್ತರಕೊಟ್ಟನು ॥ ೮–೯ ॥ ॥ ೧ ॥

**ಒಂಭತ್ತನೇ ಖಂಡವು ಮುಗಿಯಿತು.**

## ೧೦ನೇ ಖಂಡವು

ಪೀ— ಅಚೇತನಗಳಾದ ವೃಕ್ಷರಸಗಳಿಗೆ ಜ್ಞಾನವಿಲ್ಲದೆ ಹೋಗಲಿ. ನಾನು ಯಾವ ಚೇತನನು ಶ್ರೀಹರಿಯಿಂದ ತನಗೆ ಭೇದವನ್ನು ತಿಳಿಯುವುದಿಲ್ಲವೋ ಆತನು ಶ್ರೀಹರಿಯಿಂದ ಭಿನ್ನನಲ್ಲ ಎಂದು ಹೇಳುತ್ತೇನೆ, ಎಂಬ ಅಭಿಪ್ರಾಯದಿಂದ ಶ್ವೇತಕೇತುವು ಮರಳಿ ಕೇಳೋಣ ತಂದೆಯು ಉತ್ತರಿಸುತ್ತಾನೆ

**ಉ. ॥ ಇಮಾಃ ಸೋಮ್ಯ ನದ್ಯಃ ಪುರಸ್ತಾತ್ಪ್ರಾಚ್ಯಃ ಸ್ಯಂದಂತೇ ಪಶ್ಚಾತ್ಪ್ರತೀಚ್ಯಸ್ತಾಃ ಸಮುದ್ರಾತ್ಸಮುದ್ರಮೇವಾಪಿಯಂತಿ ಸ ಸಮುದ್ರ ಏವ ಭವತಿ ತಾ ಯಥಾ ತತ್ರ ನ ವಿದುರಿಯಮಹಮಸ್ಮೀಯಮಹಮಸ್ಮೀತಿ ॥ ೧ ॥**

ಅ ॥ ಎಲೋ ಮಗನೇ ಈ ಪ್ರಸಿದ್ಧಗಳಾದ ಗಂಗಾ ಯಮುನಾ ಮೊದಲಾದ ನದ್ಯಭಿಮಾನಿ ದೇವತೆಗಳು ಪೂರ್ವ ದಿಕ್ಕಿಗೆ ಹರಿದುಹೋಗುವುದರಿಂದ ಪ್ರಾಚೀ ಎಂದು ಹೆಸರುಳ್ಳವುಗಳಾಗಿ ಪೂರ್ವಾಭಿಮುಖ

ವಾಗಿ ಹರಿದುಹೋಗುತ್ತಾರೆ. (ಅಂದರೆ ತಮ್ಮ ವಶದಲ್ಲಿರುವ ನದಿಗಳನ್ನು ಹರಿಯುವಂತೆ ಮಾಡುವುದರಿಂದ ನದಿಗಳು ಹರಿಯುತ್ತವೆ) ಹಾಗೆಯೇ ಸಿಂಧು ಮೊದಲಾದ ನದಿಗಳು ಪಶ್ಚಿಮ ದಿಕ್ಕಿಗೆ ಹರಿದುಹೋಗುವುದರಿಂದ ಪ್ರತೀಚೀ ಎಂದು ಹೆಸರುಳ್ಳವುಗಳಾಗಿ ಪಶ್ಚಿಮದಿಕ್ಕಿಗೆ ಅಭಿಮುಖವಾಗಿ ಹರಿದುಹೋಗುತ್ತವೆ. ಹೀಗೆ ಅತ್ಯಂತ ವಿಲಕ್ಷಣಗಳಾದ ನದಿಗಳು (ಮೇಘಾದಿಗಳ ದ್ವಾರದಿಂದ) ಸಮುದ್ರದಿಂದ (ಮೇಲಕ್ಕೆ ಹೋಗಿ ಮಳೆಯಾಗಿ ಬಂದ ನೀರಾಗಿರುವುದರಿಂದ) ಸಮುದ್ರಕ್ಕೇನೇ ಸೇರುತ್ತವೆ. (ಅಂದರೆ ತಿಳಿಯದ ಹಾಗೆ ಸಮುದ್ರದಲ್ಲಿ ಪ್ರವೇಶಿಸುತ್ತವೆ.) ಆ ಸಮುದ್ರವು ಸಮುದ್ರವೇ ಆಗುತ್ತದೆ. (ಅಲ್ಲದೆ ನದಿಗಳಾಗುವುದಿಲ್ಲ.) ಆ ನದ್ಯಭಿಮಾನಿ ದೇವತೆಗಳು ಹೇಗೆ ಆ ಸಮುದ್ರದಲ್ಲಿ ಗಂಗೆಯು ನಾನಾಗಿರುತ್ತೇನೆ. ಇದು ಯಮುನಾ ನದಿಯು, ಇದು ಸಮುದ್ರವು, ಹೀಗೆಯೇ ಇತರ ನದಿಗಳನ್ನು ತಿಳಿಯುವುದಿಲ್ಲ. (ಅಂದರೆ - ಎಲ್ಲಾ ನದ್ಯಭಿಮಾನಿ ದೇವತೆಗಳು ತಮ್ಮ ತಮ್ಮ ನೀರನ್ನು ತಿಳಿಯುವುದೇ ಇಲ್ಲ.) ॥ ೧ ॥

**ಉ. ॥ ಏವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವಂತಿ ತತ್ತದಾ ಭವಂತಿ ॥ ೨ ॥**

ಅ ॥ ಹೀಗೆಯೇ ಎಲೋ ಮಗನೇ ಈ ಎಲ್ಲಾ ಪ್ರಜೆಗಳೂ ಶ್ರೀಹರಿಯಿಂದ ಹುಟ್ಟಿದರೂ ಶ್ರೀಹರಿಯಿಂದ ಹುಟ್ಟಿರುತ್ತೇವೆಂದು ತಿಳಿಯುವುದಿಲ್ಲ. ಶ್ರೀಹರಿಯ ಅಧೀನದಲ್ಲಿಯೇ ಇದ್ದರೂ ಶ್ರೀಹರಿಯನ್ನು ಆಶ್ರಯಿಸಿರುತ್ತೇವೆಂದು ತಿಳಿಯುವುದಿಲ್ಲ. ಆ ಜೀವರು ಹುಲಿ............( ಇದರಿಂದ ಅಚೇತನಗಳಿಗೆ ಹೇಗೆ ಜ್ಞಾನವಿಲ್ಲವೋ ಹಾಗೆಯೇ ಚೇತನರಿಗೂ ಜ್ಞಾನವಿಲ್ಲವೆಂದು ಉಕ್ತವಾಯಿತು.) ॥ ೨ ॥

ಟೀ—ತನ್ನಿಂದ ಭಿನ್ನನಾದವನು ಇನ್ನೊಬ್ಬ ನಿಯಾಮಕನು ಇದ್ದಾನೆಂದು ಸಿದ್ಧವೇ ಆಗಿದೆ ಎನ್ನುತ್ತಾರೆ—

**ಉ. ॥ ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ಇತಿ ದಶಮಃ ಖಂಡಃ ॥೮-೧೦॥೩॥**

ಅ ॥ **ಸ ಯಃ** ಇತ್ಯಾದಿಗಳಿಗೆ ಹಿಂದಿನಂತೆ ಅರ್ಥ ಹೀಗೆ ತಂದೆಯಿಂದ ಉಪದೇಶಿಸಿಕೊಂಡ ಶ್ವೇತಕೇತುವು ಈಶ್ವರನು ಸ್ವತಃ ತನ್ನಿಂದ ಭಿನ್ನನೇ ಆಗಲಿ. ಆದರೂ ಜೀವನು ಈಶ್ವರನ ಅಧೀನದಲ್ಲಿದ್ದಾನೆಂದು ಹೇಗೆ ಸಿದ್ಧಿಸುತ್ತದೆ, ಎಂಬ ಅಭಿಪ್ರಾಯದಿಂದ ಪುನಃ ತನಗೆ ಉಪದೇಶಿಸಬೇಕೆಂದು ಕೇಳಿದಾಗ ಹಾಗೆಯೇ ಆಗಲಿ ಅಂದರೆ ಉತ್ತರ ಹೇಳುವೆನು ಎಂದು ತಂದೆಯು ಹೇಳಿದನು. ॥ ೮—೧೦ ॥ ॥ ೩ ॥

ಟೀ—ಪ್ರಶ್ನೆಗೆ ಉತ್ತರವಾಗಿ ಇಮಾಃ **ಸೋಮ್ಯ ನದ್ಯಃ** ಎಂಬ ಖಂಡದ ತಾತ್ಪರ್ಯ ಹೇಳುತ್ತಾರೆ—

**ಭಾ. ॥ (೧) ಯಥಾ ನದ್ಯಶ್ಚೇತನಾಶ್ಚ ಸಮುದ್ರಗಾಃ । ಸ್ವವಾರಿ ನೈವ ಜಾನಂತಿ ಪ್ರಜಾಸ್ತದ್ವತ್ಪ್ರಜಾಲಯೇ ॥ (೨) ಸ್ವತೋಽನ್ಯೋಽಸ್ತಿ ಪರೋ ದೇಹ ಇತಿ ಜ್ಞಾಯೇತ**

**ಮೇ ಕಥಂ । ಇತಿ ಪೃಷ್ಟಃ ಪುನಃ ಪ್ರಾಹ ವೃಕ್ಷದೃಷ್ಟಾಂತತಃ ಪಿತಾ ॥ ೧, ೨, ೩ ॥**
**ಇತಿ ದಶಮಃ ಖಂಡಃ ॥ ೬—೧೦ ॥ ॥ ೧ ॥**

ಅ ॥ ನದ್ಯಭಿಮಾನಿ ದೇವತೆಗಳು ಚೇತನರಾದರೂ ಸಮುದ್ರಕ್ಕೆ ಸೇರಿದ ಮೇಲೆ (ನಾನು ಗಂಗೆಯು ನಾನು ಯಮುನೆಯು ಎಂಬ ಪರಿಜ್ಞಾನವಿಲ್ಲದಿರುವುದರಿಂದ ತಮ್ಮ ತಮ್ಮ ನೀರನ್ನು ಹೇಗೆ *ತಿಳಿಯುವುದೇ ಇಲ್ಲವೋ, ಹಾಗೆಯೇ ಎಲ್ಲಾ ಪ್ರಜೆಗಳಿಗೂ ಆಶ್ರಯನಾದ ಪರಮೇಶ್ವರನ ಅಧೀನದಲ್ಲಿ ಇದ್ದರೂ ಆತನನ್ನು ಆಶ್ರಯಿಸಿರುತ್ತೇವೆಂದು ತಿಳಿಯುವುದಿಲ್ಲ (೨) (ಭೂಯ ಏವ ಎಂದು ಮರಳಿ ಮಾಡಿದ ಪ್ರಶ್ನೆಯ ಅಭಿಪ್ರಾಯ ಹೇಳುತ್ತಾರೆ—) ಸ್ವಾಭಾವಿಕವಾಗಿ ತನ್ನಿಂದ ಭಿನ್ನನಾದವನು ಪರಮಾತ್ಮನು ದೇಹದಲ್ಲಿದ್ದಾನೆಂಬುವುದು ಸತ್ಯವೇ. ಆದರೂ ಜೀವನು ಆ ಶ್ರೀಹರಿಯ ಅಧೀನದಲ್ಲಿದ್ದಾನೆಂಬುವುದು ನನಗೆ ಹೇಗೆ ತಿಳಿಯುವುದು ಎಂದು ಪ್ರಶ್ನಿಸಿಕೊಂಡ ತಂದೆಯಾದ ಉದ್ದಾಲಕರು ವೃಕ್ಷದೃಷ್ಟಾಂತದಿಂದ ಮಗನಿಗೆ ವಿವರಿಸಿ ಹೇಳುವರು. ॥ ೬—೧೦ ॥ ॥ ೧ ॥

ಹತ್ತನೇ ಖಂಡವು ಮುಗಿಯಿತು.

## ೧೧ನೇ ಖಂಡವು

ಪೀ ಈಶ್ವರನು ಜೀವನಿಂದ ಭಿನ್ನನಾಗಲಿ, ಆದರೂ ಜೀವನು ಈಶ್ವರನ ಅಧೀನದಲ್ಲಿದ್ದಾನೆಂದು ಹೇಗೆ ನಾನು ತಿಳಿದುಕೊಳ್ಳುವುದು? ಎಂಬ ಅಭಿಪ್ರಾಯದಿಂದ ಮರಳಿ ಕೇಳಿದ್ದಕ್ಕೆ ತಂದೆಯು ಉತ್ತರ ಹೇಳುತ್ತಾರೆ --

**ಉ. ॥ ಅಸ್ಯ ಸೋಮ್ಯ ಮಹತೋ ವೃಕ್ಷಸ್ಯ ಯೋ ಮೂಲೇಽಭ್ಯಾಹನ್ಯಾಜ್ಜೀವನ್ಸ್ರವೇದ್ಯೋ ಮಧ್ಯೇಽಭ್ಯಾಹನ್ಯಾಜ್ಜೀವನ್ಸ್ರವೇದ್ಯೋಽಗ್ರೇಽಭ್ಯಾಹನ್ಯಾಜ್ಜೀವನ್ಸ್ರವೇತ್ಸ ಏಷ ಜೀವೇನಾತ್ಮನಾಽನುಪ್ರಭೂತಃ ಪೇಪೀಯಮಾನೋ ಮೋದಮಾನಸ್ತಿಷ್ಠತಿ ॥ ೧ ॥**

ಅ ॥ ಎಲೋ ಮಗನೇ ಇದಿರು ಇರುವ ಅನೇಕ ಶಾಖೋಪಶಾಖಾದಿಗಳಿಂದೊಡಗೂಡಿದ ವೃಕ್ಷಕ್ಕೆ ಯಾವನಾದರೂ ಬುಡದಲ್ಲಿ (ಕೊಡಲಿ ಮೊದಲಾದವುಗಳಿಂದ) ಹೊಡೆದರೂ ಆಗ ಜೀವನೆನಿಸಿದ ಅನಿರುದ್ಧರೂಪಿ ಶ್ರೀಹರಿಯಿಂದ ಕೂಡಿದ್ದರೆ ರಸವನ್ನೇ ಕಾರುತ್ತದೆ. (ಒಣಗುವುದಿಲ್ಲ.)ವೃಕ್ಷದ ಮಧ್ಯಕ್ಕೆ ಹೊಡೆದರೂ ರಸವನ್ನೇ ಕಾರುವುದು ತುದಿಯಲ್ಲಿ ಹೊಡೆದರೂ ರಸವನ್ನೇ ಕಾರುತ್ತದೆ ಆ ಈ ವೃಕ್ಷಜೀವನು ಅನಿರುದ್ಧರೂಪಿ ಶ್ರೀಹರಿಯಿಂದ ದೇಹವನ್ನು ಹೊಂದಿದವನಾಗಿ ಮತ್ತೂ ಮತ್ತೂ ಚೆನ್ನಾಗಿ (ನೀರನ್ನೂ ಭೂಮಿಯಲ್ಲಿದ್ದ ರಸಗಳನ್ನೂ ಬುಡದಿಂದ ಮೇಲಕ್ಕೆ) ಸೆಳೆದುಕೊಂಡು ಸಂತೋಷವನ್ನು ಹೊಂದುತ್ತಾ ಇರುತ್ತಾನೆ ॥ ೧ ॥

ಪೀ—ಹೀಗೆ ವೃಕ್ಷಜೀವನು ತಾನು ಸರ್ವದಾ ದೇಹವನ್ನು ಬಿಡದೆ ಸುಖಿಯಾಗಿಯೇ ಇರಬೇಕು ಎಂದು ಬಯಸಿದರೂ ಕೆಲವು ವೇಳೆಯೇ ಈಶ್ವರನ ಅನುಗ್ರಹವಿದ್ದರೆ ಮಾತ್ರ ಮರ ಕಡಿಯಲಿಕ್ಕೆ ಬೇಕಾದ

* ನದಿಯ ಜಲವೆಲ್ಲವೂ ಸಮುದ್ರದ ನೀರಿನೊಂದಿಗೆ ಸೇರಿ ಮಿಶ್ರವಾಗಿರುವುದರಿಂದ ಹಾಲು ನೀರುಗಳನ್ನು ಬೆರಸಿ ಇಟ್ಟಂತೆಯೇ ತಮ್ಮ ನೀರಿನ ಭೇದಜ್ಞಾನವು ಇಲ್ಲವೆಂಬುದು ಯುಕ್ತವೇ.

ಕಾರಣಗಳಿದ್ದರೂ ಬದುಕಿರುತ್ತಾನೆ, ಎಂದರು. ಈಗ ಕದಾಚಿತ್ ಈಶ್ವರನ ಅನುಗ್ರಹವಿಲ್ಲವಾದರೆ— ಕೊಡಲಿ ಮೊದಲಾದ ಬಾಹ್ಯ ಕಾರಣಗಳ ಬಲವಿಲ್ಲವಾದರೂ ತನ್ನಷ್ಟಕ್ಕೇ ಒಣಗಿ ಸಾಯುತ್ತಾನೆ ಎನ್ನುತ್ತಾರೆ.

**ಉ. ॥ ಅಸ್ಯ ಯದ್ಯೇಕಾಂ ಶಾಖಾಂ ಜೀವೋ ಜಹಾತ್ಯಥ ಸಾ ಶುಷ್ಯತಿ ದ್ವಿತೀಯಾಂ ಜಹಾತ್ಯಥ ಸಾ ಶುಷ್ಯತಿ ತೃತೀಯಾಂ ಜಹಾತ್ಯಥ ಸಾ ಶುಷ್ಯತಿ ಸರ್ವಂ ಜಹಾತಿ ಸರ್ವಃ ಶುಷ್ಯತ್ಯೇವಮೇವ ಖಲು ಸೋಮ್ಯ ವಿದ್ಧೀತಿ ಹೋವಾಚ ॥ ೨ ॥**

ಅ ॥ ಯಾವಾಗ ವೃಕ್ಷಜೀವನ (ರೋಗಗ್ರಸ್ತವಾದ) ಒಂದು ಗೆಲ್ಲನ್ನು ಅನಿರುದ್ಧರೂಪಿ ಶ್ರೀಹರಿಯು ಬಿಡುತ್ತಾನೋ, ಆಗ ಆ ಗೆಲ್ಲು ಒಣಗುತ್ತದೆ ಹೀಗೆಯೇ ಎರಡನೇ ಕೊಂಬೆಯನ್ನು ಬಿಟ್ಟರೆ ಅದೂ ಒಣಗುತ್ತದೆ. ಮೂರನೇ ಕೊಂಬೆಯನ್ನು ಬಿಟ್ಟರೆ ಆಗ ಅದೂ ಒಣಗುತ್ತದೆ. ಹೀಗೆ ಎಲ್ಲಾ ಭಾಗವನ್ನು ಬಿಟ್ಟರೆ ಸಂಪೂರ್ಣ ಮರವೇ ಒಣಗುತ್ತದೆ ಹೇಗೋ ಹೀಗೆಯೇ ಎಲೋ ಮಗನೇ ಮನುಷ್ಯಶರೀರದಲ್ಲಿಯೂ ಜೀವನು ಈಶ್ವರನ ಅಧೀನನಾಗಿಯೇ ಇದ್ದಾನೆಂದು ತಿಳಿ ಎಂದು ತಂದೆಯು ಹೇಳಿದನು

ವಿ ॥ ರಸವನ್ನು ಸುರಿಸುವುದು, ಮರವು ಒಣಗುವುದು ಇತ್ಯಾದಿಗಳಿಂದ ವೃಕ್ಷದಲ್ಲಿ ಜೀವವಿದೆ ಎಂದು ಸಿದ್ಧವಾಗುವ ಕಾರಣ ಸ್ಥಾವರಗಳು ಜೀವವುಳ್ಳವುಗಳಾದುದರಿಂದ ಅಚೇತನಗಳೆಂದು ಹೇಳುವ ಬೌದ್ಧಾದಿಗಳ ಮತಗಳು ಅಯುಕ್ತವೆಂದು ಸಿದ್ಧವಾಯಿತು ॥ ೨ ॥

**ಪೀ— ಏವಮೇವ ಖಲು ಸೋಮ್ಯ** ಎಂದು ಹೇಳಿದುದನ್ನು ವಿವರಿಸಿ ಹೇಳುತ್ತಾರೆ—

**ಉ. ॥ ಜೀವಾಪೇತಂ ವಾವ ಕಿಲೇದಂ ಮ್ರಿಯತೇ ನ ಜೀವೋ ಮ್ರಿಯತ ಇತಿ ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ॥ ಇತ್ಯೇಕಾದಶಃ ಖಂಡಃ ॥ ೮—೧೧ ॥ ॥ ೩ ॥**

ಅ ॥ ಶ್ರೀಹರಿಯಿಂದ ಬಿಡಲ್ಪಟ್ಟ ದೇಹವುಳ್ಳ ಪ್ರಾಣಿಗಳ ಸಮೂಹವು ಸಾಯುತ್ತದೆ. (**ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ಬುಧೈಃ** ಎಂದು ಸ್ಮೃತಿಯು.) (ಹೀಗೆಯೇ ಶ್ರೀಹರಿಗೂ ಮರಣವಿದ್ದರೆ ಅವನಿಗೆ ವಿಶೇಷವೇನೆಂದರೆ ) ಶ್ರೀಹರಿಯು ಯಾವಾಗಲೂ ಸಾಯುವುದೇ ಇಲ್ಲ. (ಹೀಗೆ ಜೀವ ಪರಮಾತ್ಮರು ಅತ್ಯಂತ ವಿಲಕ್ಷಣರಾಗಿರುತ್ತಾರೆ—)..........ಹೀಗೆ ಉಪದೇಶ ಮಾಡಿದ ಮೇಲೆ ಮಗನು ಹೀಗೆ ಜೀವನಿಗೆ ಸ್ಥಿತ್ಯಾದಿಗಳನ್ನು ಮಾಡತಕ್ಕ ಪರಮಾತ್ಮನು (ಈ ಶರೀರದಲ್ಲಿಯೇ ಜೀವನೊಳಗೆ ಇದ್ದರೆ ಜೀವನಿಗೆ ಏಕೆ ಕಾಣುವುದಿಲ್ಲ? ಅತಿ ಸೂಕ್ಷ್ಮನಾದುದರಿಂದ ಕಾಣುವುದಿಲ್ಲ ಎಂದರೆ— ಹಾಗೆ ಹೇಳಕೂಡದು. ಏಕೆಂದರೆ— ಸೂಕ್ಷ್ಮವಾದ ಭಗವದ್ರೂಪವನ್ನು ಕಾಣತಕ್ಕ ಜೀವನಿಗೆ ಸೂಕ್ಷ್ಮದರ್ಶನ ಶಕ್ತಿಯಿದೆ, ಎಂಬ ಅಭಿಪ್ರಾಯದಿಂದ) ಮರಳಿ ಮಗನು ಕೇಳಿದ್ದಕ್ಕೆ ತಂದೆಯು ಉತ್ತರ ಕೊಟ್ಟನು.

ವಿ ॥ (1) ಈ ಪ್ರಕರಣದಲ್ಲಿ ಜೀವಶಬ್ದದಿಂದ ಪರಮಾತ್ಮನನ್ನೇ ಇಟ್ಟುಕೊಳ್ಳಬೇಕು. **ಜೀವ ಇತಿ ಭಗವತೋಽನಿರುದ್ಧಸ್ಯಾಖ್ಯಾ** ಎಂದು ವೇದವು **ವಿಷ್ಣುರ್ಜೀವ ಇತಿ ಪ್ರೋಕ್ತಃ ಸತತಂ ಪ್ರಾಣ**

**ಧಾರಣಾತ್** ಎಂದು ಸ್ಮೃತಿಯೂ ಇದೆ. ಸಂಸಾರಿಯು ಮುಖ್ಯವಾಗಿ ಪ್ರಾಣವನ್ನು ಧರಿಸಿಕೊಂಡು ಇದ್ದಾನೆಂಬುವುದು ಕೂಡುವುದಿಲ್ಲವಷ್ಟೆ. (2) ವೃಕ್ಷಜೀವನಿಗೆ ದೇಹಸಮೇತ ಸುಖಿಯಾಗಿಯೇ ಇರಬೇಕೆಂಬುದು ಇಚ್ಛೆಯಿದ್ದರೂ ಈಶ್ವರನ ಅನುಗ್ರಹವಿದ್ದರೆ ಮಾತ್ರ ಕಡಿಯಲಿಕ್ಕೆ ಬೇಕಾದ ಕಾರಣಗಳು ಇದ್ದರೂ ಅವುಗಳಿಂದ ಕೆಡಕುಬಾರದೆ ಸರಿಯಾಗಿ ಇರುತ್ತಾನೆ. ಈಶ್ವರನ ಅನುಗ್ರಹವಿಲ್ಲವಾದರೆ ಕೊಡಲಿ ಮೊದಲಾದ ಬಾಹ್ಯಕಾರಣಗಳು ಇಲ್ಲದಿದ್ದರೂ ತನ್ನಷ್ಟಕ್ಕೇನೇ ಬೀಳುವಿಕೆ ಒಣಗುವಿಕೆ ಮೊದಲಾದ ಅನಿಷ್ಟಗಳನ್ನು ಹೊಂದುತ್ತಾನೆ. ಹೀಗೆಯೇ ಮನುಷ್ಯರ ಶರೀರದಲ್ಲಿಯೂ ಇಟ್ಟುಕೊಳ್ಳಬೇಕು ಜೀವನು ಈಶ್ವರನ ಅಧೀನದಲ್ಲಿರುವವನೆಂದು ತಿಳಿಯಲೇಬೇಕು. ॥ ೮—೧೧ ॥ ॥ ೩ ॥

**ಪೀ**—ವೃಕ್ಷದೃಷ್ಟಾಂತವನ್ನು ಹೇಳಿದುದರಿಂದ ಶ್ವೇತಕೇತುವಿನ ಪ್ರಶ್ನೆಗೆ ಉತ್ತರವು ಯಾವುದಾಯಿತೆಂದರೆ—ಅದರ ಅಭಿಪ್ರಾಯ ಹೇಳುತ್ತಾರೆ—

**ಭಾ. ॥ ಅಭಿಮಾನಿನೋಽಸ್ವತಂತ್ರತ್ವಾದ್ಭೇದೇನ ಜ್ಞಾಯತೇ ತರೌ । ಹರಿಃ ಕಿಮು ಮನುಷ್ಯೇಷು ಶೋಷೋ ಹ್ಯಸ್ಯಾಸ್ವತಂತ್ರತಃ ॥ ೧, ೨, ೩ ॥ ಇತ್ಯೇಕಾದಶಃ ಖಂಡಃ ॥ ॥ ೮—೧೧ ॥** **॥ ೧ ॥**

**ಅ** ॥ ವೃಕ್ಷಜೀವನು ಸ್ವತಂತ್ರನಾಗದಿರುವುದರಿಂದ ಅಲ್ಲಿದ್ದ ಶ್ರೀಹರಿಯು ವೃಕ್ಷಜೀವನಿಂದ ಬೇರೆಯೆಂದೂ ವೃಕ್ಷಜೀವನಿಗೆ ನಿಯಾಮಕನೆಂದೂ ತಿಳಿಯಲ್ಪಡುತ್ತಾನೆ. ಹೀಗೆ ಇರಲು ಮನುಷ್ಯರಲ್ಲಿರತಕ್ಕ ಶ್ರೀಹರಿಯು ಭಿನ್ನನೆಂದೂ ನಿಯಾಮಕನೆಂದೂ ಸುತರಾಂ ಸಿದ್ಧವಾಗುತ್ತದೆ. (**ವೃಕ್ಷಜೀವಃ ಕೇನ ಚಿನ್ನಿಯಮ್ಯಃ ಅಸ್ವತಂತ್ರತ್ವಾತ್ ರಥಾದಿವತ್**=ವೃಕ್ಷಜೀವನೂ ರಥಾದಿಗಳಂತೆಯೇ ಸ್ವತಂತ್ರನಾಗದಿರುವುದರಿಂದ ಇನ್ನೊಬ್ಬ ನಿಯಾಮಕನು ಇದ್ದೇ ಇದ್ದಾನೆ. ಎಂದುಕ್ತವಾಯಿತು.) (ಮನುಷ್ಯರು ಭ್ರಷ್ಟಸಂಕಲ್ಪರಾದುದರಿಂದ ಅಸ್ವತಂತ್ರರೆಂಬುದು ಪ್ರತ್ಯಕ್ಷಸಿದ್ಧ ವೃಕ್ಷಜೀವನಿಗೆ ಸ್ವಾತಂತ್ರ್ಯವಿಲ್ಲವೆಂದು ಯುಕ್ತಿಯಿಂದ ತಿಳಿಯಬೇಕೆನ್ನುತ್ತಾರೆ—) ವೃಕ್ಷಜೀವನಿಗೆ (ತೊಡಕು ಇಲ್ಲದೆ ದೇಹ ಬಿಡದೆ ನಾನು ಇರಬೇಕು, ಎಂದು ಇಚ್ಛೆಯಿದ್ದರೂ) ಸ್ವಾತಂತ್ರ್ಯವಿಲ್ಲದಿರುವುದರಿಂದಲೇ ಒಣಗುವಿಕೆ ತುಂಡಾಗುವಿಕೆ ಮೊದಲಾದ ಅನಿಷ್ಟ ಉಂಟಾಗುತ್ತದೆ. (ಸ್ವಾತಂತ್ರ್ಯವಿರುತ್ತಿದ್ದರೆ ಒಣಗುವಿಕೆ ಮೊದಲಾದ ಅನಿಷ್ಟಗಳು ಬರುತ್ತಿರಲಿಲ್ಲ.) ॥ ೮—೧೧ ॥ ॥ ೧ ॥

**ಹನ್ನೊಂದನೇ ಖಂಡವು ಮುಗಿಯಿತು.**

## ೧೨ನೇ ಖಂಡವು

**ಪೀ**—ಜೀವನಿಗೆ ಸ್ಥಿತ್ಯಾದಿಗಳನ್ನು ಕೊಡತಕ್ಕ ಶ್ರೀಹರಿಯೇ ಶರೀರದಲ್ಲಿದ್ದರೂ ಜೀವನಿಗೆ ಏಕೆ ಕಾಣುವುದಿಲ್ಲ; ಶ್ರೀಹರಿಯು ಸೂಕ್ಷ್ಮನಾದುದರಿಂದ ಕಾಣುವುದಿಲ್ಲ ಎಂದು ಹೇಳಕೂಡದು. ಕೂದಲಿನ ತುದಿಯ ನೂರ (೧೦೦)ನೇ (೧) ಒಂದಂಶದಷ್ಟು ಸೂಕ್ಷ್ಮನಾದ ಜೀವನು ಅತಿಸೂಕ್ಷ್ಮವನ್ನು ನೋಡಲು ಶಕ್ತನಾಗಿದ್ದಾನೆ. ಎಂಬ ಅಭಿಪ್ರಾಯದಿಂದ ಮರಳಿ ಹೇಳು ಎಂದು ಪ್ರಶ್ನಿಸಿಕೊಂಡ ತಂದೆಯು ಹೇಳಿದನು.

**ಉ. ॥ ನ್ಯಗ್ರೋಧಫಲಮತ ಆಹರೇತೀದಂ ಭಗವ ಇತಿ ಭಿಂಧೀತಿ ಭಿನ್ನಂ ಭಗವ ಇತಿ ಕಿಮತ್ರ ಪಶ್ಯಸೀತ್ಯಣ್ವ್ಯ ಇವೇಮಾ ಧಾನಾ ಭಗವ**

**ಇತ್ಯಾಸಾವುಂಗ್ಯೆಕಾಂ ಭಿಂಧೀತಿ ಭಿನ್ನಾ ಭಗವ ಇತಿ ಕಿಮತ್ರ ಪಶ್ಯಸೀತಿ ನ ಕಿಂಚನ ಭಗವ ಇತಿ ||** || ೧ ||

ಅ || ಎಲೋ ಮಗನೇ ಗೋಳೀಮರದಿಂದ ಹಣ್ಣನ್ನು ತಾ ಎಂದು ತಂದೆಯು ಹೇಳಿದನು. ಆಗ ಮಗನು ಪೂಜ್ಯರೇ ಗೋಳೀಹಣ್ಣನ್ನು ತಂದೆನೆಂದನು. ತಂದೆಯು ಅದನ್ನು ಒಡೆಯುವವನಾಗು ಎಂದನು. ಮಗನು ಹಣ್ಣನ್ನು ಒಡೆದು ಒಡೆದೆನು ಎಂದನು. ಒಡೆದ ಹಣ್ಣಿನಲ್ಲಿ ಏನನ್ನು ನೋಡುತ್ತಿ ಎಂದು ತಂದೆಯು ಕೇಳಿದನು. ಆಗ ಮಗನು ಸೂಕ್ಷ್ಮಗಳಂತೆಯೇ ಇರತಕ್ಕ ಈ ಬೀಜಗಳನ್ನು ನೋಡುತ್ತೇನೆ ಎಂದನು. ಎಲೋ ಮಗನೇ ಈ ಬೀಜಗಳ ಮಧ್ಯದಲ್ಲಿ ಒಂದು ಬೀಜವನ್ನು ಒಡೆದು ಹಾಕು ಎಂದು ತಂದೆಯು ಹೇಳಿದನು ಆಗ ಮಗನು ಆ ಬೀಜವನ್ನು ಒಡೆದು ತಂದೆಯೇ ಒಡೆದನು ಎಂದನು. ಒಡೆದ ಬೀಜದಲ್ಲಿ ಏನನ್ನು ನೋಡುತ್ತಿ, ಎಂದು ತಂದೆಯು ಕೇಳಿದನು. ಆಗಪೂಜ್ಯರೇ ಅದರಲ್ಲಿ ಏನನ್ನೂ ನೋಡುವುದಿಲ್ಲ, ಎಂದು ಮಗನು ಹೇಳಿದನು. || ೧ ||

**ಉ. || ತಂ ಹೋವಾಚ ಯಂ ವೈ ಸೋಮ್ಯೈತಮಣಿಮಾನಂ ನ ನಿಭಾಲಯಸ ಏತಸ್ಯ ವೈ ಸೋಮ್ಯೈಷೋಽಣಿಮ್ನ ಏವಂ ಮಹಾನ್ಯಗ್ರೋಧ-ಸ್ತಿಷ್ಠತಿ ಶ್ರದ್ಧತ್ಸ್ವ ಸೋಮ್ಯೇತಿ ||** || ೨ ||

ಅ || ಆಗ ಮಗನಿಗೆ ತಂದೆಯು ಹೇಳಿದನು ಈ ಅತಿಸೂಕ್ಷ್ಮನಾದ ಬೀಜಜೀವನನ್ನು ನೋಡುವುದಿಲ್ಲ. ಅತಿಸೂಕ್ಷ್ಮನಾದ ಶ್ರೀಹರಿಯ ಸಾಮರ್ಥ್ಯದಿಂದಲೇ ಈ ಗೋಳೀಮರವು ಅತಿ ದೊಡ್ಡದಾಗಿ ಬೆಳೆದಿದೆ ಎಂದು ನಂಬು, ಎಂದು ತಂದೆಯು ಹೇಳಿದನು.

ವಿ || ಇಲ್ಲಿ ವೃಕ್ಷವು ಪ್ರಪಂಚಸ್ಥಾನ. ಗೋಳೀಫಲವು ಶರೀರಸ್ಥಾನವು. ಬೀಜವು ಜೀವಸ್ಥಾನ. ಸೂಕ್ಷ್ಮವಾದ ಗೋಳೀಮರದ ಬೀಜವು ತೋರಿದರೂ ಅದರಲ್ಲಿರುವ ಭಗವತ್ಸನ್ನಿಧಾನದಿಂದಲೇ ಗೋಳೀಮರವು ಇರುವುದು. ಬೀಜದೊಳಗಣ ಬೀಜಜೀವನು ಬೀಜದೊಳಗಣ ಪರಮಾತ್ಮನು ಪರಮಸೂಕ್ಷ್ಮನಾದುದರಿಂದ ಕಾಣುವುದಿಲ್ಲ. ಹಾಗೆಯೇ ಜೀವನಿಂದಲೂ ಅತಿಸೂಕ್ಷ್ಮನಾದುದರಿಂದ ಅದರೊಳಗಣ ಶ್ರೀಹರಿಯು ಜೀವನಿಗೆ ಕಾಣುವುದಿಲ್ಲ. ಅದುಕಾರಣ ನಿಯಾಮಕನು ಇನ್ನೊಬ್ಬನಿದ್ದಾನೆಂದೂ ಸ್ಥಿರವಾಯಿತು. || ೨ ||

**ಉ. || ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ||ಇತಿ ದ್ವಾದಶಃ ಖಂಡಃ||೮-೧೨||೩||**

ಅ || **ಸ ಯಃ** ಇತ್ಯಾದಿಗಳಿಗೆ ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು.

ವಿ || ಗೋಳೀಮರವೆಂಬ ಕಾರ್ಯವನ್ನು ನೋಡುವಾಗ ಈಶ್ವರನ ಸಾಮರ್ಥ್ಯವು ಪ್ರತ್ಯಕ್ಷದಂತೆ ಕಾಣುತ್ತದೆ. ಹೀಗೆ ಅವನ ಸಾಮರ್ಥ್ಯವು ಕಾಣುತ್ತಿದ್ದರೂ ಅವನು ಕಾಣುವುದಿಲ್ಲವೆಂಬುದನ್ನು ಹೇಗೆ ನಾನು ತಿಳಿಯುವುದು, ಎಂಬ ಅಭಿಪ್ರಾಯದಿಂದ ತಾವೇ ನನಗೆ ತಿಳಿಸಬೇಕೆಂದು ಪ್ರಾರ್ಥಿಸಿದಾಗ ತಂದೆಯವರು ಹಾಗೆಯೇ ಆಗಲಿ ಎಂದರು. ।'೮-- ೧೨ || || ೩ ||

**ಟೀ**—ಅತ್ಯಂತ ಸ್ಥೂಲವಾದ ಪೃಥಿವ್ಯಾದಿ ಜಗತ್ತು ಅತ್ಯಂತ ಸೂಕ್ಷ್ಮನಾದ ಸತ್ ಎನಿಸಿದ ಬ್ರಹ್ಮನಿಂದ ಹುಟ್ಟುತ್ತದೆ, ಎಂಬುದು ಹೇಗೆ ಕೂಡುತ್ತದೆ? ಎಂಬುವುದನ್ನು ದೃಷ್ಟಾಂತ ಕೊಟ್ಟು ಮರಳಿ ನನಗೆ ತಿಳಿಸಬೇಕು, ಎಂದು ಮಗನು ಕೇಳಿದಾಗ ಸೂಕ್ಷ್ಮಗಳಾದ ಬೀಜಗಳ ಸಾಮರ್ಥ್ಯದಿಂದ ಅದರ ಪರಿಣಾಮವಾದ ದೊಡ್ಡ ಗೋಳೀಮರವಿದೆ ಹೀಗೆಯೇ ಪರಮಸೂಕ್ಷ್ಮನಾದ ಬ್ರಹ್ಮನ ಸಾಮರ್ಥ್ಯದಿಂದ ಬ್ರಹ್ಮನ ಪರಿಣಾಮವೇ ಆದುದು ಪ್ರಪಂಚವು, ಎಂದು ತಂದೆಯು ಉತ್ತರ ಕೊಟ್ಟನು. ಎಂದು ಪರರು ಪ್ರಶ್ನೋತ್ತರಗಳಿಗೆ ಅಭಿಪ್ರಾಯವನ್ನು ಹೇಳಿರುವರು, ಇದು ಅಯುಕ್ತವೆಂಬ ಅಭಿಪ್ರಾಯದಿಂದ ಪ್ರಶ್ನೆಯ ಅಭಿಪ್ರಾಯವನ್ನು ಭಾಷ್ಯಕಾರರು ಹೇಳುತ್ತಾರೆ—

**ಭಾ. ॥ (೧) ಜ್ಞಾಯತೇ ನ ಕಥಂ ಸ್ವಸ್ಮಿನ್ ಸೂಕ್ಷ್ಮೇ ಜ್ಞಾತೇ ಪರೋ ಹರಿಃ । ತತ್ರಸ್ಥ ಇತಿ ಪೃಷ್ಟಃ ಸಂಸ್ತಮಾಹೋದ್ದಾಲಕಃ ಸುತಂ ॥ (೨) ವಟಬೀಜೇ ಯಥಾ ಸೂಕ್ಷ್ಮೇ ಮಹಾನ್ನ್ಯಗ್ರೋಧಭಾವಯುಕ್ । ನ ದೃಶ್ಯತೇಽಭಿಮಾನೀ ಸ ಏವಂ ಜೀವಗತೋ ಹರಿಃ ॥ ೧, ೨, ೩ ॥ ॥ ಇತಿ ದ್ವಾದಶಃ ಖಂಡಃ ॥ ೮—೧೨ ॥ ॥ ೧ ॥**

**ಅ** ॥ (೧) ಸೂಕ್ಷ್ಮಜೀವನಾದ ತಾನು ತಿಳಿಯಲ್ಪಡುತ್ತಿರಲು ಅಲ್ಲಿರತಕ್ಕ ಸರ್ವೋತ್ತಮನಾದ ಶ್ರೀಹರಿಯು ಏತಕ್ಕೆ ತಿಳಿಯಲ್ಪಡುವುದಿಲ್ಲ, ಹೀಗೆ ಉದ್ದಾಲಕರು ಪ್ರಶ್ನಿಸಿಕೊಂಡವರಾಗಿ ಮಗನಿಗೆ ಉತ್ತರ ಹೇಳಿದರು. (ಹೀಗೆ ಜೀವನಿಗೆ ಸ್ಥಿತಿ (ಇರುವಿಕೆ) ಮೊದಲಾದುದನ್ನು ಕೊಡತಕ್ಕ ಶ್ರೀಹರಿಯು ಈ ಶರೀರದಲ್ಲಿರತಕ್ಕ ಜೀವನಲ್ಲಿರುವುದಾದರೆ ಜೀವನಿಗೆ ಏಕೆ ಕಾಣುವುದಿಲ್ಲ, ಸೂಕ್ಷ್ಮನಾದುದರಿಂದ ಕಾಣುವುದಿಲ್ಲವೆಂದರೆ – ಸೂಕ್ಷ್ಮವಾದ ತನ್ನ ರೂಪವನ್ನು ಕಾಣುವ ಜೀವನಿಗೆ ಸೂಕ್ಷ್ಮವಾದ ಬ್ರಹ್ಮರೂಪವನ್ನು ನೋಡತಕ್ಕ ಶಕ್ತಿಯಿರಬಹುದಷ್ಟೆ) (೨)(ಈ ಪ್ರಶ್ನೆಗೆ ಉತ್ತರವಾಗಿ **ಯಂ ವೈ ಸೋಮ್ಯೈತ ಮಣಿಮಾನಂ ನ ನಿಭಾಲಯಸೇ** ಎಂಬ ವಾಕ್ಯದ ತಾತ್ಪರ್ಯ ಹೇಳುತ್ತಾರೆ—) ಸೂಕ್ಷ್ಮವಾದ ಗೋಳೀಮರದ ಬೀಜವು ಕಾಣಲ್ಪಡುತ್ತಿರಲು ದೊಡ್ಡದಾದ ಗೋಳೀಮರದಲ್ಲಿ ತನ್ನದೆಂದು ಅಭಿಮಾನವನ್ನು ಹೊಂದಿರತಕ್ಕ ಬೀಜಾಭಿಮಾನಿಯು (ಅವನೇ ವೃಕ್ಷಕ್ಕೂ ಅಭಿಮಾನಿಯು) (ಅತಿಸೂಕ್ಷ್ಮವಾದುದರಿಂದ) ಹೇಗೆ ಕಾಣಲ್ಪಡುವುದಿಲ್ಲವೋ, ಹೀಗೆಯೇ ಸೂಕ್ಷ್ಮನಾದ ಜೀವನು ತೋರಿದರೂ ಪರಮಸೂಕ್ಷ್ಮನಾದ ಕಾರಣ ಜೀವನೊಳಗಣ ಹರಿಯು ಕಾಣಲ್ಪಡುವುದಿಲ್ಲ. ॥ ೮—೧೨ ॥ ॥ ೧ ॥

**ಹನ್ನೆರಡನೇ ಖಂಡವು ಮುಗಿಯಿತು.**

## ೧೩ನೇ ಖಂಡವು

**ಟೀ**—ಗೋಳೀಮರ ಮೊದಲಾದ ಕಾರ್ಯದಿಂದ ಈಶ್ವರನ ಸಾಮರ್ಥ್ಯವು ಕಾಣುತ್ತಿದ್ದರೂ ಅವನು ಕಾಣುವುದಿಲ್ಲವೆಂಬುದನ್ನು ನಾನು ಹೇಗೆ ತಿಳಿದೇನು ಎಂಬ ಅಭಿಪ್ರಾಯದಿಂದ ಮರಳಿ ಪ್ರಾರ್ಥಿಸಿದುದಕ್ಕೆ ತಂದೆಯು ಹೇಳಿದನು—

**ಉ. ॥ ಲವಣಮೇತದುದಕೇಽವಧಾಯಾಥ ಮಾ ಪ್ರಾತರುಪಸೀದಥಾ ಇತಿ ತದ್ಧ ತಥಾ ಚಕಾರ ತꣳ ಹೋವಾಚ ಯದ್ದೋಷಾ ಲವಣಮುದಕೇಽ-**

**ವಥಾ ಅಂಗ ತದಾಹರೇತಿ ತದ್ಧಾವಮೃಶ್ಯ ನ ವಿವೇದ ಯಥಾ ವಿಲೀನ-ಮೇವ ॥ ೧ ॥**

ಅ ॥ ಎಲೋ ಮಗನೇ ಉಪ್ಪಿನ ಹೆಂಟೆಯನ್ನು ಮಡಿಕೆ ಮೊದಲಾದವುಗಳಲ್ಲಿರತಕ್ಕ ನೀರಿನಲ್ಲಿ ರಾತ್ರಿಯಲ್ಲಿ ಹಾಕಿ ನನ್ನೆಡೆಗೆ ಬೆಳಗ್ಯೆ ಬಾ ಎಂದು ತಂದೆಯು ಹೇಳಿದ ಪ್ರಕಾರ ಮಗನು ಮಾಡಿದನು. ಬೆಳಗ್ಯೆ ತನ್ನ ಬಳಿಗೆ ಬಂದ ಮಗನಿಗೆ ತಂದೆಯು ಹೇಳಿದನು. ರಾತ್ರಿಯಲ್ಲಿ ಯಾವ ಉಪ್ಪಿನ ಹೆಂಟೆಯನ್ನು ನೀರಿನಲ್ಲಿ ಇಟ್ಟಿದ್ದಿಯೋ ಅದನ್ನು ತಾ ಎಂದನು. ಆ ಮಡಿಕೆಯನ್ನು ತಂದು ಅದರ ಮಧ್ಯದಲ್ಲಿ ಕೈಯನ್ನು ಹರಡಿಸಿ ಮಗನು ಉಪ್ಪಿನ ಹೆಂಟೆಯನ್ನು ತಿಳಿಯಲಿಲ್ಲ. ಪೂರ್ಣ ಕಳೆದು ಹೋದ ವಸ್ತುವನ್ನು ಹೇಗೆ ತಿಳಿಯುವುದಿಲ್ಲವೋ ಹಾಗೆಯೇ ತಿಳಿಯಲಿಲ್ಲ. ॥ ೧ ॥

**ಉ. ॥ ಅಂಗಾಸ್ಯಾಂತಾದಾಚಾಮೇತಿ ಕಥಮಿತಿ ಲವಣಮಿತಿ ಮಧ್ಯಾ-ದಾಚಾಮೇತಿ ಕಥಮಿತಿ ಲವಣಮಿತ್ಯಂತ್ಯಾದಾಚಾಮೇತಿ ಕಥಮಿತಿ ಲವಣ-ಮಿತ್ಯಭಿಪ್ರಾಸ್ಯೈತದಥ ಮೋಪಸೀದಥಾ ಇತಿ ತದ್ಧ ತಥಾ ಚಕಾರ ತಚ್ಛಶ್ವ-ತ್ಸಂವರ್ತತೇ ತꣳ ಹೋವಾಚಾತ್ರ ವಾವ ಕಿಲ ಸತ್ಸೋಮ್ಯ ನ ನಿಭಾಲಯ-ಸೇಽತ್ರೈವ ಕಿಲೇತಿ ॥ ೨ ॥**

ಅ ॥ ಮಗನೇ ಪೂರ್ವದಿಕ್ಕಿನಲ್ಲಿದ್ದ ಏಕದೇಶದಲ್ಲಿದ್ದ ಈ ನೀರನ್ನು ತೆಗೆದು ಆಚಮನ ಮಾಡು. ಎಂದು ತಂದೆಯು ಹೇಳಿದನು. ಆಚಮನಮಾಡಿದ ಮಗನೊಡನೆ ಹೇಗೆ ಇದೆ ಎಂದು ತಂದೆಯು ಕೇಳಿದನು. ಉಪ್ಪಾಗಿ ಇದೆ ಎಂದು ಮಗನು ಹೇಳಿದನು. ಹೀಗೆಯೇ ಮಧ್ಯಭಾಗದಲ್ಲಿರತಕ್ಕ ಮತ್ತು ಪಡುಭಾಗದಲ್ಲಿರತಕ್ಕ ನೀರನ್ನು ತೆಗೆದು ಆಚಮನಮಾಡು ಎಂದನು.... ಅದೂ ಉಪ್ಪಾಗಿಯೇ ಇದೆ ಎಂದನು. ಈ ನೀರನ್ನು ಚೆಲ್ಲಿ ನನ್ನ ಬಳಿಗೆ ಬಾ ಎಂದು ತಂದೆಯು ಹೇಳಿದನು. ಮಗನು ಹಾಗೆಯೇ ಮಾಡಿದನು. (ಆ ಉಪ್ಪು ಎಲ್ಲಿಗೆ ಹೋಯಿತೆಂದರೆ ವೇದಪುರುಷನು ಹೇಳುತ್ತಾನೆ.) ಆ ಉಪ್ಪಿನ ಹೆಂಟೆಯು ಸಂಪೂರ್ಣ ವಾಗಿ ನೀರಿನಲ್ಲಿಯೇ ಕರಗಿಹೋಗುತ್ತದೆ (ಬೇರೆ ಕಡೆ ಹೋಗುವುದಿಲ್ಲ.) ಮಗನಿಗೆ ತಂದೆಯು ಹೇಳಿ ದನು. ಮಗನೇ ಉಪ್ಪಿನ ಗುಣವನ್ನು ಕಂಡರೂ ನೀರಿನಲ್ಲಿಯೇ ಸೇರಿರತಕ್ಕ ಸೂಕ್ಷ್ಮ ಉಪ್ಪಿನ ಭಾಗ ವನ್ನೂ ನೋಡುವುದಿಲ್ಲ. ಎಂದು ಹೇಳಿದನು.

ವಿ ॥ ಉಪ್ಪಿನ ಗುಣವಾದ ಲವಣರಸವು, ತೋರಿಬಂದರೂ ಹೇಗೆ ಉಪ್ಪು ಕಾಣುವುದಿಲ್ಲವೋ, ಹಾಗೆಯೇ ಶ್ರೀಹರಿಯ ಸಾಮರ್ಥ್ಯವು ಕಾಣುತ್ತಿದ್ದರೂ ಶ್ರೀಹರಿಯು ಕಾಣುವುದಿಲ್ಲ. ॥ ೨ ॥

ಪೀ—ಹೀಗೆ ಮಗನ ಸಂಶಯವನ್ನು ಪರಿಹರಿಸಿ ನಿಯಾಮಕನು ಮತ್ತೊಬ್ಬನಿದ್ದಾನೆಂದು ಹೇಳಿದ್ದು ಯುಕ್ತವೆನ್ನುತ್ತಾರೆ —

**ಉ. ॥ ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯꣳ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾ-ಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ಇತಿ ತ್ರಯೋದಶಃ ಖಂಡಃ ॥**

**॥ ೮-೧೩ ॥ ॥ ೩ ॥**

ಅ || ............ಹೀಗೆ ತಂದೆಯಿಂದ ಉಪದೇಶಿಸಿಕೊಂಡ ಮಗನು, ಇಂತಹ ಶ್ರೀಹರಿಯು ಅಜ್ಞಾನಿಯಾದ ನನಗೆ ಯಾವ ಉಪಾಯದಿಂದ ತೋರುವನು? ಆತನನ್ನು ಹೊಂದುವುದು ಹೇಗೆ? ಎಂದು ತಿಳಿಯಲಿಚ್ಛೆಯಿಂದ ಮರಳಿ ಅದಕ್ಕೆ ಉಪಾಯ ಹೇಳಬೇಕೆಂದು ಪ್ರಾರ್ಥಿಸಿದುದಕ್ಕೆ ಉತ್ತರಕೊಡುವೆನೆಂದು ತಂದೆಯು ಹೇಳಿದನು. || ೮—೧೩ || || ೩ ||

ಪೀ—ಸದ್ರೂಪನಾದ ಬ್ರಹ್ಮನೇ ಜಗತ್ತಿಗೆ ಮೂಲನೆಂದಾದರೆ—ಆತನು ಕಾಣದಿರಲು ಕಾರಣವೇನು? ಎಂಬುವುದನ್ನು ದೃಷ್ಟಾಂತಕೊಟ್ಟು ವಿವರಿಸಿರಿ ಎಂದು ಪ್ರಶ್ನೆಯ ಅಭಿಪ್ರಾಯವೆಂದು ಪರರು ಹೇಳಿದ್ದು ಅಯುಕ್ತವು. ಏಕೆಂದರೆ— ಪರರ ಮತದಲ್ಲಿ ಸನ್ ಘಟಃ ಇತ್ಯಾದಿಗಳಲ್ಲಿಯೂ ಅಧಿಷ್ಠಾನವಾದ ಸದ್ರೂಪವಾದ ಅರ್ಥವು ತೋರುವುದರಿಂದ ಅವರು ಹೀಗೆ ಪ್ರಶ್ನೆ ಮಾಡುವುದೇ ಅಯುಕ್ತವು. ಮತ್ತು ಸದ್ರೂಪವಾದ ವಸ್ತುವು ಪರಮಸೂಕ್ಷ್ಮವಾದುದರಿಂದ ಕಾಣುವುದಿಲ್ಲವೆಂದು ಪೂರ್ವಖಂಡದಲ್ಲಿಯೇ ಹೇಳಿದೆ, ಎಂಬ ಅಭಿಪ್ರಾಯದಿಂದ ಆಚಾರ್ಯರು ಮರಳಿ ಪ್ರಶ್ನೆ ಮಾಡಿದುದರ ಅಭಿಪ್ರಾಯ ಹೇಳುತ್ತಾರೆ—

**ಭಾ. || (೧) ಕಥಂ ದೃಶ್ಯೇತ ತಚ್ಛಕ್ತಿಃ ಪೃಥಕ್ತಸ್ಯ ಹ್ಯದರ್ಶನೇ । ಇತಿ ಭಾವಯುತಂ ಪ್ರಾಹ ಪುತ್ರಮುದ್ದಾಲಕಃ ಪುನಃ || (೨) ಯಥಾಽಪ್ಸು ಲವಣಂ ವ್ಯಾಪ್ತಂ ರಸದೃಷ್ಟಾವಪಿ ನ ದೃಶ್ಯತೇ । ಏವಂ ಚೇತನಗೋ ವಿಷ್ಣುಸ್ತದ್ಭಿನ್ನೋಽಪಿ ನ ದೃಶ್ಯತೇ ೧,೨,೩, || ಇತಿ ತ್ರಯೋದಶಃ ಖಂಡಃ || ೮—೧೩ || || ೧ ||**

ಅ || (೧) (ಶ್ರೀಹರಿಯು ಜೀವರಿಂದ ಬೇರೆಯಾಗಿ ಹಿಂದೆ ಹೇಳಿದ ಪ್ರಕಾರ ಕಾಣದಿದ್ದರೆ—) ಆತನ ಶಕ್ತಿಯು ಹೇಗೆ ತೋರುವುದು? (ಅಂದರೆ—ಗೋಳೀಮುಂಮೊದಲಾದ ನಾನಾ ವಿಧಗಳಾದ ಕಾರ್ಯಗಳಿಂದ ಈಶ್ವರನಿಗೆ ಅಘಟಿತಘಟಕ ಸಾಮರ್ಥ್ಯವಿದೆ ಎಂದು ಪ್ರತ್ಯಕ್ಷದಂತಿದೆ? ಹೀಗೆ ಆತನ ಸಾಮರ್ಥ್ಯವು ಪ್ರತ್ಯಕ್ಷವಾಗಿದ್ದರೂ ಅವನು ಕಾಣುವುದಿಲ್ಲ ಎಂಬುದು ಹೇಗೆ ಕೂಡುತ್ತದೆ?) ಎಂಬ ಅಭಿಪ್ರಾಯವಿರುವ ಮಗನಿಗೆ ಮರಳಿ ಉದ್ದಾಲಕರು ಹೇಳಿದರು. (೨) (ಮಗನ ಪ್ರಶ್ನೆಗೆ ಉತ್ತರವಾಗಿ ಲವಣರಸ ದೃಷ್ಟಾಂತವನ್ನು ಹೇಳಿದ ಕಾರಣ ಅದರ ಅಭಿಪ್ರಾಯ ಹೇಳುತ್ತಾರೆ—) ಹೇಗೆ ಲವಣರಸವು ಪ್ರತ್ಯಕ್ಷವಾಗುವುದಾದರೂ ನೀರಿನಲ್ಲಿ ಸೇರಿರುವ ಲವಣವು ನೀರಿನಿಂದ ಬೇರೆಯಾಗಿ ಕಾಣುವುದಿಲ್ಲವೋ ಹೀಗೆಯೇ ಈಶ್ವರನ ಅಚಿಂತ್ಯಸಾಮರ್ಥ್ಯವು ತೋರಿದರೂ ಜೀವರೊಳಗೆ ಜೀವರಿಂದ ಭಿನ್ನನಾದ ವಿಷ್ಣುವು ಕಾಣುವುದಿಲ್ಲ. || ೮—೧೩ || || ೧ ||

ಹದಿಮೂರನೇ ಖಂಡವು ಮುಗಿಯಿತು.

---

## ೧೪ನೇ ಖಂಡವು

ಪೀ— ಗುರುಗಳ ಉಪದೇಶವು ಪರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಳ್ಳಲಿಕ್ಕೂ ಹೊಂದಲಿಕ್ಕೂ ಕಾರಣವು ಎಂಬುವುದನ್ನು ದೃಷ್ಟಾಂತ ಕೊಟ್ಟು ತಂದೆಯು ಹೇಳುತ್ತಾರೆ--

**ಉ. || ಯಥಾ ಸೋಮ್ಯ ಪುರುಷಂ ಗಂಧಾರೇಭ್ಯೋಽಭಿನದ್ಧಾಕ್ಷಮಾನೀಯ ತಂ ತತೋಽತಿಜನೇ ವಿಸೃಜೇತ್ಸ ಯಥಾ ತತ್ರ ಪ್ರಾಙ್ವೋದಙ್ವಾ-**

**ಧರಾಙ್ವಾ ಪ್ರಧ್ಮಾಯೀತಾಭಿನದ್ಧಾಕ್ಷ ಆನೀತೋಽಭಿನದ್ಧಾಕ್ಷೋ ವಿಸೃಷ್ಟಃ ॥ ॥ ೧ ॥**

ಅ ॥ ಎಲೋ ಮಗನೇ ಹೇಗೆ ಒಬ್ಬ ಧನಿಕನನ್ನು ಗಾಂಧಾರ ಎಂಬ ದೇಶದಿಂದ ಕಣ್ಣುಗಳನ್ನು ಕಟ್ಟಿ ತಂದು ಆ ಮೇಲೆ ನಿರ್ಜನವಾದ ಘೋರಾರಣ್ಯದಲ್ಲಿ ದ್ರವ್ಯಾಪಹಾರಿಯಾದ ಕಳ್ಳನು ಬಿಡುವಾಗ ಆ ಧನಿಕನು ಹೇಗೆ ಆ ಅರಣ್ಯದಲ್ಲಿ ಕಣ್ಣುಕಟ್ಟಿ ಕಾಡಿನಲ್ಲಿ ಬಿಡಲ್ಪಟ್ಟಿರುತ್ತೇನೆ, ಎಂದು ಪೂರ್ವಾಭಿಮುಖವಾಗಿ, ಉತ್ತರಾಭಿಮುಖವಾಗಿ, ಕೆಳಮುಖವಾಗಿ ಅಥವಾ ಎಲ್ಲಾ ದಿಕ್ಕುಗಳಿಗೆ ಅಭಿಮುಖವಾಗಿ, ಗಟ್ಟಿಯಾಗಿ ಕೂಗುವನೋ. ॥ ೧ ॥

**ಉ. ॥ ತಸ್ಯ ಯಥಾಽಭಿನಹನಂ ಪ್ರಮುಚ್ಯ ಪ್ರಬ್ರೂಯಾದೇತಾಂ ದಿಶಂ ಗಂಧಾರಾ ಏತಾಂ ದಿಶಂ ವ್ರಜೇತಿ ಸ ಗ್ರಾಮಾದ್ಗ್ರಾಮಂ ಪೃಚ್ಛನ್ಪಂಡಿತೋ ಮೇಧಾವೀ ಗಂಧಾರಾನೇವೋಪಸಂಪದ್ಯೇತೈವಮೇವೇಹಾಚಾರ್ಯವಾನ್ಪುರುಷೋ ವೇದ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯ ಇತಿ ॥ ೨ ॥**

ಅ ॥ ಆಗ ಒಬ್ಬ ದಯಾಳುವು ಕೂಗತಕ್ಕ ಆ ಧನಿಕನ ಕೂಗನ್ನು ಕೇಳಿ ಕಣ್ಣುಕಟ್ಟಿದ್ದನ್ನು ಬಿಡಿಸಿ ಈ ದಿಕ್ಕಿನಲ್ಲಿ ಗಂಧಾರದೇಶವಿದೆ, ಈ ದಿಕ್ಕಿಗೆ ಹೋಗು, ಎಂದು ಹೇಳಿದಾಗ ಆ ಧನಿಕನು ಅಲ್ಲಿಂದ ಅಲ್ಲಲ್ಲಿ ಕೇಳಿಕೊಂಡು ಪ್ರಾಜ್ಞನಾದವನು ಸ್ಮೃತಿಯುಳ್ಳವನು ಗಂಧಾರದೇಶವನ್ನೇ ಹೊಂದುವನೋ, ಹೀಗೆಯೇ ಅನಾದಿಯಾದ ಅಜ್ಞಾನಾದಿಗಳಿಂದ ಮರೆಯಾದ ತನ್ನ ಜ್ಞಾನವುಳ್ಳ ಜೀವನು ಗುರುಗಳ ಉಪದೇಶದಿಂದ ಪರಬ್ರಹ್ಮನನ್ನು ತಿಳಿದು ಹೊಂದುತ್ತಾನೆ. (ಅಂದರೆ— ಸಂಸಾರದಲ್ಲಿ ಬಿದ್ದುಕೊಂಡಿರುವವನು ಶ್ರೀಹರಿಯ ಅನುಗ್ರಹದಿಂದ ಶ್ರೀಹರಿಯನ್ನು ತಿಳಿಯಬೇಕೆಂದು ಇಚ್ಛಿಸಿ ಗುರುಗಳ ಉಪದೇಶವನ್ನು ಹೊಂದಿ ಕ್ರಮವಾಗಿ ಶ್ರವಣಾದಿ ಸಾಧನಗಳನ್ನು ಹೊಂದಿ ತನ್ನ ಉತ್ಪತ್ತಿಗೆ ಕಾರಣನಾದ ಶ್ರೀಹರಿಯನ್ನು ಪ್ರತ್ಯಕ್ಷೀಕರಿಸಿಕೊಂಡು ಆತನನ್ನು ಹೊಂದುತ್ತಾನೆ.) (ಕಣ್ಣು ಕಟ್ಟಿ ಬಿಡಲ್ಪಟ್ಟವನು ಹೇಗೆ ಮತ್ತೊಬ್ಬನ ಉಪದೇಶದಿಂದ ತನ್ನ ಮನೆಯನ್ನು ನೋಡಿ ಹೋಗುತ್ತಾನೋ ಹಾಗೆಯೇ ಜೀವನು ಗುರುಗಳ ಉಪದೇಶದಿಂದ ತನ್ನಿಂದ ಭಿನ್ನನಾದ ಶ್ರೀಹರಿಯನ್ನು ಪ್ರತ್ಯಕ್ಷೀಕರಿಸಿಕೊಂಡು ಹೊಂದುತ್ತಾನೆಂಬುದು ಅಯುಕ್ತವು. ಭಗವಂತನನ್ನು, ಪ್ರತ್ಯಕ್ಷೀಕರಿಸಿಕೊಂಡ ಕೂಡಲೇ ಆತನ ಪ್ರಾಪ್ತಿಯು ಆಗುವುದಿಲ್ಲವಷ್ಟೆ, ಎಂದರೆ—) ಅಪರೋಕ್ಷಜ್ಞಾನಿಯನ್ನು ಪ್ರಾರಬ್ಧಕರ್ಮವು ಎಷ್ಟರಪರ್ಯಂತ ಬಿಡುವುದಿಲ್ಲವೋ ಅಷ್ಟರ ವರೆಗೆ ಆತನಿಗೆ ಬ್ರಹ್ಮಪ್ರಾಪ್ತಿಯಾಗಲಿಕ್ಕೆ ವಿಲಂಬವು, ಪ್ರಾರಬ್ಧಗಳಾದ ಪುಣ್ಯಾಪಾಪಗಳನ್ನು ಭೋಗಿಸಿ ನಾಶಗೊಳಿಸಿದ ಮೇಲೆ ಜ್ಞಾನಿಯು ನಿಯಮವಾಗಿ ಪರಬ್ರಹ್ಮನನ್ನು ಹೊಂದುತ್ತಾನೆ. ಹೀಗೆ ಉಪದೇಶಿಸಿದರು. ॥ ೨ ॥

ಪೀ—ಜ್ಞಾನಿಗೆ ಭಗವದ್ದರ್ಶನಾದಿಗಳು ಆಗಿ ಆತನನ್ನು ಹೊಂದಲಿಕ್ಕೆ ಕಾರಣ ಹೇಳಿ ಈಗ ಸರ್ವರಿಗೆ ನಿಯಾಮಕನಾದ ಶ್ರೀಹರಿಯಿಂದ ಜೀವನು ಭಿನ್ನನೆಂಬುವುದು ದೃಢವಾಯಿತೆನ್ನುತ್ತಾರೆ —

**ಉ. ॥ ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯꣳ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪ-**

**ಯತ್ಸ್ಯತಿ ತಥಾ ಸೋಽವ್ಯೇತಿ ಹೋವಾಚ ॥ ಇತಿ ಚತುರ್ದಶಃ ಖಂಡಃ ॥**
**॥ ೮—೧೪ ॥ ॥ ೩ ॥**

ಅ ॥ ............ತಂದೆಯ ಉಪದೇಶ ಪ್ರಕಾರ ಶ್ವೇತಕೇತುವು ವೃಕ್ಷಶರೀರದಲ್ಲಿದ್ದ ಜೀವನು ಶ್ರೀಹರಿಯ ಅಧೀನದಲ್ಲಿಯೇ ಇರುತ್ತಾನೆಂದು ತಿಳಿದುಕೊಂಡನು. ಈಗ ಮನುಷ್ಯಶರೀರದಲ್ಲಿಯೂ ಇರುವ ಜೀವನು ಶ್ರೀಹರಿಯ ಅಧೀನನಾಗಿಯೂ ಅಸ್ವತಂತ್ರನಾಗಿಯೂ ಇದ್ದಾನೆ ಎಂಬುವುದನ್ನು ತಿಳಿಸು, ಎಂಬ ಅಭಿಪ್ರಾಯದಿಂದ ಮರಳಿ ನನಗೆ ಉಪದೇಶಿಸಬೇಕೆಂದು ಪ್ರಾರ್ಥಿಸಿಕೊಳ್ಳಲ್ಪಟ್ಟ ತಂದೆಯು ಉಪದೇಶಿಸಿದನು. ॥ ೮—೧೪ ॥ ॥ ೩ ॥

ಪೀ—ಜಗತ್ತಿಗೆ ಮೂಲಕಾರಣನಾದ ಸದ್ರೂಪಬ್ರಹ್ಮನ ಪ್ರಾಪ್ತಿಯಾಗಲಿಕ್ಕೆ ಉಪಾಯವು ಯಾವುದು ಎಂಬುವುದನ್ನು ತಿಳಿಸಬೇಕೆಂದು ಪ್ರಶ್ನೆಯ ಅಭಿಪ್ರಾಯವೆಂದು ಪರರು ಹೇಳುವುದು ಅಯುಕ್ತವು ಸನ್ ಘಟಃ ಸನ್‌ಪಟಃ ಇತ್ಯಾದಿಗಳಲ್ಲಿ ಸತ್ ಎನಿಸಿದ ಬ್ರಹ್ಮನಲ್ಲಿ ಘಟಾದಿಗಳಿಗೆ ಆರೋಪವು. ಆರೋಪಕ್ಕೆ ಅಧಿಷ್ಠಾನನು ಸತ್ ಎನಿಸಿದ ಬ್ರಹ್ಮನು. ಆತನು ಎಲ್ಲಾ ಜ್ಞಾನಗಳಿಂದಲೂ ತಿಳಿಯಲ್ಪಡುತ್ತಾನೆಂದು ಅವರು ಒಡಂಬಟ್ಟಿರುವುದರಿಂದ ಅವರಿಗೆ ಅದಕ್ಕಾಗಿ ಗುರುಗಳ ಉಪದೇಶವೇ ಬೇಕಾಗಿಲ್ಲ, ಇತ್ಯಾದಿ ದೋಷಗಳಿರುವುದರಿಂದ ಅವರು ಹೇಳುವುದು ಅಯುಕ್ತವೆಂಬ ಅಭಿಪ್ರಾಯದಿಂದ ಆಚಾರ್ಯರು ಪ್ರಶ್ನೆಯ ಅಭಿಪ್ರಾಯ ಹೇಳುತ್ತಾರೆ –

**ಭಾ. ॥ (೧) ಕಥಂ ಸ ಜ್ಞಾಯತೇ ವಿಷ್ಣುರ್ಭಿನ್ನ ಇತ್ಯತ್ರ ಚಾಬ್ರವೀತ್ ॥ (೨) ಯಥೈವಾನ್ಯೋಪದೇಶೇನ ಬದ್ಧಾಕ್ಷಃ ಸ್ವಗೃಹಂ ವ್ರಜೇತ್ । ತಥಾಽಽಚಾರ್ಯೋಪದೇಶೇನ ಭಿನ್ನಮೀಶಂ ವ್ರಜೇತ್ಪುಮಾನ್ ॥ ೧ ೨ ೩ ಇತಿ ಚತುರ್ದಶಃ ಖಂಡಃ ॥ ೮—೧೪ ॥ ೧ ॥**

ಅ ॥ (೧) ಜೀವನಲ್ಲಿ ಅಂತರ್ಗತನಾದ ಜೀವನಿಂದ ಭಿನ್ನನಾದ ವಿಷ್ಣುವು ಅಜ್ಞಾನಿಗೆ ತೋರುವ ಉಪಾಯವು ಯಾವುದು? ಅಜ್ಞಾನಿಯು ಆತನನ್ನು ಹೇಗೆ ಹೊಂದುವನು? ಎಂಬ ಪ್ರಶ್ನೆಗೆ ತಂದೆಯು ಉತ್ತರಿಸಿದನು. (೨) (ಈ ಖಂಡದ ತಾತ್ಪರ್ಯ ಹೇಳುತ್ತಾರೆ.) ಮೊದಲು ಕಣ್ಣು ಕಟ್ಟಲ್ಪಟ್ಟವನು ಆ ಮೇಲೆ ಕಣ್ಣುಕಟ್ಟಿದ್ದನ್ನು ಬಿಡಿಸಿಕೊಂಡವನಾಗಿ ಇನ್ನೊಬ್ಬ ದಯಾಳುವಿನ ಉಪದೇಶಪ್ರಕಾರ ತನ್ನ ಮನೆಗೆ ಹೇಗೆ ಹೋಗುವನೋ, ಹಾಗೆಯೇ ಆಚಾರ್ಯರ ಉಪದೇಶದಿಂದ ಜ್ಞಾನಿಯಾದವನು ತನ್ನಿಂದ ಭಿನ್ನನಾದ ಶ್ರೀಹರಿಯನ್ನು ಹೊಂದುತ್ತಾನೆ. ॥ ೮—೧೪ ॥ ॥ ೧ ॥

**ಹದಿನಾಲ್ಕನೇ ಖಂಡವು ಮುಗಿಯಿತು.**

## ೧೫ನೇ ಖಂಡವು

ಪೀ ಅವನು ಕೇಳಿದ್ದನ್ನು ಯುಕ್ತಿಗಳಿಂದ ತಿಳಿಸುತ್ತಾರೆ—

**ಉ. ॥ ಪುರುಷꣳ ಸೋಽವ್ಯೋಪತಾಪಿನಂ ಜ್ಞಾತಯಃ ಪರ್ಯುಪಾಸತೇ ಜಾನಾಸಿ ಮಾಂ ಜಾನಾಸಿ ಮಾಮಿತಿ ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತೇ**

**ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ ತಾವಜ್ಜಾನಾತಿ ॥　　　　　　　　　　　　　॥ ೧ ॥**

**ಅ** ॥ ಎಲೋ ಮಗನೆ, ಬಾಂಧವರು, ನನ್ನನ್ನು ತಿಳಿಯುತ್ತಿಯೋ, ನನ್ನನ್ನು ತಿಳಿಯುತ್ತಿಯೋ, ಎನ್ನುತ್ತಾ ಸಾಯಲು ಸನ್ನದ್ಧನಾದ ರೋಗಿಯ ಸುತ್ತಮುತ್ತಲೂ ಕುಳಿತಿರುತ್ತಾರೆ. (ಹೀಗೆ ಬಾಂಧವರು ಹೇಳೋಣ ಆತನು ಯಾವಾಗ ತಿಳಿಯುತ್ತಾನೆ, ಯಾವಾಗ ತಿಳಿಯುವುದಿಲ್ಲವೆಂದರೆ) ಸಾಯಲು ಸನ್ನದ್ಧನಾದ ಮನುಷ್ಯನ ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಪಾರ್ವತಿಯು ಮನಸ್ಸಿಗೆ ಅಭಿಮಾನಿಯಾದ ರುದ್ರನಲ್ಲಿ ತನ್ನ ವ್ಯಾಪಾರಬಿಟ್ಟು ಎಷ್ಟರ ವರೆಗೆ ಸೇರುವುದಿಲ್ಲವೋ, ರುದ್ರನು ಪ್ರಾಣನಲ್ಲಿಯೂ, ಪ್ರಾಣನು ಲಕ್ಷ್ಮೀದೇವಿಯಲ್ಲಿಯೂ, ಲಕ್ಷ್ಮೀದೇವಿಯು ಶ್ರೀಹರಿಯಲ್ಲಿಯೂ ಸೇರುವುದಿಲ್ಲವೋ. (ಅಂದರೆ ತಮ್ಮ ತಮ್ಮ ವ್ಯಾಪಾರಗಳನ್ನು ನಡಿಸುತ್ತಲೇ ಇರತ್ತಾರೋ.) ಅಷ್ಟರ ಪರ್ಯಂತ ಜೀವನು ತಿಳಿಯುತ್ತಾನೆ.　॥ ೧ ॥

**ಉ. ॥ ಅಥ ಯದಾಸ್ಯ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಮಥ ಜಾನಾತಿ　　　　　　॥ ೨ ॥**

**ಅ** ॥ ಯಾವಾಗ ಆ ರೋಗಿಯ ವಾಗಿಂದ್ರಿಯಾಭಿಮಾನಿನಿಯಾದ ಪಾರ್ವತಿಯು ಮನಸ್ಸಿಗೆ ಅಭಿಮಾನಿಯಾದ ರುದ್ರನಲ್ಲಿಯೂ, ರುದ್ರನು ಪ್ರಾಣನಲ್ಲಿಯೂ, ಪ್ರಾಣನು ಲಕ್ಷ್ಮಿಯಲ್ಲಿಯೂ, ಲಕ್ಷ್ಮಿಯು ಶ್ರೀಹರಿಯಲ್ಲಿಯೂ ಸೇರಿ ತಮ್ಮತಮ್ಮ ವ್ಯಾಪಾರಗಳನ್ನು ಬಿಡುತ್ತಾರೋ ಆಗ ಏನನ್ನೂ ತಿಳಿಯುವುದಿಲ್ಲ.

ವಿ ॥ ಹೀಗೆ ಮನುಷ್ಯ ಶರೀರದಲ್ಲಿಯೇ ಜೀವರಿಗೆ ಮರಣಕಾಲದಲ್ಲಿ ಬಾಂಧವಾದಿಗಳ ಸ್ವರೂಪ ತಿಳಿಯಲಿಕ್ಕೆ ಸ್ವಾತಂತ್ರ್ಯವಿಲ್ಲವೆಂದು ಪ್ರತ್ಯಕ್ಷವಾಯಿತು.　　　　　　॥ ೨ ॥

**ಪೀ**—ಹೀಗೆ ಜೀವರು ಮನುಷ್ಯರ ಶರೀರದಲ್ಲಿಯೂ ಈಶ್ವರನ ಅಧೀನರೇ ಎಂಬುದನ್ನು ಸ್ಪಷ್ಟವಾಗಿ ತಿಳಿಸಿ, ನಿಯಮ್ಯರಾದ ಜೀವರಿಂದ ಶ್ರೀಹರಿಗೆ ಭೇದವಿದೆ ಎಂಬುವುದು ಸುದೃಢವಾಯಿತೆನ್ನುತ್ತಾರೆ—

**ಉ. ॥ ಸ ಯ ಏಷೋಽಣಿಮೈತದಾತ್ಮ್ಯಮಿದꣳ ಸರ್ವಂ ತತ್ಸತ್ಯꣳ ಸ ಆತ್ಮಾತತ್ತ್ವಮಸಿ ಶ್ವೇತಕೇತೋ ಇತಿ ಭೂಯ ಏವ ಮಾ ಭಗವಾನ್ವಿಜ್ಞಾಪಯತ್ವಿತಿ ತಥಾ ಸೋಮ್ಯೇತಿ ಹೋವಾಚ ॥ ಇತಿ ಪಂಚದಶಃ ಖಂಡಃ ॥ ೮—೧೫ ॥ ॥ ೩ ॥**

**ಅ** ॥ .........ಹಿಂದೆ ಹೇಳಿದ ಪ್ರಕಾರ ಸರ್ವರಿಗೂ ಪ್ರೇರಕನಾದ ಶ್ರೀಹರಿಯನ್ನು ಯಾವನು ತನ್ನಿಂದ ಭಿನ್ನನೆಂದೂ ಯಾವನು **ಸೋಽಹಮಸ್ಮಿ** ಬ್ರಹ್ಮನೇ ನಾನುಎಂದೂ ತಿಳಿಯುತ್ತಾನೋ, ಅವರಿಗೆ ಎಂತಹ ಫಲವು ಲಭಿಸುವುದು. ಎಂದು ತಿಳಿಯಲಿಚ್ಛೆಯಿಂದ ಮರಳಿ ಹೇಳಬೇಕೆಂದು ಶ್ವೇತಕೇತುವು ಪ್ರಾರ್ಥಿಸಿದಾಗ ತಂದೆಯು ಉತ್ತರವನ್ನು ಇತ್ತನು　॥ ೮—೧೫ ॥　　　　　॥ ೩ ॥

**ಪೀ**—ಜ್ಞಾನಿಯಾದವನು ಯಾವ ಕ್ರಮದಿಂದ ಬ್ರಹ್ಮನನ್ನು ಹೊಂದುತ್ತಾನೆಂದು ವಿಚಾರ ಬರುವಾಗ ಆ ಕ್ರಮವನ್ನು ತೋರಿಸುವುದಕ್ಕಾಗಿ **ಪುರುಷಂ ಸೋಮ್ಯೋಪತಾಪಿನಂ** ಇತ್ಯಾದಿ ಮಂತ್ರವು, ಎಂದು ಪರರು ಅರ್ಥಮಾಡಿದ್ದು ಅಯುಕ್ತವು. **ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ** ಎಂದು ಮೊದಲೇ ಹೇಳಿಯಾಗಿದೆ, ಅಲ್ಲದೆ ಮೊದಲಿನಂತೆಯೇ ಇಲ್ಲಿಯೂ **ತಸ್ಯ ವಾಙ್ಮನಸಿ ಸಂಪದ್ಯತೇ....ತೇಜಃ ಪರಸ್ಯಾಂ ದೇವತಾಯಾಂ** ಇಷ್ಟೇಸಾಕಾಗುವಾಗ **ತಸ್ಯ ಯಾವತ್ ನ ವಾಙ್ಮನಸಿ**

**ಸಂಪದ್ಯತೇ** ಇತ್ಯಾದಿ ವಾಕ್ಯಗಳಿಂದ ಜ್ಞಾನವಿಷಯದಲ್ಲಿ ಜೀವನಿಗೆ ಪರಾಧೀನತ್ವವನ್ನು ಹೇಳಿದ್ದು ವ್ಯರ್ಥವಾಗುವುದು. ಮತ್ತು **ಯದಾ ಪ್ರಾಣಾನ್ ದದಾತೀಶಸ್ತದಾ ಚೇತನಕೋಽಖಿಲಂ । ಜಾನಾತಿ ಗ್ರಸ್ತಕರಣಸ್ತೇನ ವೇತ್ತಿ ನ ಕಿಂಚನ ॥** ಎಂಬ ಸ್ಮೃತಿವಿರೋಧವೂ ಬರುತ್ತದೆ, ಎಂಬ ಅಭಿಪ್ರಾಯ ದಿಂದ ಪ್ರಶ್ನೆಯ ಅಭಿಪ್ರಾಯವನ್ನು ಆಚಾರ್ಯರು ಹೇಳುತ್ತಾರೆ—

**ಭಾ. ॥ ಯಥಾ ಪುಂಸೋಽಸ್ವತಂತ್ರತ್ವಂ ತಜ್ಜ್ಞಾಪಯತು ಮಾ ಭವಾನ್ । ಇತ್ಯುಕ್ತ ಆಹ ಜ್ಞಾನೇ ಹಿ ದೃಷ್ಟೈವಾಸ್ಯಾಸ್ವತಂತ್ರತಾ ॥ ೧, ೨, ೩ ॥ ಇತಿ ಪಂಚದಶಃ ಖಂಡಃ ॥ ೮–೧೫ ॥ ॥ ೧ ॥**

ಅ ॥ ಹೇಗೆ ವೃಕ್ಷಶರೀರದಲ್ಲಿರತಕ್ಕ ಜೀವನು ಶ್ರೀಹರಿಯ ಅಧೀನದಲ್ಲಿರುವವನೆಂದು ತಿಳಿಯಿತೋ, ಹಾಗೆಯೇ ಮನುಷ್ಯಶರೀರದಲ್ಲಿರತಕ್ಕ ಜೀವರಿಗೆ ಅಸ್ವಾತಂತ್ರ್ಯವನ್ನು (ಜೀವರು ಪರಾಧೀನರು ಎಂಬುವು ದನ್ನು) ನನಗೆ ತಿಳಿಸಿರಿ, ಎಂದು ಪ್ರಾರ್ಥಿಸಿಕೊಂಡ ತಂದೆಯು, ವಾಗಾದಿ ಇಂದ್ರಿಯಗಳ ವ್ಯಾಪಾರವಿದ್ದ ರೇನೇ ಜ್ಞಾನವು ಉಂಟಾಗುತ್ತದೆ, ಅವುಗಳ ವ್ಯಾಪಾರವು ಇಲ್ಲವಾದರೆ ಜ್ಞಾನವು ಉಂಟಾಗಲಾರದು, ಅದು ಕಾರಣ ಜ್ಞಾನವಿಷಯದಲ್ಲಿ ಸ್ವಾತಂತ್ರ್ಯವಿಲ್ಲವೆಂಬುದು ಕಂಡದೆ. ॥ ೮–೧೫ ॥ ॥ ೧ ॥

**ಹದಿನೈದನೇ ಖಂಡವು ಮುಗಿಯಿತು.**

---

## ೧೬ನೇ ಖಂಡವು

ಪೀ—ಭೇದಜ್ಞಾನಿಗೂ ಅಭೇದಜ್ಞಾನಿಗೂ ಆಗತಕ್ಕ ಫಲವನ್ನು ದೃಷ್ಟಾಂತಕೊಟ್ಟು ಹೇಳುತ್ತಾರೆ-

**ಉ. ॥ ಪುರುಷꣳ ಸೋಮ್ಯೋತ ಹಸ್ತಗೃಹೀತಮಾನಯಂತ್ಯಪಹಾ-ರ್ಷೀತ್ಸ್ತೇಯಮಕಾರ್ಷೀತ್ಪರಶುಮಸ್ಮೈ ತಪತೇತಿ ಸ ಯದಿ ತಸ್ಯ ಕರ್ತಾ ಭವತಿ ತತ ಏವಾನೃತಮಾತ್ಮಾನಂ ಕುರುತೇ ಸೋಽನೃತಾಭಿಸಂಧೋಽನೃತೇ-ನಾತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ದಹ್ಯತೇಽಥ ಹನ್ಯತೇ ॥ ೧ ॥**

ಅ ॥ ಎಲೋ ಮಗನೇ ರಾಜನ ದ್ರವ್ಯವನ್ನು ಕದಿಯುತ್ತಿರಲು ಸಂದೇಹಕ್ಕೆ ಒಳಪಟ್ಟ ಮನುಷ್ಯ ನನ್ನು ರಾಜಭಟರು ಬೇಡಿಹಾಕಿ ಇವನು ಅಪರಾಧ (ನೋಡುತ್ತಿರುವಂತೆ ಕದಿಯುವುದು) ವನ್ನು ಮಾಡಿರುವನು. ಇವನು ತಿಳಿಯದ ಹಾಗೆ ಕದ್ದವನು ಎಂದು ಹೇಳುತ್ತಾ ತರುತ್ತಾರೆ. ಆ ಮೇಲೆ ಕಳ್ಳನು ನಾನು ಕದಿಯಲಿಲ್ಲ, ಎಂದು ಹೇಳಿದಾಗ ರಾಜನು ಆತನನ್ನು ಪರೀಕ್ಷಿಸುವುದಕ್ಕಾಗಿ ಕಾಯಿಸಿದ ಕೊಡಲಿ ಯನ್ನು ಇವನ ಕೈಯಲ್ಲಿ ಕೊಡಿರಿ, ಎಂದು ಭಟರಿಗೆ ಹೇಳುತ್ತಾನೆ ಆಗ ಆ ಪುರುಷನು ತಾನು ಕದ್ದು ಕೊಂಡವನಾಗಿದ್ದು ಕದಿಯಲಿಲ್ಲವೆಂದು ಹೇಳಿದರೆ ಅದರಿಂದಲೇ ತನ್ನನ್ನು ಸುಳ್ಳುಗಾರನನ್ನಾಗಿ ಮಾಡಿ ಕೊಳ್ಳುತ್ತಾನೆ. ಸುಳ್ಳುಮಾತಿನಲ್ಲಿಯೇ ವಿಶ್ವಾಸವಿರುವ ಆ ಕಳ್ಳನು ತಾನು ಹೇಳಿದ್ದು ಸುಳ್ಳು ಎಂದು ಪ್ರಕಟಿಸದೆ ಕಾಯಿಸಿದ ಕೊಡಲಿಯನ್ನು ಕೈಯಲ್ಲಿ ಹಿಡಿದರೆ ಅದರಿಂದ ಅವನ ಕೈ ಸುಟ್ಟು ಹೋಗುತ್ತದೆ. ಆ ಮೇಲೆ ರಾಜನ ಭಟರು ಕಳ್ಳನಿಗೆ ಹೊಡೆಯುತ್ತಾರೆ. (ಅಪರಾಧವು ಹೆಚ್ಚಾದರೆ ತಮಸ್ಸಿನಲ್ಲಿ ಬೀಳು ವನು.) ॥ ೧ ॥

ಉ. ॥ ಅಥ ಸ ಯದಿ ತಸ್ಯಾಕರ್ತಾ ಭವತಿ ತತ ಏವ ಸತ್ಯಮಾತ್ಮಾನಂ ಕುರುತೇ ಸ ಸತ್ಯಾಭಿಸಂಧಃ ಸತ್ಯೇನಾತ್ಮಾನಮಂತರ್ಧಾಯ ಪರಶುಂ ತಪ್ತಂ ಪ್ರತಿಗೃಹ್ಣಾತಿ ಸ ನ ದಹ್ಯತೇಽಥ ಮುಚ್ಯತೇ ॥ ೨ ॥

ಅ ॥ ಅಥವಾ ಕಾಯಿಸಿದ ಕೊಡಲಿಯನ್ನು ಕೈಯಲ್ಲಿ ಹಿಡಿದುಕೊಂಡು ಕದಿಯದಿದ್ದವನು ಕದಿಯಲಿಲ್ಲವೆಂದು ಹೇಳಿದರೆ ಅದರಿಂದಲೇ ತನ್ನನ್ನು ಸತ್ಯನುಡಿಯುವವನನ್ನಾಗಿ ಮಾಡಿಕೊಳ್ಳುತ್ತಾನೆ. ತಾನು ಹೇಳಿದ್ದು ಸತ್ಯವೆಂದು ಪ್ರಕಟಿಸಿ ಕಾಯಿಸಿದ ಕೊಡಲಿಯನ್ನು ಕೈಯಲ್ಲಿ ಹಿಡಿದರೆ ಅದರಿಂದ ಕೈ ಸುಡುವುದಿಲ್ಲ. ಮತ್ತು ಸತ್ಯಹೇಳಿದರೆ ರಾಜಭಟರು ಆತನನ್ನು ಬಿಟ್ಟುಬಿಡುತ್ತಾರೆ. (ಇಷ್ಟು ಮಾತ್ರವಲ್ಲ, ಪರಂತು ಸುಳ್ಳು ಹೇಳುವವರನ್ನು ಶಿಕ್ಷಿಸಿ ಸತ್ಯ ನುಡಿಯುವವನನ್ನು ರಾಜನು ಯೋಗ್ಯನನ್ನಾಗಿ ಸ್ವೀಕರಿಸುತ್ತಾನೆ.) (ಹೇಗೋ ಹಾಗೆಯೇ ಜೀವಬ್ರಹ್ಮರಿಗೆ ಭೇದವದೆ, ಎಂದು ತಿಳಿಯುವವನು ಕೆಡಕು ಹೊಂದದೆ ಮೋಕ್ಷವನ್ನು ಹೊಂದುತ್ತಾನೆ.) ॥ ೨ ॥

ಉ. ॥ ಸ ಯಥಾ ತತ್ರ ನಾದಾಹ್ಯೇತೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾತತ್ತ್ವಮಸಿ ಶ್ವೇತಕೇತೋ ಇತಿ ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ ॥ ೮—೧೬ ॥ ॥ ೩ ॥

ಅ ॥ ಕದಿಯದೆ ಇದ್ದವನು ದೃಢವಾಗಿ ತಪ್ತವಾದ ಕೊಡಲಿಯನ್ನು ಕೈಯಲ್ಲಿ ಹಿಡಿದರೂ ಸ್ವಲ್ಪವೂ ಹೇಗೆ ಕೈಸುಟ್ಟುಹೋಗುವುದಿಲ್ಲವೋ, ಹೀಗೆಯೇ ಜೀವನು ಸರ್ವಥಾ ನಾನು ವಿಷ್ಣುವಲ್ಲ, ಎಂದು ದೃಢವಾಗಿ ಶಪಥಪೂರ್ವಕವಾಗಿ ಹೇಳಿದರೆ ಆತನು ದುಃಖಿಯಾಗುವುದಿಲ್ಲ. ಆತನನ್ನು ವಿಷ್ಣುವು ಭಕ್ತನೆಂದು ಸ್ವೀಕರಿಸುತ್ತಾನೆ ಆ ಜ್ಞಾನಿಯು ಮುಕ್ತನಾಗುತ್ತಾನೆ. ಅಭೇದಜ್ಞಾನಿಯು ಅಂಧಂತಮಸ್ಸಿನಲ್ಲಿ ಬೀಳುತ್ತಾನೆ ……………ಹೀಗೆ ತಂದೆಯು ಉಪದೇಶಿಸಿದ ಮೇಲೆ ಶ್ವೇತಕೇತುವು ಸಂಪೂರ್ಣ ಅಭೇದ ಜ್ಞಾನವನ್ನು ಕಳೆದುಕೊಂಡವನಾಗಿ ತಂದೆಯು ಉಪದೇಶಿಸಿದಂತೆ ಶ್ರೀಹರಿಯೇ ಸರ್ವೋತ್ತಮನು ಸರ್ವಸ್ವತಂತ್ರನು ಇತ್ಯಾದಿ ಪ್ರಕಾರ ಏನೂ ಸಂಶಯ ಇಲ್ಲದೆ ತಿಳಿದುಕೊಂಡನು. ॥ ೮—೧೬ ॥ ॥ ೩ ॥

ಪೀ ವಾಗಾದಿಗಳಿಗೆ ಲಯವಾಗುವ ಕ್ರಮದಿಂದ ಸಾಯುವವನಿಗೂ ಮೋಕ್ಷಹೊಂದುವವನಿಗೂ ಸದ್ರೂಪನಾದ ಪರಬ್ರಹ್ಮನ ಪ್ರಾಪ್ತಿಯು ಸಮಾನವೆಂದಾದರೆ ವಿದ್ವಾಂಸನು ಸದ್ರೂಪ ಬ್ರಹ್ಮನನ್ನು ಹೊಂದಿ ಹಿಂದೆ ಬಾರದಿರುವುದಕ್ಕೂ ಅಜ್ಞಾನಿಯು ತಿರುಗಿ ಬರುವುದಕ್ಕೂ ಕಾರಣವೇನು? ಎಂಬ ಪ್ರಶ್ನೆಗೆ ಜೀವಬ್ರಹ್ಮೈಕ್ಯವನ್ನು ಅಜ್ಞಾನಿಯು ತಿಳಿಯಲಿಲ್ಲ, ಜ್ಞಾನಿಯು ತಿಳಿದಿರುತ್ತಾನೆ, ಇವು ಕಾರಣಗಳೆಂದು ತೋರಿಸಲಿಕ್ಕೆ **ಪುರುಷಂ ಸೋಮ್ಯ** ಇದುಮೊದಲಾದ ವಾಕ್ಯಗಳಿಂದು ಪರರು ಹೇಳುವುದು ಅಯುಕ್ತವೆಂಬ ಅಭಿಪ್ರಾಯದಿಂದ ಪ್ರಶ್ನಾಭಿಪ್ರಾಯವನ್ನು ಹೇಳುತ್ತಾರೆ -

ಭಾ. ॥ (೧) ಅಭೇದಜ್ಞಾನಿನಾಂ ದೋಷಃ ಕೀದೃಶಃ ಸ್ಯಾದಿತೀರಿತೇ । ಪ್ರಾಹ ಯುಸ್ಮಾತ್ಪರಸ್ವಾನಾಂ ಹರ್ತಾ ರಾಜ್ಞಾ ನಿಹನ್ಯತೇ ॥ ಕಿಮು ರಾಜ್ಞೋಽಪಹರ್ತೈವಂ ಬ್ರಹ್ಮಸ್ತೇನೋ ಹಿ (೨)ಹನ್ಯತೇ(೨)ಸರ್ವೇಷಾಂ ಶಾಸ್ತೃ ಯದ್ಬ್ರಹ್ಮ ತತ್ಸ್ವರೂಪತಯಾ ಸ್ಮರನ್ । ಬ್ರಹ್ಮಸ್ತೇನೋ ಹಿ (೨)ಹನ್ಯೇತ ತಮಸ್ಯಂಧೇ ಸದೈವ ಹಿ ॥ (೩) ದೋಷಾ ಹ್ಯಜ್ಞಾನಪೂರ್ವಾಸ್ತು ಬದ್ಧ್ವಾ ಪುರುಷಮಾಶಿತುಃ । ವಿಷ್ಣೋರ್ಹರ್ತೇತಿ ಬಾಧಂತೇ ಚಾಭಿ-

**ಮಾನಕೃತಾಸ್ಪದಂ ॥ (೪) ತತೋ ವಿಚಾರಯಂತ್ಯೇನಂ ದೇವತಾ ಹರಿಣಾ ಸಹ । ನಾಹಂ ವಿಷ್ಣುರ್ನ ಸ್ವತಂತ್ರೋ ನ ಚ ಪೂರ್ಣಗುಣೋಽಸ್ಮ್ಯಹಂ । ಮಮ ಸ್ವಾಮೀ ಹರಿರ್ನಿತ್ಯಂ ಸ್ವತಂತ್ರಃ ಪೂರ್ಣಷಡ್ಗುಣಃ ॥ (೫) ಏವಂ ದಾರ್ಢ್ಯಂ ಶಪಥವದ್ಯದಾ ಕುರ್ಯಾದಯಂ ಸದಾ । ಜಾನನ್ನೇವ ನ ತಾಪೀ ಸ್ಯಾದಂತರಾನಂದಭೋಗತಃ ॥ ೧ ॥**

**ಅ** ॥ (೧) ಅಭೇದ ಜ್ಞಾನಿಗಳಿಗೆ ಎಂತಹ ಅನರ್ಥವಿದೆ (ಭೇದಜ್ಞಾನಿಗಳಿಗೆ ಎಂತಹ ಪುರುಷಾರ್ಥ ವಿದೆ?) ಎಂಬ ಪ್ರಶ್ನೆಗೆ (ಉತ್ತರವಾಗಿ **ಪುರುಷಂ ಸೋಮ್ಯ** ಎಂಬ ಖಂಡದ ತಾತ್ಪರ್ಯ ಹೇಳುತ್ತಾರೆ.) ಇನ್ನೊಬ್ಬರ ದ್ರವ್ಯಗಳನ್ನು ಯಾರು ಕದಿಯುತ್ತಾರೋ, ಅವರನ್ನು ರಾಜನು ಶಿಕ್ಷಿಸುತ್ತಾನೆ. ಹೀಗೆ ಇರಲು ರಾಜನ ದ್ರವ್ಯವನ್ನೇ ಅಪಹರಿಸಿದವನನ್ನು ಶಿಕ್ಷಿಸುವವನೆಂಬುವುದು ಸುತರಾಂ ಸಿದ್ಧವು. ಹೀಗೆ ಪರಬ್ರಹ್ಮನೇ ತನ್ನಿಂದ ಬೇರೆಯಿಲ್ಲ, ನಿರ್ಗುಣ, ನಿರಾಕಾರ, ಇತ್ಯಾದಿ ಪ್ರಕಾರ ಅಪಲಾಪ ಮಾಡಿದವನನ್ನು ಶ್ರೀಹರಿಯು ಅಂಧಂತಮಸ್ಸಿನಲ್ಲಿ ಕೆಡಹುತ್ತಾನೆ. (೨) (ಅಭೇದಜ್ಞಾನಿಯು ಬ್ರಹ್ಮಸ್ತೇನನು ಆಗುವುದು ಹೇಗೆ? ಎಲ್ಲಿ ಅವನು ಶಿಕ್ಷಿಸಲ್ಪಡುವುದೆಂದರೆ) ಪರಬ್ರಹ್ಮನು ಸರ್ವರಿಗೂ ಶಿಕ್ಷಕನು ಬ್ರಹ್ಮಸ್ವರೂಪನೇ ನಾನು ಎಂದು ಸ್ಮರಿಸುವವನು (ತನ್ನ ಸ್ವರೂಪ ಬಿಟ್ಟು ಬೇರೆ ಬ್ರಹ್ಮನಿಲ್ಲವೆಂದು ಸ್ಮರಿಸುವುದರಿಂದ) ಬ್ರಹ್ಮಸ್ತೇನನೆನಿಸುತ್ತಾನೆ. ಆತನು ಅಂಧಂತಮಸ್ಸಿನಲ್ಲಿ ಕೆಡಹಲ್ಪಡುವನು. (೩) (ರಾಜಪದವಿಗೆ ಅಯೋಗ್ಯನಾಗಿದ್ದು ನಾನೇ ರಾಜನು ಎಂದು ದೃಢವಾಗಿ ಅಭಿಮಾನವಿರುವವನನ್ನು ರಾಜಭಟರು ದಂಡಿಸುತ್ತಾರೆ. (ಬ್ರಹ್ಮಸ್ತೇನನನ್ನು ಯಾರು ಶಿಕ್ಷಿಸುತ್ತಾರೆ ಎಂದರೆ) ಮಿಥ್ಯಾಜ್ಞಾನವೇ ಮೊದಲಾದ ದೋಷಗಳಿಗೆ ಅಭಿಮಾನಿಗಳಾದ ವಾಯುದೇವರ ಭೃತ್ಯರಾದ ದೇವತೆಗಳು ಬ್ರಹ್ಮನೇ ನಾನು ಎಂಬ ಅಭಿಮಾನದಲ್ಲಿ ಆಸಕ್ತಿಯುಳ್ಳವನೆಂದು ಅಪಭ್ರಷ್ಟರಿಂದ ಮಾಡಲ್ಪಟ್ಟ ವಸ್ತುತಃ ಬ್ರಹ್ಮಸ್ತೇನನಾಗದಿರುವ ಪುರುಷನನ್ನು ಕಟ್ಟಿ ಈತನು ವಿಷ್ಣುವಿಗೆ ದ್ವೇಷಿಯು ವಿಷ್ಣು ವನ್ನು ಅಪಹರಿಸಿದವನೆಂದು ಪೀಡಿಸುತ್ತಾರೆ. (೪) (ಈ ಪ್ರಕಾರ **ಸದಹ್ಯತೇಽಥ ಹನ್ಯತೇ** ಎಂಬ ಪರ್ಯಂತ ವಾಕ್ಯದಿಂದ ರಾಜದ್ರವ್ಯಾಪಹಾರಕನಿಗೂ ಬ್ರಹ್ಮಸ್ತೇನನಿಗೂ ಹೇಳಿದ ಸಾಮ್ಯವನ್ನು ದಾರ್ಷ್ಟಾಂತಿಕದಲ್ಲಿ (ಬ್ರಹ್ಮಸ್ತೇನನಲ್ಲಿ) ತೋರಿಸಿ **ಸ ಯದಿ ತಸ್ಯಾಕರ್ತಾ ಭವತಿ** ಎಂದಾರಂಭಿಸಿ **ಸ ಯಥಾ ತತ್ರ ನ ದಾಹ್ಯೇತ** ಎಂಬ ಪರ್ಯಂತ ವಾಕ್ಯದಿಂದ ಹೇಳಿದ ಸಾಮ್ಯವನ್ನು ದಾರ್ಷ್ಟಾಂತಿಕದಲ್ಲಿ ತೋರಿಸುತ್ತಾರೆ) ವಾಯುವಿನ ಕಿಂಕರರು ಅಪವಾದಕ್ಕೆಗುರಿಯಾದ ಭೇದಜ್ಞಾನಿಯನ್ನು ಕರೆದುಕೊಂಡು ಬಂದಮೇಲೆ ಇವನು ಬ್ರಹ್ಮಸ್ತೇನನೆಂದು ಅಪಭ್ರಷ್ಟದೇವತೆಗಳು ಸೂಚಿಸಿದ ಪ್ರಕಾರ ಶ್ರೀಹರಿಯು ಮತ್ತು ದೇವತೆ ಗಳು ಈ ಭೇದಜ್ಞಾನಿಯನ್ನು (ಕಾಯಿಸಿದ ಕಬ್ಬಿಣವನ್ನು ಕೈಯಲ್ಲಿ ಕೊಡುವುದು ಇತ್ಯಾದಿಗಳಿಂದ) ವಿಚಾರ ಮಾಡುತ್ತಾರೆ ಆಗ ಆ ಭೇದಜ್ಞಾನಿಯು ಸರ್ವಥಾ ನಾನು ವಿಷ್ಣುವಲ್ಲ, ಸ್ವತಂತ್ರನಲ್ಲ, ಪೂರ್ಣ ಗುಣಗಳುಳ್ಳವನೂ ಅಲ್ಲ, ನಿತ್ಯದಲ್ಲಿಯೂ ಶ್ರೀಹರಿಯು ನನಗೆ ಸ್ವಾಮಿಯು. ನಿಯಾಮಕನು, ಸರ್ವ ಸ್ವತಂತ್ರನು ಷಡ್ಗುಣಗಳುಳ್ಳವನು. (೫) ಹೀಗೆ ದೃಢವಾಗಿ ಶಪಥಪೂರ್ವಕವಾಗಿ ಹೇಳುತ್ತಾ ಸದಾ ತಿಳಿದು ಕೊಂಡೇ ಯಾವಾಗಲೂ ಇರುವವನಾದುದರಿಂದ ಕಾಯಿಸಿದ ಕಬ್ಬಿಣವನ್ನು ಕೈಯಲ್ಲಿ ಹಿಡಿದರೂ ಈತನನ್ನು ಅದು ಸುಡುವುದಿಲ್ಲ, ಆದರಿಂದ ದುಃಖವುಳ್ಳವನಾಗುವುದಿಲ್ಲ. ಆತನನ್ನು ಸತ್ಯವಂತನೆಂದು ನಿರ್ಣಯಿಸಿ ಅವನಿಗೆ ನಿತ್ಯಾನಂದವನ್ನು ಶ್ರೀಹರಿಯು ಕೊಡುತ್ತಾನೆ. ॥ ೧ ॥

**ಪೀ**—ಭೇದಜ್ಞಾನಿಯನ್ನು ಸುಡುವುದಿಲ್ಲವೆಂದು ಮಾತ್ರವಲ್ಲ, ಪರಂತು ರಾಜನು ಸತ್ಯನುಡಿ ಯುವವರನ್ನು ಶಿಕ್ಷಕರಿಂದ ಬಿಡಿಸಿ, ಸುಳ್ಳು ಹೇಳುವವರನ್ನು ಶಿಕ್ಷಿಸಿ, ಸತ್ಯವಂತನನ್ನು ತನ್ನವನನ್ನಾಗಿ ಮಾಡಿಕೊಳ್ಳುವಂತೆಯೇ ವಿಷ್ಣುವೂ ಮಾಡುತ್ತಾನೆ, ಎನ್ನುತ್ತಾರೆ—

**ಭಾ. ॥ (೧) ತದಾ ತೇಭ್ಯೋ ಮೋಚಯಿತ್ವಾ ಹತ್ವಾ ಮಿಥ್ಯಾಭಿಶಂಸಿನಃ । ಸ್ವಕೀ-**

**ಯಂ ಕುರುತೇ ವಿಷ್ಣುರನ್ಯಥಾ ತ್ರೈಸ್ಸಹ ಪ್ರಭುಃ ॥ ತಮಸ್ಯಂಧೇ ಪಾತಯತಿ ಮಹಾಕಾರಾಗೃಹೋಪಮೇ । ಮಹಾಂಧೇ ವಾ ಪಾತಯತಿ ಹಸ್ತಚ್ಛೇದಾದಿಸಮ್ಮಿತೇ । ತತೋಽಧರೇ ವಾ ತದ್ಯೋಗ್ಯಂ ದೃಢಾಭೇದಂ ವಧೋಪಮೇ ॥ (೨) ತಸ್ಮಾದಾಚಾರ್ಯತೋ ಜ್ಞಾತ್ವಾ ವಿಷ್ಣೋರ್ಭೇದೇನ ಪೂರ್ಣತಾಂ । ಉಪಾಸೀತ ತತೋ ಮುಕ್ತಿಂ ಯಾತಿ ನಾಸ್ತ್ಯತ್ರ ಸಂಶಯ ಇತ್ಯಾದಿ ಸಾಮಸಂಹಿತಾಯಾಂ॥ ಇತಿ ಷೋಡಶಃ ಖಂಡಃ೧,೨,೩,॥೮–೧೬॥ ೨ ॥**

ಅ ॥ (೧) ಶ್ರೀವಿಷ್ಣುವು ಆಗ ಅಜ್ಞಾನ ಮೊದಲಾದ ದೋಷಗಳಿಂದ ಭೇದಜ್ಞಾನಿಯನ್ನು **ಬಿಡಿಸಿ,** ಸುಳ್ಳು ಹೇಳಿದ ಅಪಭ್ರಷ್ಟ ದೇವತೆಗಳನ್ನು ಶಿಕ್ಷಿಸಿ, ಭೇದಜ್ಞಾನಿಯನ್ನು ತನ್ನವನನ್ನಾಗಿ ಮಾಡಿಕೊಳ್ಳುತ್ತಾನೆ. ಅವಶ್ಯವಾಗಿ ಹೀಗೆಯೇ ತಿಳಿಯಬೇಕು. ಹೀಗೆ ತಿಳಿಯದೆ ಅಭೇದಜ್ಞಾನವುಳ್ಳವನಾದರೆ ಅಂತಹವರನ್ನು ಮೊದಲು ಅಭೇದಜ್ಞಾನವನ್ನು ಹೊಂದಿರುವವರೊಂದಿಗೆ ವಾಯುವಿನ ಭೃತ್ಯರಾದ ದೇವತೆಗಳಿಂದ ಶ್ರೀಹರಿಯು ಅಂಧಂತಮಸ್ಸಿನಲ್ಲಿ ಕೆಡಹುತ್ತಾನೆ ಅಂದರೆ— **ಮಹಾತಮಸ್ತ್ರಿಧಾ ಪ್ರೋಕ್ತಮೂರ್ಧ್ವಂ ಮಧ್ಯಂ ತಥಾಽಧರಂ** ಎಂಬ ಪ್ರಮಾಣಾನುಸಾರ ಅಭೇದಜ್ಞಾನದ ತಾರತಮ್ಯವನ್ನನುಸರಿಸಿ ದೊಡ್ಡ ಜೈಲಿಗೆ ಸದೃಶವಾದ **ಊರ್ಧ್ವ**ವೆಂಬ ಮಹಾ ತಮಸ್ಸಿನಲ್ಲಿಯೂ, ಕೈ ಕಡಿಯುವುದು ಮೊದಲಾದ ಹೆಚ್ಚು ಶಿಕ್ಷೆಯುಳ್ಳ **ಮಧ್ಯ** ವೆಂಬ ಅಂಧಂತಮಸ್ಸಿನಲ್ಲಿಯೂ, ಮರಣ ಶಿಕ್ಷೆಗೆ ಸಮವಾದ **ಅಧರ**ವೆಂಬ ಅಂಧಂತಮಸ್ಸಿನಲ್ಲಿಯೂ ಕೆಡಹುತ್ತಾನೆ. (೨) ಆದಕಾರಣ ಗುರುಗಳಿಂದ ಉಪದೇಶ ಪಡೆದು, ಜೀವೇಶ್ವರರಿಗೆ ಭೇದವಿದೆ ಎಂದೂ, ವಿಷ್ಣುವಿಗೆ ಪೂರ್ಣ ಗುಣಗಳಿವೆ ಎಂದೂ ಉಪಾಸನೆ ಮಾಡಬೇಕು, ಇದು ಮೊದಲಾದ ಪ್ರಮೇಯಗಳನ್ನು ಸಾಮಸಂಹಿತೆಯಲ್ಲಿ ಹೇಳಿರುತ್ತಾರೆ. ॥ ೮—೧೬ ॥ ॥ ೨ ॥

ಹದಿನಾರನೇ ಖಂಡವು ಮುಗಿಯಿತು.

## ೧೭ನೇ ಖಂಡವು

**ಉ. ॥ ತದೇಷಃ ಶ್ಲೋಕಃ ॥ ಸರ್ವೇಷಾಂ ಖಲು ಭೂತಾನಾಮಾತ್ಮಾ ಸತ್ಯೇ ಪ್ರತಿಷ್ಠಿತಃ । ತೇನಾತ್ಮಾನಮಂತರ್ಧಾಯ ನ ಕಿಂಚಿತ್ಪಾಪಮ್ಯೃಚ್ಛ(ಧ್ಧ)ತಿ ॥ ೧ ॥**

ಅ ॥ (ತದೇಷಃ ಶ್ಲೋಕಃ ಇತ್ಯಾದಿ ಮಂತ್ರವು ವೇದೇಶಿಯ ಟಿಪ್ಪಣಿಯಲ್ಲಿ ಹೇಳಿರುತ್ತಾರೆ—) ಸತ್ಯನುಡಿಯಿಂದ ಕೆಡಕು ಆಗುವುದಿಲ್ಲ. ಮೋಕ್ಷವೇ ಆಗುತ್ತದೆ, ಎಂಬಲ್ಲಿ ಮುಂದಿನ ಶ್ಲೋಕವು ಸಮ್ಮತಿಯಾಗುತ್ತದೆ. ಎಲ್ಲಾ ಪ್ರಾಣಿಗಳಿಗೂ ಸ್ವಾಮಿಯಾದ ಶ್ರೀಹರಿಯು ಸತ್ಯನುಡಿಯಲ್ಲಿಯೇ ಇರುವವನು. ಭೇದಜ್ಞಾನಿಯೂ ತನ್ನನ್ನು ಸತ್ಯನುಡಿಯಲ್ಲಿಯೇ ಆಸಕ್ತನನ್ನಾಗಿ ಮಾಡಿಕೊಂಡ ಕಾರಣ, ಯಾವ ಪಾಪವನ್ನೂ ಹೊಂದುವುದಿಲ್ಲ ॥ ೧ ॥

ಟೀ—ಸತ್ಯನುಡಿಯು ಮಾತ್ರ ಪಾಪವಿಲ್ಲದಿರಲಿಕ್ಕೆ ಕಾರಣವೆಂವಲ್ಲ. ಪರಂತು ಶ್ರೀಹರಿಯಲ್ಲಿ ಪ್ರೀತಿಯೂ ಆವಶ್ಯಕವೆನ್ನುತ್ತಾರೆ—

**ಉ. ॥ ಆತ್ಮಸತ್ಯಾತ್ಮಸಾಕ್ಷೀ ಸತಾಂ ಧರ್ಮಃ ಪ್ರತಾಪವಾನ್ । ನ ಸ ಪಾಪಾನಿ ಕುರುತೇ ಯಸ್ಯಾತ್ಮಾ ಭವತಿ ಪ್ರಿಯೋ ॥ ಇತಿ ॥ ೨ ॥**

ಅ || ಶ್ರೀಹರಿಯೇ ಸತ್ಯನುಡಿಗೆ ನಿಯಾಮಕನು. ಶ್ರೀಹರಿಯು ಸರ್ವವನ್ನೂ ಚೆನ್ನಾಗಿ ನೋಡುವವನು. ಸಜ್ಜನರನ್ನು ಪೋಷಿಸುವವನು. ಪ್ರತಾಪಶಾಲಿಯು. ಕೀರ್ತಿಯುಳ್ಳವನು. ಯಾವನಿಗೆ ಶ್ರೀಹರಿಯು ಪ್ರಿಯನಾಗುತ್ತಾನೋ, ಅವನು ಪಾಪಗಳನ್ನು ಮಾಡುವುದಿಲ್ಲ (ಶ್ರೀಹರಿಯಲ್ಲಿ ಭೇದಜ್ಞಾನಿಗೇನೇ ಪ್ರೀತಿಯು.) || ೨ ||

ಪೀ—ಹೀಗೆ ಭೇದಜ್ಞಾನಿಗೆ ಫಲಹೇಳಿ ಪರಬ್ರಹ್ಮನನ್ನು ಅಪಲಾಪ ಮಾಡತಕ್ಕ ಅಭೇದಜ್ಞಾನಿಗೆ ಫಲಹೇಳುತ್ತಾರೆ –

**ಉ. || ಜಾಯತ್ಯೇಕೋ ಮ್ರಿಯತ್ಯೇಕೋಽಶ್ನಾತ್ಯೇಕಃ ಶುಭಾಶುಭಂ || ತದ್ಧಾಸ್ಯ ವಿಜಜ್ಞಾವಿತಿ ವಿಜಜ್ಞಾವಿತಿ ತದೇಷ ಶ್ಲೋಕಃ || ೩ ||**

ಅ || ಐಕ್ಯಜ್ಞಾನಿಯು ಹುಟ್ಟುತ್ತಾನೆ, ಸಾಯುತ್ತಾನೆ. ಶುಭಾಶುಭಗಳನ್ನು ಉಣ್ಣುತ್ತಾನೆ. ಪಾಪವು ಅಧಿಕವಾಗುವಾಗ ಅಶುಭವಾದ ಅನರ್ಥವನ್ನೇ ಹೊಂದುತ್ತಾನೆ. || ೩ ||

**ಉ. || ಸರ್ವಭೂತಾತ್ಮಭೂತೇಭ್ಯಃ ಸಮ್ಯಕ್ ಭೂತಾನಿ ಪಶ್ಯತೋ | ದೇವಾ ಅಪಿ ಮಾರ್ಗೇ ಮುಹ್ಯಂತಿ ಪದಜ್ಞಾನಾತ್ಪದೈಷಿಣಃ || ಪದಜ್ಞಾನಾತ್ಪದೈಷಿಣಃ || ಇತಿ ಶ್ರೀಮಚ್ಛಾಂದೋಗ್ಯೋಪನಿಷದಿ ಅಷ್ಟಮೋಽಧ್ಯಾಯಃ|| || ೮—೧೭ || || ೪ ||**

ಅ || ಸಮಸ್ತ ಪ್ರಾಣಿಗಳಿಗೆ ನಿಯಾಮಕರಾದ ದೇವತೆಗಳ ಪ್ರಸಾದದಿಂದ ಸಮಸ್ತಪ್ರಾಣಿಗಳಲ್ಲಿ ಅಂತರ್ಗತಗಳಾದ ಭಗವದ್ರೂಪಗಳನ್ನು ಪೂರ್ಣಗಳನ್ನಾಗಿ ಪ್ರತ್ಯಕ್ಷೀಕರಿಸತಕ್ಕ ಶ್ರೀಹರಿಯ ಸ್ವರೂಪ ಜ್ಞಾನದಿಂದ ತಮ್ಮ ತಮ್ಮ ಪದಪ್ರಾಪ್ತಿಯನ್ನು ಇಚ್ಛಿಸುವ ದೇವತೆಗಳೂ ಕೂಡ ಜ್ಞಾನಿಗಳ ಮಾರ್ಗದಲ್ಲಿ ಮೋಹವನ್ನು ಹೊಂದುತ್ತಾರೆ. (ದೇವತೆಗಳೂ ಕೂಡ ಜ್ಞಾನಿಗಳ ಮಾರ್ಗವನ್ನು ಇಚ್ಛಿಸುತ್ತಿರುತ್ತಾರೆ.) ಅಧ್ಯಾಯದಲ್ಲಿದ್ದ ಎಲ್ಲಾ ಅರ್ಥಗಳೂ ಪ್ರಮಾಣಸಿದ್ಧವೆಂದು ತಿಳಿಸುವುದಕ್ಕಾಗಿ ಎರಡು ಸಲ ಹೇಳಿದ್ದು. || ೪ ||

ಪೀ—೮ನೇ ಖಂಡದ ೧ನೇ ಮಂತ್ರದಲ್ಲಿದ್ದ **ಸ್ವಮಪೀತೋ ಭವತಿ** ಎನ್ನುವುದಕ್ಕೆ ವಿಷ್ಣುವನ್ನು ಹೊಂದುತ್ತಾನೆ, ಎಂಬ ಅರ್ಥವು ಯುಕ್ತವಲ್ಲ, ಏಕೆಂದರೆ ಸ್ವ ಎಂಬ ಶಬ್ದವು ತಾನು ಎಂಬ ಅರ್ಥದಲ್ಲಿಯೇ ಪ್ರಸಿದ್ಧವು. **ಸ್ವ** ಎಂಬ ಶಬ್ದಕ್ಕೆ ವಿಷ್ಣುವೆಂಬ ಅರ್ಥವು ಯೌಗಿಕ (ಅಮುಖ್ಯ) ಅರ್ಥವು. ಯೋಗಾರ್ಥಕ್ಕಿಂತ ರೂಢ್ಯರ್ಥವು (ಪ್ರಸಿದ್ಧಾರ್ಥವು) ಪ್ರಬಲವು, ಎಂದು ಪರರು ಶಂಕಿಸಿದರೆ ಸ್ವಶಬ್ದಕ್ಕೆ ವಿಷ್ಣುವಿನಲ್ಲಿಯೇ ಪ್ರಸಿದ್ಧಿ (ರೂಢಿ) ಯಿರುವುದೆನ್ನುತ್ತಾರೆ –

**ಭಾ. || (೧) ಸ್ವಯಂಭೂರಿತಿ ವಿಷ್ಣುಜತ್ವಾದ್ವಿರಿಂಚ ಉಚ್ಯತೇ | ನ ಹಿ ವಿರಿಂಚಾದೇವ ವಿರಿಂಚೋ ಜಾತಃ | ಯೋ ಬ್ರಹ್ಮಾಣಂ ವಿದಧಾತಿ ಪೂರ್ವಮಿತ್ಯಾದಿಶ್ರುತೇಃ || (೨) ಆತ್ಮಾ ಭಗವಾನ್ | ತತೋ ಭೂತತ್ವಾದಾತ್ಮಭೂಃ | ದತ್ತಂ ದುರ್ವಾಸಸಂ ಸೋಮಮಾತ್ಮೇಶಬ್ರಹ್ಮಸಂಭವಾನಿತಿ ವಚನಾತ್ || (೩) ಅ ಇತಿ ವಿಷ್ಣುಸ್ತಜ್ಜಾತತ್ವಾದಜಃ | ಅ ಇತಿ ಬ್ರಹ್ಮೇತ್ಯಾದಿಶ್ರುತೇಃ | ವಾಸುದೇವಾತ್ಪರೋ ನೈವ ಬ್ರಹ್ಮಶಬ್ದೋದಿತೋ ಭವೇ-**

**ದಿತ್ಯಾದೇಶ್ಚ । ಅತಃ ಸ್ವಶಬ್ದೋ ವಿಷ್ಣಾವೇವ ಪ್ರಸಿದ್ಧಃ । ತತಃ ಸ್ವಮಪೀತೋ ಭವತೀತಿ ಯುಜ್ಯತೇ ॥　　॥ ೧ ॥**

ಅ ॥ (೧) **ಸ್ವಯಂಭೂಃ** ಎಂಬ ಶಬ್ದದಿಂದ ಸ್ವಯಂ=ಸ್ವತಂತ್ರನಾದ ಶ್ರೀವಿಷ್ಣುವಿನಿಂದ ಹುಟ್ಟಿದ ಕಾರಣ ಚತುರ್ಮುಖ ಬ್ರಹ್ಮನು ಹೇಳಲ್ಪಡುತ್ತಾನೆ. (**ಸ್ವಯಮೇವ ಭವತೀತಿ ಸ್ವಯಂಭೂಃ** ತನ್ನಷ್ಟಕ್ಕೇನೇ ಆಗುತ್ತಾನೆಂದು ಅರ್ಥವು ಏಕೆ ಆಗಲಾರದು. ಅದರಿಂದ **ಸ್ವಯಂ** ಎಂಬ ಶಬ್ದವು ವಿಷ್ಣುವನ್ನು ಹೇಳುತ್ತದೆಂದು ಸಿದ್ಧಿಸುವುದಿಲ್ಲ ಎಂದರೆ—) ಚತುರ್ಮುಖನು ಚತುರ್ಮುಖನಿಂದಲೇ ಹುಟ್ಟಿದವನಲ್ಲವಷ್ಟೆ. (ಆದರೂ ನೀವು ಹೇಳುವ ಅರ್ಥವೇ ಆಗಬೇಕೆಂಬುವಲ್ಲಿ ಪ್ರಮಾಣವೇನೆಂದರೆ—ಬ್ರಹ್ಮನು ವಿಷ್ಣುವಿನಿಂದ ಹುಟ್ಟಿದವನೆಂಬುವಲ್ಲಿ ಪ್ರಮಾಣ ಹೇಳುತ್ತಾರೆ—) ಶ್ರೀಹರಿಯು ಸರ್ವರನ್ನು ಸೃಷ್ಟಿಸುವುದಕ್ಕಿಂತ ಮೊದಲು ಚತುರ್ಮುಖನನ್ನು ಸೃಷ್ಟಿಸುತ್ತಾನೆಂದು ವೇದವು. (೨) (ಮತ್ತು **ಆತ್ಮಭೂಃ** ಶಬ್ದವು ಚತುರ್ಮುಖ ಬ್ರಹ್ಮನನ್ನು ಹೇಳುತ್ತದೆ. ಅದು ಚತುರ್ಮುಖನು ವಿಷ್ಣುವಿನಿಂದ ಹುಟ್ಟಿದವನು ಎನ್ನುತ್ತದೆ. ತನ್ನಿಂದಲೇ ತಾನು ಹುಟ್ಟಿದವನೆಂದು ಹೇಳುವುದಿಲ್ಲ. ಜೀವರಿಂದ ಹುಟ್ಟಿದವನೆಂದೂ ಹೇಳುವುದಿಲ್ಲ. ಹಾಗೆ ಹೇಳಿದರೆ ವೇದಗಳಿಂದ ವಿರೋಧವು ಬರುವುದು ಅದುಕಾರಣ ಸ್ವಯಂಭೂ ಶಬ್ದಕ್ಕೂ ನಾವು ಹೇಳಿದ ಅರ್ಥವೇ ಆಗಬೇಕೆನ್ನುತ್ತಾರೆ -) ಆತ್ಮನೆಂದರೆ ಭಗವಂತನು. ಅವನಿಂದ ಹುಟ್ಟಿದವನಾದುದರಿಂದ **ಆತ್ಮಭೂಃ** ಎಂಬ ಶಬ್ದದಿಂದ ಚತುರ್ಮುಖನನ್ನು ಇಟ್ಟುಕೊಳ್ಳಬೇಕು. (ಆತ್ಮನೆಂದರೆ ಭಗವಂತನೆಂದು ಏಕೆ ಇಟ್ಟುಕೊಳ್ಳಬೇಕೆಂದರೆ—) ಆತ್ಮ (ಪರಮಾತ್ಮ) ನಿಂದ ಹುಟ್ಟಿದವನು ದತ್ತಾತ್ರೇಯ, ರುದ್ರನಿಂದ ಹುಟ್ಟಿದವರು ದುರ್ವಾಸರು, ಚತುರ್ಮುಖನಿಂದ ಹುಟ್ಟಿದವನು ಸೋಮನು, ಎಂಬ ಭಾಗವತ ಪ್ರಮಾಣದಿಂದ ಆತ್ಮನೆಂದರೆ ವಿಷ್ಣುವೆಂದು ಪ್ರಸಿದ್ಧವಾಗಿದೆ. (೩) (ಮತ್ತು ಅಜ ಶಬ್ದಕ್ಕೆ ಬ್ರಹ್ಮನೆಂಬ ಅರ್ಥವು ಪ್ರಸಿದ್ಧವು. ಆ ಶಬ್ದಕ್ಕೂ ವಿಷ್ಣುವಿನಿಂದ ಹುಟ್ಟಿದವನೆಂದು ಅರ್ಥವು. **ಯೋ ಬ್ರಹ್ಮಾಣಂ ವಿದಧಾತಿ** ಎಂಬ ವೇದದಿಂದ ವಿರೋಧವು ಬರುವುದರಿಂದ **ನ ಜಾಯತೇ ಇತಿ ಅಜಃ** ಹುಟ್ಟದಿರುವ ಪ್ರಯುಕ್ತ ಅಜನೆನ್ನಿಸುತ್ತಾನೆ, ಎಂದರ್ಥವಲ್ಲ. ಆ **ಅಜ** ಎಂಬ ಶಬ್ದವನ್ನು ನೋಡುವಾಗಲೂ **ಸ್ವಯಂಭೂ** ಶಬ್ದಕ್ಕೆ ಹಿಂದೆ ಹೇಳಿದ ಅರ್ಥವೇ ಆಗಬೇಕೆನ್ನುತ್ತಾರೆ—) **ಅ** ಎಂದರೆ ಶ್ರೀವಿಷ್ಣುವು, ಅವನಿಂದ ಹುಟ್ಟಿದ ಕಾರಣ ಚತುರ್ಮುಖನು **ಅಜಃ** ಎನ್ನಿಸುತ್ತಾನೆ (**ಅ** ಶಬ್ದವು ವಿಷ್ಣುವನ್ನು ಹೇಳುತ್ತದೆ ಎಂಬಲ್ಲಿ ಪ್ರಮಾಣ ಹೇಳುತ್ತಾರೆ—) **ಅಃ** ಎಂಬ ಶಬ್ದದಿಂದ ಪರಬ್ರಹ್ಮನು ಹೇಳಲ್ಪಡುತ್ತಾನೆ, ಇದು ಮೊದಲಾದುದು ವೇದವು. (ಪರಬ್ರಹ್ಮನು **ಅ** ಎಂಬುವುದರಿಂದ ಹೇಳಲ್ಪಡುತ್ತಾನೆ· ವಿಷ್ಣುವಲ್ಲ ಎಂದರೆ—ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುತ್ತದೆ. ವಿಷ್ಣುವೇ **ಅ** ಎಂಬುವುದರಿಂದ ಹೇಳಲ್ಪಡುತ್ತಾನೆ, ಎಂಬುವಲ್ಲಿ ಸ್ಮೃತಿಪ್ರಮಾಣ ಹೇಳುತ್ತಾರೆ—) ಮುಖ್ಯವಾಗಿ ಬ್ರಹ್ಮಶಬ್ದದಿಂದ ಹೇಳಲ್ಪಡತಕ್ಕವನು ವಾಸುದೇವನೇ. ಅವನಿಗಿಂತ ಮತ್ತೊಬ್ಬನು ಮುಖ್ಯವಾಗಿ ಹೇಳಲ್ಪಡುವುದೇ ಇಲ್ಲ ಅದುಕಾರಣ **ಸ್ವ** ಎಂಬ ಶಬ್ದವು ವಿಷ್ಣುವಿನಲ್ಲಿಯೇ ಪ್ರಸಿದ್ಧವು. ಅದುಕಾರಣ **ಸ್ವಮಪೀತೋ ಭವತಿ** ಎಂಬುದಕ್ಕೆ ವಿಷ್ಣುವನ್ನು ಹೊಂದುತ್ತಾನೆ, ಎಂದು ಅರ್ಥಹೇಳಿದ್ದು ಕೂಡುತ್ತದೆ.　　॥ ೧ ॥

**ಪೀ—ಸ್ವ** ಎಂಬ ಶಬ್ದಕ್ಕೆ ವಿಷ್ಣುವೆಂದು ಅರ್ಥ ಇಟ್ಟುಕೊಳ್ಳುವುದಾದರೂ **ಅಪೀತ** ಎಂಬ ಶಬ್ದದಿಂದ ಐಕ್ಯವನ್ನು ಇಟ್ಟುಕೊಳ್ಳಬೇಕು. ಏಕೆಂದರೆ **ಏಕೀಭವತಿ** ಎಂಬುದಕ್ಕೂ **ಅಪೀತೋ ಭವತಿ** ಎಂಬುದಕ್ಕೂ ಒಂದೇ ಅರ್ಥವು ಅದುಕಾರಣ **ಅಪೀತೋ ಭವತಿ** ಎಂಬುದಕ್ಕೆ **ಅಪ್ನೋತಿ** ಹೊಂದುತ್ತಾನೆಂಬ ದ್ವೈತಿಗಳ ಅರ್ಥವು ಕೂಡುವುದಿಲ್ಲ. ಹೊಂದುತ್ತಾನೆಂದು ಅರ್ಥ ಹೇಳಬೇಕಿದ್ದರೆ—**ಇತೋ ಭವತಿ** ಎಂದೇ ವೇದದಲ್ಲಿ ಹೇಳಬೇಕಿತ್ತು. **ಅಪೀತಃ** ಎಂಬುವಲ್ಲಿದ್ದ **ಅಪಿ** ಎಂಬುವುದು ವ್ಯರ್ಥವು ಎಂದು ಹೇಳಕೂಡದು. ಏಕೆಂದರೆ—ಪರರ ಮತದಲ್ಲಿ **ಸ್ವ** ಎಂಬ ಶಬ್ದಕ್ಕೇನೇ ಐಕ್ಯವೆಂದು ಅರ್ಥವಿರು

ವುದರಿಂದ **ಅಪೀತಃ** ಎಂಬುವುದೇ ವ್ಯರ್ಥವಾಗಬೇಕಾಗುವುದು ಮತ್ತು ಪರರ ಮತದಲ್ಲಿ **ಅಪೀತ** ಎಂಬ **ಅಖಂಡ** ಶಬ್ದಕ್ಕೆ ಐಕ್ಯವೆಂದು ಅರ್ಥವು ಎಂದು ಹೇಳಲಾಗುವುದಿಲ್ಲ. ಏಕೆಂದರೆ–ಅಪೀತ ಎಂಬುವುದೂ, **ಭವತಿ** ಎಂಬುವುದೂ, ಅಕರ್ಮಕವಾದುದರಿಂದ, **ಸ್ವಂ** ಎಂಬ ದ್ವಿತೀಯಾ ವಿಭಕ್ತಿಯು ಕೂಡುವುದಿಲ್ಲ. ಬ್ರಹ್ಮನನ್ನು ಐಕ್ಯವು ಆಗುತ್ತದೆ ಎಂದಾಗುವುದಿಲ್ಲವಷ್ಟೆ. ಅಲ್ಲದೆ ಸ್ವಂ ಎಂದು ಇದ್ದುದನ್ನು **ಸ್ವೇನ**=ಬ್ರಹ್ಮನಿಂದ **ಅಪೀತಃ**=ಐಕ್ಯವು ಆಗುತ್ತದೆ, ಎಂದು ತೃತೀಯಾ ವಿಭಕ್ತಿಯನ್ನು ಕಲ್ಪಿಸಿಕೊಳ್ಳಬೇಕಾಗುವುದು. ಮತ್ತು **ಅಪೀತ** ಎಂಬುದಕ್ಕೆ ಐಕ್ಯವೆಂಬ ಅರ್ಥವು ಯೋಗ (ಅವಯವ ಶಕ್ತಿ) ವೃತ್ತಿಯಿಂದ ಸಿಗುವುದಿಲ್ಲವೆನ್ನುತ್ತಾರೆ–

**ಭಾ. ॥ (೧) ಅಪ್ಯಯೋ ನಾಮಾವಿಜ್ಞೇಯತ್ವೇನ ಪ್ರವೇಶಃ । ಅವಿಜ್ಞಾತಂ ಪ್ರವಿಷ್ಟಂ ಯದಪೀತಮಿತಿ ಕೀರ್ತ್ಯತೇ । ಯಥಾ ನದ್ಯಃ ಸಮುದ್ರೇ ತು ಯಥಾ ವಿಷ್ಣುಂ ಲಯೇ ಪ್ರಜಾ ಇತಿ ಶಬ್ದನಿರ್ಣಯೇ ॥ (೨) ನ ಚ ಜೀವಸ್ಯ ತದ್ಭಾವೋಽಸ್ತಿ । ಉತ್ಥಿತಸ್ಯ ಸುಪ್ತಿ-ಸಂಸಾರಯೋಃ ಪರಾಮರ್ಶದರ್ಶನಾತ್ ॥ (೩) ಅಹಂ ವಿಶ್ವಂ ಭುವನಮಭ್ಯಭವಾಂ । ಆಜನ್ಮಮರಣಂ ಸ್ಮೃತ್ವಾ ಮುಕ್ತಾ ಹರ್ಷಮವಾಪ್ನುಯುಃ ಇತಿ ॥ (೪) ತದ್ಭಾವಸ್ಯಾಪ-ರಾಮರ್ಶಾಚ್ಚ । ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರ ಮಿತ್ಯಾದಿಶ್ರುತೇಶ್ಚ । ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನೇತಿ ಚ ಭಗವದ್ವಚನಂ ॥ ೨ ॥**

**ಅ** ॥ (೧) ಬೇರೆಯವರಿಗೆ ತಿಳಿಯದ ಹಾಗೆ ಪ್ರಾಪ್ತಿಯು ಅಪ್ಯಯವೆನಿಸುತ್ತದೆ. (ಅಪೀತಿ ಎಂಬುವುದಕ್ಕೂ ಅಪ್ಯಯವೆಂಬುದಕ್ಕೂ ಒಂದೇ ಅರ್ಥವು **ತದನ್ಯೇಷಾಮದರ್ಶನಂ । ಅಪ್ಯಯೋಽಯಂ ಸಮುದ್ದಿಷ್ಟೋ ನ ಸ್ವರೂಪೈಕತಾ ಕ್ವಚಿತ್** ಬೇರೆಯವರಿಗೆ ತೋರದಿರುವುದೇ ಅಪ್ಯಯವೆನಿಸುತ್ತದೆ. ಜೀವಸ್ವರೂಪಕ್ಕೆ ಐಕ್ಯವೆಂದಲ್ಲ, ಎಂಬ ವೇದ ಪ್ರಮಾಣವನ್ನು ತಿಳಿಸುವುದಕ್ಕಾಗಿ ಅಪೀತ ಎಂದು ಹೇಳದೆ ಅಪ್ಯಯವೆಂದು ಹೇಳಿರುವರು.) (ಈ ವಿಷಯದಲ್ಲಿ ಸ್ಮೃತಿಪ್ರಮಾಣವನ್ನು ಹೇಳುತ್ತಾರೆ.) ಬೇರೆಯವರಿಗೆ ತಿಳಿಯದ ಹಾಗೆ ಹೊಂದಿರುವುದು (ಪ್ರವೇಶಿಸಿದ್ದು) ಯಾವುದಿದೆಯೋ ಅದು **ಅಪೀತ** ಎನಿಸುತ್ತದೆ. ಗಂಗಾದಿ ನದಿಗಳು ಸಮುದ್ರದಲ್ಲಿ ಸೇರುತ್ತವೆ, ಎಂಬಲ್ಲಿ ಸಮುದ್ರಮಪೀತಾಃ ಎಂದು ಹೇಳಲ್ಪಡುತ್ತವೆ. ಪ್ರಜೆಗಳು ಪ್ರಲಯಕಾಲದಲ್ಲಿ ವಿಷ್ಣುವನ್ನು ಪ್ರವೇಶಿಸುತ್ತಾರೆ. ಎಂಬಲ್ಲಿ **ಪ್ರಜಾಃ ಅಪೀತಾಃ** ಎಂದು ಹೇಳಲ್ಪಡುತ್ತಾರೆ. ಹಾಗೆಯೇ **ಸ್ವಮಪೀತೋ ಭವತಿ** ಎಂಬ ಉಕ್ತಿಯು, ಎಂದು ಶಬ್ದ ನಿರ್ಣಯದಲ್ಲಿದೆ. (೨) (ಈ ಶಬ್ದದೋಷವಿರಲಿ, ಜೀವನೇ ಬ್ರಹ್ಮನಾಗುತ್ತಾನೆಂಬುದು ಯುಕ್ತವಾಗಿದ್ದರೆ **ಸ್ವ-ಮಪೀತೋ ಭವತಿ** ಎಂಬುವುದಕ್ಕೆ ಬ್ರಹ್ಮನಿಂದ ಐಕ್ಯಹೊಂದುತ್ತಾನೆ, ಎಂಬ ಅರ್ಥವು ಆಗುತ್ತಿತ್ತು. ಜೀವನು ಬ್ರಹ್ಮನಾಗುವುದೇ ಇಲ್ಲ, ಎನ್ನುತ್ತಾರೆ—) ಜೀವನಿಗೆ ಬ್ರಹ್ಮತ್ವವು ಬರುವುದೇ ಇಲ್ಲ. (ಏಕೆಂದರೆ—**ಸ್ವಮಪೀತೋ ಭವತಿ** ಎಂಬ ವಾಕ್ಯವು ಸುಪ್ತನನ್ನು ಮುಕ್ತನನ್ನು ಇಬ್ಬರನ್ನೂ ಹೇಳುತ್ತದೆ. ಮತ್ತು ಸುಪ್ತಿ ಪ್ರಕರಣವು ಮುಕ್ತಿಯನ್ನು ಹೇಳುತ್ತದೆಂಬುದನ್ನು **ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಂ** ಎಂಬ ಸೂತ್ರದಲ್ಲಿ ಸೂತ್ರಕಾರರು ನಿರ್ಣಯಿಸಿರುವರು. ಅಲ್ಲದೆ **ಸ್ವರ್ಗಃ ಸುಷುಪ್ತಿರಿತ್ಯಾಖ್ಯಾ ಮುಕ್ತೇರಪಿ ಯತಃ ಸಮಾ** ಎಂಬ ಪ್ರಮಾಣದಿಂದ ಸುಷುಪ್ತಿ ಶಬ್ದವು ಮುಕ್ತಿಪರವೂ ಆಗುತ್ತದೆಂದು ಹೇಳಿದೆ. ಅಲ್ಲದೆ **ಸ್ವಂ ಕುಲಾಯಂ ಯಥಾಽಪೀತಃ ಪಕ್ಷೀ ಸ್ಯಾದೇವಮೀಶ್ವರಂ । ಅಪ್ಯೇತಿ ಜೀವಃ ಪ್ರಸ್ವಾಪೇ ಮುಕ್ತೌ ಚಾನ್ಯೋಽಪಿ ಸನ್ ಸದಾ ॥** ಎಂಬ ಸ್ಮೃತಿಯೂ ಮುಕ್ತಿಪರವಾಗುತ್ತದೆ ಎಂಬುವುದನ್ನು ತಿಳಿಸುತ್ತದೆ. ಆದುಕಾರಣ **ಸ್ವಮಪೀತೋ ಭವತಿ** ಎಂದು ಹೇಳಲ್ಪಡತಕ್ಕ ಜೀವನಿಗೆ ಬ್ರಹ್ಮಭಾವವು (1) ಸುಪ್ತನಿಗೋ, (2) ಮುಕ್ತನಿಗೋ, ಎರಡೂ ಕೂಡುವುದಿಲ್ಲವೆನ್ನುತ್ತಾರೆ—) (ಗಾಢ

ನಿದ್ದೆಯಲ್ಲಿದ್ದ ಜೀವನಿಗಾಗಲೀ, ಮುಕ್ತನಾದವನಿಗಾಗಲೀ ಬ್ರಹ್ಮೈಕ್ಯವು ಬರುವುದಿಲ್ಲ. ಏಕೆಂದರೆ —) ಗಾಢನಿದ್ದೆಯಿಂದ ಎಚ್ಚೆತ್ತವನಿಗೆ ಸುಷುಪ್ತಿಕಾಲದಲ್ಲಿ ಅನುಭೂತವಾದ ವಸ್ತುಗಳ ಜ್ಞಾನವಿದೆ ಸಂಸಾರದಿಂದ ಮೋಕ್ಷವನ್ನು ಹೊಂದಿದವನಿಗೆ ಸಂಸಾರದ ಜ್ಞಾನವಿದೆ (ಬ್ರಹ್ಮನಿಗೆ ಜೀವರಂತೆ ನಾನು ಸುಖವಾಗಿ ಮಲಗಿದ್ದೆನು ಸಂಸಾರದಲ್ಲಿರುವಾಗ ದುಃಖಿಯಾಗಿದ್ದೆನು, ಇತ್ಯಾದಿ ಪ್ರಕಾರ ಸುಷುಪ್ತಿ ಸಂಸಾರಗಳ ಜ್ಞಾನವೇ ಇಲ್ಲ ಬ್ರಹ್ಮನು ಸರ್ವದಾ ಸರ್ವಜ್ಞನೇ ಆದುದರಿಂದ ಅಜ್ಞಾನವೇ ಇಲ್ಲ. ಹೀಗೆ ಜೀವನಿಗೂ, ಬ್ರಹ್ಮನಿಗೂ ವಿರುದ್ಧ ಧರ್ಮಗಳೇ ಇರುವುದರಿಂದ ಇವರಿಗೆ ಐಕ್ಯವು ಕೂಡಲಾರದು. (೩) (ಹಾಗಾದರೆ **ಸುಖಮಹಮಸ್ವಾಪ್ಸಂ** ಎಂದು ಸರ್ವರಿಗೂ ಅನುಭವವಿದ್ದುದರಿಂದ ಸುಷುಪ್ತಿಯಿಂದ ಎಚ್ಚೆತ್ತವನಿಗೆ ಸುಷುಪ್ತಿ (ಗಾಢನಿದ್ದೆ) ಯ ಜ್ಞಾನವಿರಲಿ. ಸಂಸಾರದಿಂದ ತೆರಳಿದ ಮುಕ್ತನಿಗೆ ಸಂಸಾರ ಪರಾಮರ್ಶವು ಹೇಗೆ ಇರುವುದು? ಎಂದರೆ —) ನಾನು ಸಂಪೂರ್ಣ ಜಗತ್ತನ್ನು ಮೀರಿ ಅದಕ್ಕೆ ಅಧಿಪತಿಯಾಗಿರುವೆನು, (ಎಂದು ಮುಕ್ತನಾದ ಚತುರ್ಮುಖನ ವಾಕ್ಯವು) ಜನ್ಮಾರಭ್ಯ ಮರಣ ಪರ್ಯಂತ ಅನುಭವಿಸಿದ ದುಃಖವನ್ನು ಸ್ಮರಿಸಿ ಈಗ ಇಂತಹ ದುಃಖದಿಂದ ಬಿಡುಗಡೆ ಹೊಂದಿರುತ್ತೇವೆಂದು ಮೋಕ್ಷದಲ್ಲಿದ್ದವರು ಸಂತೋಷವನ್ನು ಹೊಂದಿರುವರು. (೪) (ಜೀವರಿಗೆ ಸುಷುಪ್ತಿಯಲ್ಲಿ ಬ್ರಹ್ಮೈಕ್ಯವು ಬರುವುದಾದರೆ ಎಚ್ಚೆತ್ತ ಮೇಲೆ ಬ್ರಹ್ಮೈಕ್ಯದ ಅನುಭವವು ಬರಬೇಕಾಗುವುದು. ಸುಷುಪ್ತಿಯಿಂದ ಎಚ್ಚತ್ತವನಿಗೆ ಸುಖಾದಿಗಳ ಜ್ಞಾನವು ಬರುವಂತೆಯೇ ಬ್ರಹ್ಮನೇ ನಾನು ಎಂಬ ಜ್ಞಾನವೂ ಬರಬೇಕಾಗುವುದು. ಅದು ಬರುವುದಿಲ್ಲವಷ್ಟೆ ಯಾವನಿಗೂ ಎಚ್ಚತ್ತವನಿಗೆ ನಾನು ಬ್ರಹ್ಮನಾಗಿದ್ದೇನೆ, ಎಂದು ಜ್ಞಾನವು ಬರುವುದಿಲ್ಲ. ಅದುಕಾರಣ ಸುಷುಪ್ತಿಯಲ್ಲಿ ಜೀವನಿಗೆ ಬ್ರಹ್ಮೈಕ್ಯವು ಬರುವುದಿಲ್ಲವೆನ್ನುತ್ತಾರೆ.) ಸುಷುಪ್ತಿಯಿಂದ ಎಚ್ಚರಗೊಂಡ ಜೀವರಿಗೆ ಯಾರಿಗೂ ನಾನು ಬ್ರಹ್ಮನಾಗಿದ್ದೇನೆಂದು ಜ್ಞಾನವು ಇರುವುದೇ ಇಲ್ಲ (ಮತ್ತು ಸುಷುಪ್ತಿಯಲ್ಲಿ ಅಥವಾ ಮುಕ್ತಿಯಲ್ಲಿ ಜೀವರಿಗೆ ಬ್ರಹ್ಮಭಾವವಿಲ್ಲ. ಏಕೆಂದರೆ— ಆ ಕಾಲಗಳಲ್ಲಿ ಪ್ರಾಜ್ಞರೂಪಿಯಾದ ಶ್ರೀಹರಿಯಿಂದ ಜೀವನು ಆಲಿಂಗಿಸಿಕೊಳ್ಳಲ್ಪಡುತ್ತಾನೆ, ಎಂದು ಹೇಳುವ ವೇದವಿದೆ. ಜೀವಬ್ರಹ್ಮರಿಗೆ ಐಕ್ಯವೆಂದಾದರೆ ಆ ಆಲಿಂಗನವು ಕೂಡಲಾರದು ಎನ್ನುತ್ತಾರೆ—) ಪ್ರಾಜ್ಞರೂಪಿ ಶ್ರೀಹರಿಯಿಂದ ಆಲಿಂಗಿಸಿಕೊಳ್ಳಲ್ಪಟ್ಟವನಾಗಿ ಬಾಹ್ಯವಸ್ತುಗಳನ್ನೂ ಆಂತರ ವಸ್ತುಗಳನ್ನೂ ಯಾವುದನ್ನೂ ತಿಳಿಯುವುದಿಲ್ಲ, ಇತ್ಯಾದಿ ವೇದವಿದೆ. ಸಂಪರಿಷ್ವಕ್ತಃ ಎಂಬುದಕ್ಕೆ ಐಕ್ಯ ಹೊಂದಿರುವನೆಂದು ಏಕೆ ಅರ್ಥವಾಗಲಾರದು, ಎಂದರೆ— ಈ ವೇದದ ಅರ್ಥವನ್ನು ನಿರ್ಣಯಿಸತಕ್ಕ ಸೂತ್ರವನ್ನು ಹೇಳುತ್ತಾರೆ—) **ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ಪ್ರಾಜ್ಞೇನಾತ್ಮನಾ ಅನ್ವಾರೂಢಃ** ಎಂದು ಸುಷುಪ್ತಿ ಉತ್ಕ್ರಾಂತಿ ಪ್ರಕರಣಗಳಲ್ಲಿ ಜೀವರಿಗೆ ಈಶ್ವರನಿಂದ ಭೇದವಿದೆ, ಎಂದು ಸೂತ್ರಕಾರರು ನಿರ್ಣಯಿಸಿರುವರು. || ೨ ||

**ಟೀ**—(1) ಶ್ರುತಿಸೂತ್ರಗಳು ಸುಷುಪ್ತಿಯನ್ನೂ ಮೋಕ್ಷವನ್ನೂ ಎರಡನ್ನೂ ಹೇಳುತ್ತವೆ. ಸುಷುಪ್ತಿ ಪ್ರಕರಣವು ಮೋಕ್ಷವನ್ನು ಹೇಳುತ್ತದೆಂದು ಸೂತ್ರಕಾರರೇ ನಿರ್ಣಯಿಸಿರುವರು. (2) ಮತ್ತು **ಸ್ವಮಪೀತಃ** ಎಂಬ ವಾಕ್ಯವು ಜೀವರಿಗೆ ಬ್ರಹ್ಮತ್ವವನ್ನು ಹೇಳಲಿಕ್ಕೆ ಹೊರಟದ್ದಲ್ಲ. ಏಕೆಂದರೆ— ಒಂಭತ್ತು ಪ್ರಕರಣಗಳಲ್ಲಿಯೂ ಜೀವಬ್ರಹ್ಮರಿಗೆ ಭೇದವನ್ನೇ ಸ್ಪಷ್ಟವಾಗಿ ಹೇಳಿರುವರು. ಹೇಗೆಂದರೆ ಅದರಲ್ಲಿ ೧ನೇ ಪ್ರಕರಣದಲ್ಲಿ **ಸನ್ಮೂಲಾಃ** ಎಂಬುವುದರಿಂದ ಪ್ರಜೆಗಳಿಗೆ ಶ್ರೀಹರಿಯು ಮೂಲಕಾರಣನೆಂದು ಹೇಳಿರುವರು. ೨ನೇ ಪ್ರಕರಣದಲ್ಲಿ **ಸಂಪತ್ಸ್ಯಾಮಹೇ ತ ಇಹ ವ್ಯಾಘ್ರೋ ವಾ** ಎಂದೂ, ೩ನೇ ಪ್ರಕರಣದಲ್ಲಿ **ಆಗಚ್ಛಾಮಹೇ ತ ಇಹ ವ್ಯಾಘ್ರೋ ವಾ** ಎಂದೂ, ಭಿನ್ನವಾದ ವಸ್ತುವನ್ನು ಬೇರೆಯೆಂದು ತಿಳಿಯದಿರುವುದರಿಂದ ಹುಲಿ ಮೊದಲಾದ ಮೃಗಾದಿಗಳಾಗಿ ಹುಟ್ಟುತ್ತಾರೆಂದು ಹೇಳಿದೆ. **ಸ ಏಷಃ** ಎಂಬ ೪ನೇ ಪ್ರಕರಣದಲ್ಲಿ ಜೀವರು ಶ್ರೀಹರಿಯ ಅಧೀನದಲ್ಲಿರುತ್ತಾರೆಂದು ಹೇಳಿದೆ **ಅಣ್ವ್ಯಃ ಇವೇಮಾಃ** ಎಂಬ ೫ನೇ ಪ್ರಕರಣದಲ್ಲಿ ಜೀವರು ತಿಳಿಯಲರ್ಹರಾದರೂ ಶ್ರೀಹರಿಯು ಪರಮ ಸೂಕ್ಷ್ಮ

ನಾದುದರಿಂದ ತಿಳಿಯಲಸಾಧ್ಯನೆಂದು ಹೇಳಿದೆ. **ಲವಣಮೇತತ್** ಎಂಬ ೬ನೇ ಪ್ರಕರಣದಲ್ಲಿ ಶ್ರೀಹರಿಯ ಸಾಮರ್ಥ್ಯವು ತೋರಿದರೂ ಶ್ರೀಹರಿಯು ತಿಳಿಯಲಶಕ್ಯನೆಂದು ಹೇಳಿದೆ. **ಏತಾಂ ದಿಶಂ ಗಂಧಾರಾಃ** ಎಂಬ ೭ನೇ ಪ್ರಕರಣದಲ್ಲಿ ಆಚಾರ್ಯರ ಉಪದೇಶವಿಲ್ಲದೆ ಶ್ರೀಹರಿಯು ತಿಳಿಯಲಶಕ್ಯನು, ಆತನಿಂದ ಭೇದವೂ ತಿಳಿಯಲಶಕ್ಯವೆಂದು ಹೇಳಿದೆ. **ತೇಜಃ** ಎಂಬ ೮ನೇ ಪ್ರಕರಣದಲ್ಲಿ ಜೀವನು ಶ್ರೀಹರಿಯ ಅಧೀನನಾಗಿಯೇ ತಿಳಿಯಲ್ಪಡುತ್ತಾನೆಂದು ಹೇಳಿಯದೆ. **ಅಪಹಾರ್ಷೀತ್** ಎಂಬ ೯ನೇ ಪ್ರಕರಣದಲ್ಲಿ ಅಭೇದಜ್ಞಾನದಿಂದ ಅಂಧಂತಮಸ್ಸು, ಭೇದಜ್ಞಾನದಿಂದ ಮೋಕ್ಷವೆಂದೂ ಫಲ ಹೇಳಿಯದೆ ಇವುಗಳು ಜೀವಬ್ರಹ್ಮರಿಗೆ ಅಭೇದವಾದರೆ ಸರ್ವಥಾ ಕೂಡಲಾರವು, ಎಂಬ ಅಭಿಪ್ರಾಯದಿಂದ ಹೇಳುತ್ತಾರೆ —

**ಭಾ. ॥ (೧) ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ । (೨) ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹ ಇತಿ । (೩) ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ । (೪) ಸ ಏಷ ಜೀವೇನಾತ್ಮನಾಽನುಪ್ರಭೂತಃ । ಪೇಪೀಯಮಾನೋ ಮೋದಮಾನಸ್ತಿಷ್ಠತಿ ॥ (೫) ಅಣ್ವ್ಯ ಇವೇಮಾ ಧಾನಾ ಭಗವ ಇತ್ಯಾಸಾಮಂಗೈಕಾಂ ಭಿಂಧೀತಿ ಭಿನ್ನಾ ಭಗವ ಇತಿ ಕಿಮತ್ರ ಪಶ್ಯಸೀತಿ ನ ಕಿಂಚನ ಭಗವ ಇತಿ ಯಂ ವೈ ಸೋಮ್ಯೈತಮಣಿಮಾನಂ ನ ನಿಭಾಲಯಸ ಏತಸ್ಯ ವೈ ಸೋಮ್ಯೈಷೋಽಣಿಮ್ನ ಏವಂ ಮಹಾನ್ನ್ಯಗ್ರೋಧಸ್ತಿಷ್ಠತಿ । (೬) ಲವಣಮೇತದುದಕೇಽವಧಾಯಾಥ ಮಾ ಪ್ರಾತರುಪಸೀದಥಾ ಇತಿ ಸ ಹ ತಥಾ ಚಕಾರ ತಂ ಹೋವಾಚ ಯದ್ದೋಷಾ ಲವಣಮೇತದುದಕೇಽವಧಾ ಅಂಗ ತದಾಹರೇತಿ ತದ್ಧಾವಮೃಶ್ಯ ನ ವಿವೇದ ಯಥಾ ವಿಲೀನಮೇವಾಂಗಾಸ್ಯಾಂತಾದಾಚಾಮೇತಿ ಕಥಮಿತಿ ಲವಣಮಿತಿ । ಮಧ್ಯಾದಾಚಾಮೇತಿ ಕಥಮಿತಿ ಲವಣಮಿತ್ಯಂತ್ಯಾದಾಚಾಮೇತಿ ಕಥಮಿತಿ ಲವಣಮಿತಿ । ಅತ್ರ ವಾವ ಕಿಲ ಸತ್ಸೋಮ್ಯ ನ ನಿಭಾಲಯಸೇಽತ್ರೈವ ಕಿಲೇತಿ । (೭) ಏತಾಂ ದಿಶಂ ಗಂಧಾರಾ ಏತಾಂ ದಿಶಂ ವ್ರಜೇತಿ । (೮) ತೇಜಃ ಪರಸ್ಯಾಂ ದೇವತಾಯಾಂ ತಾವನ್ನ ಜಾನಾತಿ । (೯) ಅಪಹಾರ್ಷೀತ್ಸ್ತೇಯಮಕಾರ್ಷೀದಿತ್ಯಾದಿ । ನವಕೃತ್ವೋ ಭಿನ್ನಸ್ಯ ವಸ್ತುನೋ ಭೇದಾಪರಿಜ್ಞಾನಾದನರ್ಥಂ ಸೂಕ್ಷ್ಮತ್ವಾದ್ಭೇದಸ್ಯ ದುರ್ಜ್ಞೇಯತ್ವಂ ಚ ಸದೃಷ್ಟಾಂತಂ ತಾತ್ಪರ್ಯೇಣಾಹ ॥ ೩ ॥**

ಅ ॥ (೧) ೮ನೇ ಖಂಡದ ೪ನೇ ಮಂತ್ರದಲ್ಲಿ, ಎಲೋ ಶ್ವೇತಕೇತುವೇ ಎಲ್ಲಾ ಪ್ರಜೆಗಳಿಗೆ ಪರಬ್ರಹ್ಮನು ಕಾರಣನು. ಪ್ರಜೆಗಳು ಪರಬ್ರಹ್ಮನನ್ನು ಆಶ್ರಯಿಸಿರುತ್ತಾರೆ ಮುಕ್ತಿಯಲ್ಲಿಯೂ ಅವನನ್ನೇ ಆಶ್ರಯಿಸಿರುತ್ತಾರೆಂದು ಹೇಳಿದೆ. (೨) ೯ನೇ ಖಂಡದ ೨ನೇ ಮಂತ್ರದಲ್ಲಿ ಶ್ರೀಹರಿಯನ್ನು ಹೊಂದಿರುತ್ತೇವೆ, ಹೊಂದುವೆವು ಹೊಂದುತ್ತೇವೆಂದು ತಿಳಿಯುವುದಿಲ್ಲವೆಂದು ಹೇಳಿದೆ. (೩) ೧೦ನೇ ಖಂಡದ ೨ನೇ ಮಂತ್ರದಲ್ಲಿ ಶ್ರೀಹರಿಯಿಂದ ಹುಟ್ಟಿದರೂ ಶ್ರೀಹರಿಯಿಂದ ಹುಟ್ಟಿರುತ್ತೇವೆಂದು ತಿಳಿಯಲಿಲ್ಲವೆಂದಿರುವರು. (೪) ೧೧ನೇ ಖಂಡದ ೧ನೇ ಮಂತ್ರದಲ್ಲಿ ವೃಕ್ಷಜೀವನು ಅನಿರುದ್ಧನಿಂದ ದೇಹವನ್ನು ಹೊಂದಿ ನೀರನ್ನು ಬುಡದಿಂದ ಮೇಲಕ್ಕೆ ಎಳೆದುಕೊಂಡು ಸಂತೋಷದಿಂದ ಇರುತ್ತಾನೆಂದು ಹೇಳಿದೆ (೫) ೧೨ ಖಂಡದ ೧ನೇ ಮಂತ್ರದಲ್ಲಿ ಪೂಜ್ಯರೇ ಸೂಕ್ಷ್ಮಗಳಾದ ಬೀಜಗಳನ್ನು ನೋಡುತ್ತೇನೆಂದು ಮಗನು ಹೇಳಿದಾಗ ಈ ಬೀಜಗಳ ಮಧ್ಯದಲ್ಲಿ ಒಂದು ಬೀಜವನ್ನು ಒಡೆಯುವವನಾಗು, ಎಂದನು. ಮಗನು ಒಡೆದೆನೆಂದನು. ಆ ಒಡೆದ ಬೀಜದಲ್ಲಿ ಏನೇನನ್ನು

ನೋಡುತ್ತಿ, ಎಂದು ತಂದೆಯು ಕೇಳಿದಾಗ ಏನನ್ನೂ ನೋಡುವುದಿಲ್ಲವೆಂದನು ಆಗ ತಂದೆಯು ಹೀಗೆ ಹೇಳಿದ ಮಗನಿಗೆ ಸೂಕ್ಷ್ಮನಾದ ಶ್ರೀಹರಿಯ ಸಾಮರ್ಥ್ಯದಿಂದ ಪರಮಸೂಕ್ಷ್ಮನಾದ ಶ್ರೀಹರಿಯನ್ನು ನೋಡುವುದಿಲ್ಲವೆಂದನು. ಹೀಗೆಯೇ ದೊಡ್ಡ ಗೋಳಿಮರವು ಇದೆ. (೬) ೧೩ನೇ ಖಂಡದಲ್ಲಿ ಈ ಉಪ್ಪಿನ ಹೆಂಟೆಯನ್ನು ರಾತ್ರಿಯಲ್ಲಿ ನೀರಿನಲ್ಲಿಟ್ಟು ಬೆಳಿಗ್ಗೆ ನನ್ನ ಬಳಿಗೆ ಬಾ, ಎಂದು ತಂದೆಯು ಹೇಳಿದಾಗ ಮಗನು ಹಾಗೆಯೇ ಮಾಡಿ ಮುಂಜಾನೆ ತಂದೆಯ ಬಳಿಗೆ ಬರಲು ಆಗ ಮಗನಿಗೆ ರಾತ್ರಿಯಲ್ಲಿ ನೀರಿನಲ್ಲಿ ಹಾಕಿಟ್ಟಿದ್ದ ಉಪ್ಪಿನ ಹೆಂಟೆಯನ್ನು ತರಬೇಕೆಂದನು. ನೀರಿನಲ್ಲಿ ಕೈಯನ್ನು ಹರಡಿಸಿ ನಷ್ಟವಾದ ವಸ್ತುವಿನಂತೆ ತಿಳಿಯಲಿಲ್ಲ, ಎಂದನು. ಪೂರ್ವಭಾಗದಲ್ಲಿದ್ದ ನೀರನ್ನೂ, ಮಧ್ಯಭಾಗದಲ್ಲಿದ್ದ ನೀರನ್ನೂ, ಪಶ್ಚಿಮಭಾಗದಲ್ಲಿದ್ದ ನೀರನ್ನೂ ಆಚಮನ ಮಾಡು ಎಂದನು. ಅದು ಹೇಗೆ ಇದೆ ಎಂದು ಕೇಳಿದಾಗ ಎಲ್ಲವೂ ಉಪ್ಪಾಗಿಯೇ ಇದೆ, ಎಂದನು ಮಗನೇ ನೀರಿನಲ್ಲಿಯೇ ಕರಗಿಹೋದ ಸೂಕ್ಷ್ಮವಾದ ಉಪ್ಪನ್ನು ನೋಡುವುದಿಲ್ಲವಷ್ಟೇ. (ಲವಣರಸವು ಕಂಡರೂ ಉಪ್ಪು ಹೇಗೆ ಕಾಣುವುದಿಲ್ಲವೋ, ಹಾಗೆಯೇ ಶ್ರೀಹರಿಯ ಸಾಮರ್ಥ್ಯವು ಕಂಡರೂ ಶ್ರೀಹರಿಯು ಕಾಣುವುದಿಲ್ಲ, ಎಂದಿದೆ.) (೭) ೧೪ನೇ ಖಂಡದ ೨ನೇ ಮಂತ್ರದಲ್ಲಿ ಈ ದಿಕ್ಕಿನಲ್ಲಿ ಗಂಧಾರದೇಶವಿದೆ, ಈ ದಿಕ್ಕಿಗೆ ಹೋಗು ಎಂದು ಹೇಳಿದೆ, (೮) ೧೫ನೇ ಖಂಡದ ೧ನೇ ಮಂತ್ರದಲ್ಲಿ ಲಕ್ಷ್ಮೀದೇವಿಯು ಶ್ರೀಪರಮಾತ್ಮನಲ್ಲಿ ಸೇರಿ ತನ್ನ ವ್ಯಾಪಾರವನ್ನು ಬಿಟ್ಟಾಗ ಜೀವನು ಏನನ್ನೂ ತಿಳಿಯುವುದಿಲ್ಲವೆಂದು ಎಂದಿದೆ, (೯) ೧೬ನೇ ಖಂಡದ ೧ನೇ ಮಂತ್ರದಲ್ಲಿ ಈ ಕಳ್ಳನು ನೋಡುತ್ತಿರುವಂತೆ ಕದ್ದಿರುವನು, ಇವನು ತಿಳಿಯದ ಹಾಗೆ ಕದ್ದವನು ಎಂದಿದೆ. (೧೦) ಇದು ಮೊದಲಾದವಾಕ್ಯವು ಸ್ವತಃ ಭಿನ್ನವಾದ ವಸ್ತುವಿನಭೇದವನ್ನು ತಿಳಿಯದಿರುವುದರಿಂದ ಅನರ್ಥವನ್ನೂ, ಸೂಕ್ಷ್ಮವಾದುದರಿಂದ ಭೇದವನ್ನು ತಿಳಿಯಲು ಸಾಧ್ಯವಿಲ್ಲವೆಂದೂ. ಪರಬ್ರಹ್ಮನೇ ಕಾರಣನು. ಇದುಮೊದಲಾದುದದನ್ನು ಒಂಭತ್ತಾವರ್ತಿ ದೃಷ್ಟಾಂತಕೊಟ್ಟು ತಾತ್ಪರ್ಯಪೂರ್ವಕವಾಗಿ ಹೇಳಿದೆ, ||೩||

ಪೀ ಈ ಒಂಭತ್ತು ಪ್ರಕರಣಗಳಲ್ಲಿಯೂ ಜೀವಬ್ರಹ್ಮರಿಗೆ ಐಕ್ಯವನ್ನೇ ಹೇಳಿರುತ್ತಾರೆ. ಏಕೆಂದರೆ **ತತ್ತ್ವಮಸಿ** ಎಂದು ಒಂಭತ್ತು ಸಲ ಹೇಳಿದೆ. ಆದುಕಾರಣ ಅದನ್ನನುಸರಿಸಿ **ಸ್ವಮಪೀತಃ** ಎಂಬ ಉಪಕ್ರಮವಾಕ್ಯವೂ ಜೀವ ಬ್ರಹ್ಮೈಕ್ಯವನ್ನೇ ಹೇಳುತ್ತದೆಂದನ್ನಬೇಕು, ಎಂದರೆ ಹಾಗೆ ಹೇಳಕೂಡದು, **ಸ ಆತ್ಮಾತತ್ತ್ವಮಸಿ** ಎಂಬುವಲ್ಲಿ ಎರಡು ಪ್ರಕಾರ ಪದಚ್ಛೇದ ಮಾಡಲಿಕ್ಕೆ ಬರುವುದಾದರೂ ಭೇದವನ್ನು ಹೇಳತಕ್ಕ ಸಂದೇಹವಿಲ್ಲದ ದೃಷ್ಟಾಂತವಾಕ್ಯಗಳ ಸಾಮರ್ಥ್ಯದಿಂದ **ಅತತ್ ತ್ವಂ** ಎಂದು ಪದವಿಂಗಡಿಸಿಕೊಂಡು ಭೇದವನ್ನೇ ಹೇಳುತ್ತದೆಂದು ನಿರ್ಣಯವಾಗುತ್ತದೆ, ಒಂದೇ ದೃಷ್ಟಾಂತದಿಂದ ಭೇದವನ್ನೇ ಹೇಳುತ್ತದೆಂದು ನಿರ್ಣಯಿಸಲಿಕ್ಕೆ ಬರುತ್ತದೆ, ಹೀಗೆ ಇರಲು ಒಂಭತ್ತು ಪ್ರಕರಣಗಳಲ್ಲಿಯೂ ಭೇದವಿಷಯದಲ್ಲಿಯೇ ದೃಷ್ಟಾಂತಗಳನ್ನು ಹೇಳಿದುದರಿಂದ ಭೇದವನ್ನೇ ಹೇಳತಕ್ಕವುಗಳೆಂದು ಸುತರಾಂ ಸಿದ್ಧಿಸುತ್ತದೆ. ಅಭೇದವೆಂಬ ವಿಷಯದಲ್ಲಿ ಯಾವುದೊಂದು ದೃಷ್ಟಾಂತವನ್ನು ಹೇಳಲಿಲ್ಲ. ಅದುಕಾರಣ **ತತ್ ತ್ವಂ ಅಸಿ** ಎಂದು ಪದವನ್ನು ವಿಂಗಡಿಸಿ ಅಭೇದವನ್ನೂ ಹೇಳುತ್ತದೆಂದು ಕೂಡಲಾರದೆನ್ನುತ್ತಾರೆ—

ಭಾ. || (೧) **ನಚಾಭೇದೇ ಕಶ್ಚಿದ್ದೃಷ್ಟಾಂತ ಉಕ್ತಃ । ನ ಹಿ ಶಕುನಿಸೂತ್ರಯೋರ್ನಾನಾವೃಕ್ಷರಸಾನಾಂ ನದೀಸಮುದ್ರಯೋರ್ವೃಕ್ಷಪರಮಾ(ಪರಾ)ತ್ಮನೋರ್ಧಾನಾಪರಮಾ(ಪರಾ)ತ್ಮನೋರ್ಲವಣೋದಕಯೋಃ ಪುರುಷಗಂಧಾರಯೋರ್ನಿಯತಜ್ಞಾನಾನಿಯತಜ್ಞಾನಯೋಶ್ಚೋರಾಪಹ್ರಿಯಮಾಣಯೋಶ್ಚಾಭೇದೋಽಸ್ತಿ । (೨) ಮಹಾತಾತ್ಪರ್ಯವಿರೋಧಶ್ಚಾಭೇದೇ । ವಿಷ್ಣೋಃ ಪರಮೋತ್ಕರ್ಷೇ ಹಿ ಸರ್ವಪ್ರಮಾಣಾನಾಂ ಮಹಾತಾತ್ಪರ್ಯಂ ಭಗವತಾಽಭಿಹಿತಂ । (೩) ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ**

**ಚ । ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ । (೪) ಉತ್ತಮಃ ಪುರುಷ-ಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈ-ಶ್ವರಃ । ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ । (೫) ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ । ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ । ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ । ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾ-ತ್ಕೃತಕೃತ್ಯಶ್ಚ ಭಾರತ ಇತಿ ॥ ॥ ೪ ॥**

**ಅ** ॥ (೧) ಅಭೇದವಿಷಯದಲ್ಲಿ ಯಾವುದೊಂದು ದೃಷ್ಟಾಂತವನ್ನೂ ಹೇಳಲಿಲ್ಲ. ಹೇಗೆಂದರೆ-ಹಗ್ಗ ಹಕ್ಕಿಗಳಿಗೆ ನಾನಾವೃಕ್ಷ, ರಸಗಳಿಗೆ, ಗಂಗಾದಿನದಿ ಸಮುದ್ರಗಳಿಗೆ ವೃಕ್ಷಪರಮಾತ್ಮರಿಗೆ, ಬೀಜ ಪರಮಾತ್ಮರಿಗೆ, ಉಪ್ಪು ನೀರುಗಳಿಗೆ, ಧನಿಕ ಗಂಧಾರದೇಶಗಳಿಗೆ, ಪರಾಧೀನ ಜ್ಞಾನವುಳ್ಳಜೀವ ಸ್ವತಂತ್ರ ಜ್ಞಾನವುಳ್ಳಈಶ್ವರ, ಇವರಿಗೆ ಕಳ್ಳಕದ್ದವಸ್ತು ಇವುಗಳಿಗೆ ಅಭೇದವು ಇಲ್ಲವಷ್ಟೆ. (ಈ ಒಂಭತ್ತು ದೃಷ್ಟಾಂತಗಳಲ್ಲಿಯೂ ಅಭೇದವನ್ನು ಹೇಳಲೇ ಇಲ್ಲ.) (೨) (ಸ್ವಮಪೀತಃ ಎಂಬುವಲ್ಲಿ ಜೀವೇಶಾಭೇದವನ್ನು ಹೇಳುವುವದೆಂದು ಇಟ್ಟುಕೊಂಡರೆ ಇನ್ನೊಂದು ದೋಷ ಹೇಳುತ್ತಾರೆ.—) ಐಕ್ಯವೆಂದು ಹೇಳಿದರೆ ಮಹಾತಾತ್ಪರ್ಯಕ್ಕೆ ವಿರೋಧವು ಬರುತ್ತದೆ. (ಹೇಗೆಂದರೆ) ಶ್ರೀವಿಷ್ಣುವು ಸರ್ವೋತ್ಕೃಷ್ಟನು ಎಂಬುವಲ್ಲಿಯೇ ಪ್ರತ್ಯಕ್ಷ ಮೊದಲಾದ ಎಲ್ಲಾ ಪ್ರಮಾಣಗಳಿಗೂ ಮುಖ್ಯ ತಾತ್ಪರ್ಯವೆಂದು ಶ್ರೀವೇದವ್ಯಾಸರಿಂದಲೂ ಶ್ರೀಕೃಷ್ಣನಿಂದಲೂ ಹೇಳಲ್ಪಟ್ಟದೆ (ಐಕ್ಯವೆಂದಾದರೆ ಸರ್ವೋತ್ಕೃಷ್ಟನೆಂಬುವುದು ಆಗಲಾರದು) (೩) (ಎಲ್ಲಿ ಹೇಳಿದೆ ಎಂದರೆ ಆ ಗೀತಾವಾಕ್ಯಗಳನ್ನು ಹೇಳುತ್ತಾರೆ) ನಿಯಮ್ಯ ವರ್ಗದಲ್ಲಿ ಕ್ಷರ ಅಕ್ಷರ ಎಂದು ಇಬ್ಬರು ಪುರುಷರು. ಚತುರ್ಮುಖನೇ ಮೊದಲಾದ ಎಲ್ಲಾ ಪ್ರಾಣಿಗಳು ಶರೀರನಾಶವುಳ್ಳವರಾದುದರಿಂದ ಕ್ಷರರೆನ್ನಿಸುತ್ತಾರೆ. ನಿರ್ವಿಕಾರಳಾದ ಲಕ್ಷ್ಮೀದೇವಿಯು ನಾಶವಿಲ್ಲದ ಶರೀರವಿರುವವಳಾದುದರಿಂದ ಅಕ್ಷರಳೆನಿಸುತ್ತಾನೆ. (ಗೀ. ಅ. ೧೫ ಶ್ಲೋ. ೧೬) (೪) ಇವರಿಬ್ಬರಿಂದಲೂ ಭಿನ್ನನಾದ ಉತ್ತಮನಾದ ಪುರುಷನು ಪರಮಾತ್ಮನೆನಿಸುತ್ತಾನೆ. ನಾಶವಿಲ್ಲದ ಶ್ರೀಹರಿಯು **ಭೂಃ ಭುವಃ ಸ್ವಃ** ಎಂಬ ಮೂರು ಲೋಕಗಳನ್ನು ಪ್ರವೇಶಿಸಿ ಧರಿಸುತ್ತಿರುತ್ತಾನೆ. ನಾನು ಕ್ಷರ ಅಕ್ಷರರನ್ನು ಮೀರಿದವನಾದುದರಿಂದ ಉತ್ತಮನು. ಆದ ಕಾರಣ ಪೌರುಷೇಯ ಗ್ರಂಥಗಳಲ್ಲಿಯೂ ಅಪೌರುಷೇಯ ಗ್ರಂಥಗಳಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನು (ಅ. ೧೫ ಶ್ಲೋ. ೧೭ ೧೮) (೫) ನಾನು ಸರ್ವೋತ್ತಮನೆಂಬುದು ಸುಳ್ಳು ಎಂಬ ಅಜ್ಞಾನವಿಲ್ಲದವನಾಗಿ ನನ್ನನ್ನು ಪುರುಷೋತ್ತಮನನ್ನಾಗಿ ತಿಳಿಯುವವನು ಸರ್ವಶಾಸ್ತ್ರಾರ್ಥಗಳನ್ನು ತಿಳಿದವನಾಗಿ ಸರ್ವಪ್ರಕಾರದಿಂದಲೂ ನನ್ನನ್ನು ಹೊಂದುತ್ತಾನೆ. (ಇದನ್ನು ಯೋಗ್ಯರಿಗೇನೇ ಹೇಳಬೇಕು. ಅಯೋಗ್ಯರಿಗೆ ಹೇಳಬಾರದು–ಏಕೆಂದರೆ, ನಿರ್ದೋಷಿಯಾದ ಅರ್ಜುನನೇ ಸರ್ವಾಂತರ್ಯಾಮಿತ್ವಾದಿಗಳು ಉಪದೇಶಕ್ಕೆ ಯೋಗ್ಯಗಳು ಅತಿಗೋಪ್ಯಗಳು. ಅವನ್ನು ನಿನಗೆ ಹೇಳಿದೆನು. ಇದನ್ನು ತಿಳಿದು ಅಪರೋಕ್ಷಜ್ಞಾನಿಯಾಗುವನು, ಮುಕ್ತನೂ ಆಗುವನು, ಎಂದು ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಅರ್ಜುನನಿಗೆ ಉಪದೇಶಿಸಿರುವನು.)(ಗೀ. ಅ ೧೫ ಶ್ಲೋ. ೧೯ ೨೦) ಇಲ್ಲಿ ಶ್ರೀಕೃಷ್ಣನು ಕ್ಷರ ಅಕ್ಷರರಿಂದುತ್ತಮನೆಂಬುವಲ್ಲಿ ಪೌರುಷೇಯ ಅಪೌರುಷೇಯಾಗಮಗಳಿಗೆ ಮಹಾತಾತ್ಪರ್ಯವಿದೆ, ಎಂದು ಇಲ್ಲಿ ಮೋಕ್ಷಮೊದಲಾದ ಫಲಹೇಳಿರುವುದರಿಂದ ತಿಳಿಯುತ್ತದೆ. ॥ ೪ ॥

**ಪೀ**— ಯಾರ ಜ್ಞಾನದಿಂದ ಮೋಕ್ಷವಾಗುತ್ತದೋ. ಅವನಲ್ಲಿಯೇ ಸಮಸ್ತ ಆಗಮಗಳಿಗೆ ಮಹಾತಾತ್ಪರ್ಯವನ್ನು ಹೇಳಬೇಕು. ಮೋಕ್ಷವು ಸರ್ವಲೋಕಗಳಿಗೂ ಮುಖ್ಯಸ್ವಾಮಿಯಾದ ಶ್ರೀಕೃಷ್ಣನ

ಜ್ಞಾನದಿಂದಲೇ ಆಗುತ್ತದೆ. ಅದುಕಾರಣ ಶ್ರೀಹರಿಯಲ್ಲಿಯೇ ಎಲ್ಲಾ ಆಗಮಗಳಿಗೂ ಮುಖ್ಯತಾತ್ಪರ್ಯ ವೆಂಬ ಅಭಿಪ್ರಾಯದಿಂದ ಹೇಳುತ್ತಾರೆ –

**ಭಾ. ॥ (೧) ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಂ । ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ । (೨) ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ । ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ । (೩) ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ । ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ । (೪) ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಂ । ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಂ । (೫) ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ । ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ । (೬) ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ । ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ । (೭) ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ । (೮) ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ । ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ । (೯) ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ । ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ । (೧೦) ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ । ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ । (೧೧) ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ । ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ॥ ೫ ॥**

ಅ ॥ (೧) ಜ್ಯೋತಿಷ್ಟೋಮಾದಿಯಾಗ, ಕೃಚ್ಛ್ರಚಾಂದ್ರಾಯಣಾದಿ ತಪಸ್ಸು ಇವುಗಳ ಸಾರ ಭೋಕ್ತನು, ಮತ್ತು ಅವುಗಳನ್ನು ಕಾಪಾಡುವವನು (ಅವುಗಳನ್ನು ಮಾಡಿದವರಿಗೆ ಫಲವನ್ನು ಕೊಡುವವನು.) ಸಮಸ್ತ ಲೋಕಗಳಿಗೆ ನಿಯಾಮಕರಾದ ಬ್ರಹ್ಮಾದಿಗಳಿಗೆ ನಿಯಾಮಕನು, ಸಮಸ್ತ ಪ್ರಾಣಿಗಳಿಗೆ ಉಪಕಾರ ಮಾಡುವವನು, ಮೋಕ್ಷಕ್ಕೆ ಕಾರಣನು ಇಂತಹ ನನ್ನನ್ನು ಧ್ಯಾನಿಸಿ ಅಧಿಕಾರಿಯು ಪ್ರತ್ಯಕ್ಷೀಕರಿಸಿ ಮೋಕ್ಷ ಹೊಂದುತ್ತಾನೆ (ಗೀ. ಅ ೫ ಶ್ಲೋ. ೨೯) (೨) (ಮತ್ತು **ಜ್ಞಾನಂ ತೇಽಹಂ** ಎಂದು ಮೊದಲು ಹೇಳಿ **ಯಜ್ಜ್ಞಾತ್ವಾ ನೇಹ** ಯಾವನನ್ನು ತಿಳಿದರೆ ವೇದಾದಿಗಳಲ್ಲಿ ತಿಳಿಯುವ ಅಂಶವು ಬೇರೆ ಉಳಿಯುವುದಿಲ್ಲ, ಎಂದು ಹೊಗಳಿ **ಮತ್ತಃ ಪರತರಂ ನಾನ್ಯತ್** ನನ್ನಿಂದ ಶ್ರೇಷ್ಠವಾದುದು ಇನ್ನೊಂದು ಇಲ್ಲ, ಎಂದೂ. **ಮಯಿ ಸರ್ವಂ** ಎಲ್ಲಾ ಜಗತ್ತು ನನ್ನ ಅಧೀನದಲ್ಲಿದೆ. ಎಂದು ಹೇಳಿದುದರಿಂದ ಶ್ರೀಹರಿಯೇ ಸರ್ವೋತ್ತಮನೆಂದು ಹೇಳಿದುದರಿಂದಲೂ ಅದರಲ್ಲಿಯೇ ಎಲ್ಲಾ ಆಗಮಗಳಿಗೂ ಮಹಾತಾತ್ಪರ್ಯವೆಂಬ ಅಭಿಪ್ರಾಯದಿಂದ ಹೇಳುತ್ತಾರೆ—) ಎಲೋ ಅರ್ಜುನನೇ, ನನ್ನ ಸಾಮಾನ್ಯ ಮಹಿಮೆಯನ್ನೂ ವಿಶೇಷ ಮಹಿಮೆಯನ್ನೂ ಸಂಪೂರ್ಣ (ಅರ್ಜುನನಿಗೆ ಯೋಗ್ಯವಾದುದೆಲ್ಲವನ್ನೂ) ಹೇಳುವೆನು. ಯಾವ ಮಹಿಮೆಯನ್ನು ತಿಳಿದರೆ ಬೇರೆ ತಿಳಿಯುವ ಅಂಶವು ಉಳಿಯುವುದಿಲ್ಲ. (ಅ. ೭ ಶ್ಲೋ ೨) (೩) ನಾನೇ ಸರ್ವೋತ್ಕೃಷ್ಟನು ನನ್ನಿಂದ ಬೇರೆ ಯಾವುದೊಂದೂ ಸರ್ವೋತ್ಕೃಷ್ಟವಾದುದು ಇಲ್ಲ. ಸೂತ್ರ (ಹಗ್ಗ) ದಲ್ಲಿ ಮಣಿಗಳ ಸಮೂಹಗಳು ಪೋಣಿಸಲ್ಪಟ್ಟಂತೆಯೇ ಸಂಪೂರ್ಣ ಜಗತ್ತು ನನ್ನಲ್ಲಿ ಆಶ್ರಿತವಾಗಿದೆ. (ಅ. ೭ ಶ್ಲೋ. ೭) (೪) (ಶ್ರೀಹರಿಯು ಸರ್ವೋತ್ತಮನೆಂಬು

ವಲ್ಲಿಯೇ ಎಲ್ಲಾ ಆಗಮಗಳಿಗೂ ಮಹಾತಾತ್ಪರ್ಯವೆಂಬುವಲ್ಲಿ ಇನ್ನೊಂದು ಪ್ರಮಾಣ ಹೇಳುತ್ತಾರೆ—( ಈ ಮುಂದಿನ ಪ್ರಮೇಯವು ವಿದ್ಯೆಗಳಲ್ಲಿ ಪ್ರಧಾನ ವಿದ್ಯೆಯು. ಗೋಪ್ಯಗಳಲ್ಲಿ ಮುಖ್ಯ ಗೋಪ್ಯವು, ಪಾವಿತ್ರ್ಯಕ್ಕೆ ಕಾರಣವು, ಅತ್ಯುತ್ತಮವಾದುದು, ಸರ್ವೇಂದ್ರಿಯಗಳಿಗೆ ಪ್ರೇರಕನಾದ ಶ್ರೀಹರಿಯ ಅಪರೋಕ್ಷಜ್ಞಾನಕ್ಕೆ ಸಾಧನವಾದುದು ಇಂತಹುದು. ಸರ್ವ ಜಗತ್ತನ್ನು ಧರಿಸತಕ್ಕ ಶ್ರೀಹರಿಯ ಪರೋಕ್ಷಜ್ಞಾನವು ಸುಲಭದಿಂದ ತಿಳಿಯಲಿಕ್ಕೆ ಸಾಧ್ಯವು. (ಅ. ೯ ಶ್ಲೋ. ೨) (೫) (ಇಂತಹ ಪರೋಕ್ಷಜ್ಞಾನವು ಸುಲಭಸಾಧ್ಯವಾದರೆ ಯಾವನೂ ಸಂಸಾರಿಯಾಗಲ ರನು, ಎಂದರೆ—ಅಥವಾ ಈ ವಿದ್ಯೆಯಲ್ಲಿ ಆಸಕ್ತಿಯಿಲ್ಲದವರನ್ನು ನಿಂದಿಸಿಯದೆ ಎನ್ನುತ್ತಾರೆ—) ಎಲೋ ಅರ್ಜುನನೇ, ಭಗವದ್ವಿಷಯಕವಾದ ಈ ಜ್ಞಾನದಲ್ಲಿ ಶ್ರದ್ಧೆಯಿಲ್ಲದ ಪುರುಷರು ನನ್ನನ್ನು ಹೊಂದದೆ ಜನನ ಮರಣಾದಿ ರೂಪವಾದ ಸಂಸಾರದಲ್ಲಿ ತಿರುಗಾಡಿಕೊಂಡು ಇರುತ್ತಾರೆ. (ತೇಲಿಕೊಂಡು ಇರುತ್ತಾರೆ.) (ಶ್ಲೋ ೩) (೬) ಸರ್ವರಿಗೆ ಪ್ರಕಟವಾಗದಿರುವ ಶರೀರವುಳ್ಳ ನಾನು ಸಂಪೂರ್ಣ ಜಗತ್ತನ್ನು ವ್ಯಾಪಿಸಿಕೊಂಡಿದ್ದೇನೆ. ಎಲ್ಲಾ ಪ್ರಾಣಿಗಳೂ ನನ್ನ ಅಧೀನದಲ್ಲಿರುವವುಗಳು ನಾನು ಅವುಗಳ ಅಧೀನದಲ್ಲಿಲ್ಲ. (ಅ. ೯ ಶ್ಲೋ. ೪) (೭) ಸಮಸ್ತ ಪ್ರಾಣಿಗಳು ನನ್ನ ಅಧೀನದಲ್ಲಿದ್ದರೂ ಪೃಥಿವಿಯಲ್ಲಿ ವಸ್ತುಗಳು ಇದ್ದಂತೆ ನನ್ನಲ್ಲಿ ಇರುವವುಗಳು ಅಲ್ಲ. ನನ್ನ ಪ್ರಭಾವ (ಸಾಮರ್ಥ್ಯ) ವನ್ನು ನೋಡು. (ಶ್ಲೋ. ೫) (೮) (ಹಾಗಾದರೆ ಕೆಲವರು ಹೇಗೆ ನಿನ್ನನ್ನು ತಿರಸ್ಕರಿಸುವರು ಎಂದರೆ—) ತಾಮಸರು ಸರ್ವದಾ ಇರತಕ್ಕ ಸರ್ವತ್ರ ವ್ಯಾಪ್ತವಾದ ಅನಂತ ಗುಣಗಳಿರುವ ಉತ್ತಮವಾದ ನನ್ನ ತತ್ತ್ವವನ್ನು ತಿಳಿಯದೆ ಮೂಢರಿಗೆ ಮನುಷ್ಯರಂತೆ ತೋರುವ ನನ್ನನ್ನು ಅವಮಾನಿಸುತ್ತಾರೆ. (ಶ್ಲೋ. ೧೧) (೯) ವ್ಯರ್ಥವಾದ ಆಶೆಯುಳ್ಳವರು (ಭಗವದ್ವೇಷಿಗಳು ಆಮುಷ್ಮಿಕವಾದುದನ್ನು ಯಾವುದನ್ನೂ ಹೊಂದುವುದಿಲ್ಲ) ವ್ಯರ್ಥವಾದ ಯಾಗಾದಿ ಕರ್ಮಗಳುಳ್ಳವರು, ವ್ಯರ್ಥವಾದ ತತ್ವಜ್ಞಾನವುಳ್ಳವರು (ಅಂದರೆ-ಬ್ರಹ್ಮ ರುದ್ರಾದಿಗಳಲ್ಲಿ ಭಕ್ತ್ಯಾದಿಗಳನ್ನು ಮಾಡಿ ಆಮುಷ್ಮಿಕವಾದ ಯಾವುದೊಂದೂ ಪುರುಷಾರ್ಥವನ್ನು ಹೊಂದುವುದಿಲ್ಲ.) ವಿರುದ್ಧ ಮನಸ್ಸುಳ್ಳವರು ಇಂತಹವರು ಬುದ್ಧಿಯನ್ನು ಕೆಡಿಸುವ ರಾಕ್ಷಸರ ಮತ್ತು ಅಸುರರ ಸ್ವಭಾವವನ್ನು ಹೊಂದಿರುವುದರಿಂದ ನನ್ನನ್ನು ಅವಮಾನಿಸುತ್ತಾರೆ.)(ಶ್ಲೋ.೧೨)(೧೦) ಎಲೋ ಅರ್ಜುನನೇ, ಮಹಾನುಭಾವರಾದವರು ಮುಕ್ತಿಯೋಗ್ಯರಾದ ಉತ್ತಮ ಜೀವರ ಸಂಬಂಧಿಯಾದ ಸ್ವಭಾವವನ್ನಾಶ್ರಯಿಸಿ ಸರ್ವರಿಗೂ ಕಾರಣನೂ ನಾಶವಿಲ್ಲದವನೂ ಆದ ನನ್ನನ್ನು ತಿಳಿದು ಬೇರೆ ಕಡೆ ಮನಸ್ಸನ್ನು ಇಡದೆ ಸೇವಿಸುತ್ತಾರೆ. (ಶ್ಲೋ ೧೩) (೧೧) ಹೀಗೆ ಶ್ರೀಹರಿಯು ಸರ್ವೋತ್ತಮನು ಎಂಬ ಜ್ಞಾನವೇ ಮೋಕ್ಷಕ್ಕೆ ಸಾಧನವೆಂದು ಹೇಳಿದುದರಿಂದ ಎಲ್ಲಾ ಆಗಮಗಳಿಗೂ ಅದರಲ್ಲಿಯೇ ತಾತ್ಪರ್ಯವೆಂದು ತಿಳಿಯಬೇಕೆನ್ನುತ್ತಾರೆ--) ಯಾವನು ನನ್ನನ್ನು ಉತ್ಪತ್ತಿಯಿಲ್ಲದವನೆಂದೂ ಸರ್ವರಿಗೆ ಚೇಷ್ಟಕನೆಂದೂ ಸರ್ವರಿಗೆ ಕಾರಣನೆಂದೂ, ಅಥವಾ ಮುಖ್ಯಪ್ರಾಣನಿಗೆ ಕಾರಣನೆಂದೂ ಸರ್ವರಿಗೂ ನಿಯಾಮಕನೆಂದೂ ತಿಳಿಯುತ್ತಾನೋ ಆತನು ಭ್ರಾಂತಿಯಿಲ್ಲದವನಾಗಿ ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. || ೫ ||

**ಪೀ—ಜ್ಞಾನಾನಾಮುತ್ತಮಂ ಜ್ಞಾನಂ ಪ್ರವಕ್ಷ್ಯಾಮಿ** ಎಂದು ಪ್ರತಿಜ್ಞೆ ಮಾಡಿಕೊಂಡು **ಯಜ್ಞಾತ್ವಾ** ಎಂದು ವೇದಾರ್ಥವನ್ನು ವಿಚಾರಮಾಡುವವರಿಗೆ ಈತನ ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಪ್ರಶಂಸೆಮಾಡಿ **ಮಮ ಯೋನಿಃ** ಲಕ್ಷ್ಮೀದೇವಿಗೆ ಗಂಡನು ಎಂದು ಸರ್ವೋತ್ಕರ್ಷವನ್ನು ಹೇಳಿದುದರಿಂದ ಆ ಶ್ರೀಹರಿಯಲ್ಲಿಯೇ ಎಲ್ಲಾ ಆಗಮಗಳಿಗೂ ಮುಖ್ಯ ತಾತ್ಪರ್ಯವೆಂದು ತಿಳಿಯುತ್ತದೆ ಎನ್ನುತ್ತಾರೆ—

**ಭಾ. || (೧) ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ । ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ । (೨) ಮಮ ಯೋನಿ-**

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ । ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ ॥ ೬ ॥**

ಅ ॥ (೧) ಯಾವುದನ್ನು ತಿಳಿದು ಧ್ಯಾನಾದಿಗಳನ್ನು ಮಾಡುವವರೆಲ್ಲರೂ ಸಂಸಾರದಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಹೊಂದುತ್ತಾರೋ, ಅಂತಹ ತಿಳಿಯಲರ್ಹಗಳಾದ ವಸ್ತುಗಳ ಮಧ್ಯದಲ್ಲಿ ಉತ್ತಮವಾದ ತಿಳಿಯಬೇಕಾದುದನ್ನು ಮರಳಿ ಹೇಳುವೆನು (ಗೀ. ಅ. ೧೪ ಶ್ಲೋ. ೧) (೨) ಶ್ರೇಷ್ಠಳಾದ ಲಕ್ಷ್ಮೀದೇವಿಯು ನನ್ನ ಪತ್ನಿಯು. ಅವಳಲ್ಲಿ ಗರ್ಭಧಾರಣೆ ಮಾಡುತ್ತೇನೆ. (ಅಂದರೆ ತನ್ನ ಹೊಟ್ಟೆಯೊಳಗೆ ಇದ್ದ ಇಪ್ಪತ್ತನಾಲ್ಕು ತತ್ವಗಳ ಅಂಶಗಳಿಂದ ಕೂಡಿದ ಜೀವರನ್ನು ರೇತೋರೂಪದಿಂದ ಹೊರಪಡಿಸಿ ಲಕ್ಷ್ಮೀದೇವಿಯ ಹೊಟ್ಟೆಯಲ್ಲಿಡುತ್ತೇನೆ.) ಅದರಿಂದ ಸಮಸ್ತ ಪ್ರಾಣಿಗಳಿಗೆ ದೇಹಸಂಯೋಗರೂಪವಾದ ಉತ್ಪತ್ತಿಯಾಗುತ್ತದೆ. (ಶ್ಲೋ. ೩) ॥ ೬ ॥

ಪೀ—ಹೀಗೆ ಗೀತಾವಚನಗಳಿಂದ ಶ್ರೀಹರಿಯು ಸರ್ವೋತ್ಕೃಷ್ಟನು ಎಂಬುವಲ್ಲಿಯೇ ಎಲ್ಲಾ ಆಗಮಗಳಿಗೂ ಮಹಾತಾತ್ಪರ್ಯವೆಂದು ತಿಳಿಯುತ್ತದೆಂದರು. ಆ ವಿಷಯದಲ್ಲಿಯೇ ಸ್ಪಷ್ಟವಾದ ಬೇರೆ ಪ್ರಮಾಣವನ್ನು ಹೇಳುತ್ತಾರೆ—

**ಭಾ. ॥ (೧) ಯೇ ಮಾಂ ಜ್ಞಾತ್ವಾ ಗುಣೈಃ ಪೂರ್ಣಂ ನ ಚಲಂತಿ ತತಃ ಕ್ವಚಿತ್ । ತೈರೇವಾಪ್ಯೋ ನ ಚೈವಾನ್ಯೈರಹಂ ಸರ್ವೇಶ್ವರೇಶ್ವರಃ । (೨) ಯೇ ತು ಮದ್ಗುಣಸಂಪೂರ್ತೌ ಜ್ಞಾನಸ್ನೇಹಸ್ಥಿರಾತ್ಮಕಾಃ । ತೇಷಾಂ ಹಸ್ತಗತೋ ಮೋಕ್ಷೋ ಮಾಮೇವ ಸ್ಮರತಾಂ ಸದಾ । (೩) ಯೇ ಮನ್ಯಂತೇ ಗುಣಾಪೂರ್ತಿಂ ತಮಸ್ತೇಷಾಂ ಪರಾಯಣಂ । ನ ಚ ತೇಭ್ಯೋ ಪ್ರಿಯೋ ಮಹ್ಯಂ ಯಶ್ಚ ಸ್ಯಾದ್ಗುಣಪೂರ್ತಿವಿತ್ । ಸ ಮಾಮಾಪ್ನೋತಿ ನಿಯತಂ ನ ಚ ತಸ್ಮಾತ್ಪ್ರಿಯೋ ಮಮ । (೪) ಪ್ರಮಾಣಾನ್ಯಖಿಲಾನ್ಯೇವ ತರ್ಕಾಶ್ಚೈತತ್ಪರಾಃ ಸದಾ । ಏತದ್ವಿರುದ್ಧಂ ಯನ್ಮಾನಂ ತರ್ಕಶ್ಚಾಭಾಸ ಏವ ತು ಇತ್ಯಾದೌ ॥ ೭ ॥**

ಅ ॥ (೧) ಯಾರು ನನ್ನನ್ನು ಸರ್ವಗುಣಪರಿಪೂರ್ಣನನ್ನಾಗಿ ತಿಳಿದು ಯಾವಾಗಲೂ ಅದರಲ್ಲಿಯೇ ಆಸಕ್ತರಾಗುತ್ತಾರೋ, ಅಂತಹವರಿಂದಲೇ ಸರ್ವರಿಗೆ ನಿಯಾಮಕರಾದ ಬ್ರಹ್ಮಾದಿಗಳಿಗೂ ಸ್ವಾಮಿಯಾದ ನಾನು ಹೊಂದಲ್ಪಡುವೆನು ಬೇರೆಯವರಿಂದ ಹೊಂದಲ್ಪಡಲಾರೆನು. (೨) (ಸ್ಥಿರವಾದ ಜ್ಞಾನವು ಮಾತ್ರ ಮೋಕ್ಷಕ್ಕೆ ಕಾರಣವಲ್ಲ. ಪರಂತು ಸ್ಥಿರವಾದ ಭಕ್ತಿಯೂ ಮೋಕ್ಷಕ್ಕೆ ಕಾರಣವು ಎನ್ನುತ್ತಾರೆ—) ಯಾರು ನನಗೆ ಗುಣಗಳು ಪೂರ್ಣಗಳಾಗಿವೆ ಎಂಬುವಲ್ಲಿ ಸ್ಥಿರವಾದ ನಿರಂತರ ಜ್ಞಾನ, ಭಕ್ತಿಯುಳ್ಳವರೋ, ಅಂತಹ ಸದಾ ನನ್ನನ್ನೇ ಸ್ಮರಿಸುತ್ತಿರುವವರಿಗೆ ಮೋಕ್ಷವು ಸುಲಭಸಾಧ್ಯವು. (ವಿಪರೀತ ಜ್ಞಾನಿಗಳಿಗೆ ಅನರ್ಥ ಹೇಳುತ್ತಾರೆ.) ಯಾರು ಗುಣಗಳು ಅಪೂರ್ಣಗಳೆಂದು ತಿಳಿಯುತ್ತಾರೋ, ಅವರಿಗೆ ಅಂಧಂತಮಸ್ಸು ದೊರಕುವುದು. ಅವರಿಗಿಂತ ನನಗೆ ಅಪ್ರಿಯರಾದವರು ಯಾರೂ ಇಲ್ಲ. ಶ್ರೀಹರಿಗೆ ಗುಣಗಳು ಪೂರ್ಣಗಳಿವೆ, ಎಂದು ತಿಳಿದವರು ನಿಯಮವಾಗಿ ನನ್ನನ್ನು ಹೊಂದುತ್ತಾರೆ. ಅದುಕಾರಣ ಪೂರ್ಣಗುಣಗಳಿವೆ ಎಂದು ತಿಳಿದವರಕ್ಕಿಂತ ಇನ್ನೊಬ್ಬನು ನನಗೆ ಪ್ರಿಯನಾದವನು ಇಲ್ಲ (೪) ಹಿಂದೆ ಹೇಳಿದ ಪ್ರಕಾರ ಶ್ರೀಹರಿಯು ಸರ್ವಗುಣಗಳಿಂದ ಪರಿಪೂರ್ಣನು ಎಂಬ ಜ್ಞಾನವೇ ಶ್ರೀಹರಿಗೆ ಪ್ರೀತಿಯನ್ನು ಹುಟ್ಟಿಸಿ ಮೋಕ್ಷಕ್ಕೆ ಕಾರಣವು. ಅದುಕಾರಣ ಮೋಕ್ಷವೆಂಬ ಪ್ರಯೋಜನವನ್ನು ಹುಟ್ಟಿಸುವ ಪ್ರತ್ಯಕ್ಷ ಅನುಮಾನ ಆಗಮ ಪ್ರಮಾಣಗಳೂ ದೂಷಣಾನುಮಾನಗಳೂ ಎಲ್ಲವೂ ಸದಾ ಗುಣಪರಿಪೂರ್ಣನೆಂಬ ಜ್ಞಾನವನ್ನು ಹುಟ್ಟಿಸುವುದಕ್ಕಾಗಿಯೇ ಪ್ರವೃತ್ತಗಳಾಗಿವೆ. (**ನ ತಾದೃಶೀ ಪ್ರೀತಿರೀಶಸ್ಯ ವಿಷ್ಣೋಃ**

ಇದುಮೊದಲಾದ ವೇದಪ್ರಮಾಣವು ಈ ವಿಷಯದಲ್ಲಿದೆ) ಇದಕ್ಕೆ ವಿರುದ್ಧವಾದ ಪ್ರಮಾಣಗಳಿಲ್ಲವೂ ತರ್ಕವೂ ದುಷ್ಟವೆಂದು ಸಿದ್ಧವಾಯಿತು. ಎಂದು ಇದುಮೊದಲಾದ ಸ್ಥಳದಲ್ಲಿ ಹೇಳಲ್ಪಟ್ಟಿದೆ. ॥ ೭ ॥

ಪೀ—ಶ್ರೀಹರಿಯು ಸರ್ವೋತ್ತಮನು ಎಂಬ ಜ್ಞಾನದಿಂದಲೇ ಮೋಕ್ಷವೆಂದು ಹೇಳುವ ವೇದವೂ ವಿಷ್ಣುಸರ್ವೋತ್ತಮತ್ವದಲ್ಲಿಯೇ ಎಲ್ಲಾ ಆಗಮಗಳಿಗೂ ಮುಖ್ಯತಾತ್ಪರ್ಯವೆಂದು ತಿಳಿಸುತ್ತದೆ, ಎನ್ನುತ್ತಾರೆ—

**ಭಾ. ॥ (೧) ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ತೇ ಬಭೂವುಸ್ತಸ್ಮಾದ್ಧಾಪ್ಯೇತರ್ಹಿ ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತ್ಯಭೂತಿರಿತ್ಯಸುರಾಸ್ತೇ ಹ ಪರಾಬಭೂವುಃ । (೨) ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯೋ ನೈವಾಭೂಮಾ ಫಲಮೇಷಾಂ ವಿಧತ್ತೇ । ತಸ್ಮಾದ್ಭೂಮಾ ಗುಣತೋ ವೈ ವಿಶಿಷ್ಟೋ ಯಥಾ ಕ್ರತುಃ ಕರ್ಮಮಧ್ಯೇ ವಿಶಿಷ್ಟಃ । (೩) ಅಸುನ್ವಂತಂ ಸಮಂ ಜಹಿ ದೂಣಾಶಂ ಯೋ ನ ತೇ ಮಯಃ । ಅಸ್ಮಭ್ಯಮಸ್ಯ ವೇದನಂ ದದ್ಧಿ ಸೂರಿಶ್ಚಿದೋಹತೇ । (೪) ಸತ್ಯಃ ಸೋ ಅಸ್ಯ ಮಹಿಮಾ ಗೃಣೇಶವೋ ಯಜ್ಞೇಷು ವಿಪ್ರರಾಜ್ಯೇ । (೫) ಏತಾವಾನಸ್ಯ ಮಹಿಮಾ ಅತೋ ಜ್ಯಾಯಾಂಶ್ಚ ಪೂರುಷಃ । (೬) ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ । (೭) ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ । ಬಂಧಮೋಕ್ಷೌ ಚ ಕಥ್ಯಂತೇ ಯಸ್ಮೋತ್ಕರ್ಷಪ್ರಸಿದ್ಧಯೇ । (೮) ಯಸ್ಯೋತ್ಕರ್ಷಪ್ರಸಿದ್ಧ್ಯರ್ಥಂ ಸರ್ವೇ ವೇದಾಶ್ಚ ಯುಕ್ತಯಃ । ಜ್ಞಾತ್ವೈವ ಚ ಯದುತ್ಕರ್ಷಂ ಮುಚ್ಯಂತೇ ಸ ಹರಿಃ ಪರಃ । ಅಧ್ಯಾತಮಸ್ಯ ಮಹಿಮಾನಮಾಯವೋಽನುಷ್ಟುವಂತಿ ಪೂರ್ವಥಾ । ಇತ್ಯಾದಿ ಶ್ರುತಿಶ್ಚ ವಿಷ್ಣೋರುತ್ಕರ್ಷೇ ಮಹಾತಾತ್ಪರ್ಯಂ ಕಥಯತಿ ॥ ॥ ೮ ॥**

ಅ ॥ (೧) ದೇವತೆಗಳು ಶ್ರೀಹರಿಯು ಸರ್ವಗುಣಪರಿಪೂರ್ಣನು, ಜ್ಞಾನ ಐಶ್ವರ್ಯಾದಿ ಸ್ವರೂಪನು, ಐಶ್ವರ್ಯಾದಿಗಳನ್ನು ಕೊಡುವವನೆಂದು ಉಪಾಸನೆಮಾಡುವುದರಿಂದ ಸುಖಜ್ಞಾನಮೊದಲಾದ ಐಶ್ವರ್ಯಪರಿಪೂರ್ಣರಾದರು. ಅದುಕಾರಣ ಈಗಲೂ ನಿದ್ರಿತರಲ್ಲಿ ನಿಯಾಮಕರಾದ ಸರ್ವಜೀವೋತ್ತಮರಾದ ವಾಯುದೇವರು ಭೂರ್ ಭೂರು ಎಂದು ಶ್ವಾಸರೂಪದಿಂದ ಶ್ರೀಹರಿಯನ್ನೇ ಸ್ತೋತ್ರಮಾಡುತ್ತಿರುತ್ತಾರೆ ರಾಕ್ಷಸಾದಿಗಳು ನಮಗೆ ದುಃಖಮೊದಲಾದ ಅನರ್ಥಗಳನ್ನು ಕೊಡುವವನು, ಐಶ್ವರ್ಯ ಮೊದಲಾದ ಯಾವ ಗುಣಗಳೂ ಇಲ್ಲದವನು. ಎಂದು ಉಪಾಸನೆ ಮಾಡುತ್ತಾರೆ. ಅದುಕಾರಣ ಅವರು ಪರಾಜಯವನ್ನು ಹೊಂದಿದರು. (ಜ್ಞಾನಾದಿ ಗುಣಶೂನ್ಯರಾಗಿ ಅಂಧಂತಮಸ್ಸಿನಲ್ಲಿ ಬಿದ್ದರು) (೨) ಕರ್ಮಗಳ ಮಧ್ಯದಲ್ಲಿ ಕ್ರತು (ಯಾಗವಿಶೇಷ) ವು ಹೇಗೆ ಶ್ರೇಷ್ಠವೋ ಹಾಗೆಯೇ ಭೂಮ ಗುಣವು ಗುಣಗಳಸಮೂಹಕ್ಕಿಂತ ಶ್ರೇಷ್ಠವು. ಅದುಕಾರಣ ಶ್ರೀಹರಿಯು ಭೂಮ ಗುಣವುಳ್ಳವನೆಂದು ಉಪಾಸನೆ ಮಾಡಿದರೇನೇ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುತ್ತಾನೆ. ಅಭೂಮನೆಂದು ಉಪಾಸನೆ ಮಾಡಿದರೆ ಫಲವನ್ನು ಕೊಡುವುದಿಲ್ಲ. ಆದಕಾರಣ ಸರ್ವೋತ್ತಮನಾದ ಶ್ರೀಹರಿಯು ಭೂಮ ಗುಣವುಳ್ಳವನೆಂದೇ ಸರ್ವರೂ ಉಪಾಸನೆಮಾಡಬೇಕು.) (೩) ನಿನ್ನನ್ನು ದೂಷಿಸುವ, ಯಾಗ ಮೊದಲಾದ ತಂತಮಗೆ ವಿಹಿತಗಳಾದ ಕರ್ಮಗಳನ್ನು ಮಾಡದಿರುವ ಇಂತಹ ಹೆಚ್ಚು ದುಃಖವನ್ನು ಹೊಂದಲು ಯೋಗ್ಯರಾದವರನ್ನು ಅವರವರ ಯೋಗ್ಯತಾನುಸಾರ ಅಂಧಂತಮಸ್ಸಿನಲ್ಲಿ ಕೆಡಹು ನಿನ್ನ ಭೃತ್ಯರಾದ ಶಕ್ತ್ಯನುಸಾರ ಕರ್ಮಗಳನ್ನು ಮಾಡುವ ನಮಗೆ ಜ್ಞಾನೋಪದೇಶ ಮಾಡು ಏಕೆಂದರೆ ಜ್ಞಾನಿಯಾದವನೇ ಸಂಸಾರವನ್ನು

ದಾಟಿ ಮೋಕ್ಷವನ್ನು ಹೊಂದುತ್ತಾನೆ. (೪) ಶ್ರೀಹರಿಯ ಹಿಂದೆ ಹೇಳಿದ ಮಹಿಮೆಯು ಯಥಾರ್ಥವು. ಮೋಕ್ಷಸುಖಕ್ಕಾಗಿ ವಿಪ್ರರೇ ಪ್ರಧಾನರಾಗಿ ಉಳ್ಳ ಯಾಗಗಳಲ್ಲಿ ಆ ಶ್ರೀಹರಿಯನ್ನು ಸ್ತೋತ್ರಮಾಡುತ್ತೇನೆ. (೫) ಶ್ರೀಹರಿಗೆ ಹಿಂದೆ ಹೇಳಿದ ಮಹಿಮೆಯು ಮಾತ್ರವಲ್ಲ. ಪರಂತು ಆ ಶ್ರೀಹರಿಯು ಹಿಂದೆ ಹೇಳಿದ ಮಹಿಮೆಯಿಂದಲೂ ಹೆಚ್ಚು ಮಹಿಮೆಯುಳ್ಳವನು. (೬) ಆ ಶ್ರೀಹರಿಯನ್ನು ಹೀಗೆ ತಿಳಿದವನು ಮುಕ್ತನಾಗುತ್ತಾನೆ. ಮೋಕ್ಷಕ್ಕೆ ಜ್ಞಾನ ಹೊರತು ಬೇರೆ ಮಾರ್ಗವಿಲ್ಲ (ಹೀಗೆ ಜ್ಞಾನವು ಮೋಕ್ಷಕ್ಕೆ ಸಾಧನವೆಂದು ಉಕ್ತವಾಯಿತು) (೭) (ವೇದಗಳಲ್ಲಿ ಅಲ್ಲಲ್ಲಿ ಸೃಷ್ಟಿಮೊದಲಾದುದನ್ನು ಹೇಳಿದುದರಿಂದ ಎಲ್ಲಾ ಆಗಮಗಳಿಗೂ ವಿಷ್ಣುವು ಸರ್ವೋತ್ತಮನೆಂಬುವಲ್ಲಿಯೇ ತಾತ್ಪರ್ಯವೆಂಬುದು ಹೇಗೆ ಕೂಡುತ್ತದೆ. ಎಂದರೆ) ಸೃಷ್ಟಿ ರಕ್ಷಣೆ ಸಂಹಾರ ಪ್ರೇರಣೆ ಜ್ಞಾನ ಅಜ್ಞಾನ ಬಂಧ ಮೋಕ್ಷ ಇವುಗಳು ಶ್ರೀಹರಿಯು ಸರ್ವೋತ್ಕೃಷ್ಟನು ಎಂಬ ಪ್ರಸಿದ್ಧಿಯನ್ನು ತಿಳಿಸುವುದಕ್ಕಾಗಿ ವೇದಮೊದಲಾದವುಗಳಲ್ಲಿ ಹೇಳಲ್ಪಡುತ್ತವೆ. (೮) ಶ್ರೀಹರಿಯು ಸರ್ವೋತ್ಕೃಷ್ಟನು ಎಂದು ಪ್ರಸಿದ್ಧಿಯನ್ನು ತಿಳಿಸುವುದಕ್ಕಾಗಿ ಸಮಸ್ತವೇದಗಳೂ ಯುಕ್ತಿಗಳೂ ಪ್ರವೃತ್ತಗಳಾಗಿವೆ ಜ್ಞಾನಿಗಳು ಯಾವ ಶ್ರೀಹರಿಯು ಸರ್ವೋತ್ಕೃಷ್ಟನೆಂದು ತಿಳಿದೇ ಮುಕ್ತರಾಗುತ್ತಾರೋ. ಅಂತಹ ಶ್ರೀಹರಿಯು ಸರ್ವೋತ್ತಮನು, ಜ್ಞಾನವನ್ನು ಹುಟ್ಟಿಸುವ ವೇದಗಳಿಗೆ ಅಭಿಮಾನಿಗಳಾದ ದೇವತೆಗಳು ಪರಮೈಶ್ವರ್ಯಸಂಪನ್ನನಾದ ಶ್ರೀಹರಿಯ ಮಹಿಮೆಯನ್ನು ಮೊದಲಿನಂತೆಯೇ ಈಗಲೂ ತಮ್ಮ ಯೋಗ್ಯತಾನುಸಾರ ಸ್ತೋತ್ರಮಾಡುತ್ತಿರುತ್ತಾರೆ, ಇದುಮೊದಲಾದ ವೇದಗಳು ವಿಷ್ಣುವು ಸರ್ವೋತ್ತಮನೆಂಬುವಲ್ಲಿಯೇ ಮಹಾತಾತ್ಪರ್ಯವನ್ನು ಹೇಳುತ್ತವೆ || ೮ ||

ಹೀ—ವಿಷ್ಣುವು ಸರ್ವೋತ್ತಮನೆಂಬಲ್ಲಿಯೇ ಎಲ್ಲಾ ಆಗಮಗಳಿಗೂ ತಾತ್ಪರ್ಯವೆಂದಾದರೆ—ಕರ್ಮಾದಿಗಳೇ ಸಿದ್ಧಿಸದೆ ಹೋಗುವುವು ಎಂದರೆ—

**ಭಾ. || (೧) ಮಹಾತತ್ಪರತಾ ವಿಷ್ಣೋರುತ್ಕರ್ಷೇಽನಾಂತರಾ ತತಃ | ಅನ್ಯತ್ರ ಸರ್ವವಾಕ್ಯಾನಾಂ ಯುಕ್ತೀನಾಂ ಚ ವಿಶೇಷತ ಇತಿ ಬ್ರಹ್ಮಾಂಡೇ |(೨) ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ | ಬ್ರಹ್ಮದೃಷ್ಟಿರುತ್ಕರ್ಷಾದಿತ್ಯಾದಿ ನಿರ್ಣಯಾತ್ಮಕಂ ಭಗವದ್ವಚನಂ | (೩) ನ ಚ ಶಾರೀರಪರಾಭೇದೇ ತಾತ್ಪರ್ಯಮಿತ್ಯತ್ರ ಕಿಂಚಿನ್ಮಾನಂ | ತತ್ತ್ವಮಸೀತಿ ಭೇದಸ್ಯ ನವಕೃತ್ವೋಽಭ್ಯಾಸಾಚ್ಚ | (೪) ಓಂ ಭೇದವ್ಯಪದೇಶಾತ್ ಓಂ | ಓಂ ಭೇದವ್ಯಪದೇಶಾಚ್ಚಾನ್ಯಃ ಓಂ | ಓಂ ಅನುಪಪತ್ತೇಸ್ತು ನ ಶಾರೀರಃ ಓಂ | ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ | ಓಂ ಪೃಥಗುಪದೇಶಾದಿತ್ಯಾದಿನಾ ಸರ್ವತ್ರ ಭೇದಸ್ಯೈವ ಭಗವತಾ ನಿರ್ಣೀತತ್ವಾಚ್ಚ || || ೯ ||**

ಅ || (೧) ಸಮಸ್ತವಾಕ್ಯಗಳಿಗೂ ಯುಕ್ತಿಗಳಿಗೂ ವಿಶೇಷವಾಗಿ ವಿಷ್ಣುವು ಸರ್ವೋತ್ಕೃಷ್ಟನು ಎಂಬುವಲ್ಲಿ ವಿಶೇಷವಾಗಿ ಮುಖ್ಯ ತಾತ್ಪರ್ಯವು ಕರ್ಮಾದಿಗಳಲ್ಲಿ ಮುಖ್ಯತಾತ್ಪರ್ಯವಿಲ್ಲ ಅಮುಖ್ಯವಾಗಿ ಕರ್ಮಾದಿಗಳನ್ನು ಹೇಳುತ್ತವೆ ಹೀಗೆ ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ (೨) (ಈ ವಿಷಯದಲ್ಲಿಯೇ ಸೂತ್ರಪ್ರಮಾಣವಿದೆ, ಎನ್ನುತ್ತಾರೆ—) ದೀಕ್ಷಾಪ್ರಾಯಣೀಯ ಉದಯನೀಯ ಪ್ರಾತಃಸವನ ಮಾಧ್ಯಂದಿನಸವನ ತೃತೀಯಸವನ ಅವಭೃಥಾತ್ಮಕಗಳಾದ ಯಾಗಗಳ ಅಂಗಗಳ ಸಮೂಹದಂತೆ ಆನಂದ ಮೊದಲಾದ ಎಲ್ಲಾ ಗುಣಗಳಲ್ಲಿ ಭೂಮ (ಪರಿಪೂರ್ಣತೆ) ಗುಣವು ಮುಖ್ಯವಾಗಿ ವೇದಗಳಲ್ಲಿ ಹೇಳಲ್ಪಟ್ಟಿದೆ (ಎಲ್ಲಾ ಗುಣಗಳಿಗಿಂತ ಪ್ರಧಾನವು.) ಆದಕಾರಣ **ಭೂಮೈವ ದೇವಃ** ಎಂಬ ವೇದವು ಭೂಮಗುಣೋಪಾಸನವು ಸರ್ವರಿಗೂ ಅವಶ್ಯಕವೆಂದು ತೋರಿಸುತ್ತದೆ. (ಬ್ರ. ಅ ೩ ಪಾ. ೩ ಸೂ. ೫೭) ಶ್ರೀಹರಿಯು ಸರ್ವೋತ್ಕೃಷ್ಟನಾದುದರಿಂದ ಸರ್ವಗುಣಪರಿಪೂರ್ಣನೆಂಬ ಉಪಾಸನೆಯನ್ನು ಅವಶ್ಯವಾಗಿ

**ಮಾಡಬೇಕು,** ಇದು ಮೊದಲಾದ ನಿರ್ಣಯವನ್ನು ಮಾಡುವ ಬ್ರಹ್ಮಸೂತ್ರವು. (ಏವಂಚ ವಿಷ್ಣುವು **ಸರ್ವಗುಣಪರಿಪೂರ್ಣನೆಂಬ** ಉಪಾಸನೆಯಿಂದಲೇ ಮೋಕ್ಷವಾಗುತ್ತದೆಂದು ಎರಡು ಸೂತ್ರಗಳಲ್ಲಿಯೂ **ಹೇಳಿದುದರಿಂದ** ಎಲ್ಲಾ ವೇದಗಳಿಗೂ ಅದರಲ್ಲಿಯೇ ಮುಖ್ಯ ತಾತ್ಪರ್ಯವೆಂದು ತಿಳಿಯುತ್ತದೆ.) (೩) **(1) ತತ್ತ್ವಮಸಿ (2) ಪುರುಷ ಏವೇದಂ ಸರ್ವಂ (3) ಏಕಮೇವಾದ್ವಿತೀಯಂ (4) ಅಹಂ ಬ್ರಹ್ಮಾಸ್ಮಿ (5) ಯೋಽಸೌ ಸೋಽಹಂ** ಇತ್ಯಾದಿ ವೇದಗಳಲ್ಲಿ ಅಭೇದವನ್ನೇ ಹೇಳಿದುದರಿಂದಲೂ ಅಭ್ಯಾಸ (ಅನೇಕ ಸಲ ಹೇಳುವುದು.) ಮೊದಲಾದವುಗಳಿಂದ ಅಭೇದದಲ್ಲಿಯೇ ತಾತ್ಪರ್ಯವೆಂದು ತಿಳಿದುಬರುವುದರಿಂದಲೂ ಎಲ್ಲಾ ಆಗಮಗಳಿಗೆ ಜೀವೇಶ್ವರರ ಅಭೇದದಲ್ಲಿಯೇ ಮುಖ್ಯ ತಾತ್ಪರ್ಯವು. ಆ ವೇದಗಳನ್ನು ಅನುಸರಿಸಿ ಬೇರೆ ಎಲ್ಲಾ ವೇದಗಳಿಗೂ ಜೀವೇಶ್ವರರ ಐಕ್ಯದಲ್ಲಿಯೇ ತಾತ್ಪರ್ಯವೆಂದು ಹೇಳಬೇಕು, ಎಂದು ಐಕ್ಯವಾದಿಗಳು ಹೇಳುತ್ತಾರೆ. ಅದನ್ನು ನಿರಾಕರಿಸುತ್ತಾರೆ—) ಜೀವೇಶ್ವರರಿಗೆ ಅಭೇದದಲ್ಲಿ ಎಲ್ಲಾ ವೇದಗಳಿಗೆ ತಾತ್ಪರ್ಯವೆಂಬಲ್ಲಿ ಯಾವುದೊಂದು ಪ್ರಮಾಣವೂ ಇಲ್ಲ (ಪ್ರಮಾಣ ವಿಲ್ಲವೆಂದು ಮಾತ್ರವಲ್ಲ, ಪ್ರಮಾಣವಿರೋಧವೂ ಅದೇ ಎನ್ನುತ್ತಾರೆ—) **ಅತತ್ ತ್ವಮಸಿ** ಎಂದು ಒಂಭತ್ತಾವರ್ತಿ ಭೇದವನ್ನೇ ಹೇಳಿರುವರು. (೪) (**ತತ್ ತ್ವಮಸಿ** ಎಂದು ಪದವನ್ನು ವಿಂಗಡಿಸಿಕೊಂಡು ಐಕ್ಯವನ್ನೇ ಹೇಳಿದ್ದೆಂದು ಸರ್ವಥಾ ಹೇಳಕೂಡದು. ಏಕೆಂದರೆ—ಆ ವಿಷಯದಲ್ಲಿ ಯಾವುದೊಂದು ದೃಷ್ಟಾಂತವೂ ಇಲ್ಲವೆಂಬುದು ಮಾತ್ರವಲ್ಲ. ಸೂತ್ರವಿರೋಧವೂ ಅದೆ ಎನ್ನುತ್ತಾವೆ—) **(1) ಜುಷ್ಟಂ ಯದಾ ಪಶ್ಯತಿ** ಎಂಬ ವೇದದಲ್ಲಿ ಜೀವನು ಸರ್ವರಿಂದ ಸೇವಿಸಲ್ಪಡುವ ಶ್ರೀಹರಿಯನ್ನು ನೋಡುತ್ತಾನೆ, ಎಂದು ಹೇಳಿದ ಕಾರಣ ಜೀವನಿಗೆ ಈಶ್ವರನಿಂದ ಭೇದವೆಂಬುದು ಸ್ಪಷ್ಟವಾಯಿತು. (ಬ್ರ. ಸೂ ಅ. ೧ ಪಾ.೩ ಸೂ. ೫) (2) **ಇಂದ್ರಸ್ಯಾತ್ಮಾ ನಿಹಿತಃ ಪಂಚಹೋತಾ** ಇದು ಮೊದಲಾದ ವೇದಗಳಲ್ಲಿ ವಿಷ್ಣುವು ಇಂದ್ರಾದಿ ದೇವತೆಗಳೊಳಗಿದ್ದು ಪ್ರೇರಿಸುತ್ತಿರುತ್ತಾನೆಂದು ಇಂದ್ರಾದಿಗಳಿಂದ ವಿಷ್ಣುವಿಗೆ ಭೇದ ವನ್ನು ಹೇಳಿದ ಕಾರಣ **ಅಂತಃ ಪ್ರವಿಷ್ಟಂ** ಎಂಬ ವೇದದಲ್ಲಿ ಹೃದಯದೊಳಗೆ ಇರುವವನೆಂದು ಹೇಳ ಲ್ಪಟ್ಟವನು ವಿಷ್ಣುವೆಂದು ಮಾತ್ರವಲ್ಲ. ಇಂದ್ರಾದಿಗಳಿಂದ ಭಿನ್ನನೂ ಆಗಿದ್ದಾನೆ. (ಬ್ರ. ಅ. ೧ ಪಾ. ೧ ಸೂ. ೨೧) (3) ಒಬ್ಬ ಜೀವನು ಸರ್ವರ ಶರೀರದಲ್ಲಿ ಇದ್ದಾನೆಂಬುದು ಅಯುಕ್ತವಾದ ಕಾರಣ ಪೃಥಿವ್ಯಾದಿಗಳಲ್ಲಿದ್ದಾನೆಂದು ಹೇಳಲ್ಪಡತಕ್ಕವನು ಸೂರ್ಯನಾಗಲೀ ಜೀವನಾಗಲೀ ಆಗುವುದಿಲ್ಲ. ಪರ ಬ್ರಹ್ಮನೇ ಆಗಬೇಕು. (ಅ. ೧ ಪಾ. ೨ ಸೂ. ೩) (4) **ಯ ಆತ್ಮನಿ ತಿಷ್ಠನ್, ಯೋ ವಿಜ್ಞಾನೇ ತಿಷ್ಠನ್** ಎಂದು ಕಾಣ್ವಮಾಧ್ಯಂದಿನಾಯನರಿಬ್ಬರೂ ಅಂತರ್ಯಾಮಿಗಿಂತ ಈ ಜೀವನು ಬೇರೆಯೆಂದು ಹೇಳುತ್ತಾರೆ. ಅದುಕಾರಣ ಅಂತರ್ಯಾಮಿಯು ಶರೀರಾಭಿಮಾನಿಯಾದ ಜೀವನಾಗುವುದಿಲ್ಲ. (ಬ್ರ. ಅ. ೧ ಪಾ. ೨ ಸೂ ೨೦) (5) **ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್** ಎಂಬ ಕೌಷೀತಕ ವೇದ ದಲ್ಲಿ ಅಪೂರ್ಣರಾದ ಜೀವರಿಂದ ಪೂರ್ಣನಾದ ಶ್ರೀಹರಿಯು ಬೇರೆಯೆಂದು ಹೇಳಿದುದರಿಂದ ಜೀವನು ಭಿನ್ನನೇ ಆಗಿರುತ್ತಾನೆ (ಬ್ರ ಸೂ. ಅ. ೨ ಪಾ, ೩ ಸೂ, ೨೮) ಇದುಮೊದಲಾದ ಬ್ರಹ್ಮಸೂತ್ರಗಳಿಂದ ಎಲ್ಲೆಡೆಗಳಲ್ಲಿಯೂ ಭೇದವೆಂದೇ ವೇದವ್ಯಾಸರು ನಿರ್ಣಯಿಸಿರುವರು.

ವಿ || ಎಲ್ಲಾ ವೇದಗಳ ಅರ್ಥಗಳನ್ನು ನಿರ್ಣಯಮಾಡುವುದಕ್ಕಾಗಿ ವೇದವ್ಯಾಸರು ಬ್ರಹ್ಮಸೂತ್ರ ಗಳನ್ನು ನಿರ್ಮಿಸಿರುವರು, ಯಾವುದೊಂದು ಸೂತ್ರದಲ್ಲಿಯೂ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಲೇ ಇಲ್ಲ, ಪ್ರತಿಸೂತ್ರಗಳಲ್ಲಿಯೂ ಜೀವಬ್ರಹ್ಮರಿಗೆ ಭೇದವನ್ನೇ ನಿರ್ಣಯಿಸಿರುವರು, || ೯ ||

**ಪೀ—ಪುರುಷ ಏವೇದಂ ಸರ್ವಂ** ಎಂಬ ವೇದವು ಜೀವ ಈಶ್ವರರ ಐಕ್ಯವಿಷಯದಲ್ಲಿ ಪ್ರಮಾಣ ವೆಂಬುದು ಅಯುಕ್ತವು. ಏಕೆಂದರೆ ಆ ವೇದದ ಅರ್ಥವು ಐಕ್ಯವೆಂದು ಅಲ್ಲವೆಂದು ವೇದದಲ್ಲಿಯೇ ಹೇಳಿ ಯದೆ ಎಂಬ ಅಭಿಪ್ರಾಯದಿಂದ ವೇದವನ್ನು ಹೇಳುತ್ತಾರೆ—

**ಭಾ. ॥ (೧) ಪುರುಷ ಏವೇದಂ ಸರ್ವಮಿತಿ ಚ ಪುರುಷೇಣೈವೇದಂ ಸರ್ವಂ ವ್ಯಾಪ್ತಂ ಯದ್ಭೂತಂ ಯಚ್ಚ ಭ(ಭಾ)ವ್ಯಂ । (೨) ನ ಚ ಭಗವಾನ್ ಗೋತ್ವೇನ ಮನುಷ್ಯತ್ವೇನ ವಾ ಭವತಿ । (೩) ಆತೃಣಾದಾಕರೀಷಾತ್ಸರ್ವಂ ಭಗವಾನಿತಿ ಮಿಥ್ಯಾದೃಷ್ಟಿರೇಷಾ । (೪) ದಧಿಸಕ್ತವೋ ಘೃತೌದನಮಿತ್ಯಾದೌ(ದಿಷು) ವ್ಯಾಪ್ತ(ಸ್ತಿ)ಶಬ್ದಾಭಾವೇಽಪಿ ವ್ಯಾ(ಸ್ತಿ)ಪ್ತ-ಶಬ್ದೋಽವಗಮ್ಯತೇ । (೫) ದಧಿಸಿಕ್ತಾಃ ಸಕ್ತವೋ ಘೃತಸಿಕ್ತಮೋದನಮಿತಿ ಚ ಶ್ರುತಿಃ ।(೬) ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚಭವ್ಯಮಿತಿ ಪುರುಷೇಣ ಹೀದಂ ಸರ್ವಂ ನೇನೀಯತ ಇತಿ ಚ । (೭) ಅತಃ ಸರ್ವಪ್ರಮಾಣಾನಾಂ ಭಗವದುತ್ಕರ್ಷ ಏವ ಮಹಾ-ತಾತ್ಪರ್ಯಾಚ್ಛಾರೀರಾಭೇದಂ ವದತಾಂ ಮಹಾತಾತ್ಪರ್ಯವಿರೋಧಃ ॥ ॥ ೧೦ ॥**

ಅ ॥ (೧) **ಪುರುಷ ಏವೇದಂ ಸರ್ವಂ** ಎಂಬ ವಾಕ್ಯಕ್ಕೆ ಭೂತಕಾಲದಲ್ಲಿದ್ದ ವಸ್ತುವು ಭವಿಷ್ಯತ್ಕಾಲದಲ್ಲಿರುವ ವಸ್ತುವು, ವರ್ತಮಾನಕಾಲದಲ್ಲಿದ್ದ ವಸ್ತುವು ಎಲ್ಲಾ ವಸ್ತುಗಳೂ ಶ್ರೀಹರಿಯಿಂದ ವ್ಯಾಪ್ತಗಳಾಗಿವೆ, ಎಂದರ್ಥವು. (೨) (ಎಲ್ಲಾ ವಸ್ತುಗಳಿಗೂ ಅಭೇದವು ಎಂಬ ಅರ್ಥವೇ ಏಕೆ ಆಗಲಾರದೆಂದರೆ) ಶ್ರೀಹರಿಯು ಗೋವಾಗಲೀ ಮನುಷ್ಯನಾಗಲೀ ಆಗುವುದಿಲ್ಲ. (ಎಲ್ಲಾ ಗೋವುಗಳೂ ಮನುಷ್ಯರೂ ಪರಮಾತ್ಮನು ಎಂದುಹೇಳಲಾಗುವುದಿಲ್ಲ.)(೩) (**ಪುರುಷ ಏವೇದಂ ಸರ್ವಂ** ಎಂಬ ವೇದದಲ್ಲಿ ಸರ್ವಾಭೇದವು ತೋರುವುದರಿಂದ ಐಕ್ಯವಿಲ್ಲವೆಂಬುದು ಹೇಗೆ ಕೂಡುತ್ತದೆ ಎಂದರೆ) ತೃಣ (ಹುಲ್ಲು) ವನ್ನಾರಂಭಿಸಿ ಒಣಗಿದ ಸಗಣಿ ಪರ್ಯಂತ ಎಲ್ಲಾ ವಸ್ತುವೂ ಶ್ರೀಹರಿಯು, ಎಂಬುದು ಮಿಥ್ಯಾಜ್ಞಾನವು. (೪) ಪುರುಷಃ ಎಂಬುದನ್ನು **ಪುರುಷೇಣ** ಎಂದು ವ್ಯತ್ಯಾಸವಾಗಿ ಮಾಡಿಕೊಂಡರೂ **ವ್ಯಾಪ್ತ**ವೆಂಬ ಶಬ್ದವಿಲ್ಲದಿರುವುದರಿಂದ **ಪುರುಷ ಏವೇದಂ ಸರ್ವಂ** ಎಂಬುದಕ್ಕೆ ಶ್ರೀಹರಿಯಿಂದ ಎಲ್ಲಾ ವಸ್ತುವೂ ವ್ಯಾಪ್ತವಾಗಿದೆ ಎಂಬ ಅರ್ಥವು, ಕೂಡುವುದಿಲ್ಲ ಎಂದರೆ) **ದಧಿಸಕ್ತವಃ ಘೃತೌಧನಂ** ಇದುಮೊದಲಾದ ವಾಕ್ಯಗಳಲ್ಲಿ **ಸಿಕ್ತ** ಎಂಬ ಶಬ್ದವಿಲ್ಲವಾದರೂ ದಧಿಯಿಂದ ಮಿಶ್ರವಾದ ಹಿಟ್ಟು ದಧಿಸಕ್ತುಗಳು ತುಪ್ಪದಿಂದ ಮಿಶ್ರವಾದ ಅನ್ನವು ಘೃತೌದನವು ಹೀಗೆ ಸಿಕ್ತ ಶಬ್ದವು ಹೇಗೆ ಲಭಿಸುತ್ತದೋ, ಹೀಗೆಯೇ **ಪುರುಷ ಏವೇದಂ** ಎಂಬುವಲ್ಲಿಯೂ **ವ್ಯಾಪ್ತ**ವೆಂಬ ಶಬ್ದವಿಲ್ಲವಾದರೂ **ವ್ಯಾಪ್ತ** ಎಂಬ ಶಬ್ದದ ಅರ್ಥವು ಸಿಗುತ್ತದೆ. (೫) (ವ್ಯಾಪ್ತವೆಂಬ ಶಬ್ದವಿಲ್ಲದಿದ್ದರೂ ಆ ಅರ್ಥಸಿಗುತ್ತದೆಂಬುದನ್ನು ತಿಳಿಸತಕ್ಕ ವೇದವನ್ನು ಹೇಳುತ್ತಾರೆ.) ದಧಿಸಕ್ತು=ಮೊಸರಿನಿಂದ ಕಲಿಸಿದ ಹಿಟ್ಟು ಘೃತಮಿಶ್ರವಾದುದು ಅನ್ನವು ಎಂದು ವೇದದ ಅರ್ಥವು. (೬) **ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ** ಎಂಬ ವಾಕ್ಯಕ್ಕೆ ಶ್ರೀಹರಿಯಿಂದ ಸರ್ವಜಗತ್ತು ಮತ್ತೂಮತ್ತೂ ಪ್ರೇರಿಸಲ್ಪಡುತ್ತದೆ ಅಥವಾ ವಿಶೇಷವಾಗಿ ವ್ಯಾಪಿಸಲ್ಪಡುತ್ತದೆ, ಎಂದರ್ಥವು. (೭) (ಐಕ್ಯ ಹೇಳಿದರೆ ಮಹಾತಾತ್ಪರ್ಯವಿರೋಧವು ಬರುತ್ತದೆ ಎಂಬುದನ್ನು ಹೇಳಿ ಮುಗಿಸುತ್ತಾರೆ ). ಅದು ಕಾರಣ ಎಲ್ಲಾ ಪ್ರಮಾಣಗಳಿಗೆ ಶ್ರೀಹರಿಯು ಸರ್ವೋತ್ಕೃಷ್ಟನು ಎಂಬುವಲ್ಲಿಯೇ ಮುಖ್ಯತಾತ್ಪರ್ಯವಿದ್ದುದರಿಂದಲೂ (ಐಕ್ಯದಲ್ಲಿ ತಾತ್ಪರ್ಯವು ಎಂಬಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ ಶ್ರೀಹರಿಯು ಸರ್ವೋತ್ತಮನೆಂಬುವಲ್ಲಿಯೇ ಎಲ್ಲಾ ಪ್ರಮಾಣಗಳಿರುವುದರಿಂದಲೂ) ಜೀವೇಶ್ವರರಿಗೆ ಐಕ್ಯವನ್ನು ಹೇಳುವವರಿಗೆ ಮಹಾತಾತ್ಪರ್ಯವಿರೋಧವು ಬರುತ್ತದೆ. ॥ ೧೦ ॥

ಪೀ—ಜೀವನಿಗೂ ಪರಮಾತ್ಮನಿಗೂ ಐಕ್ಯಹೇಳುವುದು ಶ್ರೀಹರಿಯು ಸರ್ವೋತ್ಕೃಷ್ಟನು ಎನ್ನುವುದಕ್ಕೆ ವಿರೋಧಿಯಾಗುತ್ತದೆ ಎಂಬುದನ್ನು ಪ್ರಮಾಣವನ್ನುದಾಹರಿಸಿ ಹೇಳುತ್ತಾರೆ--

**ಭಾ. ॥ (೧) ಅಜ್ಞಾನದುಃಖಸಂಬಂಧಾದ್ವ್ಯಾವಜ್ಞಾನಂ ಶರೀರಿಣಃ । ಸರ್ವದಾ-ಜ್ಞಾನಕಂ ವಿಷ್ಣುಮಹಮಸ್ಮೀತಿ ಯೋ ವಿದುಃ । ಅಜ್ಞಾನದುಃಖಮಂತಾರಸ್ತತಸ್ತೇ**

**ನೀಚತಾಂ ವಿದುಃ । (೨) ವಿಷ್ಣೋರುತ್ಕರ್ಷಹರ್ತ್ಯಾಣಾಂ ನೈವ ತೇಷಾಂ ಸುಖಂ ಕ್ವಚಿತ್ । (೩) ಯೋಽನ್ಯಥಾ ಸಂತಮೀಶೇಶಂ ಸ್ವರೂಪಂ ಪ್ರತಿಪದ್ಯತೇ । ಕಿಂ ತೇನ ನ ಕೃತಂ ಪಾಪಂ ಚೋರೇಣೇಶಾಪಹಾರಿಣಾ । (೪)ಐಕಾತ್ಮ್ಯಂ ನಾಮ ಯದಿದಂ ಕೇಚಿದ್ಬ್ರೂಯು-ರನ್ಯೈಪುಣಾಃ । ಶಾಸ್ತ್ರತತ್ತ್ವಮವಿಜ್ಞಾಯ ತಥಾ ವಾದಬಲಾ ಜನಾಃ । (೫) ಕಾಮ-ಕ್ರೋಧಾಭಿಭೂತತ್ವಾದಹಂಕಾರವಶಂ ಗತಾಃ । ಬ್ರಹ್ಮಸ್ತೇನಾ ನಿರಾನಂದಾ(ಲಂಬಾ) ಅಪಕ್ವಮನಸೋಽಶಿವಾಃ । (೬) ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ। (೭) ವೈಗುಣ್ಯಮೇವ ಪಶ್ಯಂತಿ ನ ಗುಣಾನಿ ನಿಯುಂಜತೇ । ತೇಷಾಂ ತಮಃಶರೀರಾಣಾಂ ತಮ ಏವ ಪರಾಯಣಂ । (೮) ಯಸ್ಯ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ । ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದಸಂಹಿತ ಇತಿ ॥ ॥ ೧೧ ॥**

**ಅ** ॥ (೧) ಸರ್ವದಾ ಜ್ಞಾನಸುಖಸ್ವರೂಪನಾದ ವಿಷ್ಣುವೇ ನಾನಾಗುತ್ತೇನೆಂದು ತಿಳಿಯುವವರು ಶ್ರೀವಿಷ್ಣುವಿಗೆ ಅಜ್ಞಾನದುಃಖಗಳು ಇವೆ ಎಂದು ತಿಳಿಯುತ್ತಾರೆ. (ಏಕೆಂದರೆ) ಐಕ್ಯಜ್ಞಾನಿಗೆ ಜ್ಞಾನವಿರುವ ಪರ್ಯಂತ ಅಜ್ಞಾನ ದುಃಖಸಂಬಂಧವು ಇದೆ. ಅದುಕಾರಣ ವಿಷ್ಣುವನ್ನು ನಿಕೃಷ್ಟನೆನ್ನುತ್ತಾರೆ. (ನೀಚತ್ವವು ಉತ್ಕೃಷ್ಟತ್ವಕ್ಕೆ ವಿರೋಧಿಯು ಎಂಬುದು ಪ್ರಸಿದ್ಧ.) (೨) (ಆ ಜ್ಞಾನವು ಮಿಥ್ಯಾಜ್ಞಾನವು ಎಂದು ಪ್ರಕಟಿಸುವುದಕ್ಕಾಗಿ ಅದರಿಂದುಂಟಾಗತಕ್ಕ ಅನರ್ಥ ಹೇಳುತ್ತಾರೆ—) ವಿಷ್ಣುವು ಸರ್ವೋತ್ಕೃಷ್ಟನು ಅಲ್ಲ ಎಂದು ಹೇಳುವ ಅನ್ಯಥಾಜ್ಞಾನಿಗಳಿಗೆ ಎಲ್ಲಿಯೂ ಸುಖವು ಸರ್ವಥಾ ಬರಲಾರದು. (೩) (ದುಃಖ ಮೊದಲಾದ ಅನರ್ಥಗಳು ಪಾಪದ ಫಲವೆಂದು ಇದ್ದ ಕಾರಣ ವಿಷ್ಣೂತ್ಕರ್ಷವನ್ನು ಅಪಹರಿಸಿದವರ ಫಲವೆಂಬುದು ಹೇಗೆ? ಎಂದರೆ -) ಸರ್ವರಿಗೂ ಸ್ವಾಮಿಯಾದ ಶ್ರೀಹರಿಯು ಸರ್ವಸ್ವಾಮಿಯಲ್ಲ, ನಿರ್ಗುಣನು ನಿರಾಕಾರನು ಎಂದು ಯಾವನು ತಿಳಿಯುತ್ತಾನೋ, ಆ ಸ್ವಾಮಿಯನ್ನೇ ಅಪಹರಿಸಿದ ಚೋರನು ಯಾವ ಪಾಪವನ್ನು ಮಾಡಲಿಲ್ಲ, ಎಲ್ಲಾ ಪಾಪವನ್ನೂ ಮಾಡಿರುತ್ತಾನೆ ಜೀವೈಶ್ವರೈಕ್ಯಪಕ್ಷದಲ್ಲಿ ಜೀವನೇ ಉಳಿಯುತ್ತಾನೆಂದು ಧ್ಯಾನಿಸಿದರೆ ಸ್ಪಷ್ಟವಾಗಿ ಶ್ರೀಹರಿಯನ್ನು ಅಪಹರಿಸಿದಂತೆ ಆಯಿತು. ಈಶ್ವರನು ಉಳಿದು ಜೀವಭಾವಕ್ಕೆ ಲಯವೆಂದು ಹೇಳಿದರೂ ಈಶ್ವರನು ನಿರ್ಧರ್ಮಕನೆಂದು ಹೇಳಿದುದರಿಂದ ಅವನಲ್ಲಿರುವ ಈಶ್ವರತ್ವರೂಪಧರ್ಮವನ್ನು ಅಪಲಾಪಮಾಡಿದುದರಿಂದ ಶ್ರೀಹರಿಯನ್ನು ಅಪಹರಿಸಿದಂತೆಯೇ ಆಯಿತು. (೪) (ಐಕ್ಯಜ್ಞಾನಿಯು ಬ್ರಹ್ಮಸ್ತೇನನು ಪರಬ್ರಹ್ಮನನ್ನು ಕದಿಯುವವನು ಎಂಬುವಲ್ಲಿ ಇನ್ನೊಂದು ಪ್ರಮಾಣ ಹೇಳುತ್ತಾರೆ—) ಎಲ್ಲಾ ಜೀವರಿಗೆ ಬ್ರಹ್ಮನಿಂದ ಐಕ್ಯವು ಎಂಬುದನ್ನು ಅಜ್ಞಾನಿಗಳು ಹೇಳುತ್ತಾರೆ. (ಹಾಗೆ ಹೇಳಲು ಕಾರಣವೇನೆಂದರೆ) **ಅಹಂ ಬ್ರಹ್ಮಾಸ್ಮಿ** ಇದುಮೊದಲಾದ ಶಾಸ್ತ್ರಗಳ ತಾತ್ಪರ್ಯವನ್ನು ತಿಳಿಯದೆ ಆಪಾತತಃ ತೋರುವ ಅರ್ಥದಲ್ಲಿಯೇ ಭ್ರಮೆಗೊಂಡವರಾಗಿ ಹಾಗೆ ಹೇಳುತ್ತಾರೆ. (೫) (ಬೇರೆಯವರಿಗೆ ಇಲ್ಲದೆ ಅವರಿಗೆ ಮಾತ್ರ ಹಾಗೆ ಅಜ್ಞಾನಾದಿಗಳು ಬರಲು ಕಾರಣವೇನೆಂದರೆ) ಮಿಥ್ಯಾಜ್ಞಾನಕ್ಕೆ ಕಾರಣಗಳಾದ ಕಾಮಕ್ರೋಧಾದಿಗಳಿಂದೊಡಗೂಡಿದವರಾದುದರಿಂದ ಅಹಂಕಾರಕ್ಕೆ ಒಳಪಟ್ಟವರು. ಜೀವಬ್ರಹ್ಮೈಕ್ಯವನ್ನು ತಿಳಿದವರು, ಆನಂದಲೇಶವಿಲ್ಲದವರು, ಕೆಟ್ಟ ಮನಸ್ಸುಳ್ಳವರು, ಅಮಂಗಲಸ್ವರೂಪರು (ಅದುಕಾರಣ ಅವರಿಗೆ ಅಜ್ಞಾನಾದಿಗಳೇ ಇರುವವು.) (೬) (**ದ್ವಾ ಸುಪರ್ಣಾ** ಇದುಮೊದಲಾದ ವೇದಗಳು ಐಕ್ಯಕ್ಕೆ ವಿರೋಧಿಗಳಾಗಿ ಭೇದವನ್ನು ಹೇಳುತ್ತಿರಲು ಐಕ್ಯವನ್ನು ಹೇಗೆ ಹೇಳುವರು? ಎಂದರೆ ) ಜೀವಬ್ರಹ್ಮರಿಗೆ ಭೇದವನ್ನು ಹೇಳುವ **ದ್ವಾ ಸುಪರ್ಣಾ** ಇದುಮೊದಲಾದ ವೇದಗಳ ತತ್ವಾರ್ಥವನ್ನು ತಿಳಿಯದೆ ಅವುಗಳು ಅತತ್ತ್ವಾವೇದಕಗಳು (ಅಯಥಾರ್ಥವನ್ನು ಹೇಳುತ್ತವೆ,) ಎಂದು ತಿಳಿಯುವವರಾದುದರಿಂದ ಐಕ್ಯವನ್ನೇ ಹೇಳುತ್ತಾರೆ. (೭) (ಆದರೂ ಈಶ್ವರನು ಸರ್ವಜ್ಞನು ಜೀವನು ಅಲ್ಪಜ್ಞನು, ಇದುಮೊದಲಾದ ವಿರುದ್ಧ ಧರ್ಮಗಳು ಇದ್ದುದರಿಂದ ಅವರಿಗೆ ಐಕ್ಯ ಹೇಳುವುದು

ಹೇಗೆಂದರೆ—) ಯಥಾರ್ಥವಾಗಿ ಜೀವಬ್ರಹ್ಮರು ನಿರ್ಗುಣರೇ, ಎಂದು ತಿಳಿಯುವವರಾದುದರಿಂದ ಶ್ರೀಹರಿಗೆ ಸಾರ್ವಜ್ಞಾದಿ ಗುಣಗಳಿವೆ ಎಂದು ಹೇಳುವುದಿಲ್ಲ. ಇಂತಹ ತಮೋಗುಣವೇ ಪ್ರಚುರವಾಗಿ ಉಳ್ಳ ಮಿಥ್ಯಾಜ್ಞಾನಿಗಳು ನರಕವಿಶೇಷವನ್ನೇ ಹೊಂದುತ್ತಾರೆ. (೮) (ಹಾಗಾದರೆ **ಅಹಂ ಬ್ರಹ್ಮಾಸ್ಮಿ** ಇತ್ಯಾದಿ ವೇದಗಳಲ್ಲಿ ಸ್ಪಷ್ಟವಾಗಿ ಐಕ್ಯವು ತೋರುತ್ತದೆ. ಅದನ್ನನುಸರಿಸಿ ಭೇದವನ್ನು ಹೇಳುವ ಶಾಸ್ತ್ರಗಳೆಲ್ಲವೂ ಅಯಥಾರ್ಥವನ್ನು ಹೇಳುತ್ತವೆಂದು ಕಲ್ಪಿಸುವುದೇ ಯುಕ್ತವು, ಎಂದರೆ) ಜೀವನು ಅಣುಪರಿಮಾಣವುಳ್ಳವನು, ಈಶ್ವರನು ವ್ಯಾಪ್ತನು, ಹೀಗೆ ಜೀವೇಶ್ವರರಿಗೆ ಪರಿಮಾಣ ಭೇದವಿದೆ, ಜೀವನಿಗೆ ಜೀವತ್ವಜಾತಿ, ಬ್ರಹ್ಮನಲ್ಲಿ ಬ್ರಹ್ಮತ್ವಜಾತಿ, ಹೀಗೆ ಜಾತಿಭೇದವಿದೆ **ದ್ವಾ ಸುಪರ್ಣಾ** ಇದುಮೊದಲಾದ ವೇದಗಳು ಭೇದವನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಜೀವನಿಗೆ ಪ್ರಯೋಜನವಿದೆ. ಈಶ್ವರನಿಗೆ ಪ್ರಯೋಜನವಿಲ್ಲ. ಇದುಮೊದಲಾದ ಕಾರಣಗಳಿಂದ ಶ್ರೀಹರಿಯು ಜೀವರಿಂದ ಭಿನ್ನನೆಂದೇ ಸಿದ್ಧಿಸುತ್ತದೆ. ಅದುಕಾರಣ ಬ್ರಹ್ಮನೇ ನಾನಾಗಿರುತ್ತೇನೆಂದು ಅಯೋಗ್ಯವಾದ ಸಂಬಂಧವು (ಐಕ್ಯವು) ಹೇಗೆ ಕೂಡುವುದು? ಸರ್ವಥಾ ಐಕ್ಯವು ಕೂಡಲಾರದು.

ವಿ || **ಅಹಂ ಬ್ರಹ್ಮಾಸ್ಮಿ** ಇದುಮೊದಲಾದ ವೇದವಾಕ್ಯಗಳು ಐಕ್ಯಾರ್ಥವನ್ನೇ ಹೇಳುತ್ತವೆಂದು ನಿಶ್ಚಯವಾಗಿದ್ದರೆ ಭೇದ ಹೇಳುವ ವಾಕ್ಯಗಳು ಅಯಥಾರ್ಥವನ್ನು ತಿಳಿಸುತ್ತವೆಂದು ಕಲ್ಪಿಸಬಹುದಿತ್ತು. ಯುಕ್ತಿ ಆಗಮಗಳ ವಿರೋಧವಿದ್ದುದರಿಂದ ಹಾಗೆ ಕಲ್ಪಿಸುವುದೇ ಅಯುಕ್ತವು || ೧೧ ||

ಪೀ—ಹಾಗಾದರೆ ಜೀವಬ್ರಹ್ಮೈಕ್ಯ ವಿಷಯದಲ್ಲಿ (1) **ತತ್ತ್ವಮಸಿ** (2) **ಪುರುಷ ಏವೇದಂ** ಎಂಬುವುದು ಪ್ರಮಾಣವಾಗದಿದ್ದರೂ (3) **ಏಕಮೇವಾದ್ವಿತೀಯಂ** (4) **ಅಹಂ ಬ್ರಹ್ಮಾಸ್ಮಿ** (5) **ಯೋಽಸೌ ಸೋಽಹಂ** ಇದುಮೊದಲಾದ ವೇದಗಳೇ ಪ್ರಮಾಣಗಳು ಅಲ್ಲಿ ಐಕ್ಯವು ಸ್ಪಷ್ಟವಾಗಿ ಹೇಳಿದೆ. ಮತ್ತು *ಉಪಕ್ರಮಾದಿಗಳ ಬಲದಿಂದ ಐಕ್ಯದಲ್ಲಿಯೇ ತಾತ್ಪರ್ಯವೆಂದು ತಿಳಿಯುತ್ತದೆ, ಎಂದರೆ ಹಾಗೆ ಹೇಳಕೂಡದು. **ಏಕಮೇವ** ಎಂಬ ವಾಕ್ಯಕ್ಕೆ ಶ್ರೀಹರಿಯು ಸರ್ವೋತ್ಕೃಷ್ಟನೆಂದೇ ಅರ್ಥವೆಂದು ಹಿಂದೆಯೇ (ಪು. ೨೮೪ ರಲ್ಲಿ) ಹೇಳಿರುತ್ತೇವೆ ಮತ್ತು ಮೋಕ್ಷಧರ್ಮವಚನದಲ್ಲಿಯೂ ಹಾಗೆಯೇ ಅರ್ಥವನ್ನು ಹೇಳಿಯದೆ ಎನ್ನುತ್ತಾರೆ—

ಭಾ. || (೧) ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು | **ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ವಕ್ತುಮರ್ಹತಿ** | (೨) ವೈಶಂಪಾಯನ ಉವಾಚ | **ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ** | ಬಹೂನಾಂ **ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ** | **ತಥಾ ತಂ ಪುರುಷಂ** ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಮಿತಿ **ಮೋಕ್ಷಧರ್ಮವಚನಾಚ್ಚ** || || ೧೨ ||

ಅ || (೧) ಎಲೋ ವೈಶಂಪಾಯನಾಚಾರ್ಯರೇ **ದ್ವಾ ಸುಪರ್ಣಾ** ಇದುಮೊದಲಾದ ಭೇದವಾಕ್ಯಗಳನ್ನನುಸರಿಸಿ ಬಹುಪುರುಷರು ಎನ್ನುತ್ತೀರೋ, ಅಥವಾ **ಏಕಮೇವ** ಎಂಬ ವೇದದಲ್ಲಿ ಒಬ್ಬನು ಎಂದು ಹೇಳಿದುದರಿಂದ ಪುರುಷನು ಒಬ್ಬನೇ ಎನ್ನುತ್ತೀರೋ, ಹೆಚ್ಚು ಮಂದಿ ಪುರುಷರು ಇರುತ್ತಾರೆಂಬ ಪಕ್ಷದಲ್ಲಿಯೂ ಎಲ್ಲರೂ ಸಮರು ಎಂಬ ಪಕ್ಷವು ಕೂಡದಿರುವುದರಿಂದ ಶ್ರೇಷ್ಠನೊಬ್ಬನೆನ್ನಬೇಕು. ಅವನು ಯಾರು? ಆತನನ್ನು ಹೇಳಬೇಕು (೨) (ಹೀಗೆ ಕೇಳಿದಲ್ಲಿ ವೈಶಂಪಾಯನಾಚಾರ್ಯರು ಪುರುಷನೊಬ್ಬನೇ

---

* ಪ್ರಕರಣದ ಆದಿಭಾಗವು ಉಪಕ್ರಮವು, ಅಂತಿಮ ಭಾಗವು ಉಪಸಂಹಾರವು, ಅನೇಕ ಸಲ ಹೇಳುವುದು ಅಭ್ಯಾಸವು ಇತ್ಯಾದಿಗಳೇ ತಾತ್ಪರ್ಯವನ್ನು ನಿರ್ಣಯಿಸುವ ಅಂಶಗಳು

ಎಂಬ ಪಕ್ಷವನ್ನು ದೂಷಿಸುತ್ತಾರೆ.) ವೈಶಂಪಾಯನಾಚಾರ್ಯರು ಹೇಳುತ್ತಾರೆ. ಎಲೋ ಜನಮೇಜಯನೇ ಪುರುಷನೊಬ್ಬನೇ ಎಂಬುದನ್ನು ಜ್ಞಾನಿಗಳು ಒಪ್ಪುವುದಿಲ್ಲ. (ಪುರುಷರು ಬಹುಮಂದಿಯೇ ಇರುತ್ತಾರೆ) ಏಕಮೇವ ಎಂಬ ವೇದಕ್ಕೆ ಸರ್ವೋತ್ತಮನು ಒಬ್ಬನೇ ಎಂದು ಅರ್ಥವು ಎನ್ನುತ್ತಾ ಪುರುಷ ಶ್ರೇಷ್ಠನು ಯಾರು? ಎಂಬ ಎರಡನೇ ಪ್ರಶ್ನೆಗೆ ಉತ್ತರ ಹೇಳುತ್ತಾರೆ.) ಅನೇಕ ಪುರುಷರಿಗೆ ಹೇಗೆ ಒಬ್ಬನು ಕಾರಣನೋ, ಹಾಗೆಯೇ ಅಂತಹ ಗುಣಪೂರ್ಣನೂ ಸರ್ವತ್ರ ವ್ಯಾಪ್ತನೂ ಆದ ಪುರುಷನು ಒಬ್ಬನೇ ಎಂದು ಹೇಳುತ್ತೇನೆ, ಎಂಬ ಮೋಕ್ಷಧರ್ಮವಚನದಿಂದಲೂ ಎಲ್ಲಾ ಪ್ರಮಾಣಗಳಿಗೂ ಶ್ರೀಹರಿಯು ಸರ್ವೋತ್ತಮನೆಂಬುವಲ್ಲಿಯೇ ಮುಖ್ಯತಾತ್ಪರ್ಯವೆಂದು ತಿಳಿಯುತ್ತದೆ. ॥ ೧೨ ॥

**ಪೀ**—ಈಗ **ಅಹಂ ಬ್ರಹ್ಮಾಸ್ಮಿ ಯೋಽಸೌ ಸೋಽಹಂ** ಎಂಬ ವಾಕ್ಯಗಳು ಪರರಿಗೆ ಪ್ರತಿಕೂಲವೇ ಆಗಿವೆ ಎಂಬ ಅಭಿಪ್ರಾಯದಿಂದ ಅವುಗಳ ಅರ್ಥ ಹೇಳತಕ್ಕ ಪ್ರಮಾಣ ಹೇಳುತ್ತಾರೆ—

**ಭಾ. ॥ (೧) ಹಂನಾಮ ಹನ್ಯಮಾನತ್ವಾಜ್ಜೀವಸ್ಯ ಸಮುದಾಹೃತಂ । ಜೀವಾದನ್ಯೋ ಯತೋ ವಿಷ್ಣುರಹಂನಾಮಾ ತತಃ ಸ್ಮೃತಃ । (೨) ಸ್ಮೀತಿ ಜೀವಃ ಸಮುದ್ದಿಷ್ಟಃ ಸ್ಮೀತ್ಯಲ್ಪಂ ಸುಮಿತತ್ವತಃ । ಪೂರ್ಣತ್ವಾದಸ್ಮಿನಾಮಾಽಸೌ ಪೂರ್ಣಪೂರ್ಣತ್ವಹೇತುತಃ । ಬ್ರಹ್ಮಾಸ್ಮೀತ್ಯುಚ್ಯತೇ ವಿಷ್ಣುರ್ಬೃಹತ್ಪೂರ್ಣೋ ಯತಃ ಸದಾ । (೩) ಅಸೌ ಸೂರ್ಯಗತೋ ವಿಷ್ಣುರ್ದೂರಸ್ಥತ್ವಾತ್ಪ್ರಕೀರ್ತಿತಃ । ಅಹಂನಾಮಾ ಜೀವಗತೋ ನಿತ್ಯಾಹೇಯತ್ವಹೇತುತಃ । ಇತಿ ಬ್ರಹ್ಮಾಂಡೇ ॥ ॥ ೧೩ ॥**

**ಅ** ॥ (೧) ಜೀವನು ಸಂಹರಿಸಲ್ಪಡುವುದರಿಂದ (ಜೀವರ ದೇಹಕ್ಕೆ ನಾಶವಿರುವುದರಿಂದ) ಜೀವರಿಗೆ **ಹಂ** ಎಂದು ಹೆಸರು. ವಿಷ್ಣುವು ಜೀವರಿಂದ ಭಿನ್ನನಾದುದರಿಂದ **ಅಹಂ** ಎನಿಸುತ್ತಾನೆ. (೨) (ಹೀಗೆ **ಹಂ ನ ಭವತೀತಿ ಅಹಂ** ಎಂದು **ಅಹಂ** ಎಂಬ ಶಬ್ದಕ್ಕೆ ಅರ್ಥ ಹೇಳಿ ಈಗ **ಅಸ್ಮಿ** ಎಂಬ ಶಬ್ದಕ್ಕೆ ಅರ್ಥ ಹೇಳುತ್ತಾರೆ.) **ಸ್ಮಿ** ಎಂಬ ಶಬ್ದದಿಂದ ಜೀವನು ಹೇಳಿಸಿಕೊಳ್ಳಲ್ಪಡುತ್ತಾನೆ. ಹೇಗೆಂದರೆ—ಪರಿಮಿತಿಯುದ್ದುದರಿಂದ **ಸ್ಮಿ** ಎಂದರೆ ಅಲ್ಪವು ಜೀವನೂ ಅಲ್ಪನೇ ಆಗಿರುತ್ತಾನೆ. ಶ್ರೀಹರಿಯು ಗುಣಪೂರ್ಣನಾದುದರಿಂದ **ಅಸ್ಮಿ** ಎನಿಸುತ್ತಾನೆ. (ಹಾಗಾದರೆ ಬ್ರಹ್ಮಶಬ್ದವು ವ್ಯರ್ಥವೆಂದರೆ) ಪೂರ್ಣಪೂರ್ಣನು ಅಂದರೆ ಪೂರ್ಣಗಳಾದ ವಸ್ತುಗಳಿಗೂ ಪೂರ್ಣತ್ವವನ್ನು ಕೊಡುವವನಾದುದರಿಂದ ಬ್ರಹ್ಮಾಸ್ಮಿ ಎನಿಸುತ್ತಾನೆ. ಸದಾ ವಿಷ್ಣುವು ಪೂರ್ಣನೇ ಆಗಿರುತ್ತಾನೆ. (ಏವಂಚ **ಅಹಂ ಬ್ರಹ್ಮಾಸ್ಮಿ** ಎಂಬುದಕ್ಕೆ ಜೀವರಿಂದ ಭಿನ್ನನಾದುದರಿಂದ **ಅಹಂ** ಎನಿಸಿದ ಶ್ರೀವಿಷ್ಣುವು ಪೂರ್ಣಗಳಿಗೂ ಪೂರ್ಣತೆಯನ್ನು ಕೊಡುವವನೆಂದರ್ಥವು.) (೩) (**ಯೋಽಸೌ ಸೋಽಹಂ** ಎಂಬ ವಾಕ್ಯದಲ್ಲಿದ್ದ **ಅಸೌ ಅಹಂ** ಎಂಬ ಶಬ್ದಗಳಿಗೆ ಅರ್ಥ ಹೇಳುತ್ತಾರೆ.) ಸೂರ್ಯನಲ್ಲಿ ಅಂತರ್ಯಾಮಿಯಾದ ಶ್ರೀವಿಷ್ಣುವು ದೂರದಲ್ಲಿದ್ದ ಪ್ರಯುಕ್ತ **ಅಸೌ** ಎಂದು ಎನಿಸುತ್ತಾನೆ. ನಿತ್ಯದಲ್ಲಿಯೂ ಎಲ್ಲರಿಂದಲೂ ಬಿಡಲ್ಪಡದಿರುವವನಾದುದರಿಂದ ಜೀವನೊಳಗಣ ವಿಷ್ಣುವು **ಅಹಂ** ಎನಿಸುತ್ತಾನೆ. (ಏವಂಚ ಸೂರ್ಯನೊಳಗಣ ವಿಷ್ಣುವೇ ಜೀವನೊಳಗೂ ಇರುವನು. ಹೀಗೆ ಸೂರ್ಯಾಂತರ್ಯಾಮಿಗೂ ಜೀವಾಂತರ್ಯಾಮಿಗೂ ಐಕ್ಯವೆಂದು ಈ ವಾಕ್ಯವಲ್ಲಿ ಹೇಳುತ್ತದೆ.) ಹೀಗೆ ಬ್ರಹ್ಮಾಂಡಪುರಾಣವಾಕ್ಯದಿಂದಲೂ ಎಲ್ಲಾ ಪ್ರಮಾಣಗಳಿಗೂ ಶ್ರೀಹರಿಯು ಸರ್ವೋತ್ಕೃಷ್ಟನೆಂಬುವಲ್ಲಿಯೇ ಮುಖ್ಯ ತಾತ್ಪರ್ಯವೆಂದು ತಿಳಿಯುತ್ತದೆ. ॥ ೧೩ ॥

**ಪೀ**—(1) ಭೇದವನ್ನು ಹೇಳುವ ವಾಕ್ಯಗಳು ಹೆಚ್ಚು ಇವೆ. ಅವುಗಳಿಗೆ ಬೇರೆ ಅರ್ಥವನ್ನು ಹೇಳುವುದು ಸರ್ವಥಾ ಶಕ್ಯವಲ್ಲ, ಅದುಕಾರಣ ಅವುಗಳಿಂದ ವಿರೋಧವು ಬರುವುದರಿಂದ **ತತ್ತ್ವಮಸಿ**

ಇತ್ಯಾದಿ ವಾಕ್ಯಗಳಿಗೆ ಐಕ್ಯವೆಂಬ ಅರ್ಥವನ್ನು ಸರ್ವಥಾ ಹೇಳುವುದು ಯುಕ್ತವಲ್ಲ. (2) ಐಕ್ಯವನ್ನು ಹೇಳುವಂತೆ ತೋರುವ ವಾಕ್ಯಗಳು ಬಹುಕಡಿಮೆ. ಅವುಗಳಿಗೆ ಬೇರೆ ಅರ್ಥ ಮಾಡಲಿಕ್ಕೆ ಶಕ್ಯವೂ ಆಗಿದೆ. (3) ಭೇದವಾಕ್ಯಗಳು ವ್ಯಾವಹಾರಿಕ ಭೇದವನ್ನು ಹೇಳುತ್ತವೆಂದು ಹೇಳಕೂಡದು. ಏಕೆಂದರೆ ಮೋಕ್ಷದಲ್ಲಿಯೂ ಜೀವಬ್ರಹ್ಮರಿಗೆ ಭೇದವದೆ ಎಂದು ಹೇಳುವ ಅನೇಕ ವೇದಗಳಿವೆ, ಎಂಬ ಅಭಿಪ್ರಾಯದಿಂದ ಮೋಕ್ಷದಲ್ಲಿಯೂ ಭೇದವನ್ನು ಹೇಳುವ ಸ್ಪಷ್ಟಗಳಾದ ಬಹುವೇದವಾಕ್ಯಗಳನ್ನು ಹೇಳುತ್ತಾರೆ—

**ಭಾ. ॥ (೧) ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ । (೨) ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ । (೩) ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ಕಾಮಾನ್ಸಹ ಬ್ರಹ್ಮಣಾ ವಿಪಶ್ಚಿತಾ । (೪) ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾಂಲ್ಲೋಕಾನ್ಕಾಮಾನ್ನೀ ಕಾಮರೂಪ್ಯನುಸಂಚರನ್ । ಏತತ್ಸಾಮ ಗಾಯನ್ನಾಸ್ತೇ । (೫) ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇಽಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ । (೬) ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ । (೭) ತದಾ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ । (೮) ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । (೯) ನಾನಾತ್ವೇನಾಭಿಸಂಬದ್ಧಾಸ್ತದಾ ತತ್ಕಾಲಭಾವಿನಾ । ಪ್ರಕೃತೌ ಕರಣಾತೀತಾಃ ಸ್ವಾತ್ಮನ್ಯೇವ ವ್ಯವಸ್ಥಿತಾಃ । ಸಂಯೋಗಃ ಪ್ರಕೃತೇರ್ನೈಷಾಂ ಮುಕ್ತಾನಾಂ ತತ್ತ್ವದರ್ಶನಾತ್ । ಪುರುಷಾನ್ಯಬಹುತ್ವೇನ ಪ್ರತೀತಾ ನ ಪ್ರವರ್ತತೇ । ಪ್ರವರ್ತತಿ ಪುನಃ ಸರ್ಗೇ ತೇಷಾಂ ಸಾ ನ ಪ್ರವರ್ತತೇ । (೧೦) ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ । ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ । (೧೧) ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾ ಇತ್ಯಾದಿಶ್ರುತಿಸ್ಮೃತಿಷು ಸತಾತ್ಪರ್ಯಂ ಮುಕ್ತಾನಾಂ ವಿಷ್ಣೋರ್ಭೇದಸ್ಯೈವೋಕ್ತೇಃ ॥ ೧೪ ॥**

ಅ ॥ (೧) ಜ್ಯೋತೀರೂಪನಾದ ಪರಬ್ರಹ್ಮನ ಸಮೀಪವನ್ನು ಉತ್ತಮ ಪುರುಷನು ಸ್ವರೂಪಾನಂದಾವಿರ್ಭಾವದಿಂದ ಹೊಂದುತ್ತಾನೆ. (ಇಲ್ಲಿ ಸಮೀಪಕ್ಕೆ ಹೋಗುತ್ತಾನೆಂದು ಹೇಳಿದ ಕಾರಣ ಭೇದವದೆ, ಎಂದು ತಿಳಿಯುತ್ತದೆ. **ಸ್ವೇನ ರೂಪೇಣಾಭಿನಿಷ್ಪದ್ಯತೇ** ಸ್ವರೂಪಾನಂದಾವಿರ್ಭಾವವಾಗುತ್ತದೆಂದು ಹೇಳಿದಪ್ರಯುಕ್ತ ಈ ವಾಕ್ಯವು ಮೋಕ್ಷವನ್ನೇ ತಿಳಿಸುತ್ತದೆ.) (೨) ಮುಕ್ತನು ಮೋಕ್ಷದಲ್ಲಿ ನಗುತ್ತಾ ತಿನ್ನುತ್ತಾ ಆಟವಾಡುತ್ತಾ ಸ್ತ್ರೀಯರೊಡನೆ ವಿಹರಿಸುತ್ತಾ ವಾಹನಗಳಿಂದ ಸಂಚರಿಸುತ್ತಿರುತ್ತಾನೆ. (೩) ಮುಕ್ತರು ಸ್ವೇಚ್ಛೆಯಿಂದ ಒಂದು ರೂಪವುಳ್ಳವರು, ಮೂರು, ಐದು, ಏಳು, ರೂಪಗಳುಳ್ಳವರೂ ಆಗುತ್ತಾರೆ. ಯಾರು ಹೃದಯ ಗುಹೆಯೆಂಬ ಉತ್ತಮವಾದ ಆಕಾಶದಲ್ಲಿರುವ ಶ್ರೀಹರಿಯನ್ನು ತಿಳಿಯುತ್ತಾರೋ, ಅವರು ಸರ್ವಜ್ಞನಾದ ಪರಬ್ರಹ್ಮನಿಂದ ಅಥವಾ ಚತುರ್ಮುಖ ಬ್ರಹ್ಮನಿಂದ ಕೂಡಿ ತಮಗೆ ತಮಗೆ ಯೋಗ್ಯಗಳಾದ ಎಲ್ಲಾ ಭೋಗಗಳನ್ನುಣ್ಣುತ್ತಾರೆ. (ತೈ. ಅ. ೨ ಮಂ. ೨ ಪು. ೧೨೩) (ಇಲ್ಲಿ **ಬ್ರಹ್ಮಣಾ ಸಹ** ಎಂಬುದರಿಂದ ಭೇದವನ್ನು ಹೇಳಿದಂತೆ ಆಯಿತು.) ಮುಕ್ತಪರವೂ ಆಗಿದೆ. (೪) ಈ ಆನಂದಸ್ವರೂಪನಾದ ನಾರಾಯಣರೂಪಿ ಶ್ರೀಪರಮಾತ್ಮನ ಸಮೀಪಕ್ಕೆ ಹೋಗಿ ಇಚ್ಛಿಸಿದ ಎಲ್ಲಾ

ಭೋಗಗಳನ್ನು ಹೊಂದಿ ಸ್ವೇಚ್ಛಾನುಸಾರ ರೂಪವುಳ್ಳವರಾಗಿ ಭೂರಾದಿ ಲೋಕಗಳಲ್ಲಿ ಸಂಚರಿಸಿಕೊಂಡು **ಹಾ೩ ವುಹಾ೩ ವು** ಎಂಬ ಸಾಮವನ್ನು ಗಾನಮಾಡುತ್ತಾ ಇರುತ್ತಾರೆ. (**ಉಪಸಂಕ್ರಮ್ಯ** ಎಂದು ಸಮೀಪಪ್ರಾಪ್ತಿ ಹೇಳಿದುದರಿಂದ ಭೇದವನ್ನು ಹೇಳಿದಂತೆಯೇ ಆಯಿತು. **ಅಸ್ಮಾಲ್ಲೋಕಾತ್ಪ್ರೇತ್ಯ** ಎಂದು ಬುಡದಲ್ಲಿದ್ದಪ್ರಯುಕ್ತ ಮುಕ್ತಪರವೆಂದು ತಿಳಿಯುತ್ತದೆ ) (ತೈ. ಅ. ೩, ಮ ೧೪, ಪು. ೧೭೫) (೫) ಯಾರು ಪರಮಾತ್ಮನನ್ನು ಸರ್ವರಿಗೆ ಆಶ್ರಯನನ್ನಾಗಿ ಉಪಾಸನೆಮಾಡುತ್ತಾರೋ, ಮೋಕ್ಷದಲ್ಲಿ ಆನಂದಾಭಿವೃದ್ಧಿಕರವಾದ ಈ ಜ್ಞಾನಿಗಳ ಕರ್ಮವು ಕ್ಷೀಣವಾಗುವುದಿಲ್ಲ. ಆ ಮುಕ್ತರು ಯಾವುದು ಯಾವುದನ್ನು ಇಚ್ಛಿಸುತ್ತಾರೋ, ಅದನ್ನು ಶ್ರೀಹರಿಯ ಪ್ರಸಾದದಿಂದ ಉಂಟುಮಾಡಿಕೊಳ್ಳುತ್ತಾರೆ. (ಇಲ್ಲಿ ಶ್ರೀಹರಿಯ ಪ್ರಸಾದದಿಂದ ಭೋಗವನ್ನು ಹೇಳಿದುದರಿಂದ ಭೇದವು ಉಕ್ತವಾಯಿತು. ಇದು ಮುಕ್ತಪರವೆಂದು ತಿಳಿಸುವುದಕ್ಕಾಗಿ **ಸ ಯಃ** ಇದು ಮೊದಲಾದುದು ಮೊದಲಿನ ವಾಕ್ಯವು. ಅಮುಕ್ತರ ಕರ್ಮಕ್ಕೆ ನಾಶವಿದೆ. (೬)ಯಾವ ಮೋಕ್ಷದಲ್ಲಿ ಪೂರ್ವಕಲ್ಪದಲ್ಲಿ ಮುಕ್ತರಾದ ಸಾಧ್ಯಾದಿ ದೇವತೆಗಳು ಇರುತ್ತಾರೋ, ಅಂತಹ ಪೂರ್ಣಸುಖರೂಪವಾದ ಮೋಕ್ಷವನ್ನು ಮಹಾನುಭಾವರಾದ ದೇವತೆಗಳು ತಮ್ಮತಮ್ಮ ಅಧಿಕಾರವು ಅವಸಾನವಾಗುವಾಗ ಹೊಂದುತ್ತಾರೆ. (೭)ಆಗ ಅಪರೋಕ್ಷ ಜ್ಞಾನಿಗಳು ಮೋಕ್ಷಕ್ಕೆ ಪ್ರತಿಬಂಧಕವಾದ ಪುಣ್ಯವನ್ನು ಪಾಪವೆಲ್ಲವನ್ನು ಬಿಟ್ಟು ದೋಷರಹಿತರಾಗಿ ಶ್ರೀಹರಿಯ ಪೂರ್ಣಾನಂದತ್ವಾದಿ ರೂಪವಾದ ಬ್ರಹ್ಮಸಾಮ್ಯವನ್ನು ಹೊಂದುತ್ತಾರೆ. (ಅ. ಖಂ. ೫ ಮಂ. ೩) (೮) ಎಲೋ ನಚಿಕೇತರೇ ಸ್ವಚ್ಛವಾದ ನೀರನ್ನು ಸ್ವಚ್ಛವಾದ ನೀರಿನಲ್ಲಿ ಸೇರಿಸಿದರೆ–ಅದಕ್ಕೆ ಸದೃಶವಾದುದೇ ಆಗುತ್ತದೆ. ಹೊರತು ಅದೇ ಆಗುವುದಿಲ್ಲ. ಅದೇ ಆಗಿದ್ದರೆ ನೀರಿನಲ್ಲಿ ವೃದ್ಧಿಯು ಕಾಣಬಾರದಿತ್ತು. ಹೀಗೆಯೇ ಸರ್ವರಿಗೆ ಅಧಿಪತಿಯಾದ ಚತುರ್ಮುಖನೂ ಕೂಡ ಮುಕ್ತನಾಗಿ ಶ್ರೀಹರಿಯನ್ನು ಹೊಂದಿ ಶ್ರೀಹರಿಗೆ ಸದೃಶನೇ ಆಗುತ್ತಾನೆ. ಅವನೇ ಆಗುವುದಿಲ್ಲ. ಇತರ ಜೀವರು ಆಗುವುದಿಲ್ಲವೆಂಬುವುದು ಸುತರಾಂ ಸಿದ್ಧಿಸುತ್ತದೆ. (ಕಾಠಕ. ಅ ೨ ವ.೧ ಮ.೧೫) (೯) ಮೋಕ್ಷದಲ್ಲಿರುವ ಪುರುಷರು ಮೋಕ್ಷಕಾಲದಲ್ಲಿಯೂ ಭೇದವುಳ್ಳವರಾಗಿರುತ್ತಾರೆ. ಮುಕ್ತರಿಗೆ ಪ್ರಕೃತಿಪುರುಷ ವಿವೇಕಜ್ಞಾನವಿದ್ದುದರಿಂದ ಪ್ರಕೃತಿ ಸಂಬಧವೇ ಇಲ್ಲ. ಅದುಕಾರಣ ಪ್ರಾಕೃತ ಇಂದ್ರಿಯಗಳಿಲ್ಲದವರು ತಮ್ಮತಮ್ಮ ಸ್ವರೂಪಭೂತಗಳಾದ ಇಂದ್ರಿಯಾದಿಗಳಿಂದ ಕೂಡಿದವರು, ಸ್ವರೂಪಾನಂದವನ್ನೇ ಉಣ್ಣುತ್ತಿರುತ್ತಾರೆ ಪ್ರಕೃತಿಯು ಪ್ರಕೃತ ಮುಕ್ತರಿಂದ ಇತರರಾದ ಸಂಸಾರಿಗಳು ಹೆಚ್ಚು ಮಂದಿ ಇದ್ದಪ್ರಯುಕ್ತ ಆ ಸಂಸಾರಿಗಳಲ್ಲಿಯೇ ತನ್ನ ವ್ಯಾಪಾರಗಳನ್ನು ನಡಿಸಿಕೊಂಡಿರುತ್ತದೆ. ಮುಕ್ತರು ಪ್ರಕೃತಿ ತತ್ತ್ವವನ್ನು ತಿಳಿದಿರುವುದರಿಂದ ಪ್ರಕೃತಿಯು ಸಂಸಾರದಿಂದ ಮುಕ್ತರಾದವರನ್ನು ಮರಳಿ ಜನನ ಮರಣಾದಿಗಳು ಇರುವ ಸಂಸಾರದಲ್ಲಿ ಬಂಧಿಸಲಿಕ್ಕೆ ಪ್ರವೃತ್ತಿಮಾಡುವುದಿಲ್ಲ. (ಪ್ರಲಯಕಾಲದಲ್ಲಿ ಮುಕ್ತರಿಗೆ ಪ್ರಕೃತಿಸಂಬಂಧ ವಿಲ್ಲವಾದರೂ ಸೃಷ್ಟಿಕಾಲದಲ್ಲಿ ಪ್ರಕೃತಿಸಂಬಂಧವು ಇರಬಹುದೆಂದರೆ–) ಸೃಷ್ಟಿಕಾಲವು ಪ್ರವೃತ್ತವಾಗುವ ಕಾಲದಲ್ಲಿಯೂ ಮುಕ್ತರಿಗೆ ಪ್ರಕೃತಿಯು ಪ್ರವೃತ್ತವಾಗುವುದಿಲ್ಲ. (ಅಂದರೆ ಸೃಷ್ಟಿಕಾಲದಲ್ಲಿಯೇ ಮುಕ್ತರನ್ನು ತಿರುಗಿ ಸಂಸಾರಕ್ಕೆ ಪ್ರಕೃತಿಯು ಕಳುಹಿಸುವುದಿಲ್ಲ.) (ಇದರಿಂದ ಮುಕ್ತರಿಗೆ ಪ್ರಕೃತಿಸಂಬಂಧವೇ ಇಲ್ಲವೆಂದುಕ್ತವಾಯಿತು ) (೧೦) ಮುಂದೆ ಹೇಳುವ ಜ್ಞಾನವನ್ನು ಸಂಪಾದಿಸಿನನ್ನ ಸಾರೂಪ್ಯವನ್ನೇ ಹೊಂದಿರುತ್ತಾರೆ. ಸೃಷ್ಟಿಕಾಲದಲ್ಲಿ ಮರಳಿ ಹುಟ್ಟುವುದಿಲ್ಲ. ಪ್ರಲಯ ಕಾಲದಲ್ಲಿ ಮರಣಾದಿರೂಪವಾದ ದುಃಖವನ್ನು ಹೊಂದುವುದಿಲ್ಲ. (ಹೀಗೆ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿರುವನು.) (**ಸಾಧರ್ಮ್ಯಂ** ಎಂಬುದರಿಂದ ಭೇದವು ಉಕ್ತವಾಯಿತು.) (ಗೀ. ಅ. ೧೪ ಶ್ಲೋ ೨) (೧೧) ಯಾವ ವೈಕುಂಠ ಲೋಕದಲ್ಲಿ ಪ್ರಕೃತಿಯು ಅಥವಾ ಪ್ರಕೃತಿ ಸಂಬಂಧವೇ ಇಲ್ಲ. ರಾಗಾದಿ ದೋಷಗಳಿಲ್ಲವೆಂಬುದು ಸುತರಾಂ ಸಿದ್ಧವು. ದೇವತೆಗಳೂ ತತ್ತ್ವಾಭಿಮಾನಿದೇವತೆಗಳೂ ಅಥವಾ ಅಸುರಕುಲದಲ್ಲಿ ಹುಟ್ಟಿದ ಪ್ರಹ್ಲಾದಾದಿಗಳೂ ಇವರಿಂದ ಪೂಜಿತರಾದ ಮುಕ್ತರು ಶ್ರೀಹರಿಯನ್ನು ಅನುಸರಿಸಿಯೇ ಅವನ ಪ್ರೇರಣಾನುಸಾರವಾಗಿ ಇರುತ್ತಾರೆ. ಇದು ಮೊದಲಾದ ವೇದ ಸ್ಮೃತಿಗಳಲ್ಲಿ ತಾತ್ಪರ್ಯಪೂರ್ವಕವಾಗಿ ಮುಕ್ತರಿಗೆ ವಿಷ್ಣುವಿನಿಂದ ಭೇದವನ್ನೇ

ಹೇಳಿರುತ್ತಾರೆ (ಅದುಕಾರಣ ಆ ವೇದಾದಿಗಳ ವಿರೋಧವು ಇರುವುದರಿಂದ **ತತ್ತ್ವಮಸಿ** ಇತ್ಯಾದಿ ವಾಕ್ಯ ಗಳು ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುತ್ತವೆಂದು ಹೇಳಕೂಡದು. ಭೇದವನ್ನು ಹೇಳುತ್ತವೆಂದೇ ಹೇಳಬೇಕು.) ॥ ೧೪ ॥

**ಟೀ**—ಹೀಗೆ ಬೇರೆಕಡೆ ಇರುವ ವಾಕ್ಯಗಳ ವಿರೋಧವಿದ್ದುದರಿಂದ **ತತ್ತ್ವಮಸಿ** ಇತ್ಯಾದಿ ವಾಕ್ಯ ಗಳು ಐಕ್ಯಬೋಧಕವಾಗುವುದಿಲ್ಲವೆಂದರು ಈಗ ಈ ಪ್ರಕರಣದಲ್ಲಿರುವ ವಾಕ್ಯವಿರೋಧವಿದ್ದುದರಿಂದಲೂ ಜೀವಬ್ರಹ್ಮರಿಗೆ ಐಕ್ಯವೆಂದು ಅರ್ಥ ಹೇಳಕೂಡದೆನ್ನುತ್ತಾರೆ -

**ಭಾ. ॥ (೧) ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸ- ತ್ಪ್ರತಿಷ್ಠಾಃ ಸತಿ ಸಂಪದ್ಯ ನ ವಿದುಃ ಸತ ಆಗಮ್ಯ ನ ವಿದುರಿತ್ಯಾದೌ ಭೇದ ಏವ ಹ್ಯತ್ರ ಸತಾತ್ಪರ್ಯಂ ಪ್ರತಿಪಾದಿತಃ । (೨) ತಾ ನದ್ಯಃ ಸಮುದ್ರಾದಾಗತ್ಯ ಸಮುದ್ರಂ ಪ್ರವಿ- ಶಂತಿ ಸ ಸಮುದ್ರ ಏವ ಭವತಿ ನ ನದೀಭಾವಂ ಪ್ರಾಪ್ನೋತಿ ಸ ಏವ ಚ ಸಮುದ್ರೋ ಭವತಿ ಸಮುದ್ರ ಏವ ಸಮುದ್ರೋ ಭವತಿ ನ ನದ್ಯ ಇತಿ ಭೇದಸ್ಯೈವಾವಧಾರಣಂ ಕ್ರಿಯತೇ । (೩) ನ ಚ ಸ್ವಕೀಯಸ್ಯ ಬ್ರಹ್ಮಭಾವಸ್ಯಾಜ್ಞೋಽಪಹರ್ತಾ ಭವತಿ। ಕಿಂ ತ್ವವಿದ್ಯ ಮಾನಬ್ರಹ್ಮಭಾವಾಭಿಮಂತ್ರೈವಾಪಹರ್ತಾ ಭವತಿ । ನ ಹಿ ಸ್ವಕೀಯವಿತ್ತಪರಿತ್ಯಾಗ್ಯಪ- ಹರ್ತಾ ಭವತಿ। ಕಿಂತು ಪರಸ್ವಹರ್ತೈವ । (೪) ತಸ್ಮಾದವಿದ್ಯಮಾನಬ್ರಹ್ಮಭಾವಾಭಿಮಂತ್ರೈ- ವಾಪಹಾರ್ಷೀತ್ ಸ್ತೇಯಮಕಾರ್ಷೀದಿತಿ ದೃಷ್ಟಾಂತಪೂರ್ವಕಮುಚ್ಯತೇ ॥॥ ೧೫ ॥**

ಅ ॥ (೧) ***ಸನ್ಮೂಲಾಃ, ಸತಿ ಸಂಪದ್ಯ** ಇತ್ಯಾದಿ ವೇದಗಳಲ್ಲಿ ಭೇದವೇ ತಾತ್ಪರ್ಯಪೂರ್ವಕ ವಾಗಿ ಹೇಳಲ್ಪಟ್ಟಿದೆ. (ಅಂದರೆ (1) **ಸನ್ಮೂಲಾಃ** ಎಂಬುದು ಭೇದವನ್ನೇ ಹೇಳುತ್ತದೆಂದು ಹಿಂದೆ ಹೇಳಿದ ಪ್ರಮಾಣಗಳಿಂದ ತಿಳಿದುಬರುತ್ತದೆ (2) **ಸತಿ ಸಂಪದ್ಯ** ಇತ್ಯಾದಿಗಳಲ್ಲಿ ಸ್ಪಷ್ಟವಾಗಿಯೇ ಭೇದವು ತೋರುವುದು. ಹೇಗೆಂದರೆ ಮನೆಯೊಳಗೆ ಹೊಕ್ಕುವವನಿಗೂ ಮನೆಯಿಂದ ಹೊರಗೆ ಬರುವವನಿಗೂ ಐಕ್ಯವು ಕೂಡಲಾರದಷ್ಟೆ. (3) ಪರಸ್ಪರ ಭಿನ್ನಗಳಾದ ನಾನಾ ವೃಕ್ಷರಸಗಳು, ನದೀ ಸಮುದ್ರಗಳು, ಇವುಗಳನ್ನು ದೃಷ್ಟಾಂತವಾಗಿ ಹೇಳಿದಕಾರಣ ಭೇದದಲ್ಲಿಯೇ ತಾತ್ಪರ್ಯವೆಂದು ತಿಳಿದುಬರುವುದರಿಂದ ಭೇದವೇ ಇಲ್ಲಿ ಹೇಳಿದೆ ಆದಪ್ರಯುಕ್ತ ಭೇದಕ್ಕೆ ವಿರುದ್ಧವಾದ ಐಕ್ಯವನ್ನು **ತತ್ತ್ವಮಸಿ** ಇತ್ಯಾದಿಗಳಲ್ಲಿ ಸರ್ವಥಾ ಹೇಳಲಾಗುವುದಿಲ್ಲ ) (೨) (**ನಾನಾವೃಕ್ಷರಸಾನಾಮೇಕತಾಂ** ಎಂದು ಐಕ್ಯವೇ ಹೇಳಲ್ಪಡುತ್ತದೆಂದು ಹೇಳಕೂಡದು. **ಏಕತಾಂ** ಎಂಬುವುದಕ್ಕೆ ಮಿಶ್ರಣವೆಂದು ಅರ್ಥಹೇಳಬೇಕು. ಏಕೆಂದರೆ—ನಾನಾ ವೃಕ್ಷರಸಗಳು ಪರಸ್ಪರಭೇದ ಬಿಟ್ಟು, ಮೊದಲೇ ಇದ್ದ ಜೇನುವಿನಿಂದ ಐಕ್ಯವನ್ನು ಹೊಂದುವುದಿಲ್ಲ. ಪರಂತು ನೂಲುಗಳು ಮೊದಲು ಇಲ್ಲದ ಬಟ್ಟೆಯನ್ನು ಹೇಗೆ ಮಾಡುತ್ತವೋ, ಹಾಗೆಯೇ ಪರಸ್ಪರ ಭಿನ್ನ ಗಳೇ ಆದ ಪುಷ್ಪರಸಗಳು ಮೊದಲು ಇಲ್ಲದ ಜೇನುವನ್ನು ಹುಟ್ಟಿಸುತ್ತವೆ. ಆದರೂ ನದೀ ಸಮುದ್ರ ದೃಷ್ಟಾಂತದಲ್ಲಿ ನದಿಗಳಿಗೆ ಸಮುದ್ರದಿಂದ ಐಕ್ಯವು ಹೇಳಲ್ಪಡುತ್ತದೆನ್ನಬೇಕು ಎಂದರೆ—ಅಲ್ಲಿಯೂ ಹಾಗೆ ಹೇಳಲಾಗುವುದಿಲ್ಲ. ಏಕೆಂದರೆ ಐಕ್ಯವು ಆಗುತ್ತಿದ್ದರೆ ವೃದ್ಧಿಯು ಕಾಣದೆಹೋಗುತ್ತಿತ್ತು, ವೃದ್ಧಿಯು ಕಾಣುತ್ತಿದೆ, ಎಂಬ ಅಭಿಪ್ರಾಯದಿಂದ **ತಾಃ ಸಮುದ್ರಾತ್** ಇತ್ಯಾದಿಗಳಿಗೆ ಅರ್ಥಹೇಳುತ್ತಾರೆ—) ನದಿ ಗಳು ಸಮುದ್ರದಿಂದ (ನಿಯಮಿತ ಜಲರಾಶಿಯಿಂದ) ಬಂದು ಸಮುದ್ರಕ್ಕೆ ಪ್ರವೇಶಿಸುತ್ತವೆ. ಸಮುದ್ರವು ಸಮುದ್ರವೇ ಆಗುತ್ತದೆ. ನದೀಭಾವವನ್ನು ಹೊಂದುವುದಿಲ್ಲ. (**ಸಮುದ್ರ ಏವ ಭವತಿ** ಎಂಬ ವಾಕ್ಯಕ್ಕೆ

* ಇವುಗಳ ಅರ್ಥವು ೩೦೨ನೇ ಪುಟದಲ್ಲಿ ಹೇಳಲ್ಪಟ್ಟಿದೆ,

ಸಮುದ್ರವು ನದಿಯಾಗುವುದಿಲ್ಲವೆಂದು ಅರ್ಥಹೇಳಿ ಈಗ ನದಿಗಳು ಸಮುದ್ರವಾಗುವುದಿಲ್ಲವೆಂದೂ ಅರ್ಥ ಹೇಳುತ್ತಾರೆ.) ಸಮುದ್ರವೇ ಸಮುದ್ರವಾಗುತ್ತದೆ. ನದಿಗಳು ಸಮುದ್ರಭಾವವನ್ನು ಹೊಂದುವುದಿಲ್ಲ. ಹೀಗೆ ಅವುಗಳಿಗೆ ಭೇದವೇ ಹೇಳಲ್ಪಡುತ್ತದೆ (ಏವಂಚ ಆ ದೃಷ್ಟಾಂತದಿಂದ **ಸ ತ ಆಗಮ್ಯ** ಇತ್ಯಾದಿ ದಾರ್ಷ್ಟಾಂತಿಕ ವಾಕ್ಯದಲ್ಲಿಯೂ ಭೇದವೇ ಹೇಳಲ್ಪಡುತ್ತದೆ.) (೩) (ಸತ್ಯವಾದ ಬ್ರಹ್ಮಾತ್ಮೈಕ್ಯವನ್ನು ಬಿಟ್ಟ ಭೇದಜ್ಞಾನಿಯೇ **ಅಪಹಾರ್ಷೀತ್** ಇದಿರಿಗೆ ಕದ್ದನು. **ಸ್ತೇಯಮಕಾರ್ಷೀತ್** ಹಿಂದಿನಿಂದ ಕದ್ದನು ಎಂದು ದೃಷ್ಟಾಂತಪೂರ್ವಕವಾಗಿ ಹೇಳಲ್ಪಡುತ್ತಾನೆ, ಹೀಗೆ ಭೇದಜ್ಞಾನಿಗೇನೇ ಆ ದೃಷ್ಟಾಂತ ದಿಂದ ಅನರ್ಥಫಲವು ಹೇಳಲ್ಪಡುತ್ತದೆ. ಎಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ.) (ಪರರ ಮತ ದಲ್ಲಿ ಜೀವನಿಗೆ ಬ್ರಹ್ಮತ್ವವು ಉಂಟೆಂದು ಸಾಧಿಸಲ್ಪಟ್ಟದೆ. ಜೀವನಿಗೆ ಬ್ರಹ್ಮತ್ವವು ಇಲ್ಲವಾದರೆ ಬ್ರಹ್ಮಾ ತ್ಮೈಕ್ಯ ಜ್ಞಾನವು ಇಲ್ಲದಿರುವುದರಿಂದ ಅನರ್ಥವು ಹೇಳಿದ್ದೂ ಕೂಡದೆ ಹೋಗುವುದು. ಏವಂಚ) ವಾಸ್ತವಿಕವಾಗಿ ಉಂಟೆಂದು ತಿಳಿದುದರಿಂದ ಸ್ವಕೀಯವಾದ ಬ್ರಹ್ಮತ್ವವನ್ನು ತಿಳಿಯದ ಭೇದ ವಾದಿಯು ಅಪಹಾರಿಗೆ ದೃಷ್ಟಾಂತನಾಗುವುದಿಲ್ಲ. ಪರಂತು ತನ್ನಲ್ಲಿ ಇಲ್ಲದಿರುವ ಬ್ರಹ್ಮನಲ್ಲಿಯೇ ಇರುವ ಬ್ರಹ್ಮತ್ವವನ್ನು ತನ್ನಲ್ಲಿಯೇ ಇರುವುದೆಂದು ತಿಳಿದವನೇ, (ಐಕ್ಯಜ್ಞಾನಿಯು) ಅಪಹಾರಿಗೆ ದೃಷ್ಟಾಂತ ನಾಗುತ್ತಾನೆ. (ತನ್ನದ್ದೇ ಆದ ಬ್ರಹ್ಮತ್ವವನ್ನು ಬಿಟ್ಟವನು ಅಪಹರಿಸಿದವನಿಗೆ ದೃಷ್ಟಾಂತನು ಏಕೆ ಆಗುವುದಿಲ್ಲ ಎಂದರೆ—) ಲೋಕದಲ್ಲಿ ತನ್ನ ದ್ರವ್ಯವನ್ನು ಪರಿತ್ಯಾಗಮಾಡಿದವನು ಅಪಹಾರಮಾಡಿದವ ನೆನಿಸಿಕೊಳ್ಳುವುದಿಲ್ಲ. (ಮೂಢನಾಗಲೀ ವಿರಕ್ತನಾಗಲೀ ತನ್ನ ದ್ರವ್ಯವನ್ನು ಬಿಡುತ್ತಾನೆ. ಏವಂಚ ಭೇದಜ್ಞಾನಿಯು ಅಪಹಾರಿಗೆ ದೃಷ್ಟಾಂತನಾಗುವುದಿಲ್ಲ.) ಪರಂತು ಇನ್ನೊಬ್ಬರ ದ್ರವ್ಯವನ್ನು ಅಪಹರಿಸು ವವನೇ ಅಪಹರ್ತಾ ಎನಿಸುತ್ತಾನೆ. (೪) ಅದುಕಾರಣ ಲೋಕಾನುಸಾರವಾಗಿ ವಸ್ತುತಃ ತನ್ನಲ್ಲಿಲ್ಲ ದಿರುವ ಬ್ರಹ್ಮತ್ವವನ್ನು ತನಗೆ ಇದೆ, ಎಂದು ತಿಳಿದವನೇ **ಅಪಹಾರ್ಷೀತ್** ಇದಿರುಕದ್ದನು, **ಸ್ತೇಯಮ ಕಾರ್ಷೀತ್** ಹಿಂದಿನಿಂದ ಕದ್ದನು, ಎಂದು ದೃಷ್ಟಾಂತಪೂರ್ವಕವಾಗಿ ಹೇಳಲ್ಪಡುತ್ತಾನೆ. (ಆದಕಾರಣ ಜೀವಬ್ರಹ್ಮೈಕ್ಯವನ್ನು ತಿಳಿದವನಿಗೇನೇ ಆ ದೃಷ್ಟಾಂತದಿಂದ ಅನರ್ಥಫಲವು ಹೇಳಲ್ಪಡುತ್ತದೆ. ಅದರ ವಿರೋಧದಿಂದ ತತ್ತ್ವಮಸ್ಯಾದಿ ವಾಕ್ಯಗಳಿಗೆ ಐಕ್ಯವು ಅರ್ಥವಲ್ಲ) ॥ ೧೫ ॥

**ಟೀ**—ಹೀಗೆ ಹೇಳುವುದು ಅಯುಕ್ತವು. ಏಕೆಂದರೆ—ಲೋಕದಲ್ಲಿ ಈ ದ್ರವ್ಯವು ಬೇರೆಯವರದ್ದೇ. ನನ್ನದು ಅಲ್ಲವೇಅಲ್ಲ. ಎಂದು ತಿಳಿದವನು ವಂಚನೆಯಿಂದ ಆ ದ್ರವ್ಯವು ತನ್ನದ್ದೆಂದು ಮಾಡುವವನು ಕಳ್ಳನು. ನೋಡುತ್ತಿರುವಾಗಲೇ ಕದಿಯುವುದು ಅಪಹಾರವು. ಐಕ್ಯಜ್ಞಾನಿಗೆ ಪರಕೀಯವಾದ ಬ್ರಹ್ಮ ತ್ವವನ್ನು ವಂಚನೆಯಿಂದ ಅಥವಾ ಬಲಾತ್ಕಾರದಿಂದ ತನ್ನದ್ದೆಂದು ಮಾಡಲು ಶಕ್ಯವಲ್ಲ. ಅದುಕಾರಣ ಐಕ್ಯಜ್ಞಾನಿಯು ಸ್ತೇನನೂ ಅಪಹರ್ತನೂ ಹೇಗೆ ಆಗುವನು? ಎಂದರೆ—

**ಭಾ. ॥ (೧) ಅದುಃಖಿತ್ವಪೂರ್ಣಜ್ಞಾನಾನಂದಸ್ವಾತಂತ್ರ್ಯಾದಿಬ್ರಹ್ಮಸ್ವಭಾವಾನನು- ಭವಂ ಸ್ವಾತ್ಮನೋಽಪಿ ವಿಜ್ಞಾತ್ವೈವ ತದ್ಭಾವಾಭಿಮತೇಃ ಸ್ತೈನ್ಯಂ । ಪರಕೀಯಾಭಿಮತೇ- ರಪಹಾರಃ । (೨) ಪರಸ್ವಭಾವಾಭಿಮತೇರಪಹರ್ತಾ ಸ್ವವಂಚನಾತ್ । ಸ್ತೇನಶ್ಚಾಭೇದ- ವೇತ್ತಾ ತು ಬ್ರಹ್ಮಣಾ ಹನ್ಯತೇ ಸದೇತಿ ತತ್ತ್ವವಿವೇಕೇ । (೩) ನ ಚ ದಾರ್ಢ್ಯಮಾತ್ರೇ ದೃಷ್ಟಾಂತೋಽಯಂ । ಸ ಯದಿ ತಸ್ಯ ಕರ್ತಾ ಭವತಿ ಸ ಯದಿ ತಸ್ಯ ಕರ್ತಾ ನ ಭವತೀತಿ ಹತಿಮುಕ್ತ್ಯೋರಪಹಾರಾನಪಹಾರೈಕಹೇತುಕತ್ವಶ್ರುತೇಃ । ಅನ್ಯಥಾ ಯದಿ ದೃಢೋ ಭವತಿ ಯದ್ಯದೃಢೋ ಭವತೀತ್ಯುಚ್ಯೇತ । (೪) ನ ಚ ಸತ್ಯಾಸತ್ಯಮಾತ್ರಂ । ತದಾ ಸತ್ಯಾ- ನೃತವಾದ್ದೃಷ್ಟಾಂತೇನ ಪೂರ್ತೇರಪಹಾರದೃಷ್ಟಾಂತೋ ನ ಸ್ಯಾತ್ । (೫) ತಸ್ಮಾದಭೇದ-**

**ಜ್ಞಾನೇನ ಮುಹಾಂತಂ ವಿನಾಶಂ ಪ್ರದರ್ಶ್ಯ ಭೇದಜ್ಞಾನಾನ್ಮುಕ್ತಿಪರಮೇವೈತದ್ವಾಕ್ಯಂ ॥ ॥ ೧೬ ॥**

**ಅ ॥** (೧) ದುಃಖಲೇಶವಿಲ್ಲದಿರುವಿಕೆ, ಪರಿಪೂರ್ಣಜ್ಞಾನ, ಆನಂದ ಸರ್ವಸ್ವಾತಂತ್ರ್ಯ ಮೊದಲಾದ ಪರಬ್ರಹ್ಮನ ಧರ್ಮಗಳನ್ನು ತಿಳಿದುಕೊಂಡು (ಅಂದರೆ ಬ್ರಹ್ಮತ್ವವು ಪರಬ್ರಹ್ಮನದ್ದೇ, ತನ್ನದಲ್ಲ ಎಂದು ತಿಳಿದುಕೊಂಡಿದ್ದರೂ) ವಂಚನೆಯಿಂದ ಬ್ರಹ್ಮನ ಧರ್ಮವು ತನ್ನದೇ ಎಂದು ತಿಳಿದಿರುವುದರಿಂದ ಕಳ್ಳನು (ಅಂದರೆ ತಾನು ದುಃಖಿ ಅಜ್ಞಾನಿ ಅಸ್ವತಂತ್ರ ಅಪೂರ್ಣ ಇದುಮೊದಲಾದ ತನ್ನ ಅನುಭವಗಳನ್ನೂ ವಂಚನೆ ಮಾಡಿದುದರಿಂದ ಐಕ್ಯಜ್ಞಾನಿಯು ಕಳ್ಳನು.) ಪರಬ್ರಹ್ಮನದ್ದಾದ ಬ್ರಹ್ಮತ್ವವನ್ನು ಪರಬ್ರಹ್ಮನು ನೋಡುತ್ತಿದ್ದ ಹಾಗೆ ತನ್ನದ್ದೆಂದು ಹೇಳುತ್ತಾ ಇದಿರು ಅಪಹರಿಸಿದ ಕಾರಣ ಅಪಹರ್ತಾ ಎನಿಸುತ್ತಾನೆ. (೨) (ಬೇರೆಯವರ ದ್ರವ್ಯವನ್ನು ತನ್ನದ್ದನ್ನಾಗಿ ತಿಳಿಯುವವನು ಕಳ್ಳನು. ಅಥವಾ ಅಪಹಾರಿಯಾಗುವನು. ಐಕ್ಯಜ್ಞಾನಿಯು ಹಾಗಲ್ಲ, ಅದುಕಾರಣ ಸ್ತೇನನಾಗಲೀ ಅಪಹಾರಿಯಾಗಲೀ ಆಗಲಾರನು, ಎಂದರೆ ಹಾಗೆ ಹೇಳಕೂಡದು ಐಕ್ಯಜ್ಞಾನಿಯು ಸ್ತೇನಾಪಹಾರಿಗಳಿಗೆ ಸದೃಶನೆಂದು ಹೇಳುತ್ತೇವೆ. ದೃಷ್ಟಾಂತ ದಾರ್ಷ್ಟಾಂತಿಕಗಳಲ್ಲಿ ಸರ್ವಸಾಮ್ಯವು ಇರಲಾರದು. ಪ್ರಕೃತ ಜೀವಬ್ರಹ್ಮರಿಗೆ ಅಭೇದವೆಂದುತಿಳಿದವನು ಬ್ರಹ್ಮಧರ್ಮಗಳಾದ ಸರ್ವಜ್ಞತ್ವಾದಿಗಳನ್ನು ಅಪಲಾಪ ಮಾಡಿದ ಕಾರಣಅಪಹರ್ತನು. ತನ್ನಲ್ಲಿದ್ದ ದುಃಖಮೊದಲಾದ ಅನುಭವಗಳನ್ನು ವಂಚನೆಮಾಡಿದ ಕಾರಣ ಸ್ತೇನ(ಕಳ್ಳ)ನು. ಅದುಕಾರಣ ಸ್ತೇನನೂ ಅಪಹಾರಿಯೂ ಆದ ಐಕ್ಯಜ್ಞಾನಿಗೆ ಅನರ್ಥಗಳು ಹೆಚ್ಚು ಇವೆ, ಎಂಬಲ್ಲಿ ಪ್ರಮಾಣ ಹೇಳುತ್ತಾರೆ.) ಜೀವಬ್ರಹ್ಮರಿಗೆ ಅಭೇದವೆಂದು ತಿಳಿದವನು ಪರಬ್ರಹ್ಮನ ಧರ್ಮವು ತನಗೆ, ಪರಬ್ರಹ್ಮನೇ ತಾನು, ಎಂದು ತಿಳಿದ ಕಾರಣ ಅಪಹರ್ತನೆಂದೂ, ತನಗಿದ್ದ ದುಃಖಾದ್ಯನುಭವಗಳನ್ನು ವಂಚನೆಮಾಡಿದ ಕಾರಣ (ಅಂದರೆ ತಾನು ಬ್ರಹ್ಮನಾದುದರಿಂದ ತನಗೆ ದುಃಖಾದಿಗಳು ಇಲ್ಲವೆಂದು ತಿಳಿದಕಾರಣ) ಸ್ತೇನನೆಂದೂ ಅನ್ನಿಸುತ್ತಾನೆ. ಅಂತಹವನನ್ನು ಶ್ರೀಹರಿಯು ಸದಾ ಅಂಧಂತಮಸ್ಸಿನಲ್ಲಿ ಕೆಡಹುತ್ತಾನೆ, ಎಂದು ತತ್ವವಿವೇಕದಲ್ಲಿದೆ. (೩) (ಸ್ತೇನ ಅಪಹಾರಿಗಳ ದೃಷ್ಟಾಂತದಿಂದ ಐಕ್ಯಜ್ಞಾನಿಗೆ ಅನರ್ಥವು ಹೇಳುತ್ತದೆಂಬುವುದು ಅಯುಕ್ತವು. ಏಕೆಂದರೆ—ದೃಷ್ಟಾಂತವಾಕ್ಯದಲ್ಲಿ **ಅಥ ಹನ್ಯತೇ ಅಥ ಮುಚ್ಯತೇ** ಎಂದು ಹೇಳಿದ್ದಕ್ಕೆ ಅಪಹಾರಮಾಡಿದವನನ್ನು ಜೈಲಿನಲ್ಲಿ ಹಾಕುವುದು, ಮಾಡದಿರುವವನನ್ನು ಬಿಡುವುದು, ಎಂದರ್ಥವಲ್ಲ ಪರಂತು ಕದ್ದವನು, ಕದಿಯದವನು, ಇವರ ಮಧ್ಯದಲ್ಲಿ ಶಪಥಪೂರ್ವಕ ವಿಚಾರಮಾಡುವಾಗ ಯಾವನು ಸರ್ವಥಾ ತಾನು ಕದಿಯಲಿಲ್ಲವೆಂದು ಸುದೃಢನಾಗಿ ಹೇಳುತ್ತಾನೋ, ಆತನನ್ನು ಬಿಡುತ್ತಾರೆ. ಯಾವನು ಧೈರ್ಯವಿಲ್ಲದವನಾಗಿ ಹೇಳುತ್ತಾನೋ, ಆತನನ್ನು ಜೈಲಿಗೆ ಹಾಕುತ್ತಾರೆ. ಅದು ಕಾರಣ ಬಿಡಲಿಕ್ಕೆ ದಾರ್ಢ್ಯವೂ ಜೈಲಿನಲ್ಲಿ ಹಾಕಲಿಕ್ಕೆ ದಾರ್ಢ್ಯವಿಲ್ಲದಿರುವುದೂ ಕಾರಣ ಎಂದರ್ಥವು. ಏವಂಚ ಆ ದೃಷ್ಟಾಂತದಿಂದ ಐಕ್ಯಜ್ಞಾನಿಯನ್ನು ವಿಚಾರಮಾಡುವಾಗ ತಾನು ಬ್ರಹ್ಮನೇ ಎಂಬುವಲ್ಲಿ ಅತಿಧೈರ್ಯವುಳ್ಳವನಾದರೆ ಮುಕ್ತನಾಗುತ್ತಾನೆ (ಬ್ರಹ್ಮೈಕ್ಯವನ್ನು ಹೊಂದುತ್ತಾನೆ) ಧೈರ್ಯವಿಲ್ಲದೆ ಸಂದೇಹವುಳ್ಳವನಾದರೆ ಮುಕ್ತನಾಗುವುದಿಲ್ಲ, ಸಂಸಾರಾದಿಗಳಲ್ಲಿರುತ್ತಾನೆಂದು ಅರ್ಥವನ್ನು ಇಟ್ಟುಕೊಳ್ಳಬೇಕು, ಎಂದು ಕೆಲವರು ಹೇಳುವರು. ಅದು ಅಯುಕ್ತವೆನ್ನುತ್ತಾರೆ.) ದಾರ್ಢ್ಯಮಾತ್ರವು ಬಿಡುಗಡೆಹೊಂದಲಿಕ್ಕೆ ಕಾರಣವು ಎಂಬಲ್ಲಿಯೂ (ದಾರ್ಢ್ಯಮಾತ್ರ ಇಲ್ಲದಿರುವುದು ಸಂಸಾರದಲ್ಲಿ ಇರಲಿಕ್ಕೆ ಕಾರಣವು ಎಂಬಲ್ಲಿಯೂ) ಇದು ದೃಷ್ಟಾಂತನಾಗಲಾರದು. (ಏಕೆಂದರೆ **ಸ ಯು ತಸ್ಯ ಕರ್ತಾ ಭವತಿ** ಎಂಬ ವೇದವಲ್ಲಿ ಜೈಲಿನಲ್ಲಿ ಹಾಕಲಿಕ್ಕೆ ಅಪಹಾರವೇ ಕಾರಣವು, ಜೈಲಿನಿಂದ ಬಿಡಲಿಕ್ಕೆ ಕದಿಯದಿರುವುದೇ ಕಾರಣವು, ಎಂದು ಹೇಳಿಯದೆ. (ಪರರು ಹೇಳಿದ ಅರ್ಥದಲ್ಲಿ ಬಾಧಕ ಹೇಳುತ್ತಾರೆ.) ಬಿಡಲಿಕ್ಕೆ ದಾರ್ಢ್ಯಮಾತ್ರವೂ ಬಿಡದಿರಲಿಕ್ಕೆ ದಾರ್ಢ್ಯವಿಲ್ಲದಿರುವುದು ಮಾತ್ರವೂ ಕಾರಣವೆಂದು ಹೇಳಿದರೆ **ಸ ಯದಿ ದೃಢೋ ಭವತಿ ಅಥ ಮುಚ್ಯತೇ ಸ ಯದ್ಯದೃಢೋ ಭವತಿ ಅಥ ಹನ್ಯತೇ** ಎಂದೇ ಹೇಳಬೇಕಿತ್ತು, (ಅದು ಕಾರಣ ಅವರ

ಅರ್ಥವು ಯುಕ್ತವಲ್ಲ.) (೪) (ಈ ವಿಷಯದಲ್ಲಿ ಅದ್ವೈತಭಾಷ್ಯಕಾರರು ಹೀಗೆ ಹೇಳುತ್ತಾರೆ. ಹೇಗೆಂದರೆ ಇಲ್ಲಿ ದೃಷ್ಟಾಂತ ವಾಕ್ಯದಲ್ಲಿ ಸತ್ಯವಾದಿಯು ಅಸತ್ಯವಾದಿಯು ಎಂದಿಷ್ಟು ಮಾತ್ರ ವಿವಕ್ಷಿತವಾಗಿದೆ. ಕಾಯಿಸಿದ ಕಬ್ಬಿಣವನ್ನು ಕೈಯಲ್ಲಿ ಕೊಟ್ಟಾಗ ಕದ್ದವನು ಕದಿಯದವನು ಇವರಲ್ಲಿ ಸುಳ್ಳು ಆಡಿದವನ ಕೈಸುಡುತ್ತದೆ. ಸತ್ಯನುಡಿದವನ ಕೈಸುಡುವುದಿಲ್ಲ. ಹೀಗೆಯೇ ಬ್ರಹ್ಮಾತ್ಮೈಕ್ಯವು ಸತ್ಯವೆಂದು ತಿಳಿದ ವಿದ್ವಾಂಸನು ಸದ್ರೂಪ ಬ್ರಹ್ಮನನ್ನು ಹೊಂದಿ ತಿರುಗಿ ಬರುವುದಿಲ್ಲ. ಸುಳ್ಳುಹೇಳಿದ ಅಜ್ಞನು ಸಂಸಾರಕ್ಕೆ ತೆರಳಿ ಬರುತ್ತಾನೆನ್ನುವರು. ಇದು ಅಯುಕ್ತವೆನ್ನುತ್ತಾರೆ.) ಸತ್ಯನುಡಿಯುವಿಕೆ, ಸುಳ್ಳುನುಡಿಯುವಿಕೆ, ಎಂದಿಷ್ಟು ಮಾತ್ರ ಇಷ್ಟವೆಂದಲ್ಲ. (ಏಕೆಂದರೆ) (ಪರರು ಹೇಳಿವಂತೆಯೇ ಸತ್ಯನುಡಿ ಸುಳ್ಳುನುಡಿ ಮಾತ್ರ ಹೇಳಲಿಷ್ಟವೆಂದಾಗಿದ್ದರೆ) ಆಗ **ಸಃ ಸತ್ಯಾಭಿಸಂಧ........ಮುಚ್ಯತೇ** ಎಂದೂ **ಸಃ ಅನೃತಾಭಿಸಂಧಃ.... ಹನ್ಯತೇ** ಎಂಬೀ ಸತ್ಯನುಡಿ, ಸುಳ್ಳುನುಡಿ ದೃಷ್ಟಾಂತವೇ ಸಾಕಾಗುತ್ತಿತ್ತು. **ಸ ಯದಿ ತಸ್ಯ ಕರ್ತಾ ಭವತಿ** ಇತ್ಯಾದ್ಯುಪಹಾರದೃಷ್ಟಾಂತವು ಕೂಡದೆ ಹೋಗುವುದು (೫) (ಪರರು ಹೇಳುವ ಅರ್ಥವು ಕೂಡದಿರುವುದರಿಂದ (**ಅಥ ಹನ್ಯತೇ** ಎಂಬಪರ್ಯಂತ ಸ್ತೇನ ಅಪಹಾರಿದೃಷ್ಟಾಂತದಿಂದ) ಜೀವೇಶ್ವರರ ಐಕ್ಯಜ್ಞಾನದಿಂದ ಮಹಾ ಅನರ್ಥವನ್ನು ತೋರಿಸಿ **ಅಥ ಮುಚ್ಯತೇ** ಎಂಬ ಪರ್ಯಂತ (ಅನಪಹರ್ತೃಗೆ ದೃಷ್ಟಾಂತವಾದ) ಭೇದ ಜ್ಞಾನದಿಂದಲೇ **ಪುರುಷಂ ಸೋಮ್ಯ** ಇತ್ಯಾದಿ ಮಹಾವಾಕ್ಯವು ಮೋಕ್ಷವಾಗುತ್ತದೆಂದೇ ಬೋಧಿಸುತ್ತದೆ.

**೬ ||** **ತತ್ತ್ವಮಸಿ** ಇತ್ಯಾದಿ ವಾಕ್ಯಗಳಿಗೆ ಈ ಪ್ರಕರಣವು ವಿರೋಧವು ಬರುವುದರಿಂದ ಜೀವೇಶ್ವರರಿಗೆ ಐಕ್ಯವಿದೆ ಎಂಬುವಲ್ಲಿ ತಾತ್ಪರ್ಯವಿಲ್ಲ, ಆದಕಾರಣ ಜೀವೇಶ್ವರರಿಗೆ ಐಕ್ಯದಲ್ಲಿ ತಾತ್ಪರ್ಯವಿದೆ ಎಂಬುವಲ್ಲಿ ಯಾವ ಪ್ರಮಾಣವೂ ಇಲ್ಲ, ಅದು ಕಾರಣ ಶ್ರೀವಿಷ್ಣುವು ಸರ್ವೋತ್ಕೃಷ್ಟನು ಎಂಬುವಲ್ಲಿಯೇ ಎಲ್ಲಾ ಪ್ರಮಾಣಗಳಿಗೂ ಮುಖ್ಯ ತಾತ್ಪರ್ಯವು. ಆದುದರಿಂದ ಐಕ್ಯವೆಂದು ಇಟ್ಟುಕೊಂಡರೆ ಮಹಾತಾತ್ಪರ್ಯವಿರೋಧವು ಬರುತ್ತದೆ, ಎಂದು ಸಿದ್ಧವಾಯಿತು || ೧೫ ||

**ಪೀ**—ಎಲ್ಲಾ ಆಗಮಗಳಿಗೆ ವಿಷ್ಣುವು ಸರ್ವೋತ್ಕೃಷ್ಟನು ಎಂಬುವಲ್ಲಿ ಮಹಾತಾತ್ಪರ್ಯವಿರಲಿ, ಆದರೂ ಅಭೇದವನ್ನು ಅಂಗೀಕರಿಸಿದರೆ ಅದರಿಂದ ವಿರೋಧಬರುವುದು ಹೇಗೆ? ಭೇದಾಭೇದವನ್ನು ಒಡಂಬಟ್ಟ ಪ್ರಯುಕ್ತ ಯಾವಅನುಪಪತ್ತಿಯೂ ಇಲ್ಲ, ಎಂದು ಭೇದಾಭೇದವಾದಿಗಳು ಹೇಳುತ್ತಾರೆ. ಅದೂ ಅಯುಕ್ತವೆನ್ನುತ್ತಾರೆ—

**ಭಾ. || (೧) ಭಿನ್ನಸ್ಯೈವೋತ್ಕರ್ಷೋ ಭವತಿ (ಇತಿ) | ಅಭಿನ್ನಸ್ಯ ಕುತ ಉತ್ಕರ್ಷಃ ಸ್ಯಾತ್ | ಅಜ್ಞಾನದುಃಖಯುಕ್ತತ್ವಾಚ್ಚ | (೨) ನ ಹಿ ತತ್ಪಕ್ಷೇ ಪರಮಾರ್ಥದುಃಖಿನೋ ಭ್ರಾಂತ್ಯಾ ದುಃಖಿನಶ್ಚ ತತ್ಕಾಲೇ ಕಶ್ಚಿದ್ವಿಶೇಷಃ | (೩) ಅಸ್ವಾತಂತ್ರ್ಯಂ ಚ ಭ್ರಾಂತಸ್ಯ ನಿಶ್ಚಿತಮೇವ | ನ ಹಿ ಭ್ರಮಃ ಸ್ವೇಚ್ಛಯಾ ಯುಜ್ಯತೇ | (೪) ಸ್ವಾತ್ಮಾನಂ ಪರಮಂ ವಿಷ್ಣುಂ ವಿದಿತ್ವೈವ (ತ್ವಾಽಪಿ) ಸ ರಾಘವಃ | ದೈತ್ಯಾನಾಂ ಮೋಹನಾರ್ಥಾಯ ದರ್ಶಯಾಮಾಸ ಮೂಢತಾಮಿತಿ (ಚ) ಪಾದ್ಮೇ || || ೧೬ ||**

**ಅ ||** (೧) ಭೇದವಿದ್ದರೇನೇ ಒಬ್ಬರಿಂದ ಇನ್ನೊಬ್ಬರಿಗೆ ಉತ್ತಮತ್ವವು ಕಂಡದೆ ಯಾರಿಂದಲೂ ಭೇದವೇ ಇಲ್ಲವಾದರೆ ಯಾರಿಗೆ ಯಾರಿಂದ ಉತ್ತಮತ್ವವನ್ನು ಹೇಳುವುದು (ಭೇದಾಭೇದದಲ್ಲಿ ಭೇದವು ಸೇರಿದ್ದರೂ ಅಭೇದವೂ ಇದ್ದಪ್ರಯುಕ್ತ ಉತ್ತಮತ್ವವು ಸಿದ್ಧವಾಗಲಾರದು.) (ಬ್ರಹ್ಮನು ಜೀವನಿಂದ ಅಭಿನ್ನನೆಂದಾದರೆ–ಬ್ರಹ್ಮನಿಗೆ ಉತ್ತಮತ್ವವು ಕೂಡಲಾರದು, ಎಂಬಲ್ಲಿ ಇನ್ನೊಂದು ಯುಕ್ತಿ ಹೇಳುತ್ತಾರೆ.)

ಅಜ್ಞಾನ ದುಃಖಮೊದಲಾದವು ಇರುವ ಜೀವನಿಂದ ಬ್ರಹ್ಮನಿಗೆ ಅಭೇದವೆಂದು ಹೇಳಿದರೆ. ಬ್ರಹ್ಮನಿಗೂ ಅಜ್ಞಾನ ದುಃಖಮೊದಲಾದುದು ಬರಬೇಕಾಗುವುದರಿಂದ ಉತ್ತಮತ್ವವು ಕೂಡಲಾರದು. ಪರಂತು ನಿಕೃಷ್ಟತ್ವವೇ ಬಂದೀತು. (೨) (1) (ಬ್ರಹ್ಮನಿಗೆ ಜೀವನಿಂದ ಅಭೇದವಿದ್ದರೂ ಬ್ರಹ್ಮನು ಸರ್ವೋತ್ಕೃಷ್ಟನು ಎಂಬುದಕ್ಕೆ ಹಾನಿಯಿಲ್ಲ ಬ್ರಹ್ಮನಿಗೆ ಭ್ರಮೆಯಿಂದಲೇ ದುಃಖ ಅಜ್ಞಾನಾದಿಗಳು ಇವೆ. ಜೀವರಿಗೆ ಪಾರಮಾರ್ಥಿಕವಾಗಿಯೇ ದುಃಖಾದಿಗಳಿವೆ. ಭ್ರಮೆಯಿಂದ ದುಃಖಾದಿಗಳು ಇರುವವನು ಪಾರಮಾರ್ಥಿಕವಾಗಿ ಸರ್ವೋತ್ತಮನಾಗಲಿಕ್ಕೆ ಯಾವ ಬಾಧೆಯೂ ಇಲ್ಲ. ಸರ್ವೋತ್ತಮತ್ವಕ್ಕೆ ಹಾನಿಯಿದ್ದರೆ ರಾಮಕೃಷ್ಣಾದಿಗಳಲ್ಲಿಯೂ ಉತ್ತಮತ್ವವು ಇಲ್ಲವೆಂದಾಗಬೇಕಾಗುವುದು, ಎಂದು ಹೇಳಕೂಡದು. ಪಾರಮಾರ್ಥಿಕವಾಗಿ ದುಃಖವುಳ್ಳ ಜೀವರಿಂದ ಅಭೇದವಿದ್ದರೆ ಬ್ರಹ್ಮನಿಗೂ ಪಾರಮಾರ್ಥಿಕವಾಗಿ ದುಃಖಾದಿಗಳು ಇರಲೇಬೇಕಾಗುವುವು. (2) ಮತ್ತು ಭ್ರಮೆಯಿಂದ ದುಃಖಾದಿಗಳಿರುವ ಬ್ರಹ್ಮನಿಗೂ ವಾಸ್ತವಿಕವಾಗಿ ದುಃಖವುಳ್ಳ ಜೀವರಂತೆ ಉತ್ತಮತ್ವವಿಲ್ಲವೆಂದೇ ಆಗುವುದು. * ಭ್ರಮೆಗೊಂಡವನಿಗೆ ಬಾಧಜ್ಞಾನವು ಬಂದ ಮೇಲೆ ಅದಲ್ಲವೆಂದು ತಿಳಿದರೂ ಭ್ರಮೆಕಾಲದಲ್ಲಿ ದುಃಖಾನುಭವವು ಭ್ರಮೆಯಿದ್ದವನಿಗೂ ಭ್ರಮೆಯಿಲ್ಲದನಿಗೂ ಸಮವೇ ಆಗಿದೆ. (ವಾಸ್ತವಿಕವಾಗಿ ಮಗನು ಸತ್ತುಹೋದರೆ ಪಾರಮಾರ್ಥಿಕವಾಗಿ ದುಃಖವುಳ್ಳವನಿಗೂ, ಮಗನು ಸತ್ತುಹೋಗದೆ ಸತ್ತುಹೋದನು ಎಂಬ ಭ್ರಮೆಯಿಂದ ದುಃಖವುಳ್ಳವನಿಗೂ, ಆ ಕಾಲದಲ್ಲಿ ಯಾವ ವಿಶೇಷವೂ ಇಲ್ಲ, ಎನ್ನುತ್ತಾರೆ.) ಅದ್ವೈತಿಗಳ ಪಕ್ಷದಲ್ಲಿ ಸ್ವಾಭಾವಿಕವಾಗಿ ದುಃಖವುಳ್ಳವನಿಗೂ, ಭ್ರಮೆಯಿಂದ ದುಃಖಗೊಂಡವನಿಗೂ, ಆಕಾಲವಲ್ಲಿ ಯಾವುದೊಂದು ವಿಶೇಷವೂ ಇಲ್ಲ. (೩) (ಮತ್ತು ಬ್ರಹ್ಮನಿಗೆ ಭ್ರಮೆಯಿಂದ ದುಃಖವನ್ನು ಒಡಂಬಟ್ಟರೆ ಆಗ ಬ್ರಹ್ಮನು ಭ್ರಾಂತನಾದುದರಿಂದ ಅವನಿಗೆ ಸ್ವಾತಂತ್ರ್ಯವು ಇಲ್ಲವೆಂದಾಗುವುದು, ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.) ಭ್ರಮೆಗೊಂಡವನಿಗೆ ಸ್ವೇಚ್ಛಾನುಸಾರಿತ್ವವು ಇಲ್ಲವೆಂಬುದು ನಿಶ್ಚಿತವೇ ಆಗಿದೆ. (ಭ್ರಾಂತನಿಗೂ ಸ್ವೇಚ್ಛಾನುಸಾರಿತ್ವವು ಏಕೆ ಆಗಲಾರದೆಂದರೆ) ತನ್ನ ಇಚ್ಛಾನುಸಾರ ಭ್ರಮೆಯು ಕೂಡಲಾರದು (೪) (ತನ್ನ ಸ್ವರೂಪ ಪರಿಜ್ಞಾನವಿಲ್ಲದಿರುವುದರಿಂದ ಭ್ರಮೆಯಿಂದ ದುಃಖಗೊಂಡ ರಾಮನಿಗೆ ಹೇಗೆ ಸರ್ವೋತ್ತಮತ್ವಕ್ಕೆ ಹಾನಿಯಿಲ್ಲವೋ, ಹಾಗೆಯೇ ಬ್ರಹ್ಮನಿಗೂ ಏಕೆ ಆಗಲಾರದು. ಎಂದರೆ ದೃಷ್ಟಾಂತವೇ ಕೂಡುವುದಿಲ್ಲವೆನ್ನುತ್ತಾರೆ.) ಆ ರಾಮನು ತಾನು ಸರ್ವೋತ್ತಮನಾದ ವಿಷ್ಣುವು ಎಂದು ತಿಳಿದುಕೊಂಡೇ ದೈತ್ಯರಿಗೆ ಅಜ್ಞಾನಾದಿಗಳು ಹುಟ್ಟುವುದಕ್ಕಾಗಿ ಮೌಢ್ಯವನ್ನು (ದುಃಖಾದಿಗಳನ್ನು) ತೋರಿಸಿದನು, ಎಂದು ಪಾದ್ಮಪುರಾಣದಲ್ಲಿದೆ. ॥ ೧೭ ॥

ಪೀ—ಜೀವಬ್ರಹ್ಮರಿಗೆ ಭೇದಾಭೇದವನ್ನಂಗೀಕರಿಸಿದರೆ ಸೂತ್ರವಿರೋಧವದೆ, ಎನ್ನುತ್ತಾರೆ—

**ಭಾ. ॥ (೧) ಓಂ ಜಗದ್ವ್ಯಾಪಾರವರ್ಜಂ ಓಂ । ಓಂ ಪ್ರಕರಣಾತ್ ಓಂ । ಇತ್ಯೈ-(ತ್ಯಾದಿನೈ)ಶ್ವರ್ಯಮರ್ಯಾದಯಾ ಮುಕ್ತಾನಾಂ ಬ್ರಹ್ಮಣಶ್ಚ ಭೇದಸ್ಯೈವ ನಿರ್ಣೀತ-ತ್ವಾಚ್ಚ ಭಗವತಾ । (೨) ಬ್ರಹ್ಮಸೂತ್ರಾನುಸಾರೇಣ ವೇದಾದ್ಯಂ ಸರ್ವಮೇವ ಚ । ಯೋ-ಽನ್ಯಂ ನ ಬ್ರಹ್ಮಸೂತ್ರಾಣಿ ದೃಶ್ಯಮಾನಾರ್ಥತೋಽನ್ಯಥೇತಿ ಚ ಬ್ರಹ್ಮವೈವರ್ತೇ । (೩) ಚೋರದೃಷ್ಟಾಂತತೋ ಯಸ್ಯ ಹ್ಯಭೇದಜ್ಞಾನತಸ್ತಮಃ । ಭೇದೇನೋತ್ಕರ್ಷವೇತ್ತುಸ್ತು ಮುಕ್ತಿರೇವ ಹ್ಯಚೋರವದಿತಿ ಚ ॥ ॥ ೧೮ ॥**

**ಅ** ॥ (೧) **ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್** ಎಂಬ ಪ್ರಮಾಣದಿಂದ ಮುಕ್ತರು ಸೃಷ್ಟಿ ಮೊದಲಾದ ಜಗದ್ವ್ಯಾಪಾರಗಳನ್ನು ಬಿಟ್ಟು ಎಲ್ಲಾ ಇಷ್ಟಗಳನ್ನು ಹೊಂದುತ್ತಾರೆ. (ಬ್ರ. ಸೂ.

*ಹಗ್ಗವನ್ನು ನೋಡಿ ಹಾವು ಎಂದು ತಿಳಿಯುವುದು ಭ್ರಮೆಯು ಹಾವು ಅಲ್ಲ ಹಗ್ಗ ಎಂಬುವುದು ಬಾಧಜ್ಞಾನವು ಹಾವು ಅಲ್ಲ ಎಂಬುದು ಅನುಸಂಧಾನವು

ಅ. ೪, ಪಾ. ೪, ಸೂ. ೧೭) **ಶರೀರಭೇದಾದೂರ್ಧ್ವಮುತ್ಕ್ರಾಮ್ಯ** ಎಂದು ಜೀವಪ್ರಕರಣವಾಗಿರುವುದರಿಂದಲೂ ಜೀವರಿಗೆ ಜಗತ್ಸೃಷ್ಟ್ಯಾದಿಗಳನ್ನು ಮಾಡತಕ್ಕ ಸಾಮರ್ಥ್ಯವಿಲ್ಲದಿರುವುದರಿಂದಲೂ **ಸರ್ವಾನ್ ಕಾಮಾನ್** ಎಂಬ ವೇದದಲ್ಲಿ ಸಂಕೋಚ ಮಾಡಿಕೊಳ್ಳುವುದು ಯುಕ್ತವು. (ಸೂ. ೧೮) ಹೀಗೆ ಪರಬ್ರಹ್ಮನ ಐಶ್ವರ್ಯವು ನಿರವಧಿಕವು, ಜೀವರ ಐಶ್ವರ್ಯವು ಅವಧಿಯುಳ್ಳದ್ದು ಎಂಬ ಐಶ್ವರ್ಯ ಮರ್ಯಾದೆಯನ್ನು ನೋಡುವಾಗ ಮುಕ್ತಜೀವರಿಗೂ ಬ್ರಹ್ಮನಿಗೂ ಭೇದವದೆ ಎಂದೇ ಸೂತ್ರಕಾರರು ನಿರ್ಣಯಿಸಿರುವರು. (೨) (ಹಾಗಾದರೆ **ಬ್ರಹ್ಮ ವೇದ ಬ್ರಹ್ಮೈವ ಭವತಿ** ಇದುಮೊದಲಾದ ವೇದಗಳಲ್ಲಿ ಮುಕ್ತನಿಗೆ ಬ್ರಹ್ಮನಿಂದ ಅಭೇದ ಹೇಳಿದಕಾರಣ ಅಮುಖ್ಯವಾದ ಮೋಕ್ಷವನ್ನು ಈ ಸೂತ್ರ ಹೇಳುತ್ತದೆಂದು ಏಕೆ ಆಗಲಾರದು, ಎಂದರೆ—) ಬ್ರಹ್ಮಸೂತ್ರಗಳನ್ನು ಅನುಸರಿಸಿಯೇ ವೇದ ಮೊದಲಾದುವುಗಳೆಲ್ಲದಕ್ಕೂ ಅರ್ಥವನ್ನು ಮಾಡಬೇಕು. ಸ್ಪಷ್ಟವಾಗಿ ತೋರುವ ಅರ್ಥ ವಿನಹ ಬೇರೆ ಅರ್ಥಗಳನ್ನು ಬ್ರಹ್ಮಸೂತ್ರಗಳಿಗೆ ಮಾಡಕೂಡದು, ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ. (೩) (ಈ ವೇದದ ಅರ್ಥವನ್ನು ನಿಶ್ಚಯಿಸತಕ್ಕ ಪ್ರಮಾಣ ಹೇಳುತ್ತಾರೆ -) ಇದೇ ವೇದದಲ್ಲಿ ಚೋರದೃಷ್ಟಾಂತದಿಂದ ಐಕ್ಯಜ್ಞಾನಿಗೆ ತಮಸ್ಸು ಮೊದಲಾದ ಅನರ್ಥಗಳು ಹೇಳಲ್ಪಟ್ಟಿವೆ ಜೀವೇಶ್ವರರಿಗೆ ಭೇದವದೆ, ಎಂಬ ಜ್ಞಾನನಿಂದಲೇ ಶ್ರೀಹರಿಯು ಸರ್ವೋತ್ತಮನೆಂದು ತಿಳಿದವನಿಗೆ ಕದಿಯದವನಂತೆ ಮೋಕ್ಷವೂ ಹೇಳಲ್ಪಟ್ಟಿದೆ, ಎಂದೂ ಹೇಳಿದೆ. || ೧೮ ||

ಪೀ—ಬ್ರಹ್ಮಸೂತ್ರಗಳನ್ನನುಸರಿಸಿ ವೇದಾದಿಗಳಿಗೆ ಅರ್ಥಮಾಡಬೇಕೆಂದು ಹೇಳಿತು. ಭೇದಪ್ರತಿಪಾದಕ ಸೂತ್ರಗಳನ್ನನುಸರಿಸಿ ತತ್ತ್ವಮಸಿ ಇದುಮೊದಲಾದ ಅಭೇದವಾಕ್ಯಗಳಿಗೆ ಹೇಗೆ ಅರ್ಥಹೇಳುವುದು ಎಂದರೆ—

**ಭಾ. || (೧) ಸಾರತ್ವಾತ್ಸ ಇತಿ ಪ್ರೋಕ್ತೋ ಜ್ಞಾನತ್ವಾದ್ಯ ಇತೀರಿತಃ | ಸರ್ವಸ್ಯೇಷ್ಟ ಇತಿ ಹ್ಯೇಷ ಮಾನಾನಾಮಣಕೋಣಿಮಾ | (೨) ತತ್ತಂತ್ರತ್ವಾದ್ವೈತದಾತ್ಮ್ಯಂ ಸ ಸತ್ಯಃ ಸಾಧುರೂಪತಃ | ತತ್ತತೇಃ ಪೂರ್ಣತಶ್ಚಾತ್ಮಾ ಸಾದನಾತ್ಸ ಇತೀರಿತಃ | (೩) ಅತತ್ತ್ವಮಸಿ ಪುತ್ರೇತಿ ಯ ಉಕ್ತೋ ಗೌತಮೇನ ತು | ನವಕೃತ್ವಃ ಸದೃಷ್ಟಾಂತಂ ಸರ್ವಭೇದೇನ ಕೇಶವಃ | (೪) ತಸ್ಮೈ ನಮೋ ಭಗವತೇ ಚಿದಚಿಸ್ಪರಮಾಯ ತೇ | ಪುರುಷೋತ್ತಮಾಯ ದೇವಾಯ ಪೂರ್ಣಾನಂದೈಕರೂಪಿಣೇ | ಇತಿ ಸಾಮಸಂಹಿತಾಯಾಂ | (೫) ಅತಃ ಸರ್ವಚಿದಚಿದ್ವಿಲಕ್ಷಣಃ ಸರ್ವೋತ್ತಮಃ ಸರ್ವಗುಣಪರಿಪೂರ್ಣೋ ಭಗವಾನ್ ಪುರುಷೋತ್ತಮ ಇತಿ ಸಿದ್ಧಂ || || ೧೯ ||**

**ಅ** || (೧) ಶ್ರೀಹರಿಯು ಸರ್ವೋತ್ತಮನಾದುದರಿಂದ **ಸಃ** ಎಂದೂ ಜ್ಞಾನಸ್ವರೂಪನಾದುದರಿಂದ **ಯಃ** ಎಂದೂ, ಸರ್ವಪ್ರೇರಕನಾದುದರಿಂದ **ಏಷಃ** ಎಂದೂ, ಜ್ಞಾನಗಳಿಗೆ ಅಥವಾ ವೇದಾದಿ ಪ್ರಮಾಣಗಳಿಗೆ ಅಭಿಮಾನಿಗಳಾದ ದೇವತೆಗಳಿಗೆ ಪ್ರೇರಕನಾದುದರಿಂದ **ಅಣಿಮಾ** ಎಂದೂ ಅನಿಸುತ್ತಾನೆ (೨) ಜಗತ್ತು ಶ್ರೀಹರಿಯ ಅಧೀನವಲ್ಲಿದ್ದುದರಿಂದ ಜಗತ್ತಿಗೆ ಶ್ರೀಹರಿಯು ಸ್ವಾಮಿಯು. ಸಾಧುಸ್ವರೂಪನಾದುದರಿಂದ ಸತ್ಯನೆನಿಸುತ್ತಾನೆ. ವ್ಯಾಪ್ತನಾದುದರಿಂದ **ತತ್** ಎಂದೂ ಸರ್ವಗುಣಪರಿಪೂರ್ಣನಾದುದರಿಂದ ಆತ್ಮನೆಂದೂ ದುಷ್ಟರನ್ನು ನಾಶಗೊಳಿಸುವುದರಿಂದ **ಸಃ** ಎಂದೂ ಎನಿಸುತ್ತಾನೆ. (೩) ಹೀಗೆ ಉದ್ದಾಲಕರು ಮಗನಾದ ಶ್ವೇತಕೇತುವಿಗೆ ಶ್ರೀಹರಿಯು ಸರ್ವರಿಂದಲೂ ಭಿನ್ನನು, ಎಂಬ ಅಭಿಪ್ರಾಯದಿಂದ ಎಲೋ ಮಗನೇ ನೀನು ಆ ಶ್ರೀಹರಿಯಿಂದ ಭಿನ್ನನಾಗಿರುತ್ತಿ ಎಂದು ಒಂಭತ್ತಾವರ್ತಿ ದೃಷ್ಟಾಂತಕೊಟ್ಟು ಹೇಳಿರುವರು. (೪) ವೇದಾದಿಗಳಲ್ಲಿ ಪ್ರಸಿದ್ಧನೂ, ಷಡ್ಗುಣಪರಿಪೂರ್ಣನೂ, ಚೇತನಾಚೇತನಗಳಿಂದುತ್ತಮನೂ,

ಪೂರ್ಣಾನಂದಸ್ವರೂಪಿಯೂ, ಸಮಸ್ತ ವೇದಾದಿಗಳಲ್ಲಿ ಸ್ತುತ್ಯನೂ ಆದ ಪುರುಷೋತ್ತಮನಾದ ಶ್ರೀಹರಿಗೆ ನಮಸ್ಕಾರವು, ಎಂದು ಸಾಮಸಂಹಿತೆಯಲ್ಲಿ ಹೇಳಿದೆ. (೫) ಹಿಂದೆ ಹೇಳಿದ ಪ್ರಮಾಣಗಳ ಸಮೂಹಗಳಿಂದ ಶ್ರೀಹರಿಯು ಎಲ್ಲಾ ಚೇತನಾಚೇತನಗಳಿಂದ ಭಿನ್ನನು, ಸರ್ವೋತ್ತಮನು, ಸಮಸ್ತ ಗುಣಗಳಿಂದ ಪರಿಪೂರ್ಣನು, ಕ್ಷರಾಕ್ಷರಪುರುಷರಿಂದುತ್ತಮನೆಂದು ಸಿದ್ಧವಾಯಿತು.

ವಿ || (1) ಯದ್ಯಪಿ **ಸ ಯ ಏಷೋಽಣಿಮಾ** ಇತ್ಯಾದಿಗಳಿಗೆ ಮೊದಲೇ (ಪು. ೩೬೪ ರಲ್ಲು) ಅರ್ಥ ಹೇಳಿದೆ. ಈ ಖಂಡದಲ್ಲಿ **ಸ ಯ ಏಷಃ** ಇತ್ಯಾದಿ ವಾಕ್ಯಗಳು ಇಲ್ಲ. ಆದರೂ ಇತರಖಂಡಗಳಂತೆ ಇಲ್ಲಿಯೂ ಅದನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸೂಚಿಸುವುದಕ್ಕಾಗಿಯೂ, ಮೊದಲು ಅರ್ಥಹೇಳದಿದ್ದ ಪದಗಳಿಗೆ ಅರ್ಥ ಹೇಳುವುದಕ್ಕಾಗಿಯೂ, ಸರ್ವಥಾ ಇದು ಐಕ್ಯವನ್ನು ತಿಳಿಸುವುದಿಲ್ಲ, ಎಂಬುದನ್ನು ದೃಢಪಡಿಸುವುದಕ್ಕಾಗಿಯೂ ಸಾಮಸಂಹಿತೆಯಲ್ಲಿಯೇ ಇರತಕ್ಕ ಅಂತಿಮ ವಾಕ್ಯವನ್ನು ಹೇಳಿರುತ್ತಾರೆ. (2) ಅಧ್ಯಾಯದಲ್ಲಿ ಹೇಳಿದ ಎಲ್ಲಾ ಗುಣಗಳಿಂದೊಡಗೂಡಿದ ಶ್ರೀಹರಿಯ ನಮಸ್ಕಾರರೂಪವಾದ ಮಂಗಲವನ್ನು ಅಧ್ಯಾಯದ ಅಂತ್ಯದಲ್ಲಿಯೂ ಭಾಷ್ಯಕಾರರು ಮಾಡಿರುತ್ತಾರೆ. (3) **ನವಕೃತ್ವಃ** ಎಂದು ಹೇಳಿದುದರಿಂದ ಒಂಭತ್ತು ಪ್ರಕರಣಗಳಲ್ಲಿರತಕ್ಕ ವಾಕ್ಯಕ್ಕೂ ಇದೇ ಅರ್ಥವೆಂದು ದೃಢಪಡಿಸಿದರು. || ೮-೧೭ || || ೧೯ ||

**ಹದಿನೇಳನೇ ಖಂಡವು ಮುಗಿಯಿತು.**

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಚ್ಛಾಂದೋಗ್ಯ ಉಪನಿಷದ್ಭಾಷ್ಯೇ ಅಷ್ಟಮೋಽಧ್ಯಾಯಃ || ೮ ||**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಮತ್ ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ಎಂಟನೇ ಅಧ್ಯಾಯವು ಮುಗಿಯಿತು. || ೮ ||

**ಇಂದೀವರದಲಶ್ಯಾಮಮಿಂದಿರಾನಂದವರ್ಧನಂ |**
**ವಂದೇ ನಂದಸುತಂ ಸಾಂದ್ರಾನಂದಸುಂದರವಿಗ್ರಹಂ ||**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಶ್ರೀಃ ||

# ಒಂಭತ್ತನೇ ಅಧ್ಯಾಯವು

**ನಾಮಾದಿಪ್ರಾಣಪರ್ಯಂತದೇವಶ್ರೇಷ್ಠಾಯ ವಿಷ್ಣವೇ ।**
**ಸತ್ಯಾದ್ಯಾತ್ಮಾಂತರೂಪಾಯ ನಮೋ ಭಗವತೇ ಸದಾ ॥**



## ೧ನೇ ಖಂಡವು

**ಪೀ**—ಪೂರ್ವಾಧ್ಯಾಯದಲ್ಲಿ ತಾನು ಹೆಚ್ಚು ಜ್ಞಾನವುಳ್ಳವನೆಂಬ ಅಹಂಕಾರದಿಂದ ತಾನು ಈಶ್ವರನೆಂದು ತಿಳಿದಿರುವ ಶ್ವೇತಕೇತುವಿಗೆ ಜೀವೇಶ್ವರರ ಭೇದವಿಷಯದಲ್ಲಿ ಬಹುದೃಷ್ಟಾಂತಗಳನ್ನು ಹೇಳಿ ಜೀವೇಶ್ವರರಿಗೆ ಭೇದವಿದೆ, ಎಂದು ತಿಳಿದುಕೊಂಡೇ ಶ್ರೀಹರಿಯನ್ನು ಉಪಾಸನೆಮಾಡಬೇಕೆಂದು ಹೇಳಿದೆ. ಈ ಅಧ್ಯಾಯದಲ್ಲಿ ದೇವತೆಗಳಲ್ಲಿ ತಾರತಮ್ಯವನ್ನು ತಿಳಿದುಕೊಂಡು ದೇವತೆಗಳಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಉಪಾಸನೆ ಮಾಡಿದರೆ ಶ್ರೀಹರಿಯು ಮೋಕ್ಷವೊದಲಾದ ಸರ್ವಪುರುಷಾರ್ಥಗಳನ್ನೂ ಕೊಡುತ್ತಾನೆ. ಅದುಕಾರಣ ದೇವತೆಗಳ ತಾರತಮ್ಯವನ್ನು ಹೇಳುತ್ತಾರೆ—

**ಉ: ॥ ಓಂ ॥ ಅಧೀಹಿ ಭಗವ ಇತಿ ಹೋಪಸಸಾದ ಸನತ್ಕುಮಾರಂ ನಾರದಸ್ತꣳ ಹೋವಾಚ ಯದ್ವೇತ್ಥ ತೇನ ಮೋಪಸೀದ ತತಸ್ತ ಊರ್ಧ್ವಂ ವಕ್ಷ್ಯಾಮೀತಿ ॥ ॥ ೧ ॥**

**ಅ** ॥ ದೇವರ್ಷಿಗಳಾದ ನಾರದರು ಪೂಜ್ಯರೇ ನನಗೆ ಪರಬ್ರಹ್ಮನ ತತ್ತ್ವವನ್ನುಪದೇಶಿಸಿರಿ, ಎನ್ನುತ್ತಾ ತನಗಿಂತ ಹೆಚ್ಚು ಬ್ರಹ್ಮಜ್ಞಾನಿಗಳಾದ ಸನತ್ಕುಮಾರರ ಬಳಿಗೆ ಬಂದು ಸೇವಿಸಿದರು. ಆಗ ಸನತ್ಕುಮಾರರು ತಿಳಿಯದ ಅಂಶವನ್ನೇ ಉಪದೇಶಮಾಡಬೇಕಾಗಿರುವುದರಿಂದ ತಿಳಿದಿದ್ದ ಭಾಗವನ್ನು ಹೇಳಿ ನನ್ನ ಉಪಸತ್ತಿಮಾಡು ತಿಳಿದ ಅಂಶಕ್ಕಿಂತ ಮೇಲಿನದ್ದಾದ ತಿಳಿಯದ ಅಂಶವನ್ನು ನಾನು ನಿನಗೆ ಹೇಳುವೆನು, ಎಂದು ನಾರದರಿಗೆ ಹೇಳಿದರು. ॥ ೧ ॥

**ಉ. ॥ ಸ ಹೋವಾಚ ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯꣳ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾꣳ ಸರ್ಪದೇವಜನವಿದ್ಯಾಮೇತದ್ಭಗವೋಽಧ್ಯೇಮಿ ॥ ॥ ೨ ॥**

**ಅ** ॥ ಆಗ ನಾರದರು ಹೇಳಿದರು ಎಲೋ ಪೂಜ್ಯರೇ ನಾನು ಋಗ್ವೇದ, ಯಜುರ್ವೇದ, ಸಾಮವೇದ, ನಾಲ್ಕನೇದಾದ ಅಥರ್ವವೇದ, ಋಗಾದಿ ವೇದಗಳಲ್ಲಿ ಐದನೇದ್ದಾದ ವೇದಗಳಿಗೆ ಅನುಕೂಲಗ

ಳಾದ ಇತಿಹಾಸ, ಪುರಾಣರೂಪ ವೇದ, ಇವುಗಳನ್ನು ಅಧ್ಯಯನ ಮಾಡಿರುತ್ತೇನೆ. ಮತ್ತು ಪಿತೃಗಳಿಗೆ ಲಕ್ಷಣಹೇಳತಕ್ಕ ಗ್ರಂಥ, ಗಣಿತಶಾಸ್ತ್ರ, ದೇವತೆಗಳ ಲಕ್ಷಣಹೇಳತಕ್ಕ ಶಾಸ್ತ್ರ. ಇಂತಹ ಸ್ಥಳದಲ್ಲಿ ನಿಧಿ ಯಿದೆ, ಎಂದು ಅದರ ಚಿಹ್ನೆ ತೋರಿಸತಕ್ಕ ಶಾಸ್ತ್ರ, ಮೂಲವೇದ, ವೇದಗಳ ಸಾರವನ್ನು ಸಂಗ್ರಹಿಸಿರ ತಕ್ಕ ಪಂಚರಾತ್ರಾಗಮ, ದೇವತೆಗಳಿಂದ ತಿಳಿಯಲ್ಪಡತಕ್ಕ ವಿದ್ಯೆ, ಆರಣ್ಯಕ, (ಅರಣ್ಯದಲ್ಲಿ ಕಲಿಯತಕ್ಕ ವೇದಭಾಗ) ಭೂತಗಳ ಚಿಹ್ನೆ ತೋರಿಸತಕ್ಕ ಶಾಸ್ತ್ರ, ನೀತಿಶಾಸ್ತ್ರ, ಜ್ಯೋತಿಃಶಾಸ್ತ್ರ, ಸರ್ಪಗಳ ಲಕ್ಷಣ ವನ್ನು ಹೇಳತಕ್ಕ ಶಾಸ್ತ್ರ, ದೇವತೆಗಳ ಪರಿವಾರಗಳನ್ನು ಹೇಳತಕ್ಕ ಶಾಸ್ತ್ರ, ಈ ಎಲ್ಲಾ ವಿದ್ಯೆಗಳ ಸಮೂ ಹಗಳನ್ನು ಕಲಿತಿರುತ್ತೇನೆ. || ೨ ||

ಟೀ—ಇನ್ನು ತಿಳಿಯಬೇಕಾದ ಅಂಶವು ಯಾವುದೆಂದರೆ—

**ಉ. || ಸೋಽಹಂ ಭಗವೋ ಮಂತ್ರವಿದೇವಾಸ್ಮಿ ನಾತ್ಮವಿಚ್ಛ್ರುತꣳ ಹ್ಯೇವ ಮೇ ಭಗವದ್ದೃಶೇಭ್ಯಸ್ತರತಿ ಶೋಕಮಾತ್ಮವಿದಿತಿ ಸೋಽಹಂ ಭಗವಃ ಶೋಚಾಮಿ ತನ್ಮಾ ಭಗವಾಂಛೋಕಸ್ಯ ಪಾರಂ ತಾರಯತ್ವಿತಿ ತꣳ ಹೋ-ವಾಚ ಯದ್ವೈ ಕಿಂ ಚೈತದಧ್ಯಗೀಷ್ಠಾ ನಾಮೈವೈತತ್ || || ೩ ||**

ಅ || ಎಲೋ ಪೂಜ್ಯರೇ ನಾನು ಎಲ್ಲಾ ವಿದ್ಯೆಗಳನ್ನು ಕಲಿತವನಾದರೂ ಶ್ರೀಹರಿಯ ನಾಮವನ್ನು ಮಾತ್ರ ತಿಳಿದಿರುತ್ತೇನೆ. (ಅಂದರೆ ನಿರ್ಣಯಿಸಲಿಕ್ಕೆ ಯೋಗ್ಯಗಳಾದ ಶ್ರೀಹರಿಯ ಗುಣಗಳನ್ನು ಹೇಳ ತಕ್ಕ ಶಬ್ದಗಳ ಸಮೂಹವನ್ನು ಮಾತ್ರ ತಿಳಿದವನಾಗಿರುತ್ತೇನೆ) ನಿರ್ಣಯವನ್ನು ಮಾಡತಕ್ಕ ಉಪಕ್ರ ಮಾದಿ ನ್ಯಾಯಗಳಿಂದ ಋಗ್ವೇದಾದಿಗಳಲ್ಲಿದ್ದ ಶಬ್ದಸಮೂಹಗಳ ಅರ್ಥವನ್ನು ನಿರ್ಣಯಮಾಡಿ ಆತ್ಮನೆನಿ ಸಿದ ಶ್ರೀಹರಿಯನ್ನು ತಿಳಿಯಲಿಲ್ಲ. (ಶ್ರೀಹರಿಯನ್ನು ಪ್ರತಿಪಾದಿಸತಕ್ಕ ವೇದಗಳ ಜ್ಞಾನವೇ ಸಾಕು. ವೇದಗಳಲ್ಲಿ ಪ್ರತಿಪಾದ್ಯನಾದ ಶ್ರೀಹರಿಯ ಜ್ಞಾನವು ಏತಕ್ಕೆ? ಎಂದರೆ) ಪೂಜ್ಯರೇ ತಮ್ಮಂತಹ ಮಹಾನು ಭಾವರ ದ ಆಚಾರ್ಯರಿಂದ ಶ್ರೀಹರಿಯನ್ನು ತಿಳಿದವನೇ ದುಃಖವನ್ನು ದಾಟುತ್ತಾನೆ. ಎಂದು ನಾನು ಕೇಳಿರುತ್ತೇನೆ. ಅದ-ಕಾರಣ ನಾನು ದುಃಖಪಡುತ್ತೇನೆ. ಅಂತಹ ನನಗೆ ಪೂಜ್ಯರಾದ ತಾವು ಶೋಕ ಸಾಗರದ ಅಂತವನ್ನು ದಾಟಿಸಬೇಕೆಂದು ನಾರದರು ಹೇಳಿದರು. ಆಗ ಸನತ್ಕುಮಾರರು ಎಲೋ ನಾರ ದರೇ ನೀವು ಯಾವ ಋಗಾದಿಗಳನ್ನೂ ಕಲಿತಿರುತ್ತೀರೋ ಈ ಎಲ್ಲಾ ಗ್ರಂಥಗಳ ಸಮೂಹವು ಶ್ರೀ ಹರಿಯ ಗುಣಸಮೂಹಗಳನ್ನು ಹೇಳುವ ನಾಮಧೇಯವೇ. ಪ್ರಸಿದ್ಧವು. || ೩ ||

ಟೀ—ಏಕದೇಶವು ನಾಮವಾದುದರಿಂದ ಸರ್ವವೂ ನಾಮಧೇಯವೆಂದು ಹೇಳಿದ್ದು ಅಮುಖ್ಯವು, ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಹೇಳಿದ್ದನ್ನು ವಿವರಿಸುತ್ತಾರೆ—

**ಉ. || ನಾಮ ವಾ ಋಗ್ವೇದೋ ಯಜುರ್ವೇದಃ ಸಾಮವೇದಃ ಆಥರ್ವಣಶ್ಚತುರ್ಥ ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ ಪಿತ್ರ್ಯೋ ರಾಶಿರ್ದೈವೋ ನಿಧಿರ್ವಾಕೋವಾಕ್ಯಮೇಕಾಯನಂ ದೇವವಿದ್ಯಾ ಬ್ರಹ್ಮವಿದ್ಯಾ ಭೂತವಿದ್ಯಾ ಕ್ಷತ್ರವಿದ್ಯಾ ನಕ್ಷತ್ರವಿದ್ಯಾ ಸರ್ಪದೇವಜನವಿದ್ಯಾ ನಾಮೈವೈತನ್ನಾಮೋಪಾಸ್ವೇತಿ || || ೪ ||**

ಅ || ಋಗ್ವೇದ ಮೊದಲಾದುದು ಎಲ್ಲವೂ * ಶ್ರೀಹರಿಯ ನಾಮಧೇಯವೇ. (ಎಲ್ಲವೂ ಶ್ರೀಹರಿಯ ನಾಮಧೇಯವೇ ಎಂಬುದನ್ನು ದೃಢಪಡಿಸುವುದಕ್ಕಾಗಿ ಅಂತ್ಯದಲ್ಲಿಯೂ ಮರಳಿ ಹೇಳಿರುತ್ತಾರೆ.) ಎಲ್ಲವೂ ಶ್ರೀಹರಿಯ ನಾಮಧೇಯವೇ. ಅಥವಾ ತಿಳಿಯಲ್ಪಡದಿರುವವಳಲ್ಲ ಪರಂತು ಉಷಃಕಾಲಕ್ಕೆ ಅಭಿಮಾನಿಯಾಗಿರುವ ಪ್ರಯುಕ್ತ ಉಷಃಕಾಲದಲ್ಲಿ ತಿಳಿಯಲ್ಪಡುವುದರಿಂದ ನಾಮ ಎಂದು ಹೆಸರುಳ್ಳ ಉಷೋದೇವಿಯು ಗ್ರಂಥಸಮೂಹಕ್ಕೆ ಅಭಿಮಾನಿಯಾಗಿ ಇದ್ದಾಳೆ. (ಏನು ಮಾಡಬೇಕೆಂದರೆ) ಉಷೋದೇವಿಯಲ್ಲಿ ಬ್ರಹ್ಮನಿದ್ದಾನೆಂದು ಉಪಾಸನೆಮಾಡು. (ಅಂದರೆ ಸಮಸ್ತ ವಿದ್ಯಾರೂಪವಾದ ನಾಮಕ್ಕೆ ಅವಾಂತರಾಭಿಮಾನಿನಿಯಾದ ಉಷಃ ಎಂದು ಹೆಸರುಳ್ಳ ಅಶ್ವಿನೀದೇವತೆಗಳ ಪತ್ನಿಯಲ್ಲಿ ಪರಬ್ರಹ್ಮನು ಸನ್ನಿಹಿತನಾಗಿದ್ದಾನೆಂದು ಉಪಾಸನೆ ಮಾಡಬೇಕು.) ಎಂದು ನಾರದರಿಗೆ ಹೇಳಿದರು. || ೪ ||

ಟೀ – ಹೀಗೆ ಪರಬ್ರಹ್ಮನನ್ನು ಉಪಾಸನೆ ಮಾಡಿದವನಿಗೆ ಫಲ ಹೇಳುತ್ತಾರೆ—

**ಉ. || ಸ ಯೋ ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ನಾಮ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ನಾಮ್ನೋ ಭೂಯ ಇತಿ ನಾಮ್ನೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ || ಇತಿ ಪ್ರಥಮಃ ಖಂಡಃ ||೧-೯|| ೫ ||**

ಅ || ಪ್ರಸಿದ್ಧನಾದ ಯಾವ ಅಧಿಕಾರಿಯು ನಾಮಕ್ಕೆ ಅಭಿಮಾನಿನಿಯಾದ ಉಷೋದೇವಿಯಲ್ಲಿ ಪರಬ್ರಹ್ಮನಿದ್ದಾನೆಂದು ಉಪಾಸನೆ ಮಾಡುತ್ತಾನೋ, (ಅವನು ಉಷೋದೇವಿಯು ಅಭಿಮಾನಿಯಾಗಿ ಉಳ್ಳ ಲೋಕಗಳನ್ನು ಹೊಂದುತ್ತಾನೆ.) ಮತ್ತು ಎಷ್ಟು ದೇಶದಲ್ಲಿ ಉಷೋದೇವಿಯು ವ್ಯಾಪಿಸಿಕೊಂಡಿರುತ್ತಾಳೋ, ಅಷ್ಟು ದೇಶದಲ್ಲಿ ಉಪಾಸಕನು ತನ್ನ ಯೋಗ್ಯತಾನುಸಾರ ಸ್ವೇಚ್ಛಾನುಸಾರವಾಗಿ ಸಂಚರಿಸುತ್ತಿರುತ್ತಾನೆ. ನಾಮಕ್ಕೆ ಅಭಿಮಾನಿನಿಯಾದ ಉಷೋದೇವಿಗಿಂತ ಶ್ರೇಷ್ಠವಾದ ವಸ್ತುವು ಇದೆಯೋ, ಎಂಬ ನಾರದರ ಪ್ರಶ್ನೆಗೆ ಸನತ್ಕುಮಾರರು ಉಷೋದೇವಿಗಿಂತ ಶ್ರೇಷ್ಠವಾದ ವಸ್ತುವು ಇದ್ದೇ ಇದೆ, ಎಂದರು. ಆಗ ನಾರದರು ಶ್ರೇಷ್ಠವಾದ ವಸ್ತುವನ್ನು ನನಗೆ ಹೇಳಬೇಕೆಂದು ಹೇಳಿದರು. (ಇಲ್ಲಿ ನಾಮಕ್ಕಿಂತ ಮೊದಲು ಕರ್ಮಕ್ಕೆ ಅಭಿಮಾನಿಯಾದ ಪುಷ್ಕರನನ್ನೂ, ಭೂಮಿಗೆ ಅಭಿಮಾನಿಯಾದ ಶನೈಶ್ಚರನನ್ನೂ ಇಟ್ಟುಕೊಳ್ಳಬೇಕು ) || ೫ ||

ಟೀ—ಯದ್ವೇತ್ಥ ತೇನ ಮೋಪಸೀದ ಎಂಬುವಲ್ಲಿ ಮಾ ಎನ್ನುವುದು ನಿಷೇಧಾರ್ಥಕವೆಂದು ತೋರುತ್ತದೆ. ಅಸ್ಮತ್ ಶಬ್ದದ ರೂಪವೆಂದು ಇಟ್ಟುಕೊಂಡರೂ, ನಾರದರು ಬರುವಾಗ ತನ್ನ ಜ್ಞಾನ ಬಿಟ್ಟು ಬರಲು ಕೂಡದಿರುವುದರಿಂದ ತನ್ನ ಜ್ಞಾನಸಮೇತ ನಾರದರು ಬಂದಿರುತ್ತಾರೆಂಬ ಅಭಿಪ್ರಾಯದಿಂದ ತೇನ ಮಾಮುಪಸೀದ ಎಂದು ಹೇಳಿದ್ದು ಎಂದರೆ—ಆ ವಾಕ್ಯದ ಅರ್ಥ ಹೇಳುತ್ತಾರೆ—

**ಭಾ. || ಓಂ || (೧) ಯದ್ವೇತ್ಥ ತೇನ ತದುಕ್ತ್ವಾ ಮಾಮುಪಸೀದ | (೨) ಪಿತ್ರ್ಯಲಕ್ಷಣಂ ತು ಪಿತ್ರ್ಯಂ ಸ್ಯಾದ್ರಾಶಿಃ ಸ್ಯಾತ್ಪ್ಲಗ ಲಕ್ಷಣಂ | ದೇವತಾಲಕ್ಷಣಂ ದೈವಂ ನಿಧಿಶ್ಚ ನಿಧಿಲಕ್ಷಣಂ | ವಾಕೋವಾಕ್ಯಂ ಮೂಲವೇದೋ ವೇದಸಾರೋಪಸಂಹೃತಿಃ | ಏಕಾಯನಮಿತಿ ಪ್ರೋಕ್ತಂ ದೇವವಿದ್ಯಾತ್ವ(ತ್ಯ)ಮಾನುಷೀ | ದೇವಜ್ಞೇಯೈವ ಯಾ ವಿದ್ಯಾ ಬ್ರಹ್ಮವಿದ್ಯಾ ತಥಾಽಕ್ಷರಣಂ | (೩) ಭೂತವಿದ್ಯಾ ಭೂತಚಿಹ್ನಂ ಕ್ಷತ್ರವಿದ್ಯಾ ತು ನೀತಿಕಾ |**

---

ಹಿಂದಿನಂತೆ ಎಲ್ಲಾ ಪದಗಳಿಗೂ ಅರ್ಥ ಇಟ್ಟುಕೊಳ್ಳಬೇಕು

**ನಾಕ್ಷತ್ರೀ ಜ್ಯೋತಿಷಾಖ್ಯಾ ಚ ಸರ್ಪಲಕ್ಷಣಮೇವ ಚ । ಸರ್ಪವಿದ್ಯೇತಿ ಸಂಪ್ರೋಕ್ತಾ ಯೋ ದೇವಪರಿಚಾ(ವಾ)ರಗಾ । ಸಾ ದೇವಜನವಿದ್ಯಾ ಸ್ಯಾದೇತಾ ವೇದ ಸ ನಾರದ ಇತಿ ಸಾಮಸಂಹಿತಾಯಾಂ ॥　　॥ ೧ ॥**

**ಅ** ॥ (೧) ನೀವು ಯಾವ ಋಗಾದಿಗಳನ್ನು ತಿಳಿದಿರುತ್ತೀರೋ, ಅಂತಹ ತಿಳಿದ ಅಂಶವನ್ನು ಹೇಳಿ ನನ್ನ ಬಳಿಗೆ ಬನ್ನಿರಿ (ತಿಳಿಯದ ಅಂಶವನ್ನು ಹೇಳುವೆನು) (೨) (ನಾರದರು ಹೇಳಿದ ವಿದ್ಯೆಗಳ ಮಧ್ಯದಲ್ಲಿ ಋಗ್ವೇದವನ್ನು ಆರಂಭಿಸಿ ಪುರಾಣಪರ್ಯಂತ ವಿದ್ಯೆಗಳು ಪ್ರಸಿದ್ಧಗಳಾಗಿವೆ. **ಪಿತ್ರ್ಯಂ ರಾಶಿಂ** ಇತ್ಯಾದಿಗಳ ಅರ್ಥಗಳು ಅಪ್ರಸಿದ್ಧಗಳಾಗಿವೆ. ಅದು ಕಾರಣ ಅವುಗಳ ಅರ್ಥವನ್ನು ಪ್ರಮಾಣಕೊಟ್ಟು ಹೇಳುತ್ತಾರೆ.) ಪಿತೃಗಳ ಲಕ್ಷಣಗಳನ್ನು ಹೇಳುವ ಶ್ರಾದ್ಧಕಲಾಪವು ಪಿತ್ರ್ಯವೆನಿಸುತ್ತದೆ. ಸಂಖ್ಯಾಸಮೂಹದ ಲಕ್ಷಣವನ್ನು ಹೇಳುವ ಗಣಿತಶಾಸ್ತ್ರವು ರಾಶಿ ಎನಿಸುತ್ತದೆ. ದೇವತೆಗಳ ತಾರತಮ್ಯಕ್ರಮದಿಂದ ಮೂವತ್ತೆರಡು ಲಕ್ಷಣಾದಿಗಳನ್ನು ಹೇಳತಕ್ಕ ಶಾಸ್ತ್ರವು ದೈವವೆನಿಸುತ್ತದೆ. (ಉತ್ಪಾತಜ್ಞಾನವು ದೈವವೆನಿಸುತ್ತದೆ ಎಂದು ಪರರು ಹೇಳುವುದರಲ್ಲಿ ಪ್ರಮಾಣವಿಲ್ಲ. ಪ್ರಮಾಣ ವಿರೋಧವೂ ಆದೆ) ಇಂತಹ ಸ್ಥಳದಲ್ಲಿ ನಿಧಿಯದೆ, ಇತ್ಯಾದಿಗಳನ್ನು ಹೇಳುವ ಶಾಸ್ತ್ರವು ನಿಧಿಯೆನಿಸುತ್ತದೆ. ಮೂಲವೇದವು ವಾಕೋವಾಕ್ಯವೆನಿಸುತ್ತದೆ (ಮೂಲವೇದವನ್ನು ಮೊದಲೇ ಋಕ್‌ನಿಗದಾದಿರೂಪವಾಗಿ ವಿಭಾಗಮಾಡಿದ್ದಾರೆ. ಅದು ಕಾರಣ ಋಗಾದಿ ಶಬ್ದಗಳಿಂದ ಅವಾಂತರವೇದಗಳನ್ನು ಇಟ್ಟುಕೊಳ್ಳಬೇಕು.) ಮೂಲವೇದದ ಸಾರಭೂತವಾದ ಅವಾಂತರವೇದದ ಉದ್ಧಾರವಾದ ಇಪ್ಪತ್ತನಾಲ್ಕು, ನೂರು, ಇತ್ಯಾದಿ ಶಾಖಾರೂಪವಾದುದು **ಏಕಾಯನವೆನಿಸುತ್ತದೆ.** (ವಾಕೋವಾಕ್ಯಂ=ತರ್ಕಶಾಸ್ತ್ರವು ಏಕಾಯನಂ=ನೀತಿಶಾಸ್ತ್ರವು, ಎಂದು ಪರರು ಹೇಳುವುದರಲ್ಲಿ ಪ್ರಮಾಣವಿಲ್ಲ.) (**ದೇವವಿದ್ಯಾ** ಎಂದರೆ–**ದೈವಂ** ಎಂಬ ಶಬ್ದದಿಂದ ಹೇಳಲ್ಪಟ್ಟ ಉತ್ಪಾತಜ್ಞಾನವೆಂದು ಪರರು ಹೇಳುವರು. ಅದು ಅಯುಕ್ತವು. ಒಂದು ಸಲ ಹೇಳಿದುದನ್ನೇ ಎರಡು ಸಲ ಹೇಳಿದಂತೆ ಆಗುವುದು: ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.) ದೇವತೆಗಳಿಂದಲೇ ತಿಳಿಯಲ್ಪಡತಕ್ಕ ವಿದ್ಯೆಯು **ದೇವವಿದ್ಯೆಯು,** ಮನುಷ್ಯರಿಂದ ತಿಳಿಯಲ್ಪಡತಕ್ಕುದಲ್ಲ. ಅರಣ್ಯದಲ್ಲಿ ಕಲಿಯತಕ್ಕ ಉಪನಿಷತ್ತು ಬ್ರಹ್ಮವಿದ್ಯಾ ಎನಿಸುತ್ತದೆ (ಋಗ್ಯಜುಸ್ಸಾಮ ವಿದ್ಯೆಯು ಬ್ರಹ್ಮವಿದ್ಯೆಯು. ಶಿಕ್ಷಾ ಕಲ್ಪ ಚ್ಛಂದೋವಿಚಿತಿಗಳು ಬ್ರಹ್ಮವಿದ್ಯೆ ಎಂದು ಪರರು ಹೇಳುವುದು ಪ್ರಮಾಣವಿರುದ್ಧವು.) (೩) ದೇವತೆಗಳಿಂದ ಇತರಗಳಾದ ಭೂತಗಳ ಚಿಹ್ನೆಯನ್ನು ಹೇಳುವ ಸಾಮುದ್ರವು **ಭೂತವಿದ್ಯಾ** ಎನಿಸುತ್ತದೆ. ನೀತಿಶಾಸ್ತ್ರವು **ಕ್ಷತ್ರವಿದ್ಯೆಯು.** (ಧನುರ್ವೇದವು ಕ್ಷತ್ರವಿದ್ಯೆಯೆಂದು ಪರರು ಹೇಳುವುದು ಪ್ರಮಾಣವಿರುದ್ಧವು.) ಜ್ಯೋತಿಃಶಾಸ್ತ್ರವು **ನಕ್ಷತ್ರವಿದ್ಯೆ** ಎನಿಸುತ್ತದೆ ಸರ್ಪಗಳ ಲಕ್ಷಣವನ್ನು ಹೇಳುವ ಗಾರುಡವು **ಸರ್ಪವಿದ್ಯಾ** ಎನಿಸುತ್ತದೆ. ದೇವತೆಗಳ ಭೃತ್ಯರಾದ ಗಂಧರ್ವರನ್ನು ಹೇಳುವ ಗಾಂಧರ್ವಶಾಸ್ತ್ರವು **ದೇವಜನವಿದ್ಯೆ** ಎನಿಸುತ್ತದೆ. ನಾರದರು ಈ ವಿದ್ಯೆಗಳನ್ನೆಲ್ಲಾ ತಿಳಿದಿರುವರು, ಎಂದು ಸಾಮಸಂಹಿತೆಯಲ್ಲಿದೆ.　　॥ ೧ ॥

ಪೀ—ನಾರದರು ಸಮಸ್ತವಿದ್ಯೆಗಳನ್ನೂ ತಿಳಿದವರಾದುದರಿಂದ ಆತ್ಮವಿದ್ಯೆಯನ್ನೂ ತಿಳಿದಿರುತ್ತಾರೆ. ಆದುದರಿಂದ ಸನತ್ಕುಮಾರರ ಬಳಿಗೆ ಹೋಗಿ ವಿದ್ಯೋಪದೇಶಮಾಡಬೇಕೆಂದು ಏಕೆ ಪ್ರಾರ್ಥಿಸಿದರೆಂದರೆ–

**ಭಾ. ॥ (೧) ವಿದ್ಯಾನಾಂ ನಿರ್ಣಯಾಜ್ಞಾನಾದವಿದ್ವಾನುಚ್ಯತೇ ಪುಮಾನ್ । ಸರ್ವವಿದ್ಯಾವಿದಪ್ಯದ್ಧಾ ತಸ್ಮಾನ್ನಿರ್ಣಯವಿತ್ತಯೋ । ಕುಮಾರಸ್ಯೈಚ್ಛದ್ದೇವರ್ಷಿರ್ನಾರದೋ ಬ್ರಹ್ಮವಿತ್ತಮಮಿತಿ ಚ । (೨) ವಿಷ್ಣೋರ್ನಾಮ ಯತೋ ವಿದ್ಯಾಃ ಸರ್ವಶಾಮೋಕ್ತಃ ಸ್ಮೃತಃ । ನಾಮಾಭಿಮಾನಿನೀ ಚೋಷಾಸ್ತ(ತ)ಸ್ಯಾಂ ಬ್ರಹ್ಮ ಪರಂ ಸ್ಮರೇತ್ । (೩)**

**ಯದೇಷಾ ನ ತ್ವಮೇಯಾ ಸ್ಯಾನ್ನಿೀಯತೇ ಹ್ಯುಷಸಿ ಧ್ರುವಂ । ರಾತ್ರಿಮಾನಮಜಾನದ್ಭಿಸ್ತತೋ ನಾಮೇತ್ಯುಷಾಃ ಸ್ಮೃತಾ ॥ ಇತಿ ಪ್ರಥಮಃ ಖಂಡಃ ॥ ೯—೧ ॥ ॥ ೨ ॥**

ಅ ॥ (೧) ಲೋಕದಲ್ಲಿ ಪುರುಷರು ಸಮಸ್ತವಿದ್ಯೆಗಳನ್ನು ತಿಳಿದವರಾದರೂ ಚೆನ್ನಾಗಿ ವಿದ್ಯೆಗಳ ನಿರ್ಣಯ ಜ್ಞಾನವಿಲ್ಲದಿರುವುದರಿಂದ ಅವಿದ್ವಾನ್ (ತಿಳಿದವರಲ್ಲ) ಎಂದು ಹೇಳಲ್ಪಡುತ್ತಾರೆ. ಅದುಕಾರಣ ದೇವರ್ಷಿಗಳಾದ ನಾರದರು ಸಮಸ್ತವಿದ್ಯೆಗಳನ್ನು ತಿಳಿದವರಾದರೂ ಚೆನ್ನಾಗಿ ನಿರ್ಣಯಜ್ಞಾನ ಹೊಂದುವುದಕ್ಕಾಗಿ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಸನತ್ಕುಮಾರರ ಬಳಿಗೆ ಬಂದರು. (ದೇವರ್ಷಿಗಳಾದ ನಾರದರು ತಾನು ಶ್ರೇಷ್ಠರಾದರೂ ಪ್ರಾಕೃತಪುರುಷರಂತೆ ಸನತ್ಕುಮಾರರನ್ನು ಹೊಂದಿದರೆಂದು ಪರರು ಹೇಳುವುದು ಅಯುಕ್ತವೆಂದು ಸಿದ್ಧವಾಯಿತು. ಹೇಗೆಂದರೆ ಪ್ರಮಾಣವಿರುದ್ಧವಾಗಿದೆ. ಮತ್ತೂ ಸನತ್ಕುಮಾರರು ಸ್ಕಂದನ ಅವತಾರರಾದುದರಿಂದ ನಾರದರಿಗಿಂತ ಸ್ವತಏವ ಉತ್ತಮರೇ ಆಗಿರುತ್ತಾರೆ.) (೨) (ಸನತ್ಕುಮಾರರು **ನಾಮೈವೈತತ್** ಎಂದು ಎಲ್ಲಾ ವಿದ್ಯೆಗಳೂ ನಾಮವೆಂದು ಹೇಳಿರುವರು. ಅದು ಯಾಂಗೆ ನಾಮವೆಂದರೆ) ಎಲ್ಲಾವಿದ್ಯೆಗಳೂ **ವಿಷ್ಣು**ವಿಗೆ ನಾಮಗಳಾಗಿರುವುದರಿಂದ **ಸರ್ವನಾಮಾ** ಎನಿಸುತ್ತಾನೆ ನಾಮಗಳಿಗೆ ಅಭಿಮಾನಿನಿಯಾದ ಉಷೋದೇವಿಯಲ್ಲಿ ನಿಯಾಮಕನಾಗಿ ಪರಬ್ರಹ್ಮನಿದ್ದಾನೆಂದು ಸ್ಮರಿಸಬೇಕು. (೩) (ಅಶ್ವಿನೀದೇವತೆಗಳ ಪತ್ನಿಯಾದ ಉಷಾದೇವಿಯು ಸಮಸ್ತವಿದ್ಯೆಗಳಿಗೆ ಅಭಿಮಾನಿನಿಯೆಂದಾದರೆ ಭಾರತ್ಯಾದಿಗಳಂತೆಯೇ ಅಮೇಯಳು ಆಗಬೇಕು. ಅದುಕಾರಣ ನಾಮ ಎಂದು ಹೆಸರು ಹೇಗೆ? ಎಂದರೆ) ರಾತ್ರಿಯ ಮಾನವನ್ನು ತಿಳಿಯದಿರುವವರಿಂದ ಉಷೋದೇವಿಯು (ಉಷಃಕಾಲಕ್ಕೆ ಅಭಿಮಾನಿನಿಯಾಗಿರುವುದರಿಂದ) ಉಷಃಕಾಲದಲ್ಲಿ ಚೆನ್ನಾಗಿ ತಿಳಿಯಲ್ಪಡುತ್ತಾಳೆ. ಅದುಕಾರಣ ಉಷೋದೇವಿಯು (ಭಾರತ್ಯಾದಿಗಳಂತೆ) ಅಮೇಯಳು (ತಿಳಿಯಲ್ಪಡದಿರುವವಳು) ಅಲ್ಲ. ಅದಕಾರಣ (ಅಮಾ-ತಿಳಿಯಲ್ಪಡದಿರುವವಳು, ನ-ಅಲ್ಲ, ಎಂಬ ವ್ಯುತ್ಪತ್ತಿಯಿಂದ) ನಾಮ ಎನಿಸುತ್ತಾಳೆ. ॥ ೯—೧ ॥ ॥ ೨ ॥

ಒಂದನೇ ಖಂಡವು ಮುಗಿಯಿತು.

## ೨ನೇ ಖಂಡವು

ಪೀ—ನಾರದರಿಗೆ ಸನತ್ಕುಮಾರರು ಉಪದೇಶಿಸುತ್ತಾರೆ—

**ಉ. ॥ ವಾಗ್ವಾವ ನಾಮ್ನೋ ಭೂಯಸೀ ವಾಗ್ವಾ ಋಗ್ವೇದಂ ವಿಜ್ಞಾಪಯತಿ ಯಜುರ್ವೇದꣳ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾꣳ ಸರ್ಪದೇವಜನವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಂ ಚಾಕಾಶಂ ಚಾಪಶ್ಚ ತೇಜಶ್ಚ ದೇವಾꣳಶ್ಚ ಮನುಷ್ಯಾꣳಶ್ಚ ಪಶೂꣳಶ್ಚ ವಯಾꣳಸಿ ಚ ತೃಣವನಸ್ಪತೀನ್ ಶ್ವಾಪದಾನ್ಯಾಕೀಟಪತಂಗಪಿಪೀಲಿಕಂ ಧರ್ಮಂ ಚಾಧರ್ಮಂ ಚ ಸತ್ಯಂ ಚಾನೃತಂ ಚ ಸಾಧು ಚಾಸಾಧು ಚ ಹೃದಯಜ್ಞಂ ಚಾಹೃದಯಜ್ಞಂ ಚ ಯದ್ವೈ ವಾಙ್ನಾಭವಿಷ್ಯನ್ನ ಧರ್ಮೋ**

**ನಾಧರ್ಮೋ ವ್ಯಜ್ಞಾಪಯಿಷ್ಯನ್ನ ಸತ್ಯಂ ನಾನೃತಂ ನ ಸಾಧು ನಾಸಾಧು ನ ಹೃದಯಜ್ಞೋ ನಾಹೃದಯಜ್ಞೋ ವಾಗೇವೈತತ್ಸರ್ವಂ ವಿಜ್ಞಾಪಯತಿ ವಾಚಮುಪಾಸ್ವೇತಿ ॥ ॥ ೧ ॥**

ಅ ॥ ನಾಮಕ್ಕೆ ಅಭಿಮಾನಿನಿಯಾದ ಅಶ್ವಿನೀದೇವತೆಗಳ ಪತ್ನಿಯಾದ ಉಷಾದೇವಿಗಿಂತ *ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಸ್ವಾಹಾದೇವಿಯೇ ಧರ್ಮಜ್ಞಾನವೊದಲಾದ ಸಮಸ್ತಗುಣಗಳಿಂದ ಶ್ರೇಷ್ಠಳು. ಅಗ್ನಿಯ ಪತ್ನಿಯಾದ ಸ್ವಾಹಾದೇವಿಯು ಹೋಮಕ್ಕೆ ಉಪಯುಕ್ತವಾದ ದ್ರವ್ಯವನ್ನು ಹೊಂದುವುದರಿಂದ **ವಸು** ಎಂದು ಹೆಸರುಳ್ಳ ಅಗ್ನಿಯನ್ನು ಪೂಜಿಸುವ ಕಾರಣ **ವಾಕ್** ಎಂದು ಹೆಸರುಳ್ಳವಳು. (ಅವಳು ಶ್ರೇಷ್ಠಳು ಹೇಗೆಂದರೆ—ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಸ್ವಾಹಾದೇವಿಯ ಮಹಿಮೆ ಹೇಳುತ್ತಾರೆ.) ಸ್ವಾಹಾದೇವಿಯೇ ಇದು ಋಗ್ವೇದವು ಇತ್ಯಾದಿ †ರೂಪದಿಂದ ಋಗ್ವೇದ ಯಜುರ್ವೇದ ವೊದಲಾದವುಗಳನ್ನು ತಿಳಿಸುತ್ತಾಳೆ. (ಅಂದರೆ ವಾಗಿಂದ್ರಿಯಕ್ಕೆ ದೇವತೆಯಾದ ಸ್ವಾಹಾದೇವಿಯ ಅನುಗ್ರಹದಿಂದಲೇ ಗುರುಗಳು ಹೇಳಿದಂತೆಯೇ ತಾನೂ ಹೇಳಿ ಋಗ್ವೇದಾದಿಗಳನ್ನು ಜೀವನು ತಿಳಿಯುತ್ತಾನೆ.) (ಸ್ವಾಹಾದೇವಿಯು ನಾಮ (ಶಬ್ದ) ಪ್ರಪಂಚವನ್ನು ಮಾತ್ರ ತಿಳಿಸುವುದಲ್ಲ. ಪರಂತು ಅರ್ಥಪ್ರಪಂಚವನ್ನು ಅವಳು ತಿಳಿಸುತ್ತಾಳೆಂದು ಹೇಳುತ್ತಾರೆ) ಸ್ವರ್ಗ, ಪೃಥಿವೀ, ವಾಯು, ಆಕಾಶ, ಜಲ, ತೇಜಸ್ಸು ದೇವತೆಗಳು, ಮನುಷ್ಯರು, ಪಶುಗಳು, ಹಕ್ಕಿಗಳು, ಹುಲ್ಲು, ಮರ, ಅರಣ್ಯದ ಜಂತುವಿಶೇಷಗಳು, ಕೀಟ ಹಾತೆ ಇರುವೆ ಪರ್ಯಂತ ಎಲ್ಲಾ ವಸ್ತು, ಧರ್ಮ, ಅಧರ್ಮ, ಸತ್ಯನುಡಿ, ಸುಳ್ಳು, ಒಳ್ಳೆದು, ಕೆಟ್ಟದ್ದು, ಶ್ರೀಹರಿಯ ತತ್ತ್ವವನ್ನು ತಿಳಿದವನು, ಶ್ರೀಹರಿಯ ತತ್ತ್ವವನ್ನು ತಿಳಿಯದವನು, ಅಥವಾ ಪರಬ್ರಹ್ಮ ಹೊರತಾದ ವಸ್ತುಗಳನ್ನು ತಿಳದವನು ಇವುಗಳೆಲ್ಲವನ್ನು ಸ್ವಾಹಾದೇವಿಯೇ ತಿಳಿಸುತ್ತಾಳೆ. (ಧರ್ಮ ಅಧರ್ಮಗಳು ಅಥವಾ ಸತ್ಯ ಅನೃತ ಮೊದಲಾದವುಗಳು ಋಗ್ವೇದಾದಿಗಳನ್ನು ತಿಳಿಸುತ್ತವೆಂದು ಕೂಡುವುದರಿಂದ ವಾಕ್ ತಿಳಿಸುತ್ತದೆಂದು ಏಕೆ ಹೇಳಿದ್ದೆಂದರೆ) ವಾಗಿಂದ್ರಿಯವು ಇಲ್ಲವಾದರೆ ಧರ್ಮ, ಅಧರ್ಮ ಸತ್ಯ, ಸುಳ್ಳು, ಒಳ್ಳೇದು ಕೆಟ್ಟದ್ದು ಋಗ್ವೇದಾದಿಗಳು ಶ್ರೀಹರಿಯ ತತ್ತ್ವವನ್ನು ತಿಳಿದವ, ತಿಳಿಯದವ, ಇವು ಯಾವುದನ್ನೂ ಜೀವನು ತಿಳಿಯಲಾರನು. (ಅಂದರೆ ವಾಗಿಂದ್ರಿಯವು ಇಲ್ಲವಾದರೆ ವೇದಾಧ್ಯಯನಾದಿಗಳನ್ನು ಮಾಡಲಿಕ್ಕೆ ಸಾಧ್ಯವಿಲ್ಲದಿರುವುದರಿಂದ ವೇದಾದಿಗಳಿಂದ ಹುಟ್ಟತಕ್ಕ ಧರ್ಮಾದಿಗಳ ಜ್ಞಾನವೇ ಸರ್ವಥಾ ಹುಟ್ಟಲಾರದು.) ಅದುಕಾರಣ ಎಲ್ಲವನ್ನು ವಾಗಿಂದ್ರಿಯವೇ ಶಬ್ದೋಚ್ಚಾರಣದಿಂದ ಜೀವರಿಗೆ ತಿಳಿಸುತ್ತದೆ. ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಸ್ವಾಹಾದೇವಿಯಲ್ಲಿ ನಿಯಾಮಕನಾಗಿ ಪರಬ್ರಹ್ಮನಿದ್ದಾನೆಂದು ಉಪಾಸನೆಮಾಡು ॥ ೧ ॥

**ಉ. ॥ ಸ ಯೋ ವಾಚಂ ಬ್ರಹ್ಮೇತ್ಯುಪಾಸ್ತೇ ಯಾವದ್ವಾಚೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ವಾಚಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ವಾಚೋ ಭೂಯ ಇತಿ ವಾಚೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ದ್ವಿತೀಯಃ ಖಂಡಃ ॥ ೯–೨ ॥ ॥ ೨ ॥**

ಅ ॥ ಯಾವ ಅಧಿಕಾರಿಯು ವಾಗಿಂದ್ರಿಯದಲ್ಲಿ ಪರಬ್ರಹ್ಮನನ್ನು ಉಪಾಸನೆಮಾಡುತ್ತಾನೋ, ಆ ಉಪಾಸಕನು ವಾಗಿಂದ್ರಿಯಾಭಿಮಾನಿನಿಯಾದ ಸ್ವಾಹಾದೇವಿಯು ಎಷ್ಟು ದೇಶದಲ್ಲಿ ವ್ಯಾಪಿಸಿಕೊಂಡಿ

---

* ಜಿಹ್ವಾಮೂಲ ಮೊದಲಾದ ಎಂಟು ಸ್ಥಾನಗಳಲ್ಲಿದ್ದ ವರ್ಣಗಳನ್ನೂ ಪ್ರಕಟಿಸುವುದು ವಾಗಿಂದ್ರಿಯವು

† ಋಗ್ವೇದ—ಸರ್ವದೇವಜನವಿದ್ಯಾಂ ಎಂಬ ಪರ್ಯಂತ ಹಿಂದಿನಂತೆ ಅರ್ಥ.

ದ್ದಾನೋ ಅಷ್ಟು ದೇಶದಲ್ಲಿ ಸ್ವೇಚ್ಛಾನುಸಾರ ಸಂಚರಿಸುತ್ತಿರುತ್ತಾನೆ. ಎಲೋ ಪೂಜ್ಯರೇ ವಾಗ್ದೇವಿಗಿಂತ ಶ್ರೇಷ್ಠನು ಇದ್ದಾನೋ, ಎಂಬ ನಾರದರ ಪ್ರಶ್ನೆಗೆ ಸನತ್ಕುಮಾರರು ಶ್ರೇಷ್ಠನು ಇದ್ದಾನೆಂದರು. ಅವನನ್ನು ನನಗೆ ಉಪದೇಶಿಸಬೇಕೆಂದು ನಾರದರು ಪ್ರಾರ್ಥಿಸಿದರು.

ವಿ ॥ ಇಲ್ಲಿ ನಾಮಾಭಿಮಾನಿನಿಯಾದ ಉಷೋದೇವಿಗಿಂದ ಉತ್ತಮಳಾದ ವಾಗಿಂದ್ರಿಯಾಭಿಮಾನಿನಿಯಾದ ಸ್ವಾಹಾದೇವಿಗಿಂತ ನೀಚನಾದ ಜಲಕ್ಕೆ ಅಭಿಮಾನಿಯಾದ ಬುಧನನ್ನು ಮಧ್ಯದಲ್ಲಿ ಇಟ್ಟುಕೊಳ್ಳಬೇಕು. ॥ ೯—೨ ॥ ॥ ೨ ॥

ಪೀ—೨ನೇ ಖಂಡದ ತಾತ್ಪರ್ಯ ಹೇಳುತ್ತಾರೆ—

**ಭಾ. ॥ ತಸ್ಯಾಸ್ತು ಭೂಯಸೀ ಸ್ವಾಹಾ ಧರ್ಮಜ್ಞಾನಸುಖಾದಿಭಿಃ । ಸರ್ವೈರ್ಗುಣೈರ್ವಿಮುಕ್ತೌ ಚ ತಥಾ ಬಂಧೇ ಚ ಸರ್ವದಾ । ವಾಚೋಽಭಿಮಾನಿನೀ ಸೈವ ವಾಙ್ನಾಮ್ನೀ ಚಾಂಚನಾದ್ವಸೋಃ ॥ ಇತಿ ದ್ವಿತೀಯಃ ಖಂಡಃ ॥ ೯—೨ ॥ ॥ ೧ ॥**

ಅ ॥ ನಾಮಕ್ಕೆ ಅಭಿಮಾನಿನಿಯಾದ ಅಶ್ವಿನೀದೇವತೆಗಳ ಪತ್ನಿಯಾದ ಉಷಾದೇವಿಗಿಂತ ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಅಗ್ನಿಯ ಪತ್ನಿಯಾದ ಸ್ವಾಹಾದೇವಿಯು, ಧರ್ಮಜ್ಞಾನ ಸುಖಮೊದಲಾದ ಎಲ್ಲಾ ಗುಣಗಳಿಂದಲೂ ಮೋಕ್ಷದಲ್ಲಿಯೂ ಸಂಸಾರದಲ್ಲಿಯೂ ಸರ್ವದಾ ಶ್ರೇಷ್ಠಳೇ ಆಗಿರುತ್ತಾಳೆ. ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಸ್ವಾಹಾದೇವಿಯೇ ಅಗ್ನಿಯನ್ನು ಹೊಂದಿರುವುದರಿಂದಲೂ ಪೂಜಿಸುವುದರಿಂದಲೂ ವಾಕ್ ಎಂದು ಹೆಸರುಳ್ಳವಳು. ॥ ೯—೨ ॥ ॥ ೨ ॥

ಎರಡನೇ ಖಂಡವು ಮುಗಿಯಿತು.

## ೩ನೇ ಖಂಡವು

**ಉ. ॥ ಮನೋ ವಾವ ವಾಚೋ ಭೂಯೋ ಯಥಾ ವೈ ದ್ವೇ ವಾಽಽಮಲಕೇ ದ್ವೇ ವಾ ಕೋಲೇ ದ್ವೌ ವಾಽಕ್ಷೌ ಮುಷ್ಟಿರನುಭವತ್ಯೇವಂ ವಾಚಂ ಚ ನಾಮ ಚ ಮನೋಽನುಭವತಿ ಸ ಯದಾ ಮನಸಾ ಮನಸ್ಯತಿ ಮಂತ್ರಾನಧೀಯೀಯೇತ್ಯಥಾಧೀತೇ ಕರ್ಮಾಣಿ ಕುರ್ವೀಯೇತ್ಯಥ ಕುರುತೇ ಪುತ್ರಾಂಶ್ಚ ಪಶೂಂಶ್ಚೇಚ್ಛೇಯೇತ್ಯಥೇಚ್ಛತ ಇಮಂ ಚ ಲೋಕಮಮುಂ ಚೇಚ್ಛೇಯೇತ್ಯಥೇಚ್ಛತೇ ಮನೋ ಹ್ಯಾತ್ಮಾ ಮನೋ ಹಿ ಲೋಕೋ ಮನೋ ಹಿ ಬ್ರಹ್ಮ ಮನ ಉಪಾಸ್ಸ್ವೇತಿ ॥ ॥ ೧ ॥**

ಅ ॥ ಮಳೆಮೊದಲಾದವುಗಳಿಂದ ಅಂಕುರ (ಮೊಳಕೆ) ಮೊದಲಾದವುಗಳನ್ನು ನಿರ್ಮಿಸಲಿಕ್ಕೆ ಕಾರಣನಾದುದರಿಂದ ಮನಃ ಎನಿಸಿದ ಮನಸ್ಸಿಗೆ ಅಭಿಮಾನಿಯಾದ ಪರ್ಜನ್ಯನೇ ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಸ್ವಾಹಾದೇವಿಗಿಂತ ಶ್ರೇಷ್ಠನು (ಶ್ರೇಷ್ಠತೆಯನ್ನೂ ಸಾಮರ್ಥ್ಯವನ್ನೂ ದೃಷ್ಟಾಂತಕೊಟ್ಟು ಹೇಳುತ್ತಾರೆ.) ನೆಲ್ಲಿಕಾಯಿಗಳೆರಡು, ಪೂಗಫಲ (ಅಡಿಕೆ)ಗಳೆರಡು ದ್ಯೂತಕ್ಕೆ ಸಾಧನಗಳಾದ ಫಲವಿಶೇಷ

(ಪಗಡೆ) ಕಾಯಿಗಳೆರಡು ಇವುಗಳನ್ನು ಮುಷ್ಟಿಯು ತನ್ನೊಳಗೆ ಹೇಗೆ ಸೇರಿಸಿಕೊಳ್ಳುತ್ತದೋ (ಅಂದರೆ– ಹೇಗೆ ಎರಡು ನೆಲ್ಲಿಕಾಯಿ ಮೊದಲಾದುದು ಮುಷ್ಟಿಯೊಳಗೆ ಸೇರುತ್ತದೋ,) ಹೀಗೆಯೇ ವಾಗ್ದೇವಿಯನ್ನೂ ನಾಮಾಭಿಮಾನಿನಿಯಾದ ಉಷೋದೇವಿಯನ್ನೂ ಮನಃ ಎನಿಸಿದ ಪರ್ಜನ್ಯನು ತನ್ನ ಸಾಮರ್ಥ್ಯದಲ್ಲಿ ಸೇರಿ ಸುತ್ತಾನೆ. (ಅಂದರೆ ಅವರನ್ನು ತನ್ನ ಅಧೀನರನ್ನಾಗಿ ಮಾಡಿಕೊಳ್ಳುತ್ತಾನೆ.) (ಅದನ್ನೇ ವಿವರಿಸುತ್ತಾರೆ.) ಪುರುಷನು ಮಂತ್ರಗಳನ್ನು ಅಧ್ಯಯನಮಾಡುತ್ತೇನೆಂದು ಮನಸ್ಸಿನಿಂದ ಯಾವಾಗ ಆಲೋಚಿಸುತ್ತಾನೋ, ಆಗ ಅಧ್ಯಯನಮಾಡುತ್ತಾನೆ. ಕರ್ಮಗಳನ್ನು ಮಾಡುತ್ತೇನೆಂದು ಯಾವಾಗ ಮನಸ್ಸಿನಿಂದ ಆಲೋಚಿಸು ತ್ತಾನೋ ಆಗ ಕರ್ಮಮಾಡುತ್ತಾನೆ. ಮಕ್ಕಳನ್ನೂ ಪಶುಗಳನ್ನೂ ಹೊಂದಲು ಇಚ್ಛಿಸುವೆನೆಂದು ಯಾವಾಗ ಮನಸ್ಸಿನಿಂದ ಆಲೋಚಿಸುತ್ತಾನೋ, ಆಗ ಪುತ್ರಾದಿಗಳನ್ನು ಹೊಂದುತ್ತಾನೆ. ಈ ಲೋಕವನ್ನೂ ಪರಲೋ ಕವನ್ನೂ ಹೊಂದಲಿಚ್ಛಿಸುತ್ತೇನೆಂದು ಮನಸ್ಸಿನಿಂದ ಆಲೋಚಿಸಿದಾಗ ಹೊಂದುತ್ತಾನೆ. ಜೀವನು ಮನ ಸ್ಸಿನ ಅಧೀನನಾಗಿ ಪ್ರವೃತ್ತಿಮಾಡುವವನಾದುದರಿಂದ ಮನಸ್ಸು ಆತ್ಮ ಎನಿಸುತ್ತದೆ. ಲೋಕವು ಮನ ಸ್ಸಿನ ಅಧೀನವಾಗಿರುವುದರಿಂದ ಮನಸ್ಸು ಲೋಕವೆನಿಸುತ್ತದೆ. ಮನಸ್ಸಿನಲ್ಲಿ ಬ್ರಹ್ಮನಸನ್ನಿಧಾನವಿಶೇಷ ವಿದ್ದುದರಿಂದ ಮನಸ್ಸು ಬ್ರಹ್ಮ ಎನಿಸುತ್ತದೆ. ಅಥವಾ ಮನಸ್ಸು ಸ್ವಾಮಿಯು. ಸರ್ವಾಶ್ರಯವು. ಮನಸ್ಸು ಬ್ರಹ್ಮನಲ್ಲಿದೆ. ಆದಕಾರಣ ಮನಸ್ಸಿಗೆ ಅಭಿಮಾನಿಯಾದ ಪರ್ಜನ್ಯನಲ್ಲಿ ಪರಬ್ರಹ್ಮನಿದ್ದಾನೆಂದು ಉಪಾ ಸನೆಮಾಡು, ಎಂದರು. || ೧ ||

**ಉ. || ಸ ಯೋ ಮನೋ ಬ್ರಹ್ಮೇತ್ಯುಪಾಸ್ತೇ ಯಾವನ್ಮನಸೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ಮನೋ ಬ್ರಹ್ಮೇ- ತ್ಯುಪಾಸ್ತೇಽಸ್ತಿ ಭಗವೋ ಮನಸೋ ಭೂಯ ಇತಿ ಮನಸೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ || ಇತಿ ತೃತೀಯಃ ಖಂಡಃ || || ೯—೩ || || ೨ ||**

ಅ || ಯಾವನು ಮನಸ್ಸಿನಲ್ಲಿ ಬ್ರಹ್ಮನಿದ್ದಾನೆಂದು ಉಪಾಸನೆಮಾಡುತ್ತಾನೋ, ಆತನು ಮನಸ್ಸಿಗೆ ಅಭಿಮಾನಿಯಾದ ಪರ್ಜನ್ಯನು ಎಷ್ಟು ದೇಶದಲ್ಲಿ ಇರುತ್ತಾನೋ, ಅಷ್ಟು ದೇಶದಲ್ಲಿ ಸ್ವೇಚ್ಛಾನುಸಾರ ಇರು ತ್ತಾನೆ. ಆ ಪರ್ಜನ್ಯನಿಗಿಂತ ಶ್ರೇಷ್ಠನು ಇದ್ದಾನೋ, ಎಂದು ಕೇಳಿದ್ದಕ್ಕೆ. ಶ್ರೇಷ್ಠನು ಇದ್ದಾನೆಂದು ಸನ ತ್ಕುಮಾರರು ಉತ್ತರಿಸಿದರು. ಅದನ್ನು ತಿಳಿಸಬೇಕೆಂದು ನಾರದರು ಪ್ರಾರ್ಥಿಸಿದರು. ||೯—೩|| || ೨ ||

**ಭಾ. || ಏವಂ ತಸ್ಯಾ ವಿಮುಕ್ತಾ ಚ ಪರ್ಜನ್ಯಃ ಸರ್ವತೋ ವರಃ | ಮನೋಭಿ- ಮಾನೀ ಸಂಪ್ರೋಕ್ತೋ ವೃಷ್ಟ್ಯಾ ನಿರ್ಮಾಣತೋ ಮನಃ || ಇತಿ ತೃತೀಯಃ ಖಂಡಃ || || ೯—೩ || || ೧ ||**

ಅ || ಹೀಗೆಯೇ ಆ ಸ್ವಾಹಾದೇವಿಗಿಂತ ಪರ್ಜನ್ಯನು (ಆದಿತ್ಯನು) ಸರ್ವಗುಣಗಳಿಂದಲೂ ಮೋಕ್ಷ ದಲ್ಲಿಯೂ ಸಂಸಾರದಲ್ಲಿಯೂ ಶ್ರೇಷ್ಠನು. ಪರ್ಜನ್ಯನೆಂಬ ಆದಿತ್ಯನು ಮನಸ್ಸಿಗೆ ಅಭಿಮಾನಿಯಾದುದ ರಿಂದಲೂ ಮಳೆಯಿಂದ ಅಂಕುರಾದಿಗಳನ್ನು ನಿರ್ಮಾಣಮಾಡುವುದರಿಂದಲೂ ಮನಃ ಎನಿಸುತ್ತಾನೆ.

ವಿ || ಇಲ್ಲಿ ಪರ್ಜನ್ಯನನ್ನು ಹೇಳುವ ಮನಶ್ಶಬ್ದದಿಂದ **ವರುಣಾನೀ ಸಂಜ್ಞಾ ರೋಹಿಣೀ ಧಾರಿಣೀ ವಿರಾಟ್** ಎಂಬೀ ಪರ್ಜನ್ಯನಿಗೆ ಸಮಾನಿಕರಾದ ಐದು ದೇವಿಯರನ್ನು ಇಟ್ಟುಕೊಳ್ಳಬೇಕು. ||೯—೩|| || ೩ ||

**ಮೂರನೇ ಖಂಡವು ಮುಗಿಯಿತು.**

## ೪ನೇ ಖಂಡವು

**ಉ. ॥ ಸಂಕಲ್ಪೋ ವಾವ ಮನಸೋ ಭೂಯಾನ್ಯದಾ ವೈ ಸಂಕಲ್ಪ-ತೇಽಥ ಮನಸ್ಯತ್ಯಥ ವಾಚಮೀರಯತಿ ತಾಮು ನಾಮ್ನೀರಯತಿ ನಾಮ್ನಿ ಮಂತ್ರಾ ಏಕಂ ಭವಂತಿ ಮಂತ್ರೇಷು ಕರ್ಮಾಣಿ ॥ ॥ ೧ ॥**

ಅ ॥ ಹಗಲು ಸಂಕಲ್ಪಕ್ಕೆ ಕಾರಣನಾದ, ಸಂಕಲ್ಪಕ್ಕೆ ಅಭಿಮಾನಿಯಾದ ಸಂಕಲ್ಪನೆನಿಸಿದ ಮಿತ್ರ ದೇವನು ಮನಃ ಎನಿಸಿದ ಪರ್ಜನ್ಯನಿಂದಲೂ ಪರ್ಜನ್ಯನ ಸಮಾನಿಕರಿಂದಲೂ ಶ್ರೇಷ್ಠನು. ಯಾವಾಗ ಪುರುಷನು ಸಂಕಲ್ಪನೆನಿಸಿದ ಮಿತ್ರದೇವನಿಂದ ಪ್ರೇರಿಸಲ್ಪಟ್ಟವನಾಗಿ ಮನನಾದಿಗಳನ್ನು ಮಾಡುತ್ತೇನೆಂದು ಸಂಕಲ್ಪಮಾಡುತ್ತಾನೋ, ಆಗ ಜೀವನು ಮನನಾದಿಗಳಲ್ಲಿ ಮನಸ್ಸನ್ನು ಪ್ರೇರಿಸುತ್ತಾನೆ. ಮನಸ್ಸಿನ ವ್ಯಾಪಾರವಾದಮೇಲೆ ವಾಗಿಂದ್ರಿಯವನ್ನು ಪ್ರೇರಿಸುತ್ತಾನೆ. (ಅಂದರೆ ವಾಗಿಂದ್ರಿಯ ವ್ಯಾಪಾರವಾಗುತ್ತದೆ.) ವಾಗಿಂದ್ರಿಯವನ್ನು ಶ್ರೀಹರಿಯ ನಾಮವಾದ ಋಗ್ವೇದಮೊದಲಾದ ಶಬ್ದರಾಶಿಗಳ ವಿಷಯದಲ್ಲಿ ಪ್ರೇರಿಸುತ್ತಾನೆ. (ಅಂದರೆ ಶ್ರೀಹರಿಯ ನಾಮವಾದ ಋಗಾದಿ ಶಬ್ದರಾಶಿಯನ್ನು ಉಚ್ಚರಿಸುತ್ತಾನೆ.) ಋಗಾದಿ ಸಮಸ್ತ ಶಬ್ದರಾಶಿಯಲ್ಲಿ ಮಂತ್ರಗಳು ಸೇರುತ್ತವೆ. (ಸಾಮಾನ್ಯದಲ್ಲಿ ವಿಶೇಷವು ಸೇರುತ್ತದೆ. ಅಂದರೆ ಒಂದೇ ಅರ್ಥವುಳ್ಳವುಗಳಾಗುತ್ತವೆ) ಮಂತ್ರಗಳಲ್ಲಿ ಕರ್ಮಗಳು ಸೇರುತ್ತವೆ. (ಅಂದರೆ ಮಂತ್ರಪ್ರಕಾಶಿತಗಳಾದ ಕರ್ಮಗಳು ಮಾಡಲ್ಪಡುತ್ತವೆ. ಅಮಂತ್ರಕವಾದುದು ಸತ್ಕರ್ಮವಿಲ್ಲ)

ವಿ ॥ (1) ರೈವತಮೊದಲಾದ ಹನ್ನೊಂದು ಮನುಗಳ **ಚ್ಯವನ ಉಚಥ್ಯ ವೈನ್ಯ ಶರಬಿಂದು ಹೈಹಯ ಪ್ರಿಯವ್ರತ ಗಯ** ಅನುಕ್ತ ಶತಸ್ಥದೇವಾದಿಗಳೂ ಪರ್ಜನ್ಯಮೊದಲಾದ ಆರು ಮಂದಿಯಿಂದ ಉತ್ತಮರು. ಅವರಿಗಿಂತ **ಅಶ್ವಿನೀದೇವತೆಗಳೂ ಗಣಪತಿ ಕುಬೇರ ವಿಷ್ವಕ್ಸೇನ** ಇವರು ಶ್ರೇಷ್ಠರು. ಇವರಿಗಿಂತ ಸಂಕಲ್ಪನೆನಿಸಿದ **ಮಿತ್ರದೇವನು** ಶ್ರೇಷ್ಠನು. (2) ಸಂಕಲ್ಪ ಶಬ್ದದಿಂದ **ನಿರ್ಋತಿ**, ಬೃಹಸ್ಪತಿಯ ಹೆಂಡತಿಯಾದ **ತಾರಾದೇವಿ. ಪ್ರಾವಹೀ** ಹೀಗೆ ಮಿತ್ರನಿಗೆ ಸಮಾನಿಕರಾದ ಮೂರು ದೇವತೆಗಳನ್ನು ಇಟ್ಟುಕೊಳ್ಳಬೇಕು. ॥ ೧ ॥

**ಉ. ॥ ತಾನಿ ಹ ವಾ ಏತಾನಿ ಸಂಕಲ್ಪೈಕಾಯನಾನಿ ಸಂಕಲ್ಪಾತ್ಮಕಾನಿ ಸಂಕಲ್ಪೇ ಪ್ರತಿಷ್ಠಿತಾನಿ ಸಮಕ್ಲೃಪತಾಂ ದ್ಯಾವಾಪೃಥಿವೀ ಸಮಕಲ್ಪೇತಾಂ ವಾಯುಶ್ಚಾಕಾಶಶ್ಚ ಸಮಕಲ್ಪಂತಾಮಾಪಶ್ಚ ತೇಜಶ್ಚ ತೇಷಾಂ ಸಂಕ್ಲೃಪ್ತ್ಯೈ ವರ್ಷಂ ಸಂಕಲ್ಪತೇ ವರ್ಷಸ್ಯ ಸಂಕ್ಲೃಪ್ತ್ಯಾ ಅನ್ನಂ ಸಂಕಲ್ಪತೇಽನ್ನಸ್ಯ ಸಂ-ಕ್ಲೃಪ್ತ್ಯೈ ಪ್ರಾಣಾಃ ಸಂಕಲ್ಪಂತೇ ಪ್ರಾಣಾನಾಂ ಸಂಕ್ಲೃಪ್ತ್ಯೈ ಮಂತ್ರಾಃ ಸಂ-ಕಲ್ಪಂತೇ ಮಂತ್ರಾಣಾಂ ಸಂಕ್ಲೃಪ್ತ್ಯೈ ಕರ್ಮಾಣಿ ಸಂಕಲ್ಪಂತೇ ಕರ್ಮಣಾಂ ಸಂಕ್ಲೃಪ್ತ್ಯೈ ಲೋಕಾಃ ಸಂಕಲ್ಪಂತೇ ಲೋಕಾನಾಂ ಸಂಕ್ಲೃಪ್ತ್ಯೈ ಸರ್ವಂ ಸಂಕಲ್ಪತೇ ಸ ಏಷ ಸಂಕಲ್ಪಃ ಸಂಕಲ್ಪಮುಪಾಸ್ಸ್ವೇತಿ ॥ ॥ ೨ ॥**

ಅ ॥ ಆ ಈ ಮನಸ್ಸು ವಾಕ್ ನಾಮ ಮಂತ್ರ ಕರ್ಮಗಳೂ, ಅವುಗಳಿಗೆ ಅಭಿಮಾನಿಗಳಾದ ಪರ್ಜನ್ಯಾದಿಗಳೂ ಸಂಕಲ್ಪನೆನಿಸಿದ ಮಿತ್ರನ ಅಧೀನಗಳು. ಸಂಸಾರದಲ್ಲಿಯೂ ಮುಖ್ಯವಾಗಿ ಸಂಕಲ್ಪನನ್ನೇ

ಆಶ್ರಯಿಸಿಕೊಂಡಿರುವವುಗಳು.) ಸಂಕಲ್ಪಸ್ವರೂಪಗಳು. ಮುಕ್ತಿಯಲ್ಲಿಯೂ ಸಂಕಲ್ಪನೆನಿಸಿದ ಮಿತ್ರನಲ್ಲಿ ಆಶ್ರಿತಗಳು (ಅಂದರೆ ಮೋಕ್ಷದಲ್ಲಿಯೂ ಮಿತ್ರದೇವನ ಅಧೀನಗಳು.) (ಇಷ್ಟುಮಾತ್ರವಲ್ಲ. ಸಂಕಲ್ಪನಿಂದಲೇ ಸ್ವರ್ಗಭೂಮ್ಯಾದಿಗಳು ಹುಟ್ಟುವುದೆನ್ನುತ್ತಾರೆ) ಸ್ವರ್ಗಭೂಮಿಗಳು ಸಂಕಲ್ಪನಿಂದಲೇ ಹುಟ್ಟಿದವು. ವಾಯು ಆಕಾಶ ಜಲ ತೇಜಸ್ಸು ಇವುಗಳು ಸಂಕಲ್ಪನಿಂದಲೇ ಹುಟ್ಟಿದವು. ಆ ದ್ಯಾವಾಪೃಥಿವ್ಯಾದಿಗಳ ಸ್ಥಿತಿಗಾಗಿ ವೃಷ್ಟಿಯು ಹುಟ್ಟುತ್ತದೆ. ಅಥವಾ ಮಿತ್ರದೇವನು ವೃಷ್ಟಿಯನ್ನು ಮಾಡುತ್ತಾನೆ. ವೃಷ್ಟಿಯಿಂದ ಅನ್ನವು ಹುಟ್ಟುತ್ತದೆ. ಅನ್ನದಿಂದ ಪ್ರಾಣಗಳು ವೃದ್ಧಿಯನ್ನು ಹೊಂದುತ್ತವೆ. ಪ್ರಾಣಗಳ ಸ್ಥಿತಿಗಾಗಿ ಮಂತ್ರಗಳು ಹುಟ್ಟುತ್ತವೆ. ಮಂತ್ರಗಳಿಂದ ಅಗ್ನಿಹೋತ್ರಮೊದಲಾದ ಕರ್ಮಗಳು ಹುಟ್ಟುತ್ತವೆ. (ಅಂದರೆ ಮಂತ್ರಪ್ರಕಾಶಿತಗಳಾದ ಕರ್ಮಗಳು ಫಲ ಹುಟ್ಟಿಸಲಿಕ್ಕೆ ಸಮರ್ಥಗಳಾಗುತ್ತವೆ.) ಕರ್ಮಗಳ ಸಾಫಲ್ಯಕ್ಕಾಗಿ ಲೋಕಗಳು, ಅವುಗಳಿಗಾಗಿ ಅಚೇತನವೆಲ್ಲವೂ ಇರುವುದು. (ಈ ಪ್ರಕಾರ ಸಂಕಲ್ಪನೆನಿಸಿದ ಮಿತ್ರದೇವನು ದ್ಯಾವಾಪೃಥಿವ್ಯಾದಿಗಳನ್ನು ಸೃಷ್ಟಿಮಾಡಿ ಅವುಗಳ ಸಾಫಲ್ಯಕ್ಕಾಗಿ ವೃಷ್ಟ್ಯಾದಿಗಳನ್ನು ಪರಂಪರೆಯಾಗಿ ಸೃಷ್ಟಿಸಿರುವನು) ಅಂತಹ ಮಿತ್ರದೇವನಲ್ಲಿಯೂ, ಅವನಿಗೆ ಸಮಾನಿಕರಾದ ದೇವತೆಗಳಲ್ಲಿಯೂ ಪರಬ್ರಹ್ಮನನ್ನು ಉಪಾಸನೆಮಾಡು, ಎಂದರು.

ವಿ || (೧) ದ್ಯಾವಾಪೃಥಿವ್ಯಾದಿಶಬ್ದಗಳಿಂದ ಜಡಗಳನ್ನೂ ಚೇತನಗಳನ್ನೂ ಇಟ್ಟುಕೊಳ್ಳಬೇಕು. (೨) ಸಂಕಲ್ಪಾಖ್ಯಮಿತ್ರನಿಂದ ಜಡಗಳ ಉತ್ಪತ್ತಿಯು, ಚೇತನಗಳಿಗೆ ವಾಯ್ವಾದಿಗಳಿಂದ ಸ್ಥಿತಿಯು, ಹೀಗೆ ಇಟ್ಟುಕೊಳ್ಳಬೇಕು.

**ಉ. || ಸ ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇ ಕ್ಲೃಪ್ತಾನ್ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿಸಿಧ್ಯತಿ ಯಾವತ್ಸಂಕಲ್ಪಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಃ ಸಂಕಲ್ಪಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಃ ಸಂಕಲ್ಪಾದ್ಭೂಯ ಇತಿ ಸಂಕಲ್ಪಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ || ಇತಿ ಚತುರ್ಥಃ ಖಂಡಃ || ೯—೪ || || ೩ ||**

ಅ || ಯಾವನು ಸಂಕಲ್ಪಾಭಿಮಾನಿಯಾದ ಮಿತ್ರದೇವನಲ್ಲಿ ಪರಬ್ರಹ್ಮನನ್ನು ಉಪಾಸನೆಮಾಡುತ್ತಾನೋ, ಆತನು ಮಿತ್ರದೇವನಿಂದ ಅಧಿಷ್ಠಿತಗಳೂ, ನಿತ್ಯಗಳೂ, ಯಾವಾಗಲೂ ಒಂದೇರೀತಿಯಿರುವ ದುಃಖವಿಲ್ಲದಿರುವವುಗಳೂ ಆದ ಲೋಕಗಳನ್ನು ತಾನೂ ನಿತ್ಯನೂ ಒಂದೇರೀತಿಯಿರುವವನೂ, ದುಃಖರಹಿತನೂ ಆಗಿ ಹೊಂದುತ್ತಾನೆ. ಮಿತ್ರನು ಎಷ್ಟು ದೇಶದಲ್ಲಿ ಇರುತ್ತಾನೋ, ಅಷ್ಟು ದೇಶದಲ್ಲಿ ಸ್ವೇಚ್ಛಾನುಸಾರವಾಗಿ ಇರುತ್ತಾನೆ. ಆ ಸಂಕಲ್ಪಾಭಿಮಾನಿಯಾದ ಮಿತ್ರನಿಂದಲೂ, ಆತನಿಗೆ ಸಮಾಧಿಕರಾದ ದೇವತೆಗಳಿಂದಲೂ ಶ್ರೇಷ್ಠನು ಇದ್ದಾನೋ ಏನು? ಎಂದು ನಾರದರ ಪ್ರಶ್ನೆಗೆ ಶ್ರೇಷ್ಠನಿದ್ದಾನೆಂದು ಸನತ್ಕುಮಾರರು ಉತ್ತರಿಸಿದರು. ಅದನ್ನು ಉಪದೇಶಮಾಡಬೇಕೆಂದು ನಾರದರು ಬೇಡಿಕೊಂಡರು. || ೯—೪ || || ೩ ||

**ನಾಲ್ಕನೇ ಖಂಡವುಮುಗಿಯಿತು.**

## ೫ನೇ ಖಂಡವು

**ಉ. ॥ ಚಿತ್ತಂ ವಾವ ಸಂಕಲ್ಪಾದ್ಭೂಯೋ ಯದಾವೈ ಚೇತಯತೇಽಥ ಸಂಕಲ್ಪಯತೇಽಥ ಮನಸ್ಯತ್ಯಥ ವಾಚಮೀರಯತಿ ತಾಮು ನಾಮ್ನೀರಯತಿ ನಾಮ್ನಿ ಮಂತ್ರಾ ಏಕಂ ಭವಂತಿ ಮಂತ್ರೇಷು ಕರ್ಮಾಣಿ ॥ ॥ ೧ ॥**

ಅ ॥ ಅಸ್ಥಿರವಾದ ಸ್ಮರಣರೂಪವಾದ ಚಿತ್ತಕ್ಕೆ ಅಭಿಮಾನಿಯಾದ, ಹೋಮಕುಂಡದಲ್ಲಿ ಸಂಬದ್ಧವಾಗಿರುವುದರಿಂದ ಚಿತ್ತನೆನಿಸಿದ, ಅಗ್ನಿಯೂ, ಅಗ್ನಿಗೆ ಸಮಾನರಾದ, ಭೃಗು, ದಕ್ಷಪ್ರಜಾಪತಿಯ ಪತ್ನಿಯಾದ ಪ್ರಸೂತಿ, ಹೀಗೆ ಈ ಮೂರು ದೇವತೆಗಳೂ, ಸಂಕಲ್ಪನೆನಿಸಿದ ಮಿತ್ರನಿಂದಲೂ ಮಿತ್ರನಿಗೆ ಸಮಾನಿಕವಾದ ನಿರ್ಋತಿ ತಾರಾ ಪ್ರಾವಹೀ ಎಂಬ ದೇವತೆಗಳಿಂದಲೂ ಶ್ರೇಷ್ಠನು. (ಮತ್ತು ಈ ಮಿತ್ರಮೊದಲಾದ ನಾಲ್ಕು ದೇವತೆಗಳಿಂದಲೂ ಉತ್ತಮರಾದ ಮರೀಚಿ ಅತ್ರಿ ಅಂಗಿರಃ ಪುಲಸ್ತ್ಯ ಪುಲಹ ಕ್ರತು ವಸಿಷ್ಠ ವಿಶ್ವಾಮಿತ್ರ ವೈವಸ್ವತಮನು ಇವರಿಂದಲೂ ಉತ್ತಮನು.) ಮನುಷ್ಯನು ಚಿತ್ತಾಭಿಮಾನಿಯಾದ ಅಗ್ನಿಯಿಂದ ಪ್ರೇರಿತನಾಗಿ ಕರ್ತವ್ಯ ಅಕರ್ತವ್ಯಗಳನ್ನು ತಿಳಿಯುತ್ತಾನೆ. ಆಮೇಲೆ ಈ ಕರ್ಮ ಮಾಡುತ್ತೇನೆ, ಇತ್ಯಾದಿ ರೂಪದಿಂದ ಸಂಕಲ್ಪಮಾಡುತ್ತಾನೆ. ಆಮೇಲೆ ಕರ್ಮದಲ್ಲಿ ಮನಸ್ಸನ್ನು ಪ್ರೇರಿಸುತ್ತಾನೆ........* ॥ ೧ ॥

**ಉ. ॥ ತಾನಿ ಹ ವಾ ಏತಾನಿ ಚಿತ್ತೈಕಾಯನಾನಿ ಚಿತ್ತಾತ್ಮಕಾನಿ ಚಿತ್ತೇ ಪ್ರತಿಷ್ಠಿತಾನಿ ತಸ್ಮಾದ್ಯದ್ಯಪಿ ಬಹುವಿದಚಿತ್ತೋ ಭವತಿ ನಾಯಮಸ್ತೀತ್ಯೇ-ವೈನಮಾಹುರ್ಯದಯಂ ವೇದ ಯದ್ವಾ ಅಯಂ ವಿದ್ವಾನ್ನೇತ್ಥಮಚಿತ್ತಃ ಸ್ಯಾದಿತ್ಯಥ ಯದ್ಯಲ್ಪವಿಚ್ಚಿತ್ತವಾನ್ಭವತಿ ತಸ್ಮಾದೇತತ್ ಶುಶ್ರೂಷಂತೇ ಚಿತ್ತಂ ಹ್ಯೇವೈಷಾಮೇಕಾಯನಂ ಚಿತ್ತಮಾತ್ಮಾ ಚಿತ್ತಂ ಪ್ರತಿಷ್ಠಾ ಚಿತ್ತ-ಮುಪಾಸ್ವೇತಿ ॥ ॥ ೨ ॥**

ಅ ॥ ಚೇತನ ಅಚೇತನರೂಪಗಳಾದ ಸಂಕಲ್ಪಾದಿಗಳು ಅಗ್ನಿ ಭೃಗು ಪ್ರಸೂತಿ ಎಂಬ ಮೂರು ದೇವತೆಗಳ ಅಧೀನರು. (ಸಂಕಲ್ಪಾದಿಗಳು ಚಿತ್ತದ ಅಧೀನಗಳಾಗಿರುವುದರಿಂದ) ಚಿತ್ತವೇ ಪ್ರಧಾನವಾಗಿ ಉಳ್ಳವುಗಳು. ಚಿತ್ತದಿಂದ ಹುಟ್ಟತಕ್ಕವುಗಳು. ಚಿತ್ತದಲ್ಲಿ ಆಶ್ರಿತಗಳಾಗಿವೆ ಚಿತ್ತವು ಉತ್ತಮವಾಗಿರುವುದರಿಂದಲೇ ಬಹುಶಾಸ್ತ್ರಾದಿಗಳನ್ನು ತಿಳಿದವನಾದರೂ ಸ್ಮರಣಸಾಮರ್ಥ್ಯವಿಲ್ಲವನಾದರೆ ಆತನನ್ನು ನಿಪುಣರಾದ ಲೌಕಿಕರು ಇಲ್ಲವೆನ್ನುತ್ತಾರೆ. (ಆತನು ಇದ್ದರೂ ಇಲ್ಲದೆ ಇದ್ದಹಾಗೆ ಎನ್ನುತ್ತಾರೆ. ಇವನು ವಿದ್ವಾಂಸನು ಅಲ್ಲವೆಂದೇ ಹೇಳುತ್ತಾರೆ.) (ಅದನ್ನೇ ವಿವರಿಸುತ್ತಾರೆ) ಇವರು ಶಾಸ್ತ್ರಾದಿಗಳನ್ನು ಸಾಮಾನ್ಯವಾಗಿ ತಿಳಿದಿದ್ದರೆ ಅಥವಾ ವಿಶೇಷವಾಗಿ ತಿಳಿದಿದ್ದರೆ ಸ್ಮರಣವಿಲ್ಲದವರು ಆಗುತ್ತಿರಲಿಲ್ಲ. (ಆದಕಾರಣ ಇವರು ಶಾಸ್ತ್ರಶ್ರವಣಮಾಡಿದ್ದರೂ ಮಾಡದಿದ್ದಹಾಗೆಯೇ ಎನ್ನುತ್ತಾರೆ. ಆದಪ್ರಯುಕ್ತ ಅಜ್ಞಾನಿಗಳೇ ಸರಿ) ಸ್ವಲ್ಪ ತಿಳಿದವರೇ ಆದರೂ ಸ್ಮರಣೆಯಿರುವವರಾದರೆ, ಅವರಿಂದ ತಮತಮಗೆ ಅಭಿಮತವಾದ ಪ್ರಮೇಯವನ್ನು ಕೇಳಲಿಚ್ಛಿಸುತ್ತಾರೆ. ಅಥವಾ ಪ್ರಮೇಯವನ್ನು ತಿಳಿಯುವುದಕ್ಕಾಗಿ ಸೇವಕರು ಸೇವಿಸುತ್ತಾರೆ. (ಸಂಕಲ್ಪ ಮನಸ್ಸು ಮೊದಲಾದುದಕ್ಕೆ) ಚಿತ್ತಾಭಿಮಾನಿಗಳಾದ ಅಗ್ನಿ ಭೃಗು ಪ್ರಸೂತಿಗಳು ಮೂವರು ಮುಖ್ಯಾಶ್ರಯರು, ಚಿತ್ತದ ಅಧೀನಗಳಾದ ಸಂಕಲ್ಪಾದಿಗಳುಳ್ಳವರಾದುದರಿಂದ ಚೇತನರು

* ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು

ಚಿತ್ತ ಎನಿಸುತ್ತಾರೆ. ಚಿತ್ತವು ಮುಕ್ತಿಯಲ್ಲಿಯೂ ಆಶ್ರಯವಾಗಿದೆ. ಚಿತ್ತಕ್ಕೆ ಅಭಿಮಾನಿಗಳಾದ ಅಗ್ನಿ ಮೊದಲಾದ ಮೂರು ದೇವತೆಗಳಲ್ಲಿ ಪರಬ್ರಹ್ಮನನ್ನು ಉಪಾಸನೆಮಾಡು. ॥ ೨ ॥

**ಉ. ॥ ಸ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇ ಚಿತ್ತಾನ್ವೈ ಸ ಲೋಕಾನ್ ಧ್ರುವಾನ್ ಧ್ರುವಃ ಪ್ರತಿಷ್ಠಿತಾನ್ಪ್ರತಿಷ್ಠಿತೋಽವ್ಯಥಮಾನಾನವ್ಯಥಮಾನೋಽಭಿಸಿದ್ಧ್ಯತಿ ಯಾವಚ್ಚಿತ್ತಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಶ್ಚಿತ್ತಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಶ್ಚಿತ್ತಾದ್ಭೂಯ ಇತಿ ಚಿತ್ತಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ಪಂಚಮಃ ಖಂಡಃ ॥**
**॥ ೯—೫ ॥ ॥ ೩ ॥**

ಅ ॥ ಯಾವನು ಅಗ್ನ್ಯಾದಿಗಳಲ್ಲಿ ಪರಬ್ರಹ್ಮನನ್ನು ಉಪಾಸನೆ ಮಾಡುತ್ತಾನೋ, ಆತನು ಚಿತ್ತಾಭಿಮಾನಿಗಳಿಗೆ ಕ್ಲೃಪ್ತಗಳಾದ........ಅಗ್ನ್ಯಾದಿಗಳಿಂದ ಅಧಿಷ್ಠಿತಗಳಾದ ಲೋಕಗಳನ್ನು ತಾನೂ ಅಂತಹವನಾಗಿ ಹೊಂದುತ್ತಾನೆ........ಅಗ್ನಿ ಭೃಗು ಪ್ರಸೂತಿಗಳಿಂದ ಶ್ರೇಷ್ಠನು ಇದ್ದಾನೋ ಏನು? ಎಂಬ ಪ್ರಶ್ನೆಗೆ ಸನತ್ಕುಮಾರರು ಇದ್ದಾನೆಂದು ಉತ್ತರಿಸಿದರು. ಅದನ್ನು ಹೇಳಬೇಕೆಂದು ಪ್ರಾರ್ಥಿಸಿದರು. ॥೯-೫॥ ೩ ॥

ಐದನೇ ಖಂಡವು ಮುಗಿಯಿತು.

## ೬ನೇ ಖಂಡವು

**ಉ. ॥ ಧ್ಯಾನಂ ವಾವ ಚಿತ್ತಾದ್ಭೂಯೋ ಧ್ಯಾಯತೀವ ಪೃಥಿವೀ ಧ್ಯಾಯತೀವ ದ್ಯೌರ್ಧ್ಯಾಯತೀವಾಂತರಿಕ್ಷಂ ಧ್ಯಾಯಂತೀವಾಪೋ ಧ್ಯಾಯಂತೀವ ಪರ್ವತಾ ಧ್ಯಾಯಂತೀವ ದೇವಮನುಷ್ಯಾಸ್ತಸ್ಮಾದ್ಯ ಇಹ ಮನುಷ್ಯಾಣಾಂ ಮಹತ್ತಾಂ ಪ್ರಾಪ್ನುವಂತಿ ಧ್ಯಾನಾಪಾದಾಂಶಾ ಇವೈವ ತೇ ಭವಂತ್ಯಥ ಯೇಽಲ್ಪಾಃ ಕಲಹಿನಃ ಪಿಶುನಾ ಉಪವಾದಿನಸ್ತೇಽಥ ಯೇ ಪ್ರಭವೋ ಧ್ಯಾನಾಪಾದಾಂಶಾ ಇವೈವ ತೇ ಭವಂತಿ ಧ್ಯಾನಮುಪಾಸ್ವೇತಿ ॥ ॥ ೧ ॥**

ಅ ॥ ಧ್ಯಾನಕ್ಕೆ ಅಭಿಮಾನಿಯಾದ, ಸತ್ಯ ಸುಳ್ಳುಗಳನ್ನು ವಿವೇಚನವಮಾಡುವುದಕ್ಕಾಗಿ ಬ್ರಹ್ಮನು ಅಜ್ಞೆಕೊಟ್ಟಕಾರಣ ಧ್ಯಾನನೆನಿಸಿದ ವರುಣನು, ಚಿತ್ತ ಎನಿಸಿದ ಅಗ್ನಿ ಭೃಗು ಪ್ರಸೂತಿ ಎಂಬೀ ಮೂರು ದೇವತೆಗಳಿಗಿಂತಲೂ (ಈ ಮೂವರಿಂದ ಶ್ರೇಷ್ಠರಾದ ನಾರದರಿಗಿಂತಲೂ) ಶ್ರೇಷ್ಠನು. (ಧ್ಯಾನಾಭಿಮಾನಿಯಾದ ವರುಣನ ಮಹಿಮೆ ಹೇಳುತ್ತಾರೆ) ಪೃಥಿವೀ, ಸ್ವರ್ಗ, ಅಂತರಿಕ್ಷ, ಜಲ, ಪರ್ವತ, ಇವುಗಳಿಗೆ ಅಭಿಮಾನಿಗಳಾದ ದೇವತೆಗಳು ಅಥವಾ ಪೃಥಿವೀ ಮೊದಲಾದ ಎಲ್ಲಾ ಚೇತನರೂ, ಅಸ್ವತಂತ್ರರಾದರೂ ಭಗವದ್ಧ್ಯಾನದಲ್ಲಿ ಆಸಕ್ತರೇ ಆಗಿರುತ್ತಾರೆ. (ಬಹುಭಾಷಿಗಳಲ್ಲ) ಮನುಷ್ಯರಾಗಿ ಹುಟ್ಟಿದ ದೇವತೆಗಳು ಧ್ಯಾನ ಮಾಡುತ್ತಿರುತ್ತಾರೆ. (ಬಹುಭಾಷಿಗಳಲ್ಲ.) ಧ್ಯಾನವು ಶ್ರೇಷ್ಠವಾಗಿರುವುದರಿಂದಲೇ ಈ ಲೋಕದಲ್ಲಿ ಯಾವ ಜನರು ಮನುಷ್ಯರ ಮಧ್ಯದಲ್ಲಿ ಜ್ಞಾನ, ಬಲ, ಐಶ್ವರ್ಯಾದಿಗಳಿಂದ ಮಹತ್ತ್ವವನ್ನು

ಹೊಂದುತ್ತಾರೋ, ಆ ಜನರು ಧ್ಯಾನದಿಂದ ಸಿಗತಕ್ಕ ಫಲದ ಏಕದೇಶವುಳ್ಳವರಂತೆಯೇ. (ಪೂರ್ಣ ಧ್ಯಾನವುಳ್ಳವರಂತೆ ಅಲ್ಲ. ಅದುಕಾರಣ ಧ್ಯಾನವೇ ಶ್ರೇಷ್ಠವು. ಈಗ ಜನರಲ್ಲಿ ಕಾಣತಕ್ಕ ಮಹತ್ತ್ವವು ಪೂರ್ವದಲ್ಲಿ ಮಾಡಿದ ಧ್ಯಾನದಿಂದುಂಟಾದ ಫಲದ ಏಕದೇಶವು. ಸಾಧನ ಮಾಡಿಸಲಿಕ್ಕೂ, ಫಲಕೊಡಲಿಕ್ಕೂ, ಶ್ರೀಹರಿಯೇ ಸ್ವತಂತ್ರನು.) ಮತ್ತು ಯಾವ ಕ್ಷುದ್ರರು ಜ್ಞಾನ ಬಲ ಐಶ್ವರ್ಯಾದಿಗಳಿಂದ ವಿರಹಿತರಾಗಿರುತ್ತಾರೋ, ಅವರು ಜಗಳದಲ್ಲಿಯೇ ಆಸಕ್ತರು. ಇನ್ನೊಬ್ಬರ ದೋಷಗಳನ್ನು ಪ್ರಕಟಿಸುವವರು. ಅಥವಾ ಪರರ ದ್ರವ್ಯ ಮೊದಲಾದ ವಿಷಯದಲ್ಲಿ ರಾಜಾದಿಗಳಲ್ಲಿ ಚಾಡಿ ಹೇಳುವವರಾಗುತ್ತಾರೆ. ಪರರ ದೋಷಗಳನ್ನು ಅನುವಾದ ಮಾಡುವವರೂ ಆಗುತ್ತಾರೆ. (ಧ್ಯಾನ ಲೇಶವನ್ನೂ ಮಾಡಲಾರರು.) ಯಾರು ಜ್ಞಾನ ಮೊದಲಾದ ಐಶ್ವರ್ಯವುಳ್ಳವರಾಗುತ್ತೇವೆಂದು ಇಚ್ಛಿಸುತ್ತಾರೋ, ಅವರು ಧ್ಯಾನವನ್ನು ಮಾಡಿದುದರಿಂದುಂಟಾಗತಕ್ಕ ಫಲದ ಏಕದೇಶವನ್ನು ಹೊಂದುತ್ತಾರೆ. (ಹೀಗೆ ಧ್ಯಾನದ ಮಹಾತ್ಮ್ಯ ಹೇಳಿ ಕರ್ತವ್ಯ ಹೇಳುತ್ತಾರೆ—) ಧ್ಯಾನಾಭಿಮಾನಿಯಾದ ವರುಣನಲ್ಲಿ ಪರಬ್ರಹ್ಮನಿದ್ದಾನೆಂದು ಉಪಾಸನೆಮಾಡು, ಎಂದರು. ॥ ೧ ॥

**ಉ. ॥ ಸ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇ ಯಾವದ್ಧ್ಯಾನಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ಧ್ಯಾನಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ಧ್ಯಾನಾದ್ಭೂಯ ಇತಿ ಧ್ಯಾನಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ಷಷ್ಠಃ ಖಂಡಃ ॥ ೯—೬ ॥ ॥ ೨ ॥**

ಅ ॥ ಯಾವನು ವರುಣನಲ್ಲಿ ಬ್ರಹ್ಮನನ್ನು ಉಪಾಸನೆ ಮಾಡುತ್ತಾನೋ, ಆತನು ವರುಣನು ವ್ಯಾಪಿಸಿಕೊಂಡಿದ್ದ ಲೋಕಗಳನ್ನು ಹೊಂದುತ್ತಾನೆ. ಅಲ್ಲಿ ಎಲ್ಲಾ ಸ್ವೇಚ್ಛಾನುಸಾರ ಸಂಚರಿಸುತ್ತಿರುತ್ತಾನೆ. ವರುಣನಿಂದ ಶ್ರೇಷ್ಠನಿದ್ದಾನೋ, ಎಂಬ ನಾರದರ ಪ್ರಶ್ನೆಗೆ ಇದ್ದಾನೆ, ಎಂದು ಸನತ್ಕುಮಾರರು ಉತ್ತರಿಸಿದರು................ ॥ ೯—೬ ॥ ॥ ೨ ॥

ಆರನೇ ಖಂಡವು ಮುಗಿಯಿತು.

---

## ೭ನೇ ಖಂಡವು

**ಉ. ॥ ವಿಜ್ಞಾನಂ ವಾವ ಧ್ಯಾನಾದ್ಭೂಯೋ ವಿಜ್ಞಾನೇನ ವಾ ಋಗ್ವೇದಂ ವಿಜಾನಾತಿ ಯಜುರ್ವೇದಂ ಸಾಮವೇದಮಾಥರ್ವಣಂ ಚತುರ್ಥಮಿತಿಹಾಸಪುರಾಣಂ ಪಂಚಮಂ ವೇದಾನಾಂ ವೇದಂ ಪಿತ್ರ್ಯಂ ರಾಶಿಂ ದೈವಂ ನಿಧಿಂ ವಾಕೋವಾಕ್ಯಮೇಕಾಯನಂ ದೇವವಿದ್ಯಾಂ ಬ್ರಹ್ಮವಿದ್ಯಾಂ ಭೂತವಿದ್ಯಾಂ ಕ್ಷತ್ರವಿದ್ಯಾಂ ನಕ್ಷತ್ರವಿದ್ಯಾಂ ಸರ್ಪದೇವಜನವಿದ್ಯಾಂ ದಿವಂ ಚ ಪೃಥಿವೀಂ ಚ ವಾಯುಂ ಚಾಕಾಶಂ ಚಾಪಶ್ಚ ತೇಜಶ್ಚ ದೇವಾಂಶ್ಚ ಮನುಷ್ಯಾಂಶ್ಚ ಪಶೂಂಶ್ಚ ವಯಾಂಸಿ ಚ ತೃಣವನಸ್ಪತೀಂಛ್ವಾಪದಾನ್ಯಾಕೀಟಪತಂಗಪಿಪೀಲಿಕಂ ಧರ್ಮಂ ಚಾಧರ್ಮಂ ಚ ಸತ್ಯಂ ಚಾನೃತಂ ಚ**

ಸಾಧು ಚಾಸಾಧು ಚ ಹೃದಯಜ್ಞಂ ಚಾಹೃದಯಜ್ಞಂ ಚಾನ್ನಂ ಚ ರಸಂ ಚೇಮಂ ಚ ಲೋಕಮಮುಂ ಚ ವಿಜ್ಞಾನೇನೈವ ವಿಜಾನಾತಿ ವಿಜ್ಞಾನ-ಮುಪಾಸ್ವೇತಿ || ||೧||

ಅ || ಧ್ಯಾನಕ್ಕೆ ಅಭಿಮಾನಿಯಾದ ವರುಣನಿಗಿಂತ, ವಿಜ್ಞಾನಕ್ಕೆ (ಶಾಸ್ತ್ರಾರ್ಥವಿಷಯಕ ಜ್ಞಾನಕ್ಕೆ) ಅಭಿಮಾನಿಯಾದ ಸತ್ಯನುಡಿಯನ್ನು ಶೋಧಿಸುವ ಕಾರಣ ವಿಜ್ಞಾನನೆನಿಸಿದ ಚಂದ್ರನು, (ಚಂದ್ರನಿಗೆ ಸಮಾನಿಕರಾದ ಸೂರ್ಯ, ಯಮ, ಇವರು ಸ್ವಾಯಂಭುವಮನುವಿನ ಹೆಂಡತಿಯಾದ ಶತರೂಪಾ ಇವರು) ಶ್ರೇಷ್ಠರು (ವರುಣನ ಮಹಿಮೆ ಹೇಳುತ್ತಾರೆ—) ವಿಜ್ಞಾನಾಭಿಮಾನಿಯಾದ ದೇವತೆಯ ಅನುಗ್ರಹ ದಿಂದಲೇ ಋಗ್ವೇದಾದಿಗಳನ್ನು ತಿಳಿಯುತ್ತಾನೆ. *...............ಶ್ರೀಹರಿಯ ಜ್ಞಾನವುಳ್ಳವನನ್ನೂ, ಶ್ರೀ ಹರಿಯಿಂದ ಇತರ ವಸ್ತುಗಳ ತಿಳುವಳಿಕೆವುಳ್ಳವನನ್ನೂ, ...............ವಿಜ್ಞಾನ ಎನಿಸಿಕೊಂಡ ಚಂದ್ರ, ಸೂರ್ಯ, ಯಮ, ಶತರೂಪಾ ಈ ನಾಲ್ವರಲ್ಲಿ ಪರಬ್ರಹ್ಮನನ್ನು ಪಾಸನೆ ಮಾಡು. ||೧||

ಉ. || ಸ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇ ವಿಜ್ಞಾನವತೋ ವೈ ಸ ಲೋಕಾನ್ ಜ್ಞಾನವತೋಽಭಿಸಿದ್ಧ್ಯತಿ ಯಾವದ್ವಿಜ್ಞಾನಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ವಿಜ್ಞಾನಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ವಿಜ್ಞಾನಾದ್ಭೂಯ ಇತಿ ವಿಜ್ಞಾನಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ || ಇತಿ ಸಪ್ತಮಃ ಖಂಡಃ || ೯—೭ || ||೨||

ಅ || ...........ಹೀಗೆ ತಿಳಿದು ಉಪಾಸನೆ ಮಾಡುವವನು ಚಂದ್ರಾದಿಗಳು ನಿಯಾಮಕರಾಗಿರುವ ಸಾಮಾನ್ಯಜ್ಞಾನ ವಿಶೇಷಜ್ಞಾನವುಳ್ಳ ಲೋಕಗಳನ್ನು ಹೊಂದುತ್ತಾನೆ..........ವಿಜ್ಞಾನ ಎನಿಸಿದ ಚಂದ್ರ ಸೂರ್ಯ ಯಮ ಶತರೂಪಾ ಎಂಬೀ ನಾಲ್ಕು ದೇವತೆಗಳಿಗಿಂತ ಶ್ರೇಷ್ಠನಿದ್ದಾನೋ ಏನು? ಎಂಬ ಪ್ರಶ್ನೆಗೆ ಇದ್ದಾನೆಂದು ಉತ್ತರಿಸಿದರು.............. || ೯—೭ || ||೨||

ಏಳನೇ ಖಂಡವು ಮುಗಿಯಿತು.

## ೮ನೇ ಖಂಡವು

ಉ. || ಬಲಂ ವಾವ ವಿಜ್ಞಾನಾದ್ಭೂಯೋಽಪೀಹ ಶತಂ ವಿಜ್ಞಾನ-ವತಾಮೇಕೋ ಬಲವಾನಾಕಂಪಯತೇ ಸ ಯದಾ ಬಲೀ ಭವತ್ಯಥೋತ್ಥಾತಾ ಭವತ್ಯುತ್ತಿಷ್ಠನ್ನು ಪರಿಚರಿತಾ ಭವತಿ ಪರಿಚರನ್ನುಪಸತ್ತಾ ಭವತ್ಯುಪಸೀದನ್ ದ್ರಷ್ಟಾ ಭವತಿ ಶ್ರೋತಾ ಭವತಿ ಮಂತಾ ಭವತಿ ಬೋದ್ಧಾ ಭವತಿ ಕರ್ತಾ ಭವತಿ ವಿಜ್ಞಾತಾ ಭವತಿ ಬಲೇನ ವೈ ಪೃಥಿವೀ ತಿಷ್ಠತಿ ಬಲೇನಾಂತರಿಕ್ಷಂ ಬ-

* ಹಿಂದಿನಂತೆ ಅರ್ಥ

**ಲೇನ ದ್ಯೌರ್ಬಲೇನಾಪೋ ಬಲೇನ ಪರ್ವತಾ ಬಲೇನ ದೇವಮನುಷ್ಯಾ ಬಲೇನ ಪಶವಶ್ಚ ವಯಾಂಸಿ ಚ ತೃಣವನಸ್ಪತಯಃ ಶ್ವಾಪದಾನ್ಯಾಕೀಟಪತಂಗಪಿಪೀಲಿಕಂ ಬಲೇನ ವೈ ಲೋಕಸ್ತಿಷ್ಠತಿ ಬಲಮುಪಾಸ್ಸ್ವೇತಿ ॥ ॥ ೧ ॥**

ಅ ॥ (1) ಯುಕ್ತಿಗಳಿಂದ ನಿರ್ಣಯವು ಆಂತರ ಬಲವು. (2) ದೇಹದಾರ್ಢ್ಯಾದಿ ರೂಪವಾದುದು ಬಾಹ್ಯಬಲವು, ಹೀಗೆ ಬಲವು ಎರಡು ವಿಧವು. ಆ ಎರಡು ಬಲಗಳಿಗೂ ಅಭಿಮಾನಿಯಾದ ಬಲ ಎನಿಸಿದ ಭೂತವಾಯುವಿಗೆ ಅಭಿಮಾನಿಯಾದ ಪ್ರವಹವಾಯುವು ವಿಜ್ಞಾನ ಎನಿಸಿದ ಚಂದ್ರ, ಸೂರ್ಯ, ಯಮ, ಶತರೂಪಾ ಈ ನಾಲ್ವರಿಗಿಂತ ಉತ್ತಮನು (ಅದನ್ನು ವಿವರಿಸುತ್ತಾರೆ—) ಈ ಲೋಕದಲ್ಲಿ ವಿಜ್ಞಾನವುಳ್ಳ ನೂರು ಮಂದಿಯನ್ನು ಯುಕ್ತಿಗಳಿಂದುಂಟಾದ ನಿರ್ಣಯರೂಪವಾದ ಆಂತರ ಬಲವುಳ್ಳವನೊಬ್ಬನೇ (ಮದೋನ್ಮತ್ತವಾದ ಆನೆಯು ನೂರು ಮಂದಿ ಮನುಷ್ಯರ ಗುಂಪನ್ನು ನಡುಗಿಸುವಂತೆಯೇ) ನಡುಗಿಸುತ್ತಾನೆ (ಬಲವು ಸರ್ವವ್ಯಾಪಾರಕ್ಕೂ ಕಾರಣವಾಗಿದೆ, ಎನ್ನುತ್ತಾರೆ —) ಆತನೂ ಯುಕ್ತಿಗಳನ್ನು ತಿಳಿದುಕೊಳ್ಳುವಿಕೆ ಎಂಬ ಆಂತರ ಬಲವುಳ್ಳವನಾದರೆ ಆಗ ಸಂಸಾರದಿಂದ ಬಿಡುಗಡೆ ಹೊಂದುತ್ತಾನೆ. ದೇಹದಾರ್ಢ್ಯಾದಿರೂಪವಾದ ಬಾಹ್ಯಬಲವುಳ್ಳವನಾದರೆ ಕರ್ಮಾದಿಗಳನ್ನು ಮಾಡಲಿಕ್ಕೆ (ಸನ್ನದ್ಧನಾಗುತ್ತಾನೆ.) ಎದ್ದವನೇ ಗುರು ಮೊದಲಾದವರನ್ನು ಸೇವಿಸುತ್ತಾನೆ ಸೇವಿಸುವವನು ಅವರ ಸಮೀಪದಲ್ಲಿದ್ದು ಅತ್ಯಂತ ಪ್ರಿಯನಾಗುತ್ತಾನೆ. ಸಮೀಪಕ್ಕೆ ಹೋದವನು ಏಕಾಗ್ರಚಿತ್ತನಾಗಿ ಗುರುಗಳನ್ನು ನೋಡುತ್ತಾನೆ ಆ ಮೇಲೆ ಗುರು ಮೊದಲಾದವರಿಂದ ತತ್ತ್ವವನ್ನು ಕೇಳುತ್ತಾನೆ. ಮನನ ಮಾಡುತ್ತಾನೆ. (ಗುರುಗಳು ಹೇಳಿದ್ದು ಹೀಗೆ ಯುಕ್ತವಾಗುತ್ತದೆ, ಎಂದು ಯುಕ್ತಿಗಳಿಂದ ತಿಳಿಯುತ್ತಾನೆ.) ಇದು ಹೀಗೆಯೇ ಎಂದು ತಿಳಿಯುತ್ತಾನೆ ಗುರುಗಳು ಹೇಳಿದಂತೆಯೇ ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮ ಇವುಗಳಿಗೆ ಯೋಗ್ಯಗಳಾದ ಧರ್ಮಾದಿಗಳನ್ನು ಮಾಡುತ್ತಾನೆ. ಅದರಿಂದ ವಿಶೇಷವಾಗಿ ತಿಳಿಯುವವನಾಗುತ್ತಾನೆ. ಅದರಿಂದ ಸಿಗತಕ್ಕ ಫಲವನ್ನು ಅನುಭವಿಸುತ್ತಾನೆ. (ಬಲಾಭಿಮಾನಿಯಾದ ಪ್ರವಹನ ಇನ್ನೊಂದು ಮಹಿಮೆ ಹೇಳುತ್ತಾರೆ–) ಬಲ ಎನಿಸಿದ ಭೂತವಾಯುವಿಗೆ ಅಭಿಮಾನಿಯಾದ ಪ್ರವಹವಾಯುವಿನಿಂದ ಪೃಥಿವೀ ಮೊದಲಾದ ಲೋಕಗಳೂ ಲೋಕಾಭಿಮಾನಿಗಳೂ ಇರುತ್ತಾರೆ. ಮನುಷ್ಯರಾಗಿ ಹುಟ್ಟಿದ ದೇವತೆಗಳೂ, ಪಶುಗಳೂ, ಹಕ್ಕಿಗಳೂ, ಹುಲ್ಲು, ದೊಡ್ಡಮರಗಳೂ, ದುಷ್ಟಮೃಗ, ಕೀಟ, ಹಾತೆ, ಇರುವೆ ಪರ್ಯಂತ ಎಲ್ಲಾ ಪ್ರಾಣಿಗಳೂ ಪ್ರವಹನ ಅನುಗ್ರಹದಿಂದಲೇ ಇರುತ್ತವೆ. ಬಲಾಭಿಮಾನಿಯಾದ ಪ್ರವಹವಾಯುವಿನಲ್ಲಿ ಪರಬ್ರಹ್ಮನನ್ನು ಉಪಾಸನೆಮಾಡು. ॥ ೧ ॥

**ಉ. ॥ ಸ ಯೋ ಬಲಂ ಬ್ರಹ್ಮೇತ್ಯುಪಾಸ್ತೇ ಯಾವದ್ಬಲಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋ ಬಲಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋ ಬಲಾದ್ಭೂಯ ಇತಿ ಬಲಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ಅಷ್ಟಮಃ ಖಂಡಃ ॥ ೭—೮ ॥ ॥ ೨ ॥**

ಅ ॥ ಪ್ರವಹವಾಯುವಿನಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಿದವನು........ಪ್ರವಹನ ಲೋಕಗಳನ್ನು ಹೊಂದುತ್ತಾನೆ..................ಪ್ರವಹ ವಾಯುವಿಗಿಂತ ಉತ್ತಮನು ಇದ್ದಾನೋ, ಎಂಬ ಪ್ರಶ್ನೆಗೆ ಇದ್ದಾನೆಂದು ಉತ್ತರಿಸಿದರ............ ॥ ೭—೮ ॥ ॥ ೨ ॥

ಎಂಟನೇ ಖಂಡವು ಮುಗಿಯಿತು.

## ೯ನೇ ಖಂಡವು

**ಉ. ॥ ಅನ್ನಂ ವಾವ ಬಲಾದ್ಭೂಯಸ್ತಸ್ಮಾದ್ಯದ್ಯಪಿ ದಶರಾತ್ರೀರ್ನಾಶ್ನೀಯಾದ್ಯದು ಹ ಜೀವೇದಥವಾಽದ್ರಷ್ಟಾಽಶ್ರೋತಾಽಮಂತಾಽಬೋದ್ಧಾಽಕರ್ತಾಽವಿಜ್ಞಾತಾ ಭವತ್ಯಥಾನ್ನಸ್ಯಾಯೀ ದ್ರಷ್ಟಾ ಭವತಿ ಶ್ರೋತಾ ಭವತಿ ಮಂತಾ ಭವತಿ ಬೋದ್ಧಾ ಭವತಿ ಕರ್ತಾ ಭವತಿ ವಿಜ್ಞಾತಾ ಭವತ್ಯನ್ನಮುಪಾಸ್ಸ್ವೇತಿ ॥ ॥ ೧ ॥**

ಅ ॥ ಜ್ಞಾನದಿಂದ ಹುಟ್ಟತಕ್ಕ ಆನಂದರೂಪವಾದ ಆಂತರವಾದ ಅನ್ನ, ಬಾಹ್ಯವಾದ ಪ್ರಸಿದ್ಧ ಅನ್ನ, ಹೀಗೆ ಎರಡು ವಿಧಗಳಾದ ಅನ್ನಗಳಿಗೆ ಅಭಿಮಾನಿಯಾದ ಅನ್ನ ಎನಿಸಿದ ಅನಿರುದ್ಧನೂ (ಅನಿರುದ್ಧನಿಗೆ ಸಮಾನಿಕರಾದ ಸ್ವಾಯಂಭುವಮನು, ಬೃಹಸ್ಪತಿ, ದಕ್ಷ, ಶಚೀ, ರತಿ, ಈ ಆರುಮಂದಿಯೂ) ಎರಡು ವಿಧ ಬಲಗಳಿಗೆ ಅಭಿಮಾನಿಯಾದ ಪ್ರವಹವಾಯುವಿಗಿಂತ ಶ್ರೇಷ್ಠರು. (ಅದರಲ್ಲಿ ಯುಕ್ತಿಗಳನ್ನು ತಿಳಿದುಕೊಳ್ಳುವಿಕೆ, ಎಂಬ ಆಂತರಬಲಾಭಿಮಾನಿರೂಪಕ್ಕಿಂತ ಆಂತರ ಅನ್ನಾಭಿಮಾನಿ ಅನಿರುದ್ಧರೂಪವು ಶ್ರೇಷ್ಠವು. ದೇಹದಾರ್ಢ್ಯಾದಿರೂಪವಾದ ಬಾಹ್ಯಬಲಾಭಿಮಾನಿ ರೂಪಕ್ಕಿಂತ ಬಾಹ್ಯ ಅನ್ನಾಭಿಮಾನಿ ರೂಪವು ಶ್ರೇಷ್ಠವು.) (ಅನ್ನದ ಮಹಿಮೆ ಹೇಳುತ್ತಾರೆ.) ಅನ್ನಾಭಿಮಾನಿಯು ಶ್ರೇಷ್ಠನಾದ ಕಾರಣ ಹತ್ತು ದಿನ ಉಣ್ಣದೆ ಇದ್ದರೆ ಬದುಕುವುದೇ ಕಷ್ಟ. ಬದುಕಿದರೂ ನೋಡಲಾರನು, ಕೇಳಲಾರನು, ಮನನಮಾಡಲಾರನು, ತಿಳಿಯಲಾರನು. ಯಾವುದನ್ನೂ ಮಾಡಲಾರನು, ಅನುಷ್ಠಾನದ ಫಲವನ್ನು ಅನುಭವಿಸಲಾರನು. (ಅಂದರೆ ಅನ್ನವನ್ನುಣ್ಣದಿದ್ದರೆ ಶಾಸ್ತ್ರಶ್ರವಣಾದಿಗಳು ಯಾವುದೂ ಆಗಲಾರವು.) ಅನ್ನವನ್ನುಂಡರೆ ದರ್ಶನಾದಿಗಳು (ನೋಡುವಿಕೆ, ಕೇಳುವುದು) ಇತ್ಯಾದಿಗಳು ಆಗುತ್ತವೆ. (ಅನ್ನವನ್ನು ಪಯೋಗಿಸಿಕೊಂಡರೆ ದರ್ಶನಾದಿಗಳಲ್ಲಿ ಸಾಮರ್ಥ್ಯವುಂಟಾಗುತ್ತದೆ) ಅದುಕಾರಣ ಅನ್ನಾಭಿಮಾನಿ ಅನಿರುದ್ಧನಲ್ಲಿಯೂ ಅವನಿಗೆ ಸಮಾನಿಕರಾದ ಸ್ವಾಯಂಭುವ ಮೊದಲಾದ ಐವರಲ್ಲಿಯೂ ಪರಬ್ರಹ್ಮನನ್ನು ಉಪಾಸನೆಮಾಡು, ॥ ೧ ॥

**ಉ. ॥ ಸ ಯೋಽನ್ನಂ ಬ್ರಹ್ಮೇತ್ಯುಪಾಸ್ತೇಽನ್ನವತೋ ವೈ ಸ ಲೋಕಾನ್ ಪಾನವತೋಽಭಿಸಿಧ್ಯತಿ ಯಾವದನ್ನಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋಽನ್ನಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋಽನ್ನಾದ್ಭೂಯ ಇತ್ಯನ್ನಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ನವಮಃ ಖಂಡಃ ॥ ೯—೯ ॥ ॥ ೨ ॥**

ಅ ॥ ....ಹೀಗೆ ಉಪಾಸನೆಮಾಡಿದವನು ಅನ್ನಾಭಿಮಾನಿಗಳು ನಿಯಾಮಕರಾಗಿರುವ ಲೋಕಗಳನ್ನೂ ಅಥವಾ ಇಚ್ಛಾನುಸಾರ ಅನ್ನಪಾನಮೊದಲಾದ ಸರ್ವಭೋಗಗಳುಳ್ಳ ಲೋಕಗಳನ್ನು ಹೊಂದಿ ತಿರುಗಾಡುತ್ತಿರುತ್ತಾರೆ. ........ಅನ್ನಾಭಿಮಾನಿಗಳಾದ ಅನಿರುದ್ಧಮೊದಲಾದ ಆರು ದೇವತೆಗಳಿಗಿಂತ ಶ್ರೇಷ್ಠನು ಇದ್ದಾನೋ, ಎಂಬ ಪ್ರಶ್ನೆಗೆ ಇದ್ದಾನೆಂದು ಉತ್ತರಿಸಿದರು............॥ ೯—೯ ॥ ॥ ೨ ॥

ಒಂಭತ್ತನೇ ಖಂಡವು ಮುಗಿಯಿತು.

## ೧೦ನೇ ಖಂಡವು

**ಉ. ॥ ಆಪೋ ವಾವಾನ್ನಾದ್ಭೂಯಸ್ತಸ್ಮಾದ್ಯದಾ ಸುವೃಷ್ಟಿರ್ನ ಭವತಿ ವ್ಯಾಧೀಯಂತೇ ಪ್ರಾಣಾ ಅನ್ನಂ ಕನೀಯೋ ಭವಿಷ್ಯತೀತ್ಯಥ ಯದಾ ಸುವೃಷ್ಟಿರ್ಭವತ್ಯಾನಂದಿನಃ ಪ್ರಾಣಾ ಭವಂತ್ಯನ್ನಂ ಬಹು ಭವಿಷ್ಯತೀತ್ಯಾಪ ಏವೇಮಾ ಮೂರ್ತಾ ಯೇಯಂ ಪೃಥಿವೀ ಯದಂತರಿಕ್ಷಂ ಯದ್ದ್ಯೌರ್ಯತ್ಪರ್ವತಾ ಯದ್ದೇವಮನುಷ್ಯಾ ಯತ್ಪಶವಶ್ಚ ವಯಾಂಸಿ ಚ ತೃಣವನಸ್ಪತಯಃ ಶ್ವಾಪದಾನ್ಯಾಕೀಟಪತಂಗಪಿಪೀಲಿಕಮಾಪ ಏವೇಮಾ ಮೂರ್ತಾ ಅಪ ಉಪಾಸ್ವೇತಿ ॥ ॥ ೧ ॥**

ಅ ॥ ಜ್ಞಾನದಿಂದ ಹುಟ್ಟುವ ಆನಂದದಿಂದ ವಿಷಯಗಳಲ್ಲಿ ಅಲಂಬುದ್ಧಿಯು ಹುಟ್ಟುತ್ತದೆ, ಅಂತಹ ತೃಪ್ತಿರೂಪವಾದ ಆಂತರಜಲ, ದ್ರವರೂಪವಾದ ಬಾಹ್ಯವಾದಜಲ, ಹೀಗೆ ಎರಡು ವಿಧ ಜಲ. ಈ ಎರಡಕ್ಕೆ ಅಭಿಮಾನಿಯಾದ ದೇಹವನ್ನೂ ವ್ಯಾಪಿಸಿಕೊಂಡಿರುವುದರಿಂದ ಅಪ್ ಎನಿಸಿಕೊಂಡ ತೈಜಸ ಅಥವಾ ಅಹಂಕಾರಿಕ ಪ್ರಾಣನು ಅನ್ನ ಎನಿಸಿದ ಅನಿರುದ್ಧಮೊದಲಾದ ಆರು ಮಂದಿ ದೇವತೆಗಳಿಂದ ಶ್ರೇಷ್ಠನು. (ಇಲ್ಲಿಯೂ ಜ್ಞಾನದಿಂದ ಹುಟ್ಟತಕ್ಕ ಸಂತೋಷರೂಪವಾದ ಅಂತರ ಅನ್ನಕ್ಕಿಂತ ಅಂತರಗಳಾದ ವಿಷಯಾಲಂಬುದ್ಧಿ ಎಂಬ ತೃಪ್ತಿರೂಪವಾದ ಜಲವು ಶ್ರೇಷ್ಠವು. ಬಾಹ್ಯವಾದ ಅನ್ನಕ್ಕಿಂತ ಬಾಹ್ಯಗಳಾದ ದ್ರವರೂಪಗಳಾದ ಜಲಗಳು ಶ್ರೇಷ್ಠಗಳು, ಎಂದು ಇಟ್ಟುಕೊಳ್ಳಬೇಕು.) (ಜಲಾಭಿಮಾನಿಯಾದ ಪ್ರಾಣವಾಯುವಿನ ಮಹಿಮೆ ಹೇಳುತ್ತಾರೆ) ನೀರು ಅನ್ನಕ್ಕೆ ಕಾರಣವಾಗಿರುವುದರಿಂದಲೇ ಅಥವಾ ನೀರು ಅನ್ನಕ್ಕಿಂತಲೂ ಶ್ರೇಷ್ಠವಾಗಿರುವುದರಿಂದಲೇ ಯಾವಾಗ ಸುವೃಷ್ಟಿಯು (ಸಸ್ಯಗಳಿಗೆ ಹಿತಕರವಾದ ಒಳ್ಳೇ ಮಳೆಯು) ಆಗುವುದಿಲ್ಲವೋ. ಆಗ ಪ್ರಾಣಿಗಳು ಈ ಸಂವತ್ಸರದಲ್ಲಿ ನಮಗೆ ಅತಿಸ್ವಲ್ಪ ಅನ್ನವು ಆಗುವುದೆಂದು ದುಃಖಪಡುತ್ತಾರೆ. (ಚೆನ್ನಾಗಿ ಮನಸ್ಸಿನಲ್ಲಿ ವ್ಯಥೆಯುಳ್ಳವರಾಗುತ್ತಾರೆ) ಸುವೃಷ್ಟಿಯಾದರೆ ಅನ್ನಸಮೃದ್ಧಿಯಾಗುತ್ತದೆಂದು ಸಂತೋಷವುಳ್ಳವರಾಗುತ್ತಾರೆ. ಮೂರ್ತಪದಾರ್ಥಗಳೆಲ್ಲವೂ ಜಲಾಭಿಮಾನಿಯಾದ ಆಹಂಕಾರಿಕ ಪ್ರಾಣನ ಅಧೀನದಲ್ಲಿದ್ದ ಪ್ರಯುಕ್ತ ಆಪಃ ಎನಿಸುತ್ತವೆ. (ಯಾವುವು ಎಂದರೆ) ಈ ಪೃಥಿವೀ, ಅಂತರಿಕ್ಷ, ಸ್ವರ್ಗ, ಪರ್ವತ, ಮೊದಲಾದ ಎಲ್ಲಾ ಮೂರ್ತ ವಸ್ತುಗಳೂ (ಅಂದರೆ ಪೃಥಿವೀ ಆರಭ್ಯ ಇರುವೆ ಪರ್ಯಂತ ಎಲ್ಲವೂ ಅಪ್ (ಜಲ)ದಿಂದಲೇ ಹುಟ್ಟಿರುವುದರಿಂದಲೂ ಅಧೀನದಲ್ಲಿರುವುದರಿಂದಲೂ ಆಪಃ ಎನಿಸುತ್ತವೆ. ಅಪ್ ಎನಿಸಿದ ತೈಜಸಪ್ರಾಣನಲ್ಲಿ ಬ್ರಹ್ಮನನ್ನು ಉಪಾಸನೆಮಾಡು ॥ ೧ ॥

**ಉ. ॥ ಸ ಯೋಽಪೋ ಬ್ರಹ್ಮೇತ್ಯುಪಾಸ್ತ ಆಪ್ನೋತಿ ಸರ್ವಾನ್ಕಾಮಾಂಸ್ತೃಪ್ತಿಮಾನ್ಭವತಿ ಯಾವದಪಾಂ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯೋಽಪೋ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವೋಽದ್ಭ್ಯೋ ಭೂಯ ಇತ್ಯದ್ಭ್ಯೋ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ದಶಮಃ ಖಂಡಃ ॥ ೭—೧೦ ॥ ॥ ೨ ॥**

ಅ ॥ ....ಹೀಗೆ ಉಪಾಸನೆಮಾಡಿದವನು ಇಚ್ಛಿಸಲ್ಪಡುವ ಎಲ್ಲಾ ವಿಷಯಗಳನ್ನೂ ಹೊಂದುತ್ತಾನೆ. ತೃಪ್ತಿಯುಳ್ಳವನೂ ಆಗುತ್ತಾನೆ. ಆಹಂಕಾರಿಕಪ್ರಾಣನು ನಿಯಾಮಕನಾಗಿರುವ ಲೋಕಗಳಲ್ಲಿ ಸಂಚರಿ

ಸುತ್ತಿರುತ್ತಾನೆ........ಅಹಂಕಾರಿಕ ಪ್ರಾಣನಿಂದ ಶ್ರೇಷ್ಠನಿದ್ದಾನೋ, ಎಂಬ ಪ್ರಶ್ನೆಗೆ ಇದ್ದಾನೆಂದು ಉತ್ತರ ಕೊಟ್ಟರು............|| ೯—೧೦ || || ೨ ||

ಹತ್ತನೇ ಖಂಡವು ಮುಗಿಯಿತು.

## ೧೧ನೇ ಖಂಡವು

**ಉ. || ತೇಜೋ ವಾವಾದ್ಭ್ಯೋ ಭೂಯಸ್ತದ್ವಾ ಏತದ್ವಾಯುಮಾಗೃಹ್ಯಾಕಾಶಮಭಿತಪತಿ ತದಾಹುರ್ನಿಶೋಚತಿ ನಿತಪತಿ ವರ್ಷಿಷ್ಯತಿ ವಾ ಇತಿ ತೇಜ ಏವ ತತ್ಪೂರ್ವಂ ದರ್ಶಯಿತ್ವಾಥಾಽಽಪಃ ಸೃಜತೇ ತದೇತದೂರ್ಧ್ವಾಭಿಶ್ಚ ತಿರಶ್ಚೀಭಿಶ್ಚ ವಿದ್ಯುದ್ಭಿರಾಹ್ರಾದಾಶ್ಚರತಿ ತಸ್ಮಾದಾಹುರ್ವಿದ್ಯೋತತೇ ಸ್ತನಯತಿ ವರ್ಷಿಷ್ಯತಿ ವಾ ಇತಿ ತೇಜ ಏವ ತತ್ಪೂರ್ವಂ ದರ್ಶಯಿತ್ವಾಥಾಽಽಪಃ ಸೃಜತೇ ತೇಜ ಉಪಾಸ್ವೇತಿ || ೧ ||**

ಅ || ಪ್ರಾತಿಭ ಎಂಬ ಅಂತರ ತೇಜಸ್ಸು, ಬಾಹ್ಯತೇಜಸ್ಸು, ಹೀಗೆ ತೇಜಸ್ಸು ಎರಡು ವಿಧವು. ಅದಕ್ಕೆ ಅಭಿಮಾನಿಯಾದ ಇತರರನ್ನು ತಿರಸ್ಕರಿಸುವ ಶಕ್ತಿಸ್ವರೂಪನಾದುದರಿಂದ **ತೇಜಃ** ಎನಿಸಿಕೊಂಡ ಪುರಂದರನೆಂಬ ಇಂದ್ರನೂ (ಅವನಿಗೆ ಸಮನಾದ ಕಾಮನೂ ಕೂಡ) ಜಲಾಭಿಮಾನಿಯಾದ ಅಹಂಕಾರಿಕ ಪ್ರಾಣನಿಗಿಂತ ಶ್ರೇಷ್ಠನು (ಅಲ್ಲಿ ಅಂತರವಾದ ತೃಪ್ತಿರೂಪವಾದ ಅಪ್ (ನೀರು) ಗಿಂತ ಜ್ಞಾನ ಆನಂದಗಳುಂಟಾಗತಕ್ಕ ತೃಪ್ತಿರೂಪವಾದ ವಿಷಯಾಲಂಬುದ್ಧಿರೂಪವಾದ ಅಂತರವಾದ ಪ್ರಾತಿಭ ಎಂಬ ತೇಜಸ್ಸು ಶ್ರೇಷ್ಠವು. ಬಾಹ್ಯದ್ರವರೂಪವಾದ ಜಲಕ್ಕಿಂತ ಬಾಹ್ಯಜಡರೂಪವಾದ ತೇಜಸ್ಸು ಶ್ರೇಷ್ಠವು. ನೀರಿಗೆ ತೇಜಸ್ಸು ಕಾರಣವು.) (ತೇಜಃ ಎನಿಸಿದ ಪುರಂದರನ ಮಹಿಮೆ ಹೇಳುತ್ತಾರೆ.) ಅದುಕಾರಣ ತೇಜಃ ಎನಿಸಿದ ಪುರಂದರನು ವಾಯುವನ್ನು ಚಲಿಸದಂತೆ ಮಾಡಿ ಆಕಾಶದಲ್ಲಿ ವ್ಯಾಪಿಸಿಕೊಂಡು ತಾಪವನ್ನು ಹುಟ್ಟಿಸುತ್ತಾನೆ. ಆಗ ಲೌಕಿಕ ಜನರು (ಆದಿತ್ಯನು) ಅತ್ಯಂತವಾಗಿ ಪ್ರಾಣಿಗಳನ್ನು ದುಃಖಪಡಿಸುತ್ತಾನೆ. ಚೆನ್ನಾಗಿ ಸುಡುತ್ತಾನೆ. ಅಥವಾ ಬಾಹ್ಯತಾಪ ಅಂತರತಾಪಗಳನ್ನೂ ಹುಟ್ಟಿಸುತ್ತಾನೆ ಆದಕಾರಣ ಮಳೆಸುರಿಸುವನು. ಅದುಕಾರಣ ಜಲಸೃಷ್ಟಿಗಿಂತ ಮೊದಲು ತೇಜಸ್ಸನ್ನೇ ತೋರಿಸಿ ಜಲವನ್ನೂ ಸೃಷ್ಟಿಸುತ್ತಾನೆ. ಅಥವಾ ಪುರಂದರನೇ ವಾಯುಸ್ತಂಭಾದಿಗಳನ್ನು ಮೊದಲು ತೋರಿಸಿ (ಅಂದರೆ ಗಾಳಿಬಾರದಂತೆ ಮಾಡಿ) ನೀರನ್ನು ಸೃಷ್ಟಿಸುತ್ತಾನೆ. ಆದುದರಿಂದಲೇ ಈ ಕಾಲದಲ್ಲಿ ಮೇಲಿನಲ್ಲಿಯೂ ಅಡ್ಡದಲ್ಲಿಯೂ ಮಿಂಚುಗಳೂ ಮೇಘಧ್ವನಿಗಳೂ ಉಂಟಾಗುತ್ತವೆ. ಅಥವಾ ಪುರಂದರನಿಂದ ಸಿಡಿಲು ಮಿಂಚುಗಳು ಆಗುತ್ತವೆ. ಅದನ್ನು ನೋಡಿ ಜನರು ಮಿಂಚುಬರುತ್ತದೆ. ಸಿಡಿಲು ಬರುತ್ತದೆ. ಮಳೆ ಬರುವುದು, ಎಂದು ಹೇಳುವರು. ಪ್ರಸಿದ್ಧ. ಪುರಂದರನೇ ಮಿಂಚುಮೊದಲಾದುದನ್ನು ಮೊದಲು ತೋರಿಸಿ ಆ ಮೇಲೆ ನೀರನ್ನು ಸೃಷ್ಟಿಸುತ್ತಾನೆ. ತೇಜಃ ಎನಿಸಿದ ಪುರಂದರನಲ್ಲಿಯೂ ಕಾಮನಲ್ಲಿಯೂ ಪರಬ್ರಹ್ಮನನ್ನು ಉಪಾಸನೆಮಾಡು. ||೧||

**ಉ. || ಸ ಯಸ್ತೇಜೋ ಬ್ರಹ್ಮೇತ್ಯುಪಾಸ್ತೇ ತೇಜಸ್ವೀ ವೈ ಸ ತೇಜಸ್ವತೋ ಲೋಕಾನ್ ಭಾಸ್ವತೋಽಪಹತತಮಸ್ಕಾನಭಿಸಿದ್ಧ್ಯತಿ ಯಾವತ್ತೇಜಸೋ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಸ್ತೇಜೋ ಬ್ರಹ್ಮೇತ್ಯು-**

**ಪಾಸ್ತೇಽಸ್ತಿ ಭಗವಸ್ತೇಜಸೋ ಭೂಯ ಇತಿ ತೇಜಸೋ ವಾವ ಭೂಯೋಽ-ಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತ್ಯೇಕಾದಶಃ ಖಂಡಃ ॥೯-೧೧॥ ೨ ॥**

ಅ ॥ ಹಾಗೆ ಉಪಾಸನೆಮಾಡಿದವನು ತೇಜಸ್ವಿಯಾಗುತ್ತಾನೆ. ಆತನು ತೇಜಸ್ವುಳ್ಳ, (ಸುಡುವ ಶಕ್ತಿಯುಳ್ಳ) ಪ್ರಕಾಶಮಾನಗಳಾದ (ಪ್ರಕಾಶಗೊಳಿಸುವ ಶಕ್ತಿಯುಳ್ಳ) ಅಜ್ಞಾನಾಂಧಕಾರಗಳಿಲ್ಲದ ಲೋಕಗಳಿಗೆ ಹೋಗುತ್ತಾನೆ........ತೇಜಃ ಎನಿಸಿದ ಪುರಂದರ ಕಾಮ ಇವರಿಗಿಂತ ಶ್ರೇಷ್ಠನು ಇದ್ದಾನೋ ಏನು ಎಂಬ ಪ್ರಶ್ನೆಗೆ ಇದ್ದಾನೆಂದು ಉತ್ತರಿಸಿದರು. ॥....೧೧॥ ॥ ೨ ॥

ಹನ್ನೊಂದನೇ ಖಂಡವು ಮುಗಿಯಿತು.

## ೧೨ನೇ ಖಂಡವು

**ಉ. ॥ ಆಕಾಶೋ ವಾವ ತೇಜಸೋ ಭೂಯಾನಾಕಾಶೋ ವೈ ಸೂರ್ಯಾ ಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣ್ಯಗ್ನಿರಾಕಾಶೇನಾಹ್ವಯತ್ಯಾಕಾಶೇನ ಶೃ-ಣೋತ್ಯಾಕಾಶೇನ ಪ್ರತಿಶೃಣೋತ್ಯಾಕಾಶೇ ರಮತ ಆಕಾಶೇ ನ ರಮತ ಆಕಾಶೇ ಜಾಯತ ಆಕಾಶಮಭಿಜಾಯತ ಆಕಾಶಮುಪಾಸ್ವೇತಿ ॥ ೧ ॥**

ಅ ॥ ಸ್ಥಿರ ಪ್ರತಿಭಾರೂಪವಾದ ಅಂತರಭಿದ್ರಾತ್ಮಕವಾದುದು ಆಕಾಶ, ಬಾಹ್ಯ ಆಕಾಶ, ಹೀಗೆ ಆಕಾಶವು ಎರಡು ವಿಧವು. ಇವುಗಳಿಗೆ ಅಭಿಮಾನಿನಿಯಾದ ಪ್ರಕಾಶಿಸಿಕೊಂಡಿರುವುದರಿಂದ ಆಕಾಶ ಎನಿಸಿದ ಪಾರ್ವತಿಯೂ ಅವಳಿಗೆ ಸಮರಾದ ಸೌಪರ್ಣೀವಾರುಣಿಯರೂ ಈ ಮೂವರು ತೇಜಃ ಎನಿಸಿದ ಇಂದ್ರ ಕಾಮರಿಗಿಂತ ಶ್ರೇಷ್ಠರು. (ಆದರಲ್ಲಿ ಆಂತರ ಚಂಚಲ ಪ್ರಾತಿಭ ಎಂಬ ತೇಜಸ್ಸಿಗಿಂತ ಆಂತರ ಸ್ಥಿರ ಪ್ರಾತಿಭ ಎಂಬ ಆಕಾಶವು ಶ್ರೇಷ್ಠವು. ಬಾಹ್ಯತೇಜಸ್ಸಿಗಿಂತ ಬಾಹ್ಯಾಕಾಶವು ಶ್ರೇಷ್ಠವು.) (ಆಕಾಶ ಎನಿಸಿದ ದೇವಿಯರ ಮಹಿಮೆ ಹೇಳುತ್ತಾರೆ.) ಆಕಾಶ ಎನಿಸಿದ ಪಾರ್ವತ್ಯಾದಿಗಳ ಅಧೀನರಾಗಿಯೇ ಸೂರ್ಯಚಂದ್ರರೂ ಮಿಂಚುನಕ್ಷತ್ರಗಳೂ ಅಗ್ನಿಯೂ ಇರುತ್ತಾರೆ. (ಎಲ್ಲಾ ವ್ಯವಹಾರವೂ ಆಕಾಶದ ಅಧೀನವಾಗಿದೆ ಎನ್ನುತ್ತಾರೆ.) ಈ ಪಾರ್ವತ್ಯಾದಿಗಳ ಪ್ರೇರಣೆಯಿಂದಲೇ ಪುರುಷರು ದೇವತಾದಿಳನ್ನು ಕರೆಯುತ್ತಾರೆ. ಹಾಗೆ ಕರೆಯಲ್ಪಟ್ಟವರು ಕೇಳುತ್ತಾರೆ. ಕೇಳಿದವನಿಗೆ ಹೇಳುವವನು ಹೇಳುತ್ತಿರುವಾಗ ಇನ್ನೊಬ್ಬನು ಅದನ್ನು ಕೇಳುತ್ತಾನೆ. ಪಾರ್ವತ್ಯಾದಿಗಳ ಪ್ರೇರಣೆಯಿಂದಲೇ ವಿಹಾರಮಾಡುತ್ತಾರೆ. ವ್ಯಥೆಪಡುತ್ತಾರೆ. ಪಾರ್ವತ್ಯಾದಿಗಳ ಪ್ರೇರಣೆಯಿಂದಲೇ ಪುತ್ರಪೌತ್ರಾದಿಗಳು ಹುಟ್ಟುತ್ತಾರೆ. ಅಂಕುರಾದಿಗಳು ಹುಟ್ಟುತ್ತವೆ. ಆಕಾಶರೆನಿಸಿದ ಪಾರ್ವತ್ಯಾದಿಗಳಲ್ಲಿ ಪರಬ್ರಹ್ಮನನ್ನು ಉಪಾಸನೆಮಾಡು. ॥೧॥

**ಉ. ॥ ಸ ಯ ಆಕಾಶಂ ಬ್ರಹ್ಮೇತ್ಯುಪಾಸ್ತ ಆಕಾಶವತೋ ವೈ ಸ ಲೋಕಾನ್ಪ್ರಕಾಶವತೋಽಸಂಬಾಧಾನುರುಗಾಯವತೋಽಭಿಸಿಧ್ಯತಿ ಯಾವದಾ-ಕಾಶಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯ ಆಕಾಶಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವ ಆಕಾಶಾದ್ಭೂಯ ಇತ್ಯಾಕಾಶಾದ್ವಾವ ಭೂ-ಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ದ್ವಾದಶಃ ಖಂಡಃ॥೯-೧೨॥**

ಅ ॥ ಹೀಗೆ ಉಪಾಸನೆ ಮಾಡಿದವರು ಪಾರ್ವತ್ಯಾದಿಗಳು ಅಭಿಮಾನಿಗಳಾಗಿ ಉಳ್ಳ ಅವಕಾಶವುಳ್ಳ ವಿಸ್ತಾರಗಳಾದ, ಪ್ರಕಾಶವುಳ್ಳ ಪರಸ್ಪರ ಪೀಡೆಯಿಲ್ಲದಿರುವ ಅಂದರೆ ವ್ಯಥೆಯಿಲ್ಲದಿರುವ ಶ್ರೀಹರಿಯು ಇರುವ ಲೋಕಗಳನ್ನು ಹೊಂದುತ್ತಾರೆ.........ಈ ಆಕಾಶ ಎನಿಸಿದ ಮೂರು ದೇವಿಯರಿಗಿಂತ ಶ್ರೇಷ್ಠನು ಇದ್ದಾನೋ, ಎಂಬ ಪ್ರಶ್ನೆಗೆ ಇದ್ದಾನೆಂದು ಉತ್ತರಿಸಿದರು............ ॥ ೯—೧೨ ॥ ॥ ೨ ॥

**ಹನ್ನೆರಡನೇ ಖಂಡವು ಮುಗಿಯಿತು.**

---

## ೧೩ನೇ ಖಂಡವು

**ಉ. ॥ ಸ್ಮರೋ ವಾ ಆಕಾಶಾದ್ಭೂಯಾಃಸ್ತಸ್ಮಾದ್ಯದ್ಯಪಿ ಬಹವ ಆಸೀರನ್ನ ಸ್ಮರಂತೋ ನೈವ ತೇ ಕಂಚನ ಶೃಣುಯುರ್ನ ಮನ್ವೀರನ್ನ ವಿಜಾನೀರನ್ ಯದಾ ವಾವ ತೇ ಸ್ಮರೇಯುರಥ ಶೃಣುಯುರಥ ಮನ್ವೀರನ್ನಥ ವಿಜಾನೀರನ್ ಸ್ಮರೇಣ ವೈ ಪುತ್ರಾನ್ವಿಜಾನಾತಿ ಸ್ಮರೇಣ ಪಶೂಃ ಸ್ಮರಮುಪಾಸ್ವೇತಿ ॥ ೧ ॥**

ಅ ॥ ಎಡೆಬಿಡದೆ ಪದಾರ್ಥಗಳ ಸ್ಮೃತಿರೂಪವಾದ ಸ್ಮರಣೆಗೆ ಅಭಿಮಾನಿಯಾದ ಏಕಪ್ರಕಾರ ಕ್ರೀಡಿಸಿಕೊಂಡಿರುವುದರಿಂದ ಸ್ಮರನೆನಿಸಿದ ಶಿವನು ಗರುಡ ಶೇಷ ಈ ಮೂವರು ಪಾರ್ವತ್ಯಾದಿಗಳಿಗಿಂತ ಶ್ರೇಷ್ಠರು. (ಮತ್ತು ಪಾರ್ವತ್ಯಾದಿಗಳಿಂದ ಶ್ರೇಷ್ಠರಾದ ಜಾಂಬವತೀ ಮೊದಲಾದ ಆರು ದೇವಿಯರಿಗಿಂತಲೂ ಶ್ರೇಷ್ಠರು) (ರುದ್ರಾದಿಗಳ ಮಹಿಮೆ ಹೇಳುತ್ತಾರೆ.) ಪಾರ್ವತ್ಯಾದಿಗಳಿಗಿಂತ ರುದ್ರಾದಿಗಳು ಶ್ರೇಷ್ಠರಾದುದರಿಂದಲೇ ಲೋಕದಲ್ಲಿ ಬಹುಪುರುಷರು ಒಂದುಕಡೆ ಕುಳಿತವರು ಮೊದಲು ಅನುಭವಿಸಿದುದನ್ನು ಸ್ಮರಿಸದಿದ್ದರೆ ಶ್ರವಣ ಮನನ ವಿಜ್ಞಾನ ವಿರಹಿತರೇ ಆಗುತ್ತಾರೆ. (ಅಂದರೆ ಯಾವ ಶಬ್ದವನ್ನೂ ಕೇಳುವುದಿಲ್ಲ. ಸ್ಮರಣೆಯೇ ಇಲ್ಲದಿರುವುದರಿಂದ ಮನನಮಾಡಲಾರರು ಹಾಗೆಯೇ ತಿಳಿಯಲಾರರು.) ಅವರು ಒಂದುಕಡೆ ಸೇರಿ ಮೊದಲು ತಿಳಿದುದನ್ನು ಸ್ಮರಿಸಿದರೆ ಶ್ರವಣಾದಿ ವ್ಯಾಪಾರಗಳುಳ್ಳವರು ಆಗುತ್ತಾರೆ. ಆ ರುದ್ರಾದಿಗಳ ಅನುಗ್ರಹದಿಂದಲೇ ಇವರು ನನ್ನ ಮಕ್ಕಳು ಎಂದು ತಿಳಿಯುತ್ತಾರೆ. ಇವುಗಳು ನನ್ನ ಪಶುಗಳೆಂದು ಪಶುಗಳನ್ನು ತಿಳಿಯುತ್ತಾರೆ. ಸ್ಮರವೆನಿಸಿದ ರುದ್ರ ಗರುಡ ಶೇಷರಲ್ಲಿ ಪರಬ್ರಹ್ಮನನ್ನು ಉಪಾಸನೆಮಾಡು. ॥ ೧ ॥

**ಉ. ॥ ಸ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇ ಯಾವತ್ ಸ್ಮರಸ್ಯ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯಃ ಸ್ಮರಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವಃ ಸ್ಮರಾದ್ಭೂಯ ಇತಿ ಸ್ಮರಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ತ್ರಯೋದಶಃ ಖಂಡಃ ॥ ೯-೧೩ ॥ ॥ ೨ ॥**

ಅ ॥ ಹೀಗೆ ಉಪಾಸನೆಮಾಡುವವನು ರುದ್ರಾದಿಗಳು ನಿಯಾಮಕರಾಗಿರುವ ಲೋಕಗಳಲ್ಲಿ ಸ್ವೇಚ್ಛಾನುಸಾರ ಸಂಚರಿಸುತ್ತಿರುತ್ತಾನೆ......ಸ್ಮರರೆನಿಸಿದ ರುದ್ರಾದಿಗಳಿಗಿಂತ ಶ್ರೇಷ್ಠನು ಇದ್ದಾನೋ ಎಂಬ ಪ್ರಶ್ನೆಗೆ ಇದ್ದಾನೆಂದು ಉತ್ತರಿಸಿದರು ॥ ೯—೧೩ ॥ ॥ ೨ ॥

**ಹದಿಮೂರನೇ ಖಂಡವು ಮುಗಿಯಿತು.**

# ೧೪ನೇ ಖಂಡವು

**ಉ. ॥ ಆಶಾ ವಾವ ಸ್ಮರಾದ್ಭೂಯಸ್ಯಾಶೇದ್ಧೋ ವೈ ಸ್ಮರೋ ಮಂತ್ರಾನಧೀತೇ ಕರ್ಮಾಣಿ ಕುರುತೇ ಪುತ್ರಾꣳಶ್ಚ ಪಶೂꣳಶ್ಚೇಚ್ಛತ ಇಮಂ ಚ ಲೋಕಮಮುಂ ಚೇಚ್ಛತ ಆಶಾಮುಪಾಸ್ವೇತಿ ॥ ೧ ॥**

ಅ ॥ ಪೂರ್ಣಸುಖರೂಪಳಾದುದರಿಂದ ಆಶಾ ಎಂದು ಹೆಸರುಳ್ಳ, ಆಶೆಗೆ (ಹೊಂದದ ವಸ್ತುವನ್ನು ಹೊಂದಬೇಕೆಂಬ ಇಚ್ಛೆಗೆ) ಅಭಿಮಾನಿನಿಯಾದ ಭಾರತಿಯೂ ಸರಸ್ವತಿಯೂ ಇವರಿಬ್ಬರೂ ರುದ್ರಾದಿಗಳಿಗಿಂತ ಎಲ್ಲಾ ಗುಣಗಳಿಂದಲೂ ಶ್ರೇಷ್ಠರು, (ಇವರು ಪ್ರಾಣಿಗಳಿಗೆ ಈಶ್ವರನ ಪ್ರತ್ಯಕ್ಷ ಜ್ಞಾನವನ್ನು ಹುಟ್ಟಿಸುವವರು.) (ಅವರ ಮಹಿಮೆ ಹೇಳುತ್ತಾರೆ.) ಮಂತ್ರಗಳನ್ನು ಅಧ್ಯಯನಮಾಡುತ್ತೇನೆಂಬ ಆಶೆಯಿಂದ ಅಭಿವೃದ್ಧವಾದ ರುದ್ರಾದಿಗಳು ಮಂತ್ರಗಳನ್ನೂ ಅಧ್ಯಯನಮಾಡುತ್ತಾರೆ. ಕರ್ಮಮಾಡುತ್ತಾರೆ. ಪುತ್ರಾದಿಗಳನ್ನು ಇಚ್ಛಿಸುತ್ತಾರೆ. ಅಥವಾ ಜೀವನು ಆಶೆಯಿಂದ ಸಮೃದ್ಧನಾಗಿ ಸ್ಮೃತಿಯುಳ್ಳವನಾಗುತ್ತಾನೆ. ಆಮೇಲೆ ಋಗಾದಿಮಂತ್ರಗಳನ್ನೂ ಕಲಿಯುತ್ತಾನೆ. ಆಮೇಲೆ (ಋಗಾದಿಗಳ ಅರ್ಥವನ್ನೂ ವಿಧಿಗಳನ್ನೂ ಬ್ರಾಹ್ಮಣರಿಂದ ಕೇಳಿ ಕರ್ಮಮಾಡುವೆನೆಂಬ ಆಶೆಯಿಂದ ಅಭಿವೃದ್ಧನಾಗಿ ಸ್ಮರಣೆಯುಳ್ಳವನಾಗಿ (ಫಲಸಿಗಬೇಕೆಂಬ ಆಶೆಯಿಂದ) ಕರ್ಮಮಾಡುತ್ತಾನೆ ಕರ್ಮದ ಫಲಭೂತಗಳಾದ ಮಕ್ಕಳೂ ಪಶುಗಳೂ ಇವುಗಳನ್ನು ಇಚ್ಛಿಸುವೆನೆಂಬ ಆಶೆಯಿಂದ ಸಮೃದ್ಧನಾಗಿ ಸ್ಮರಣೆಯುಳ್ಳವನಾಗಿ ಇಚ್ಛಿಸುತ್ತಾನೆ. ಆಶೆಯಿಂದ ಕೂಡಿದವನಾಗಿಯೇ ಈ ಲೋಕವನ್ನೂ ಪರಲೋಕವನ್ನೂ ಹೊಂದುವೆನೆಂಬ ಇಚ್ಛೆಯಿಂದ (ಅದಕ್ಕೆ ಬೇಕಾದ ಸಾಧನಗಳನ್ನು ಮಾಡಿ) ಇಚ್ಛಿಸುತ್ತಾನೆ. ಆಶಾ ಎನಿಸಿದ ಭಾರತೀ ಸರಸ್ವತಿಯರಲ್ಲಿ ಪರಬ್ರಹ್ಮನನ್ನು ಉಪಾಸನೆ ಮಾಡು. ॥ ೧ ॥

**ಉ. ॥ ಸ ಯ ಆಶಾಂ ಬ್ರಹ್ಮೇತ್ಯುಪಾಸ್ತೇ ಆಶಯಾಸ್ಯ ಸರ್ವೇ ಕಾಮಾಃ ಸಮೃಧ್ಯಂತ್ಯಮೋಘಾ ಹಾಸ್ಯಾಽಽಶಿಷೋ ಭವಂತಿ ಯಾವದಾಶಾಯಾ ಗತಂ ತತ್ರಾಸ್ಯ ಯಥಾ ಕಾಮಚಾರೋ ಭವತಿ ಯ ಆಶಾಂ ಬ್ರಹ್ಮೇತ್ಯುಪಾಸ್ತೇಽಸ್ತಿ ಭಗವ ಆಶಾಯಾ ಭೂಯ ಇತ್ಯಾಶಾಯಾ ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ॥ ಇತಿ ಚತುರ್ದಶಃ ಖಂಡಃ ॥ ॥ ೭-೧೪ ॥ ॥ ೨ ॥**

ಅ ॥ ಹೀಗೆ ಯಾರು ಉಪಾಸನೆಮಾಡುತ್ತಾರೋ, ಆ ಉಪಾಸಕರಿಗೆ ಆಶಾಕ್ಕೆ ಅಭಿಮಾನಿಯರಾದ ಭಾರತೀಸರಸ್ವತಿಯರ ಅನುಗ್ರಹದಿಂದ ಇಚ್ಛಿಸಲ್ಪಡತಕ್ಕ ಎಲ್ಲಾ ವಸ್ತುಗಳೂ ಸಮೃದ್ಧಿಯನ್ನು ಹೊಂದುತ್ತವೆ. ಇವನ ಪ್ರಾರ್ಥನೆಗಳೆಲ್ಲವೂ ಸಫಲಗಳು ಆಗುತ್ತವೆ. (ಅಂದರೆ ಇವನು ಪ್ರಾರ್ಥಿಸಿದುದೆಲ್ಲವೂ ಅವಶ್ಯವಾಗಿ ಆಗಿಯೇ ಆಗುತ್ತದೆ.) ಈ ಭಾರತೀ ಸರಸ್ವತಿಯರು ಅಧಿಪತಿಗಳಾಗಿ ಉಳ್ಳ ಲೋಕಗಳಲ್ಲಿ ಸಂಚರಿಸುತ್ತಿರುತ್ತಾರೆ. ಭಾರತೀ ಸರಸ್ವತಿಯರಿಗಿಂತ ಉತ್ತಮನು ಇದ್ದಾನೋ ಎಂದು ನಾರದರು ಕೇಳಿದರು ಅದಕ್ಕೆ ಸನತ್ಕುಮಾರರು ಇದ್ದಾನೆಂದು ಉತ್ತರಿಸಿದರು. ॥ ೭-೧೪ ॥ ॥ ೨ ॥

**ಹದಿನಾಲ್ಕನೇ ಖಂಡವು ಮುಗಿಯಿತು.**

**ಪೀ—ಸಂಕಲ್ಪೋ ವಾವ ಮನಸೋ ಭೂಯಾನ್** ಎಂಬ ೪ನೇ ಖಂಡದ ತಾತ್ಪರ್ಯ ಹೇಳುತ್ತಾರೆ—

**ಭಾ. ॥ (೧) ತಥಾ ತಸ್ಮಾದ್ವರೋ ಮಿತ್ರೋ ಮುಕ್ತೌ ಸಂಕಲ್ಪದೇವತಾ । ಅಹ್ನಿ ಸಂಕಲ್ಪಯೇದ್ಯಸ್ಮಾತ್ ಸ್ವಪ್ಸ್ಯಂತಿ ನಿಶಿ ಯತ್ತತಃ ॥ (೨) ತಥಾ ಮಿತ್ರಾದ್ವರಸ್ತ್ವಗ್ನಿ-ರ್ಮುಕ್ತೌ ಚಿತ್ತಸ್ಯ ದೇವತಾ । ಚಿತತ್ವಾಚ್ಚಿತ್ತನಾಮಾ ಚ ॥ (೩) ತಸ್ಮಾದ್ವರುಣ ಏವ ಚ। ಧ್ಯಾನಸ್ಯ ದೇವತಾ ಚಾಸೌ ತನ್ನಾಮಾ ಚ ನಿಧಾನತಃ । ಸತ್ಯಾನೃತವಿವೇಕಾರ್ಥಂ ॥ (೪) ತಥಾ ತಸ್ಮಾನ್ನಿಶಾಕರಃ । ವಿಜ್ಞಾನದೇವತಾ ಚಾಸೌ ತನ್ನಾಮಾ ಚ ವಿವೇಚನಾತ್। ಸತ್ಯಸ್ಯ (೫) ತಸ್ಮಾಚ್ಚ ತಥಾ ವಾಯುರ್ಭೂತಾತ್ಮಕೋ ವರಃ । ಬಲಾತ್ಮಕಸ್ತಥಾ ॥ ೧ ॥**

**ಅ ॥** (೧) ಹಾಗೆಯೇ ಮಿತ್ರನೆಂಬ ದೇವತೆಯು ಮನಃ ಎನಿಸಿದ ಪರ್ಜನ್ಯನಿಗಿಂತಲೂ ಪರ್ಜನ್ಯನ ಸಮಾನರಿಗಿಂತಲೂ ಶ್ರೇಷ್ಠನು. ಆತನು ಮೋಕ್ಷದಲ್ಲಿ ಸಂಕಲ್ಪಕ್ಕೆ ದೇವತೆಯು. ಹಗಲು ಪ್ರಜೆಗಳಿಗೆ ಮನನಾದಿಗಳನ್ನೂ ಮಾಡುತ್ತೇನೆಂದು ಸಂಕಲ್ಪವನ್ನೂ ಹುಟ್ಟಿಸುವುದರಿಂದ ಸಂಕಲ್ಪನೆನಿಸುತ್ತಾನೆ ರಾತ್ರಿ ಕಾಲದಲ್ಲಿ ಪ್ರಜೆಗಳು ನಿದ್ರಿಸುತ್ತಾರೆ. (ಅದುಕಾರಣ ರಾತ್ರಿಯಲ್ಲಿ ಸಂಕಲ್ಪವಿಲ್ಲದಿರುವುದರಿಂದಲೇ ಹಗಲಿನಲ್ಲಿ ಸಂಕಲ್ಪವನ್ನುಂಟುಮಾಡುವನು. **ಅಹ್ನಿ** ಎಂಬುದರಿಂದ ಸ್ವಾಪಕಾಲದಿಂದ ಬೇರೆ ಕಾಲವನ್ನೂ ಇಟ್ಟುಕೊಳ್ಳಬೇಕು.) (೨) (**ಚಿತ್ತಂವಾವಸಂಕಲ್ಪಾದ್ಭೂಯಃ** ಎಂಬ ೫ನೇ ಖಂಡಕ್ಕೆ ಅರ್ಥಹೇಳುತ್ತಾರೆ.) ಹಾಗೆಯೇ ಸಂಕಲ್ಪಾಭಿಮಾನಿ ಮಿತ್ರ, ಮತ್ತು ನಿರ್ಋತ್ಯಾದಿಗಳು ಇವರಿಗಿಂತ ಚಿತ್ತಾಭಿಮಾನಿಯಾದ ಅಗ್ನಿಯೂ ಮತ್ತು ಭೃಗು ಪ್ರಸೂತಿಗಳೂ ಶ್ರೇಷ್ಠರು. ಅಗ್ನಿಯು ಮೋಕ್ಷದಲ್ಲಿ ಚಿತ್ತಕ್ಕೆ ದೇವತೆಯು. ಯಾಗಕುಂಡದಲ್ಲಿ ಪೂಜಿಸಲ್ಪಡುವುದರಿಂದ ಚಿತ್ತನೆನಿಸುವನು. (೨) (**ಧ್ಯಾನಂ ವಾವ ಚಿತ್ತಾದ್ಭೂಯಃ** ಎಂಬ ೬ನೇ ಖಂಡದ ಅರ್ಥಹೇಳುತ್ತಾರೆ.) ಆ ಅಗ್ನಿ ಭೃಗು ಪ್ರಸೂತಿಗಳಿಗಿಂತ ಧ್ಯಾನಕ್ಕೆ ಅಭಿಮಾನಿಯಾದ ವರುಣನು ಶ್ರೇಷ್ಠನು. ವರುಣನು ಧ್ಯಾನಕ್ಕೆ ದೇವತೆಯು. ಸತ್ಯ ಸುಳ್ಳು ಇವುಗಳನ್ನು ಪ್ರತ್ಯೇಕಿಸಲಿಕ್ಕೆ ಬ್ರಹ್ಮನಿಂದ ಸ್ಥಾಪಿಸಲ್ಪಟ್ಟಕಾರಣ ಧ್ಯಾನನೆನಿಸುತ್ತಾನೆ. (೪) (**ವಿಜ್ಞಾನಂ ವಾವ ಧ್ಯಾನಾದ್ಭೂಯಃ** ಎಂಬ ೭ನೇ ಖಂಡದ ಅರ್ಥಹೇಳುತ್ತಾರೆ.) ಧ್ಯಾನಾಭಿಮಾನಿಯಾದ ವರುಣನಿಗಿಂತ ವಿಜ್ಞಾನಾಭಿಮಾನಿಯಾದ ಚಂದ್ರನು (ಮತ್ತು ಸೂರ್ಯ, ಯಮ, ಶತರೂಪ ಇವರು) ಶ್ರೇಷ್ಠರು ಚಂದ್ರನು ವಿಜ್ಞಾನಕ್ಕೆ ದೇವತೆಯು. ಸತ್ಯವನ್ನು ಶೋಧಿಸುವ ಕಾರಣ ವಿಜ್ಞಾನನೆನಿಸುತ್ತಾನೆ (೫) (**ಬಲಂ ವಾವ ವಿಜ್ಞಾನಾದ್ಭೂಯಃ** ಎಂಬ ೮ನೇ ಖಂಡದ ತಾತ್ಪರ್ಯಹೇಳುತ್ತಾರೆ) ಆ ವಿಜ್ಞಾನನೆನಿಸಿದ ಚಂದ್ರ ಮೊದಲಾದ ನಾಲ್ವರಿಗಿಂತ ಬಲಸ್ವರೂಪನಾದ ಬಲದೇವತೆಯಾದ ಭೂತವಾಯುವಿಗೆ ಅಭಿಮಾನಿಯಾದ ಪ್ರವಹನು ಶ್ರೇಷ್ಠನು. ॥ ೧ ॥

**ಪೀ—ಅನ್ನಂ ವಾವ ಬಲಾದ್ಭೂಯಃ** ಎಂಬ ೯ನೇ ಖಂಡದ ಅರ್ಥಹೇಳುತ್ತಾರೆ—

**ಭಾ. ॥ (೧) ತಸ್ಮಾದನ್ನದೇವೋಽನಿರುದ್ಧಕಃ । ಅನ್ನನಾಮಾನುನಾದಿತ್ವಾತ್ ॥ (೨) ತೈಜಸಾಹಂಭವಸ್ತತಃ । ತಥಾ ವರಿಷ್ಠಃ ಪ್ರಾಣಾಖ್ಯೋ ವಾಯುಃ ಸೋಽಪಾಂ ಚ ದೇವತಾ । ಅಮ್ನಾಮಾ ದೇಹಸಂವ್ಯಾಪ್ತೇಃ ॥ (೩) ತಥಾ ತಸ್ಮಾತ್ಪುರಂದರಃ । ತೇಜೋಽಭಿಮಾನೀ ತನ್ನಾಮಾ ತೇಜೋ ಹ್ಯೋಜ ಇತೀ(ಉದೀ)ರ್ಯತೇ ॥ ತಥಾ ತಸ್ಮಾದುಮಾ ಚೈವ ಸಾ ಚಾಕಾಶಾಭಿಮಾನಿನೀ । ಆಕಾಶನಾಮ್ನೀ ದೀಪ್ತತ್ವಾತ್ ॥ (೪) ತಸ್ಮಾಚ್ಚೈವ**

**ಸದಾಶಿವಃ । ಸ್ಥಿರಸ್ಮೃತ್ಯಭಿಮಾನೀ ಸ ಸಮಮೇವ ರತೇಃ ಸ್ಮರಃ ॥ (೫) ಮುಖ್ಯವಾಯು-ಪ್ರಿಯಾ ತಸ್ಮಾತ್ಪರಮ್ಯೈವ ಸರಸ್ವತೀ । ಬಂಧಮುಕ್ತ್ಯೋಃ ಸರ್ವಗುಣೈಃ ಸರ್ವದಾಽಽಶಾ-ಸ್ವರೂಪಿಣೀ । ಶಮಿತ್ಯಾನಂದ ಉದ್ದಿಷ್ಟ ಆಶಾ ಪೂರ್ಣಸುಖತ್ವತಃ॥ ೬) ತಸ್ಯಾಃ ಶ್ರೇಷ್ಠೋ ಮುಖ್ಯವಾಯುಃ ಪ್ರಕೃಷ್ಟಾನಾಂ ಚ ನಾಯಕಃ । ಪ್ರಾಣನಾಮಾ ಣ ಇತ್ಯೇವ ಹ್ಯಾನಂ-ದಸ್ಸಮುದೀರಿತಃ ॥ ಆಶಾ ಸರಸ್ವತೀ ಪ್ರೋಕ್ತಾ ತತ್ಪ್ರಕೃಷ್ಟಸುಖತ್ವತಃ । ಪ್ರಾಣ ಇತ್ಯು-ಚ್ಯತೇ ವಾಯುಃ** ॥ ೨ ॥

**ಅ** ॥ (೧) ಅನ್ನಕ್ಕೆ ಅಭಿಮಾನಿಯಾದ ಅನಿರುದ್ಧನು ಬಲಕ್ಕೆ ಅಭಿಮಾನಿಯಾದ ಪ್ರವಹನಿಗಿಂತ ಶ್ರೇಷ್ಠನು, ಅನಿರುದ್ಧನು ಯುದ್ಧಾದಿಗಳಲ್ಲಿ ಶತ್ರುಗಳಿಗೆ ಭಯವನ್ನು ಹುಟ್ಟಿಸುವ ಶಬ್ದಮಾಡುವುದರಿಂದ **ಅನ್ನ**ನೆನಿಸುತ್ತಾನೆ (೨) (**ಆಪೋ ವಾವ ಅನ್ನಾದ್ಭೂಯಃ** ಎಂಬ ೧೦ನೇ ಖಂಡದ ತಾತ್ಪರ್ಯಹೇಳು ತ್ತಾರೆ.) ಆ ಅನಿರುದ್ಧನಿಗಿಂತ ತೈಜಸಾಹಂಕಾರದಿಂದ ಹುಟ್ಟಿದ ಆಹಂಕಾರಿಕ ಪ್ರಾಣವಾಯುವು ಶ್ರೇಷ್ಠನು. ಜಲಗಳಿಗೆ ಅಭಿಮಾನಿಯು. ಶರೀರದಲ್ಲಿ ವ್ಯಾಪಿಸಿಕೊಂಡಿದ್ದ ಪ್ರಯುಕ್ತ **ಅಪ್** ಎನಿಸುತ್ತಾನೆ. (೩) (**ತೇಜೋ ವಾವ ಅದ್ಭ್ಯೋ ಭೂಯಃ** ಎಂಬ ೧೧ನೇ ಖಂಡದ ಅರ್ಥಹೇಳುತ್ತಾರೆ.) ತೇಜಃ ಎನಿಸಿದ ಪುರಂದರ ಕಾಮರು ಜಲಾಭಿಮಾನಿಯಾದ ಪ್ರಾಣನಿಗಿಂತ ಶ್ರೇಷ್ಠರು. ತೇಜಸ್ಸಿಗೆ ಅಭಿಮಾನಿಯರು. ತೇಜಸ್ಸ್ವರೂಪರು. (ಪ್ರಕಾಶರೂಪವಾದ ತೇಜಸ್ಸು ಸೂರ್ಯಾದಿಗಳ ಧರ್ಮವಾಗಿದೆ ಎಂದರೆ) ಇಲ್ಲಿ ತೇಜಸ್ಸು ಎಂಬುದರಿಂದ ಓಜಸ್ಸು (ಅಂದರೆ ಇತರರನ್ನು ಸೋಲಿಸುವ ಶಕ್ತಿಯು) ಹೇಳಲ್ಪಡು ತ್ತದೆ. (೪) (**ಆಕಾಶೋ ವಾವ ತೇಜಸೋ ಭೂಯಾನ್** ಎಂಬ ೧೨ನೇ ಖಂಡದ ತಾತ್ಪರ್ಯ ಹೇಳು ತ್ತಾರೆ.) ಇಂದ್ರ ಕಾಮರಿಗಿಂತ **ಉಮಾ ಸೌಪರ್ಣೀ ವಾರುಣಿಯರು** ಶ್ರೇಷ್ಠರು. ಆಕಾಶಕ್ಕೆ ಅಭಿ ಮಾನಿಯರು. ಚೆನ್ನಾಗಿ ಪ್ರಕಾಶಿಸಿಕೊಂಡಿರುವುದರಿಂದ ಆಕಾಶ ಎನಿಸಿದವರು.) (೪) (**ಸ್ಮರೋ ವಾ ಆಕಾಶಾದ್ಭೂಯಾನ್** ಎಂಬ ೧೩ನೇ ಖಂಡದ **ಅರ್ಥಹೇಳುತ್ತಾರೆ**) ಆಕಾಶಾಭಿಮಾನಿಯರಾದ ಪಾರ್ವ ತ್ಯಾದಿಗಳಿಗಿಂತಸದಾಶಿವನು (ಮತ್ತು ಗರುಡ ಶೇಷರು)ಶ್ರೇಷ್ಠರು. ಸ್ಥಿರವಾದ ಸ್ಮರಣೆಗೆ ಅಭಿಮಾನಿಯರು. ತಮ್ಮ ವ್ಯಾಪಾರ ಗಳಲ್ಲಿಯೂ ಶ್ರೀಹರಿಯ ಜ್ಞಾನಾದಿಗಳಲ್ಲಿಯೂ ಒಂದೇ ಪ್ರಕಾರವಿರುವುದರಿಂದ **ಸ್ಮರ**ರೆನಿ ಸುವರು. (೫) (**ಆಶಾ ವಾವ ಸ್ಮರಾದ್ಭೂಯಸೀ** ಎಂಬ ೧೪ನೇ ಖಂಡದ ಅರ್ಥಹೇಳುತ್ತಾರೆ.) ಆ ಸದಾ ಶಿವನಿಗಿಂತ ಬ್ರಹ್ಮದೇವರ ಪತ್ನಿಯಾದ ಸರಸ್ವತಿಯು ಎಲ್ಲಾ ಗುಣಗಳಿಂದಲೂ ಸಂಸಾರದಲ್ಲಿಯೂ **ಮೋಕ್ಷ** ದಲ್ಲಿಯೂ ಶ್ರೇಷ್ಠಳು) ಆಶಾಸ್ವರೂಪವುಳ್ಳವಳು ಆಶೆಗೆ ದೇವತೆಯು. **ಶಂ** ಎಂದರೆ ಆನಂದವು. ಪೂರ್ಣಸು ಖವಿರುವುದರಿಂದ ಸರಸ್ವತಿಯು **ಆಶಾ** ಎನಿಸುತ್ತಾಳೆ (೬) (**ಪ್ರಾಣೋ ವಾ ಆಶಾಯಾ ಭೂಯಾನ್** ಎಂಬ ೧೫ನೇ ಖಂಡದ ತಾತ್ಪರ್ಯಹೇಳುತ್ತಾರೆ.) ಆ ಭಾರತೀ ಸರಸ್ವತಿಯರಿಗಿಂತ ಮುಖ್ಯವಾಯು ಬ್ರಹ್ಮರು ಶ್ರೇಷ್ಠರು. (ಪ್ರಾಣಶಬ್ದಾರ್ಥ ಹೇಳುತ್ತಾರೆ) ಮುಖ್ಯವಾಯುವು ಉತ್ಕೃಷ್ಟರಾದ ಸಾಮವನ್ನಾ ರಂಭಿಸಿ ಸರಸ್ವತಿ ಪರ್ಯಂತರಾದವರಿಗೆ ಪ್ರೇರಕನಾದುದರಿಂದ ಪ್ರಾಣನೆನಿಸುತ್ತಾನೆ. ಅಥವಾ **ಣ** ಎಂಬುವು ದರಿಂದ:ಆನಂದವು ಹೇಳಲ್ಪಡುತ್ತದೆ. ಆದಕಾರಣ ಪೂರ್ಣಾನಂದವಿರುವುದರಿಂದ **ಆಶಾ** ಎಂದರೆ **ಸರಸ್ವ ಯು.** ಅವಳಿಗಿಂತಲೂ ಉತ್ಕೃಷ್ಟಸುಖಸ್ವರೂಪನಾದ ವಾಯುವು ಪ್ರಾಣನೆನಿಸುತ್ತಾನೆ. (ಏವಂಚ ಆಶಾಯಾಃ ಪ್ರಕೃಷ್ಟಃ ಪ್ರಾಣಃ ಸರಸ್ವತಿಗಿಂತ ಹೆಚ್ಚುಸುಖರೂಪನು ) ॥ ೨ ॥

**ಪೀ** - ನಾಮಾಭಿಮಾನಿಯಾದ ಉಷೋದೇವಿಯನ್ನಾರಂಭಿಸಿ ಪ್ರಾಣಪರ್ಯಂತರಾದವರಲ್ಲಿ (೧ನೇ ಖಂಡ ಆರಂಭಿಸಿ ೧೫ನೇ ಖಂಡ ಪರ್ಯಂತ) ಮೇಲುಮೇಲಿನವರಲ್ಲಿ ಗುಣಾದಿಗಳಿಂದ ಆಧಿಕ್ಯವು ಹೇಳಲ್ಪ ಟ್ಟಿದೆ. ಅದರಲ್ಲಿ ವಿಶೇಷ ಹೇಳುತ್ತಾರೆ—

**ಭಾ. ॥ (೧) ಸರ್ವೇ ತ್ವೇತೇ ದಶೋತ್ತರಾಃ । ಪರ್ಜನ್ಯಮಿತ್ರಶಿಖಿನೋ ಭೂತವಾಯುಸ್ತಥೈವ ಚ । ದ್ವಿಗುಣಾ ಏವ ॥ (೨) ಅನಿರುದ್ಧೋಽನಿಲಾತ್ಪಂಚಗುಣಾಧಿಕಃ । ಪಾದೋನೋ ವರುಣಾದಗ್ನಿರಧ್ಯರ್ಧೋಽನಃ ಸ ಸೋಮತಃ । ಶಿವಾದಾಶಾ ತಥೈವಾಸ್ಯಾ ಮುಖ್ಯವಾಯುಃ ಶತೋತ್ತರೌ ॥ ೩ ॥**

ಅ ॥ (೧) ಇವರೆಲ್ಲರೂ ಯಥಾಯೋಗ್ಯವಾಗಿ ಹೆಚ್ಚು ಹೆಚ್ಚು ಗುಣಗಳುಳ್ಳವರು (ಅದನ್ನು ವಿವರಿಸುತ್ತಾರೆ.) ಸ್ವಾಹಾದೇವಿಗಿಂತ ಪರ್ಜನ್ಯನು, ಪರ್ಜನ್ಯನಿಗಿಂತ ಮಿತ್ರನು, ಮಿತ್ರನಿಗಿಂತ ಅಗ್ನಿಯೂ ಹಾಗೆ ಚಂದ್ರನಿಗಿಂತ ಭೂತವಾಯುವೂ (ಎರಡುಗುಣ ಹೆಚ್ಚುವುಳ್ಳವನು ಹೀಗೆ ಇವರೆಲ್ಲರೂ ಎರಡೆರಡು ಗುಣಗಳು ಹೆಚ್ಚು ಉಳ್ಳವರು. (೨) ಭೂತವಾಯುವಿಗೆ ಅಭಿಮಾನಿಯಾದ ಪ್ರವಹನಿಗಿಂತ ಅನಿರುದ್ಧನು ಐದು ಗುಣಗಳು ಹೆಚ್ಚು ಇರುವವನು. ಚಂದ್ರನಿಗಿಂತ ವರುಣನು ಎಂಟನೇ ಒಂದಂಶ ಗುಣ ಕಡಿಮೆಯವನು. ವರುಣನಿಂದ ಅಗ್ನಿಯು ನಾಲ್ಕನೇ ಒಂದಂಶ ಗುಣ ಕಡಿಮೆಯವನು. ಶಿವನಿಗಿಂತ ಭಾರತೀ ಮುಖ್ಯಪ್ರಾಣರು ನೂರು ಗುಣ ಹೆಚ್ಚು ಇದ್ದವರು. ಭಾರತಿಗಿಂತ ಮುಖ್ಯಪ್ರಾಣನು ನೂರುಗುಣಗಳು ಹೆಚ್ಚು ಇರುವನು.

ವಿ ॥ (1) ಹೀಗೆ ದಶೋತ್ತರಾಃ ಎಂಬ ಸಾಮಾನ್ಯ ವಚನಕ್ಕೆ ಇತರ ಪ್ರಮಾಣಾನುಸಾರವಾಗಿ ಯಥಾಯೋಗ್ಯವಾಗಿ ಅರ್ಥ ಇಟ್ಟುಕೊಳ್ಳಬೇಕು. (2) ಕರ್ಮಕ್ಕೆ ಅಭಿಮಾನಿಯಾದ ಪುಷ್ಕರನು ಎಲ್ಲಾ ದೇವತೆಗಳಿಂದಲೂ ನಿಕೃಷ್ಟನು. ಅವನಿಗಿಂತ ಉಷೋದೇವಿಗೆ ೧೦ ಗುಣ ಹೆಚ್ಚು. ಅವಳಿಗಿಂತ ಸ್ವಾಹಾದೇವಿಗೆ ೧೦ ಗುಣ. ಅವಳಿಗಿಂತ ಪರ್ಜನ್ಯನಿಗೆ ೨ ಗುಣ ಹೆಚ್ಚು. ಪರ್ಜನ್ಯನಿಗಿಂತ ಮಿತ್ರನಿಗೂ, ಮಿತ್ರನಿಗಿಂತ ಅಗ್ನಿಗೂ ಎರಡೆರಡು ಗುಣಗಳು ಹೆಚ್ಚು ಇವೆ. ಅಗ್ನಿಗಿಂತ ವರುಣನಿಗೆ ನಾಲ್ಕನೇ ಒಂದಂಶ ಗುಣ ಹೆಚ್ಚು. ವರುಣನಿಗಿಂತ ಸೋಮನಿಗೆ ಎಂಟನೇ ಒಂದಂಶ ಗುಣ ಅಧಿಕವಾಗಿದೆ. ಚಂದ್ರನಿಗಿಂತ ಪ್ರವಹನಿಗೆ ೨ ಗುಣ ಹೆಚ್ಚು. ಭೂತವಾಯುವಿಗೆ ಅಭಿಮಾನಿಯಾದ ಪ್ರವಹನಿಗಿಂತ ಅನಿರುದ್ಧನಿಗೆ ೫ ಗುಣಗಳು ಹೆಚ್ಚು ಅನಿರುದ್ಧನಿಗಿಂತ ಆಹಂಕಾರಿಕ ಪ್ರಾಣನಿಗೆ ೧೦ ಗುಣ ಹೆಚ್ಚು ಆ ತೈಜಸಪ್ರಾಣನಿಗಿಂತ ಪುರಂದರನಿಗೆ ೧೦ ಗುಣ ಹೆಚ್ಚು. ಪುರಂದರನಿಗಿಂತ ಪಾರ್ವತಿಗೆ ೧೦ ಗುಣ ಹೆಚ್ಚು. ಅವಳಿಗಿಂತ ರುದ್ರನಿಗೆ ೧೦ ಗುಣ ಹೆಚ್ಚು. ಶಿವನಿಗಿಂತ ಭಾರತಿಗೆ ೧೦೦ ಗುಣ. ಅವಳಿಗಿಂತ ಮುಖ್ಯಪ್ರಾಣನಿಗೆ ೧೦೦ ಗುಣಗಳು ಹೆಚ್ಚು ಇರುತ್ತವೆ. ॥ ೩ ॥

ಹೀ—ಹೇಳಿದ ಗುಣಗಳ ಸಂಖ್ಯೆಗಿಂತ ಕೆಲವು ಕಡೆ ವ್ಯತ್ಯಾಸವಾಗಿ ಸಂಖ್ಯೆ ಹೇಳಿರುವುದರಿಂದ ಈ ನಿಯಮವು ಹೇಗೆ? ಎಂದರೆ—

**ಭಾ. ॥ (೧) ಸಂಖ್ಯಾನ್ಯಥಾತ್ವಂ ಯತ್ರ ಸ್ಯಾತ್ತತ್ರಾವೇಶವಿಶೇಷತಃ ॥ (೨) ಅವರಾಣಾಂ ಗುಣಸ್ಯಾಪಿ ಪರಮಾಯತ್ತತಸ್ತಥಾ ॥ (೩) ಪ್ರಾಣಾತ್ತು ಭಗವಾನ್ವಿಷ್ಣುರನಂತಗುಣತೋಽಧಿಕಃ । ನಿತ್ಯಮುಕ್ತೋ ನಿತ್ಯಶಕ್ತಿರ್ನಿತ್ಯೋದ್ರಿಕ್ತಗುಣಃ ಪ್ರಭುಃ ॥ ಇತಿ ತತ್ತ್ವವಿವೇಕೇ ॥ (೪) ಸೈಷಾಽಽನಂದಸ್ಯ ಮೀಮಾಂಸಾ ಭವತಿ । ಇತ್ಯಾದೇಶ್ಚ ॥ ೪ ॥**

ಅ ॥ (೧) ಇಲ್ಲಿ ಹೇಳಿದ ಸಂಖ್ಯೆಗಳಿಗೆ ವ್ಯತ್ಯಾಸವಾಗಿ ಎಲ್ಲಿ ಹೇಳುತ್ತಾರೋ, ಅಲ್ಲಿ ಉತ್ತಮರ ಆವೇಶವಿಶೇಷವು ಇದ್ದ ಪ್ರಯುಕ್ತ ಹೆಚ್ಚುಗುಣಗಳು ಹೇಳಿದ್ದೆಂದು ತಿಳಿಯಬೇಕು. (೨) (ಆವೇಶವಿಶೇಷವಿದ್ದ ಪ್ರಯುಕ್ತ ಸಂಖ್ಯೆಯನ್ನು ವ್ಯತ್ಯಾಸವಾಗಿ ಹೇಳಿದ್ದೆಂದಾದರೂ ಇಷ್ಟಿಷ್ಟುಗುಣಗಳು ಎಂದು

ಹೇಳಿದ ನಿಯಮಕ್ಕೆ ಭಂಗವು ಬಂತು ಎಂದರೆ) ಅಧಮರಾದವರದ್ದು ಸ್ವಾಭಾವಿಕವಾದುದು ಯಾವುದು ಗುಣವಿದೆಯೋ ಅದೂ ಕೂಡ ಉತ್ತಮರ ಅಧೀನವೆಂದು ಹೇಳುವಾಗ ಆವೇಶ ಪ್ರಯುಕ್ತವಾದ ಗುಣವು ಉತ್ತಮರ ಅಧೀನವೆಂಬುದು ಸುತರಾಂ ಸಿದ್ಧವು. (ಸ್ವಾಭಾವಿಕವಾದ ತಂತಮ್ಮ ಗುಣವನ್ನು ಇಟ್ಟುಕೊಂಡು ಹೇಳಿದ ಕಾರಣ ಹಿಂದೆ ಹೇಳಿದ ನಿಯಮಕ್ಕೆ ಭಂಗವಿಲ್ಲ.) (ಅಥವಾ ಅಧಮರಿಗೆ ಕ್ಲೃಪ್ತಗಳಾದ ಗುಣಗಳಿಗಿಂತ ಹೆಚ್ಚು ಸಂಖ್ಯೆ ಹೇಳಿದ್ದು ಆವೇಶವಿಶೇಷವಿದ್ದ ಪ್ರಯುಕ್ತ ಎಂದು ಹೇಳಿದರು. ಈಗ ಉತ್ತಮರಿಗೆ ಕ್ಲೃಪ್ತಗಳಾದ ಗುಣಗಳಿಗಿಂತ ಹೆಚ್ಚು ಸಂಖ್ಯೆ ಹೇಳಲಿಕ್ಕೆ ಕಾರಣ ಹೇಳುತ್ತಾರೆ.) ಅಧಮರ ಗುಣಗಳೂ ಉತ್ತಮರ ಅಧೀನಗಳೆಂದು ಇಟ್ಟುಕೊಂಡು ಉತ್ತಮರಿಗೆ ಕ್ಲೃಪ್ತಗಳಾದ ಗುಣಗಳಿಗಿಂತ ಹೆಚ್ಚು ಗುಣಗಳಿವೆ ಎಂದು ಹೇಳಿದ್ದು. (೩) (ಪ್ರಾಣನಿಗಿಂತ ಶ್ರೇಷ್ಠನಿದ್ದಾನೋ ಎಂಬ ಪ್ರಶ್ನೆಗೆ **ಸತ್ಯಂ ವಾವ ಪ್ರಾಣಾದ್ಭೂಯಃ** ಸತ್ಯನು ಶ್ರೇಷ್ಠನಿದ್ದಾನೆಂಬ ಅಧ್ಯಾಹೃತವಾಕ್ಯದಲ್ಲಿಯೂ ನಾಮಾದಿ ಪ್ರಾಣಪರ್ಯಂತರಾದವರಲ್ಲಿ ಪರಿಮಿತಿಯಿದ್ದಂತೆಯೇ ಇಲ್ಲಿಯೂ ಗುಣಗಳಿಗೆ ಪರಿಮಿತಿಯಿದೆ. ಎಂಬ ಶಂಕೆಯನ್ನು ಪರಿಹರಿಸುತ್ತಾರೆ.) ಆ ಪ್ರಾಣನಿಗಿಂತಲೂ ವಿಷ್ಣುವು ಅನಂತಗುಣಗಳು ಹೆಚ್ಚು ಇರುವವನು, ನಿತ್ಯಮುಕ್ತನು, ನಿತ್ಯಶಕ್ತಿಯುಳ್ಳವನು, ನಿತ್ಯದಲ್ಲಿಯೂ ಪೂರ್ಣಗುಣಗಳುಳ್ಳವನು, ಸರ್ವರಿಗೆ ಸ್ವಾಮಿಯು, ಎಂದು ತತ್ತ್ವವಿವೇಕದಲ್ಲಿ ಹೇಳಿದೆ. (೪) (ನಾಮಾದಿ ಪ್ರಕರಣವು ಮುಕ್ತಿಯಲ್ಲಿಯೂ ತಾರತಮ್ಯವನ್ನು ಹೇಳುತ್ತದೆಂದು ಪ್ರಮಾಣವನ್ನುದಾಹರಿಸಿ ಹೇಳಿದರು. ಆ ವಿಷಯದಲ್ಲಿ ತೈತ್ತಿರೀಯ ವೇದವನ್ನೂ ಹೇಳುತ್ತಾರೆ) ಮೋಕ್ಷವನ್ನು ಹೊಂದಿದವರ ಆನಂದ ವಿಚಾರವು ಮಾಡಲ್ಪಡುತ್ತದೆ. ಇದು ಮೊದಲಾದ ಪ್ರಮಾಣಗಳಿಂದ ಮೋಕ್ಷದಲ್ಲಿಯೂ ತಾರತಮ್ಯವಿದೆ ಎಂದು ಸಿದ್ಧವಾಯಿತು. || ೪ ||

ಪೀ—ತೈತ್ತಿರೀಯ ಉಪನಿಷತ್ತಿನಲ್ಲಿಯೂ ನಾಮಾದಿಗಳಲ್ಲಿ ತಾರತಮ್ಯ ಕ್ರಮವನ್ನು ಹೇಳದಿರುವುದರಿಂದ ನಾಮಾದಿಗಳಿಗೇನೇ ಮೋಕ್ಷದಲ್ಲಿ ತಾರತಮ್ಯವನ್ನು ಹೇಳತಕ್ಕ ಇನ್ನೊಂದು ವೇದವನ್ನು ಹೇಳುತ್ತಾರೆ—

**ಭಾ. || (೧) ಅಥಾತಃ ಸಂಭೂತಿಃ ಪರಮಾದ್ವಿದ್ಯಾ ವಿದ್ಯಾಯಾಃ ಪ್ರಾಣಃ ಪ್ರಾಣಾಚ್ಛ್ರದ್ಧಾ ಶ್ರದ್ಧಾಯಾಃ ಶಿವಶ್ಶಿವಾದ್ಬುದ್ಧಿರ್ಬುದ್ಧೇರಿಂದ್ರ ಇಂದ್ರಾತ್ತೈಜಸಃ ಪ್ರಾಣಸ್ತೈಜಸಾದನಿರುದ್ಧೋಽನಿರುದ್ಧಾತ್ ಸ್ಪರ್ಶವಾತಃ ಸ್ಪರ್ಶವಾತಾತ್ಸೋಮಸ್ಸೋಮಾದ್ವರುಣೋ ವರುಣಾದಗ್ನಿರಗ್ನೇರ್ಮಿತ್ರೋ ಮಿತ್ರಾತ್ಪರ್ಜನ್ಯಃ ಪರ್ಜನ್ಯಾತ್ ಸ್ವಾಹಾ ಸ್ವಾಹಾಯಾ ಉಷಾ ಜಾಯತೇ ತೇಷಾಂ ಪರಃ ಪರೋ ಜ್ಯಾಯಾನ್ಗುಣೈರುತ್ತರ ಉತ್ತರಃ ಪ್ರತ್ಯವರಃ ಪರಸ್ಮಾತ್ಪರಸ್ಮಾದುತ್ತರ ಉತ್ತರೋ ಮುಚ್ಯತೇ ಸ್ವಂ ಸ್ವಂ ಭಾವಮಾಪದ್ಯತೇ || (೨) ನೈಷಾಂ ಪಾರಾವರ್ಯಮುಚ್ಛಿದ್ಯತೇ ಕದಾಚನ ನೈಷಾಂ ಪಾರಾವರ್ಯಮುಚ್ಛಿದ್ಯತೇ ಕುತಶ್ಚನ ಪಾರಾವರ್ಯೇಣ ಬ್ರಹ್ಮೋಪಯಂತಿ ಪಾರಾವರ್ಯೇಣೈವ ಮುಕ್ತಾಃ ಸಂಚರಂತಿ | ಇತ್ಯಾದಿಶ್ರುತೇಶ್ಚ || (೩) ನಾಮಾದಿಮಾರುತಾಂತೇಷು ದೇವೇಷ್ವೇಭ್ಯಶ್ಚ ಭೇದತಃ | ಉಪಾಸಿತೋ ಹರಿರ್ಮುಕ್ತಿಂ ದದ್ಯಾನ್ನಾಸ್ತ್ಯತ್ರ ಸಂಶಯಃ || ಇತಿ ಸತ್ತತ್ತ್ವೇ || ೫ ||**

ಅ || (೧) ಇನ್ನು ಮುಂದೆ ಉತ್ಪತ್ತಿಯು ಹೇಳಲ್ಪಡುತ್ತದೆ. ಸರ್ವೋತ್ತಮನಾದ ಶ್ರೀಹರಿಯಿಂದ ಲಕ್ಷ್ಮೀದೇವಿಯು (ರೂಪಾಂತರದಿಂದ) ಪ್ರಕಟಳಾದಳು ಲಕ್ಷ್ಮೀದೇವಿಯಿಂದ ಮುಖ್ಯಪ್ರಾಣನೂ, ಆತನಿಂದ ಭಾರತಿಯೂ, ಅವಳಿಂದ ಶಿವನು, ಶಿವನಿಂದ ಪಾರ್ವತಿಯೂ, ಪಾರ್ವತಿಯಿಂದ ಇಂದ್ರನು, ಇಂದ್ರನಿಂದ ಅಹಂಕಾರಿಕ ಪ್ರಾಣನೂ, ಆತನಿಂದ ಅನಿರುದ್ಧನೂ ಅನಿರುದ್ಧನಿಂದ ಸ್ಪರ್ಶಕ್ಕೆ ಅಭಿಮಾನಿಯಾದ ಪ್ರವಹವಾಯುವೂ, ಪ್ರವಹ ವಾಯುವಿನಿಂದ ಚಂದ್ರನೂ, ಚಂದ್ರನಿಂದ ವರುಣನೂ ವರುಣನಿಂದ ಅಗ್ನಿಯೂ, ಅಗ್ನಿಯಿಂದ ಮಿತ್ರನೂ, ಮಿತ್ರನಿಂದ ಪರ್ಜನ್ಯನೂ ಪರ್ಜನ್ಯನಿಂದ ಸ್ವಾಹಾದೇವಿಯೂ,

ಸ್ವಾಹಾದೇವಿಯಿಂದ ಉಷಾದೇವಿಯೂ ಹುಟ್ಟುತ್ತಾಳೆ. ಹೇಳಿದವರ ಮಧ್ಯದಲ್ಲಿ ಮೊದಲುಮೊದಲು ಹೇಳಲ್ಪಟ್ಟವರು ಗುಣಗಳಿಂದ ಶ್ರೇಷ್ಠರು. ಹೆಚ್ಚೆಚ್ಚು ಗುಣವುಳ್ಳವರು ಮೇಲೆಮೇಲೆ ಹೇಳಿದವರು ಅಧಮರು, ಮೊದಲುಮೊದಲಿನವರಿಂದ ಮೇಲುಮೇಲಿನವರು ಮುಕ್ತರಾಗುತ್ತಾರೆ. (ಅಂದರೆ **ಮುಕ್ತಿರ್ಹಿತ್ವಾಽನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ** ಎಂಬ ಪ್ರಮಾಣಾನುಸಾರ.) ತಮ್ಮತಮ್ಮ ರೂಪವನ್ನು ಹೊಂದುತ್ತಾರೆ. (೨)(ಈ ತಾರತಮ್ಯವು ಮೋಕ್ಷದಲ್ಲಿಯೂ ಇದೆ ಎನ್ನುತ್ತಾರೆ) ಈ ದೇವತೆಗಳಲ್ಲಿ ನೀಚೋಚ್ಚಭಾವವು ಯಾವಾಗಲೂ ನಾಶವಾಗುವುದೇ ಇಲ್ಲ. ಈ ತಾರತಮ್ಯವು ಯಾವುದರಿಂದಲೂ ನಾಶವಾಗುವುದಿಲ್ಲ. ತಾರತಮ್ಯದಿಂದಲೇ ಪರಬ್ರಹ್ಮನನ್ನು ಹೊಂದುತ್ತಾರೆ. ತಾರತಮ್ಯದಿಂದಲೇ ಮುಕ್ತರಾಗಿ ತಿರುಗಾಡುತ್ತಾರೆ. ಇದು ಮೊದಲಾದ ವೇದಗಳು ಇವೆ (೩)**ನಾಮಬ್ರಹ್ಮೇತ್ಯುಪಾಸ್ವ** ಎಂದಾರಂಭಿಸಿ **ಪ್ರಾಣೋ ಬ್ರಹ್ಮೇತ್ಯುಪಾಸ್ವ** ಎಂಬಪರ್ಯಂತ ಬಹುಸ್ಥಳಗಳಲ್ಲಿ ಒಂದೇ ರೀತಿಯಾದ ವಿಭಕ್ತಿಯು ತೋರುವುದರಿಂದ ನಾಮಕ್ಕೂ ಬ್ರಹ್ಮನಿಗೂ ಅಭೇದವೆಂದೇ ಉಪಾಸನೆಮಾಡಬೇಕು, ಎಂಬ ಪ್ರತೀತಿಯನ್ನು ಹೋಗಲಾಡಿಸುತ್ತಾ ಆ ವಾಕ್ಯಗಳಿಗೆ ಅರ್ಥ ಹೇಳುತ್ತಾರೆ—) ನಾಮವನ್ನಾರಂಭಿಸಿ ಮುಖ್ಯಪ್ರಾಣಪರ್ಯಂತ ದೇವತೆಗಳಲ್ಲಿ ಶ್ರೀಹರಿಯು ಅಂತರ್ಗತನು, ಮತ್ತು ಈ ದೇವತೆಗಳಿಂದ ಭಿನ್ನನಾಗಿದ್ದಾನೆಂದೂ ಉಪಾಸನೆಮಾಡಿದರೆ ಮೋಕ್ಷವನ್ನು ಕೊಡುವನು, ಈ ವಿಷಯದಲ್ಲಿ ಸಂದೇಹವಿಲ್ಲ, ಎಂದು ಸತ್ತತ್ವದಲ್ಲಿದೆ. ॥ ೫ ॥

**ಪೀ**—ನಾಮಾರಭ್ಯ ಪ್ರಾಣಪರ್ಯಂತರಾದವರಲ್ಲಿ ಪರಬ್ರಹ್ಮನನ್ನು ಉಪಾಸನೆಮಾಡಬೇಕೆಂದು ಹೇಳಿದ್ದು ಯುಕ್ತವಲ್ಲ, ನಾಮಾದಿಗಳಲ್ಲಿ ನೀಚೋಚ್ಚಭಾವವಿದ್ದುದರಿಂದ ಅವರೊಳಗಣ ಬ್ರಹ್ಮನಿಗೂ ನೀಚೋಚ್ಚಭಾವವು ಬರಬೇಕಾಗುವುದೆಂಬ ಆಶಂಕೆಯನ್ನು ಸ್ಮೃತಿಪ್ರಮಾಣ ಹೇಳಿ ಪರಿಹರಿಸುತ್ತಾರೆ—

**ಭಾ. ॥ (೧) ಉಷಾದಿಮಾರುತಾಂತೇಷು ಸಮಃ ಸಮಗುಣೋಽಪಿ ಸನ್ । ಧ್ಯಾತಃ ಪ್ರೀತಿಂ ಹರಿರ್ಯಾಯಾದಧಿಕಾಮುತ್ತರೋತ್ತರೇ॥ (೨) ಉತ್ತಮೇಷೂತ್ತಮಾ ಪ್ರೀತಿಸ್ತಸ್ಯ ತತ್ರ ಸ್ಮೃತಸ್ತತಃ । ಧ್ಯಾತುರಪ್ಯುತ್ತಮಾಂ ಪ್ರೀತಿಂ ಯಾಯಾನ್ನಾಸ್ತ್ಯತ್ರ ಸಂಶಯಃ ॥ (೩) ತಾರತಮ್ಯಪರಿಜ್ಞಾನಾತ್ತೇಷು ಧ್ಯಾತೋ ವಿಮುಕ್ತಿದಃ । ಪ್ರೀತಿಂ ನ ಚಾನ್ಯಥಾ ಯಾಯಾದಿತಿ ಶಾಸ್ತ್ರಸ್ಯ ನಿರ್ಣಯಃ॥ ಇತಿ ತತ್ತ್ವವಿವೇಕೇ ॥ ೬ ॥**

**ಅ** ॥ ೧) ಉಷಾದೇವಿಯನ್ನಾರಂಭಿಸಿ ಮುಖ್ಯವಾಯು ಪರ್ಯಂತ ದೇವತೆಗಳಲ್ಲಿ ಶ್ರೀಹರಿಯು ಸ್ವರೂಪದಿಂದ ವ್ಯತ್ಯಾಸವಿಲ್ಲದೆ ಸಮಗುಣಗಳುಳ್ಳವನಾಗಿ ನಿರ್ದೋಷಿಯಾಗಿದ್ದಾನೆಂದು, ಆತನನ್ನು ಜೀವರು ಧ್ಯಾನಿಸಿದರೆ ಪರಮಾತ್ಮನು ಪ್ರೀತಿಯನ್ನು ಹೊಂದುತ್ತಾನೆ. ಉತ್ತಮೋತ್ತಮರಲ್ಲಿ ಧ್ಯಾನಿಸಿದರೆ ಆತನಿಗೆ ಹೆಚ್ಚು ಪ್ರೀತಿಯಾಗುತ್ತದೆ. (೨) (ಅದು ಹೇಗೆಂದರೆ) ಶ್ರೀಹರಿಗೆ ಉತ್ತಮರಾದ ದೇವಾದಿಗಳಲ್ಲಿ ಉತ್ಕೃಷ್ಟವಾದ ಪ್ರೀತಿಯಿರುವುದರಿಂದ ಉತ್ತಮರಲ್ಲಿ ವಿಷ್ಣುವನ್ನು ಸ್ಮರಿಸಿದರೆ ಧ್ಯಾನಿಸಿದವನಿಗೆ ಉತ್ತಮವಾದ ಪ್ರೀತಿಯನ್ನು ಶ್ರೀಹರಿಯು ಮಾಡುವನು. ಸಂದೇಹವಿಲ್ಲ (೩) (ಉತ್ತಮೋತ್ತಮರಲ್ಲಿ ಶ್ರೀಹರಿಯ ಉಪಾಸನೆ ಮಾತ್ರ ಫಲಹೇತುವೆಂದಲ್ಲ. ಪರಂತು ತಾರತಮ್ಯಜ್ಞಾನವೂ ಆವಶ್ಯಕವೆನ್ನುತ್ತಾರೆ.) ಆ ದೇವತೆಗಳಲ್ಲಿ ತಾರತಮ್ಯಜ್ಞಾನವನ್ನು ಬಿಡದೆ ಶ್ರೀಹರಿಯನ್ನು ಧ್ಯಾನಿಸಿದರೆ ಧ್ಯಾನದಿಂದ ಪ್ರೀತನಾದ ಶ್ರೀಹರಿಯು ಮೋಕ್ಷವನ್ನು ಕೊಡುತ್ತಾನೆ. ತಾರತಮ್ಯ ಪರಿಜ್ಞಾನವಿಲ್ಲದೆ ಧ್ಯಾನಿಸಿದರೆ ಪ್ರೀತಿಯನ್ನು ಹೊಂದಲಾರನು. ಎಂದು ಸರ್ವಶಾಸ್ತ್ರಾರ್ಥಗಳ ನಿರ್ಣಯವು, ಎಂದು ತತ್ವವಿವೇಕದಲ್ಲಿದೆ. ॥ ೬ ॥

**ಪೀ—ನಾಮ ಬ್ರಹ್ಮೇತ್ಯುಪಾಸೀತ** ಇತ್ಯಾದಿಗಳಲ್ಲಿ ನಾಮದಲ್ಲಿ ಬ್ರಹ್ಮನನ್ನುಪಾಸನೆಮಾಡಬೇಕೆಂದು ನಾಮಾದಿ ಶಬ್ದಗಳಿಗೆ ಸಪ್ತಮ್ಯರ್ಥಹೇಳಿದ್ದಾರೆ. ಅದನ್ನೇ ಸ್ಪಷ್ಟಪ್ರಮಾಣದಿಂದ ದೃಢೀಕರಿಸುತ್ತಾ ಬೇರೆ ಅರ್ಥವನ್ನು ಹೇಳುತ್ತಾರೆ—

**ಭಾ. ॥ (೧) ನಾಮಾದಿಪ್ರಾಣಪರ್ಯಂತಾಸ್ಸಪ್ತಮ್ಯರ್ಥಾಃ ಪ್ರಕೀರ್ತಿತಾಃ । ತೃತೀಯಾಪಂಚಮೀಷಷ್ಠೀಚತುರ್ಥ್ಯರ್ಥಾಶ್ಚ ಸರ್ವಶಃ । ಶಬ್ದಾಸ್ತೇ ಬ್ರಹ್ಮಶಬ್ದೇನ ಸಂಬಧ್ಯೇಯುರ್ಯದಾ ತದಾ ॥ (೨) ಬ್ರಾಹ್ಮಣೋಽಸ್ಯ ಮುಖಂ ಯದ್ವದಾತ್ಮಾ ವೈ ಪುತ್ರಕೋ ಯಥಾ । ಯಥಾ ಚ ಯೂಪ ಆದಿತ್ಯ ಏವಮೇಷ ಪ್ರಕೀರ್ತಿತಃ ॥ (೩) ಸಪ್ತಸು ಪ್ರಥಮಾ ಯಸ್ಮಾದ್ಭೂಯೋಭೂಯಸ್ತ್ವತಸ್ತಥಾ । ಷಟ್ಸು ದ್ವಿತೀಯಾ ಯಸ್ಮಾಚ್ಚ ಕಾರಣತ್ವಾತ್ಪರಸ್ಯ ಚ ॥ (೪) ನ ಹ್ಯನ್ಯದನ್ಯದಿತ್ಯೇವ ಧ್ಯಾತಂ ಸ್ಯಾತ್ಪುರುಷಾರ್ಥದಂ । ಅನರ್ಥಶ್ಚ ಭವೇತ್ತಸ್ಮಾದ್ಭೃತ್ಯೇ ರಾಜೇತಿ ಬೋಧವತ್ ॥ (೫) ರಾಜಪೂಜಾಂ ಯಥಾ (ದಾ) ಭೃತ್ಯೇ ಕುರ್ಯಾದ್ರಾಜಾ ಹಿನಸ್ತಿ ಹಿ । ತದ್ವಶತ್ವಾತ್ತಥಾ ಭೃತ್ಯ ಏವಂ ನಾಮಾದಿಕಂ ಚ ಯಃ ॥ ಉಪಾಸ್ತೇ ಬ್ರಹ್ಮರೂಪೇಣ ತಂ ಬ್ರಹ್ಮಾಥೇತರಾಣಿ ಚ । ಪಾತಯಂತಿ ತಮಸ್ಯಂಧೇ ತಸ್ಮಾನ್ನೇಕ್ಷೇತ ತಾಂಸ್ತಥಾ ॥ ಇತಿ ಸಾಮಸಂಹಿತಾಯಾಂ ॥ ೭ ॥**

**ಅ ॥** (೧) **ನಾಮ** ಎಂಬ ಶಬ್ದವನ್ನಾರಂಭಿಸಿ **ಪ್ರಾಣ** ಪರ್ಯಂತ ಎಲ್ಲಾ ಶಬ್ದಗಳೂ ಸಪ್ತಮೀ ವಿಭಕ್ತಿಯ ಅರ್ಥವುಳ್ಳವುಗಳೆಂದು ಹೇಳಲ್ಪಟ್ಟಿದೆ. ಹಾಗೆಯೇ ತೃತೀಯಾ, ಪಂಚಮೀ, ಷಷ್ಠೀ ಚತುರ್ಥೀ ವಿಭಕ್ತಿಯ ಅರ್ಥವುಳ್ಳವುಗಳು (ಅಂದರೆ ತೃತೀಯಾ ವಿಭಕ್ತಿಯ ಅರ್ಥ ಇಟ್ಟುಕೊಂಡರೆ ನಾಮದಿಂದ ಪರಬ್ರಹ್ಮನನ್ನು ಪಾಸನೆಮಾಡು ಎಂದೂ, ಪಂಚಮ್ಯರ್ಥ ಎಂದು ಇಟ್ಟುಕೊಂಡರೆ ನಾಮದೆಶೆಯಿಂದ ಅಭಿವ್ಯಕ್ತನು ಪರಬ್ರಹ್ಮನು ಎಂದೂ ಷಷ್ಠ್ಯರ್ಥವೆಂದು ಇಟ್ಟುಕೊಂಡರೆ—ನಾಮಕ್ಕೆ ಪ್ರೀತಿವಿಷಯನು ಬ್ರಹ್ಮನೆಂದೂ, ಚತುರ್ಥ್ಯರ್ಥ ಎಂದು ಇಟ್ಟುಕೊಂಡರೆ ನಾಮಕ್ಕೆ ಫಲವನ್ನು ಕೊಡುವವನು ಬ್ರಹ್ಮನೆಂದೂ ಇಟ್ಟುಕೊಳ್ಳಬೇಕು.) **ನಾಮ** ಮೊದಲುಗೊಂಡು ಪ್ರಾಣ ಪರ್ಯಂತ ಶಬ್ದಗಳು ಎಲ್ಲಿ ಬ್ರಹ್ಮಶಬ್ದದಿಂದೊಡಗೂಡಿ ಇರುತ್ತವೋ, ಅಲ್ಲಿಯೇ ಸಪ್ತಮ್ಯಾದಿ ವಿಭಕ್ತಿಗಳ ಅರ್ಥ ಇಟ್ಟುಕೊಳ್ಳಬೇಕು (**ಯದ್ವೈ ಕಿಂಚಿದಧ್ಯಗೀಷ್ಟ ನಾಮ್ನೈವೈತತ್** ಇತ್ಯಾದಿಗಳಲ್ಲಿ ಇದ್ದ **ನಾಮ** ಶಬ್ದಕ್ಕೆ ಸಪ್ತಮ್ಯಾದ್ಯರ್ಥವಲ್ಲ.) (೨) (ಪ್ರಯೋಗವಿಲ್ಲದಿರುವುದರಿಂದಲೂ ನಿಯಾಮಕವಿಲ್ಲದಿರುವುದರಿಂದಲೂ ಪ್ರಥಮಾವಿಭಕ್ತಿಗೆ ಸಪ್ತಮ್ಯಾದಿ ವಿಭಕ್ತಿಗಳ ಅರ್ಥವಿದೆ, ಎಂಬುದು ಯುಕ್ತವಲ್ಲವೆಂದರೆ (1) **ಬ್ರಾಹ್ಮಣೋಽಸ್ಯಮುಖಂ** ಎಂಬಲ್ಲಿ **ಮುಖಂ** ಎಂಬ ಪ್ರಥಮಾವಿಭಕ್ತಿಗೆ ಶ್ರೀಹರಿಯ ಮುಖದೆಶೆಯಿಂದ ಎಂದು ಪಂಚಮ್ಯರ್ಥವಿದೆ (೨) **ಆತ್ಮಾ ವೈ ಪುತ್ರನಾಮಾಸಿ** ಎಂಬಲ್ಲಿ **ಆತ್ಮಾ** ಎಂಬ ಪ್ರಥಮಾ ವಿಭಕ್ತಿಗೆ ತನ್ನ ಮಗನು ಎಂದು ಷಷ್ಠ್ಯರ್ಥಎದೆ. (3) **ಆದಿತ್ಯೋ ಯೂಪಃ** ಎಂಬಲ್ಲಿದ್ದ ಯೂಪಃ ಎಂಬ ಪ್ರಥಮಾವಿಭಕ್ತಿಗೆ ಯೂಪ (ಯಜ್ಞಸ್ತಂಭ) ದಲ್ಲಿ ಆದಿತ್ಯನಂತೆ ಪ್ರಕಾಶವೆಂದು ಸಪ್ತಮ್ಯರ್ಥವೆಂದು ಹೇಳಿದೆ ಅದರಂತೆಯೇ ಇಲ್ಲಿಯೂ ನಾಮಾದಿಶಬ್ದಗಳಿಗೆ ಪಂಚಮ್ಯಾದಿ ವಿಭಕ್ತಿಗಳ ಅರ್ಥವಿದೆ (೩) (ನಿಯಾಮಕ ಸೂತ್ರವನ್ನು ಹೇಳುತ್ತಾರೆ) ಏಳು ವಿಭಕ್ತಿಗಳಲ್ಲಿಯೂ ಪ್ರಥಮಾ ವಿಭಕ್ತಿಯಿದೆ (**ನಾಮ ಬ್ರಹ್ಮೇತ್ಯುಪಾಸೀತ** ಎಂದು ನಾಮಾದಿಗಳಿಗೆ ಆಪಾತತಃ ತೋರುವ ಬ್ರಹ್ಮೈಕ್ಯವೇ ಅರ್ಥವೆಂದು ಏಕೆ ಆಗಲಾರದೆಂದರೆ—**ವಾಗ್ವಾವ ನಾಮ್ನೋ ಭೂಯಸೀ** ಇತ್ಯಾದಿಗಳಿಂದ ವಾಗಾದಿಗಳಿಗೆ ನಾಮಾದಿಗಳಿಗಿಂತ ಮೇಲೆಮೇಲಿನವುಗಳಿಗೆ ಶ್ರೇಷ್ಠತ್ವವನ್ನು ಹೇಳಿದೆ. (ಪರಬ್ರಹ್ಮನು ನಾಮಾದಿರೂಪನೆಂದು ಹೇಳಿದರೆ—ಪರಬ್ರಹ್ಮನಿಗೇನೇ ಉತ್ತಮತ್ವವೂ ಅಧಮತ್ವವೂ ಬರಬೇಕಾಗುವುದು. ಆದುಕಾರಣ ನಾಮಾದಿಗಳಿಗೆ ಬ್ರಹ್ಮನಿಂದ ಐಕ್ಯ ಹೇಳಕೂಡದು.) (**ಮನೋ ಹಿ ಬ್ರಹ್ಮ** ಇತ್ಯಾದಿ ವಾಕ್ಯಗಳಿಗೆ ಹೀಗೆಅರ್ಥವಿರಲಿ **ಸಯೋ ನಾಮ ಬ್ರಹ್ಮೇತ್ಯುಪಾಸ್ತೇ ವಾಚಂ ಬ್ರಹ್ಮೇತ್ಯುಪಾಸ್ತೇ** ಇದುಮೊದಲಾದ ವಾಕ್ಯಗಳಿಗೆ ಅರ್ಥ ಹೇಗೆ ಮಾಡುವುದು. ಪ್ರಥಮಾ ವಿಭಕ್ತಿಗೆ ಸಪ್ತಮೀ ವಿಭಕ್ತ್ಯಾದಿಗಳ ಅರ್ಥಮಾಡಬೇಕೆಂಬಲ್ಲಿ ಪ್ರಮಾಣವಿದ್ದಂತೆ **ನಾಮ ವಾಚಂ** ಎಂಬ ದ್ವಿತೀಯಾ ವಿಭಕ್ತಿಗೆ ಸಪ್ತಮೀ

ವಿಭಕ್ತ್ಯಾದಿಗಳ ಅರ್ಥವಾಡಬೇಕೆಂಬಲ್ಲಿ ಪ್ರಮಾಣವಿಲ್ಲವೆಂದರೆ—) ದ್ವಿತೀಯಾ ವಿಭಕ್ತಿಯು ಆರು ವಿಭಕ್ತಿಗಳ ಅರ್ಥದಲ್ಲಿಯೂ ಇದೆ, ಎಂದು ಸೂತ್ರವು. (ಮತ್ತು ನಾಮರೂಪೇ ವ್ಯಾಕರೋತ್ ಎಂಬ ಪ್ರಮಾಣದಿಂದ) ಶ್ರೀಹರಿಯು ನಾಮಾದಿಗಳ ಉತ್ಪತ್ತಿಗೆ ಕಾರಣನೂ ಆಗಿದ್ದಾನೆ. (ಆದಕಾರಣ ಬ್ರಹ್ಮನು ನಾಮಾದ್ಯಾತ್ಮಕನೆಂದು ಅಂಗೀಕರಿಸಕೂಡದು.) (೪) (ಪರಬ್ರಹ್ಮನು ನಾಮಾದಿರೂಪನೆಂದು ನಾವು ಹೇಳುವುದಿಲ್ಲ, ಪರಂತು ನಾಮಾದಿರೂಪನೆಂದು ಧ್ಯಾನಿಸಬೇಕೆಂದು ಹೇಳುತ್ತೇವೆ. ಇಲ್ಲದಿರುವ ವಸ್ತುವನ್ನು ಧ್ಯಾನಿಸಬಹುದೆಂದರೆ) ಅಧಮನನ್ನು ಉತ್ತಮನೆಂದು ಧ್ಯಾನಿಸಿದರೆ—ಪುರುಷಾರ್ಥವು ಸಿಗಲಾರದು. ಅಧಮನನ್ನು ಉತ್ತಮನೆಂದು ಧ್ಯಾನಿಸಿದುದರಿಂದ ಪುರುಷಾರ್ಥವು ಆಗದಿರುವುದು ಮಾತ್ರವಲ್ಲ, ಪರಂತು ರಾಜನ ಭೃತ್ಯನನ್ನು ರಾಜನೆಂದು ಧ್ಯಾನಿಸಿದರೆ ಅನರ್ಥವಿದ್ದಂತೆ ಇಲ್ಲಿಯೂ ಅನರ್ಥವುಂಟಾಗುವುದು. (೫) (ನಾಮಾದಿಗಳು ಬ್ರಹ್ಮ ಎಂದು ಧ್ಯಾನಿಸಬೇಕೆಂದು ನಾವು ಹೇಳುವುದಿಲ್ಲ, ಪರಂತು ಬ್ರಹ್ಮನಲ್ಲಿ ಪೂಜಿಸಿದಂತೆ ನಾಮಾದಿಗಳಲ್ಲಿ ಪೂಜೆಮಾಡಬೇಕು, ಎನ್ನುತ್ತೇವೆ, ಎಂದರೆ ಹಾಗೆ ಹೇಳಿದರೂ ಅನರ್ಥವಿದೆ, ಎಂದು ದೃಷ್ಟಾಂತಕೊಟ್ಟು ಹೇಳುತ್ತಾರೆ) ಯಾರು ರಾಜನಿಗೆ ಮಾಡತಕ್ಕ ಪೂಜೆಯನ್ನು ಭೃತ್ಯನಿಗೆ ಮಾಡುತ್ತಾನೋ, ಆತನನ್ನು ರಾಜನು ಹಿಂಸಿಸುತ್ತಾನೆ. ಹಾಗೆಯೇ ಭೃತ್ಯನೂ ರಾಜನ ಅಧೀನದಲ್ಲಿದ್ದುದರಿಂದ ರಾಜನೆಂದು ತನಗೆ ಪೂಜೆಮಾಡಿದವರನ್ನು ಕೊಲ್ಲುತ್ತಾನೆ. (ಇಲ್ಲವಾದರೆ ರಾಜನನ್ನು ಲ್ಲಂಘಿಸಿದುದರಿಂದ ತಾನು ಅಪರಾಧಿಯಾದಾನು.) ಹಾಗೆಯೇ ಯಾರು ನಾಮಾದಿಗಳನ್ನು ಬ್ರಹ್ಮನೆಂದು ಪೂಜಿಸುತ್ತಾನೋ, ಆತನನ್ನು ಬ್ರಹ್ಮನೂ ನಾಮಾದಿಗಳೂ ಅಂಧಂತಮಸ್ಸಿನಲ್ಲಿ ಕೆಡಹುವರು. ಅದುಕಾರಣ ನಾಮಾದಿಗಳನ್ನು ಬ್ರಹ್ಮನೆಂದು ಪೂಜಿಸಬಾರದು, ಎಂದು ಸಾಮಸಂಹಿತೆಯಲ್ಲಿ ಹೇಳಿದೆ. ॥ ೭ ॥

ಪೀ—ನಾಮವನ್ನಾರಂಭಿಸಿ ಪ್ರಾಣಪರ್ಯಂತವಾದದು ಅದ್ವೈತಿಗಳ ಮತದಲ್ಲಿ ಅಚೇತನ (ಜಡ) ಎಂದಿದೆ. ಜಡವನ್ನು ಬ್ರಹ್ಮನೆಂದು ಉಪಾಸನೆ ಮಾಡಿದರೆ ಫಲವು ಸಿಗಲಾರದೆನ್ನುತ್ತಾರೆ—

ಭಾ. ॥ (೧) ಅಚೇತನಮಯೋಗ್ಯಂ ಚ ತಥೈವಾತಾತ್ತ್ವಿಕಂ ಕ್ವಚಿತ್ । ನೋಪಾಸೀತ ಪರೋಽನರ್ಥಃ ಸ್ಯಾತ್ತಥೋಪಾಸನಾಕೃತಃ ॥ (೨) ದರ್ಭಚರ್ಮಾದಯಶ್ಚಾತೋ ದೇವತಾಹ್ಯಭಿಮಾನಿನಃ । ನ ಹ್ಯಚೇತನಕಂ ಕಿಂಚಿತ್ಫಲದಂ ಸ್ಯಾತ್ಕದಾಚನ ॥ (೩) ಔಷಧಾದಿಷು ಚೈತಸ್ಮಾದ್ದೇವಾ ಏವ ವರಪ್ರದಾಃ । ಔಷಧಾದಿಸ್ಥಿತಾ ದೇವಾಸ್ತೇಽಜ್ಞೇ ದೃಷ್ಟಫಲಪ್ರದಾಃ । ಜ್ಞಾನಿನ್ಯದೃಷ್ಟದಾಶ್ಚ ಸ್ಯುರ್ನಾದ್ಯೈವಂ ಕಿಂಚಿದಿಷ್ಯತೇ ॥ (೪) ಯಥಾಽಜ್ಞಸ್ಯಾಪಿ(ಸ್ಯೈವ) ರಾಜ್ಞಸ್ತು ಭೋಜನಂ ಕ್ಲೃಪ್ತಮಿಷ್ಯತೇ । ನ ತ್ವವಿಜ್ಞಾಯ ರಾಜಾನಂ ಗ್ರಾಮಪ್ರಾಪ್ತಿಸ್ತತೋ ಭವೇತ್ ॥ (೫) ಏವಂ ದೇವಾ ದೃಷ್ಟಫಲಂ ದದ್ಯುರಜ್ಞಸ್ಯ ಚಾಲ್ಪತಃ । ಕಿಂಚಿಜ್ಜ್ಞಾನಕೃತಾದೃಷ್ಟಾತ್ತಚ್ಚ ನೈವಾನ್ಯಥಾ ಭವೇತ್ । ಅದೃಷ್ಟಾಖ್ಯಂ ಫಲಂ ಯತ್ತು ತಜ್ಜ್ಞಸ್ಯೈವ ನ ಚಾನ್ಯಗಂ ॥ (೬) ತಸ್ಮಾದಚೇತನೋಪಾಸಾಂ ನ ಕುರ್ಯಾತ್ ಕ್ವಾಪಿ ಕಶ್ಚನ । ನ ಚಾಸತ್ಯಾಂ ನ ಚಾಯೋಗ್ಯಾಂ ಯದೀಚ್ಛೇದುತ್ತಮಂ ಫಲಂ । ಯದಿ ನೇಚ್ಛೇತ್ತಮೋ ಗಂತುಂ ಯದಿ ಚೇಚ್ಛೇದ್ಧರೇಃ ಪ್ರಿಯಂ ॥ (೭) ಅಥ ಕರ್ತವ್ಯಕಾರೀ ಚ ಮುಮುಕ್ಷುರಥವಾ ಭವೇತ್ । ಸೋಽಪೀಚ್ಛೇತ ಹರೇಃ ಪ್ರೀತಿಂ ನಾತ್ರ ಕಾರ್ಯಾ ವಿಚಾರಣಾ ॥ ಇತ್ಯುಪಾಸನಾಲಕ್ಷಣೇ ॥ ೮ ॥

ಅ ॥ (೧) ಅಚೇತವನ್ನು ಧ್ಯಾನಿಸಬಾರದು. ಸೋಽರೋದೀತ್ ಇತ್ಯಾದಿ ವೇದಗಳಲ್ಲಿ ತೋರುವ ಮರುಗುವಿಕೆ ಮೊದಲಾದುದುನ್ನು ಬ್ರಹ್ಮನು ಮಾಡಿದನೆಂದು ಧ್ಯಾನಿಸಬಾರದು. ಎಲ್ಲಿಯೂ ಯಥಾರ್ಥ

ವಾಗದಿರುವುದನ್ನು ಧ್ಯಾನಿಸಬಾರದು. ಹಾಗೆ ಧ್ಯಾನಿಸಿದವನಿಗೆ ಮಹಾನರ್ಥವಾಗುವುದು. (೨) (ಯಾಗದಲ್ಲಿ ಅಚೇತನಗಳಾದ ದರ್ಭೆ ಚರ್ಮಮೊದಲಾದವುಗಳು ಫಲಪ್ರದಗಳೆಂದು ತೋರುತ್ತವೆ. ಆದುಕಾರಣ ಅಚೇತನೋಪಾಸನೆಯಿಂದ ಅನರ್ಥಫಲವೆಂಬುದು ಹೇಗೆ? ಎಂದರೆ) ಅಚೇತನೋಪಾಸನೆಯಿಂದ ಅನರ್ಥಫಲವು ಆಗುವುದರಿಂದಲೇ, ದರ್ಭೆ ಚರ್ಮಮೊದಲಾದ ಶಬ್ದಗಳಿಂದ ಅವುಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ಇಟ್ಟುಕೊಳ್ಳಬೇಕು. (ಸಾಮಾನ್ಯವಾಗಿ ಅಚೇತನವು ಫಲವನ್ನು ಕೊಡದಿರುವುದಾದರೂ ಯಾಗಾದಿಗಳಿಗೆ ಉಪಯುಕ್ತವಾದ ಅಚೇತನವು ಫಲವನ್ನು ಕೊಡುತ್ತದೆಂದು ಏಕೆ ಆಗಲಾರದೆಂದರೆ) ಯಾವುದೊಂದು ಅಚೇತನವೂ ಯಾವಾಗಲೂ ಫಲವನ್ನು ಕೊಡಲಾರದು. (೩) (ಅಚೇತನಗಳಾದ ರಸಾಯನ, ಔಷಧಾದಿಗಳನ್ನು ಸೇವಿಸಿದುದರಿಂದಲೇ ಪುಷ್ಟಿ ಆರೋಗ್ಯಮೊದಲಾದ ಫಲಗಳು ಕಂಡದ್ದರಿಂದ ಅಚೇತನವು ಫಲವನ್ನು ಕೊಡುವುದಿಲ್ಲವೆಂಬುದು ಹೇಗೆ ಕೂಡುತ್ತದೆ, ಎಂದರೆ ಅಚೇತನವು ಫಲವನ್ನು ಕೊಡದಿರುವುದರಿಂದಲೇ ಔಷಧಾದಿಗಳಲ್ಲಿದ್ದ ದೇವತೆಗಳೇ ಫಲಕೊಡುತ್ತಾರೆ—) (ಹಾಗಾದರೆ ಔಷಧಾದಿಗಳಿಗೆ ಅಭಿಮಾನಿಗಳಾದ ದೇವತೆಗಳ ಪರಿಜ್ಞಾನವಿಲ್ಲದವನು ಔಷಧವನ್ನು ತೆಗೆದುಕೊಂಡರೆ ಆತನಿಗೆ ಫಲ(ರೋಗಪರಿಹಾರ)ವು ಆಗದೆಹೋಗಬೇಕಾದೀತು. ಎಂದರೆ ದೇವತೆಗಳ ಸ್ವಭಾವವನ್ನು ಹೇಳುತ್ತಾರೆ.) ಔಷಧಾದಿಗಳಿಗೆ ಅಭಿಮಾನಿಗಳಾದ ದೇವತೆಗಳು ಅಜ್ಞನಿಗೆ ದೃಷ್ಟಫಲವನ್ನು ಮಾತ್ರ ಕೊಡುತ್ತಾರೆ. (ರೋಗಪರಿಹಾರಮಾಡುತ್ತಾರೆ.) ದೇವತಾ ಪರಿಜ್ಞಾನವಿದ್ದವನಿಗೆ ರೋಗಪರಿಹಾರವನ್ನೂ ಅದೃಷ್ಟಫಲವನ್ನೂ ದೇವತೆಗಳು ಕೊಡುತ್ತಾರೆ. ಅಭಿಮಾನಿದೇವತೆಯಿಲ್ಲದಿದ್ದುದು ಯಾವುದೊಂದು ವಸ್ತುವೂ ಇಲ್ಲ. (೪) (ಈ ಅರ್ಥವನ್ನು ದೃಷ್ಟಾಂತಕೊಟ್ಟು ಹೇಳುತ್ತಾರೆ.) ರಾಜನನ್ನು ತಿಳಿಯದವನಿಗೂ ಕ್ಲೃಪ್ತವಾದ (ರಾಜನು ಕೊಡಿಸುವ) ಭೋಜನವು ಸಿಗುತ್ತದೆ. ರಾಜನನ್ನು ತಿಳಿಯದೆ ರಾಜನಿಂದ ವಿಶೇಷವಾದ ಗ್ರಾಮಲಾಭವು ಆಗಲಾರದು. (೫) ಹೀಗೆಯೇ ದೇವತೆಗಳೂ ಭೋಜನದಂತೆಯೇ ದೃಷ್ಟಫಲವು (ಐಹಿಕರೋಗಪರಿಹಾರವು) ಅಲ್ಪವಾಗಿರುವುದರಿಂದ ಅಜ್ಞನಿಗೆ ರೋಗನಿವೃತ್ತಿರೂಪ ದೃಷ್ಟಫಲವನ್ನು ಕೊಡುವರು. (ಹಾಗಾದರೆ ಔಷಧಾದಿಗಳಲ್ಲಿದ್ದ ದೇವತೆಗಳು ಅಜ್ಞನಿಗೂ ರೋಗಪರಿಹಾರಮಾಡುವುದಾದರೆ ಔಷಧ ಸ್ವೀಕಾರ ಮಾಡಿದರೂ ಕೆಲವರಿಗೆ ರೋಗಪರಿಹಾರವು ಏತಕ್ಕೆ ಆಗುವುದಿಲ್ಲ, ಎಂದರೆ) ದೃಷ್ಟಫಲವೂ ಕೂಡ ಸ್ವಲ್ಪ ತಿಳಿದು ಮಾಡಿದುರಿಂದುಂಟಾದ ಅದೃಷ್ಟ ಸಹಾಯದಿಂದಲೇ ಆಗುವುದು. ಅದೃಷ್ಟವು ಇಲ್ಲವಾದರೆ ಸರ್ವಥಾ ಆಗಲಾರದು (ಏವಂಚ ಆತನಿಗೆ ಅದೃಷ್ಟವಿಲ್ಲದಿರುವುದರಿಂದಲೇ ರೋಗಪರಿಹಾರವಾಗಲಿಲ್ಲ) ದೇವತೆಯನ್ನು ತಿಳಿದವನಿಗೇನೇ ಅದೃಷ್ಟಫಲವು ಉಂಟಾಗುತ್ತದೆ. ಬೇರೆಯುವರಿಗೆ ಅದೃಷ್ಟವು ಉಂಟಾಗಲಾರದು (೬) ಆದುಕಾರಣ ಉತ್ತಮಫಲವನ್ನು ಹೊಂದಲಿಚ್ಛಿಸುವವನು ತಮಸ್ಸಿಗೆ ಹೋಗಲಿಕ್ಕೆ ಇಚ್ಛಿಸದೆ ಇದ್ದವನು ಶ್ರೀಹರಿಗೆ ಪ್ರಿಯವಾಗಬೇಕೆಂದು ಇಚ್ಛಿಸುವವನು ಯಾವನೊಬ್ಬನೂ ಎಲ್ಲಿಯೂ ಅಚೇತನೋಪಾಸನೆಯನ್ನೂ ಅಸತ್ಯವಾದ ಉಪಾಸನೆಯನ್ನೂ ಅಯೋಗ್ಯವಾದ ಉಪಾಸನೆಯನ್ನೂ ಸರ್ವಥಾ ಮಾಡಬಾರದು. (೭) (ಶ್ರೀಹರಿಗೆ ಪ್ರೀತಿಯಾಗಬೇಕೆಂದು ಇಚ್ಛಿಸದೆ ಇದ್ದರೆ ಬಾಧಕಹೇಳುತ್ತಾರೆ.) ಕರ್ತವ್ಯಕರ್ಮವನ್ನು ಮಾಡುವವನಾಗಲೀ ಮೋಕ್ಷವನ್ನು ಹೊಂದಲಿಚ್ಛಿಸುವವನಾಗಲೀ ಶ್ರೀಹರಿಯು ಪ್ರೀತಿಯನ್ನು ಇಚ್ಛಿಸಬೇಕು. ಈ ವಿಷಯದಲ್ಲಿ ಸಂಶಯಮಾಡಕೂಡದು, ಎಂದು ಉಪಾಸನಾಲಕ್ಷಣದಲ್ಲಿದೆ ॥ ೮ ॥

ಪೀ ದರ್ಭೆ ಚರ್ಮಮೊದಲಾದ ಶಬ್ದಗಳಿಂದ ಅಭಿಮಾನಿ ದೇವತೆಗಳನ್ನು ಇಟ್ಟುಕೊಳ್ಳಬೇಕೆಂಬಲ್ಲಿ ಸೂತ್ರವನ್ನು ಹೇಳುತ್ತಾರೆ—

**ಭಾ. ॥ (೧) ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ ॥ (೨) ಓಂ ಪಯೋಽಂಬುವಚ್ಚೇತ್ತತ್ರಾಪೀತಿ ಭಗವದ್ವಚನಂ ॥ (೩) ದೇವೇಷು ಚರ್ಮಾದಿನಾಮಾನಿ**

**ಸಂವಾದಾದೇರಿತಿ ಚ ದೇವತಾಮೀಮಾಂಸಾಯಾಂ ॥ (೪) ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯಫಲತ್ವವಿಪರ್ಯಯಾಭ್ಯಾಮಿತಿ ಸಂಕರ್ಷಣಸೂತ್ರಂ ॥ (೫) ಓಷಧಯಸ್ಸಂವದಂತೇ ಸೋಮೇನ ಸಹ ರಾಜ್ಞಾ । ಪ್ರವೋ ಗ್ರಾವಾಣಃ ಸವಿತಾ ದೇವಃ ಸುವತು ಧರ್ಮಣಾ ॥ ೯ ॥**

**ಅ** ॥ (೧) **ಮೃದಬ್ರವೀತ್** ಮಣ್ಣು ಮಾತನಾಡಿತು, **ಆಪೋಽಬ್ರುವನ್** ಜಲಗಳು ಮಾತಾಡಿದವು ಇದುಮೊದಲಾದ ವೇದಗಳಲ್ಲಿ ಮೃದಾದಿಗಳಿಗೆ ಅಭಿಮಾನಿಗಳಾದ ದೇವತೆಗಳೇ ಹೇಳಲ್ಪಡುತ್ತಾರೆ. ಅವರಿಗೆ ಬೇರೆ ಚೇತನರಿಗಿಂತ ಅಂತರ್ಧಾನಶಕ್ತಿಮೊದಲಾದ ವಿಶೇಷ ಸಾಮರ್ಥ್ಯವಿದೆ. ಮತ್ತು ತಾವು ಅಭಿಮಾನಿಗಳಾಗಿ ಉಳ್ಳವಸ್ತುಗಳಲ್ಲಿ ಅವರು ವ್ಯಾಪಿಸಿಕೊಂಡಿದ್ದಾರೆ. (ಬ್ರ. ಸೂ. ಅ. ೧ ಪಾ ೪. ಸೂ .೬) (೨) (ಅಚೇತನವು ಯಾವ ಫಲವನ್ನೂ ಕೊಡಲಾರದೆಂದು ಹೇಳಿದ್ದು ಕೂಡುವುದಿಲ್ಲ. ಏಕೆಂದರೆ ಅಚೇತನವಾದ ಹಾಲು ಸ್ವತಃ ಮೊಸರು ಆಗುತ್ತದೆ. ಸ್ವತಃ ನೀರು ಹರಿಯುತ್ತದೆ ಕೂಲವು (ನದಿಯ ದಡವು ತನ್ನಷ್ಟಕ್ಕೇನೇ ಬೀಳುತ್ತದೆ. ಹಾಗೆಯೇ ಅಚೇತನವಾದ ದರ್ಭೆಮೊದಲಾದುದು ಫಲವನ್ನು ಕೊಡಲಿಕ್ಕೆ ಪ್ರವೃತ್ತಿಮಾಡುತ್ತದೆ. ಎಂದು ಏಕೆ ಆಗಲಾರದೆಂದರೆ–) ಹಾಲು, ನೀರು ಮೊದಲಾದ ದೃಷ್ಟಾಂತಗಳಿಂದ ಅಚೇತನವೂ ಫಲವನ್ನು ಕೊಡುತ್ತದೆಂದು ಕಲ್ಪಿಸಕೂಡದು. ಹಾಲಿಗೆ ಹೆಪ್ಪು ಹಾಕದೆ ಮೊಸರು ಆಗುವುದಿಲ್ಲ. ಶ್ರೀಹರಿಯ ಪ್ರೇರಣೆಯಿಂದಲೇ ಹಾಲು ಮೊಸರು ಆಗುವುದು, ಹೀಗೆ ಹಾಲು ನೀರು ಇತ್ಯಾದಿಗಳಲ್ಲಿ ಶ್ರೀಹರಿಯೇ ನಿಮಿತ್ತಕಾರಣನು ಎಂದು ಹೇಳತಕ್ಕ, **ಏತೇನ ಹ ವಾವ ಪಯೋ ಮಂಡಂ ಭವತಿ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ** ಗಾರ್ಗಿ ಇದುಮೊದಲಾದವೇದಗಳಿವೆ. (ಬ್ರ. ಸೂ. ಅ. ೨. ಪಾ. ೨. ಸೂ ೩) (೩) (ದರ್ಭೆಮೊದಲಾದ ಶಬ್ದಗಳಿಂದ ಅಭಿಮಾನಿದೇವತೆಗಳನ್ನು ಇಟ್ಟುಕೊಳ್ಳಬೇಕೆಂಬಲ್ಲಿ ಸಾಮಾನ್ಯ ಸೂತ್ರವನ್ನು ಹೇಳಿದರ . ಈಗ ಅದನ್ನೇ ಹೇಳತಕ್ಕ ವಿಶೇಷಸೂತ್ರವನ್ನೂ ಹೇಳುತ್ತಾರೆ.) † **ದೇವೇಷು ಚರ್ಮಾದಿನಾಮಾನಿ ಸಂವಾದಾದೇಃ** ಎಂದು ದೇವತಾಮೀಮಾಂಸಾ ಸೂತ್ರವು. (೪) (ಅಚೇತನವನ್ನೂ ಅಯೋಗ್ಯವನ್ನೂ ಉಪಾಸನೆ ಮಾಡಬಾರದೆಂಬಲ್ಲಿಯೂ ಸೂತ್ರಹೇಳುತ್ತಾರೆ.) ಫಲವಿಲ್ಲದಿರುವುದರಿಂದಲೂ ವಿಪರೀತಫಲವು ಸಿಗುವುದರಿಂದಲೂ ಅಚೇತನವನ್ನೂ ಅಸತ್ಯವನ್ನೂ ಅಯೋಗ್ಯವನ್ನೂ ಉಪಾಸನೆ ಮಾಡಬಾರದು. (೫) (**ದೇವೇಷು** ಎಂಬ ಸೂತ್ರದ ವಿಷಯವಾಕ್ಯವನ್ನು ಹೇಳುತ್ತಾರೆ) ಸೋಮಲತೆಗೆ ಅಭಿಮಾನಿಯಾದ ಚಂದ್ರನೊಡನೆ ಸಸ್ಯಗಳಿಗೆ ಅಭಿಮಾನಿಗಳಾದ ದೇವತೆಗಳು ಮಾತನಾಡುತ್ತಾರೆ. ಎಲೋ ಕಲ್ಲುಗಳಿಗೆ ಅಭಿಮಾನಿಗಳಾದ ದೇವತೆಗಳೇ ನಿಮ್ಮನ್ನು ಸೂರ್ಯಾಂತರ್ಗತ ನಾರಾಯಣನು ಧರ್ಮ (ಪುಣ್ಯ)ದಿಂದ ಉಂಟುಮಾಡಲಿ. (ಹೀಗೆಯೇ ಚರ್ಮಾದಿಗಳು ಫಲಕೊಡುತ್ತವೆಂದು ಹೇಳತಕ್ಕ ವೇದಗಳನ್ನು ಇಟ್ಟುಕೊಳ್ಳಬೇಕು )

ವಿ ॥ ಔಷಧಿ, ಚರ್ಮ, ದರ್ಭೆ, ಗ್ರಾವ, ಮೊದಲಾದ ನಾಮಗಳು ಅವುಗಳಿಗೆ ಅಭಿಮಾನಿಗಳಾದ ದೇವತೆಗಳಲ್ಲಿಯೇ ಇರುತ್ತವೆ. ಅಚೇತನಗಳಲ್ಲಿ ಅಲ್ಲ. ಏಕೆಂದರೆ ಓಷಧಿಗಳು ಮಾತಾಡಿಕೊಂಡವು ಎಂದು ವೇದವಿದೆ. ಚರ್ಮದರ್ಭೆಗಳು ಫಲಕೊಡುತ್ತವೆಂದು ಇದೆ ಕಲ್ಲುಗಳು ಸೂರ್ಯನ ಮಕ್ಕಳೆಂದು ವೇದವಿದೆ. ಇವೆಲ್ಲವೂ ದೇವತೆಗಳೆಂದು ಇಟ್ಟುಕೊಂಡರೇನೇ ಕೂಡುತ್ತದೆ. ಜಡಗಳಿಗೆ ಮಾತಾಡುವಿಕೆ ಮೊದಲಾದ ಶಕ್ತಿಯಿಲ್ಲದಿರುವುದರಿಂದ ಅಚೇತನಗಳೆಂದು ಇಟ್ಟುಕೊಂಡರೆ ಮಾತಾಡಿದವು ಇತ್ಯಾದಿಗಳು ಕೂಡಲಾರವು ॥ ೯ ॥

ಪೀ—ಜಡಪದಾರ್ಥಗಳಿಗೆ ಭಾಷಣಾದಿಗಳು ಕೂಡುವುದಿಲ್ಲವೆಂದಿಷ್ಟು ಮಾತ್ರವಲ್ಲ. ಪರಂತು ಚೇತನ ಅಚೇತನ ಎಲ್ಲಾ ವಸ್ತುಗಳ ಪ್ರವೃತ್ತಿಗಳಿಗೂ ಶ್ರೀಹರಿಯು ನಿಮಿತ್ತಕಾರಣನು ಎಂದು ವೇದದಲ್ಲಿ ಹೇಳಿದೆ ಅದುಕಾರಣ ಯಾವುದೊಂದೂ ಸ್ವತಂತ್ರವಾದುದು ಇಲ್ಲವೆನ್ನುತ್ತಾರೆ—

† ಅರ್ಥವು ಇಲ್ಲಿಯೇ ಮುಂದೆ ಹೇಳಲ್ಪಡುತ್ತದೆ.

**ಭಾ. ॥ (೧) ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥ (೨) ನ ದೇವಾನಾಮತಿವ್ರತಂ ಶತಾತ್ಮಾ ಚ ನ ಜೀವತಿ ॥ (೩) ಅನೇಹಸೋ ವ ಊತಯಃ ಸು ಊತಯೋ ವ ಊತಯಃ ॥ (೪) ದ್ಯಾವಾಪೃಥಿವೀ ಜನಯನ್ನಭಿವ್ರತಾಪ ಓಷಧೀರ್ವನಿನಾನಿ ಯಜ್ಞಿಯಾ । ಅಂತರಿಕ್ಷಂ ಸ್ವಾ೧ ರಾಪಪ್ರುರೂತಯೇ ವಶಂ ದೇವಾಸಸ್ತನ್ವೀ೩ ಇನಿಮಾಮೃಜುಃ ॥ ೧೦ ॥**

**ಅ ॥** (೧) ಇಂದ್ರಿಯಗಳಿಗೆ ಸ್ವಾಮಿಯಾದ ಯಶಸ್ಸುಳ್ಳ ಎಲೋ ಶ್ರೀಹರಿಯೇ ನೀನು ಹೊರತು ಯಾವುದೂ ಮಾಡಲ್ಪಡುವುದಿಲ್ಲ. ದೂರದಲ್ಲಿ ಆಗಲೀ ಸಮೀಪದಲ್ಲಿ ಆಗಲೀ ಯಾರಿಗೂ ಅಲ್ಲಾಡಲಿಕ್ಕೂ ಶಕ್ತಿಯಿಲ್ಲ. ಎಲೋ ಶ್ರೀಹರಿಯೇ, ನಿನ್ನನ್ನು ಪೂಜಿಸುವವರ ಇಂದ್ರಿಯಗಳಲ್ಲಿ ನೀನು ಇದ್ದು ಪೂಜ್ಯನಾದ ಪೂರ್ಣವಾದ ಆನಂದವುಳ್ಳ ಅತ್ಯಾಶ್ಚರ್ಯಕರನಾದ ನಿನ್ನನ್ನು ನೀನೇ ಪೂಜಿಸು. (೨) (ಅಭಿಮಾನಿಗಳಾದ ದೇವತೆಗಳೆಂದು ಇಟ್ಟುಕೊಂಡು ಭಾಷಣಾದಿಗಳನ್ನು ಕೂಡಿಸಿದರೂ ದೇವತೆಗಳು ಫಲವನ್ನು ಕೊಡುತ್ತಾರೆಂಬುದು ಕೂಡಲಾರದು, ಏಕೆಂದರೆ ದೇವತೆಗಳಿಗೆ ಯಜಮಾನನಿಗೆ ಫಲಕೊಡಬೇಕೆಂದು ಇಚ್ಛೆಯಿದ್ದರೂ ಇನ್ನೊಬ್ಬನು ವಿಘ್ನಮಾಡಬಹುದು, ಎಂದರೆ—ಮನುಷ್ಯರಿಗೆ ಸಾಮರ್ಥ್ಯವಿಲ್ಲದಿರುವುದರಿಂದ ಮನುಷ್ಯರು ವಿಘ್ನಮಾಡಲಾರರೆಂಬಲ್ಲಿ ವೇದಪ್ರಮಾಣ ಹೇಳುತ್ತಾರೆ) ದೇವತೆಗಳ ಸಂಕಲ್ಪವನ್ನು ಮೀರಿಕೊಂಡು ನೂರು ವರ್ಷ ಆಯುಷ್ಯವುಳ್ಳ ಜೀವನೂ ಜೀವಿಸಲಾರನು (ಅಲ್ಪ ಆಯುಷ್ಯವುಳ್ಳವನು ಜೀವಿಸಲಾರನೆಂದು ಸುತರಾಂ ಸಿದ್ಧವು.) (೩) (ದೇವತೆಗಳು ವಿಘ್ನಮಾಡುತ್ತಾರೆಂದರೆ—ಅದೂ ಕೂಡದು, ಏಕೆಂದರೆ –ಬೇರೆ ದೇವತೆಗಳು ವಿಘ್ನಮಾಡುತ್ತಿರುವಾಗ ಇತರ ದೇವತೆಗಳಿಗೆ ಯಜಮಾನನಿಗೆ ಫಲವನ್ನು ಕೊಡಬೇಕೆಂಬ ಇಚ್ಛೆಯೇ ಹುಟ್ಟಲಾರದು, ದೇವತೆಗಳ ಇಚ್ಛೆಯು ಸರ್ವಥಾ ವ್ಯರ್ಥವಾಗಲಾರದೆಂಬಲ್ಲಿ ವೇದಪ್ರಮಾಣ ಹೇಳುತ್ತಾರೆ) ಎಲೋ ದೇವತೆಗಳೇ ನಿಮ್ಮ ಇಚ್ಛೆಗಳು ಪಾಪ ಇಲ್ಲದವುಗಳು. (ಸಫಲಗಳು) ನಿಮ್ಮ ಇಚ್ಛೆಗಳು (ಭಕ್ತರನ್ನು) ಚೆನ್ನಾಗಿ ರಕ್ಷಿಸತಕ್ಕವುಗಳು. (೪) (ಜಲಾಭಿಮಾನಿದೇವತೆಗಳಿಗೆ ಫಲವನ್ನು ಕೊಡುವ ಸಾಮರ್ಥ್ಯವಿದೆ, ಎಂಬಲ್ಲಿ ವೇದ ಹೇಳುತ್ತಾರೆ) ಆಪ್ ಎಂದು ಹೆಸರುಳ್ಳ ದೇವತೆಗಳು ಸ್ವರ್ಗಭೂಮಿಗಳ ವ್ರತಗಳಾದ ಯಾಗಮೊದಲಾದ ಕರ್ಮಗಳನ್ನು ವನದಲ್ಲಿರುವ ಯಾಗಕ್ಕೆ ಯೋಗ್ಯಗಳಾದ ಸಸ್ಯಗಳನ್ನು ಹುಟ್ಟಿಸಿದರು. ಅಂತರಿಕ್ಷಲೋಕ, ಸ್ವರ್ಗಲೋಕ, ಇವುಗಳನ್ನು ರಕ್ಷಿಸುವುದಕ್ಕಾಗಿ ತುಂಬಿಸಿದರು. ಅದರಲ್ಲಿ ಇಚ್ಛಾನುಸಾರ ಯೋಗ್ಯಶರೀರಗಳನ್ನು ಶುದ್ಧಗಳನ್ನಾಗಿ ಮಾಡಿದರು. ॥ ೧೦ ॥

**ಪೀ—ನರ್ತೇ ತ್ವತ್ಕ್ರಿಯತೇ** ಎಂಬ ವೇದದ ಬಲದಿಂದ ಶ್ರೀ ಹರಿಯು ಹೊರತು ಅಚೇತನದ ಪ್ರವೃತ್ತಿಯಾಗುವುದಿಲ್ಲವೆಂದಾದರೂ ಜಡಗಳಿಗೆ ಅಭಿಮಾನಿಗಳಾದ ದೇವತೆಗಳಿಲ್ಲದೆ ಪ್ರವೃತ್ತಿಯಾಗುವುದಿಲ್ಲವೆಂದು ಏಕೆ ಹೇಳಬೇಕು? ಎಂದರೆ—

**ಭಾ. ॥ (೧) ಅಚೇತನಂ ಚೇತನೇಭ್ಯೋ ದೈವತೇಭ್ಯಶ್ಚ ಚೇತನಾಃ । ದೇವಾಃ ಪ್ರಾಣಾಚ್ಚ ಸ ಪ್ರಾಣೋ ವಿಷ್ಣೋರೇವ ಸದೈವ ತು । ಸ್ವಭಾವಂ ಚ ಪ್ರವೃತ್ತಿಂ ಚ ವಿಕಾರಂ ಚ ಸಮಾಪ್ನುಯುಃ ॥ (೨) ಕಶ್ಚಿದ್ಭಾವ ಋತೇ ತೇಷಾಂ ನೈತತ್ಸ್ಯಾ(ತ್ಕೈಃ ಸ್ಯಾ)ಚ್ಚ ಕದಾಚನ । ಅಚೇತನಪ್ರವೃತ್ತೌ ತು ನ (ತನ್ನ) ದೃಷ್ಟಾಂತೋಽಸ್ತಿ ಕಶ್ಚನ । ಚೇತನಾನಾಂ ಪ್ರವೃತ್ತೇಶ್ಚ ದೃಷ್ಟತ್ವಾದೇವ ಸರ್ವಶಃ ॥ (೩) ಅದೃಷ್ಟಂ ದೃಷ್ಟವಜ್ಜ್ಞೇಯಂ ಯಥಾದೃಷ್ಟಪ್ರಣೇತೃಕಂ । ವಿಸರ್ಪತ್ತಂಡುಲಂ ದೃಷ್ಟ್ವಾ ಕಲ್ಪ್ಯಾ ತತ್ರ ಪಿಪೀಲಿಕಾ ॥ ನ ತದ್ದೃಷ್ಟ್ಯೈವ**

**ದೃಷ್ಟಾನಾಮುಪಿಪೀಲಿಕಸರ್ಪಣಂ । ಏವಂ ದೃಷ್ಟಾನುಸಾರೇಣ ಚಿದಧೀನಮಚೇತನಂ ॥ (೪) ದುರ್ಘಟಾ ಶಕ್ತಿರಪಿ ಹಿ (ತು) ಪಿಶಾಚಾನಾಂ ಹಿ ದೃಶ್ಯತೇ । ದೇವಾನಾಂ ಕಿಮು ಕಿಮ್ವೇವ ಪರಮಸ್ಯ ಹರೇಃ ಪ್ರಭೋಃ ॥ ಇತ್ಯಾದಿ ಬ್ರಹ್ಮತರ್ಕೇ (ಕರ್ತಾದೇಶ್ಚ) ॥ ೧೧ ॥**

ಅ ॥ (೧) ಅಚೇತನವು ಚೇತನರಿಂದಲೂ, ಚೇತನರು ದೇವತೆಗಳಿಂದಲೂ, ದೇವತೆಗಳು ಮುಖ್ಯ ಪ್ರಾಣನಿಂದಲೂ, ಮುಖ್ಯಪ್ರಾಣನು ವಿಷ್ಣುವಿನಿಂದಲೂ ಹೀಗೆ ಎಲ್ಲರೂ ಸರ್ವದಾ ತಂತಮ್ಮ ಸ್ವಭಾವ ವನ್ನೂ ಪ್ರವೃತ್ತಿಯನ್ನೂ ವಿಕಾರವನ್ನೂ ಹೊಂದುವರು. (೨) (ಅಚೇತನಾದಿಗಳು ಚೇತನಾದಿಗಳಿಂದಲೇ ಸ್ವಭಾವಾದಿಗಳನ್ನು ಹೊಂದುತ್ತಾವೆ, ಎಂಬುದನ್ನು ದೃಢಪಡಿಸುತ್ತಾರೆ) ಚೇತನಾದಿಗಳನ್ನು ಹೊರತು ಅಚೇತನಾದಿಗಳಿಗೆ ಯಾವಾಗಲೂ ಯಾವುದೊಂದು ಸ್ಥಿತಿಯೂ ಆಗಲಾರದು. ಚೇತನವಿಲ್ಲದೆ ಅಚೇತ ನಕ್ಕೆ ಸ್ವತಃ ಯಾವ ಪ್ರವೃತ್ತಿಯೂ ಆಗಲಾರದು. (ಆ ವಿಷಯದಲ್ಲಿ ಪ್ರತ್ಯಕ್ಷವಿಲ್ಲ.) ಯಾವ ದೃಷ್ಟಾಂತವೂ ಇಲ್ಲದಿರುವುದರಿಂದ ಸ್ವತಃ ಅಚೇತನಕ್ಕೆ ಪ್ರವೃತ್ತಿಯಿದೆ, ಎಂದು ಊಹಿಸಲು ಶಕ್ಯವಲ್ಲ. (ಅದುಕಾರಣ ಅನು ಮಾನವೂ ಇಲ್ಲ.) (ಅಚೇತನಕ್ಕೆ ಸ್ವತ ಏವ ಪ್ರವೃತ್ತಿಯಾಗುತ್ತದೆ ಎಂಬಲ್ಲಿ ಪ್ರಮಾಣವೇ ಇಲ್ಲದಿರುವು ದರಿಂದ ಅಯುಕ್ತವೆಂದು ಹೇಳಿ ಈಗ ಚೇತನರಿಂದಲೇ ಪ್ರವೃತ್ತಿಯಾಗುತ್ತದೆ ಎಂಬಲ್ಲಿ ಪ್ರಮಾಣವನ್ನು ಹೇಳುತ್ತಾರೆ.) ಎಲ್ಲಾ ಅಚೇತನಗಳಲ್ಲಿಯೂ * ಚೇತನರ ಪ್ರವೃತ್ತಿಯೇ ಕಂಡದೆ. (೩) (ಅಚೇತನವು ತನ್ನಷ್ಟಕ್ಕೇನೇ ಪ್ರವೃತ್ತಿಮಾಡುತ್ತದೆಂಬಲ್ಲಿ ದೃಷ್ಟಾಂತವಿಲ್ಲವೆಂಬುದು ಕೂಡುವುದಿಲ್ಲ, ಕೂಲಪತನ (ನದಿಯ ದಡ ತನ್ನಷ್ಟಕ್ಕೇನೇ ಬೀಳುವುದು) ಮೊದಲಾದವುಗಳಿಗೆ ಕರ್ತನು ಕಾಣದಿರುವುದರಿಂದ ಅವು ಗಳೇ ದೃಷ್ಟಾಂತವಾಗಬಹುದು ಎಂದರೆ) ಯಾವ ಅನುಮಾನದಲ್ಲಿ ಕರ್ತನು ಕಾಣುತ್ತಾನೋ ಅದ ರಂತೆಯೇ ಕರ್ತನು ಕಾಣದಿರುವ ಅನುಮಾನದಲ್ಲಿಯೂ ಕರ್ತನಿದ್ದಾನೆಂದು ಊಹಿಸಿಕೊಳ್ಳಬೇಕು. (ಅಂದರೆ—ದೃಷ್ಟಕರ್ತೃಕ ಅನುಮಾನದಂತೆಯೇ, **ವಿಪ್ರತಿಪನ್ನಂ ಕೂಲಪತನಂ ಸಕರ್ತೃಕಂ ಪತ ನತ್ವಾತ್ ದೇವದತ್ತಕೃತ ಪತನವತ್**—ದೇವದತ್ತನು ತಾನಾಗಿಮಾಡಿಕೊಂಡ ಪತನ (ಬೀಳುವಿಕೆ) ದಲ್ಲಿ ಪತನತ್ವವಿದ್ದುದರಿಂದ ಪತನಕ್ಕೆ ದೇವದತ್ತನು ಕರ್ತನೆಂದು ಸಿದ್ಧನಾಗಿದ್ದಂತೆಯೇ ಕೂಲಪತನದ ಲ್ಲಿಯೂ ಪತನತ್ವವಿದ್ದುದರಿಂದ ಒಬ್ಬ ಕರ್ತನಿದ್ದಾನೆನ್ನಬೇಕು. ಇದುಮೊದಲಾದ ಅದೃಷ್ಟಕರ್ತೃಕವಾದ (ಕರ್ತನು ಕಾಣದಿರುವ) ಅನುಮಾನದಲ್ಲಿಯೂ ಕರ್ತನನ್ನು ಊಹಿಸಿಕೊಳ್ಳಬೇಕು. (ಕೂಲಪತನಾದಿ ಗಳಿಗೆ ಕರ್ತನು ಕಾಣದಿರುವುದರಿಂದ ಕೂಲಪತನಾ (ನದಿಯದಡ ತನ್ನಷ್ಟಕ್ಕೇನೇ ಬೀಳುವುದು.) ದಿಗಳು ಅಚೇತನದ ಅಧೀನಗಳೇ, ಎಂದು ಏಕೆ ಆಗಲಾರವು? ಹಾಗೆಯೇ ಘಟಪಟಾದಿಗಳಿಗೆ ಕರ್ತನು ಕಾಣು ತ್ತಿರುವುದಾದರೂ ಆ ಘಟಪಟಾದಿಗಳೂ ಅಚೇತನದ ಅಧೀನಗಳೆಂದು ಕೂಡಬಹುದು, ಎಂದರೆ) ಅಕ್ಕಿ ಯನ್ನು ಹೊರುತ್ತಿರುವ ಇರುವೆಯನ್ನು ಕಾಣದೆ ಅಕ್ಕಿಯು ಮಾತ್ರ ಹೋಗುತ್ತಿರುವುದನ್ನು ನೋಡಿ ಅಲ್ಲಿ ಇರುವೆಯು ಅಕ್ಕಿಯನ್ನು ಹೊರುತ್ತದೆಂದು § ಊಹಿಸುತ್ತೇವೆ. ಹಾಗೆಂತ ಇರುವೆಯು ಅಕ್ಕಿಯನ್ನು ಹೊರುತ್ತಿರುವುದನ್ನು ನೋಡಿದಾಗ ಅಕ್ಕಿಯೇ ಹೋಗುತ್ತಿದೆ. ಇರುವೆಯು ಅಕ್ಕಿಯನ್ನು ಹೊರುವುದಿಲ್ಲ.

---

* **ವಿಪ್ರತಿಪನ್ನಂ ಕಾರ್ಯಂ ಚೇತನೇಚ್ಛಾಧೀನಂ ಕಾರ್ಯತ್ವಾತ್ ಪಟಾದಿವತ್**=ಬಟ್ಟೆಯು ಕಾರ್ಯವಾಗಿರುವುದ ರಿಂದ ನೇಕಾರನ ಇಚ್ಛೆಯನ್ನನುಸರಿಸಿರುವುದು ಹಾಗೆಯೇ ಎಲ್ಲಾ ಕಾರ್ಯಗಳೂ ಚೇತನನ ಇಚ್ಛೆಯ ಅಧೀನಗಳು, ಎಂಬ ಯುಕ್ತಿಯಿಂದ ಅಚೇತನಗಳಿಗೆಲ್ಲಾ ಚೇತನರಿಂದಲೇ ಪ್ರವೃತ್ತಿಯು ಅಹಂ ಕರೋಮಿ ಎಂದು ಚೇತನರಿಗೆ ಪ್ರವೃತ್ತಿಯು ಕಾಣುವುದರಿಂದ ಬಟ್ಟೆ ಮೊದಲಾದವುಗಳನ್ನು ಸೃಷ್ಟಿಸುವಾಗಲೂ ಚೇತನರಿಗೆ ವ್ಯಾಪಾರವಿಲ್ಲವೆಂದು ಹೇಳಕೂಡದು.

§ **ವಿಪ್ರತಿಪನ್ನಂ ತಂಡುಲಂ ಪಿಪೀಲಿಕಾಧೀನವಿಸರ್ಪಣವತ್ ಅನುಪಲಭ್ಯಮಾನಪ್ರಣೇತ್ರಂತರತ್ವೇಸತಿ ವಿಸರ್ಪ ತ್ತಂಡುಲತ್ವಾತ್ ಸಂಪ್ರತಿಪನ್ನವತ್**=ಈ ಅಕ್ಕಿಯು ಇರುವೆಯ ಅಧೀನವಾಗಿ ಹೋಗುತ್ತಿದೆ, ಅಕ್ಕಿಯನ್ನು ಒಯ್ಯು ವವನು ಇನ್ನೊಬ್ಬನು ಕಾಣುವುದಿಲ್ಲ ಅಕ್ಕಿಯು ಹೋಗುತ್ತಿದೆ, ಆದಕಾರಣ ಇರುವೆಯು ಒಯ್ಯುವುದು ಎಂದು ಊಹಿಸಬೇಕು

ಎಂತ ಊಹಿಸುವುದು ಬಾಧಿತವಾಗುತ್ತದೆ. ಹೀಗೆ † ಕರ್ತನು ಕಾಣುತ್ತಿರುವ ಚೇತನವನ್ನನುಸರಿಸಿ ಕರ್ತನು ಕಾಣದಿದ್ದ ಅಚೇತನವೂ ಚೇತನದ ಅಧೀನವು ಎಂದೆನ್ನಬೇಕು. (ಕರ್ತನು ಕಾಣದ ಅನುಮಾನದಂತೆ ಕರ್ತನು ಕಾಣುವ ಅನುಮಾನವೆಂದನ್ನಕೂಡದು.) (೪) (ಆದರೂ ಚೇತನರು ದೇವತೆಗಳಿಂದ ಪ್ರವೃತ್ತ್ಯಾದಿಗಳನ್ನು ಮಾಡುತ್ತಾರೆಂದು ಹೇಳಿದ್ದು ಯುಕ್ತವಲ್ಲ. ಸರ್ವಥಾ ಕಾಣದಿರುವ ದೇವತೆ ಈಶ್ವರಾದಿಗಳನ್ನು ಕಲ್ಪಿಸಿದರೆ ಕಲ್ಪನಾ ಗೌರವವು ಬರುವುದರಿಂದ ಚೇತನರಿಗೇನೇ ಸ್ವತಃ ಪ್ರವೃತ್ತಿಯೆಂದು ಕಲ್ಪಿಸಿದರೆ ಲಾಘವವಿದೆ ಎಂದರೆ) ಲೋಕದಲ್ಲಿ ಪಿಶಾಚಗಳಿಗೂ ದುರ್ಘಟವಾದ ಶಕ್ತಿಯು ಕಂಡದೆ. ಹೀಗೆ ಇರಲು ದೇವತೆಗಳಿಗೂ ಸರ್ವೋತ್ತಮನಾದ ಶ್ರೀಹರಿಗೂ ದುರ್ಘಟವಾದ ಶಕ್ತಿಯು ಇದೆ, ಎಂಬುದು ಸುತರಾಂ ಸಿದ್ಧವು, ಇತ್ಯಾದಿ ಪ್ರಮೇಯವು ಬ್ರಹ್ಮತರ್ಕದಲ್ಲಿದೆ.

ವಿ || (1)ದೇವತೆಗಳಿಗೂ ಶ್ರೀಹರಿಗೂ ಕರ್ತೃತ್ವನ್ನು ಇಟ್ಟುಕೊಂಡರೆ ಕಲ್ಪನಾಗೌರವವಿಲ್ಲ, ಏಕೆಂದರೆ ವೇದಮೊದಲಾದವುಗಳಲ್ಲಿ ಹಾಗೆ ಸಾಧಿಸಿಯದೆ. ದೇವಾದಿಗಳು ಕಾಣುವುದೇ ಇಲ್ಲ, ಅದುಕಾರಣ ವಿರೋಧವೆಂದೆನ್ನಕೂಡದು. ದೇವಾದಿಗಳಿಗೆ ದುರ್ಘಟವಾದ ಶಕ್ತಿಯು ಇದ್ದಕಾರಣ ಅವರು ಕಾಣುವುದಿಲ್ಲ. (2) ಅವರಿಗೆ ಅಂತಹ ಶಕ್ತಿಯು ಇರುವುದು ಹೇಗೆಂದರೆ—ಲೋಕದಲ್ಲಿ ನಿಯಾಮಕರಾಗದಿರುವ ಪಿಶಾಚಾದಿಗಳಿಗೂ ಅಂತಹ ಶಕ್ತಿಯಿರುವಾಗ ಸರ್ವನಿಯಾಮಕರಾದ ದೇವಾದಿಗಳಿಗೆ ಶಕ್ತಿಯಿದೆ ಎಂಬುದು ಸುತರಾಂ ಸಿದ್ಧಿಸುತ್ತದೆ. || ೧೧ ||

ಹಿ—ಹೀಗೆ **ನಾಮ ಬ್ರಹ್ಮೇತ್ಯುಪಾಸ್ವ** ಇತ್ಯಾದಿಗಳಲ್ಲಿ ನಾಮಾದಿ ಶಬ್ದಗಳು ದೇವತೆಗಳನ್ನೇ ಬೋಧಿಸುತ್ತವೆ. ಅಚೇತನಗಳನ್ನು ಬೋಧಿಸುವುದಿಲ್ಲ, ಎಂದು ಸಂಕ್ಷೇಪದಿಂದಲೂ ವಿಸ್ತಾರವಾಗಿಯೂ ಅರ್ಥಹೇಳಿ ಈಗ ೭ನೇ ಖಂಡದ ೧ನೇ ಮಂತ್ರದಲ್ಲಿದ್ದ **ಹೃದಯಜ್ಞ** ಎಂಬ ಶಬ್ದಕ್ಕೆ ಅರ್ಥಹೇಳುತ್ತಾರೆ–

**ಭಾ. || (೧) ಹೃದಯಜ್ಞೋ ಭಗವತ್ತತ್ತ್ವಜ್ಞಃ | ಹೃದ್ಯಯನಾದ್ಧೃದಯಂ | ಉದರಂ ಬ್ರಹ್ಮೇತಿ ಶಾರ್ಕರಾಕ್ಷ್ಯಾ ಉಪಾಸತೇ ಹೃದಯಂ ಬ್ರಹ್ಮೇತ್ಯಾರುಣಯಃ || ಇತಿ ಶ್ರುತಿಃ || (೨) ಕೋಲಂ ಪೂಗಫಲಂ ಪ್ರೋಕ್ತಂ ಕಲಂ ತಾಂಬೂಲಪತ್ರಕಂ | ಇತ್ಯಭಿಧಾನಂ || (೩)ಭೂತಾನಾಂ ಭೌತಿಕಾನಾಂ ಚ ಮಂತ್ರಾಹುತಿಗಣಸ್ಯ ಚ | ಅಚೇತನಗಣಸ್ಯಾಸ್ಯ ಕಲ್ಪಕೋ ಮಿತ್ರನಾಮಕಃ || (೪) ಪ್ರಾಣಾ ಭೂತಾನಿ ಮಂತ್ರಾದ್ಯಾಶ್ಚಿದಚಿತ್ತ್ವವಿಭೇದಿನಃ | ಅಚಿತಾಂ ಕಲ್ಪಕೋ ಮಿತ್ರಶ್ಚಿತಾಂ ವಾಯ್ವಾದಯಃ ಸ್ಮೃತಾಃ || ಇತಿ ವಸ್ತುತತ್ತ್ವೇ || ೧೨ ||**

ಅ || (೧) ಹೃದಯಜ್ಞಃ=ಶ್ರೀಹರಿಯ ತತ್ತ್ವವನ್ನು ತಿಳಿದವನು. ಹೃದಯದಲ್ಲಿಯೂ ಪ್ರವೃತ್ತಿ ಮಾಡುವುದರಿಂದ ಹೃದಯಂ=ಶ್ರೀಹರಿಯು. (ಆದರೂ ಮುಖ್ಯವಾದ ರೂಢಿಬಿಟ್ಟು ಅಮುಖ್ಯವಾದ ಯೋಗವನ್ನು ಅಂಗೀಕರಿಸುವುದು ಯುಕ್ತವಲ್ಲ, ಎಂದರೆ—ಹೃದಯ ಶಬ್ದಕ್ಕೆ ಪರಬ್ರಹ್ಮನಲ್ಲಿಯೇ ವಿದ್ವದ್ರೂಢಿ (ಪ್ರಸಿದ್ಧಿ) ಯಿದ್ದುದರಿಂದ ಪರಬ್ರಹ್ಮನಲ್ಲಿಯೇ ಮುಖ್ಯವು, ಎಂಬಲ್ಲಿ ವೇದಪ್ರಮಾಣಹೇಳುತ್ತಾರೆ.) ಸೂಕ್ಷ್ಮಜ್ಞಾನಿಗಳಾದ ಮುನಿಗಳು ಮೇಲೆ ಹೋಗುವುದರಿಂದೂ ಚೆನ್ನಾಗಿ ಭಕ್ತರಿಂದ ಸ್ತುತಿಸಲ್ಪ

---

† (1) ಕರ್ತನು ಕಾಣದಿದ್ದ ಕೂಲಪತನವು ಅಚೇತನದ ಅಧೀನವೆಂದು ಹೇಳುವುದಾದರೆ ಅಕ್ಕಿಯನ್ನು ಹೊರುತ್ತಿರುವ ಇರುವೆಯು ಕಾಣದಿದ್ದು ಅಕ್ಕಿಯು ಹರಿಯುತ್ತಿರುವುದೂ ಅಚೇತನದ ಅಧೀನವಾಗಬೇಕಾಗುವುದು. ಎರಡೂ ಒಂದೇ ವಿಧವಾಗಿದೆ, ವಿಶೇಷವಿಲ್ಲ (2) ಹಾಗೆಂತ ಹಾಗೆ ಹೇಳಲಾಗುವುದಿಲ್ಲ. ದೂರದಲ್ಲಿ ಇರುವೆಯು ತೋರದಿದ್ದರೂ ಸಮೀಪದಲ್ಲಿ ಇರುವೆಯು ಅಕ್ಕಿಯನ್ನು ತೆಗೆದುಕೊಂಡು ಹೋಗುವುದು ನಮಗೆ ತೋರುವುದು. (3) ಕರ್ತನು ಕಾಣದಿದ್ದ ಕೂಲಪತನದಂತೆ ಕರ್ತನು ಕಾಣುತ್ತಿದ್ದರೂ ಚೇತನದ ಅಧೀನವಲ್ಲವೆಂದು ಹೇಳುವುದಾದರೆ ಅಕ್ಕಿಯನ್ನು ಇರುವೆಯು ಹೊತ್ತುಕೊಂಡು ಹೋಗುತ್ತಿದ್ದರೂ ಅಕ್ಕಿಯು ಇರುವೆಯ ಅಧೀನವಾಗದೆ ಹೋಗಬೇಕಾಗುವುದು

ಡುವುದರಿಂದಲೂ **ಉದರ**ನೆನಿಸಿಕೊಂಡ ಉದರದಲ್ಲಿರುವವನು ವಾಸುದೇವನೆನಿಸಿದ ಪರಬ್ರಹ್ಮನೆಂದು ಧ್ಯಾನಿಸುತ್ತಾರೆ. ಆರುಣಿ ಎಂದು ಹೆಸರುಳ್ಳ ಮುನಿಗಳು ಹೃದಯದಲ್ಲಿರತಕ್ಕ ಹೃದಯನೆನಿಸಿದವನನ್ನು ಪರಬ್ರಹ್ಮನೆಂದು ಧ್ಯಾನಿಸುತ್ತಾರೆಂದು ವೇದವು. (ಐತ. ಆರ. ೨. ಅ. ೧. ಖ. ೪.) (೨) (೩ನೇ ಖಂಡದ ೧ನೇ ಮಂತ್ರದಲ್ಲಿದ್ದ **ಕೋಲೇ** ಎಂಬ ಶಬ್ದದ ಅರ್ಥಹೇಳುತ್ತಾರೆ) ಕೋಲವೆಂದರೆ ಅಡಿಕೆಕಾಯಿಯು. ಕಲವೆಂದರೆ ತಾಂಬೂಲ ಪತ್ರವು, ಎಂದು ಕೋಶವು. (೩) (೪ನೇ ಖಂಡದಲ್ಲಿ ಸಂಕಲ್ಪನೆನಿಸಿದ ಮಿತ್ರನು ಸರ್ವವನ್ನು ಸೃಷ್ಟಿಮಾಡುವವನೆಂದು ಹೇಳಿದೆ. ಅದರಲ್ಲಿ ಪ್ರಮಾಣಕೊಟ್ಟು ಹೇಳುತ್ತಾರೆ) ದ್ಯು ಪೃಥಿವೀ ವಾಯು ಆಕಾಶ ಜಲ ತೇಜಸ್ಸುಗಳಿಗೆ, ಅಂದರೆ ಅಚೇತನಗಳ ಸಮುದಾಯಕ್ಕೂ, ವೃಷ್ಟಿ ಅನ್ನ ಪ್ರಾಣ ಗಳಿಗೂ, ಮಂತ್ರಗಳಿಗೂ, ಕರ್ಮಗಳಿಗೂ, ಲೋಕ, ಸರ್ವವಸ್ತುಗಳಿಗೂ, ಎಲ್ಲದಕ್ಕೂ, ಮಿತ್ರನೆನಿಸಿ ದವನು ಸೃಷ್ಟಿಮಾಡುವವನು. (೪) (ಈ ದ್ಯಾವಾಪೃಥಿವ್ಯಾದಿಗಳಲ್ಲಿ ಚೇತನ ಅಚೇತನಗಳೆಂದು ವಿಭಾಗ ವಿದ್ದರೆ ಹೀಗೆ ಅರ್ಥ ಹೇಳಬಹುದಿತ್ತು. ಅದೇವೇ ಹೇಗೆ ಸಿದ್ಧಿಸುತ್ತದೆ.? ಅಚೇತನಗಳನ್ನು ಮಿತ್ರನು ಸೃಷ್ಟಿಸುವುದಾದರೆ ದ್ಯಾವಾಪೃಥಿವ್ಯಾದಿ ಚೇತನಗಳನ್ನು ಸೃಷ್ಟಿಸುವವನು ಯಾರು ಎಂದರೆ.) ಪ್ರಾಣ ಗಳೂ, ದ್ಯು ಆರಭ್ಯ ತೇಜಃ ಪರ್ಯಂತವಾದವುಗಳು ಮಂತ್ರಮೊದಲಾದವುಗಳು ಇವುಗಳಲ್ಲಿ ಚೇತನ ಅಚೇತನ ಎಂದು ಭೇದವಿದೆ. ಅದರಲ್ಲಿ ಮಿತ್ರನು ಜಡಗಳನ್ನು ಸೃಷ್ಟಿಸುವವನು. ವಾಯು ಮೊದ ಲಾದವರು ಚೇತನಗಳನ್ನು ಸೃಷ್ಟಿಸುವವರು, ಎಂದು ವಸ್ತುತತ್ವವೆಂಬ ಗ್ರಂಥದಲ್ಲಿದೆ. ॥ ೧೨ ॥

ಪೀ—**ಸರ್ವಂ ಸಂಕಲ್ಪ್ಯತೇ** ಎಂದು ಉಪಸಂಹಾರದಲ್ಲಿ **ಸರ್ವ** ಎಂಬ ಶಬ್ದವಿದ್ದುದರಿಂದ **ಅಚಿತಾಂ ಕಲ್ಪಕಃ** ಎಂದು ಜಡಗಳನ್ನು ಸೃಷ್ಟಿಸಿದನೆಂದು ಅರ್ಥಹೇಳಿದ್ದು ಹೇಗೆ? ಎಂದರೆ ವಿಶೇಷ ವಚನ ವನ್ನನುಸರಿಸಿ ಸಾಮಾನ್ಯವಾದ ಸರ್ವ ಎಂಬ ಶಬ್ದವನ್ನು ಸಂಕೋಚಮಾಡಿಕೊಳ್ಳಬೇಕೆನ್ನುತ್ತಾರೆ—

**ಭಾ. ॥ (೧) ಸರ್ವಮಚೇತನಂ ಸಂಕಲ್ಪ್ಯತೇ ॥ (೨) ಅಸ್ಥಿರಸ್ಮರಣಂ ಚಿತ್ತಂ ಸ್ಥಿರ- ಸಂಸ್ಮರಣಂ ಸ್ಮರಃ । ಇತಿ ಶಬ್ದನಿರ್ಣಯೇ ॥ (೩) ವೇದನಂ ಜ್ಞಾನಮಾತ್ರಂ ಸ್ಯಾದ್ವಿದ್ವತ್ವಂ ತು ವಿಶೇಷತಃ । ಇತಿ ಚ ॥ (೪) ಮೋಕ್ಷೇ ಯಸ್ಮಿನ್ಪ್ರವೇಶಃ ಸ್ಯಾತ್ಸಾ ಪ್ರತಿಷ್ಠಾ ಹಿ ಮು- ಖ್ಯತಃ । ಉಪಚಾರತಸ್ತ್ವವಸ್ಥಾನಮಿತಿ ಶಬ್ದವಿದೋ ವಿದುಃ ॥ ಇತಿ ಚ ॥ (೫) ದೇವಾ ಮನುಷ್ಯತಾಂ ಪ್ರಾಪ್ತಾ ವಿಜ್ಞೇಯಾ ದೇವಮಾನುಷಾಃ । ಧ್ಯಾನಂ ಕುರ್ವಂತ ಇವ ತೇ ನೈವ ಸ್ಯುರ್ಬಹುಭಾಷಿಣಃ ॥ ಬ್ರೂಯುಃರರ್ಥವತೀಂ ವಾಚಂ ನಾನಾರ್ಥಾಂ ಪ್ರಾಯಶೋ ಹಿ ತೇ । ಇತಿ ಪಾದ್ಮೇ ॥ (೬) ಬಲಂ ಜ್ಞಾನಬಲಂ ಚೈವ ಬಾಹ್ಯಂ ಚೇತಿ ದ್ವಿಧಾ ಮತಂ । ಯುಕ್ತಿಜ್ಞಾನಾತ್ (ಯುಕ್ತಿಜ್ಞತಾ) ಜ್ಞಾನಬಲಂ ತಜ್ಜ್ಞಾನಾದಧಿಕಂ ಮತಂ (ಸಾ ಜ್ಞಾ- ನಾದಧಿಕಾ ಮತಾ) ॥ ಇತಿ ತತ್ತ್ವಸಾರೇ ॥ ॥ ೧೩ ॥**

ಅ ॥ (೧) ಸರ್ವ ಶಬ್ದಕ್ಕೆ ಚೇತನ ಅಚೇತನ ಸರ್ವಜಗತ್ತು ಎಂದು ಅರ್ಥಮಾಡಬೇಕೆಂದಿದ್ದರೂ ಅಚಿತಾಂ ಕಲ್ಪಕಃ ಎಂಬ ವಿಶೇಷ ವಚನವನ್ನು ಆದರಿಸಿ ಅಚೇತನ ಸರ್ವವೆಂದು ಸಂಕೋಚಮಾಡಿ ಕೊಳ್ಳಬೇಕು. ಅಚೇತನವೆಲ್ಲವೂ ಸೃಷ್ಟಿಸಲ್ಪಡುತ್ತದೆ. (೨) (೫ನೇ ಖಂಡದ ೧ನೇ ಮಂತ್ರದಲ್ಲಿದ್ದ **ಚಿತ್ತ**, ೧೩ನೇ ಖಂಡದ ೧ನೇ ಮಂತ್ರದಲ್ಲಿದ್ದ **ಸ್ಮರ** ಶಬ್ದಗಳ ಅರ್ಥಹೇಳುತ್ತಾರೆ.) ಅಸ್ಥಿರವಾದ ಸ್ಮರಣೆಯು **ಚಿತ್ತ**ವೆನಿಸುತ್ತದೆ. ಸ್ಥಿರವಾದ ಸ್ಮರಣವು **ಸ್ಮರ** ಎನಿಸುತ್ತದೆ, ಎಂದು ಶಬ್ದನಿರ್ಣಯದಲ್ಲಿದೆ. (೩) (೫ನೇ ಖಂಡದ ೨ನೇ ಮತ್ರದಲ್ಲಿದ್ದ **ಯದಯಂ ವೇದ ಯದ್ವಾ ಅಯಂ ವಿದ್ವಾನ್** ಎಂಬಲ್ಲಿದ್ದ **ವೇದ ವಿದ್ವಾನ್** ಎಂಬ ಶಬ್ದಗಳ ಅರ್ಥಹೇಳುತ್ತಾರೆ.) ಸಾಮಾನ್ಯ ಜ್ಞಾನವು ವೇದನವೆನಿಸುತ್ತದೆ. ವಿಶೇಷ ಜ್ಞಾನವು ವಿದ್ವತ್ವವೆನಿಸುತ್ತದೆ. (ವೇದ=ಸಾಮಾನ್ಯವಾಗಿ ತಿಳಿದವನು ವಿದ್ವಾನ್=ವಿಶೇಷತಿಳಿದವನು)

(೪) (೫ನೇ ಖಂಡದ ೨ನೇ ಮಂತ್ರದಲ್ಲಿದ್ದ **ಚಿತ್ತಂ ಹ್ಯೇಕಾಯನಂ ಚಿತ್ತಂ ಪ್ರತಿಷ್ಠಾ** ಎಂಬಲ್ಲಿದ್ದ ಏಕಾಯನ ಪ್ರತಿಷ್ಠಾಶಬ್ದಗಳಿಗೆ ಅರ್ಥಹೇಳುತ್ತಾರೆ.) **ಮೋಕ್ಷದಲ್ಲಿ** ಮುಖ್ಯವಾಗಿ ಆಶ್ರಯವಾಗಿರುವುದು **ಪ್ರತಿಷ್ಠಾ** ಎನ್ನಿಸುತ್ತದೆ. ಅಮುಖ್ಯವಾಗಿ ಆಶ್ರಯವಾಗಿರುವುದು **ಏಕಾಯನ** ಎನಿಸುತ್ತದೆ, ಎಂದು ಶಬ್ದಾರ್ಥವನ್ನು ತಿಳಿದವರು ಹೇಳುತ್ತಾರೆ. (೫) (೬ನೇ ಖಂಡದ ೧ನೇ ಮಂತ್ರದಲ್ಲಿದ್ದ **ಧ್ಯಾಯಂತೀವ ದೇವಮನುಷ್ಯಾಃ** ಎಂಬುದರ ಅರ್ಥವನ್ನು ಪ್ರಮಾಣಕೊಟ್ಟು ಹೇಳುತ್ತಾರೆ.) **ಮನುಷ್ಯರಾಗಿ** ಅವತರಿಸಿದ ದೇವತೆಗಳು ದೇವಮನುಷ್ಯರೆನಿಸುತ್ತಾರೆ ಅವರು ಧ್ಯಾನಮಾಡುತ್ತಿರುತ್ತಾರೆ. ಬಹುಭಾಷಿಗಳಲ್ಲ. ಅಂದರೆ ದೇವಮನುಷ್ಯರು ಪ್ರಾಯಶಃ ಸಾರ್ಥಕವಾದ ನಾನಾರ್ಥಗಳುಳ್ಳ ಮಾತನ್ನೇ ಆಡುವರು, ಎಂದು ಪಾದ್ಮಪುರಾಣದಲ್ಲಿದೆ. (೬) (ಅಜ್ಞಾನಿಗಳಿಗೂ ಶರೀರ ಬಲವು ಕಂಡದ್ದರಿಂದ (೮ನೇ ಖಂಡದಲ್ಲಿ ವಿಜ್ಞಾನದಿಂದ ಬಲವು ಶ್ರೇಷ್ಠವೆಂದು ಹೇಳಿದ್ದು ಹೇಗೆ ಕೂಡುತ್ತದೆ., ಎಂದರೆ—) **ಜ್ಞಾನಬಲ ಬಾಹ್ಯಬಲ** ಎಂದು ಬಲವು ಎರಡುವಿಧವು. ಯುಕ್ತಿಗಳಿಂದುಂಟಾದ ನಿರ್ಣಯವು ಜ್ಞಾನಬಲವು. ಅದು ಕೇವಲ ಜ್ಞಾನದಿಂದ ಶ್ರೇಷ್ಠವು. (ಅಂದರೆ ಬಾಹ್ಯಬಲವು ಜ್ಞಾನದಿಂದ ಶ್ರೇಷ್ಠವಾಗದಿದ್ದರೂ ಯುಕ್ತಿಯಿಂದುಂಟಾಗುವ ನಿರ್ಣಯರೂಪವಾದ ಜ್ಞಾನಬಲವು ಕೇವಲಜ್ಞಾನದಿಂದ ಶ್ರೇಷ್ಠವಾಗಿರುವುದರಿಂದ ವಿಜ್ಞಾನಕ್ಕಿಂತ ಬಲವು ಶ್ರೇಷ್ಠವೆಂದು ಹೇಳಿದ್ದು ) ಎಂದು ತತ್ವಸಾರದಲ್ಲಿದೆ ॥ ೧೩ ॥

ಪೀ—ಹೀಗಾದರೆ ೯ನೇ ಖಂಡದಲ್ಲಿ ಬಲಕ್ಕಿಂತ ಅನ್ನವು ಶ್ರೇಷ್ಠವೆಂದು ಹೇಳಿದ್ದು ಯುಕ್ತವಲ್ಲ, ಬಾಹ್ಯಬಲಕ್ಕೇನೇ ಅನ್ನವು ಕಾರಣವಾಗಿರುವುದರಿಂದ ಬಾಹ್ಯಬಲಕ್ಕಿಂತ ಅನ್ನವು ಶ್ರೇಷ್ಠವಾದರೂ ಜ್ಞಾನಬಲಕ್ಕೆ ಕಾರಣವಾಗದಿರುವುದರಿಂದ ಜ್ಞಾನಬಲಕ್ಕಿಂತ ಅನ್ನವು ಶ್ರೇಷ್ಠವಾಗಲಾರದು, ಎಂದರೆ—

**ಭಾ. ॥ (೧) ಅನ್ನಂ ಜ್ಞಾನರಸಾನ್ನಂ ಚ ಬಾಹ್ಯಮನ್ನಮಿತಿ ದ್ವಿಧಾ । ಜ್ಞಾನಾನ್ನಂ ಜ್ಞಾನಬಲತಃ ಶ್ರೇಷ್ಠಂ ಜ್ಞಾನರತಿರ್ಹಿ ತತ್ । ಯದ್ಬಾಹ್ಯಂ ತು ಬಲಂ ತಸ್ಮಾದ್ಬಾಹ್ಯಮನ್ನಂ ವಿಶಿಷ್ಯತೇ ॥ (೨) ಆಪಶ್ಚ ದ್ವಿವಿಧಾಃ ಪ್ರೋಕ್ತಾಸ್ತೃಪ್ತಿರ್ಯಾ ಜ್ಞಾನತೋ ರತೇಃ । ತಾ ಜ್ಞೇಯಾ ಆಂತರಾ ಆಪೋ ಬಾಹ್ಯಾಸ್ತು ದ್ರವರೂಪಕಾಃ । ಆಂತರಾನ್ನಾದಾಂತರಾಪೋ ಬಾಹ್ಯಾದ್ಬಾಹ್ಯಾಸ್ತಥಾ ವರಾಃ ॥ (೩) ಏವಂ ತೇಜಃ ಪ್ರಾತಿಭಾಖ್ಯಂ ಬಾಹ್ಯಂ ಚೇತಿ ದ್ವಿಧಾ ಮತಂ । ಪ್ರಾತಿಭಂ ಜ್ಞಾನತೃಪ್ತೇಶ್ಚ ಪರಂ ॥ (೪) ಆಕಾಶ ಏವ ಚ । ಸ್ಥಿರಾ ತು ಪ್ರತಿಭಾಂತಸ್ಥಾ ಛಿದ್ರಮೇವ ತು ಬಾಹ್ಯಗಃ (೧೦) । ಸ್ಥಿರಾ ಹಿ ಪ್ರತಿಭಾ ಶ್ರೇಷ್ಠಾ ಚಂಚಲಾಯಾ ॥ (೫) ಸ್ಮರಾಭಿಧಾ । ಏಕಧ್ಯೈವ ಸ್ಮೃತಿಃ ಶ್ರೇಷ್ಠಾ ॥ (೬) ಆಶಾಃಪರೋಕ್ಷದೃಗಾತ್ಮಕಂ । ಶ್ರೇಷ್ಠಂ ಸುಖಂ ॥ (೭) ತತೋ ಮೋಕ್ಷೇ ಪ್ರಾಣಾಖ್ಯಂ ಪರಮಂ ಸುಖಂ ॥ ೧೪ ॥**

ಅ ॥ (೧) (1) ಜ್ಞಾನದಿಂದುಂಟಾಗುವ ಆನಂದರೂಪವಾದ ಆಂತರ ಅನ್ನವು (2) ಬಾಹ್ಯವಾದ ಅನ್ನವು, ಹೀಗೆ ಅನ್ನವು ಎರಡು ವಿಧವು. ಅದರಲ್ಲಿ ಜ್ಞಾನಾನ್ನವು ಜ್ಞಾನಬಲಕ್ಕಿಂತ ಶ್ರೇಷ್ಠವು. ಹೇಗೆಂದರೆ ಜ್ಞಾನಾನ್ನವು ಜ್ಞಾನದಿಂದುಂಟಾಗುವ ಆನಂದರೂಪವು. ಬಾಹ್ಯಬಲಕ್ಕಿಂತ ಬಾಹ್ಯವಾದ ಅನ್ನವು ಉತ್ತಮವಾಗಿದೆ. (೨) (ಹಾಗಾದರೆ ೧೦ನೇ ಖಂಡದಲ್ಲಿ ಅನ್ನಕ್ಕಿಂತ ಜಲವು ಶ್ರೇಷ್ಠವೆಂದು ಹೇಳಿದ್ದು ಹೇಗೆ? ಜಲವು ಎರಡು ವಿಧವಾದ ಅನ್ನಕ್ಕಿಂತ ಶ್ರೇಷ್ಠವಲ್ಲ ಎಂದರೆ) ಜ್ಞಾನದಿಂದುಂಟಾಗುವ ಆನಂದದಿಂದ ಪ್ರಕಟವಾಗುವ ತೃಪ್ತಿಯು ಆಂತರ ಅಪ್‌ಗಳೆನಿಸುತ್ತವೆ, ದ್ರವರೂಪವಾದವುಗಳು (ಸ್ವಾಭಾವಿಕವಾಗಿ ದ್ರವತ್ವವುಳ್ಳವುಗಳು) ಬಾಹ್ಯಜಲಗಳು, ಎನಿಸುತ್ತವೆ, ಹೀಗೆ ಅಪ್‌ಗಳು ಆಂತರ ಬಾಹ್ಯಗಳೆಂದು ಎರಡು ವಿಧಗಳು. ಅದರಲ್ಲಿ ಜ್ಞಾನದಿಂದುಂಟಾಗುವ ರತಿರೂಪವಾದ ಆಂತರವಾದ ಅನ್ನಕ್ಕಿಂತ ಆಂತರಗಳಾದ

ತೃಪ್ತಿರೂಪಗಳಾದ ಜಲಗಳು ಶ್ರೇಷ್ಠಗಳು. ಬಾಹ್ಯವಾದ ಅನ್ನಕ್ಕಿಂತ ಬಾಹ್ಯಗಳಾದ ದ್ರವರೂಪಗಳಾದ ಜಲಗಳು ಶ್ರೇಷ್ಠಗಳು. (೩) (ಹೀಗಾದರೆ ೧೧ನೇ ಖಂಡದಲ್ಲಿ ಜಲಗಳಿಗಿಂತ ತೇಜಸ್ಸು ಶ್ರೇಷ್ಠವೆಂದು ಹೇಳಿದ್ದು ಹೇಗೆ ಕೂಡುತ್ತದೆ, ಎಂದರೆ—) ಹೀಗೆಯೇ **ಪ್ರಾತಿಭ ಬಾಹ್ಯ** ಎಂದು ತೇಜಸ್ಸು ಎರಡು ವಿಧವು. ಅದರಲ್ಲಿ ಆಂತರವಾದ ಅಪ್‌ಗಿಂತ ಜ್ಞಾನಾನಂದದಿಂದುಂಟಾಗುವ ವಿಷಯಾಲಂಬುದ್ಧಿರೂಪವಾದ ಆಂತರವಾದ ಪ್ರಾತಿಭ ಎಂಬ ತೇಜಸ್ಸು ಶ್ರೇಷ್ಠವು. (ಬಾಹ್ಯದ್ರವರೂಪವಾದ ಅಪ್ (ನೀರಿ)ಗಿಂತ ಬಾಹ್ಯವಾದ ಜಡರೂಪವಾದ ತೇಜಸ್ಸು ಶ್ರೇಷ್ಠವು.) (೪) (೧೨ನೇ ಖಂಡದಲ್ಲಿ ತೇಜಸ್ಸಿಗಿಂತ ಆಕಾಶಕ್ಕೆ ಶ್ರೇಷ್ಠತ್ವ ಹೇಳಿದ್ದು ಹೇಗೆಂದರೆ—) ಅಂತಸ್ಥಾಕಾಶ ಬಾಹ್ಯಾಕಾಶ ಎಂದು ಆಕಾಶವು ಎರಡು ವಿಧವು. (1) ಸ್ಥಿರವಾದ *ಪ್ರತಿಭಾರೂಪವಾದುದು ಆಂತರಾಕಾಶವು (2) ಛಿದ್ರಾತ್ಮಕವಾದುದು ಬಾಹ್ಯಾಕಾಶವು. ಅದರಲ್ಲಿ ಚಂಚಲವಾದ ಪ್ರತಿಭೆಯಿಂದ ಸ್ಥಿರವಾದ ಪ್ರತಿಭೆಯು ಶ್ರೇಷ್ಠವು. (ಹೀಗೆಯೇ ಬಾಹ್ಯವಾದ ತೇಜಸ್ಸಿಗಿಂತ ಬಾಹ್ಯಾಕಾಶವು ಶ್ರೇಷ್ಠವು) (೫) (೧೩ನೇ ಖಂಡದಲ್ಲಿದ್ದ **ಸ್ಮರೋ ವಾ ಆಕಾಶಾದ್ಭೂಯಾನ್** ಎಂಬ ವಾಕ್ಯಕ್ಕೆ ಅರ್ಥಹೇಳುತ್ತಾರೆ.) ಅಚಂಚಲವಾದ (ಸ್ಥಿರವಾದ) ಪ್ರತಿಭೆಗಿಂತ ಸ್ಮರ ಎಂದು ಹೆಸರುಳ್ಳ ಒಂದೇ ಪ್ರಕಾರವಾದ ಧ್ಯಾನರೂಪವಾದ ಸ್ಮೃತಿಯು ಶ್ರೇಷ್ಠವು. (೬) (೧೪ನೇ ಖಂಡದಲ್ಲಿದ್ದ **ಆಶಾ ವಾವ ಸ್ಮರಾದ್ಭೂಯಸೀ** ಎಂಬ ವಾಕ್ಯದ ಅರ್ಥಹೇಳುತ್ತಾರೆ) ಹಿಂದೆ ಹೇಳಿದ ಧ್ಯಾನಕ್ಕಿಂತ ಆಶಾ ಎಂಬ ಅಪರೋಕ್ಷಜ್ಞಾನರೂಪವಾದ ಸುಖವು ಶ್ರೇಷ್ಠವು. (೭) (೧೫ನೇ ಖಂಡದಲ್ಲಿದ್ದ **ಪ್ರಾಣೋ ವಾ ಆಶಾಯಾ ಭೂಯಾನ್** ಎಂಬ ವಾಕ್ಯದ ಅರ್ಥಹೇಳುತ್ತಾರೆ.) ಅಪರೋಕ್ಷಜ್ಞಾನರೂಪವಾದ ಸುಖಕ್ಕಿಂತ ಮೋಕ್ಷದಲ್ಲಿ ಹೊಂದಲ್ಪಡುವ ಪ್ರಾಣ ಎಂಬ ಪರಮ ಸುಖವು ಶ್ರೇಷ್ಠವು (ಸ್ಮೃತಿ ಆಶಾ ಪ್ರಾಣ ಇವರು ಅಂತಃಪದಾರ್ಥರಾದುದರಿಂದ ಇವರಲ್ಲಿ ಎರಡು ವಿಧವಿಲ್ಲದಿರುವುದರಿಂದ ಎರಡು ವಿಧವೆಂದು ಹೇಳಲಿಲ್ಲ.) ॥ ೧೪ ॥

**ಪೀ** ಹೀಗೆ ಅನ್ನಮೊದಲಾದ ಶಬ್ದಗಳಿಂದ ಆಂತರ ಬಾಹ್ಯ ಎಂದು ಎರಡು ವಿಧವಾದ ಜಡವನ್ನೇ ಹೇಳಿರುತ್ತಾರೆ. ದೇವತೆಯನ್ನು ಹೇಳಲಿಲ್ಲ. ಆದುಕಾರಣ ಪೂರ್ವೋತ್ತರವಿರೋಧವು ಎಂದರೆ—

**ಭಾ. ॥ (೧) ಉತ್ತರೋತ್ತರಮೇತದ್ಧಿ ವಾಯ್ವಂತಾಭಿಮತಂ ಸದಾ । ಬಾಹ್ಯಾದ್ಭ್ಯೋ ಬಾಹ್ಯಮನ್ನಂ ಚ ಜಾಯತೇ ॥ (೨) ಅನ್ಯತ್ತದನ್ಯಥಾ । ವ್ಯಕ್ತಿರಂತರ್ಗತಾನಾಂ ತು ವಿಪರೀತಕ್ರಮಾದ್ಭವೇತ್ ॥ (೩) ತಥಾಽಪಿ ಮೋಕ್ಷಗಂ ಯಸ್ಮಾತ್ ಸ್ವಭಾವೋ ನಿತ್ಯ ಏವ ತು । ಅತಸ್ತಸ್ಮಾದಾಪರೋಕ್ಷ್ಯಂ ಕಾದಾಚಿತ್ಕಂ ಹಿ ಜಾಯತೇ ॥ (೪) ದೃಷ್ಟ್ಯಧೀನಾ ಸ್ಮೃತಿಶ್ಚೇಯಂ ಪ್ರತಿಭಾ ಸ್ಮೃತಿಸಂಭವಾ । ಸ್ಥೈರ್ಯಮಾಲಂಬ್ಯ ತು ಚಲಮನ್ಯಥಾ ನೈವ ತಿಷ್ಠತಿ ॥ (೫) ಪ್ರತಿಭಾತಶ್ಚ ತೃಪ್ತಿಃ ಸ್ಯಾದತೃಪ್ತಸ್ಯ ತು ಕಾ ರತಿಃ । ತ(ಅ)ತ ಏವಂ ಕ್ರಮಾದೇವ ವರಿಷ್ಠಃ ಪ್ರಾಣಜೋ ಗುಣಃ ॥ ಇತಿ ಚ ॥ ೯—೪....೧೪ ॥ ॥ ೧೫ ॥**

**ಅ** ॥ (೧) ವಾಯುಪರ್ಯಂತವಾಗಿರುವವರು ಸದಾ ಮೇಲುಮೇಲಿನವರು ಶ್ರೇಷ್ಠರು (ಅನ್ನವನ್ನು ಆರಂಭಿಸಿ ಪ್ರಾಣಪರ್ಯಂತ ಬಾಹ್ಯವಾದ ಬಲ ಅನ್ನ ಅಪ್ ತೇಜಸ್ಸುಗಳಿಗಿಂತ ಬಾಹ್ಯವಾದ ಅನ್ನ ಅಪ್ ತೇಜಸ್ಸು ಆಕಾಶಗಳು ಶ್ರೇಷ್ಠಗಳು, ಎಂಬಲ್ಲಿ ಯುಕ್ತಿಹೇಳುತ್ತಾರೆ.) ಬಾಹ್ಯವಾದ ಜಲದಿಂದ ಬಾಹ್ಯವಾದ ಅನ್ನವು ಹುಟ್ಟುತ್ತದೆ. (ಬಾಹ್ಯವಾದ ಅನ್ನದೆಶೆಯಿಂದ ಬಾಹ್ಯವಾದ ಬಲವು ಹುಟ್ಟುತ್ತದೆ, ಇತ್ಯಾದಿ ಪ್ರಕಾರ ಇಟ್ಟುಕೊಳ್ಳಬೇಕು) (ಕಾರ್ಯಕಾರಣಗಳಲ್ಲಿ ಕಾರಣವು ಶ್ರೇಷ್ಠವು.) (೨) ಆಂತರ ಅನ್ನಾದಿಗಳು

---

* ಪ್ರಜ್ಞಾಂ ನವನವೋನ್ಮೇಷಶಾಲಿನೀಂ ಪ್ರತಿಭಾಂ ವಿದುಃ। ಹೊಸಹೊಸದಾಗಿ ಜ್ಞಾನವಿಶೇಷವುಂಟಾಗುವುದು ಪ್ರತಿಭೆಯು.

ಇದಕ್ಕೆ ವ್ಯತ್ಯಾಸವಾಗಿ ಅಂದರೆ ಅಂತರಗಳಾದ ಅನ್ನಾದಿಗಳಿಗೆ ವಿಪರೀತಕ್ರಮದಿಂದ ಅಭಿವ್ಯಕ್ತಿಯಾಗುವುದು. (ಅಂದರೆ ಜ್ಞಾನಬಲದಿಂದ ಜ್ಞಾನರತಿಯು. ರತಿಯಿಂದ ತೃಪ್ತಿಯು. ತೃಪ್ತಿಯಿಂದ ಚಲಪ್ರತಿಭೆಯು. ಚಲಪ್ರತಿಭೆಯಿಂದ ಸ್ಥಿರಪ್ರತಿಭೆಯು. ಇತ್ಯಾದಿ ಬಾಹ್ಯಬಲ ಅನ್ನಾದಿ ಕಾರ್ಯಕಾರಣಭಾವ ಕ್ರಮಕ್ಕಿಂತ ವಿಪರೀತಕ್ರಮವಾಗಿ ಕಾರ್ಯಕಾರಣಭಾವವು ಆಗುವುದು ) (೩) (ಹೀಗಾದರೆ—ಕಾರಣಗಳೇ ಉತ್ತಮಗಳೆಂದು ಇಷ್ಟವಾಗಿರುವ ಪ್ರಯುಕ್ತ ರತಿಯನ್ನಾರಂಭಿಸಿ ಮೋಕ್ಷಪರ್ಯಂತವಾದವುಗಳು ಹಿಂದೆ ಹೇಳಿದ ಪ್ರಕಾರ ಕಾರ್ಯಗಳಾಗಿರುವುದರಿಂದ ಅವುಗಳು ಉತ್ತಮಗಳಾಗದೆ ಹೋಗುವವು. ಎಂದರೆ—) ಯದ್ಯಪಿ ಹಿಂದೆ ಹೇಳಿದ ಪ್ರಕಾರ ಮೋಕ್ಷವು ರತ್ಯಾದಿಗಳಿಂದ ಅಭಿವ್ಯಂಗ್ಯವಾಗುತ್ತದೆ. ಆದರೂ ಪ್ರಾಣನಿಂದುಂಟಾಗುವ ಪರಮ ಸುಖರೂಪವಾದ ಗುಣವು ಎಲ್ಲಾದಕ್ಕಿಂತಲೂ ಶ್ರೇಷ್ಠವು. (ಅದು ಹೇಗೆಂದರೆ-) ಮೋಕ್ಷದಲ್ಲಿರತಕ್ಕ ಸುಖವು ಜೀವಸ್ವಭಾವವು ಅದುಕಾರಣ ನಿತ್ಯವೇ. ನಿತ್ಯವಾದಕಾರಣ ಮೋಕ್ಷದಲ್ಲಿರತಕ್ಕ ಆನಂದ ಯೋಗ್ಯತೆಯು ಇರುವಾಗ ಅಪರೋಕ್ಷ (ಪ್ರತ್ಯಕ್ಷ) ಜ್ಞಾನವು (ಅಂತಃಕರಣ ವಿಕಾರವಾಗಿರುವುದರಿಂದ) ಕದಾಚಿತ್ ಹುಟ್ಟುತ್ತದೆ. (ಮೋಕ್ಷವನ್ನು ಹೊಂದುವ ಯೋಗ್ಯತೆಯನ್ನನುಸರಿಸಿ ಅಪರೋಕ್ಷ ಜ್ಞಾನವು ಹುಟ್ಟುತ್ತದೆ.) (೪) ಹಿಂದೆ ಹೇಳಿದ ಧ್ಯಾನವು ಪ್ರತಕ್ಷ ಯೋಗ್ಯತೆಯನ್ನನುಸರಿಸಿರುವುದು. ಸ್ಥಿರವಾದ ಪ್ರತಿಭೆಯು ಸ್ಮೃತಿಯೋಗ್ಯತೆಯಿಂದ ಹುಟ್ಟುವುದು. ಪ್ರತಿಭೆಯ ಸ್ಥಿರತ್ವವನ್ನು ನಿಮಿತ್ತವಾಗಿಟ್ಟುಕೊಂಡು—ಚಲಪ್ರತಿಭೆಯು. (ಸ್ಥಿರಪ್ರತಿಭಾ ಯೋಗ್ಯವಾದುದಕ್ಕೇನೇ ಚಲಪ್ರತಿಭೆಯು,) ಸ್ಥಿರಪ್ರತಿಭಾಯೋಗ್ಯತೆಯು ಇಲ್ಲವಾದರೆ ಚಲಪ್ರತಿಭೆಯೇ ಇರಲಾರದು. (೫) ಚಲಪ್ರತಿಭಾಯೋಗ್ಯತೆಯಿಂದಲೇ ತೃಪ್ತಿಯಾಗುವುದು. ತೃಪ್ತಿಯಲ್ಲಿ ಯೋಗ್ಯತೆಯಿಲ್ಲದವನಿಗೆ ಜ್ಞಾನದಿಂದ ಆನಂದವೇ ಉಂಟಾಗಲಾರದು. ಹಿಂದೆ ಹೇಳಿದ ಪ್ರಕಾರ ಮೋಕ್ಷಕ್ಕಾಗಿ ಅಪರೋಕ್ಷ ಜ್ಞಾನಾದಿಗಳು ಬೇಕಾಗಿರುವುದರಿಂದ ರತಿಯಿಂದ ತೃಪ್ತಿಯು ಶ್ರೇಷ್ಠವು. ಇತ್ಯಾದಿ ಕ್ರಮದಿಂದಲೇ ಪ್ರಾಣನಿಂದ ಉಂಟಾಗುವ ಪರಮ ಸುಖರೂಪವಾದ ಗುಣವು ಶ್ರೇಷ್ಠವು. ‖ ೯—೪....೧೪ ‖ ‖ ೧೫ ‖

‖ ೪—೧೪ ‖ ನಾಲ್ಕು—ಆರಂಭಿಸಿ ಹದಿನಾಲ್ಕು ಖಂಡವು ಮುಗಿಯಿತು

---

## ೧೫ನೇ ಖಂಡವು

**ಉ. ‖ ಪ್ರಾಣೋ ವಾ ಆಶಾಯಾ ಭೂಯಾನ್ಯಥಾ ವಾ ಅರಾ ನಾಭೌ ಸಮರ್ಪಿತಾ ಏವಮಸ್ಮಿನ್ ಪ್ರಾಣೇ ಸರ್ವಂ ಸಮರ್ಪಿತಂ ಪ್ರಾಣಃ ಪ್ರಾಣೇನ ಯಾತಿ ಪ್ರಾಣಃ ಪ್ರಾಣಂ ದದಾತಿ ಪ್ರಾಣಾಯ ದದಾತಿ ಪ್ರಾಣೋ ಹ ಪಿತಾ ಪ್ರಾಣೋ ಮಾತಾ ಪ್ರಾಣೋ ಭ್ರಾತಾ ಪ್ರಾಣಃ ಸ್ವಸಾ ಪ್ರಾಣ ಆಚಾರ್ಯಃ ಪ್ರಾಣೋ ಬ್ರಾಹ್ಮಣಃ ‖ ೧ ‖**

ಅ ‖ ಪ್ರಕೃಷ್ಟಸುಖರೂಪವಾದ, ಸ್ವರೂಪಾನಂದ ರೂಪಮುಕ್ತಿಗೆ ಅಭಿಮಾನಿಯಾದ, ಸರ್ವರಿಗೆ ಜೇಷ್ಠಕನಾದುದರಿಂದ ಪ್ರಾಣನೆನಿಸಿಕೊಂಡ ಮುಖ್ಯಪ್ರಾಣನೂ ಚತುರ್ಮುಖ ಬ್ರಹ್ಮನೂಕೂಡ ಭಾರತೀ ಸರಸ್ವತಿಯರಿಗಿಂತ ಶ್ರೇಷ್ಠನು. (ಉಪಾಸಕರ ವರ್ಗದಲ್ಲಿ ಸರ್ವೋತ್ತಮನಾದ ಮುಖ್ಯಪ್ರಾಣನ ಮಹಿಮೆ ಹೇಳುತ್ತಾರೆ) ಹೇಗೆ ರಥಚಕ್ರದ ಕೀಲುಗಳು ರಥದ ನಾಭಿ (ಒಳಗಡೆ ಇರುವ ಅಡ್ಡಕೀಲುಗಳಿಗೆ ಇಧಾರವಾದ ಹೊಕ್ಕಳಿನಂತೆ ಇದ್ದುದು) ಯಲ್ಲಿ ಇಡಲ್ಪಟ್ಟಿವೆಯೋ ಹಾಗೆಯೇ ಮುಖ್ಯಪ್ರಾಣನಲ್ಲಿ ಸರ್ವ

ಜಗತ್ತು ಆಶ್ರಿತವಾಗಿದೆ. (ಇದರಿಂದ ಮುಖ್ಯಪ್ರಾಣನೇ ಸರ್ವೋತ್ತಮನು ಸರ್ವಾಧಾರನೆಂದು ತಿಳಿಯ ಕೂಡದೆನ್ನುತ್ತಾರೆ.) ಭಾರತಿಗಿಂತ ಉತ್ತಮನಾದ ಮುಖ್ಯಪ್ರಾಣನೂ ಪರಬ್ರಹ್ಮನ ಅಧೀನನಾಗಿಯೇ ಪ್ರವೃತ್ತಿಮಾಡುತ್ತಾನೆ. ಮುಖ್ಯಪ್ರಾಣನು ಪರಮಾತ್ಮನನ್ನು ಶಿಷ್ಯರಿಗೆ ಉಪದೇಶಿಸುತ್ತಾನೆ. ಅದುಕಾರಣ ಪರಮಾತ್ಮನು ಮುಖ್ಯಪ್ರಾಣನಿಗೆ ಅಭೀಷ್ಟವನ್ನು ಕೊಡುತ್ತಾನೆ. ಭಕ್ತರಿಗೆ ಮುಖ್ಯಪ್ರಾಣನು ಮೋಕ್ಷದಲ್ಲಿ ಶ್ರೀಹರಿಯನ್ನು ಹೊಂದಿಸಿಕೊಡುತ್ತಾನೆ. (ತಂದೆತಾಯಿ ಮೊದಲಾದವರೆಲ್ಲರ ಜೀವನಕ್ಕೆ ಕಾರಣನಾದುದರಿಂದ ಮುಖ್ಯಪ್ರಾಣನು ಸರ್ವತ್ರ ಸನ್ನಿಹಿತನಾಗಿರುತ್ತಾನೆಂಬ ಮಹಿಮೆಹೇಳುತ್ತಾರೆ.) ಮುಖ್ಯಪ್ರಾಣನು ತಂದೆಯ ಜೀವನಕ್ಕೆ ಕಾರಣನಾಗಿ ತಂದೆಯಲ್ಲಿದ್ದುದರಿಂದ ಪಿತಾ ಎನಿಸುತ್ತಾನೆ ತಾಯಿಯ ಜೀವನಕ್ಕೆ ಕಾರಣನಾಗಿ ತಾಯಿಯಲ್ಲಿದ್ದುದರಿಂದ ಮಾತಾ ಎನಿಸುಸುತ್ತಾನೆ. ಹೀಗೆಯೇ ಸಹೋದರರ ಜೀವನಕ್ಕೂ ಸಹೋದರಿಯರ ಜೀವನಕ್ಕೂ, ಆಚಾರ್ಯರ ಜೀವನಕ್ಕೂ ಬ್ರಾಹ್ಮಣರ ಜೀವನಕ್ಕೂ ಕಾರಣನಾಗಿ ಅಲ್ಲಲ್ಲಿ ಇದ್ದ ಪ್ರಯುಕ್ತ ಆಯಾಯ ಹೆಸರುಳ್ಳವನು ಆಗುತ್ತಾನೆ. ॥ ೧ ॥

ಪೀ—ಹಿಂದೆ ಹೇಳಿದ್ದನ್ನೇ ದೃಢೀಕರಿಸುತ್ತಾರೆ—

ಉ. ॥ ಸ ಯದಿ ಪಿತರಂ ವಾ ಮಾತರಂ ವಾ ಭ್ರಾತರಂ ವಾ ಸ್ವಸಾರಂ ವಾಽಽಚಾರ್ಯಂ ವಾ ಬ್ರಾಹ್ಮಣಂ ವಾ ಕಿಂಚಿದ್ಭೃಶಮಿವ ಪ್ರತ್ಯಾಹ ಧಿಕ್ ತ್ವಾಽಸ್ತ್ವಿತ್ಯೇವೈನಮಾಹುಃ ಪಿತೃಹಾ ವೈ ತ್ವಮಸಿ ಮಾತೃಹಾ ವೈ ತ್ವಮಸಿ ಭ್ರಾತೃಹಾ ವೈ ತ್ವಮಸಿ ಸ್ವಸೃಹಾ ವೈ ತ್ವಮಸ್ಯಾಚಾರ್ಯಹಾ ವೈ ತ್ವಮಸಿ ಬ್ರಾಹ್ಮಣಹಾ ವೈ ತ್ವಮಸೀತಿ ॥ ೨ ॥

ಅ ॥ ಯಾವನಾದರೂ ತಂದೆ ತಾಯಿ ಸಹೋದರ ಸಹೋದರಿ ಆಚಾರ್ಯ, ಬ್ರಾಹ್ಮಣ ಇವರನ್ನು ನಿಷ್ಠುರವಾತಾಡಿ ತ್ವಂಕಾರಾದಿಗಳಿಂದ ಅವಮಾನಿಸಿದರೆ-ನಿರಾಕರಿಸಿದರೆ—ಆಗ ಅಂತಹವನನ್ನು ನೀನು ಪಿತ್ರಾದಿಗಳನ್ನು ತಿರಸ್ಕರಿಸಿದವನಾಗಿರುತ್ತಿ ನಿನಗೆ ಧಿಕ್ಕಾರವಿರಲಿ. ನಿನಗೆ ಅಮಂಗಲವಾಗಲಿ, ಎಂದು ಜನರು ಹೇಳುತ್ತಾರೆ. ॥ ೨ ॥

ಉ. ॥ ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾಂಛೂಲೇನ ಸಮಾಸಂ ವ್ಯತಿಷಂ ದಹೇನ್ನೈವೈನಂ ಬ್ರೂಯುಃ ಪಿತೃಹಾಽಸೀತಿ ನ ಮಾತೃಹಾಽಸೀತಿ ನ ಭ್ರಾತೃಹಾಽಸೀತಿ ನ ಸ್ವಸೃಹಾಽಸೀತಿ ನಾಚಾರ್ಯಹಾಽಸೀತಿ ನ ಬ್ರಾಹ್ಮಣಹಾಽಸೀತಿ ॥ ೩ ॥

ಅ ॥ ಯದ್ಯಪಿ ಪ್ರಾಣಹೋದ ಪಿತ್ರಾದಿಗಳ ದೇಹಗಳನ್ನು ಸುಟ್ಟರೆ (ಅಂದರೆ ಮುಖ್ಯಪ್ರಾಣನು ಬಿಟ್ಟ ಶರೀರವುಳ್ಳವರನ್ನೇ) ಸಂಕೋಚದಿಂದ(ಒಂದೊಂದು ಅವಯವದಿಂದ) ಸುಟ್ಟರೂ, ಸಂಪೂರ್ಣ ಸುಟ್ಟರೂ, ಒಬ್ಬನು ಶೂಲಕ್ಕೆ ಹಾಕಿದರೂ, ಸುಢತಕ್ಕವನನ್ನು ತಂದೆ ತಾಯಿ ಮೊದಲಾದವರನ್ನು ಕೊಂದವನೆಂದು ಹೇಳುವುದಿಲ್ಲ ॥ ೩ ॥

ಉ. ॥ ಪ್ರಾಣೋ ಹ್ಯೇವೈತಾನಿ ಸರ್ವಾಣಿ ಭವತಿ ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನತಿವಾದೀ ಭವತಿ ತಂ ಚೇದ್ಬ್ರೂಯು

**ರತಿವಾದ್ಯಸೀತ್ಯತಿವಾದ್ಯಸ್ಮೀತ್ಯೇವ ಬ್ರೂಯಾನ್ನಾಪಹ್ನುವೀತ ॥ ಇತಿ ಪಂಚ-ದಶಃ ಖಂಡಃ ॥ ೯-೧೫ ॥ ॥ ೪ ॥**

ಅ ॥ ತಂದೆ ತಾಯಿ ಮೊದಲಾದವರೆಲ್ಲರೂ ಮುಖ್ಯಪ್ರಾಣನ ಅಧೀನರಾಗಿ ಜೀವಿಸಿಕೊಂಡಿರುವವರು. ಅಥವಾ ಮುಖ್ಯಪ್ರಾಣನೇ ಪಿತ್ರಾದಿಗಳಲ್ಲಿ ನಿಯಾಮಕನಾಗಿದ್ದಾನೆ. ಪ್ರಸಿದ್ಧನಾದ ಅಧಿಕಾರಿಯು ಹಿಂದೆ ಹೇಳಿದ ಪ್ರಕಾರ ಮುಖ್ಯಪ್ರಾಣನ ಮಹಿಮೆಯನ್ನು ಕೇಳಿ ಮನನಮಾಡಿ ತಿಳಿದುಕೊಂಡವನಾಗಿ ಎಲ್ಲಾ ವಸ್ತುಗಳಿಗಿಂತಲೂ ಉತ್ತಮವಾದ ಪ್ರಾಣಾಖ್ಯವಸ್ತುವನ್ನು ಹೇಳುವವನಾಗುತ್ತಾನೆ. ಆತನೊಡನೆ ನೀನು ಅತಿವಾದಿಯು ಆಗಿರುತ್ತಿ (ಅಂದರೆ ಪ್ರಾಣಾಖ್ಯವಸ್ತುವನ್ನು ಉತ್ಕೃಷ್ಟವನ್ನಾಗಿ ಹೇಳಿರುತ್ತಿ) ಎಂದು ಬೇರೆಯವರು ಹೇಳಿದರೆ-ಆಗ ಆತನು ನಾನು ಮುಖ್ಯಪ್ರಾಣನಿಗೆ ಉತ್ತಮತ್ವವನ್ನು ಹೇಳುವವನೆಂಬ ಅಭಿಪ್ರಾಯದಿಂದ ಅತಿವಾದಿಯಾಗಿರುತ್ತೇನೆ ಎಂದು ಹೇಳಬೇಕು. (ಪ್ರಾಣನು ಉತ್ತಮನೆಂದು ಹೇಳಿದವನಿಗೆ ಭಯವಿಲ್ಲದಿರುವುದರಿಂದ ತಾನು ಅತಿವಾದಿಯು (ಪ್ರಾಣನಿಗೆ ಉತ್ತಮತ್ವವನ್ನು ಹೇಳುವವನು) ಅಲ್ಲವೆಂದು) ಅಪಲಾಪ ಮಾಡಬಾರದು. ॥ ೯—೧೫ ॥ ॥ ೪ ॥

ಪೀ—೧ನೇ ಮಂತ್ರದಲ್ಲಿ **ಪ್ರಾಣಃ ಪ್ರಾಣೇನ ಯಾತಿ** ಎಂಬುದಕ್ಕೆ ಮುಖ್ಯಪ್ರಾಣನು ತನ್ನ ಶಕ್ತಿಯಿಂದಲೇ ಹೋಗುತ್ತಾನೆ, ಎಂದು ಸಾಮಾನ್ಯವಾಗಿ ತೋರುವ ಅರ್ಥವನ್ನು ಹೋಗಲಾಡಿಸುವುದಕ್ಕಾಗಿ ಅರ್ಥಹೇಳುತ್ತಾರೆ—

**ಭಾ. ॥ (೧) ಯೋಽಸೌ ಪ್ರಾಣಃ ಸ ಪ್ರಾಣೇನ ಪರಬ್ರಹ್ಮಣಾ ಯಾತಿ। ಸ ಏಷ(ವ-) ಭಗವಾನ್ಪ್ರಾಣಂ ಪ್ರತ್ಯಭೀಷ್ಟಂ ದದಾತಿ । ಪ್ರಾಣಸ್ಯ ಪ್ರಾಣಮಿತಿ ಶ್ರುತೇಃ ॥ (೨) ಪ್ರಾಣೋ ವಾಯುಃ ಪರಮಾತ್ಮಾನಂ ಚ ಜ್ಞಾನೇನ ದರ್ಶಯನ್ದದಾತಿ । ಸರ್ವಸ್ಮಾದತೀತಮುತ್ತಮಂ ವದತೀತ್ಯತಿವಾದೀ ॥ ೧, ೨, ೩, ೪ ॥ ಇತಿ ಪಂಚದಶಃ ಖಂಡಃ ॥ ೯—೧೫ ॥ ॥ ೧ ॥**

ಅ ॥ (೧) ಭಾರತಿಗಿಂತ ಉತ್ತಮನಾದ ಮುಖ್ಯಪ್ರಾಣನು ಪರಬ್ರಹ್ಮನ ಪ್ರೇರಣೆಯಿಂದಲೇ ಪ್ರವೃತ್ತಿ ಮಾಡುತ್ತಾನೆ. ಶ್ರೀಪರಮಾತ್ಮನು ಮುಖ್ಯಪ್ರಾಣನಿಗೆ ಅಭೀಷ್ಟವನ್ನು ಕೊಡುತ್ತಾನೆ. ಮುಖ್ಯಪ್ರಾಣನಿಗೆ ಜೀವನವನ್ನೂ ಅಭೀಷ್ಟವನ್ನೂ ಕೊಡುವವನೆಂದು ವೇದವು. (೨) (ವೇದದ ಅರ್ಥವು.) (**ಪ್ರಾಣಾಯ ದದಾತಿ** ಎಂಬುದಕ್ಕೆ ಅರ್ಥಹೇಳುತ್ತಾರೆ.) ಮುಖ್ಯಪ್ರಾಣನು ಪರಮಾತ್ಮನನ್ನು ಜ್ಞಾನದಿಂದ ತೋರಿಸುತ್ತಾ ಶಿಷ್ಯರಿಗೆ ಉಪದೇಶಿಸುತ್ತಾನೆ. (೪ನೇ ಮಂತ್ರದಲ್ಲಿದ್ದ **ಅತಿವಾದೀ** ಎಂಬ ಶಬ್ದಕ್ಕೆ ವಾಚಾಲನು ಎಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಶಬ್ದಾರ್ಥಹೇಳುತ್ತಾರೆ-) ನಾಮ ಮೊದಲಾದ ಎಲ್ಲಾ ವಸ್ತುಗಳಿಗಿಂತ ಉತ್ತಮನಾದ ಪ್ರಾಣನನ್ನೇ ಹೇಳುವುದರಿಂದ **ಅತಿವಾದೀ** ಎನಿಸುತ್ತಾನೆ. ॥ ೯—೧೫ ॥ ॥ ೧ ॥

**ಹದಿನೈದನೇ ಖಂಡವು ಮುಗಿಯಿತು.**

---

## ೧೬ನೇ ಖಂಡವು

ಪೀ—ಉಪಾಸಕರ ವರ್ಗದಲ್ಲಿ ಸರ್ವರನ್ನು ಅತಿಕ್ರಮಿಸಿಕೊಂಡು ಸರ್ವೋತ್ತಮನಾದವನು ಮುಖ್ಯಪ್ರಾಣನು ಉಪಾಸ್ಯನು ಸರ್ವರಿಗಿಂತ ಶ್ರೇಷ್ಠನು ಇನ್ನೊಬ್ಬನಿದ್ದಾನೆನ್ನುತ್ತಾರೆ —

**ಉ. ॥ ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ ಸೋಽಹಂ ಭಗವಃ ಸತ್ಯೇನಾತಿವದಾನೀತಿ ಸತ್ಯಂ ತ್ವೇವ ವಿಜಿಜ್ಞಾಸಿತವ್ಯಮಿತಿ ಸತ್ಯಂ ಭಗವೋ ವಿಜಿಜ್ಞಾಸ ಇತಿ ॥ ಇತಿ ಷೋಡಶಃ ಖಂಡಃ ॥ ೯-೧೬ ॥ ॥ ೧ ॥**

ಅ ॥ (ಪೂಜ್ಯರೇ *ಮುಖ್ಯಪ್ರಾಣನಿಗಿಂತ ಇನ್ನೊಬ್ಬನು ಶ್ರೇಷ್ಠನು ಇದ್ದಾನೋ, ಎಂಬ ನಾರದರ ಪ್ರಶ್ನೆಗೆ ಸನತ್ಕುಮಾರರು ಇದ್ದಾನೆಂದು ಉತ್ತರಿಸಿದಾಗ ಆತನನ್ನು ನನಗೆ ಉಪದೇಶಿಸಬೇಕೆಂದು ನಾರದರು ಕೇಳಿದರು. ಆಗ ಸನತ್ಕುಮಾರರು ಸತ್ಯನು ಪ್ರಾಣನಿಗಿಂತ ಶ್ರೇಷ್ಠನು ಎಂದು ಉತ್ತರಿಸಿದರು) (ಸತ್ಯನನ್ನು ತಿಳಿದವರಿಗೆ ಫಲಹೇಳುತ್ತಾರೆ.) ಯಾವ ಅಧಿಕಾರಿಯು ನಿರ್ದೋಷನೂ ನಿಯಾಮಕನೂ ಆದುದರಿಂದ ಸತ್ಯನೆನಿಸಿದ ಪರಬ್ರಹ್ಮನನ್ನೇ ಸರ್ವೋತ್ತಮನನ್ನಾಗಿ ಹೇಳುತ್ತಾನೋ, ಈ ಅಧಿಕಾರಿಯೇ ಮುಖ್ಯಪ್ರಾಣನು ಉತ್ತಮನು ಎಂದು ಹೇಳುವವನಿಗಿಂತಲೂ ವಿಶೇಷವಾಗಿ ಅತ್ಯುತ್ಕೃಷ್ಟವಾದ ವಸ್ತುವನ್ನು ಹೇಳುತ್ತಾನೆ. ಎಲೋ ನಾರದರೇ ನಾನು ಸತ್ಯನೆನಿಸಿದ ಪರಬ್ರಹ್ಮನೇ ಸರ್ವೋತ್ಕೃಷ್ಟನು ಎಂದು ಹೇಳುತ್ತೇನೆ. ಸತ್ಯನೆನಿಸಿದ ಪರಬ್ರಹ್ಮನನ್ನೇ ವಿಶೇಷವಾಗಿ ತಿಳಿಯಬೇಕು, ಎಂದು ಸನತ್ಕುಮಾರರು ಹೇಳಿದರು. ಆಗ ನಾರದರು ಸತ್ಯನೆನಿಸಿದ ಪರಬ್ರಹ್ಮನನ್ನು (ಆತನ ಗುಣಗಳನ್ನು) ನಾನು ತಿಳಿಯಲಿಚ್ಛಿಸುತ್ತೇನೆ, ಎಂದು ಹೇಳಿದರು ॥ ೯—೧೬ ॥ ॥ ೧ ॥

**ಟೀ—ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ** ಎಂಬಲ್ಲಿ **ಪ್ರಾಣಾತಿವಾದಿಯೇ ಸತ್ಯಾತಿ**ವಾದಿಯು. ಏವಂಚ ಪ್ರಾಣನೇ ಸತ್ಯನು ಎಂಬ ಆಶಂಕೆಯನ್ನು ಹೋಗಲಾಡಿಸುವುದಕ್ಕಾಗಿ ಬೇರೆಬೇರೆ ಪ್ರಕರಣವೆಂದು ತೋರಿಸತಕ್ಕ ತು ಶಬ್ದವಿದೆ ಎನ್ನುತ್ತಾರೆ—

**ಭಾ. ॥ (೧) ಏಷ ತು ವಾ ಅತಿವದತೀತಿ ತುಶಬ್ದೋಽರ್ಥಾಂತರವಾಚೀ ॥ (೨) ಅಸ್ತಿ ಭಗವಃ ಪ್ರಾಣಾದ್ಭೂಯ ಇತಿ ಪ್ರಶ್ನೋ ವ್ಯತಿ(ಽಧ್ಯಾ)ಹಾರ್ಯಃ ॥ (೩) ಯತ್ರಾನವಸರೋಽನ್ಯತ್ರ ಪದಂ ತತ್ರ ಪ್ರತಿಷ್ಠಿತಂ । ಯತ್ರ ಪ್ರಮಾಣಂ ವಾಕ್ಯಂ ವಾ ಪ್ರ(ಚಾಪ್ಯ)ತಿಹಾರ್ಯಂ ನ ಸಂಶಯಃ ॥ (೪) ಓಂ ವ್ಯತಿಹಾರೋ ವಿಶಿಂಷಂತಿ ಹೀತರವದಿತಿ ಚ ಭಗವದ್ವಚನಂ ॥ (೫) ಅತಿವಾದೀ ಪ್ರಾಣವಾದೀ ವಿಷ್ಣುವಾದೀ ವಿಶೇಷತಃ । ಸ ಸತ್ಯೋ ಭಗವಾನ್ವಿಷ್ಣುರ್ಯನ್ನಿರ್ದೋಷೋ ನಿಯಾಮಕಃ ॥ ಇತಿ ಷೋಡಶಃ ಖಂಡಃ ॥ ೯—೧೬ ॥ ॥ ೧ ॥**

ಅ ॥ (೧) **ಏಷ ತು ವಾ ಅತಿವದತಿ** ಎಂಬಲ್ಲಿದ್ದ ತು ಶಬ್ದವು ಬೇರೆಪ್ರಕರಣವೆಂದೂ (ಅಧ್ಯಾಹಾರ ಮಾಡಿಕೊಳ್ಳಬೇಕೆಂದೂ) ತಿಳಿಸುತ್ತದೆ. (ಅಂದರೆ ಪ್ರಾಣವಾದಿಗೆ ಅತಿವಾದಿತ್ವವನ್ನು ಹೇಳಿ ಸತ್ಯವಾದಿಗೂ ಅತಿವಾದಿತ್ವವನ್ನು ಹೇಳಿದೆ. ಆದರಲ್ಲಿ ಪ್ರಾಣನು ಉತ್ತಮನೆಂದು ಹೇಳುವವನಿಗಿಂತ ಸತ್ಯನು ಉತ್ತಮನೆಂದು ಹೇಳುವವನು ಉತ್ಕೃಷ್ಟನೆಂದು ತು ಶಬ್ದದಿಂದ ತಿಳಿಯುತ್ತದೆ. (೨) (ಪ್ರಾಣನಿಗಿಂತ ಉತ್ತಮನಾದ ಸತ್ಯನು ಬೇರೆ ಎಂದಾಗಿದ್ದರೆ ನಾಮ ಮೊದಲಾದ ಪ್ರಕರಣಗಳಲ್ಲಿದ್ದಂತೆ ಇಲ್ಲಿಯೂ '**ಅಸ್ತಿ ಭಗವಃ' ಪ್ರಾಣಾದ್ಭೂಯಃ ಇತಿ ಪ್ರಾಣಾದ್ವಾವ ಭೂಯೋಽಸ್ತೀತಿ ತನ್ಮೇ ಭಗವಾನ್ ಬ್ರವೀತ್ವಿತಿ ಸತ್ಯಂ ವಾವ ಪ್ರಾಣಾದ್ಭೂಯಃ** ಎಂದು ಪ್ರಶ್ನೋತ್ತರಗಳು ಇರಬೇಕಾಗುವವು. ಎಂದರೆ) ಇಲ್ಲಿಯೂ ಕೂಡ **ಅಸ್ತಿ ಭಗವಃ ಪ್ರಾಣಾದ್ಭೂಯಃ** ಪೂಜ್ಯರೇ ಪ್ರಾಣನಿಗಿಂತ ಶ್ರೇಷ್ಠನು ಇದ್ದಾನೋ ಎಂಬಪ್ರಶ್ನೆಯನ್ನೂ **ಪ್ರಾಣಾದ್ವಾವ ಭೂಯೋಽಸ್ತಿ** ಎಂಬ ಪ್ರತ್ಯುತ್ತರವನ್ನೂ ಇಟ್ಟುಕೊಳ್ಳಬೇಕು. (೩) (ಪ್ರಶ್ನ ಪ್ರತ್ಯುತ್ತರ

*ನಾಮಾದಿಪ್ರಕರಣಗಳಲ್ಲಿದ್ದಂತೆ ಇಲ್ಲಿ ಪ್ರಶ್ನೋತ್ತರಗಳು ಇಲ್ಲವಾದರೂ ತು ಶಬ್ದದಿಂದ ಪ್ರಶ್ನ ಪ್ರತ್ಯುತ್ತರಗಳನ್ನು ಇಟ್ಟುಕೊಳ್ಳಬೇಕೆಂದು ಸೂಚಿತವಾಯಿತು.

ಗಳನ್ನು ಅಧ್ಯಾಹಾರ (ಇಲ್ಲದಿರುವ ಪದವನ್ನು ಸೇರಿಸಿಕೊಳ್ಳುವುದು) ಮಾಡಿಕೊಳ್ಳುವುದಾದರೆ **ಅಸ್ತಿ ಭಗವಃ ಪ್ರಾಣಾದ್ಭೂಯಃ** ಎಂಬ ಪ್ರಶ್ನೆಗೆ **ನಾಸ್ತಿ ಪ್ರಾಣಾದ್ಭೂಯಃ** ಎಂಬ ಪ್ರತ್ಯುತ್ತರವನ್ನು ಅಧ್ಯಾಹಾರ ಮಾಡಿಕೊಳ್ಳುವುದೆಂದು ಏಕೆ ಆಗಲಾರದು. ಹೀಗೆಯೇ ಅಧ್ಯಾಹಾರ ಮಾಡಿಕೊಳ್ಳ ಬೇಕೆಂಬಲ್ಲಿ ನಿಯಾಮಕವಿಲ್ಲವಷ್ಟೆ ಎಂದರೆ) ಯಾವ ವಾಕ್ಯದಲ್ಲಿ ಯಾವ ಪದವಿಲ್ಲದೆ ಯೋಗ್ಯವಾದ ಅರ್ಥವೇ ಕೂಡುವುದಿಲ್ಲವೋ, ಅಂತಹ ವಾಕ್ಯದಲ್ಲಿ ಅದೇಪದವನ್ನು ಅಧ್ಯಾಹಾರಮಾಡಬೇಕು. ಯಾವ ಮಹಾವಾಕ್ಯದಲ್ಲಿ ಯಾವ ಪ್ರಮಾಣವು ಅಥವಾ ಯಾವ ವಾಕ್ಯವು ಇಲ್ಲದೆ ಯೋಗ್ಯಾರ್ಥವು ಕೂಡುವುದಿಲ್ಲವೋ, ಅಂತಹ ಮಹಾವಾಕ್ಯದಲ್ಲಿ ಅಂತಹ ಪ್ರಮಾಣವನ್ನು ಅಥವಾ ಅಂತಹ ವಾಕ್ಯವನ್ನು ಸೇರಿಸಿಕೊಳ್ಳಬೇಕು. ಸಂದೇಹ ಮಾಡಕೂಡದು, ಎಂಬ ಪ್ರಮಾಣದಿಂದ (ಇಲ್ಲಿ ನಾವು ಹೇಳಿದ ಪ್ರಕಾರವೇ ಪ್ರಶ್ನಾದಿಗಳನ್ನು ಇಟ್ಟುಕೊಳ್ಳಬೇಕು.) (೪) (ಈ ಪ್ರಕರಣದಲ್ಲಿ ಪ್ರಶ್ನಪ್ರತ್ಯುತ್ತರಗಳನ್ನು ಇಟ್ಟುಕೊಳ್ಳ ಬೇಕೆಂಬಲ್ಲಿ ಸೂತ್ರ ಹೇಳುತ್ತಾರೆ.) ಮುಖ್ಯಪ್ರಾಣನಿಗಿಂತ ಸತ್ಯನೆನಿಸಿದ ವಿಷ್ಣುವು ಉತ್ತಮನು. ಪ್ರಾಣ ಸತ್ಯರ ಮಧ್ಯದಲ್ಲಿ ಉಪನಿಷತ್ತಿನಲ್ಲಿ ಪ್ರಶ್ನಪ್ರತ್ಯುತ್ತರಗಳನ್ನು ಹೇಳದಿದ್ದರೂ ನಾಮಾದಿಗಳಲ್ಲಿ ಹೇಳಿದಂತೆಯೇ ಇಲ್ಲಿಯೂ ಇಟ್ಟುಕೊಳ್ಳಬೇಕು (ಬ್ರ. ಸೂ. ಅ. ೩. ಪಾ. ೩. ಸೂ. ೩೮) (೫) (ಹಿಂದೆ ಹೇಳಿದ ಅರ್ಥದಲ್ಲಿ ಪ್ರಮಾಣ ಹೇಳಿ ದೃಢೀಕರಿಸುತ್ತಾ ಸತ್ಯಾದಿ ಶಬ್ದಗಳಿಗೆ ಅರ್ಥಹೇಳುತ್ತಾರೆ.) ಪ್ರಾಣವಾದಿಯು ಇತರ ವಸ್ತುಗಳಿಂದ ಉತ್ತಮವಾದ ಪ್ರಾಣಾಖ್ಯವಸ್ತುವನ್ನು ಹೇಳಿದವನು. ವಿಷ್ಣುವು ಉತ್ತಮನೆಂದು ಹೇಳುವವನು ಪ್ರಾಣವಾದಿಗಿಂತಲೂ ವಿಶೇಷವಾಗಿ ಅತಿವಾದಿಯು, ಶ್ರೇಷ್ಠನು. ಸರ್ವೋತ್ತಮನಾದ ಶ್ರೀವಿಷ್ಣುವು ನಿರ್ದೋಷನೂ ನಿಯಾಮಕನೂ ಆದುದರಿಂದ **ಸತ್ಯನೆನಿಸುತ್ತಾನೆ.** ॥ ೯–೧೬ ॥ ॥ ೧ ॥

**ಹದಿನಾರನೇ ಖಂಡವು ಮುಗಿಯಿತು.**

## ೧೭ನೇ ಖಂಡವು

ಹೀ ಶ್ರೀಹರಿಯು ತನ್ನಲ್ಲಿಯೂ ಪರರಲ್ಲಿಯೂ ಇರುವ ಎಲ್ಲಾ ವಿಶೇಷಗಳನ್ನು ತಿಳಿದುಕೊಳ್ಳುವುದರಿಂದ ಶ್ರೀಹರಿಯು **ಸತ್ಯನೆನಿಸುತ್ತಾನೆಂಬ** ಅಭಿಪ್ರಾಯದಿಂದ ಲೋಕದಲ್ಲಿ ವಿಜ್ಞಾನ ಸತ್ಯನುಡಿಗಳಿಗೆ ಕಾರ್ಯಕಾರಣಭಾವವಿದೆ ಎಂದು ಸನತ್ಕುಮಾರರು ನಾರದರಿಗೆ ಹೇಳುತ್ತಾರೆ—

**ಉ. ॥ ಯದಾ ವೈ ವಿಜಾನಾತ್ಯಥ ಸತ್ಯಂ ವದತಿ ನಾವಿಜಾನನ್ ಸತ್ಯಂ ವದತಿ ವಿಜಾನನ್ನೇವ ಸತ್ಯಂ ವದತಿ ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಮಿತಿ ವಿಜ್ಞಾನಂ ಭಗವೋ ವಿಜಿಜ್ಞಾಸ ಇತಿ ॥ ಇತಿ ಸಪ್ತದಶಃ ಖಂಡಃ ॥ ೯-೧೭ ॥ ೧ ॥**

ಅ ॥ ಲೋಕದಲ್ಲಿ ಯಾವಾಗ ಜನರು ತಿಳಿಯುತ್ತಾರೋ, ಆಗ ಸತ್ಯವನ್ನು ಹೇಳುತ್ತಾರೆ ತಿಳಿಯದವನು ಸತ್ಯವನ್ನು ಹೇಳುವುದಿಲ್ಲ. ತಿಳಿದವನೇ ಸತ್ಯವನ್ನು ಹೇಳುತ್ತಾನೆ. ಆದಕಾರಣ ಸತ್ಯವನ್ನು ತಿಳಿಯಲಿಚ್ಛಿಸುವವನು ಅದರೊಂದಿಗೆ ಇರುವ ವಿಜ್ಞಾನ (ವಿಶೇಷಜ್ಞಾನ)ವನ್ನೇ ವಿಶೇಷವಾಗಿ ತಿಳಿಯಬೇಕು, ಎಂದು ಹೇಳಿದಾಗ ನಾರದರು ನಾನು ವಿಜ್ಞಾನವನ್ನು ತಿಳಿಯಲಿಚ್ಛಿಸುತ್ತೇನೆಂದರು ಅಥವಾ ಸತ್ಯನೆನಿಸಿದ ಶ್ರೀಹರಿಯು ಯುಕ್ತಿಪೂರ್ವಕವಾಗಿ ವಿಜ್ಞಾನಗುಣಸ್ವರೂಪನೆಂದು ತಿಳಿಯಬೇಕು, ಎಂದರು. ಆಗ ನಾರದರು ಶ್ರೀಹರಿಯು ವಿಜ್ಞಾನ ಸ್ವರೂಪನೆಂಬುದಕ್ಕೆ ಕಾರಣವಾದ ಗುಣವನ್ನು ತಿಳಿಯಲಿಚ್ಛಿಸುತ್ತೇನೆಂದರು ॥ ೯ – ೧೭ ॥ ॥ ೧ ॥

**ಹದಿನೇಳನೇ ಖಂಡವು ಮುಗಿಯಿತು.**

## ೧೮ನೇ ಖಂಡವು

ಪೀ—ಸತ್ಯನೆನಿಸಿದ ಶ್ರೀಹರಿಯು ಸಮಸ್ತವನ್ನು ತಿಳಿಯುವುದರಿಂದಲೇ **ವಿಜ್ಞಾತಾ** ಎನಿಸುತ್ತಾನೆ, ಎಂಬ ಅಭಿಪ್ರಾಯದಿಂದ ಮನನ ವಿಜ್ಞಾನಗಳಿಗೆ ಕಾರ್ಯಕಾರಣಭಾವವನ್ನು ಹೇಳುತ್ತಾರೆ—

**ಉ. ॥ ಯದಾ ವೈ ಮನುತೇಽಥ ವಿಜಾನಾತಿ ನಾಮತ್ವಾ ವಿಜಾನಾತಿ ಮತ್ವೈವ ವಿಜಾನಾತಿ ಮತಿಸ್ತ್ವೇವ ವಿಜಿಜ್ಞಾಸಿತವ್ಯೇತಿ ಮತಿಂ ಭಗವೋ ವಿಜಿಜ್ಞಾಸ ಇತಿ ॥ ಇತ್ಯಷ್ಟಾದಶಃ ಖಂಡಃ ॥ ೯-೧೮ ॥　　　　॥ ೧ ॥**

ಅ ॥ ಯಾವಾಗ ಸಾಮಾನ್ಯವಾಗಿ ತಿಳಿಯುತ್ತಾನೋ, ಆಗ ವಿಶೇಷ ಜ್ಞಾನವುಳ್ಳವನಾಗುತ್ತಾನೆ. ಸಾಮಾನ್ಯತಃ ತಿಳಿಯದೆ ಯಾವ ವಸ್ತುವನ್ನೂ ವಿಶೇಷವಾಗಿ ತಿಳಿಯುವುದಿಲ್ಲ. ಸಾಮಾನ್ಯತಃ ತಿಳಿದೇ ವಿಶೇಷವಾಗಿ ತಿಳಿಯುತ್ತಾನೆ. ಸತ್ಯನೆನಿಸಿದ ಶ್ರೀಹರಿಗೆ ಮನನ ಗುಣವದೆ, ಎಂದೇ ಯುಕ್ತಿಪೂರ್ವಕವಾಗಿ ತಿಳಿಯಬೇಕು. ಮನನ ಗುಣ ಇರಲಿಕ್ಕೆ ಕಾರಣವನ್ನು ತಿಳಿಯಲಿಚ್ಛಿಸುತ್ತೇನೆಂದು ನಾರದರು ಹೇಳಿದರು. ॥ ೯—೧೮ ॥　　　　॥ ೧ ॥

ಪೀ—ವಿಜ್ಞಾನ ಮತಿ ಶಬ್ದಗಳ ಅರ್ಥಹೇಳುತ್ತಾರೆ—

**ಭಾ. ॥ ವಿಶಿಷ್ಟಜ್ಞಾನರೂಪಶ್ಚ ಸಾಮಾನ್ಯಜ್ಞಾನರೂಪಕಃ ॥ ಇತಿ ಸಪ್ತದಶಾಷ್ಟಾದಶೌ ಖಂಡೌ ॥ ೯—೧೭, ೧೮ ॥　　　　॥ ೧ ॥**

ಅ ॥ ವಿಶಿಷ್ಟಜ್ಞಾನಸ್ವರೂಪವಾದುದು ವಿಜ್ಞಾನವೆಂದೂ, ಸಾಮಾನ್ಯ ಜ್ಞಾನರೂಪವಾದುದು **ಮತಿ** ಎಂದೂ ಅನಿಸುತ್ತದೆ. ॥ ೯—೧೭.೧೮ ॥　　　　॥ ೧ ॥

**ಹದಿನೆಂಟನೇ ಖಂಡವು ಮುಗಿಯಿತು**

## ೧೯ನೇ ಖಂಡವು

ಪೀ—ಸತ್ಯನೆನಿಸಿದ ಶ್ರೀಹರಿಯು ಆಸ್ತಿಕನಾದುದರಿಂದ ಮತಿರೂಪನೆಂಬ ಅಭಿಪ್ರಾಯದಿಂದ **ಶ್ರದ್ದಧಾತಿ ಮನುತೇ** ಇವುಗಳಿಗೆ ಕಾರ್ಯಕಾರಣಭಾವ ಹೇಳುತ್ತಾರೆ—

**ಉ. ॥ ಯದಾ ವೈ ಶ್ರದ್ದಧಾತ್ಯಥ ಮನುತೇ ನಾಽಶ್ರದ್ದಧನ್ಮನುತೇ ಶ್ರದ್ದಧದೇವ ಮನುತೇ ಶ್ರದ್ಧಾ ತ್ವೇವ ವಿಜಿಜ್ಞಾಸಿತವ್ಯೇತಿ ಶ್ರದ್ಧಾಂ ಭಗವೋ ವಿಜಿಜ್ಞಾಸ ಇತಿ ॥ ಇತ್ಯೇಕೋನವಿಂಶಃ ಖಂಡಃ ॥ ೯-೧೯ ॥　　　　॥ ೧ ॥**

ಅ ॥ ಯಾವಾಗ ಭಕ್ತನು ಆಸ್ತಿಕನಾಗುತ್ತಾನೋ, ಆಗ ತಿಳಿಯುತ್ತಾನೆ. ಆಸ್ತಿಕನಾಗದವನು ತಿಳಿಯಲಾರ. ಆಸ್ತಿಕನಾದವನೇ ತಿಳಿಯುತ್ತಾನೆ. ಯುಕ್ತಿಪೂರ್ವಕವಾಗಿ ಆಸ್ತಿಕತನವನ್ನೇ ತಿಳಿಯಬೇಕು. ಪೂಜ್ಯರೇ ಶ್ರದ್ಧೆಗೆ ಕಾರಣವಾದ ಗುಣವನ್ನು ತಿಳಿಯಲಿಚ್ಛಿಸುತ್ತೇನೆಂದು ನಾರದರು ಹೇಳಿದರು. ॥ ೯—೧೯ ॥　　　　॥ ೧ ॥

**ಹತ್ತೊಂಭತ್ತನೇ ಖಂಡವು ಮುಗಿಯಿತು.**

## ೨೦ನೇ ಖಂಡವು

ಪೀ—ಅತಿಸ್ಥೈರ್ಯವಿದ್ದುದರಿಂದ ಆಸ್ತಿಕನೆಂಬ ಅಭಿಪ್ರಾಯದಿಂದ ಅವುಗಳಿಗೆ ಕಾರ್ಯಕಾರಣ ಭಾವವನ್ನು ಹೇಳುತ್ತಾರೆ—

**ಉ. ॥ ಯದಾ ವೈ ನಿಸ್ತಿಷ್ಠತ್ಯಥ ಶ್ರದ್ದಧಾತಿ ನಾನಿಸ್ತಿಷ್ಠಂಛ್ರದ್ದಧಾತಿ ನಿಸ್ತಿಷ್ಠನ್ನೇವ ಶ್ರದ್ದಧಾತಿ ನಿಷ್ಠಾತ್ವೇವ ವಿಜಿಜ್ಞಾಸಿತವ್ಯೇತಿ ನಿಷ್ಠಾಂ ಭಗವೋ ವಿಜಿಜ್ಞಾಸ ಇತಿ ॥ ಇತಿ ವಿಂಶಃ ಖಂಡಃ ॥ ೯-೨೦ ॥ ॥ ೧ ॥**

ಅ ॥ ಯಾವಾಗ ಚೆನ್ನಾಗಿ ಸ್ಥಿರನಾಗುತ್ತಾನೋ, ಆಗ ಭಕ್ತನು ಆಸ್ತಿಕನಾಗುತ್ತಾನೆ. ಚೆನ್ನಾಗಿ ಸ್ಥಿರನಾಗದಿದ್ದವನು ಆಸ್ತಿಕನಾಗಲಾರನು. ಚೆನ್ನಾಗಿ ಸ್ಥಿರನಾದವನೇ ಆಸ್ತಿಕನಾಗುತ್ತಾನೆ. ಅತಿಸ್ಥಿರ ತನವನ್ನೇ ತಿಳಿಯಲಿಚ್ಛಿಸತಕ್ಕದು. ಪೂಜ್ಯರೇ ಅತಿಸ್ಥೈರ್ಯಕ್ಕೆ ಕಾರಣವಾದ ಗುಣವನ್ನು ತಿಳಿಯ ಲಿಚ್ಛಿಸುತ್ತೇನೆ, ಎಂದು ನಾರದರು ಹೇಳಿದರು. ॥ ೯—೨೦ ॥ ॥ ೧ ॥

**ಭಾ. ॥ ನಿತ್ಯಶ್ರದ್ಧಾಸ್ವರೂಪಶ್ಚ ತಥೈವ ಸ್ಥೈರ್ಯರೂಪಕಃ ॥ ಇತ್ಯೇಕೋನವಿಂಶ-ವಿಂಶೌ ಖಂಡೌ ॥ ೯—೧೯, ೨೦ ॥ ॥ ೧ ॥**

ಅ ॥ ಶ್ರೀಹರಿಯು ನಿತ್ಯದಲ್ಲಿಯೂ ಆಸ್ತಿಕಸ್ವರೂಪನು. ಹಾಗೆಯೇ ಚೆನ್ನಾಗಿ ಸ್ಥಿರಸ್ವರೂಪನು. ॥ ೯—೨೧ ॥ ॥ ೧ ॥

ಇಪ್ಪತ್ತನೇ ಖಂಡವು ಮುಗಿಯಿತು.

---

## ೨೧ನೇ ಖಂಡವು

ಪೀ—ಸರ್ವಕರ್ತನಾದುದರಿಂದಲೇ ಸ್ಥೈರ್ಯವುಳ್ಳವನು ಎಂಬ ಅಭಿಪ್ರಾಯದಿಂದ ಅವುಗಳಿಗೆ ಕಾರ್ಯಕಾರಣಭಾವ ಹೇಳುತ್ತಾರೆ—

**ಉ. ॥ ಯದಾ ವೈ ಕರೋತ್ಯಥ ನಿಸ್ತಿಷ್ಠತಿ ನಾಕೃತ್ವಾ ನಿಸ್ತಿಷ್ಠತಿ ಕೃತ್ವೈವ ನಿಸ್ತಿಷ್ಠತಿ ಕೃತಿಸ್ತ್ವೇವ ವಿಜಿಜ್ಞಾಸಿತವ್ಯೇತಿ ಕೃತಿಂ ಭಗವೋ ವಿಜಿಜ್ಞಾಸ ಇತಿ ಇತ್ಯೇಕವಿಂಶಃ ಖಂಡಃ ॥ ೯-೨೧ ॥ ॥ ೧ ॥**

ಅ ॥ ಯಾವಾಗ ಸರ್ವವನ್ನು ಸೃಷ್ಟಿಸುತ್ತಾನೋ, ಆಗ ಅತಿಸ್ಥಿರನಾಗಿರುತ್ತಾನೆ ಸರ್ವಕರ್ತನಾಗದೆ ಸುಸ್ಥಿರನಾಗಲಾರನು. ಸರ್ವಕರ್ತನಾಗಿಯೇ ಸುಸ್ಥಿರನಾಗಿರುತ್ತಾನೆ. ಶ್ರೀಹರಿಗೆ ಸರ್ವಕರ್ತೃತ್ವವನ್ನೇ ವಿಶೇಷವಾಗಿ ತಿಳಿಯಬೇಕು, ಎಂದರು. ಆಗ ನಾರದರು ಪೂಜ್ಯರೇ ಸರ್ವಕರ್ತೃತ್ವಕ್ಕೆ ಕಾರಣವಾದ ಗುಣ ವನ್ನು ತಿಳಿಯಲಿಚ್ಛಿಸುತ್ತೇನೆಂದರು. ॥ ೯—೨೧ ॥ ॥ ೧ ॥

ಇಪ್ಪತ್ತೊಂದನೇ ಖಂಡವು ಮುಗಿಯಿತು.

## ೨೨ನೇ ಖಂಡವು

ಪೀ— ಪೂರ್ಣ ಸುಖಾಧಿಕ್ಯವಿದ್ದುದರಿಂದಲೇ ಸರ್ವಕರ್ತೃತ್ವವು ಎಂಬ ಅಭಿಪ್ರಾಯದಿಂದ ಅವುಗಳಿಗೆ ಕಾರ್ಯಕಾರಣಭಾವವನ್ನು ಹೇಳುತ್ತಾರೆ—

**ಉ. ॥ ಯದಾ ವೈ ಸುಖಂ ಲಭತೇಽಥ ಕರೋತಿ ನಾಸುಖಂ ಲಬ್ಧ್ವಾ ಕರೋತಿ ಸುಖಮೇವ ಲಬ್ಧ್ವಾ ಕರೋತಿ ಸುಖಂ ತ್ವೇವ ವಿಜಿಜ್ಞಾಸಿತವ್ಯಮಿತಿ ಸುಖಂ ಭಗವೋ ವಿಜಿಜ್ಞಾಸ ಇತಿ ॥ ಇತಿ ದ್ವಾವಿಂಶಃ ಖಂಡಃ ॥೯-೨೨॥೧॥**

ಅ ॥ ಸುಖವನ್ನು ಹೊಂದಿದಾಗ ಸರ್ವಕರ್ತನಾಗುತ್ತಾನೆ. ಸುಖವನ್ನು ಹೊಂದದೆ ಸೃಷ್ಟ್ಯಾದಿಗಳನ್ನು ಮಾಡಲಾರನು. ಸುಖವನ್ನು ಹೊಂದಿಯೇ ಸೃಷ್ಟಿಮಾಡುತ್ತಾನೆ. ಸುಖವನ್ನೇ ತಿಳಿಯಬೇಕು. ಪೂಜ್ಯರೇ ಪೂರ್ಣಸುಖಕ್ಕೆ ಕಾರಣವನ್ನು ತಿಳಿಯಲಿಚ್ಛಿಸುತ್ತೇನೆಂದರು. ॥ ೯—೨೨ ॥ ॥ ೧ ॥

ಇಪ್ಪತ್ತೆರಡನೇ ಖಂಡವು ಮುಗಿಯಿತು.

## ೨೩ನೇ ಖಂಡವು

ಪೀ—ಪೂರ್ಣಗುಣಗಳು ಇದ್ದುದರಿಂದಲೇ ಪರಿಪೂರ್ಣಸುಖವೆಂಬ ಅಭಿಪ್ರಾಯದಿಂದ ಅವುಗಳು ಒಟ್ಟಿಗೆ ಇರುವವುಗಳು ಎನ್ನುತ್ತಾರೆ—

**ಉ. ॥ ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ ಭೂಮಾ ತ್ವೇವ ವಿಜಿಜ್ಞಾಸಿತವ್ಯ ಇತಿ ಭೂಮಾನಂ ಭಗವೋ ವಿಜಿಜ್ಞಾಸ ಇತಿ ॥ ಇತಿ ತ್ರಯೋವಿಂಶಃ ಖಂಡಃ ॥ ೯-೨೩ ॥ ॥ ೧ ॥**

ಅ ॥ ಯಾವನು ಪೂರ್ಣಗುಣಗಳುಳ್ಳವನೋ ಅವನೇ ಪೂರ್ಣಸುಖಸ್ವರೂಪನು. ಪೂರ್ಣಗುಣಗಳು ಇಲ್ಲದವನಿಗೆ ಪೂರ್ಣಸುಖವಿಲ್ಲ. ಪೂರ್ಣಗುಣಗಳುಳ್ಳವನೇ ಪೂರ್ಣಸುಖವುಳ್ಳವನು. ಪೂರ್ಣಗುಣವನ್ನೇ ತಿಳಿಯಬೇಕು. ಪೂಜ್ಯರೇ ಪೂರ್ಣಗುಣವನ್ನು ತಿಳಿಯಲಿಚ್ಛಿಸುತ್ತೇನೆ, ಎಂದು ನಾರದರು ಹೇಳಿದರು.

ವಿ ॥ ಸ್ಥಿರತ್ವ ಶ್ರದ್ಧಾ ಮತಿ ವಿಜ್ಞಾನವೊದಲಾದ ಗುಣಗಳು ಸರ್ವಕರ್ತನಾದ ಶ್ರೀಪರಮಾತ್ಮನಲ್ಲಿ ಪೂರ್ಣಗಳಾಗಿರುತ್ತವೆಂದು ಉಪಾಸನಮಾಡಿದರೆ—ಉಪಾಸಕನು ಯಥಾಯೋಗ್ಯವಾಗಿ **ಯಂ ಯಂ ಯಥೋಪಾಸತೇ ತತ್ತಥೈವ ಭವತಿ** ಎಂಬ ಪ್ರಮಾಣಾನುಸಾರವಾಗಿ ತಾನು ಸುಸ್ಥಿರನೂ, ಆಸ್ತಿಕನೂ, ಮತಿವಂತನೂ, ವಿಜ್ಞಾನಿಯೂ ಇದುಮೊದಲಾದ ಗುಣಗಳುಳ್ಳವನೂ ಆಗುವನು.॥೯-೨೩॥ ॥ ೧ ॥

**ಭಾ. ॥ ಸ ಏವ ಸರ್ವಕರ್ತಾ ಚ ಸುಪೂರ್ಣಾನಂದರೂಪಕಃ । ಸ ಚ ಸರ್ವಗುಣೈಃ ಪೂರ್ಣೋ ಭೂಮೇತ್ಯುಚ್ಯತೇ ತತಃ ॥ ೯—೨೧, ೨೨, ೨೩ ॥ ॥ ೧ ॥**

ಅ ॥ ಆ ಶ್ರೀಹರಿಯೇ ಸರ್ವಸೃಷ್ಟಿಕರ್ತನು. ಪರಿಪೂರ್ಣ ಆನಂದಸ್ವರೂಪನು, ಆತನು ಸರ್ವಗುಣಗಳಿಂದ ಪರಿಪೂರ್ಣನಾದುದರಿಂದ **ಭೂಮಾ** ಎನಿಸುತ್ತಾನೆ. ॥ ೨೧—೨೨ ॥ ॥ ೩೨ ॥

ಇಪ್ಪತ್ತಮೂರನೇ ಖಂಡವು ಮುಗಿಯಿತು.

## ೨೪ನೇ ಖಂಡವು

ಪೀ---ಭೂಮನ ಮಹಿಮೆ ಹೇಳುತ್ತಾರೆ—

**ಉ. ॥ ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾಽಥ ಯತ್ರಾನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ ಯೋ ವೈ ಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಂ ಸ ಭಗವಃ ಕಸ್ಮಿನ್ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ಯದಿ ವಾ ನ ಮಹಿಮ್ನೀತಿ ॥ ೧ ॥**

ಅ ॥ ಯಾವ ವಸ್ತುವನ್ನು ತಿಳಿದಾಗ ಬೇರೆ ವಸ್ತುವನ್ನು ಸ್ವತಂತ್ರವೆಂದು ನೋಡುವುದಿಲ್ಲವೋ, ಕೇಳುವುದಿಲ್ಲವೋ, ತಿಳಿಯುವುದಿಲ್ಲವೋ, ಅಂದರೆ ಅಧಿಕಾರಿಯು ಶ್ರೀಹರಿಯ ಅಧೀನವಾಗದಿರುವುದು ಯಾವುದೂ ಇಲ್ಲ. ಎಲ್ಲವೂ ಶ್ರೀಹರಿಯ ಆಧೀನವೇ ಎಂದೇ ತಿಳಿಯುತ್ತಾನೋ. ಆ ಶ್ರೀಹರಿಯೇ ಭೂಮನೆನಿಸುವನು. ಯಾವ ಲಕ್ಷ್ಮ್ಯಾದಿಜಗತ್ತನ್ನು ನೋಡಿದಾಗ ಕೇಳಿದಾಗ ತಿಳಿದಾಗ ಶ್ರೀಹರಿಯಿಂದ ಬೇರೆಯಾದ ಆ ಲಕ್ಷ್ಮ್ಯಾದಿಜಗತ್ತನ್ನು ಅಸ್ವತಂತ್ರವೆಂದು ನೋಡುತ್ತಾನೋ, ಕೇಳುತ್ತಾನೋ, ತಿಳಿಯುತ್ತಾನೋ, ಅಂತಹ ಲಕ್ಷ್ಮ್ಯಾದಿ ಜಗತ್ತು ಅಲ್ಪವು.( ಶ್ರೀಹರಿಗಿಂತ ಅಲ್ಪ ಗುಣಗಳುಳ್ಳದ್ದು ) (ಭೂಮನ ಇನ್ನೊಂದು ಮಹಿಮೆ ಹೇಳುತ್ತಾರೆ.) ಭೂಮನು ನಿತ್ಯಮುಕ್ತನು. (ಲಕ್ಷ್ಮೀದೇವಿಯು ಶ್ರೀಹರಿಗಿಂತ ಕಡಿಮೆ ಗುಣವುಳ್ಳವಳಾದರೂ ಶ್ರೀಹರಿಗೆ ಅತಿ ಪ್ರಿಯಳಾದ ಕಾರಣ ನಿತ್ಯಮುಕ್ತಳೇ.) ಮೋಕ್ಷವನ್ನು ಹೊಂದಿದವರೂ ಕೂಡ ಮುಕ್ತರಾಗುವುದಕ್ಕಿಂತ ಮೊದಲು ಮರಣಶೀಲರೇ. (ನಾರದರು ತಿಳಿದವರಾದರೂ ಇನ್ನಷ್ಟು ವಿಶೇಷಾರ್ಥವನ್ನು ತಾನು ತಿಳಿದುಕೊಳ್ಳುವುದಕ್ಕಾಗಿಯೂ ಲೋಕದಲ್ಲಿ ಪ್ರಸಿದ್ಧಿಪಡಿಸುವುದಕ್ಕಾಗಿಯೂ ಭೂಮನಿಗೆ ಆಶ್ರಯನು ಯಾರೆಂದು ಪ್ರಶ್ನಿಸುತ್ತಾರೆ.) ಆ ಭೂಮನು ಯಾರಲ್ಲಿ ಆಶ್ರಿತನು? (ಎಂದು ನಾರದರು ಕೇಳಿದರು.) ತನ್ನ ಮಹಿಮೆಯಲ್ಲಿ ಆಶ್ರಿತನು, ಅಥವಾ ತನ್ನ ಮಹಿಮೆಯಲ್ಲಿಯೂ ಆಶ್ರಿತನಲ್ಲ, ಎನಿಸುತ್ತಾನೆಂದು ಸನತ್ಕುಮಾರರು ಉತ್ತರಿಸಿದರು. ॥ ೧ ॥

ಪೀ—ಶ್ರೀಹರಿಯು ಮಹಿಮೆಯಲ್ಲಿ ಆಶ್ರಿತನೆಂದು ಹೇಳಿ ಮಹಿಮೆಯಲ್ಲಿ ಆಶ್ರಿತನಲ್ಲವೆಂದು ಹೇಳಿದುದು ಪರಸ್ಪರ ವಿರುದ್ಧವೆಂದರೆ ಆ ವಿರೋಧವನ್ನು ಪರಿಹರಿಸುತ್ತಾರೆ—

**ಉ. ॥ ಗೋ ಅಶ್ವಮಿಹ ಮಹಿಮೇತ್ಯಾಚಕ್ಷತೇ ಹಸ್ತಿಹಿರಣ್ಯಂ ದಾಸ-ಭಾರ್ಯಂ ಕ್ಷೇತ್ರಾಣ್ಯಾಯತನಾನೀತಿ ನಾಹಮೇವಂ ಬ್ರವೀಮೀತಿ ಹೋ-ವಾಚಾನ್ಯೋ ಹ್ಯನ್ಯಸ್ಮಿನ್ ಪ್ರತಿಷ್ಠಿತ ಇತಿ ॥ ಇತಿ ಚತುರ್ವಿಂಶಃ ಖಂಡಃ ॥ ॥ ೯—೨೪ ॥ ॥ ೨ ॥**

ಅ ॥ ಗೋವು ಕುದುರೆಗಳೂ, ಆನೆ, ಸುವರ್ಣಗಳೂ, ಸೇವಕ ಪತ್ನಿಯರೂ, ಭೂಮಿ ಮನೆಗಳೂ, ಇವುಗಳೆಲ್ಲವೂ, ಚೈತ್ರಾದಿಗಳ ಮಹಿಮೆಯೆಂದು ವಿದ್ವಾಂಸರು ಹೇಳುತ್ತಾರೆ. (ಅಂದರೆ ಇವುಗಳು ಸಮೃದ್ಧಗಳಾಗಿದ್ದರೇನೇ ಚೈತ್ರಾದಿಗಳಿಗೆ ಮಹಿಮೆಯು ಲಭಿಸುವುದು.) ಚೈತ್ರಮೊದಲಾದವರಂತೆಯೇ ಭೂಮನು ಸಾವಧಿಕ ಅಲ್ಪಪರಾಧೀನವಾದ ಮಹಿಮೆಗೆ ಆಶ್ರಯನೆಂದು ನಾನು ಹೇಳುವುದಿಲ್ಲ, ಎಂದು ನಾರದರಿಗೆ ಸನತ್ಕುಮಾರರು ಹೇಳಿದರು. ಅಂದರೆ—ಅಜ್ಞನು ಗೋವು ಅಶ್ವಮೊದಲಾದ ಬೇರೆ ವಸ್ತುಗಳಿಂದುಂಟಾದ ಮಹಿಮೆಯಲ್ಲಿ ಆಶ್ರಿತನು ಎನ್ನುವಂತೆ ನಾನು ಹೇಳುವುದಿಲ್ಲ. (ಪರಂತು ನಿರವಧಿಕವಾದ ತನ್ನ ಸ್ವರೂ

ಪವೇ ಆದ ಮಹಿಮೆಯಲ್ಲಿಯೇ ಭೂಮನು ಆಶ್ರಿತನು, ಚೈತ್ರಾದಿಗಳಿಂದ ವಿಲಕ್ಷಣನು ಎಂದೇ ಹೇಳು ತ್ತೇನೆ, ಎಂದು ಸನತ್ಕುಮಾರರು ಹೇಳಿದರು.) ॥ ೨—೨೪ ॥ ॥ ೨ ॥

ಪೀ—ಭೂಮತತ್ವವನ್ನು ತಿಳಿದರೆ ಅದರಿಂದ ಬೇರೆ ಯಾವ ವಸ್ತುವೂ ಇಲ್ಲದಿರುವುದರಿಂದ ಬೇರೆ ನೋಡತಕ್ಕುದನ್ನು ನೋಡುವುದಿಲ್ಲ, ಎಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ **ಯತ್ರ ನಾನ್ಯ ತ್ಪಶ್ಯತಿ ಸ ಭೂಮಾ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ—

**ಭಾ. ॥ (೧) ಯದಧೀನಂ ವಿನಾ ನಾನ್ಯತ್ಕಿಂಚಿದಸ್ತಿ ಕುತಶ್ಚನ । ಸ ಭೂಮೋಕ್ತೋಽತಿಪೂರ್ಣತ್ವಾದನ್ಯದಲ್ಪಮುದೀರ್ಯತೇ ॥ (೨) ಸ ಸರ್ವಗುಣಸಂಪೂರ್ಣಃ ಸರ್ವದೇಶೇಷು ಸರ್ವದಾ । ಸ್ವತಂತ್ರಸ್ಸರ್ವವಸ್ತೂನಿ ತದಧೀನಾನಿ ಸರ್ವಶಃ ॥ (೩) ಪೂರ್ಣತ್ವಾತ್ ಸುಖರೂಪೋಽಸೌ ಸರ್ವಕರ್ತಾ ಸುಖತ್ವತಃ । ಕರ್ತೃತ್ವಾತ್ಸುಸ್ಥಿರಶ್ಚಾಸೌ ಸ್ಥಿರತ್ವಾದಾಸ್ತಿಕಸ್ತಥಾ ॥ (೪) ಆಸ್ತಿಕತ್ವಾಚ್ಚ ಮಂತಾಽಸೌ ವಿಜ್ಞಾತಾ ಚ ತತೋ ಹರಿಃ । ಜ್ಞಾತೃತ್ವಾಚ್ಚ ಸ (ವಿ) ನಿರ್ದೋಷಃ ಸರ್ವಸ್ಯಾಪಿ ನಿಯಾಮಕಃ । ಭೂಮಾ ನಾರಾಯಣಾಖ್ಯಃ ಸ್ಯಾತ್ ॥ ೧,೨ ॥ ಇತಿ ಚತುರ್ವಿಂಶಃ ಖಂಡಃ ॥ ೯—೨೪ ॥ ॥ ೧ ॥**

ಅ ॥ (೧) ಪರಿಪೂರ್ಣನಾದ ಶ್ರೀಹರಿಯ ಅಧೀನವಾಗದಿದ್ದುದು ಶ್ರೀಹರಿಯಿಂದ ಬೇರೆ ಯಾವು ದೊಂದು ವಸ್ತುವೂ ಸರ್ವಥಾ ಇಲ್ಲವೇ ಇಲ್ಲ. ಆ ಶ್ರೀಹರಿಯು ಸರ್ವಗುಣಸಂಪೂರ್ಣನಾದುದರಿಂದ ಭೂಮಾ ಎನಿಸುತ್ತಾನೆ. ಬೇರೆ ಅಸ್ವತಂತ್ರವಾದ ಲಕ್ಷ್ಮ್ಯಾದಿ ಜಗತ್ತು ಅಲ್ಪವು. ಪೂರ್ಣ ಗುಣಗಳು ಉಳ್ಳದ್ದಲ್ಲ. (೨) ಆ ಶ್ರೀಹರಿಯು ಸರ್ವಗುಣಪರಿಪೂರ್ಣನು. ಸರ್ವ ದೇಶಗಳಲ್ಲಿಯೂ, ಸರ್ವ ಕಾಲ ಗಳಲ್ಲಿಯೂ ವ್ಯಾಪಿಸಿಕೊಂಡಿರುವವನು. ಸರ್ವ ಸ್ವತಂತ್ರನು. ಎಲ್ಲಾ ವಸ್ತುಗಳೂ ಸರ್ವದಾ ಶ್ರೀಹರಿಯ ಅಧೀನದಲ್ಲಿರುವವುಗಳು. (೩) ಶ್ರೀಹರಿಯು ಸರ್ವಗುಣ ಪರಿಪೂರ್ಣನಾದುದರಿಂದ ಸುಖರೂಪನು. ಸುಖ ಸ್ವರೂಪನಾದುದರಿಂದ ಸರ್ವಜಗತ್ತಿನ ಸೃಷ್ಟಿಕರ್ತನು. ಸರ್ವಕರ್ತನಾದುದರಿಂದ ಸುಸ್ಥಿರನು. ಸುಸ್ಥಿರ ನಾದುದರಿಂದ ಆಸ್ತಿಕನು. (೪) ಆಸ್ತಿಕನಾದುದರಿಂದ ಸಾಮಾನ್ಯತಃ ತಿಳಿಯುವವನು. ಸಾಮಾನ್ಯತಃ ತಿಳಿಯುವುದರಿಂದ ವಿಶೇಷವಾಗಿ ತಿಳಿಯುವವನು. ವಿಶೇಷವಾಗಿ ತಿಳಿಯುವವನಾದುದರಿಂದ ಶ್ರೀಹರಿಯು ನಿರ್ದೋಷನೂ, ಸರ್ವರಿಗೆ ನಿಯಾಮಕನೂ, ಆಗಿರುತ್ತಾನೆ. ಇಂತಹ ಗುಣಗಳಿಂದ ಕೂಡಿದ ಭೂಮ ಎನಿಸಿದವನು ಶ್ರೀನಾರಾಯಣನು ॥ ೯—೨೪ ॥ ॥ ೧ ॥

ಇಪ್ಪತ್ತನಾಲ್ಕನೇ ಖಂಡವು ಮುಗಿಯಿತು.

## ೨೫ನೇ ಖಂಡವು

ಪೀ—ಭೂಮನು ಸರ್ವತ್ರ ವ್ಯಾಪಿಸಿಕೊಂಡಿದ್ದಾನೆ, ಮತ್ತು ಸರ್ವಗುಣಪೂರ್ಣನು ಎಂಬ ಲಕ್ಷಣ ಹೇಳುತ್ತಾರೆ—

**ಉ. ॥ ಸ ಏವಾಧಸ್ತಾತ್ಸ ಉಪರಿಷ್ಟಾತ್ಸ ಪಶ್ಚಾತ್ಸ ಪುರಸ್ತಾತ್ಸ ದಕ್ಷಿಣತಸ್ಸ ಉತ್ತರತಸ್ಸ ಏವೇದꣳ ಸರ್ವಮಿತ್ಯಥಾತೋಽಹಂಕಾರಾದೇಶ ಏವಾಹಮೇವಾಧ-**

**ಸ್ತಾದಹಮುಪರಿಷ್ಟಾದಹಂ ಪಶ್ಚಾದಹಂ ಪುರಸ್ತಾದಹಂ ದಕ್ಷಿಣತೋಽಹ-ಮುತ್ತರತೋಽಹಮೇವೇದꣳ ಸರ್ವಮಿತಿ ॥ ೧ ॥**

ಅ ॥ ಆ ಭೂಮನೇ ಸರ್ವವಸ್ತುಗಳ ಕೆಳಗೂ ಮೇಲೆಯೂ ಹಿಂದುಗಡೆಯೂ ಮುಂದುಗಡೆಯೂ ಬಲಭಾಗ ಎಡಭಾಗಗಳಲ್ಲಿಯೂ ಇದ್ದಾನೆ. ಸಮಸ್ತ ವಸ್ತುಗಳಿಗೆ ಸ್ಥಿತ್ಯಾದಿಗಳನ್ನು ಕೊಡುವುದಕ್ಕಾಗಿ ಸರ್ವತ್ರ ವ್ಯಾಪಿಸಿಕೊಂಡಿದ್ದಾನೆ. ಅವನೇ ಸರ್ವಸ್ವತಂತ್ರನು. ಎಲ್ಲವೂ ಅವನ ಅಧೀನದಲ್ಲಿದ್ದುದು. ಅಥವಾ ಸರ್ವರ ಸಮೀಪದಲ್ಲಿದ್ದ ಪ್ರಯುಕ್ತ ಇದಂ ಎಂದೂ, ಗುಣಪೂರ್ಣನಾದುದರಿಂದ ಸರ್ವಃ ಎಂದೂ ಅನಿಸುತ್ತಾನೆ. (ಭೂಮನೆನಿಸಿದ ಶ್ರೀನಾರಾಯಣನ ರೂಪಾಂತರವನ್ನು ಹೇಳಲಿಕ್ಕೆ ಆರಂಭಿಸುತ್ತಾರೆ—) ಭೂಮನನ್ನು ಹೇಳಿದ ಮೇಲೆ ಭೂಮನ ಅನುಗ್ರಹದಿಂದ ಅಹಂ ಎಂದು ಹೇಳಲ್ಪಡುವುದರಿಂದ ಅಹಂಕಾರನೆನಿಸಿದ ಜೀವನಲ್ಲಿರತಕ್ಕ ಅನಿರುದ್ಧನೆನಿಸಿದ ಶ್ರೀಹರಿಯ ಉಪದೇಶವು ಮಾಡಲ್ಪಡುತ್ತದೆ. (ಭೂಮನೇ ಅಹಂಕಾರನು. ಭೂಮನಿಗೆ ಹೇಳಿದ ಲಕ್ಷಣವೇ ಅಹಂಕಾರನ ಲಕ್ಷಣವು. ಅವರಿಗೆ ಭೇದವಿಲ್ಲವೆನ್ನುತ್ತಾರೆ.) ಅಹಂ ಎಂದು ಹೇಳಲ್ಪಡುವ ಜೀವನಲ್ಲಿದ್ದ ಅನಿರುದ್ಧನೇ ಕೆಳಗೂ................ಆ ಅನಿರುದ್ಧನೇ ಸರ್ವಜಗತ್ತನ್ನು ವ್ಯಾಪಿಸಿಕೊಂಡು ಇದ್ದಾನೆ ॥ ೧ ॥

ಪೀ—ಭೂಮನೆನಿಸಿದ ಶ್ರೀನಾರಾಯಣನ ವಾಸುದೇವ ಎಂಬ ರೂಪವನ್ನು ಹೇಳುತ್ತಾರೆ—

**ಉ. ॥ ಅಥಾತ ಆತ್ಮಾದೇಶ ಏವಾತ್ಮೈವಾಧಸ್ತಾದಾತ್ಮೋಪರಿಷ್ಟಾದಾತ್ಮಾ ಪಶ್ಚಾದಾತ್ಮಾ ಪುರಸ್ತಾದಾತ್ಮಾ ದಕ್ಷಿಣತ ಆತ್ಮೋತ್ತರತ ಆತ್ಮೈವೇದꣳ ಸರ್ವಮಿತಿ ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದಃ ಸ ಸ್ವರಾಡ್ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತ್ಯಥ ಯೇಽನ್ಯಥಾತೋ ವಿದುರನ್ಯರಾಜಾನಸ್ತೇಕ್ಷಯ್ಯಲೋಕಾ ಭವಂತಿ ತೇಷಾꣳ ಸರ್ವೇಷು ಲೋಕೇಷ್ವಕಾಮಚಾರೋ ಭವತಿ ॥ ಇತಿ ಪಂಚವಿಂಶಃ ಖಂಡಃ ॥ ೯-೨೫ ॥ ॥ ೨ ॥**

ಅ ॥ ಯೋಗ್ಯಾಧಿಕಾರಿಗಳಿಗೆ ಫಲವು ದೊರಕುವುದರಿಂದ ಶ್ರೀಹರಿಯ ಅನುಗ್ರಹದಿಂದ ವ್ಯಾಪ್ತನಾದ ಶ್ರೀಹರಿಯ ಉಪದೇಶವು ಹೇಳಲ್ಪಡುತ್ತದೆ. (ಇಲ್ಲಿ ಭೂಮಾ=ನಾರಾಯಣನು. ಅಹಂಕಾರಃ=ಜೀವರೊಳಗಣನಾದ ಅನಿರುದ್ಧನು. ಆತ್ಮಾ=ವ್ಯಾಪ್ತನಾದ ವಾಸುದೇವನು. ಹೀಗೆ ತಿಳಿಯಬೇಕು.) ವಾಸುದೇವನೇ ಕೆಳಗೂ *....................ವಾಸುದೇವನೇ ಈ ಸರ್ವ ಜಗತ್ತನ್ನು ವ್ಯಾಪಿಸಿಕೊಂಡಿದ್ದಾನೆ. (ವಾಸುದೇವನನ್ನು ಪ್ರತ್ಯಕ್ಷೀಕರಿಸಿದ ಜ್ಞಾನಿಗೂ, ವಿಪರೀತ ಜ್ಞಾನಿಗೂ ಫಲಹೇಳುತ್ತಾರೆ—) ಪ್ರಸಿದ್ಧನಾದ ಮುಖ್ಯಾಧಿಕಾರಿಯಾದ ಚತುರ್ಮುಖನು ಶ್ರವಣ ಮನನ ನಿದಿಧ್ಯಾಸನಗಳನ್ನು ಮಾಡುತ್ತಾ ಮುಕ್ತನಾಗಿ ಶ್ರೀಹರಿಯಲ್ಲಿ ಆಸಕ್ತಿಯುಳ್ಳವನಾಗಿ ಶ್ರೀಹರಿಯಿಂದ ಕ್ರೀಡಿಸುವವನಾಗುತ್ತಾನೆ. ತಾನು ಸ್ತ್ರೀರೂಪನಾಗಿ ಶ್ರೀಹರಿಯಿಂದ ಮಿಥುನೀಭಾವವನ್ನು ಹೊಂದುತ್ತಾನೆ. ಶ್ರೀಹರಿಯಿಂದಲೇ ಸಂತೋಷವನ್ನು ಹೊಂದುತ್ತಾನೆ. ಆ ಚತುರ್ಮುಖನು ಶ್ರೀಪರಮಾತ್ಮನೇ ಪ್ರತ್ಯಕ್ಷವಾಗಿ, ನಿಯಾಮಕನಾಗಿ ಉಳ್ಳತನು. ಆ ಮುಕ್ತನಿಗೆ ಎಲ್ಲಾ ಲೋಕಗಳಲ್ಲಿಯೂ ಸ್ವೇಚ್ಛಾನುಸಾರ ಸಂಚಾರವಾಗುತ್ತದೆ. (ಈ ಫಲವು

* ಹಿಂದಿನಂತೆ ಅರ್ಥವು

ಚತುರ್ಮುಖನಿಗೇನೇ ಮುಖ್ಯವು. ಇತರರಿಗೆ ಯಥಾಯೋಗ್ಯವಾಗಿ.) (ಹೀಗೆ ಭಗವಜ್ಜ್ಞಾನಿಗೆ ಫಲಹೇಳಿ ವಿಪರೀತಜ್ಞಾನಿಗೆ ಹೇಳಿದ ಫಲವು ಆಗುವುದಿಲ್ಲವೆನ್ನುತ್ತಾರೆ.) ಹಿಂದೆ ಹೇಳಿದ ರೀತಿಗಿಂತ ವ್ಯತ್ಯಾಸವಾಗಿ ತಿಳಿದವರು ತಮಗಿಂತ ಅಧಮರಾದವರು ನಿಯಾಮಕರಾಗಿ ಉಳ್ಳವರಾಗುತ್ತಾರೆ. ನಶ್ವರ ಲೋಕವುಳ್ಳವ ರಾಗುತ್ತಾರೆ. ಅವರಿಗೆ ಎಲ್ಲಾ ಲೋಕಗಳಲ್ಲಿ ಸಂಚಾರ ಶಕ್ತಿಯೂ ಇರುವುದಿಲ್ಲ. (ತಮಃಪ್ರಾಪ್ತಿಯೂ ಆಗುತ್ತದೆ.) ॥ ೯—೨೫ ॥ ॥ ೨ ॥

ಪೀ—**ಅಥಾತೋಽಹಂಕಾರಾದೇಶಃ** ಪ್ರಸಿದ್ಧನಾದ ಅಹಂಕಾರವೇ ಚೇತನಾಚೇತನ ಮಿಶ್ರವಾದುದು ಹೇಳಲ್ಪಡುತ್ತದೆಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ—

**ಭಾ. ॥ (೧) ಸ ಏವಾಹಂಕೃತಿಃ ಸ್ಮೃತಃ । ಅಕಾರ್ಯೋಽಹಮಿತಿ ಹ್ಯೇಷ ತತೋಽಹಂಕಾರ ಉಚ್ಯತೇ । ಜೀವಸ್ಥಸ್ತ್ವನಿರುದ್ಧೋ ಯಃ ಸೋಽಹಂಕಾರ ಇತೀರಿತಃ ॥ (೨) ಸೋಽಪ್ಯಣುತ್ವೇಽಪಿ ಸಂವ್ಯಾಪೀ ಪರಮೈಶ್ವರ್ಯಯೋಗತಃ ॥ (೩) ಯಥಾ ಬಾಲತನೌ ವಿಷ್ಣೋ ಮಾರ್ಕಂಡೇಯೇನ ಧೀಮತಾ । ಪ್ರವಿಶ್ಯ ನಾಂತೋಽಧಿಗತ ಏವಂ ವ್ಯಾಪ್ತೋ ಹರಿಃ ಪರಃ । ಅಣುರೂಪೋಽಪಿ ॥ (೪) ಭಗವಾನ್ವಾಸುದೇವಃ ಪರೋ ವಿಭುಃ । ಆತ್ಮೇತ್ಯುಕ್ತಃ ಸ ಚ ವ್ಯಾಪೀ ನ ಚ ಭೇದೋ ಹರೌ ಕ್ವಚಿತ್ ॥ ಇತಿ ಪರಮಸಾರೇ ॥ (೫) ಭೂಮಪ್ರಸಾದಂ ವಿನಾ ನಾಲ್ಪೇ ಸುಖಮಸ್ತಿ ॥ (೬) ಮತ್ಯರ್ಣಂ ಚ ಪೂರ್ವಣಂ । ಅಲ್ಪೇಽಪಿ ಹ್ಯಮೃತಾ ದೇವೀ ಶ್ರೀಃ ಪೂರ್ಣಾಽತಿಪ್ರಿಯತ್ವತಃ ॥ ಇತಿ ಚ ॥ (೭) ಆತ್ಮರತಿರ್ಭಗವದ್ರತಿಃ । ಸ್ವೋ ಭಗವಾನ್ । ಸೋಽಸ್ಯ ಪ್ರತ್ಯಕ್ಷತ ಆಜ್ಞಾಪಯಿತಾ ಭವತೀತಿ ಸ್ವರಾಟ್ ॥ ೧,೨ ॥ ಇತಿ ಪಂಚವಿಂಶಃ ಖಂಡಃ ॥ ೯—೨೫ ॥** ॥ ೧ ॥

ಅ ॥ (೧) **ಭೂಮನೇ** ಅಹಂಕಾರನೆನಿಸುತ್ತಾನೆ. ಅಹಂ ಎಂದು ಕರೆಯಲ್ಪಡುವುದರಿಂದ ಜೀವರೊಳಗಣ ಅನಿರುದ್ಧನು ಅಹಂಕಾರನೆನಿಸುತ್ತಾನೆ. (೨) (ಜೀವನು ಅಣುವಾಗಿರುವುದರಿಂದ ಅಣು ರೂಪನಾದ ಜೀವನಲ್ಲಿ ಶ್ರೀಹರಿಯೂ ಅಣುರೂಪನಾಗಿರುವುದಂದ **ಅಹಮೇವಾಧಸ್ತಾತ್** ಇತ್ಯಾದಿ ಗಳಿಂದ ಶ್ರೀಹರಿಯು ವ್ಯಾಪ್ತನೆಂದು ಹೇಳಿದ್ದು ಹೇಗೆ ಕೂಡುತ್ತದೆ ? ಎಂದರೆ) ಶ್ರೀಹರಿಯು ಅಣುವಾಗಿ ದ್ದರೂ ಆತನಿಗೆ ಪರಮೈಶ್ವರ್ಯವಿದ್ದುದರಿಂದ ಸರ್ವತ್ರವ್ಯಾಪ್ತನೂ ಆಗಿದ್ದಾನೆ. (೩) (ಶ್ರೀಹರಿಗೆ ಪರ ಮೈಶ್ವರ್ಯವಿದ್ದರೂ ಅಣುತ್ವ ಮಹತ್ವಗಳು ಎರಡೂ ಇವೆ, ಎಂಬಲ್ಲಿ ಪ್ರಮಾಣವೇನೆಂದರೆ ಮಾರ್ಕಂಡೇ ಯರ ಪ್ರತ್ಯಕ್ಷವು ಪ್ರಮಾಣವೆನ್ನುತ್ತಾರೆ) ಹೇಗೆ ಬಾಲರೂಪಿಯಾದ ಶ್ರೀವಿಷ್ಣುವಿನ ಮುಖದಲ್ಲಿ ಜ್ಞಾನಿಗ ಳಾದ ಮಾರ್ಕಂಡೇಯರು ಪ್ರವೇಶಮಾಡಿ ಹೊಟ್ಟೆಯೊಳಗಿದ್ದ ಪ್ರಪಂಚದ ಅವಧಿಯನ್ನೇ ಕಾಣಲಿಲ್ಲ. ಹೀಗೆಯೇ ಸರ್ವೋತ್ತಮನಾದ ಶ್ರೀಹರಿಯು ಅಣುರೂಪನಾದರೂ ಸರ್ವತ್ರ ವ್ಯಾಪ್ತನಾಗಿದ್ದಾನೆ. (೪) (**ಅಥಾತ ಆತ್ಮಾದೇಶಃ** ಎಂಬುವುದರಿಂದ ಜೀವೋಪದೇಶವೆಂಬುದು ಅಯುಕ್ತವೆನ್ನುತ್ತಾರೆ.) ಸರ್ವೋ ತ್ತಮನಾದ ವ್ಯಾಪ್ತನಾದ ವಾಸುದೇವನು **ಆತ್ಮಾ** ಎನಿಸುತ್ತಾನೆ. ಆ ಶ್ರೀಹರಿಯು ಸರ್ವತ್ರ ವ್ಯಾಪಿಸಿಕೊಂಡಿ ದ್ದಾನೆ. ಶ್ರೀಹರಿಯ ಯಾವ ರೂಪಗಳಲ್ಲಿಯೂ ಸ್ವಲ್ಪವೂ ಭೇಧವಿಲ್ಲ, ಎಂದು ಪರಮಸಾರವೆಂಬ ಗ್ರಂಥದ ಲ್ಲಿದೆ. (೫) (**ಯೋ ವೈ ಭೂಮಾ ತತ್ಸುಖಂ** ಎಂಬಲ್ಲಿ ಭೂಮನಿಗೆ ಸುಖಸ್ವರೂಪವು ಲಕ್ಷಣವೆಂದು ಹೇಳಿದೆ. ಮುಕ್ತರೂ ಸುಖಸ್ವರೂಪರಾದುದರಿಂದ **ನಾಲ್ಪೇ ಸುಖಮಸ್ತಿ** ಎಂದು ಹೇಳಿದ್ದು ಅಯುಕ್ತ ವೆಂದರೆ ಆವಾಕ್ಯದ ಅರ್ಥಹೇಳುತ್ತಾರೆ.) ಭೂಮನ ಅನುಗ್ರಹದಿಂದಲೇ ಮುಕ್ತರು ಸುಖವನ್ನನುಭವಿಸು ತ್ತಾರೆ. (ಏವಂಚ ಇತರಾಧೀನವಾಗದಿದ್ದು ಸುಖಸ್ವರೂಪತ್ವವು ಭೂಮನ ಲಕ್ಷಣವು. ಆ ಲಕ್ಷಣವು

ಬೇರೆಯವರಲ್ಲಿ ಇಲ್ಲ.) (೬)(ಯೋ ವೈ ಭೂಮಾ ತದಮೃತಂ ಎಂದು ಭೂಮನಿಗೆ ಅಮೃತತ್ವವು ಲಕ್ಷಣ ವೆಂದು ಹೇಳಿ ಯದಲ್ಪಂ ತನ್ಮರ್ತ್ಯಂ ಎಂದು ಬೇರೆಯವರಲ್ಲಿ ಆ ಲಕ್ಷಣವು ಇಲ್ಲವೆಂದು ಹೇಳಿದೆ. ಇದು ಅಯುಕ್ತವು. ಮುಕ್ತರಿಗೂ ಅಮೃತತ್ವ ಲಕ್ಷಣವು ಇದೆ ಎಂದರೆ) ಮುಕ್ತರ ಸಮುದಾಯವು ಮೋಕ್ಷಹೊಂದಿ ದಾಗ ಅಮೃತವಾಗಿದ್ದರೂ (ಮರಣಶೂನ್ಯವಾಗಿದ್ದರೂ) ಮೊದಲು ಮರಣಸ್ವಭಾವವುಳ್ಳದ್ದು. (ಏವಂಚ ನಿತ್ಯಾಮೃತತ್ವ (ನಿತ್ಯಮುಕ್ತತ್ವ)ವು ಭೂಮನಿಗೆ ಲಕ್ಷಣವು) (ಹಾಗಾದರೆ ಲಕ್ಷ್ಮೀದೇವಿಯಲ್ಲಿ ನಿತ್ಯಮುಕ್ತತ್ವ ಲಕ್ಷಣವಿದೆ ಎಂದರೆ) ನಿತ್ಯಮುಕ್ತಳಾದ ಲಕ್ಷ್ಮೀದೇವಿಯು ಶ್ರೀಹರಿಗಿಂತ ಅಲ್ಪಗುಣಗುಳುಳ್ಳವಳಾದಾಗ್ಯೂ ಶ್ರೀಹರಿಗೆ ಅತಿಪ್ರಿಯಳಾದುದರಿಂದ ಪೂರ್ಣಳಾಗಿರುತ್ತಾಳೆ. (ಏವಂಚ ಲಕ್ಷ್ಮೀದೇವಿಯೂ ಭೂಮ ಕೋಟಿಯಲ್ಲಿ ಸೇರಿದವಳಾದುದರಿಂದ ದೋಷವಿಲ್ಲ.) (೭) ಚತುರ್ಮುಖನು ಶ್ರೀಹರಿಯಿಂದಲೇ ಸಂತೋಷ ವುಳ್ಳವನು- (ಸ್ವರಾಟ್=ಸ್ವತಂತ್ರನೆಂಬ ಅರ್ಥವನ್ನು ಹೋಗಲಾಡಿಸುವುದಕ್ಕಾಗಿ ಆ ಶಬ್ದಾರ್ಥ ಹೇಳು ತ್ತಾರೆ) ಸರ್ವಸ್ವತಂತ್ರನಾದುದರಿಂದ ಶ್ರೀಹರಿಯು ಸ್ವಃ ಎನಿಸುತ್ತಾನೆ. ಪರಮಾತ್ಮನು ಚತುರ್ಮುಖ ನಿಗೆ ಪ್ರತ್ಯಕ್ಷವಾಗಿ ಆಜ್ಞಾಪಿಸುವವನಾಗುತ್ತಾನೆ- ಆದಕಾರಣ ಚತುರ್ಮುಖನು ಸ್ವರಾಟ್ ಎನಿಸುತ್ತಾನೆ. || ೯--೨೫ || || ೧ ||

ಇಪ್ಪತ್ತೈದನೇ ಖಂಡವು ಮುಗಿಯಿತು.

## ೨೬ನೇ ಖಂಡವು

ಪೀ---ಆತ್ಮಜ್ಞಾನಿಯು ಅಥವಾ ಮುಕ್ತನ ಇನ್ನೊಂದು ಮಹಿಮೆ ಹೇಳುತ್ತಾರೆ—

**ಉ. || ತಸ್ಯ ಹ ವಾ ಏತಸ್ಯೈವಂ ಪಶ್ಯತ ಏವಂ ಮನ್ವಾನಸ್ಯೈವಂ ವಿ- ಜಾನತ ಆತ್ಮತಃ ಪ್ರಾಣ ಆತ್ಮತ ಆಶಾ ಆತ್ಮತಃ ಸ್ಮರ ಆತ್ಮತ ಆಕಾಶ ಆತ್ಮತ ಸ್ತೇಜ ಆತ್ಮತ ಆಪ ಆತ್ಮತ ಆವಿರ್ಭಾವತಿರೋಭಾವಾವಾತ್ಮತೋಽನ್ನ- ಮಾತ್ಮತೋ ಬಲಮಾತ್ಮತೋ ವಿಜ್ಞಾನಮಾತ್ಮತೋ ಧ್ಯಾನಮಾತ್ಮತಶ್ಚಿತ್ತ ಮಾತ್ಮತಸ್ಸಂಕಲ್ಪ ಆತ್ಮತೋ ಮನ ಆತ್ಮತೋ ವಾಗಾತ್ಮತೋನಾಮಾತ್ಮ- ತೋ ಮಂತ್ರಾ ಆತ್ಮತಃ ಕರ್ಮಾಣ್ಯಾತ್ಮತ ಏವೇದಂ ಸರ್ವಮಿತಿ ||೧||**

ಅ || ಹಿಂದೆ ಹೇಳಿದ ಪ್ರಕಾರ ಶ್ರೀಹರಿಯ ಸಾಕ್ಷಾತ್ಕಾರಾದಿಗಳನ್ನು ಹೊಂದಿದ ಚತುರ್ಮುಖಾದಿ ಗಳಿಗೆ ಆತ್ಮನೆನಿಸಿದ ಶ್ರೀಹರಿಯಿಂದ ಪ್ರಾಣಮೊದಲಾದವರು ಹುಟ್ಟುತ್ತಾರೆ, ರಕ್ಷಿಸಲ್ಪಡುತ್ತಾರೆ, ಲಯ ಹೊಂದುತ್ತಾರೆ. ಪ್ರೇರಿಸಲ್ಪಡುತ್ತಾರೆಂದೂ ಪ್ರತ್ಯಕ್ಷವಾಗುತ್ತದೆ. ಆತ್ಮಾಪರೋಕ್ಷಜ್ಞಾನಿಯಾದವನು ಮುಕ್ತನಾಗಿ ಪ್ರಾಣ, ಆಶಾ, ಸ್ಮರ, ಆಕಾಶ, ತೇಜಸ್ಸು, ಅಪ್, ಅನ್ನ, ಬಲ, ವಿಜ್ಞಾನ, ಧ್ಯಾನ, ಚಿತ್ತ, ಸಂಕಲ್ಪ, ಮನಸ್ಸು, ವಾಕ್, ನಾಮ, ಮಂತ್ರ, ಕರ್ಮ, ಎಂಬ ಶಬ್ದಗಳಿಂದ ಹೇಳಲ್ಪಡತಕ್ಕ ಮುಖ್ಯ ಪ್ರಾಣಮೊದಲಾದ ಹಿಂದೆ ಹೇಳಿದ ದೇವತೆಗಳಿಗೆ ಉತ್ಪತ್ತಿ ಮೊದಲಾದುದು ಶ್ರೀಹರಿಯಿಂದ ಆಗುತ್ತ ದೆಂದು ತಿಳಿಯುತ್ತಾನೆ. (ಇಷ್ಟು ಮಾತ್ರವಲ್ಲ ಪರಂತು) ಶ್ರೀಹರಿಯಿಂದಲೇ ಎಲ್ಲಾ ಜಗತ್ತು ಉತ್ಪತ್ತ್ಯಾದಿ ಗಳನ್ನು ಹೊಂದುತ್ತದೆ. ಶ್ರೀಹರಿಯಿಂದ ನಿಖಿಲ ಜಗತ್ತಿಗೆ ಉತ್ಪತ್ತಿ ನಾಶಗಳು ಆಗುತ್ತವೆ, ಎಂದೂ ಚತುರ್ಮುಖಾದಿಗಳಿಗೆ ಪ್ರತ್ಯಕ್ಷವಾಗುತ್ತದೆ || ೧ ||

ಪೀ—ಮುಕ್ತನಿಗೆ ಮರಣಾದಿಗಳಿಲ್ಲವೆಂಬುದನ್ನು ವಿವರಿಸುತ್ತಾರೆ—

ಉ. ॥ ತದೇಷ ಶ್ಲೋಕಃ ॥ ನ ಪಶ್ಯೋ ಮೃತ್ಯುಂ ಪಶ್ಯತಿ ನ ರೋಗಂ ನೋತ ದುಃಖತಾಂ ಸರ್ವಂ ಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶ ಇತಿ । ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ ನವಧಾ ಚೈವ ಪುನಶ್ಚೈಕಾದಶ ಸ್ಮೃತಃ । ಶತಂ ಚ ದಶ ಚೈಕಶ್ಚ ಸಹಸ್ರಾಣಿ ಚ ವಿಂಶತಿಃ । ಆಹಾರಶುದ್ಧೌ ಸತ್ವಶುದ್ಧಿಃ ಸತ್ವಶುದ್ಧೌ ಧ್ರುವಾ ಸ್ಮೃತಿಃ । ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಸ್ತಸ್ಮೈ ಮೃದಿತಕಷಾಯಾಯ ತಮಸಃ ಪಾರಂ ದರ್ಶಯತಿ ದೇವರ್ಷಯೇ ನಾರದಾಯ ಭಗವಾನ್ ಸನತ್ಕುಮಾರಸ್ತಂ ಸ್ಕಂದ ಇತಾ ಚಕ್ಷತೇ ತಂ ಸ್ಕಂದ ಇತ್ಯಾಚಕ್ಷತೇ ॥ ಇತಿ ಷಡ್ವಿಂಶಃ ಖಂಡಃ ॥
॥ ೯-೨೬ ॥ ॥ ೨ ॥

ಇತಿ ಶ್ರೀಮಚ್ಛಾಂದೋಗ್ಯೋಪನಿಷದಿ ನವಮೋಽಧ್ಯಾಯಃ ॥ ೯ ॥

ಅ ॥ ಆತ್ಮಜ್ಞಾನಿಯ ಮಹಿಮೆಯ ವಿಷಯದಲ್ಲಿ (ಅಂದರೆ ಮುಕ್ತನು ಶ್ರೀಹರಿಯು ಮಾಡತಕ್ಕ ಜಗತ್ಸೃಷ್ಟ್ಯಾದಿಗಳನ್ನು ನೋಡುತ್ತಾನೆ, ಇತ್ಯಾದಿ ವಿಷಯದಲ್ಲಿ) ಮುಂದೆ ಹೇಳುವ ಮಂತ್ರವು ಸಮ್ಮತಿಯಾಗುತ್ತದೆ. ನೋಡತಕ್ಕ ಮುಕ್ತಜೀವನು ಮರಣ ರೋಗ ದುಃಖಗಳನ್ನು ನೋಡುವುದಿಲ್ಲ. ಮುಕ್ತನಾದ ಜೀವನು ಸರ್ವಗುಣಪೂರ್ಣನಾದ ಶ್ರೀಹರಿಯನ್ನು ನೋಡುತ್ತಾನೆ. ಅಥವಾ ಶ್ರೀಹರಿಯು ಮಾಡುವ ಜಗತ್ಸೃಷ್ಟ್ಯಾದಿಗಳನ್ನು ನೋಡುತ್ತಾನೆ. ಮತ್ತು ಶ್ರೀಹರಿಯಿಂದ ಪ್ರಾಣಾದಿಗಳಿಗೆ ಉತ್ಪತ್ತಿಯಾಗುತ್ತದೆ, ಇತ್ಯಾದಿಗಳನ್ನು ನೋಡುತ್ತಾನೆ. ಗುಣಪೂರ್ಣನಾದ ಶ್ರೀಹರಿಯನ್ನು ಹೊಂದುತ್ತಾನೆ. ಎಲ್ಲಾ ಅಭೀಷ್ಟಗಳನ್ನು ಹೊಂದುತ್ತಾನೆ. (ಮುಕ್ತನು ತನ್ನ ಇಚ್ಛೆಯಿಂದ ಅನೇಕ ರೂಪಗಳನ್ನು ಹೊಂದುತ್ತಾನೆಂಬ ಮಹಿಮೆ ಹೇಳುತ್ತಾರೆ.) ಆ ಶ್ರೀಹರಿಯ ಅಪರೋಕ್ಷಜ್ಞಾನಿಯು, ಒಂದು ರೂಪವುಳ್ಳವನೂ ಮೂರು ಐದು ಏಳು ಒಂಭತ್ತು ರೂಪಗಳುಳ್ಳವನೂ ಆಗುತ್ತಾನೆ. ಅವನೇ ಹನ್ನೊಂದು ರೂಪಗಳುಳ್ಳವನಾಗುತ್ತಾನೆ. ಅಥವಾ ಆ ಜ್ಞಾನಿಯು ನೂರು, ಹತ್ತು ಒಂದು ರೂಪಗಳುಳ್ಳವನೂ ಸಹಸ್ರರೂಪಗಳುಳ್ಳವನೂ ಇಪ್ಪತ್ತೈದುರೂಪಗಳುಳ್ಳವನೂ ಆಗುತ್ತಾನೆ. (ಅಂದರೆ ಶ್ರೀಹರಿಯ ಜ್ಞಾನ ಸಾಮರ್ಥ್ಯದಿಂದ ಆತ್ಮಾಪರೋಕ್ಷಜ್ಞಾನಿಗಳು ಅಂಶಗಳಿಂದ ನಾನಾರೂಪಗಳನ್ನು ಧರಿಸಿಕೊಳ್ಳುತ್ತಾರೆ. (ಅವಿದ್ಯೆಯನ್ನು ಹೋಗಲಾಡಿಸುವುದಕ್ಕೆ ಕಾರಣವಾದ ಶ್ರೀಹರಿಯ ಪ್ರತ್ಯಕ್ಷ ಸ್ಥೈರ್ಯದಿಂದ ಇರಲಿಕ್ಕೆ ಕಾರಣ ಹೇಳುತ್ತಾರೆ.) ಗುರುಗಳಿಂದ ವಿದ್ಯಾಶ್ರವಣರೂಪವಾದ ಆಹಾರವು ಶುದ್ಧವಾದರೆ ಜ್ಞಾನವು (ಮನನವು) ಶುದ್ಧವಾಗುತ್ತದೆ. ಮನನವು ಶುದ್ಧವಾದರೆ ಸ್ಥಿರವಾದ ಸ್ಮೃತಿಯು (ಧ್ಯಾನವು) ಶುದ್ಧವಾಗುತ್ತದೆ. ಸ್ಥಿರವಾದ ಸ್ಮೃತಿಯು ಲಭಿಸಿದರೆ (ಶ್ರೀಹರಿಯು ಪ್ರತ್ಯಕ್ಷನಾಗುತ್ತಾನೆ) ಅದರಿಂದ ಅವಿದ್ಯಾ ಕಾಮಕರ್ಮಮೊದಲಾದ ಎಲ್ಲಾ ಅನಿಷ್ಟಗಳಿಗೆ ಶೀಘ್ರದಲ್ಲಿ ಬಿಡುಗಡೆಯಾಗುತ್ತದೆ. (ವೇದಪುರುಷನು ತಾನು ಹೇಳುತ್ತಾನೆ) ಅವಿದ್ಯಾ ಕಾಮಕರ್ಮಾದಿಗಳನ್ನೆಲ್ಲಾ ಬಿಟ್ಟಿರುವ (ದುಃಖವಿಲ್ಲದಿರುವ) ಭಗವಜ್ಜ್ಞಾನಿಗಳಾದ ನಾರದರಿಗೆ ಅಜ್ಞಾನಲೇಶವಿಲ್ಲದಿರುವ ಭಗವತ್ಸ್ವರೂಪವನ್ನು ಸನತ್ಕುಮಾರರು ತೋರಿಸಿದರು. ತೋರಿಸಿರುವ ಆ ಸನತ್ಕುಮಾರರನ್ನು ಜ್ಞಾನಿಗಳು ಸ್ಕಂದ ಎಂದು ಹೇಳುತ್ತಾರೆ. ಸನತ್ಕುಮಾರರು ಸ್ಕಂದನ ಅವತಾರರಾದುದರಿಂದ ಅಂತಹ ಸಾಮರ್ಥ್ಯವು ಬಂದಿರುತ್ತದೆ. ॥ ೯—೨೬ ॥ ॥ ೨ ॥

ಪೀ — ಆತ್ಮತಃ ಪ್ರಾಣಃ ಇತ್ಯಾದಿಗಳಿಂದ ಮುಕ್ತಾತ್ಮರಿಂದ ಪ್ರಾಣಾದಿಗಳ ಸೃಷ್ಟಿಯು ಹೇಳಲ್ಪಡುತ್ತದೆಂದು ಪರರು ಹೇಳುವುದು ಅಯುಕ್ತವೆಂಬ ಅಭಿಪ್ರಾಯದಿಂದ ತಾನು ಅರ್ಥ ಹೇಳುತ್ತಾರೆ—

**ಭಾ. ॥ (೧) ಆತ್ಮತಃ ಪ್ರಾಣ ಆತ್ಮತ ಆಶೇತ್ಯಾದಿ ಮುಕ್ತಃ ಸನ್ ಪ್ರಾಣಾದೀನಾಂ ಸೃಷ್ಟ್ಯಾದಿಕಂ ಪಶ್ಯತೀತ್ಯರ್ಥಃ ॥ (೨) ಸರ್ವಂ ಹಿ(ಹ) ಪಶ್ಯಃ ಪಶ್ಯತೀತಿ ವಾಕ್ಯಶೇಷಾತ್ ಪಶ್ಯ ಇತಿ ದ್ರಷ್ಟಾ । ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಮಿತಿ ಶ್ರುತೇಃ ॥ (೩) ಭೂಮೋ-ಪಾಸನಯೋಗ್ಯಸ್ತು ಸಾಕ್ಷಾದ್ಬ್ರಹ್ಮೈವ ಮುಖ್ಯತಃ । ಸ ತದ್ವಿದ್ಯಾಬಲೇನೈವ ವಿಷ್ಣುನಾ ರತಿಮಾಪ್ನುಯಾತ್ ॥ ತೇನೈವ ಕ್ರೀಡತೇ ನಿತ್ಯಂ ಸ್ತ್ರೀರೂಪೋ ಮಿಥುನೀಭವೇತ್ । ತದಾ-ನಂದಃ ಸ ಏವಾಸ್ಯ ರಾಜಾ ಭವತಿ ನಾಪರಃ । ಪಶ್ಯೇಚ್ಚ ಪ್ರಾಣಸೃಷ್ಟ್ಯಾದ್ಯಂ ॥ (೪) ಯೇ ತದನ್ಯ ಉಪಾಸಕಾಃ । ತೇ ಯಥಾಯೋಗ್ಯಮಾಪ್ಸ್ಯಂತಿ ಫಲಂ ಮುಕ್ತೌ ನ ಸಂಶಯಃ ॥ ಇತಿ ಪರಮತತ್ತ್ವೇ ॥ ೧ ॥**

ಅ ॥ (೧) **ಆತ್ಮತಃ ಪ್ರಾಣಃ ಆತ್ಮತಃ ಆಶಾ** ಇದುಮೊದಲಾದ ವಾಕ್ಯಗಳಿಗೆ ಮುಕ್ತನಾದವನು ಮುಖ್ಯಪ್ರಾಣಮೊದಲಾದವರ ಸೃಷ್ಟಿ ಸ್ಥಿತಿಮೊದಲಾದುದನ್ನು ನೋಡುತ್ತಾನೆಂದು ಅರ್ಥವು. (ಅಂದರೆ ಮುಕ್ತನು ನೋಡುತ್ತಿರುವಾಗ ಶ್ರೀಹರಿಯಿಂದ ಮುಖ್ಯಪ್ರಾಣಾದಿಗಳು ಹುಟ್ಟುತ್ತಾರೆ. ಇರುತ್ತಾರೆ, ಎಂದು ಹೇಳುವಾಗ ಮುಕ್ತನಾಗಿ ಅವರ ಉತ್ಪತ್ತ್ಯಾದಿಗಳನ್ನು ನೋಡುತ್ತಾನೆಂದು ಸಿಗುತ್ತದೆ.) (೨) (ಹೀಗೆ ಅರ್ಥಹೇಳಲಿಕ್ಕೆ ನಿಯಾಮಕ ಹೇಳುತ್ತಾರೆ.) (ನೋಡತಕ್ಕ ಮುಕ್ತನು ಶ್ರೀಹರಿಯು ಮಾಡುವ ಪ್ರಾಣಸೃಷ್ಟಿಮೊದಲಾದ್ದುದೆಲ್ಲವನ್ನು ನೋಡುತ್ತಾನೆ **ಸರ್ವಂ ಹ ಪಶ್ಯಃ ಪಶ್ಯತಿ** ಎಂಬ ಶಿಷ್ಟವಾಕ್ಯದಿಂದ ತಿಳಿಯುತ್ತದೆ. ಪಶ್ಯಃ ಎಂದರೆ ನೋಡುವ ಜೀವನು. (ಈ ವಿಷಯದಲ್ಲಿ ವೇದವಾಕ್ಯವನ್ನು ಪ್ರಮಾಣ ವಾಗಿ ಹೇಳುತ್ತಾರೆ.) ಜೀವನು ಬಂಗಾರಿನ ವರ್ಣವುಳ್ಳ ಶ್ರೀಹರಿಯನ್ನು ಯಾವಾಗ ನೋಡುತ್ತಾನೋ ಎಂಬ ವೇದದಿಂದ (೩) (ಭೂಮೋಪಾಸನೆಗೆ ಯಾರುಯಾರು ಯೋಗ್ಯರೋ ಅವರಿಗೆಲ್ಲರಿಗೂ **ಆತ್ಮ ರತಿಃ** ಇತ್ಯಾದಿಗಳಲ್ಲಿ ಹೇಳಿದ ಫಲವು ಸಿಗುತ್ತದೆಂಬ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಫಲ ಪ್ರಕರಣದ ಅರ್ಥವನ್ನು ಪ್ರಮಾಣಕೊಟ್ಟು ಹೇಳುತ್ತಾರೆ.) ಭೂಮೋಪಾಸನೆಗೆ ಯೋಗ್ಯನು ಮುಖ್ಯವಾಗಿ ಸಾಕ್ಷಾತ್ ಚತುರ್ಮುಖ ಬ್ರಹ್ಮನೇ. ಆ ಚತುರ್ಮುಖನು ಆ ಭೂಮವಿದ್ಯೆಯ ಸಾಮರ್ಥ್ಯದಿಂದಲೇ ಶ್ರೀವಿಷ್ಣುವಿನಿಂದ ತೃಪ್ತಿಯನ್ನು ಹೊಂದುತ್ತಾನೆ. ಆ ಶ್ರೀಹರಿಯಿಂದಲೇ ನಿತ್ಯದಲ್ಲಿಯೂ ಕ್ರೀಡಿಸುತ್ತಾನೆ. ಚತುರ್ಮುಖನು ಸ್ತ್ರೀರೂಪನಾಗಿ ಶ್ರೀಹರಿಯಿಂದಲೇ ಮಿಥುನೀಭಾವವನ್ನು ಹೊಂದುತ್ತಾನೆ ಶ್ರೀಹರಿ ಯಿಂದಲೇ ಆನಂದವುಳ್ಳವನಾಗುತ್ತಾನೆ. ಚತುರ್ಮುಖನಿಗೆ ಆ ಶ್ರೀಹರಿಯೇ ನಿಯಾಮಕನು. ಇನ್ನೊಬ್ಬ ನಿಯಾಮಕನು ಇರುವುದಿಲ್ಲ. ಚತುರ್ಮುಖನೇ ಮುಖ್ಯವಾಗಿ ಶ್ರೀಹರಿಯಿಂದ ಮುಖ್ಯಪ್ರಾಣಾದಿಗಳಿಗೆ ಸೃಷ್ಟಿಸ್ಥಿತ್ಯಾದಿಗಳು ಆಗುತ್ತವೆಂದು ನೋಡುತ್ತಾನೆ. (೪) (**ಆತ್ಮತಃ ಪ್ರಾಣ** ಇತ್ಯಾದಿಗಳ ಅರ್ಥಹೇಳು ತ್ತಾರೆ.) ಚತುರ್ಮುಖನಿಗಿಂತ ಬೇರೆ ಉಪಾಸಕರು ಯಥಾಯೋಗ್ಯವಾಗಿ ಮೋಕ್ಷದಲ್ಲಿ ಫಲವನ್ನು ಹೊಂದುತ್ತಾರೆ. ಸಂದೇಹವಿಲ್ಲ, ಎಂದು ಪರಮತತ್ವದಲ್ಲಿದೆ. ॥ ೧ ॥

**ಪೀ—ಅಥಾತೋಽಹಂಕಾರಾದೇಶಃ** ಎಂಬ ಪ್ರಕರಣವು ಜೀವರೊಳಗಣ ಅನಿರುದ್ಧನನ್ನು ಹೇಳು ತ್ತದೆಂದು ನಾವು ಹೇಳಿದ ಅರ್ಥವು ದೃಢವಾಗುವುದಕ್ಕಾಗಿ ಅವಿದ್ಯಾಕಾರ್ಯವಾದ ಅಹಂಕಾರಗ್ರಂಥಿಯು ಹೇಳಲ್ಪಡುತ್ತದೆಂದು ಕೆಲವರು ಹೇಳುವುದು ಅಯುಕ್ತವೆನ್ನುತ್ತಾರೆ—

**ಭಾ. ॥ (೧) ನ ಚ ಭೂಮಾನಂ ಭಗವೋ ವಿಜಿಜ್ಞಾಸ ಇತಿ ಪೃಷ್ಟವಾನ್ ಭೂಮ್ನೋ ಲಕ್ಷಣಂ ಸ ಏವಾಧಸ್ತಾತ್ಸ ಉಪರಿಷ್ಟಾದಿತ್ಯಾದಿನಾ ಪೂರ್ಣತ್ವಂ ಭಗವತೋಽನ್ಯಸ್ಯಾಹಂ-ಕಾರಸ್ಯೋಪದಿಶತೀತಿ ಯುಜ್ಯತೇ ॥ (೨) ನ ಚಾಹಂಕಾರಸ್ಯ ಪೂರ್ಣತ್ವಮಸ್ತಿ ॥ (೩) ನಚ**

**ಮುಖ್ಯೇ ಪೂರ್ಣತ್ವೇ ಯುಜ್ಯಮಾನೇ ಉಪಚರಿತಂ ಯುಜ್ಯತೇ ॥ (೪) ನ ಚಾಹಂಕಾರಸ್ಯ ಕಾಚಿತ್ಪ್ರಸ್ತುತಿಃ । ಅಥಶಬ್ದಸ್ತು ರೂಪಾಂತರಾಪೇಕ್ಷಯಾ ಯುಜ್ಯತೇ । ಅತಶ್ಶಬ್ದಸ್ತತ್ಪ್ರಸಾದಾದಿತಿ ॥ (೫) ಆತ್ಮರತಿಃ ಸ್ವರಾಡಿತ್ಯಾದಿ । ಯೋ ಬ್ರಹ್ಮಾಣಂ ವಿದಧಾತಿ ಪೂರ್ವಮಿತ್ಯಿ ಬ್ರಹ್ಮಣ ಉತ್ಪತ್ತಿಪ್ರಸಿದ್ಧೇಃ ಸ್ವಯಂಭೂರಾತ್ಮಭೂರಿತ್ಯಾದಿಷ್ವಾತ್ಮಶಬ್ದಃ ಸ್ವಯಂಶಬ್ದಶ್ಚ ಯಥಾ ವಿಷ್ಣುವಾಚೀ ತದ್ವದೇವಾತ್ರಾಪ್ಯಾತ್ಮಶಬ್ದೋ ವಿಷ್ಣುವಾಚ್ಯೇವ ॥ ೨ ॥**

ಅ ॥ (೧) ಪೂಜ್ಯರೇ ಭೂಮನನ್ನು ತಿಳಿಯಲಿಚ್ಛಿಸುತ್ತೇನೆಂದು ಸನತ್ಕುಮಾರರು ಪ್ರಶ್ನಿಸಿಕೊಂಡವರಾಗಿ **ಸ ಏವಾಧಸ್ತಾತ್ ಸ ಉಪರಿಷ್ಟಾತ್** ಇತ್ಯಾದಿಗಳಿಂದ ಭೂಮನಿಗೆ ಹೇಳದ ಪೂರ್ಣತ್ವರೂಪ ಲಕ್ಷಣವನ್ನು ಶ್ರೀಹರಿಯಿಂದ ಇತರವಾದ ಅಹಂಕಾರಕ್ಕೆ ಉಪದೇಶಿಸುತ್ತಾರೆಂಬುದು ಕೂಡುವುದಿಲ್ಲ. (ಅಂದರೆ—ಅಹಂಕಾರವು ಶ್ರೀಹರಿಯಲ್ಲ, ಶ್ರೀಹರಿಯಿಂದ ಬೇರೆ ಎಂದಾದರೆ—**ಸ ಏವಾಧಸ್ತಾತ್ ಇತ್ಯಾದಿಗಳಿಂದ ಭೂಮನಿಗೆ ಹೇಳಿದ ಪೂರ್ಣತ್ವವೆಂಬ ಲಕ್ಷಣವನ್ನೇ ಅಹಮೇವಾಧಸ್ತಾತ್.** ಇತ್ಯಾದಿಗಳಿಂದ ಅಹಂಕಾರಕ್ಕೆ ಹೇಳಿದ್ದು ಕೂಡದೆ ಹೋಗುವುದು. **ಸ ಏವಾಧಸ್ತಾತ್** ಇತ್ಯಾದಿಗಳು **ಭೂಮಾನಂ ಭಗವೋ ವಿಜಿಜ್ಞಾಸೇ** ಎಂಬ ಪ್ರಶ್ನೆಗೆ ಉತ್ತರವಾದುದರಿಂದ ಮತ್ತೊಬ್ಬನಿಗೆ ಲಕ್ಷಣವೆಂದು ಹೇಳಕೂಡದು.) (೨) (ಅಹಂಕಾರವು ಶ್ರೀಹರಿಯಿಂದ ಬೇರೆಯೆಂದಾದರೆ ಪೂರ್ಣತ್ವವೆಂಬ ಲಕ್ಷಣವೇ ಸರ್ವಥಾ ಕೂಡುವುದಿಲ್ಲವೆನ್ನುತ್ತಾರೆ.) ಅಹಂಕಾರಕ್ಕೆ ಪೂರ್ಣತ್ವವು (ಸರ್ವಗತತ್ವವು) ಸರ್ವಥಾ ಇಲ್ಲ. (೩) (ಮುಖ್ಯವಾಗಿ ಅಹಂಕಾರವು ಪೂರ್ಣವು ಎನ್ನುವುದಿಲ್ಲ. ಅಮುಖ್ಯವಾಗಿ ದೇಹದಲ್ಲಿ ಪೂರ್ಣವು ಎಂದು ಅಮುಖ್ಯ ಪ್ರಯೋಗವು ಎಂದರೆ) ಅಹಂಕಾರವು ಶ್ರೀಭಗವದ್ರೂಪವು ಎಂದಂಗೀಕರಿಸಿದರೆ ಮುಖ್ಯವಾದ ಪೂರ್ಣತ್ವವು ಕೂಡುತ್ತಿರಲು ಅದನ್ನು ಬಿಟ್ಟು ಅಮುಖ್ಯವಾದ ಪೂರ್ಣತ್ವವನ್ನು ಒಡಂಬಡುವುದು ಯುಕ್ತವಲ್ಲ. (ಮುಖ್ಯಾರ್ಥಕ್ಕೆ ಬಾಧಕವಿದ್ದರೇನೇ ಅಮುಖ್ಯಾರ್ಥವನ್ನು ಇಟ್ಟುಕೊಳ್ಳಬೇಕು.) (೪) (**ಅಥಾತಃ** ಎಂಬುದು ಅಹಂಕಾರವಿಷಯಕವಾದರೆ ಇನ್ನೊಂದು ದೋಷ ಹೇಳುತ್ತಾರೆ.) (ಭೂಮನೆಂಬ ಶ್ರೀಭಗವಂತನನ್ನು ಹೇಳುತ್ತಿರುವಾಗ ಆ ಶ್ರೀಹರಿಯದ್ದೇ ರೂಪಾಂತರವೆಂದು ತಿಳಿಸುವುದಕ್ಕಾಗಿ **ಅಥಾತಃ** ಎಂಬ ಉಪದೇಶವು ಎಂದು ಹೇಳಿದ ಕಾರಣ ನಾವು ಹೇಳುವ ಅರ್ಥವು ಸಂಗತವಾಗುತ್ತದೆ.) ಅಹಂಕಾರವನ್ನೇ ಹೇಳಿದ್ದೆಂದು ಹೇಳಿದರೆ ಸಂಗತಿಯೇ ಇಲ್ಲ. (ಆದಕಾರಣ ಅಹಂಕಾರತತ್ತ್ವವನ್ನೂ ಹೇಳುವುದೆಂಬುದು ಸರ್ವಥಾ ಕೂಡಲಾರದು.) (ಬೇರೆ ಪ್ರಕರಣ ಎಂದು ತಿಳಿಸತಕ್ಕುದು ಅಥ ಶಬ್ದವಿದೆ ಎಂದರೆ) ಭೂಮ ಪ್ರಕರಣದಲ್ಲಿ ನಾರಾಯಣನೆಂಬ ಭಗವದ್ರೂಪವನ್ನು ಹೇಳಿ ಆ ನಾರಾಯಣನದ್ದೇ ಅನಿರುದ್ಧರೂಪವನ್ನು ಹೇಳುವುದಕ್ಕಾಗಿ ಅಥ ಶಬ್ದವನ್ನು ಹೇಳಿದ್ದು. (ಹಾಗಾದರೆ **ಅತಃ** ಶಬ್ದವು ವ್ಯರ್ಥವೆಂದರೆ) (**ಅಃ ಇತಿ ಬ್ರಹ್ಮ** ಎಂಬ ವೇದಪ್ರಮಾಣದಿಂದ ಅ ಶಬ್ದವು ಶ್ರೀಹರಿಯನ್ನು ಹೇಳುತ್ತದೆ. ಆದುಕಾರಣ) **ಅತಃ** ಎಂಬ ಶಬ್ದಕ್ಕೆ ಶ್ರೀಹರಿಯ ಪ್ರಸಾದದಿಂದ ಎಂದರ್ಥವು. [(೫) ಜೀವನು **ಆತ್ಮರತಿಃ**= ಶ್ರೀಹರಿಯಲ್ಲಿ ಆಸಕ್ತಿಯುಳ್ಳವನು. ಸ್ವರಾಟ್=ಶ್ರೀಹರಿಯೇ ನಿಯಾಮಕನಾಗಿ ಉಳ್ಳವನು, ಇತ್ಯಾದಿಗಳಿಂದ ಆತ್ಮ ಸ್ವ ಶಬ್ದಗಳು ಶ್ರೀಹರಿಯನ್ನು ಹೇಳುತ್ತವೆಂದು ಹೇಳಿದುದನ್ನು ದೃಢೀಕರಿಸುತ್ತಾರೆ.) ಶ್ರೀಹರಿಯು ಚತುರ್ಮುಖನನ್ನು ಮೊದಲು ಸೃಷ್ಟಿಸಿರುತ್ತಾನೆ, ಎಂಬ ವೇದದಲ್ಲಿ ಚತುರ್ಮುಖನಿಗೆ ಶ್ರೀಹರಿಯಿಂದ ಉತ್ಪತ್ತಿಯೆಂದು ಪ್ರಸಿದ್ಧವಾಗಿರುವುದರಿಂದ **ಸ್ವಯಂಭೂಃ ಆತ್ಮಭೂಃ** ಇತ್ಯಾದಿ ಚತುರ್ಮುಖನನ್ನು ಹೇಳುವ ಪ್ರಯೋಗಗಳಲ್ಲಿ **ಆತ್ಮ**ಶಬ್ದವೂ **ಸ್ವಯಂ**ಶಬ್ದವೂ ಹೇಗೆ ವಿಷ್ಣುವನ್ನು ಹೇಳುತ್ತದೋ, ಹಾಗೆಯೇ **ಆತ್ಮರತಿಃ ಸ್ವರಾಟ್** ಇತ್ಯಾದಿಗಳಲ್ಲಿಯೂ **ಆತ್ಮ**ಶಬ್ದವೂ ಸ್ವಶಬ್ದವೂ ವಿಷ್ಣುವನ್ನೇ ಹೇಳುತ್ತದೆ. (**ಆತ್ಮ. ಸ್ವ. ಸ್ವಯಂ** ಈ ಶಬ್ದಗಳಿಗೆ ತಾನು ಎಂದು ಅರ್ಥಮಾಡಕೂಡದು. ಏಕೆಂದರೆ— ತನ್ನಿಂದ ತಾನು ಹುಟ್ಟುವುದು ಎಂಬುದು ಕೂಡಲಾರದಷ್ಟೆ. ಆದುಕಾರಣ **ಆತ್ಮಾ ಸ್ವಯಂ** ಎಂದರೆ

ಶ್ರೀಹರಿಯು. ಶ್ರೀಹರಿಯಿಂದ ಹುಟ್ಟಿರುವ ಚತುರ್ಮುಖನು ಆತ್ಮಭೂಃ ಸ್ವಯಂಭೂಃ ಎನಿಸುತ್ತಾನೆ. ಚತುರ್ಮುಖನು ವಿಷ್ಣುವಿನಿಂದ ಹುಟ್ಟಿದವನೆಂಬುದು ಯೋ ಬ್ರಹ್ಮಾಣಾಂ ವಿದಧಾತಿ ಇತ್ಯಾದಿ ವೇದಗಳಲ್ಲಿ ಹೇಳಿಯದೆ.) ॥ ೨ ॥

ಟೀ—೨೬ನೇ ಖಂಡದಲ್ಲಿ ಅಪರೋಕ್ಷಜ್ಞಾನಿಯು ಮುಕ್ತನಾಗಿ ಮುಖ್ಯಪ್ರಾಣಾದಿಗಳಿಗೆ ಶ್ರೀಹರಿಯಿಂದ ಸೃಷ್ಟ್ಯಾದಿಗಳು ಆಗುತ್ತವೆಂಬುದನ್ನು ನೋಡುತ್ತಾನೆಂದು ಅರ್ಥಹೇಳಿದ್ದು ಕೂಡುವುದಿಲ್ಲ. ಏಕೆಂದರೆ—ಮುಕ್ತಾತ್ಮನಿಂದ ಪ್ರಾಣಮೊದಲಾದವರು ಹುಟ್ಟುತ್ತಾರೆ, ಎಂದು ಪರರು ಹೇಳುವ ಅರ್ಥವನ್ನೇ ಒಡಂಬಟ್ಟರೆ ಬಾಧಕವಿಲ್ಲ ಎಂದರೆ—

**ಭಾ. ॥ (೧) (1) ನ ಚ ಮುಕ್ತೇಭ್ಯಃ ಪ್ರಾಣಾದಿಕಮುತ್ಪದ್ಯತೇ । ಓಂ (2) ಜಗದ್ವ್ಯಾಪಾರವರ್ಜಮಿತಿ ವರ್ಣಿ(ನಿರ್ಣೀ)ತತ್ವಾದ್ಭಗವತಾ । (3) ಆತ್ಮತ ಏವ (ಷ) ಪ್ರಾಣೋಜಾಯತ ಇತ್ಯವಧಾರಣಾನ್ನ ಭಗವತೋಽನ್ಯಸ್ಮಾತ್ಪ್ರಾಣೋ ಜಾಯತೇ ॥ (೨) ಆತ್ಮೇತಿ ಮುಖ್ಯತೋ ವಿಷ್ಣುಸ್ತದನ್ಯೇ ತೂಪಚಾರತಃ । ತಥೈವ ಸ್ವ ಇತಿ ಪ್ರೋಕ್ತಸ್ತಸ್ಮಾದ್ಬ್ರಹ್ಮಾಽಽತ್ಮಭೂಃ ಸ್ವಭೂ ಇತಿ ಸ್ಕಾಂದೇ ॥ (೩) ಇದಂ ನಾಮಾಽಽತಿಸಾಮಿಪ್ಯಾತ್ಸರ್ವಂ (ರ್ವಃ) ಪೂರ್ಣಗುಣತ್ವತಃ । ಭೂಮಾಽಹಮಾತ್ಮೇತಿ ಹರಿಸ್ತ್ರಿವಿಧೋಽಪಿ ಹಿ ಸರ್ವದಾ ॥ ಇತಿ ವಿಶ್ವನಿರ್ಣಯೇ ॥ (೪) ಸ್ತ್ರೀಗುಣಾಃ ಪುಂಗುಣಾಶ್ಚೈವ ನಪುಂಸಕಗುಣಾ ಅಪಿ । ಯದಧೀನಾ ವ್ಯತ್ಯಯಃ ಸ್ಯಾಲ್ಲಿಂಗಾನಾಂ ತತ್ರ ಸರ್ವಶಃ । ಕಃ ಕಿಂ ಕಂ ತತ್ಸರ್ವಮಾತ್ಮಾದಿಃ ತಿರ್ದೇವಾದಯಸ್ತತಃ ॥ ಇತಿ ಲಿಂಗನಿರ್ಣಯೇ ॥ (೫) ಗುರೋರ್ವಿದ್ಯಾಹೃತಿರ್ಯಾ ತು ಸ ಆಹಾರ ಇತಿ ಸ್ಮೃತಃ । ತಚ್ಛುದ್ಧೌ ಜ್ಞಾನಶುದ್ಧಿಃ ಸ್ಯಾಜ್ಜ್ಞಾನಶುದ್ಧೌ ಸ್ಥಿರಾ ಸ್ಮೃತಿಃ । ಸ್ಮೃತಿಸ್ಥೈರ್ಯೇ ತ್ವಾಪರೋಕ್ಷ್ಯಂ ಹರೇರ್ಮೋಕ್ಷಸ್ತತೋ ಭವೇತ್ ॥ ಇತಿ ಸಾಧನನಿರ್ಣಯೇ ॥ ೧, ೨ ॥ ಇತಿ ಷಡ್ವಿಂಶಃ ಖಂಡಃ ॥ ೬—೨೬ ॥ ॥ ೩ ॥**

ಅ ॥ (೧) (1) ಮುಕ್ತಾತ್ಮರಿಂದ ಪ್ರಾಣಮೊದಲಾದವರು ಸರ್ವಥಾ ಹುಟ್ಟುವುದಿಲ್ಲ (2) ಜಗತ್ತಿನ ಸೃಷ್ಟಿಮೊದಲಾದ ವ್ಯಾಪಾರಗಳನ್ನು ಬಿಟ್ಟು ಮುಕ್ತರು ಎಲ್ಲಾ ಅಭೀಷ್ಟಗಳನ್ನು ಹೊಂದುತ್ತಾರೆಂದು (ಬ್ರ. ಅ. ೪. ಪಾ. ೪. ಸೂ.೧೭.) ವೇದವ್ಯಾಸರು ಹೇಳಿರುವರು. (3) ಆತ್ಮತ ಏವ ಪ್ರಾಣೋ ಜಾಯತೇ (ಷಟ್‌ಪ್ರ ೩ಮ.೨.) ಎಂಬ ಅವಧಾರಣದಿಂದ ಶ್ರೀಹರಿಯಿಂದಲೇ ಮುಖ್ಯಪ್ರಾಣನು ಹುಟ್ಟುತ್ತಾನೆ, ಶ್ರೀಹರಿಯ ಹೊರತು ಬೇರೆಯವರಿಂದ ಹುಟ್ಟುವುದಿಲ್ಲ. (ಆದಕಾರಣ ಆತ್ಮತಃ ಪ್ರಾಣಃ ಎಂಬಲ್ಲಿ ಪ್ರಾಣಾದಿಗಳು ಮುಕ್ತಾತ್ಮರಿಂದ ಹುಟ್ಟುತ್ತಾರೆಂಬ ಅರ್ಥವು ಸರ್ವಥಾ ಕೂಡಲಾರದು.) (೨) (ಆತ್ಮಭೂಃ ಸ್ವಯಂಭೂಃ ವಿಷ್ಣುವಿನಿಂದ ಹುಟ್ಟಿದವನೆಂಬ ಅರ್ಥವನ್ನು ಪ್ರಮಾಣ ಕೊಟ್ಟು ದೃಢೀಕರಿಸುತ್ತಾರೆ.) ಮುಖ್ಯವಾಗಿ ಆತ್ಮನೆಂದರೆ ಶ್ರೀವಿಷ್ಣುವು. ಬೇರೆಯವರು ಅಮುಖ್ಯವಾಗಿ ಆತ್ಮರೆನಿಸುತ್ತಾರೆ, ಹಾಗೆಯೇ ಸ್ವ ಎಂಬ ಶಬ್ದವೂ ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತದೆ ಆದಕಾರಣ ವಿಷ್ಣುವಿನಿಂದ ಹುಟ್ಟಿದ ಕಾರಣ ಚತುರ್ಮುಖ ಬ್ರಹ್ಮನು **ಆತ್ಮಭೂಃ ಸ್ವಭೂಃ** ಎಂದು ಎನಿಸಿಕೊಳ್ಳುತ್ತಾನೆ, ಎಂದು ಸ್ಕಾಂದಪುರಾಣದಲ್ಲಿದೆ. (೩) (೨೫ನೇ ಖಂಡದ ೧ನೇ ಮಂತ್ರದಲ್ಲಿದ್ದ ಸ ಏವೇದꣳ **ಸರ್ವಂ, ಅಹಮೇವೇದꣳ ಸರ್ವಂ,** ೨ನೇ ಮಂತ್ರದಲ್ಲಿದ್ದ **ಆತ್ಮೈವೇದꣳ ಸರ್ವಂ,** ಇವುಗಳಿಂದ ಭೂಮಾ ಅಹಂಕಾರ ಆತ್ಮರಿಗೆ ಸರ್ವವಸ್ತುಸ್ವರೂಪತ್ವವು ಹೇಳಲ್ಪಡುತ್ತದೆಂಬ ಪ್ರಸಿದ್ಧಿಯನ್ನು ಹೋಗಲಾಡಿಸುವುದಕ್ಕಾಗಿ ಪ್ರಮಾಣಕೊಟ್ಟು ಮರಳಿ ಅರ್ಥಹೇಳುತ್ತಾರೆ.) ಭೂಮಾ ಅಹಂ ಆತ್ಮಾ ಎಂದು ಮೂರು ರೂಪಗಳುಳ್ಳ ಶ್ರೀಹರಿಯೂ ಯಾವಾ

ಗಲೂ ಸರ್ವರ ಅತಿಸಮೀಪದಲ್ಲಿದ್ದುದರಿಂದ ಇದಂ ಎಂದೂ, ಪೂರ್ಣ ಗುಣಗಳುಳ್ಳವನಾದುದರಿಂದ ಸರ್ವಂ ಎಂದೂ ಎನಿಸುತ್ತಾನೆ, ಎಂದು ವಿಶ್ವನಿರ್ಣಯನೆಂಬ ಗ್ರಂಥದಲ್ಲಿದೆ. (೪) (ಇದಂ ಸರ್ವಂ ಎಂಬುದಕ್ಕೆ ಸಾಮಿಪ್ಯ ಪೂರ್ಣ ಎಂದರ್ಥವಿರುವುದಾದರೆ. ಸ ಏವಾಯಂ ಸರ್ವಃ ಆ ಶ್ರೀಹರಿಯೇ ಗುಣಪೂರ್ಣನು ಇದುಮೊದಲಾದ ಸ್ಥಳಗಳಲ್ಲಿದ್ದಂತೆಯೇ ಪುಲ್ಲಿಂಗಪ್ರಯೋಗವು ಇರಬೇಕಿತ್ತು. ಎಂದರೆ) ಸ್ತ್ರೀಯರ ಗುಣಗಳೂ, ಪುರುಷರ ಗುಣಗಳೂ, ನಪುಂಸಕರ ಗುಣಗಳೂ, ಎಲ್ಲಾ ಗುಣಗಳೂ ಶ್ರೀಹರಿಯ ಅಧೀನಗಳಾಗಿಯೇ ಇರುತ್ತವೆ. ಅಂತಹ ಶ್ರೀಹರಿಯಲ್ಲಿ ಎಲ್ಲಾ ಲಿಂಗಳಿಗೆ ವ್ಯತ್ಯಾಸವು ಬರುವುದು. (ಅದನ್ನು ವಿವರಿಸುತ್ತಾರೆ.) ಕಃ ಕಿಂ ಕಂ ತತ್ ಸರ್ವಂ ಆತ್ಮಾ ಅದಿತಿಃ ದೇವಶಬ್ದ ಮೊದಲಾದ ಶಬ್ದ ಗಳೆಲ್ಲವೂ ಶ್ರೀಹರಿಯಲ್ಲಿರುತ್ತವೆಂದು ಲಿಂಗನಿರ್ಣಯದಲ್ಲಿದೆ. (೫) (೨೬ನೇ ಖಂಡದಲ್ಲಿ ಆಹಾರಶುದ್ಧೌ ಸತ್ವಶುದ್ಧಿಃ ಇತ್ಯಾದಿಗಳಲ್ಲಿ ರಸ, ಸ್ನೇಹವಿರುವ ಆಹಾರಶುದ್ಧಿಯಿಂದ ಅಂತಃಕರಣಶುದ್ಧಿಯಾಗುವುದಾದರೂ ಸ್ಮೃತಿಸ್ಥೈರ್ಯರೂಪವಾದ ಧ್ಯಾನವು ಸಿದ್ಧವಾಗಲಾರದು. ಅದುಕಾರಣ ಧ್ಯಾನವು ಆಹಾರ ಶುದ್ಧಿಯಿಂದಲೇ ಸಿದ್ಧಿಸುತ್ತದೆಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ—ಆಹಾರ ಶಬ್ದದ ಅರ್ಥವನ್ನು ಹೇಳಿಕೊಂಡು ಪ್ರಮಾಣಕೊಟ್ಟು ಆ ವಾಕ್ಯದ ಅರ್ಥಹೇಳುತ್ತಾರೆ.) ಗುರುಗಳಿಂದ ವಿದ್ಯೆಯನ್ನುಪದೇಶಿಸಿ ಕೊಳ್ಳುವುದು ಅಂದರೆ ಶಾಸ್ತ್ರಶ್ರವಣವು ಆಹಾರ ಎನಿಸುತ್ತದೆ. ಅದು ಶುದ್ಧವಾದರೆ ಮನಃಶುದ್ಧಿಯಾಗುತ್ತದೆ. ಜ್ಞಾನಶುದ್ಧಿಯಾದರೆ ಧ್ಯಾನವು ಶುದ್ಧವಾಗುತ್ತದೆ. ಧ್ಯಾನವು ಶುದ್ಧವಾದರೆ—ಶ್ರೀಹರಿಯ ಪ್ರತ್ಯಕ್ಷ ವಾಗುತ್ತದೆ. ಅದರಿಂದ ಮೋಕ್ಷವಾಗುತ್ತದೆ, ಎಂದು ಸಾಧನನಿರ್ಣಯದಲ್ಲಿದೆ. ॥ ೯—೨೯ ॥ ॥ ೩ ॥

ಇಪ್ಪತ್ತಾರನೇ ಖಂಡವು ಮುಗಿಯಿತು.

---

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಚ್ಛಾಂದೋಗ್ಯ ಉಪನಿಷದ್ಭಾಷ್ಯೇ ನವಮೋಽಧ್ಯಾಯಃ ॥ ೯ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಮತ್ ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ಒಂಭತ್ತನೇ ಅಧ್ಯಾಯವು ಮುಗಿಯಿತು. ॥ ೯ ॥

ನಮೋ ನಿರಸ್ತದೋಷಾಯ ಸಮಸ್ತಗುಣರಾಶಯೇ ।
ವಿಪುಲಾನಂದದೇಹಾಯ ಕಮಲಾಪತಯೇ ಸದಾ ॥
ಮತ್ಪ್ರೇರಕೇಣ ಹರಿಣಾಯಾ ಪೂಜಾ ಸ್ವಸ್ಯ ಕಾರಿತಾ ।
ವಾಗ್ಯಜ್ಞರೂಪಾ ಲಕ್ಷ್ಮೀಶಸ್ತಯಾ ಪ್ರೀಣಾತು ಕೇಶವಃ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಶ್ರೀಃ ||

# ಹತ್ತನೇ ಅಧ್ಯಾಯವು

ಹೃತ್ಪುಂಡರೀಕಗಾಕಾಶಗತಮಾಕಾಶನಾಮಕಂ ।
ನಾನಾರೂಪಂ ಜಾಗ್ರದಾದಿಪ್ರವರ್ತಕಮಹಂ ಭಜೇ ॥



## ೧ನೇ ಖಂಡವು

ಪೀ—ಪೂರ್ವಾಧ್ಯಾಯದಲ್ಲಿ ಭೂಮಾದಿರೂಪಗಳುಳ್ಳ ಶ್ರೀವಿಷ್ಣುವನ್ನು ಸರ್ವಗತತ್ವ ಮೊದಲಾದ ಎಲ್ಲಾ ಗುಣಗಳಿಂದ ಉಪಾಸನೆ ಮಾಡಬೇಕೆಂದು ಹೇಳಿಯದೆ. ಆ ಭೂಮಾದಿ ರೂಪಗಳುಳ್ಳ ಶ್ರೀವಿಷ್ಣುವನ್ನು ಎಲ್ಲಾ ಮುಮುಕ್ಷುಗಳಿಗೆ ಉಪಾಸನೆಮಾಡಲಿಕ್ಕೆ ಸಾಧ್ಯವಲ್ಲ, ಅದುಕಾರಣ ಎಲ್ಲಾ ಮೋಕ್ಷಾಪೇಕ್ಷಿಗಳಿಗೆ ಸಾಮಾನ್ಯವಾಗಿ ಉಪಾಸ್ಯವಾದ ರೂಪವನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ—

**ಉ. ॥ ಓಂ ॥ ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಽಽಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ ॥ ೧ ॥**

ಅ ॥ ವಿದ್ಯಾಂತರನ್ನು ಹೇಳುತ್ತಾರೆ. ಪೂರ್ಣಗುಣಗಳು ಇರುವುದರಿಂದ ಬ್ರಹ್ಮನೆನಿಸಿದವನು. ಪೂರ್ಣಕಾಮಗಳು ಇರುವುದರಿಂದ ಪುರುಷನೆಸಿದವನು, ಇಂತಹ ಬ್ರಹ್ಮನೆಂಬ ಪೂರ್ಣವಸ್ತುವಿಗೆ ಆಧಾರವಾದ ಪರಬ್ರಹ್ಮನಿಗೆ ಶರೀರಸ್ಥಾನವಾದ ಜೀವಶರೀರದಲ್ಲಿ ಅಲ್ಪವಾದ ಕಮಲರೂಪವಾದ ಮನೆಯು ಇದೆ. ಹೃದಯಪುಂಡರೀಕರೂಪವಾದ ಮಂದಿರದೊಳಗೆ ಭೂತಾಕಾಶವಿದೆ. ಆ ಪುಂಡರೀಕದೊಳಗಣ ದಹರಾಕಾಶದೊಳಗಿರುವ ವಸ್ತುವನ್ನು ಹುಡುಕಬೇಕು. ಆ ವಸ್ತುವನ್ನೇ ಶ್ರವಣ ಮನನ ಧ್ಯಾನಗಳಿಂದ ತಿಳಿದುಕೊಳ್ಳಬೇಕು. (ಬೇರೆಯಾದುದನ್ನು ಅಲ್ಲ,) ಎಂದು ಗುರುಗಳು ಹೇಳಬೇಕು. ॥ ೧ ॥

**ಉ. ॥ ತಂ ಚೇದ್ಬ್ರೂಯುರ್ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಽಽಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತಿ ॥ ೨ ॥**

ಅ ॥ ಆ ಗುರುಗಳೊಡನೆ ಶಿಷ್ಯರು, ಹುಡುಕಬೇಕು, ತಿಳಿಯಬೇಕು, ಎಂದು ಹೇಳಿರುವಿರಿ. ಅಂತಹ ಶರೀರದೊಳಗಿರುವ ಹೃತ್ಪದ್ಮದಲ್ಲಿರುವ ಆಕಾಶದಲ್ಲಿ ಏನಿದೆ? ಹೆಸರೇನು? ಯಾವ ಮಹಿಮೆಯುಳ್ಳದ್ದು? ಎಂದು ಪ್ರಶ್ನಿಸಿದರು. ॥ ೨ ॥

**ಉ. ॥ ಸ ಬ್ರೂಯಾದ್ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾ-**

**ಹಿತೇ ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷ-
ತ್ರಾಣಿ ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ ಸರ್ವಂ ತದಸ್ಮಿನ್ಸಮಾಹಿತಮಿತಿ॥೩॥**

ಅ ॥ ಆಗ ಆಚಾರ್ಯರಲ್ಲಿ ಶಿಷ್ಯರು ಪ್ರಶ್ನಿಸುತ್ತಾರೆ—ದೇಹದ ಹೃತ್ಪುಂಡರೀಕದೊಳಗಣ ಆಕಾಶ ದಲ್ಲಿರತಕ್ಕ ಶ್ರೀಹರಿಯಲ್ಲಿ ಸ್ವರ್ಗಭೂವ್ಯಾದಿಗಳೆಲ್ಲವೂ ಆಶ್ರಿತವಾಗಿದೆ, ಸಮಸ್ತ ಪ್ರಾಣಿಗಳೂ ಆಶ್ರಿತರಾಗಿ ಇರುತ್ತಾರೆ. ಸ್ವರ್ಗ ಭೂವ್ಯಾದ್ಯಧಿಪತಿಗಳೂ ಇವರೆಲ್ಲರೂ ಹೃದಯಪದ್ಮದಲ್ಲಿರತಕ್ಕ ಆಕಾಶದೊಳಗಣ ಶ್ರೀಹರಿಯಲ್ಲಿ ಆಶ್ರಿತರಾಗಿರುತ್ತಾರೆ, ಎಂದು ಗುರುಗಳು ಹೇಳಿದರು. ॥ ೩ ॥

ಪೀ—ಸರ್ವಾಧಾರತ್ವಮಹಿಮೆಯನ್ನಾಕ್ಷೇಪಿಸುತ್ತಾರೆ—

**ಉ. ॥ ತಂ ಚೇದ್ಬ್ರೂಯುರಸ್ಮಿꣳಶ್ಚೇದಿದಂ ಬ್ರಹ್ಮಪುರೇ ಸರ್ವꣳ ಸಮಾಹಿತಂ ಸರ್ವಾಣಿ ಚ ಭೂತಾನಿ ಸರ್ವೇ ಚ ಕಾಮಾ ಯದೈನ(ತ)ಜ್ಜರಾಽವಾಪ್ನೋತಿ ಪ್ರಧ್ವꣳಸತೇ ವಾ ಕಿಂ ತತೋಽತಿಶಿಷ್ಯತ ಇತಿ ॥ ೪ ॥**

ಅ ॥ ಆಗ ಆಚಾರ್ಯರಲ್ಲಿ ಶಿಷ್ಯರು ಪ್ರಶ್ನಿಸುತ್ತಾರೆ—ದೇಹದ ಹೃತ್ಪುಂಡರೀಕದೊಳಗಣ ಆಕಾಶ ದಲ್ಲಿರತಕ್ಕ ಶ್ರೀಹರಿಯಲ್ಲಿ ಸ್ವರ್ಗ ಭೂವ್ಯಾದಿಗಳೆಲ್ಲವೂ ಆಶ್ರಿತವಾಗಿದೆ, ಸಮಸ್ತ ಪ್ರಾಣಿಗಳೂ ಆಶ್ರಿತರಾಗಿ ಇರುತ್ತಾರೆ, ಸಮಸ್ತ ಕಾಮಗಳೂ ಆಶ್ರಿತಗಳಾಗಿವೆ ಎಂದಾದರೆ —ಈ ಪರಬ್ರಹ್ಮನ ಶರೀರದಲ್ಲಿ ಮುದಿತನ ಸೇರುತ್ತದೆ, ಶರೀರವು ನಾಶಹೊಂದುತ್ತದೆ, ದೇಹನಾಶವಾದ ಮೇಲೆ ಯಾವುದು ಉಳಿಯುತ್ತದೆ? (ಯಾವುದೂ ಉಳಿಯುವುದಿಲ್ಲ, ಶರೀರವೂ ನಾಶವಾಗುತ್ತದೆ.) ಎಂದು ಆಕ್ಷೇಪಿಸುತ್ತಾರೆ. ॥ ೪ ॥

**ಉ ॥ ಸ ಬ್ರೂಯಾನ್ನಾಸ್ಯ ಜರಯೈತಜ್ಜೀರ್ಯತಿ ನ ವಧೇನಾಸ್ಯ ಹ-
ನ್ಯತ ಏತತ್ಸತ್ಯಂ ಬ್ರಹ್ಮಪುರಮಸ್ಮಿನ್ಕಾಮಾಃ ಸಮಾಹಿತಾ ಏಷ ಆತ್ಮಾಽಪಹತ-
ಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘಿತ್ಸೋಽಪಿಪಾಸಃ ಸತ್ಯಕಾ-
ಮಸ್ಸತ್ಯಸಂಕಲ್ಪೋ ಯಥಾ ಹ್ಯೇವೇಹ ಪ್ರಜಾ ಅನ್ವಾವಿಶಂತಿ ಯಥಾನುಶಾ-
ಸನಂ ಯಂ ಯಮಂತಮಭಿಕಾಮಾ ಭವಂತಿ ಯಂ ಜನಪದಂ ಯಂ ಕ್ಷೇ-
ತ್ರಭಾಗಂ ತಂ ತಮೇವೋಪಜೀವಂತಿ ॥ ೫ ॥**

ಅ ॥ ಆಗ ಗುರುಗಳು ಹೇಳುತ್ತಾರೆ—ಬ್ರಹ್ಮನಿಗೆ ಸ್ಥಾನವಾದ ಈ ಜೀವಶರೀರಕ್ಕೆ ಮುದಿತನವು ಬಂದರೂ ಬ್ರಹ್ಮನು ಮುದಿಯಾಗುವುದಿಲ್ಲ. ಶರೀರದ ನಾಶದಿಂದ ಬ್ರಹ್ಮನು ಕೊಲ್ಲಲ್ಪಡುವುದಿಲ್ಲ. ಈ ಪರಬ್ರಹ್ಮನು ಪೂರ್ಣನು, ನಿತ್ಯನು, ಅಚಿಂತ್ಯ ಶಕ್ತಿಯುಳ್ಳವನು ಬ್ರಹ್ಮನಲ್ಲಿ ಎಲ್ಲಾ ಕಾಮಗಳೂ ಪೂರ್ಣಗಳಾಗಿವೆ. (ಅಂದರೆ ಪೂರ್ಣಕಾಮನು.) ಈ ಹೃತ್ಪದ್ಮದೊಳಗಣ ಆಕಾಶದಲ್ಲಿರತಕ್ಕ ಪರಮಾತ್ಮನು ನಿತ್ಯದಲ್ಲಿಯೂ ಸ್ವತಏವ ಪಾಪಲೇಶವಿಲ್ಲದವನು. ಮುದಿತನವಿಲ್ಲದವನು, ಮರಣವಿಲ್ಲದವನು, ದುಃಖಲೇಶವಿಲ್ಲದವನು, ಹಸಿವೆ ತೃಷೆ ಮೊದಲಾದ ಪೀಡೆಗಳಿಲ್ಲದವನು, ಇಚ್ಛಿಸಿದುದೆಲ್ಲವನ್ನೂ ಹೊಂದುವವನು, ಸಫಲವಾದ ಸಂಕಲ್ಪವುಳ್ಳವನು. (ಶ್ರೀಹರಿಗೆ ಮುಕ್ತಾಶ್ರಯತ್ವ ಮೊದಲಾದ ಇನ್ನೊಂದು ಮಹಿಮೆಯನ್ನು ಹೇಳುತ್ತಾರೆ—) ತಾರತಮ್ಯದಿಂದಲೇ ಶ್ರೀಹರಿಯನ್ನು (ಸಾಯುಜ್ಯಮೋಕ್ಷವನ್ನು) ಹೊಂದುವ ಮುಕ್ತರು ಶ್ರೀಹರಿಯ ಆಜ್ಞೆಯನ್ನನುಸರಿಸಿ ಮೋಕ್ಷದಲ್ಲಿ ಶ್ರೀಹರಿಯಲ್ಲಿ ಪ್ರವೇಶಮಾಡುತ್ತಾರೆ. (ಪ್ರವೇಶ

ಮಾತ್ರವಲ್ಲ, ಪರಂತು) ಯಾವ ಯಾವ ದೇಶವನ್ನು ಯಾವಯಾವ ರಾಷ್ಟ್ರವನ್ನು ಯಾವಯಾವ ಕ್ಷೇತ್ರ ಪ್ರದೇಶವನ್ನು ಮುಕ್ತರು ಹೊಂದಲಿಚ್ಛಿಸುತ್ತಾರೋ, ಅದದನ್ನೇ (ಅಭೀಷ್ಟಗಳಾದ ಎಲ್ಲಾ ಭೋಗಗಳನ್ನೂ) ಶ್ರೀಹರಿಯ ಪ್ರಸಾದದಿಂದ ಶ್ರೀಹರಿಯ ಆಜ್ಞಾನುಸಾರವಾಗಿಯೇ ಹೊಂದುತ್ತಾರೆ. (ಸ್ವತಂತ್ರವಾಗಿ ಅಲ್ಲ.) (ಮುಕ್ತರಿಗೆ ಸತ್ಯಕಾಮತ್ವವಿದ್ದರೂ ಅದು ಪರಾಧೀನವಾದುದು. ಶ್ರೀಹರಿಗೆ ಮಾತ್ರ ಪರಾಧೀನವಲ್ಲದ ಸತ್ಯಕಾಮತ್ವವು) ॥ ೫ ॥

ಪೀ—ದಹರಾಕಾಶದಲ್ಲಿದ್ದ ಶ್ರೀಹರಿಯು ನಾಶವಿಲ್ಲದ ಫಲಕ್ಕೆ ಕಾರಣವಾದ ಜ್ಞಾನಕ್ಕೆ ವಿಷಯನೆಂಬ ಮಹಿಮೆ ಹೇಳುತ್ತಾರೆ—)

**ಉ. ॥ ತದ್ಯಥೇಹ ಕರ್ಮಜಿ(ಚಿ)ತೋ ಲೋಕಃ ಕ್ಷೀಯತ ಏವಮೇವಾ-ಮುತ್ರ ಪುಣ್ಯಜಿ(ಚಿ)ತೋ ಲೋಕಃ ಕ್ಷೀಯತೇ ತದ್ಯ ಇಹಾತ್ಮಾನಮನನುವಿದ್ಯ ವ್ರಜಂತ್ಯೇತಾಂಶ್ಚ ಸತ್ಯಾನ್ಕಾಮಾಂಸ್ತೇಷಾಂ ಸರ್ವೇಷು ಲೋಕೇಷ್ವಕಾಮ-ಚಾರೋ ಭವತ್ಯಥ ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾಂಶ್ಚ ಸತ್ಯಾನ್ ಕಾಮಾಂಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥ ಇತಿ ಪ್ರಥಮಃ ಖಂಡಃ ॥ ೧೦-೧ ॥ ॥ ೬ ॥**

ಅ ॥ ದೃಷ್ಟಾಂತ ಕೊಟ್ಟು ವಿವರಿಸುತ್ತಾರೆ. ಈ ಲೋಕದಲ್ಲಿ ಕರ್ಮಗಳಿಂದ ಸಂಪಾದಿಸಿದ ದೇಹ, ಮನೆ, ಉದ್ಯಾನ ಮೊದಲಾದುದು ನಾಶಹೊಂದುತ್ತದೆ. ಹೀಗೆಯೇ ಭಗವದಜ್ಞಾನಿಗೆ ಯಾಗ ಮೊದಲಾದ ಪುಣ್ಯದಿಂದ ಸಂಪಾದಿಸಿದ ಸ್ವರ್ಗ ಮೊದಲಾದ ಲೋಕವು ಮುಂದೆ ನಾಶವಾಗುತ್ತದೆ. (ಭಗವಜ್ಜ್ಞಾನಿಗೆ ಫಲ ಹೇಳುವುದಕ್ಕಾಗಿ ಅಜ್ಞಾನಿಗಳಿಗೆ ವಿಪರೀತಫಲವನ್ನು ದೃಷ್ಟಾಂತ ಕೊಟ್ಟು ಹೇಳುತ್ತಾರೆ —) ಅದು ಕಾರಣ ಅಧಿಕಾರಿ ಅನಧಿಕಾರಿಗಳ ಸಮೂಹದಲ್ಲಿ ಶ್ರೀಹರಿಯನ್ನೂ ಸತ್ಯಕಾಮತ್ವ ಮೊದಲಾದ ಶ್ರೀಹರಿಯ ಧರ್ಮಗಳನ್ನೂ ತಿಳಿಯದೆ ಯಾರು ಇರುತ್ತಾರೋ, ಅವರಿಗೆ ಕರ್ಮಾರ್ಜಿತವಾದ ದೇಹವು ನಾಶ ಹೊಂದುವಂತೆ ಪುಣ್ಯಸಂಪಾದಿತವಾದ ಸ್ವರ್ಗ ಮೊದಲಾದ ಲೋಕವೂ ನಾಶವಾಗುತ್ತದೆ. (ಅವರಿಗೆ ಇಷ್ಟಹಾನಿ ಮಾತ್ರವಲ್ಲ, ಇಷ್ಟವು ಸಿಗುವುದೂ ಇಲ್ಲವೆನ್ನುತ್ತಾರೆ —) ಅವರಿಗೆ ಸರ್ವಲೋಕಗಳಲ್ಲಿ ಸ್ವೇಚ್ಛಾನುಚಾರ ಸಂಚಾರವೂ ಆಗುವುದಿಲ್ಲ. (ಭಗವಜ್ಜ್ಞಾನಿಗಳಿಗೆ ಫಲ ಹೇಳುತ್ತಾರೆ—) ಯಾರು ಶ್ರೀ ಹರಿಯನ್ನೂ, ಶ್ರೀಹರಿಯ ಸರ್ವಕಾಮತ್ವ ಮೊದಲಾದ ಮಹಿಮೆಗಳನ್ನೂ ತಿಳಿದುಕೊಂಡಿರುತ್ತಾರೋ, ಅವರಿಗೆ ಪುಣ್ಯಪ್ರಾಪ್ಯಗಳಾದ ನಾಶವಾಗದ ಮೋಕ್ಷಾದಿ ಫಲಗಳೇ ಆಗುತ್ತವೆ. ಮತ್ತು ಎಲ್ಲಾ ಲೋಕಗಳಲ್ಲಿಯೂ ಅವರು ಸ್ವೇಚ್ಛಾನುಸಾರ ಸಂಚರಿಸುತ್ತಾರೆ ॥೧೦-೧॥ ॥ ೬ ॥

ಪೀ—(1) ಹಿಂದಿನ ಅಧ್ಯಾಯಗಳಲ್ಲಿ ಬಾಹ್ಯಗಳಾದ ಬ್ರಹ್ಮವಿದ್ಯೆಗಳನ್ನು ಹೇಳಿರುವರು. ಈ ಅಧ್ಯಾಯದಲ್ಲಿ ಎಲ್ಲಾ ಮುಮುಕ್ಷುಗಳಿಗೂ ಆವಶ್ಯಕವಾದ ಆಂತರವಾದ ಹೃತ್ಪುಂಡರೀಕ ವಿದ್ಯೆಯನ್ನು ಹೇಳುತ್ತಾರೆ. (2) ಬಾಹ್ಯೋಪಾಸನೆಯಿಂದ ಮೋಕ್ಷವನ್ನು ಹೊಂದುವವರೂ ಹೃದಯದೊಳಗಣ ಶ್ರೀಹರಿಯ ಉಪಾಸನೆಯನ್ನು ಸ್ವಲ್ಪ ಮಾಡಲೇಬೇಕು. (3) ೧ನೇ ಮಂತ್ರದಲ್ಲಿದ್ದ ಬ್ರಹ್ಮಪುರಶಬ್ದಾರ್ಥವನ್ನು ಹೇಳುತ್ತಾರೆ —

**ಭಾ. ॥ ಓಂ ॥ (೧)ಯದಿದಮಸ್ಮಿನ್ ಬ್ರಹ್ಮಪುರ ಇತಿ ಬ್ರಹ್ಮಪುರಶಬ್ದೇನ (1)ಬ್ರಹ್ಮಾಖ್ಯಂ ಪುರಂ ಪೂರ್ಣತ್ವಾತ್ಪುರಮಿತಿ ಪರಂ ಬ್ರಹ್ಮ (2)ಬ್ರಹ್ಮಣಃ ಪುರಮಿತಿ ಶರೀರಂ ಚೋಭಯಂ ವಿವಕ್ಷಿತಂ ॥ (೨) ಪ್ರಾಪ್ಯೋಽವಧ್ಯಂ ಬ್ರಹ್ಮಪುರಂ ರಾಜೇವ ನಿವಸಾಮ್ಯಹಂ ।**

**ಅಸ್ಮಿಂಶ್ಚೇದ್ಯದಿದಂ ಬ್ರಹ್ಮಪುರೇ ಸರ್ವಂ ಸಮಾಹಿತಂ ‖ ಯದ್ಯೈನಂ(ತತ್)ಜರಾಽವಾಪ್ನೋತಿ ಪ್ರಧ್ವಂಸತೇ ವಾ ಕಿಂ ತತೋಽತಿಶಿಷ್ಯತ ಇತಿ ಸ ಬ್ರೂಯಾನ್ನಾಸ್ಯ ಜರಯೈತಜ್ಜೀರ್ಯತಿ ನ ವಧೇನಾಸ್ಯ ಹನ್ಯತ ಏತತ್ಸತ್ಯಂ ಬ್ರಹ್ಮಪುರಮಸ್ಮಿನ್ಕಾಮಾಃ ಸಮಾಹಿತಾ ಏಷ ಆತ್ಮಾಽಪ-ಹತಪಾಪ್ಮಾ ವಿಜರೋ ವಿಮೃತ್ಯುರಿತಿ ವಾಕ್ಯಶೇಷಾದ್ಭಗವದ್ವಚನಾಚ್ಚ ಬ್ರಹ್ಮಪುರಶಬ್ದೇನ ಪರಂ ಬ್ರಹ್ಮೋಚ್ಯತ ಇತ್ಯವಸೀಯತೇ ‖ (೩) ಯತ್ಪುಂಡರೀಕಂ ಪುರಮಧ್ಯಸಂಸ್ಥಂ ಯ-ದಿದಂ ಶರೀರಂ ತದೇತದಾದ್ಯಂ ದೇವಸದನಮಿತ್ಯಾದೇಃ ಶರೀರಂ ಚ ‖ (೪) ಯದ್ವೈತದ್ ಬ್ರಹ್ಮೇತೀದಂ ವಾವ ತದ್ಯೋಽಯಂ ಬಹಿರ್ಧಾ ಪುರುಷಾದಾಕಾಶಃ । ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತೀತ್ಯಾದಿನಾ ಪರಬ್ರಹ್ಮಣ್ಯೇವ ಚ ಹೃದಯಂ ಸ್ಥಿತಂ ‖ ೧ ‖**

ಅ ‖ (೧) **ಯದಿದಮಸ್ಮಿನ್ ಬ್ರಹ್ಮಪುರೇ** ಎಂಬಲ್ಲಿದ್ದ ಬ್ರಹ್ಮಪುರ ಶಬ್ದದಿಂದ (1) ಪೂರ್ಣ ಗುಣಗಳಿರುವುದರಿಂದ **ಬ್ರಹ್ಮ**, ಪೂರ್ಣಕಾಮನಾದುದರಿಂದ **ಪುರಂ**, ಹೀಗೆ ಸರ್ವಗುಣ ಪೂರ್ಣನಾದ ಪರಬ್ರಹ್ಮನನ್ನೂ, (2) ಬ್ರಹ್ಮನಿಗೆ ಆಧಾರದಂತಿರುವ ಈ ಜೀವಶರೀರವನ್ನೂ ಹೀಗೆ ಎರಡನ್ನೂ ಇಟ್ಟುಕೊಳ್ಳಬೇಕು. (೨) (ಈ ಎರಡನ್ನು ಇಟ್ಟುಕೊಳ್ಳಬೇಕೆಂಬುವಕ್ಕೆ ಜ್ಞಾಪಕವೇನಂದರೆ ಅದರಲ್ಲಿ ಈಗ ಪರಬ್ರಹ್ಮನನು ಇಟ್ಟುಕೊಳ್ಳಬೇಕೆಂಬುದಕ್ಕೆ ಜ್ಞಾಪಕಗಳಾದ *ಸಮಾಖ್ಯಾ †ಉಪಸಂಹಾರಗಳನ್ನೇ ಹೇಳುತ್ತಾರೆ.) (1) ಯಾರಿಂದಲೂ ಸರ್ವಥಾ ಸಂಹರಿಸಿಕೊಳ್ಳಲ್ಪಡದಿರುವ ಪರಬ್ರಹ್ಮನನ್ನು ಹೊಂದಿದವನಾಗಿ ಆತನ ಸಮೀಪದಲ್ಲಿ ನಾನು ರಾಜನಂತೆ ಆವಾಸಮಾಡುತ್ತೇನೆಂದು (ಭಗವದ್ವಚನವು.) (2) ಶ್ರೀಹರಿಯಲ್ಲಿ ಎಲ್ಲಾ ವಸ್ತುವೂ ಆಶ್ರಿತವಾಗಿದೆ. (3) ‡ **ಯದ್ವೈತಜ್ಜರಾಽವಾಪ್ನೋತಿ** ಇತ್ಯಾದಿ ಶಿಷ್ಟವಾಕ್ಯದಿಂದಲೂ **ಪ್ರಾಪ್ನೋತ್ಯವಧ್ಯಂ** ಎಂಬ ಸಮಾಖ್ಯಾರೂಪ ಭಗವದ್ವಚನದಿಂದಲೂ ಬ್ರಹ್ಮಪುರಶಬ್ದದಿಂದಲೂ ಪರಬ್ರಹ್ಮನು ಹೇಳಲ್ಪಡುತ್ತಾನೆಂದು ನಿಶ್ಚಯವಾಗುತ್ತದೆ (ಅಂದರೆ---(1) **ನಿವಸಾಮ್ಯಹಂ** ಎಂಬೀ ಸಮಾಖ್ಯಾರೂಪವಾದ ಭಗವದ್ವಚನದಲ್ಲಿಯೂ ಬ್ರಹ್ಮಪುರವು ಅವಧ್ಯವಾಗಿದೆ, ಎಂದು ಹೇಳಿದ ಕಾರಣ ಬ್ರಹ್ಮಪುರಶಬ್ದವು ಪರಬ್ರಹ್ಮನನ್ನೇ ಹೇಳುತ್ತದೆ, ಎಂದು ತಿಳಿಯುತ್ತದೆ. (2) **ಯದ್ವೈತಜ್ಜ-ರಾಽವಾಪ್ನೋತಿ** ಎಂಬ ವಾಕ್ಯಶೇಷದಲ್ಲಿ ಹೇಳಿದ ಸರ್ವಾಶ್ರಯತ್ವ ಮೊದಲಾದವುಗಳು ಬೇರೆ ಕಡೆ ಕೂಡದಿರುವುದರಿಂದಲೂ ಬ್ರಹ್ಮಪುರಶಬ್ದದಿಂದ ಪರಬ್ರಹ್ಮನೇ ಹೇಳಲ್ಪಡುತ್ತಾನೆಂದು ನಿಶ್ಚಯವಾಗುತ್ತದೆ.) (೩) (ಬ್ರಹ್ಮಪುರಶಬ್ದದಿಂದ ಜೀವಶರೀರವನ್ನೂ ಇಟ್ಟುಕೊಳ್ಳಬೇಕು ಎಂಬುವಲ್ಲಿ ಎರಡು ಸಮಾಖ್ಯೆಗಳನ್ನು ಹೇಳುತ್ತಾರೆ-(1) **ಯತ್ಪುಂಡರೀಕಂ ಪುರಮಧ್ಯಸಂಸ್ಥಂ** (ಕಮಲವು ಶರೀರದ ಮಧ್ಯದಲ್ಲಿದೆ.) ಎಂಬ ತೈತ್ತಿರೀಯವಾಕ್ಯದಲ್ಲಿ ಪುಂಡರೀಕಕ್ಕೆ (ಬಿಳಿದಾವರೆಗೆ) ಆಶ್ರಯವಾದ ಪುರವು ದೇಹವು. ಆ ಸಮಾಖ್ಯೆಯಿಂದ **ಬ್ರಹ್ಮಪುರೇ ದಹರಂ ಪುಂಡರೀಕಂ** ಎಂಬಲ್ಲಿಯೂ ಪುಂಡರೀಕಕ್ಕೆ ಆಶ್ರಯವಾದ ಬ್ರಹ್ಮಪುರವು ಶರೀರವೇ ಎಂದು ನಿಶ್ಚಿತವಾಗುತ್ತದೆ. (2) **ಯದಿದಂ ಶರೀರಂ** ಎಂಬ ವೇದದಲ್ಲಿಯೂ ಆದ್ಯವಾದ ಈ ಶರೀರವು ಶ್ರೀಹರಿಗೆ ಮಂದಿರವು, ಎಂದು ಹೇಳಿದುದರಿಂದ ಶರೀರವು ಪರಬ್ರಹ್ಮನಿಗೆ ಮಂದಿರದಂತಿರ ವುದೆಂದು ಪ್ರಸಿದ್ಧವಾಯಿತು. (ಈ ಸಮಾಖ್ಯೆಯಿಂದ ಇಲ್ಲಿಯೂ ಬ್ರಹ್ಮಪುರಶಬ್ದದಿಂದ ಶರೀರವು ಹೇಳಲ್ಪಡುತ್ತದೆಂದು ನಿರ್ಣಯವಾಗುತ್ತದೆ) (೪) (ಬ್ರಹ್ಮಪುರಶಬ್ದದಿಂದ ಶ್ರೀಹರಿಯನ್ನು ಇಟ್ಟುಕೊಳ್ಳುವುದಾದರೆ **ಬ್ರಹ್ಮ ಪುರೇ ದಹರಂ ಪುಂಡರೀಕಂ ವೇಶ್ಮ** ಎಂದು ಶ್ರೀಹರಿಯು ಕಮಲಕ್ಕೆ ಆಶ್ರಯನೆಂದು ಹೇಳಿದ್ದು ಕೂಡಲಾರದು. ಕಮಲವು ಶರೀರದ ಧರ್ಮವು. ಕಮಲದೊಳಗಣ ಪರಬ್ರಹ್ಮನು ಪುಂಡರೀಕಕ್ಕೆ ಆಶ್ರಯ

---

* ಬೇರೆಕಡೆ ಅದಕ್ಕೆ ಸಮಾನವಾದ ವಚನವು ಸಮಾಖ್ಯಾ ಎನಿಸುತ್ತದೆ

† ಪ್ರಕರಣದ ಅಂತಿಮ ಭಾಗವು ಉಪಸಂಹಾರವೆನಿಸುತ್ತದೆ

‡ ಇದರ ಅರ್ಥವು ೪೨೧ನೇ ಪುಟದಲ್ಲಿ ಹೇಳಿದೆ.

ನೆಂಬುದು ಕೂಡಲಾರದು ಎಂದರೆ) (1) ಜೀವನಿಂದ ಹೊರಗೆ ದೇಹದಲ್ಲಿ ವ್ಯಾಪಿಸಿಕೊಂಡಿರುವ, ಚೆನ್ನಾಗಿ ಪ್ರಕಾಶಿಸಿಕೊಂಡಿರುವುದರಿಂದ ಆಕಾಶನೆನಿಸಿದ ಪರಬ್ರಹ್ಮನು ಸರ್ವತ್ರ ವ್ಯಾಪ್ತನು. (ಹೀಗೆ ಪರಬ್ರಹ್ಮನು ಶರೀರದಲ್ಲಿ ವ್ಯಾಪಿಸಿಕೊಂಡಿರುವವನೆಂದು ಹೇಳಿದೆ. ಏವಂಚ ಶರೀರವನ್ನು ವ್ಯಾಪಿಸಿಕೊಂಡಿರುವ ಭಗವದ್ರೂಪವಿಶೇಷವು ಹೃದಯಕಮಲವನ್ನು ಆಶ್ರಯಿಸುತ್ತಿದೆ, ಎಂಬುದು ಕೂಡುತ್ತದೆ.) (2) ಯಾವನು ಸಮಸ್ತ ಪ್ರಾಣಿಗಳನ್ನು ತನ್ನಲ್ಲಿಯೇ ನೋಡುತ್ತಾನೋ, ಇತ್ಯಾದಿ ವೇದಗಳಿಂದ ಪರಬ್ರಹ್ಮನು ಸರ್ವಾಶ್ರಯನೆಂದು ಹೇಳಿದ ಕಾರಣ ಸರ್ವ ವಸ್ತುಗಳಲ್ಲಿ ಸೇರಿದ ಹೃದಯಕಮಲವೂ ಕೂಡ ಪರಬ್ರಹ್ಮನಲ್ಲಿ ಆಶ್ರಿತವಾಗಿದೆ, ಎಂದು ಸಿದ್ಧವೇ ಆಯಿತು. ॥ ೧ ॥

**ಪೀ— ದಹರೋಽಸ್ಮಿನ್ನಂತರಾ ಆಕಾಶಃ** ಎಂಬ ಗುರುಶಿಷ್ಯಸಂವಾದರೂಪಗಳಾದ ೧ನೇ,೨ನೇ ಮಂತ್ರಗಳಲ್ಲಿದ್ದ ಆಕಾಶಶಬ್ದದಿಂದ ಪರಬ್ರಹ್ಮನನ್ನು ಇಟ್ಟುಕೊಳ್ಳಬೇಕೆಂದು ಪರರು ಹೇಳಿದ್ದು ಅಯುಕ್ತವು. **ತಸ್ಮಿನ್ ಯದಂತಃ** (ಅದರೊಳಗೆ ಏನಿದೆ?) **ಕಿಂ ತದತ್ರ ವಿದ್ಯತೇ** (ಆ ಆಕಾಶದಲ್ಲಿ ಏನಿದೆ?) ಎಂಬ ಉತ್ತರವಾಕ್ಯದಿಂದ ವಿರೋಧವು ಬರುವುದು. ಬ್ರಹ್ಮನಲ್ಲಿರುವ ಇನ್ನೊಂದು ವಸ್ತುವನ್ನು ಹುಡುಕಬೇಕು, ಎಂಬುವುದು ಕೂಡಲಾರದು. ಆದಕಾರಣ ಆ ವಾಕ್ಯಗಳ ಅರ್ಥ ಹೇಳುತ್ತಾರೆ—

**ಭಾ. ॥ (೧) ದಹರೋಽಸ್ಮಿನ್ನಂತರಾ ಆಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ । ದಹರೋಽಸ್ಮಿನ್ನಂತರ ಆಕಾಶಃ ಕಿಂ ತದತ್ರ ವಿದ್ಯತ ಇತ್ಯಾ(ತ್ಯತ್ರಾ)ಕಾಶಶಬ್ದೇನ ಭೂತಾಕಾಶೋ ವಿವಕ್ಷಿತಃ ॥ (೨) ಕಿಂ ತದತ್ರ ವಿದ್ಯತ ಇತ್ಯಸ್ಯಾಯಂ ಪರಿಹಾರಃ । ಅಸ್ಮಿನ್ಭೂತಾಕಾಶೇ ಪರಬ್ರಹ್ಮಾಖ್ಯ ಆಕಾಶೋ ವಿದ್ಯತೇ । ಆ ಸಮಂತಾತ್ಕಾಶನಾದಾಕಾಶಃ । ಆ ಸಮಂತಾತ್ಕಮಶ್ನಾತೀತಿ ವಾ ಅಸ್ಮಿನ್ಕಾಮಾಃ ಸಮಾಹಿತಾ ಇತಿ ವಾಕ್ಯಶೇಷಾತ್ । ಆ ಸಮಂತಾತ್ಕಮಾನಶ್ನಾತೀತಿ ವಾ । ಸ ಚ ಯಾವಾನ್ಬಹಿಃ ಪರಮಾತ್ಮಾ ವ್ಯಾಪ್ತೋಽಸ್ತಿ ತಾವಾನೇವ ವಿದ್ಯತೇ ಗುಣತಃ । ಪೂರ್ಣಗುಣತ್ವಾತ್ ॥ (೩) ಅಲ್ಪಪರಿಮಾಣಸ್ಯಾಪಿ ಮಹತ್ಪರಿಮಾಣತ್ವಂ ಚ ಯುಜ್ಯತೇ । ಅಚಿಂತ್ಯಶಕ್ತಿತ್ವಾತ್ ॥ (೪) ಯಸ್ಮಿನ್ವಿರುದ್ಧಗತಯೋಽಪ್ಯನಿಶಂ ಪತಂತಿ ವಿದ್ಯಾದಯೋ ವಿವಿಧಶಕ್ತಯ ಆನುಪೂರ್ವ್ಯೇತಿ ವಚನಾತ್ ॥ (೫) ಆನುಪೂರ್ವ್ಯೇತಿ ಶ್ರುತಿಪ್ರಮಾಣಾದಿತ್ಯರ್ಥಃ । ಆನುಪೂರ್ವೀ ಶ್ರುತಿರ್ವೇದ ಆಮ್ನಾಯಶ್ಚೇತಿ ಕಥ್ಯತ ಇತ್ಯಭಿಧಾನಾತ್ । ಅನ್ಯಥಾಽನಿಶಮಿತ್ಯುಕ್ತಿವಿರೋಧಾತ್ ॥ ೨ ॥**

ಅ ॥ (೧) **ದಹರೋಽಸ್ಮಿನ್ನಂತರಾ ಆಕಾಶಃ** ಇತ್ಯಾದಿ ೧ನೇ ೨ನೇ ಮಂತ್ರಗಳಲ್ಲಿದ್ದ ಆಕಾಶಶಬ್ದದಿಂದ ಭೂತಾಕಾಶವನ್ನು ಇಟ್ಟುಕೊಳ್ಳಬೇಕು. (೨) (ಆಕಾಶಶಬ್ದದಿಂದ ಭೂತಾಕಾಶವನ್ನು ಇಟ್ಟುಕೊಂಡರೂ, ಭೂತಾಕಾಶದಲ್ಲಿ ಏನಿದೆ? ಎಂಬ ಪ್ರಶ್ನೆಗೆ ಬ್ರಹ್ಮ ವಿದ್ಯತೇ (ಬ್ರಹ್ಮನಿದ್ದಾನೆ) ಎಂದುತ್ತರ ಹೇಳಬೇಕಿತ್ತು. ಅದು ಬಿಟ್ಟು **ಯಾವಾನ್ವಾ ಅಯಮಾಕಾಶಃ** ಎಂದು ಏಕೆ ಹೇಳಿದ್ದು? ಎಂದರೆ—(**ಕಿಂ ತದತ್ರ ವಿದ್ಯತೇ** ಎಂಬ ಪ್ರಶ್ನೆಗೆ ಇದು ಪರಿಹಾರ ವಾಕ್ಯವು. ಈ ಭೂತಾಕಾಶದಲ್ಲಿ ಪರಬ್ರಹ್ಮನೆಂಬ ಆಕಾಶನಿದ್ದಾನೆ. ಶ್ರೀ ಪರಬ್ರಹ್ಮನು ಚೆನ್ನಾಗಿ ಪ್ರಕಾಶಿಸುವುದರಿಂದಲೂ, ಚೆನ್ನಾಗಿ ಪೂರ್ಣಸುಖವನ್ನನುಭವಿಸುವುದರಿಂದಲೂ **ಅಸ್ಮಿನ್ಕಾಮಾಃ ಸಮಾಹಿತಾಃ** ಎಂಬ ವಾಕ್ಯಶೇಷದಿಂದ ಚೆನ್ನಾಗಿ ಶುಭಭೋಗ್ಯಗಳನ್ನು ಉಣ್ಣುವುದರಿಂದಲೂ ಆಕಾಶನೆನಿಸುತ್ತಾನೆ. ಹೊರಗಿರುವ ಆಕಾಶನೆನಿಸಿದ ಶ್ರೀ ಹರಿಯು ಎಷ್ಟು ದೇಶಕಾಲಗುಣಗಳಿಂದ ವ್ಯಾಪಿಸಿಕೊಂಡಿದ್ದಾನೋ, ಅಷ್ಟು ದೇಶಕಾಲಗಳಲ್ಲಿ ಪೂರ್ಣ ಗುಣಗಳುಳ್ಳವನಾದುದರಿಂದ ವ್ಯಾಪಿಸಿಕೊಂಡಿದ್ದಾನೆ. ಎರಡು ಭಗವದ್ರೂಪಗಳಿಗೂ ಪೂರ್ಣಗುಣಗಳಿವೆ. (೩) (ವಿರುದ್ಧ

ಪರಿಮಾಣವುಳ್ಳ ಭಗವದ್ರೂಪಗಳಿಗೂ ಗುಣಗಳು ಸಮಾನಗಳಾಗಿರುವುದರಿಂದ ಐಕ್ಯವೆಂದು ಹೇಳಿದ್ದು. ವಸ್ತುತಃ) ಅಲ್ಪಪರಿಮಾಣವುಳ್ಳ ಭಗವದ್ರೂಪಕ್ಕೂ ಅಘಟಿತಘಟಕ ಅಚಿಂತ್ಯಶಕ್ತಿಯಿದ್ದ ಪ್ರಯುಕ್ತ ದೊಡ್ಡ ಪರಿಮಾಣವೂ ಕೂಡುತ್ತದೆ. (೪) (ಯಾವುದು ಪ್ರಮಾಣಪ್ರಸಿದ್ಧವಾಗಿ ಲೋಕದೃಷ್ಟಿಯಿಂದ ವಿರುದ್ಧ ವಾಗಿಯದೋ, ಅಲ್ಲಿಯೇ ಅಚಿಂತ್ಯಶಕ್ತಿಯೆಂದು ಹೇಳಬೇಕು. ಈಶ್ವರನಿಗೆ ಏಕಕಾಲದಲ್ಲಿ ಅಣುತ್ವ ಮಹತ್ವಗಳಿವೆ, ಎಂಬಲ್ಲಿ ಪ್ರಮಾಣವಿಲ್ಲ. ಅದುಕಾರಣ ಅಚಿಂತ್ಯಶಕ್ತಿಯಿಂದ ಎಂದನ್ನ ಕೂಡದು, ಎಂದರೆ–) ಶ್ರೀಹರಿಯಲ್ಲಿ ವಿದ್ಯೆಮೊದಲಾದ ಬಹುವಿಧ ಶಕ್ತಿಗಳು ಸದಾ ಇರುತ್ತವೆ ಇಷ್ಟು ಮಾತ್ರವಲ್ಲ, ಮತ್ತೆ ಲೋಕದಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ಇರುವ ಅಣುತ್ವಮಹತ್ವಾದಿಗಳೂ ಶ್ರೀಹರಿಯಲ್ಲಿ ತಂತಮ್ಮ ವಿರೋಧ ವನ್ನು ಬಿಟ್ಟು, ಸದಾ ಇರುತ್ತವೆ. (ಅಂತಹ ಶ್ರೀಹರಿಯನ್ನು ಹೊಂದುವೆನು.) ಎಂಬ ಆನುಪೂರ್ವೀ ವಚನದಿಂದ. (೫) ಅಂದರೆ ವೇದಪ್ರಮಾಣದಿಂದ, ಆನುಪೂರ್ವೀ ಶ್ರುತಿಃ ವೇದಃ ಆಮ್ನಾಯಃ ಎಂಬು ವುದು ಪರ್ಯಾಯಪದಗಳು, ಎಂಬ ಕೋಶದಿಂದ (ಆನುಪೂರ್ವ್ಯಾ ಎಂಬುದಕ್ಕೆ ವೇದಪ್ರಮಾಣದಿಂದ, ಎಂದರ್ಥ ಮಾಡಬೇಕು.) ಆನುಪೂರ್ವೀಶಬ್ದಕ್ಕೆ ಕಾಲಾನುಕ್ರಮದಿಂದ ಎಂದರ್ಥವನ್ನು ಇಟ್ಟುಕೊಂಡರೆ ಅನಿಶಂ ಪತಂತಿ ಸದಾ ಇರುತ್ತವೆ, ಎಂಬುದು ವಿರುದ್ಧವಾಗುವುದು. (ಅದುಕಾರಣ ವೇದಪ್ರಮಾಣ ಎಂದೇ ಇಟ್ಟುಕೊಳ್ಳಬೇಕು.) ॥ ೨ ॥

ಪೀ—ಶ್ರೀ ಹರಿಯಲ್ಲಿ ಏಕಕಾಲದಲ್ಲಿಯೇ ಅಣುತ್ವ ಮಹತ್ವ ಮೊದಲಾದ ಧರ್ಮಗಳಿವೆ, ಎಂದು ಹೇಳುವ ಸ್ಪಷ್ಟವಾದ ವೇದಪ್ರಮಾಣವನ್ನು ಹೇಳುತ್ತಾರೆ—

**ಭಾ. ॥ (೧) ಏಷ ಮ ಆತ್ಮಾಂತರ್ಹೃದಯೇಽಣೀಯಾನ್ ವ್ರೀಹೇರ್ವಾ ಏಷ ಮ ಆತ್ಮಾಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾ ಇತಿ ಹೃದಯಸ್ಥಸ್ಯೈವಾಣುತ್ವಮಹತ್ವೋಕ್ತೇಃ ॥ (೨) ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ। ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ ॥ ಇತಿ ಚ ಶ್ರುತಿಃ ॥ (೩) ಸುವಿರುದ್ಧಾ ಅಶ್ರುತಾಶ್ಚ ಗುಣಾಃ ಸಂತ್ಯೇವ ಸರ್ವಶಃ। ದೋಷಾಃ ಕೇಽಪಿ ನ ಸಂತ್ಯೇವ ಶ್ರುತಾ ಅಪಿ ತು ಸರ್ವಶಃ ॥ ಇತಿ ಗಾರುಡೇ ॥ (೪) ಕಿಂ ತದತ್ರ ವಿದ್ಯತ ಇತಿ ಪೃಷ್ಟತ್ವಾದ್ಧೃದ್ಗತ ಆಕಾಶೋ ಹೃದಯಶಬ್ದೇನೋಚ್ಯತೇ। ಹೃದ್ಯಯನಾತ್ ॥ (೫) ತಸ್ಮಿನ್ ಹೃದಯಾಖ್ಯ ಆಕಾಶೇ ಬ್ರಹ್ಮಾಖ್ಯ ಆಕಾಶೋ ವಿದ್ಯತ ಇತ್ಯರ್ಥಃ। ಅನ್ಯಥಾ ಕಥಂ ಭೂತಾಕಾಶಸ್ಯ ದಹರಸ್ಯ ಬಹಿರಾಕಾಶಸಮತ್ವಂ। ದಹರೋಽಸ್ಮಿನ್ನಂತರಾಕಾಶ ಇತಿ ಚ ಪೂರ್ವೋಕ್ತಾಕಾಶಸ್ಯ ದಹರತ್ವಮುಕ್ತಂ। ಉತ್ತರಸ್ಯ ತು ಯಾವಾನ್ವಾ ಅಯಮಾಕಾಶ ಇತ್ಯನಂತಪರಿಮಾಣತ್ವಂ। ಅತೋ ಬ್ರಹ್ಮಾಕಾಶ ಏವೋತ್ತರಃ ॥ ೩ ॥**

ಅ ॥ (೧) ಶ್ರೀಹರಿಯು ನನ್ನ ಹೃದಯದೊಳಗೆ ಬತ್ತಕ್ಕಿಂತಲೂ ಅಣುವಾಗಿರುತ್ತಾನೆ. ಪೃಥಿವಿಗಿಂತಲೂ ದೊಡ್ಡವನಾಗಿರುತ್ತಾನೆ ಹೀಗೆ ಅಣುತ್ವಮಹತ್ವಗಳನ್ನು ಹೇಳಿದೆ. (೨) (ವೇದಪ್ರಮಾಣಬಲ ದಿಂದ ಏಕಕಾಲದಲ್ಲಿ ಅಣುತ್ವ-ಮಹತ್ವ ಮೊದಲಾದ ವಿರುದ್ಧ ಧರ್ಮಗಳೂ ಶ್ರೀಹರಿಯಲ್ಲಿರುತ್ತವೆಂದಂಗೀಕರಿಸುವುದಾದರೆ ಜನಿತೋಽತ ವಿಷ್ಣೋಃ ಇತ್ಯಾದಿ ವೇದಗಳಲ್ಲಿ ವಿಷ್ಣುವಿಗೆ ಉತ್ಪತ್ಯಾದಿಗಳೂ ತೋರುವುದರಿಂದ ದೋಷಗಳನ್ನು ಒಡಂಬಡಬೇಕಾಗುವುದು, ಎಂದರೆ—) ಶ್ರೀ ಹರಿಯಲ್ಲಿ ಲೋಕದೃಷ್ಟಿಯಿಂದ ವಿರುದ್ಧಗಳಾದರೂ ಗುಣಗಳು ಶ್ರುತಿಪ್ರಸಿದ್ಧಗಳಾಗಿವೆ. ವೇದಗಳಲ್ಲಿ ಹೇಳಲ್ಪಡದಿದ್ದ ಗುಣಗಳೂ ಇವೆ. ಲಕ್ಷ್ಮ್ಯಾದಿಗಳಿಂದ ಧ್ಯಾನಿಸಲ್ಪಡತಕ್ಕ ಗುಣಗಳೂ, ಧ್ಯಾನಿಸಲ್ಪಡದಿದ್ದ ಗುಣಗಳೂ ಇವೆ. ಶ್ರೀಹರಿಗೆ

**ದೋಷಗಳು ವೇದಗಳಲ್ಲಿ ಹೇಳಲ್ಪಟ್ಟಿವೆ, ಎಂದು ತೋರಿದರೂ ಅವುಗಳು ವಸ್ತುತಃ ಇಲ್ಲವೇ ಇಲ್ಲ. ಏಕೆಂದರೆ—ವೇದಗಳ ತಾತ್ಪರ್ಯಜ್ಞಾನವಿಲ್ಲದವರಿಗೆ ಮಾತ್ರ ಹಾಗೆ ಅರ್ಥವು ತೋರುತ್ತದೆ, ಎಂದು ವೇದವಿದೆ. ಈ** ವಿಷಯದಲ್ಲಿ ಸಂಶಯ ಮಾಡಕೂಡದು. (ಅಂದರೆ **ಲೋಕದೃಷ್ಟಿಯಿಂದ ವಿರುದ್ಧಗಳಾದ ಧರ್ಮಗಳೂ** ಶ್ರೀಹರಿಯಲ್ಲಿ ಅವಿರುದ್ಧಗಳಾಗಿ ಇರುತ್ತವೆ, ಎಂದು ಸಿದ್ಧವಾಯಿತು.) (೩) **ಲೋಕದೃಷ್ಟಿಯಿಂದ ವಿರುದ್ಧಗಳೂ, ವೇದಗಳಲ್ಲಿ ಹೇಳಲ್ಪಡದಿದ್ದವುಗಳೂ** ಆದ ಗುಣಗಳು ಶ್ರೀಹರಿಯಲ್ಲಿ ಇರುತ್ತವೆ. ಎಲ್ಲಿಯಾದರೂ ದೋಷಗಳು ಶ್ರುತಗಳಾಗಿದ್ದರೂ ಶ್ರೀಹರಿಯಲ್ಲಿ ಯಾವ ದೋಷಗಳೂ ಇಲ್ಲವೇ ಇಲ್ಲ, ಎಂದು ಗಾರುಡದಲ್ಲಿ ಇದೆ. (೪) (ಇದೇ ಮಂತ್ರದಲ್ಲಿದ್ದ **ಅಂತರ್ಹೃದಯೇ** ಎಂಬುದಕ್ಕೆ ಭೂತಾಕಾಶದಲ್ಲಿ ಎಂಬ ಅರ್ಥವು **ಕೂಡಲಾರದು.** ಆ ಅರ್ಥವನ್ನು ತಿಳಿಸತಕ್ಕ ಪದವು ಇಲ್ಲ, ಎಂದರೆ—) **ಕಿಂ ತದತ್ರ ವಿದ್ಯತೇ** ಎಂದು **ಪ್ರಶ್ನೆ ಮಾಡಿದುದರಿಂದ** ಹೃದಯದಲ್ಲಿರತಕ್ಕ ಆಕಾಶವು **ಹೃದಯ** ಎಂಬ ಶಬ್ದದಿಂದ ಹೇಳಲ್ಪಡುತ್ತದೆ. **ಆಕಾಶವು ಹೃದಯದಲ್ಲಿ** ಆಶ್ರಯಿಸಿಕೊಂಡಿರುವುದರಿಂದ ಹೃದಯವೆಂದರೆ ಆಕಾಶವು. (ಅಂದರೆ—ಇಲ್ಲಿ **ಭೂತಾಕಾಶವನ್ನು** ತಿಳಿಸುವ ಪದವಿಲ್ಲವೆಂದಲ್ಲ. ಹೃದಯವೆಂಬ ಪದವಿದೆ ಹೃದಯಪದದಿಂದ ಅಂತಃಕರಣವನ್ನೇ ಏಕೆ ಇಟ್ಟುಕೊಳ್ಳಬಾರದೆಂದರೆ—**ಕಿಂ ತದತ್ರ ವಿದ್ಯತೇ** ಎಂದು ಹೃದಯಾಕಾಶದಲ್ಲಿದ್ದ ಪರಬ್ರಹ್ಮನ ಲಕ್ಷಣವನ್ನು ಕೇಳಿದ್ದಕ್ಕೆ **ಯಾವಾನ್ವಾ** ಇತ್ಯಾದಿಗಳಿಂದ ಹೃದಯಾಕಾಶದಲ್ಲಿದ್ದ ಶ್ರೀಹರಿಗೇನೇ ಲಕ್ಷಣ ಹೇಳಬೇಕು. ಅಂತಃಕರಣರೂಪ ಹೃದಯದಲ್ಲಿರುವವನಿಗೆ ಲಕ್ಷಣ ಹೇಳುವುದು ಯುಕ್ತವಲ್ಲ. ಅದುಕಾರಣ ಹೃದಯವೆಂಬ ಪದಕ್ಕೆ ಹೃದಯದಲ್ಲಿದ್ದ ಆಕಾಶವೆಂದೇ ಅರ್ಥವು) (೫) (1) (ಅದನ್ನೇ ವಿವರಿಸುತ್ತಾರೆ—) ಅಂತಹ ಹೃದಯವೆಂಬ ಆಕಾಶದಲ್ಲಿ ಬ್ರಹ್ಮನೆಂಬ ಆಕಾಶನಿದ್ದಾನೆ. (2) (ಹೃದಯವೆಂಬ ಆಕಾಶದೊಳಗೆ ಪರಬ್ರಹ್ಮನೆಂಬ ಆಕಾಶನು ಇದ್ದಾನೆಂದು ಏಕೆ ಒಡಂಬಡಬೇಕು? **ಅಂತರ್ಹೃದಯ ಆಕಾಶಃ** ಎಂಬಲ್ಲಿ ಆಕಾಶಪದವು ಭೂತಾಕಾಶದಲ್ಲಿಯೇ ಪ್ರಸಿದ್ಧವಾಗಿರುವುದರಿಂದ ಭೂತಾಕಾಶವನ್ನೇ ಹೇಳುತ್ತದೆಂದು ಏಕೆ ಆಗಲಾರದು? ಎಂದರೆ-) ರೂಢಿಯ ಸಾಮರ್ಥ್ಯದಿಂದ **ಅಂತರ್ಹೃದಯ ಆಕಾಶಃ** ಎಂಬಲ್ಲಿದ್ದ ಆಕಾಶಶಬ್ದಕ್ಕೆ ಭೂತಾಕಾಶವೇ ಅರ್ಥವೆಂದು ಆಗಿದ್ದರೆ—**ಯಾವಾನ್ವಾ ಅಯಮಾಕಾಶಃ ತಾವಾನೇಷಃ** ಎಂದು ಹೃದಯದಲ್ಲಿದ್ದ ಆಕಾಶಕ್ಕೆ ಬಾಹ್ಯಾಕಾಶದಿಂದ ಪರಿಮಾಣಸಾಮ್ಯ ಹೇಳಿದ್ದು ಕೂಡದೆ ಹೋಗುವುದು. (ಹೃದಯದಲ್ಲಿದ್ದ ಆಕಾಶವು ಅಲ್ಪವು ಬಾಹ್ಯಾಕಾಶವು ವ್ಯಾಪ್ತವು. ಅದುಕಾರಣ ಎರಡು ಕಡೆ ಇದ್ದ ಆಕಾಶಶಬ್ದದಿಂದ ಪರಬ್ರಹ್ಮನನ್ನೇ ಇಟ್ಟುಕೊಳ್ಳಬೇಕು. ಶ್ರೀಹರಿಗೆ ಏಕಕಾಲದಲ್ಲಿ ಅಣುತ್ವಮಹತ್ವಗಳು ಕೂಡುತ್ತವೆಂದು ಹೇಳಿರುತ್ತೇವೆ) (೬) (ಹಾಗಾದರೆ-**ದಹರೋಽಸ್ಮಿನ್ನಂತರಾ ಆಕಾಶಃ** ಎಂಬಲ್ಲಿ ಆಕಾಶ ಶಬ್ದದಿಂದ ಭೂತಾಕಾಶವನ್ನು ಇಟ್ಟುಕೊಳ್ಳಬೇಕು, ಎಂದು ಹೇಳಿದ ಕಾರಣ **ಯಾವಾನ್ವಾ ಅಯಮಾಕಾಶಃ** ಎಂಬಲ್ಲಿಯೂ ಆಕಾಶಶಬ್ದದಿಂದ ಭೂತಾಕಾಶವನ್ನೇ ಇಟ್ಟುಕೊಳ್ಳಬೇಕು. ಒಂದೇ ಪ್ರಕರಣದಲ್ಲಿರುವ ಆಕಾಶಶಬ್ದಕ್ಕೆ ಬಾಧಕವಿಲ್ಲದೆ ಎರಡು ಅರ್ಥಗಳನ್ನು ಕಲ್ಪಿಸುವುದು ಕೂಡಲಾರದು, ಎಂದರೆ **ದಹರೋಽಸ್ಮಿನ್ನಂತರಾ ಆಕಾಶಃ** ಎಂದು ಹಿಂದೆ ಹೇಳಿದ ಆಕಾಶವು ಅಲ್ಪವು ಎಂದು ಹೇಳಿದೆ. (ಆದಕಾರಣ ಮೊದಲಿನ ಆಕಾಶಶಬ್ದದಿಂದ ಭೂತಾಕಾಶವನ್ನೇ ಇಟ್ಟುಕೊಳ್ಳಬೇಕು.) ಮೇಲೆ ಹೇಳಿದ ಆಕಾಶಕ್ಕೆ **ಯಾವಾನ್ವಾ ಅಯಮಾಕಾಶಃ** ಎಂದು ಅನಂತಪರಿಮಾಣಗಳನ್ನು ಹೇಳಿದೆ. (ಅದುಕಾರಣ ಮೇಲೆ ಹೇಳಿದ ಆಕಾಶ ಶಬ್ದದಿಂದ ಪರಬ್ರಹ್ಮನೆಂಬ ಆಕಾಶವನ್ನೇ ಇಟ್ಟುಕೊಳ್ಳಬೇಕು.) ॥ ೩ ॥

**ಶಂ**—ಹಾಗಾದರೆ ಹಿಂದೆ ಹೇಳಿದ ಆಕಾಶಶಬ್ದದಿಂದ ಪರಬ್ರಹ್ಮವೆಂಬ ಆಕಾಶವನ್ನು ಏಕೆ ಇಟ್ಟುಕೊಳ್ಳಬಾರದು **ಅಣೋರಣೀಯಾನ್** ಎಂಬ ವೇದದಿಂದ ಪರಬ್ರಹ್ಮನಲ್ಲಿ ಅಲ್ಪತ್ವವು ಕೂಡಬಹುದು. ಒಂದೇ ಪ್ರಕರಣದಲ್ಲಿರುವ ಆಕಾಶಶಬ್ದಕ್ಕೆ ಎರಡು ಅರ್ಥಗಳನ್ನು ಇಟ್ಟುಕೊಳ್ಳುವುದು ಯುಕ್ತವಲ್ಲ ಎಂದರೆ—

**ಭಾ. ॥ (೧) ಪೂರ್ವೋಕ್ತಸ್ಯಾಭೂತಾಕಾಶತ್ವೇ ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಂ ತತ್ರಾಪಿ ದಹರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ ॥ (೨) ಸಹಸ್ರಶೀರ್ಷಂ ದೇವಮಿತ್ಯಾದಿ ಕಥಂ ಯುಜ್ಯತೇ(ಜ್ಯೇತ) ॥ (೩) ನ ಹಿ ಭಗವದಂತಸ್ಥಿತಮೇವಾನ್ಯತ್ಕಿಂಚಿದ್ವಿಜಿಜ್ಞಾಸಿತವ್ಯಂ । ತದ್ವಾವೇತ್ಯವಧಾರಣಾಚ್ಚ ॥ (೪) ಉತ್ತರಸ್ಯಾಪರಬ್ರಹ್ಮತ್ವೇ ಚ ಸರ್ವಾಧಾರತ್ವಂ ನಾಸ್ಯ ಜರಯೈತಜ್ಜೀರ್ಯತಿ ನ ವಧೇನಾಸ್ಯ ಹನ್ಯತ ಏತತ್ಸತ್ಯಂ ಬ್ರಹ್ಮಪುರಮಸ್ಮಿನ್ಕಾಮಾಃ ಸಮಾಹಿತಾ ಏಷ ಆತ್ಮಾಪಹತಪಾಪ್ಮೇತ್ಯಾದಿ ನ ಯುಜ್ಯತೇ ॥ (೫) ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಮಿತ್ಯಸ್ಯ ಯ ಏಷೋಽಂತರ್ಹೃದಯ ಆಕಾಶ ಇತ್ಯೇವ ಪರಿಹಾರಃ । ನ ಉಭೇ ಅಸ್ಮಿನ್ ದ್ಯಾವಾಪೃಥಿವೀತ್ಯಾದಿ । ತತ್ತು ವಿಜಿಜ್ಞಾಸಿತವ್ಯತ್ವೇ ಹೇತುತ್ವೇನ ಸಾಮರ್ಥ್ಯಕಥನಮೇವ । ನ ಹಿ ದ್ಯಾವಾಪೃಥಿವ್ಯಾದೇರೇವ ವಿಜಿಜ್ಞಾಸ್ಯತ್ವಂ । ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥೇತಿ ಹಿ ಶ್ರುತಿಃ । ಉಭೇ ಅಸ್ಮಿನ್ ದ್ಯಾವಾಪೃಥಿವೀತ್ಯಾದ್ಯುಭಶಬ್ದೋ ಮುಕ್ತಾಮುಕ್ತರಾಶಿವ್ಯಪೇಕ್ಷಯಾ ॥ ೪ ॥**

ಅ ॥ (೧) **ದಹರೋಽಸ್ಮಿನ್ನಂತರಾಕಾಶಃ** ಎಂದು ಮೊದಲು ಹೇಳಿದ ಆಕಾಶಶಬ್ದಕ್ಕೆ ಭೂತಾಕಾಶ ಎಂದು ಅರ್ಥವನ್ನು ಒಡಂಬಡದೆ ಪರಬ್ರಹ್ಮನೆಂಬ ಅರ್ಥವನ್ನು ಒಡಂಬಟ್ಟರೆ ಅದರೊಳಗೆ ಇರುವುದನ್ನು ಹುಡುಕಬೇಕು, ಅದನ್ನೇ ತಿಳಿಯಬೇಕು, (ಎಂಬ ವಾಕ್ಯವೂ) (**ದಹರಂ ವಿಪಾಪಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ** ತತ್ರಾಪಿ ಎಂದು ಆ ಹೃದಯಪುಂಡರೀಕದಲ್ಲಿಯೂ ಅಲ್ಪವಾದ ಭೂತಾಕಾಶವಿದೆ. ಅದರೊಳಗಣ ಶೋಕವಿಲ್ಲದಿರುವ ಪರಬ್ರಹ್ಮನನ್ನು ಧ್ಯಾನಿಸಬೇಕು, ಎಂಬೀ ಸಮಾಖ್ಯಾವಾಕ್ಯವು ಕೂಡಲಾರದು. (ಸಮಾಖ್ಯಾ ವಾಕ್ಯದಲ್ಲಿ **ವಿಶೋಕಃ** ಶೋಕಲೇಶವಿಲ್ಲದವನು ಎಂದು ಇದ್ದಕಾರಣ **ತಸ್ಮಿನ್ ಯದಂತಃ** ಎಂಬಲ್ಲಿ ಆಕಾಶದೊಳಗಣನು ಪರಬ್ರಹ್ಮನೆಂದು ಸಿದ್ಧವಾಗುತ್ತದೆ.) (೨) (ಪರಬ್ರಹ್ಮನೇ ಎಂಬುದಕ್ಕೆ ಸ್ಪಷ್ಟಜ್ಞಾಪಕ ಹೇಳುತ್ತಾರೆ) ಸಹಸ್ರಶಿರಸ್ಸುಗಳುಳ್ಳವನು ಸಹಸ್ರಕಣ್ಣುಗಳುಳ್ಳವನು ಇಂತಹ ಶ್ರೀಹರಿಯನ್ನು (ಧ್ಯಾನಿಸುವೆವು.) ಇತ್ಯಾದಿಗಳೂ ಪರಬ್ರಹ್ಮನೆಂದು ಇಟ್ಟುಕೊಳ್ಳದಿದ್ದರೆ ಕೂಡಲಾರವು. (೩) **ತಸ್ಮಿನ್ಯದಂತಃ** ಎಂಬ ವಾಕ್ಯ ಶೇಷವು ಕೂಡುವುದಿಲ್ಲ, ಎಂದು ಹೇಳಿದುದನ್ನು ದೃಢೀಕರಿಸುತ್ತಾರೆ.) **ದಹರೋಽಸ್ಮಿನ್ನಂತರಾ ಆಕಾಶಃ** ಎಂಬಲ್ಲಿ ಆಕಾಶಶಬ್ದದಿಂದ ಪರಬ್ರಹ್ಮನನ್ನು ಇಟ್ಟುಕೊಂಡರೆ **ತಸ್ಮಿನ್ಯದಂತಃ** ಎಂಬಲ್ಲಿ ಶ್ರೀಹರಿಯೊಳಗೆ ಇರುವ ಇನ್ನೊಂದು ವಸ್ತುವನ್ನು ಧ್ಯಾನಿಸಬೇಕಾಗುವುದು. (**ತಮೇವೈಕಂ ಜಾನಥ** ಶ್ರೀಹರಿಯನ್ನೇ ತಿಳಿಯಿರಿ ಇತ್ಯಾದಿ ವೇದವಿರೋಧವು ಬರುವುದರಿಂದ) ಇನ್ನೊಬ್ಬರನ್ನು ಧ್ಯಾನಿಸಬೇಕೆಂಬುದು ಕೂಡಲಾರದು. ಮತ್ತು (ಶ್ರೀಹರಿಯಿಂದ ಬೇರೆಯಾದ ವಸ್ತುವನ್ನು ಧ್ಯಾನಿಸಬೇಕೆಂದಾದರೆ) **ತದ್ವಾವ ವಿಜಿಜ್ಞಾಸಿತವ್ಯಂ** ಎಂಬಲ್ಲಿ **ತದ್ವಾವ** ಬ್ರಹ್ಮನನ್ನೇ ಧ್ಯಾನಿಸಬೇಕೆಂದು, ಹೇಳಿದ್ದು ಕೂಡದೆ ಹೋಗುವುದು. (೪) (ಹೀಗೆ ಮೊದಲಿನ ಆಕಾಶಶಬ್ದಕ್ಕೆ ಭೂತಾಕಾಶವೆಂದು ಅರ್ಥವಾಗಬೇಕೆಂದು ಹೇಳಿ ಮೇಲಿನ ಆಕಾಶಶಬ್ದಕ್ಕೆ ಪರಬ್ರಹ್ಮನೆಂದು ಅರ್ಥ ಇಟ್ಟುಕೊಳ್ಳದಿದ್ದರೆ ಬಾಧಕ ಹೇಳುತ್ತಾರೆ.) ಮೇಲಿನ ಆಕಾಶಶಬ್ದಕ್ಕೆ ಪರಬ್ರಹ್ಮನೆಂದು ಅರ್ಥ ಇಟ್ಟುಕೊಳ್ಳದಿದ್ದರೆ ಸರ್ವಾಧಾರತ್ವ ಹೇಳಿದ್ದು ಇವನಿಗೆ ಮುದಿತನ ಇಲ್ಲ, ನಾಶವಿಲ್ಲ, ಪೂರ್ಣಗುಣಗಳಿವೆ, ಪೂರ್ಣಕಾಮಗಳಿವೆ, ಎಲ್ಲಾ ಇಷ್ಟಭೋಗಗಳೂ ಇವೆ, ಪಾಪಲೇಶವಿಲ್ಲದವನು, ಇದುಮೊದಲಾದುದು ಹೇಳಿದ್ದು ಯುಕ್ತವಾಗುವುದಿಲ್ಲ. (೫) (ಸರ್ವಾಧಾರತ್ವಮೊದಲಾದ ಲಿಂಗಬಲದಿಂದ ಮೇಲಿನ ಆಕಾಶಶಬ್ದದಿಂದ ಪರಬ್ರಹ್ಮನೆಂದು ಇಟ್ಟುಕೊಳ್ಳುವುದಾದರೆ ಮೊದಲಿನ ಆಕಾಶಶಬ್ದಕ್ಕೂ ಪರಬ್ರಹ್ಮನೆಂದೇ ಅರ್ಥ ಇಟ್ಟು

ಕೊಳ್ಳಬೇಕು. ಭೂತಾಕಾಶವೆಂದಲ್ಲ, ತಸ್ಮಿನ್ಯದಂತಃ ಅದರೊಳಗೆ ಇದ್ದುದನ್ನು ಉಪಾಸನೆಮಾಡಬೇಕೆಂದು ಹೇಳಿದ ಕಾರಣ ವಿರೋಧವು ಬರುತ್ತದೆಂದು ಹೇಳಕೂಡದು. **ಅಂತರ್ಹೃದಯ ಆಕಾಶಃ** ಎಂಬುದು ಪರಿಹಾರ ವಾಕ್ಯವಲ್ಲ. **ಉಭೇ ಅಸ್ಮಿನ್ ದ್ಯಾವಾಪೃಥಿವೀ** ಎಂಬುದೇ ಪರಿಹಾರವಾಕ್ಯವು. ಏವಂಚ ಆಕಾಶದಲ್ಲಿರತಕ್ಕ ದ್ಯಾವಾಪೃಥಿವ್ಯಾದಿಗಳನ್ನು ಉಪಾಸನೆ ಮಾಡಬೇಕೆಂದು ಪರಿಹಾರವಾಕ್ಯದ ಅಭಿಪ್ರಾಯವು. ಇತರವಾದುದನ್ನೇ ಧ್ಯಾನಿಸಿದರೆ ಬಾಧಕವು ಇಲ್ಲ. ತದ್ವಾವ ಎಂಬ ಅವಧಾರಣವಿರೋಧವೂ ಇಲ್ಲ ಎಂದರೆ) **ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ** ಎಂಬುದಕ್ಕೆ **ಯ ಏಷೋಽಂತರ್ಹೃದ. ಯ ಆಕಾಶಃ** ಎಂಬುದೇ ಪರಿಹಾರವು. **ಉಭೇ ಅಸ್ಮಿನ್ ದ್ಯಾವಾಪೃಥಿವೀ** ಇತ್ಯಾದಿಗಳು ಪರಿಹಾರವಾಕ್ಯಗಳಲ್ಲ. ಪರಂತು ಧ್ಯಾನಿಸಲ್ಪಡತಕ್ಕವನಲ್ಲಿ ಮಹಾಸಾಮರ್ಥ್ಯವಿದೆ, ಎಂದು ಹೇಳಿದ್ದು. (**ಉಭೇ ಅಸ್ಮಿನ್ ದ್ಯಾವಾಪೃಥಿವೀ** ಇತ್ಯಾದಿಗಳು ಪರಿಹಾರವಾಕ್ಯಗಳು ಏಕೆ ಆಗಲಾರವು ಎಂದರೆ) ದ್ಯಾವಾಪೃಥಿವ್ಯಾದಿಗಳೇ ಧ್ಯಾನಿಸಲ್ಪಡತಕ್ಕವುಗಳು ಆಗುವುದೇ ಇಲ್ಲ. ಏಕೆಂದರೆ ಪರಬ್ರಹ್ಮನನ್ನೇ ತಿಳಿಯಿರಿ, ಧ್ಯಾನಿಸಿರಿ, ಇತರರನ್ನು ಹೊಗಳುವ ಮಾತುಗಳನ್ನು ಬಿಟ್ಟುಬಿಡಿರಿ ಎಂದು ವೇದವಿದೆ. **ಉಭೇ ಅಸ್ಮಿನ್ ದ್ಯಾವಾಪೃಥಿವೀ** ಇತ್ಯಾದಿಗಳಲ್ಲಿದ್ದ ಉಭಶಬ್ದದಿಂದ ಮುಕ್ತರು, ಮತ್ತು ಅಮುಕ್ತರು ಇವರ ಸಮೂಹವನ್ನು ಇಟ್ಟುಕೊಳ್ಳಬೇಕು. ಆ ಅಭಿಪ್ರಾಯದಿಂದ ಹೇಳಿದ್ದು. ॥ ೪ ॥

**ಪೀ**—ಅಮುಕ್ತರಿಗೆಲ್ಲಾ ಆಧಾರನೆಂದು ಇಷ್ಟು ಮಾತ್ರ ಹೇಳುತ್ತದೆ. ಮುಕ್ತರಿಗೂ ಆಧಾರನೆಂದು ಹೇಳತಕ್ಕ ಜ್ಞಾಪಕವಿಲ್ಲದಿರುವುದರಿಂದ ಮುಕ್ತರಿಗೆ ಆಧಾರನೆಂದು ಹೇಳುವುದಿಲ್ಲ. ಆದುಕಾರಣ **ಉಭ** ಶಬ್ದಗಳೆಲ್ಲವೂ ವ್ಯರ್ಥಗಳೆಂದರೆ—

**ಭಾ**. ॥ (೧) **ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತೀತಿ ವಾಕ್ಯಶೇಷಾತ್ । ಅಸ್ಯೇತಿ ಸಂಸಾರಿಣಃ । ನ ಹಿ ಸಂಸಾರಿಣೋ ಮುಕ್ತಾ ಉಪಕಾರಕಾಃ । ಯದ್ಯಸ್ಯ ನೋಪಕಾರಕಂ ತತ್ತಸ್ಯ ನಾಸ್ತೀತ್ಯುಚ್ಯತೇಽನ್ಯಸ್ಯ ಸತ್ತ್ವೇಽಪಿ । ಯಥಾ ವಿತ್ತಾದಿ ॥ (೨) ಯಥಾಯೋಗ್ಯಮೇವೈನಂ ಭಗವಂತಂ ಪ್ರಜಾ ಮುಕ್ತಾ ಅನ್ವಾವಿಶಂತಿ ತಚ್ಛಾಸನಾನುಸಾರೇಣ ॥ (೩) ಯಂ ಯಂ ಕಾಮಂ ಕಾಮಯತೇ ತಂ ತಮಸ್ಮಾದೇವೋಪಜೀವಂತಿ ॥ (೪) ತದವಿದುಷಾಂ ಪುಣ್ಯಾನಿ ಕ್ಷಯಿಷ್ಣುಫಲಾನ್ಯೇವ ಭವಂತಿ ॥ (೫) ಏತಾಂಶ್ಚ ಸತ್ಯಾನ್ಕಾಮಾನ್ ಭಗವದೀಯಾನ್ ॥ ೫ ॥**

**ಅ** ॥ (೧) ಇನೇ ಮಂತ್ರದಲ್ಲಿದ್ದ **ಯಚ್ಚಾಸ್ಯೇ ಹಾಸ್ತಿಯಚ್ಚ ನಾಸ್ತಿ** ಎಂಬ ಶಿಷ್ಟವಾಕ್ಯದಿಂದ ಮುಕ್ತಾಮುಕ್ತರಿಬ್ಬರನ್ನು ಹೇಳುತ್ತದೆಂದು ತಿಳಿಯುತ್ತದೆ. (ಅದು ಹೇಗೆಂದರೆ) ಅಸ್ಯ ಎಂಬುದಕ್ಕೆ ಸಂಸಾರಿಗೆ ಎಂದರ್ಥವು. (ಮುಕ್ತರೂ ಸಂಸಾರಿಗಳಿಗಾಗಿಯೇ ಇರುವುದರಿಂದ **ಯಚ್ಚ ನಾಸ್ತಿ** ಸಂಸಾರಿಗಳಿಗೆ ಮುಕ್ತರು ಇಲ್ಲ ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ.) ಮುಕ್ತರು ಸಂಸಾರಿಗಳಿಗೆ ಉಪಕಾರಕರಲ್ಲ. (ಏವಂಚ ಮುಕ್ತರ ಸಮೂಹಗಳು ಉಪಕಾರಕವಾಗಿಲ್ಲದಿರುವುದರಿಂದ ಸಂಸಾರಿಗಳಿಗೆ ಮುಕ್ತರು ಇಲ್ಲವೆಂದು ಹೇಳಿದ್ದು.) (ವಸ್ತುವಿದ್ದರೂ ಉಪಕಾರಕವಾಗಿ ಇಲ್ಲವಾದರೆ ಆ ವಸ್ತುವೇ ಇಲ್ಲವೆಂಬ ವ್ಯವಹಾರವು ಎಲ್ಲಿ ಕಂಡದೆ ಎಂದರೆ) ಬೇರೆ ವಸ್ತುವು ಇದ್ದರೂ ಯಾವ ವಸ್ತುವು ಉಪಕಾರಕವಾಗಿ ಇರುವುದಿಲ್ಲವೋ, ಅದು ಇಲ್ಲವೆಂದು ಹೇಳಲ್ಪಡುತ್ತದೆ. ಉದಾ=ಒಬ್ಬನಿಗೆ ದ್ರವ್ಯವೊದಲಾದುದು ಉಪಕಾರಕವಾಗಿ ಇಲ್ಲವಾದರೆ–ದ್ರವ್ಯವಿದ್ದರೂ ಇಲ್ಲವೆಂದೇ ಹೇಳಲ್ಪಡುತ್ತದೆ. (೨) (ಇನೇ ಮಂತ್ರದಲ್ಲಿದ್ದ **ಯಥಾ ಹ್ಯೇವೇಹ ಪ್ರಜಾ ಅನ್ವಾವಿಶಂತಿ** ಎಂಬಲ್ಲಿದ್ದ ಯಥಾ ಶಬ್ದಕ್ಕೆ ಉಪಮಾನಾರ್ಥ ಎಂಬ ಪ್ರಸಿದ್ಧಿಯನ್ನು ಹೋಗಲಾಡಿಸಿ ಆ ವಾಕ್ಯದ ಅರ್ಥಹೇಳುತ್ತಾರೆ–) ತಾರತಮ್ಯದಿಂದಲೇ ಶ್ರೀಹರಿಯನ್ನು ಮುಕ್ತರು ಶ್ರೀಹರಿಯ ಆಜ್ಞಾನು

ಸಾರವಾಗಿ ಪ್ರವೇಶಿಸುತ್ತಾರೆ. (೩) (**ಯಂ ಯಮಂತಮಭಿಕಾಮಾಃ....ತಂ ತಮೇವೋಪಜೀ. ವಂತಿ** ಎಂಬಲ್ಲಿ ಮುಕ್ತರಿಗೆ ಸ್ವಾತಂತ್ರ್ಯವು ತೋರುತ್ತದೆ. ಅದನ್ನು ಹೋಗಲಾಡಿಸಿ ಯೋಗ್ಯಾರ್ಥಹೇಳುತ್ತಾರೆ—) ಮುಕ್ತರು ಯಾವ್ಯಾವ ದೇಶಾದಿಗಳನ್ನು ಹೊಂದಲಿಚ್ಛಿಸುತ್ತಾರೋ, ಅದದನ್ನೇ ಶ್ರೀಹರಿಯ ಅನುಗ್ರಹದಿಂದಲೇ ಆತನ ಆಜ್ಞಾನುಸಾರವಾಗಿಯೇ ಹೊಂದುತ್ತಾರೆ. (ಸ್ವತಂತ್ರವಾಗಿ ಹೊಂದಲಾರರು.) (೪) (೬ನೇ ಮಂತ್ರದಲ್ಲಿದ್ದ **ತದ್ಯಥೇಹ ಕರ್ಮಜಿತಃ** ಈ ವಾಕ್ಯವು ಅಮುಕ್ತರನ್ನೇ ಹೇಳುತ್ತದೆಂಬ ಪ್ರಸಿದ್ಧಿಯನ್ನು ಹೋಗಲಾಡಿಸಿ ಅರ್ಥಹೇಳುತ್ತಾರೆ—) (ಕರ್ಮಾರ್ಜಿತವಾದ ದೇಹಾದಿಗಳಿಗೆ ನಾಶವಿದ್ದಂತೆ) ಶ್ರೀಹರಿಯನ್ನು ತಿಳಿಯದವರ ಪುಣ್ಯಗಳು ನಾಶವುಳ್ಳ ಫಲವುಳ್ಳವುಗಳೇ ಆಗುತ್ತವೆ. (ಅಂದರೆ ಅಜ್ಞಾನಿಗಳ ಪುಣ್ಯಾದಿಗಳಿಂದ ಸಂಪಾದಿಸಿಕೊಳ್ಳಲ್ಪಟ್ಟ ಸ್ವರ್ಗಾದಿ ಲೋಕಗಳೂ ನಾಶಹೊಂದುತ್ತವೆ.) (೫) (೬ನೇ ಮಂತ್ರದಲ್ಲಿದ್ದ **ಏತಾಂಶ್ಚ ಸತ್ಯಾನ್ಕಾಮಾನ್** ಎಂಬುದಕ್ಕೆ ಅರ್ಥಹೇಳುತ್ತಾರೆ—) ಶ್ರೀ ಹರಿಯಲ್ಲಿರುವ ಸತ್ಯಕಾಮತ್ವ ಮೊದಲಾದ ಧರ್ಮಗಳನ್ನು (ತಿಳಿದವರ ಪುಣ್ಯಗಳು ನಾಶಹೊಂದುವುದಿಲ್ಲ.) ‖ ೫ ‖

ಟೀ—ಹೀಗೆ **ಬ್ರಹ್ಮಪುರವೆಂಬ** ಶಬ್ದವು ಪರಬ್ರಹ್ಮನನ್ನೂ ಜೀವರ ಶರೀರವನ್ನೂ ಹೇಳುತ್ತದೆಂದು ಹೇಳಿ, ಮರಳಿ ಅದನ್ನೇ ದೃಢೀಕರಿಸುವುದಕ್ಕಾಗಿ ಪ್ರಮಾಣಕೊಟ್ಟು ಆರು ಖಂಡಗಳ ಅರ್ಥ ಹೇಳುತ್ತಾರೆ-

**ಭಾ. ‖ (೧) ಬೃಹತ್ವಾತ್ಪೂರ್ಣಕಾಮತ್ವಾದ್ವಿಷ್ಣುರ್ಬ್ರಹ್ಮಪುರಾಭಿಧಃ । ತಸ್ಮಿಂಸ್ತಸ್ಯ ಪುರಂ ದೇಹಸ್ತಸ್ಮಿನ್ ಹೃದಯಮಾಸ್ಥಿತಂ ‖ (೨) ಹೃದಯಾಕಾಶಗೋ ವಿಷ್ಣುಸ್ತಸ್ಮಿನ್ಸರ್ವಮಿದಂ ಸ್ಥಿತಂ । ಸ ಸತ್ಯಕಾಮೋ ಭಗವಾನ್ಯದಿಷ್ಟಂ ತಸ್ಯ ತದ್ಭವೇತ್ ‖ (೩) ತ(ಅ)ಸ್ಮಿನ್ ಸಮಾಹಿತಾಃ ಕಾಮಾಃ ‖ (೪) ಸತ್ಯಾಃ ಪುಂಸಾಮಪಿ ಧ್ರುವಂ । ತಸ್ಯೈವ ಹ್ಯನುಸಾರೇಣ ಸತ್ಯತ್ವಂ ನಾನ್ಯಥಾ ಕ್ವಚಿತ್ ‖ ೧,೨,೩,೪,೫,೬ ‖ ಇತಿ ಪ್ರಥಮಃ ಖಂಡಃ ‖ ೧೦–೧ ‖೬‖**

ಅ ‖ (೧) ಶ್ರೀ ವಿಷ್ಣುವು ಸರ್ವಗುಣಪೂರ್ಣನಾದುದರಿಂದಲೂ, ಪೂರ್ಣಕಾಮನಾದುದರಿಂದಲೂ ಬ್ರಹ್ಮಪುರ ಎನಿಸುತ್ತಾನೆ ಅವನಲ್ಲಿ ಹೃದಯವು ಆಶ್ರಿತವಾಗಿದೆ. (ಅಂದರೆ ಶರೀರದಲ್ಲಿ ವ್ಯಾಪಿಸಿಕೊಂಡಿರುವ ಶ್ರೀಹರಿಯು ಹೃದಯದಲ್ಲಿರುತ್ತಾನೆ) ಆ ವಿಷ್ಣುವಿಗೆ ಜೀವರ ಶರೀರವು ಪುರದಂತಿರುವುದು. ಅದರಲ್ಲಿ ಹೃದಯವು ಇದೆ (೨) ಹೃದಯಾಕಾಶದಲ್ಲಿ ಶ್ರೀ ವಿಷ್ಣುವು ಇರುತ್ತಾನೆ. ಆತನಲ್ಲಿ ಮುಕ್ತರೂ, ಅಮುಕ್ತರೂ ಎಲ್ಲರೂ ಆಶ್ರಿತರಾಗಿರುತ್ತಾರೆ. ಶ್ರೀಹರಿಯು ಸತ್ಯಕಾಮನು. ಅವನಿಗೆ ಯಾವುದ್ಯಾವುದು ಇಷ್ಟವಾಗಿದೆಯೋ, ಅದೆಲ್ಲವೂ ಸಿಗುವುದು. (೩) ಶ್ರೀಹರಿಯು ಸತ್ಯಕಾಮನಾದುದರಿಂದ ಅವನಲ್ಲಿ ಎಲ್ಲಾ ಕಾಮ್ಯಗಳೂ ಸಮೃದ್ಧಗಳಾಗಿಯೇ ಇವೆ. (೪) ಮುಕ್ತರಾದವರ ಎಲ್ಲಾ ಕಾಮಗಳೂ ನಿಶ್ಚಯವಾಗಿಯೂ ಏನೂ ಕೆಡಕು ಇಲ್ಲದೆ ಸತ್ಯಗಳೇ ಆಗಿರುತ್ತವೆ, (ಮುಕ್ತರಾದವರ ಎಲ್ಲಾ ಕಾಮಗಳು ಸಫಲಗಳೂ ಸತ್ಯಗಳೂ ಆಗುವುದಾದರೆ ಮುಕ್ತರಿಗೂ ಶ್ರೀಹರಿಗೂ ವಿಶೇಷವು ಏನು? ಎಂದರೆ—) ಶ್ರೀಹರಿಯ ಕಾಮಗಳನ್ನನುಸರಿಸಿಯೇ ಮುಕ್ತರ ಕಾಮಗಳು ಸತ್ಯಗಳಾಗುತ್ತವೆ. ಎಲ್ಲಿಯೂ ಸರ್ವಥಾ ವ್ಯತ್ಯಾಸವಾಗಲಾರದು.
‖ ೧೦–೧ ‖ ‖ ೧ ‖

**ಒಂದನೇ ಖಂಡವು ಮುಗಿಯಿತು.**

## ೨ನೇ ಖಂಡವು

**ಟೀ—ಯಂ ಯಮಂತಮಭಿಕಾಮಾ ಭವಂತಿ** ಎಂದು ಮುಕ್ತರಿಗೆ ಹೇಳಿದ ಶ್ರೀಹರಿಯ ಪ್ರಸಾದಾಧೀನವಾದ ಸತ್ಯಕಾಮತ್ವವನ್ನೇ ವಿವರಿಸುತ್ತಾರೆ

**ಉ. || ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ ತೇನ ಪಿತೃಲೋಕೇನ ಸಂಪನ್ನೋ ಮಹೀಯತೇ ||೧||**

ಅ || ಬ್ರಹ್ಮಜ್ಞಾನಿಯಾದ ಮುಕ್ತನು ಪಿತೃಗಳಿಗೆ ವಿಷ್ಣುಲೋಕವಾಗಬೇಕು, ಆಮೇಲೆ ಪಿತೃಗಳ ಲೋಕವೇ ತನಗೆ ಆಗಬೇಕು, ಎಂದು ಪಿತೃಗಳ ಲೋಕವನ್ನು ಇಚ್ಛಿಸಿದರೆ ಅಥವಾ ಪಿತೃಗಳನ್ನು ನೋಡಬೇಕೆಂದು ಇಚ್ಛಿಸಿದರೆ ಆ ಮುಕ್ತನ ಇಚ್ಛಾಮಾತ್ರದಿಂದಲೇ ಮುಕ್ತನ ಪಿತೃಗಳು ಸಂಸಾರದಿಂದ ಬಿಡುಗಡೆ ಹೊಂದಿದವರಾಗಿ ಇದಿರು ನಿಲ್ಲುತ್ತಾರೆ. ಹೀಗೆ ಪಿತೃಗಳನ್ನು ನೋಡುವುದರಿಂದ (ಅಂದರೆ ತನ್ನ ಲೋಕಕ್ಕೆ ಬಂದಿರುವ ಪಿತೃಗಳಿಂದೊಡಗೂಡಿದವನಾಗಿ) ತನಗಿಂತ ಅಧಮರಾದ ಮುಕ್ತರಿಂದ ಪೂಜಿಸಿಕೊಳ್ಳಲ್ಪಡುತ್ತಾನೆ. || ೧ ||

**ಉ. || ಅಥ ಯದಿ ಮಾತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಮಾತರಃ ಸಮುತ್ತಿಷ್ಠಂತಿ ತೇನ ಮಾತೃಲೋಕೇನ ಸಂಪನ್ನೋ ಮಹೀಯತೇ || ೨ ||**

ಅ || *............ತಾಯಂದಿಯರನ್ನು ನೋಡಲಿಚ್ಛಿಸಿದರೆ............ || ೨ ||

**ಉ. || ಅಥ ಯದಿ ಭ್ರಾತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಭ್ರಾತರಃ ಸಮುತ್ತಿಷ್ಠಂತಿ ತೇನ ಭ್ರಾತೃಲೋಕೇನ ಸಂಪನ್ನೋ ಮಹೀಯತೇ || ೩ ||**

ಅ || ............ಸಹೋದರರನ್ನು ನೋಡಲಿಚ್ಛಿಸಿದರೆ............ || ೩ ||

**ಉ. || ಅಥ ಯದಿ ಸ್ವಸೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಸ್ವಸಾರಃ ಸಮುತ್ತಿಷ್ಠಂತಿ ತೇನ ಸ್ವಸೃಲೋಕೇನ ಸಂಪನ್ನೋ ಮಹೀಯತೇ || || ೪ ||**

ಅ || ............ಸಹೋದರಿಯರನ್ನು ನೋಡಲಿಚ್ಛಿಸಿದರೆ............ || ೪ ||

**ಉ. || ಅಥ ಯದಿ ಸಖಿಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಸಖಾಯಃ ಸಮುತ್ತಿಷ್ಠಂತಿ ತೇನ ಸಖಿಲೋಕೇನ ಸಂಪನ್ನೋ ಮಹೀಯತೇ || ೫ ||**

ಅ || ............ಸಖಿಯರನ್ನು ನೋಡಲಿಚ್ಛಿಸಿದರೆ............ || ೫ ||

**ಉ. || ಅಥ ಯದಿ ಗಂಧಮಾಲ್ಯಲೋಕಕಾಮೋ ಭವತಿ ಸಂಕಲ್ಪಾ-ದೇವಾಸ್ಯ ಗಂಧಮಾಲ್ಯೇ ಸಮುತ್ತಿಷ್ಠತಸ್ತೇನ ಗಂಧಮಾಲ್ಯಲೋಕೇನ ಸಂಪ-ನ್ನೋ ಮಹೀಯತೇ || ೬ ||**

* ಮುಂದೆಯೂ ಹೀಗೆಯೇ ಹಿಂದಿನಂತೆಯೇ ಅರ್ಥ ಇಟ್ಟುಕೊಳ್ಳಬೇಕು.

ಅ || ಸುಗಂಧ ಪುಷ್ಪಮಾಲಿಕೆಗಳನ್ನು ಭೋಗಿಸಬೇಕೆಂದು ಇಚ್ಛಿಸಿದರೆ..........ಗಂಧಮಾಲಿಕೆಗಳ ಭೋಗದಿಂದ........... || ೬ ||

**ಉ. || ಅಥ ಯದ್ಯನ್ನಪಾನಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯಾನ್ನಪಾನೇ ಸಮುತ್ತಿಷ್ಠತಸ್ತೇನಾನ್ನಪಾನಲೋಕೇನ ಸಂಪನ್ನೋ ಮಹೀಯತೇ || ೭ ||**

ಅ || ಅನ್ನ ಪಾನಗಳನ್ನು ಭೋಗಿಸಲಿಚ್ಛಿಸಿದರೆ..........ಅನ್ನ ಪಾನಗಳ ಭೋಗದಿಂದ........|| ೭ ||

**ಉ. || ಅಥ ಯದಿ ಗೀತವಾದಿತ್ರಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಗೀತವಾದಿತ್ರೇ ಸಮುತ್ತಿಷ್ಠತಸ್ತೇನ ಗೀತವಾದಿತ್ರಲೋಕೇನ ಸಂಪನ್ನೋ ಮಹೀಯತೇ || ೮ ||**

ಅ || ...........ಗಾನ ವಾದ್ಯಗಳನ್ನು ಕೇಳಲಿಚ್ಛಿಸಿದರೆ...........ಗಾನ ವಾದ್ಯಗಳನ್ನು ಕೇಳೋಣದರಿಂದ................ || ೮ ||

**ಉ. || ಅಥ ಯದಿ ಸ್ತ್ರೀಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಸ್ತ್ರಿಯಃ ಸಮುತ್ತಿಷ್ಠಂತಿ ತೇನ ಸ್ತ್ರೀಲೋಕೇನ ಸಂಪನ್ನೋ ಮಹೀಯತೇ || ೯ ||**

ಅ || ಸ್ತ್ರೀಯರನ್ನು ನೋಡಲಿಚ್ಛಿಸಿದರೆ...........ಸ್ತ್ರೀಯರನ್ನು ನೋಡುವುದರಿಂದ............|| ೯ ||

**ಉ. || ಯಂ ಯಮಂತಮಭಿಕಾಮೋ ಭವತಿ ಯಂ ಕಾಮಂ ಕಾಮಯತೇ ಸೋಽಸ್ಯ ಸಂಕಲ್ಪಾದೇವಾಸ್ಯ ಸಮುತ್ತಿಷ್ಠತಿ ತೇನ ಸಂಪನ್ನೋ ಮಹೀಯತೇ || ಇತಿ ದ್ವಿತೀಯಃ ಖಂಡಃ || ೧೦-೨ || || ೧೦ ||**

ಅ || ಯಾವಯಾವ ದೇಶವನ್ನು............ಯಾವಯಾವ ಕಾಮ್ಯವನ್ನು............

ವಿ -(1) ಇಲ್ಲಿ ಮುಕ್ತನ ಕೊನೆಯ ಜನ್ಮದಲ್ಲಿದ್ದ ಪಿತ್ರಾದಿಗಳನ್ನು ಇಟ್ಟುಕೊಳ್ಳಬೇಕು. ಅವರು ಮೋಕ್ಷಯೋಗ್ಯರೇ ಆಗಿರಬೇಕು. ಮೋಕ್ಷಕ್ಕೆ ಅಯೋಗ್ಯರಾಗಿದ್ದರೆ ಮುಕ್ತರಿಗೆ ಅವರನ್ನು ನೋಡಲಿಕ್ಕೆ ಇಚ್ಛೆಯೇ ಬರಲಾರದು. (2) ಗಂಧ ಮಾಲಿಕೆ ಮೊದಲಾದವು ಆ ಕಾಲದಲ್ಲಿದ್ದವುಗಳೇ ಮುಕ್ತರ ಇಚ್ಛೆಯಿಂದ ಸಿಗುತ್ತವೆ. ಇಲ್ಲಿ ಲೋಕಶಬ್ದದಿಂದ ನೋಡುವಿಕೆ, ಭೋಗ ಎಂಬ ಎರಡು ಅರ್ಥಗಳನ್ನು ಇಟ್ಟುಕೊಳ್ಳಬೇಕು. || ೧೦-೨ || || ೧೦ ||

ಪೀ—ಮುಕ್ತರ ಕಾಮವು ಸತ್ಯವೆಂದು ಹೇಳಿಯದೆ. ಇದರಿಂದ ಪಿತ್ರಾದಿಗಳನ್ನು ನೋಡಲಿಚ್ಛಿಸಿದರೆ—ಅದೆಲ್ಲವೂ ಸತ್ಯವೇ ಆಗುತ್ತದೆಂದು ಉಕ್ತವಾಯಿತು. ಅದನ್ನೇ ದೃಷ್ಟಾಂತ ಕೊಟ್ಟು ದೃಢೀಕರಿಸುತ್ತಾರೆ—

**ಭಾ. || ಯಥಾ ಬಿಂಬಾನುಸಾರೇಣ ಪ್ರತಿಬಿಂಬಪ್ರಕಾಶನಂ || ೧, ೨, ೩, ೪, ೫, ೬, ೭, ೮, ೯, ೧೦ || ಇತಿ ದ್ವಿತೀಯಃ ಖಂಡಃ || ೧೦-೨ || || ೧ ||**

ಅ ॥ ಬಿಂಬಧರ್ಮವನ್ನನುಸರಿಸಿ ಪ್ರತಿಬಿಂಬವು ಪ್ರಕಾಶಿಸುವಂತೆ ಶ್ರೀಹರಿಯ ಇಚ್ಛೆಯನ್ನನುಸರಿಸಿಯೇ ಮುಕ್ತರ ಎಲ್ಲಾ ಇಚ್ಛೆಗಳೂ ಸತ್ಯಗಳೇ ಆಗುತ್ತವೆ. ॥ ೧೦-೨ ॥ ॥ ೧ ॥

ಎರಡನೇ ಖಂಡವು ಮುಗಿಯಿತು.

## ೩ನೇ ಖಂಡವು

ಪೀ—ಮುಕ್ತರಿಗೆ ಹೇಳಿದ ಸತ್ಯಕಾಮತ್ವವು ಸಂಸಾರದಲ್ಲಿರುವಾಗಲೂ ಇರತಕ್ಕದ್ದೇ ಮೋಕ್ಷದಲ್ಲಿ ಪ್ರಕಟವಾಗುತ್ತದೆ. ಹಾಗಾದರೆ ಸಂಸಾರದಲ್ಲಿರುವಾಗ ತೋರದಿರಲಿಕ್ಕೆ ಪ್ರತಿಬಂಧಕವು ಯಾವುದೆಂದರೆ—

**ಉ. ॥ ತ ಇಮೇ ಸತ್ಯಾಃ ಕಾಮಾ ಅನೃತಾಪಿಧಾನಾಸ್ತೇಷಾಂ ಸತ್ಯಾನಾಂ ಸತಾಮನೃತಮಪಿಧಾನಂ ಯೋ ಯೋ ಹ್ಯಸ್ಯೇತಃ ಪ್ರೈತಿ ನ ತಮಿಹ ದರ್ಶನಾಯ ಲಭತೇ ॥ ೧ ॥**

ಅ ॥ ಮುಕ್ತಿಯೋಗ್ಯರಿಗೆ ಮೋಕ್ಷದಲ್ಲಿ ಪ್ರಕಟಗಳಾಗುವ ಕಾಮಗಳು ಸತ್ಯಗಳೇ ಆದರೂ, ಮೋಕ್ಷವಾಗುವುದಕ್ಕಿಂತ ಮೊದಲು ಅನೃತ (ಅನಾದ್ಯಜ್ಞಾನ)ದಿಂದ ಮರೆಮಾಡಲ್ಪಟ್ಟಿವೆ (ಆದಕಾರಣ ಸಂಸಾರದಲ್ಲಿ ವ್ಯಕ್ತಗಳಾಗುವುದಿಲ್ಲ.) (ಅದನ್ನು ವಿವರಿಸುತ್ತಾರೆ—) ಮೊದಲು ಇದ್ದ ಸತ್ಯಕಾಮಗಳೇ (ಅನೃತಾಪಿಧಾನಾಃ=) ಅನಾದಿಯಾದ ಅಜ್ಞಾನದಿಂದ ಮುಚ್ಚಲ್ಪಟ್ಟಿವೆ. ಅಮುಕ್ತರ ಸತ್ಯಕಾಮತ್ವಾದಿಗಳಿಗೆ ಅನಾದ್ಯಜ್ಞಾನವು ಮರೆಯಾಗಿರುವುದರಿಂದ ಮೋಕ್ಷವನ್ನು ಹೊಂದದಿರುವ ಮೋಕ್ಷ ಹೊಂದಲಿಕ್ಕೆ ಯೋಗ್ಯರಾದ ಜೀವರ ತಂದೆ-ತಾಯಿ ಮೊದಲಾದವರು ಈ ಲೋಕದಿಂದ ಮೃತರಾಗಿ ಪರಲೋಕಕ್ಕೆ ಹೋದಾಗ ಮೃತರಾದ ಪಿತ್ರಾದಿಗಳನ್ನು ಅಯುಕ್ತರು ನೋಡಲಿಚ್ಛಿಸಿದರೂ ನೋಡಲಿಕ್ಕೆ ಈಲೋಕದಲ್ಲಿ ಸಮರ್ಥರಾಗುವುದಿಲ್ಲ. (ಅಂದರೆ ಸಂಸಾರಿ ಜೀವರ ಸತ್ಯಕಾಮತ್ವಾದಿಗಳಿಗೆ ಅಜ್ಞಾನವು ಮರೆಯಾಗಿರುವುದರಿಂದ ಆ ಸಂಸಾರಿಗಳು ಸ್ವರ್ಗಸ್ಥರಾದ ಪಿತ್ರಾದಿಗಳನ್ನು ನೋಡಲಿಕ್ಕೆ ಸಮರ್ಥರಾಗುವುದಿಲ್ಲ.) ॥ ೧ ॥

ಪೀ—ಅನಾದಿಯಾದ ಅಜ್ಞಾನವು ನಿವೃತ್ತವಾದರೆ ಸರ್ವಾಭೀಷ್ಟವೂ ಸಿಗುತ್ತದೆ ಎನ್ನುತ್ತಾರೆ—

**ಉ. ॥ ಅಥ ಯೇ ಚಾಸ್ಯೇಹ ಜೀವಾ ಯೇ ಚ ಪ್ರೇತಾ ಯಚ್ಚಾನ್ಯದಿಚ್ಛನ್ನ ಲಭತೇ ಸರ್ವಂ ತದತ್ರ ಗತ್ವಾ ವಿಂದತೇಽತ್ರ ಹ್ಯಸ್ಯೈತೇ ಸತ್ಯಾಃ ಕಾಮಾ(ಅನೃತಾಪಿಧಾನಾ)ಸ್ತದ್ಯಥಾಽಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತ್ಯನೃತೇನ ಹಿ ಪ್ರತ್ಯೂಢಾಃ ॥ ॥ ೨ ॥**

ಅ ॥ ಮೋಕ್ಷವನ್ನು ಹೊಂದಲು ಯೋಗ್ಯರಾದ ಮೋಕ್ಷವನ್ನು ಹೊಂದದಿರುವ ಜೀವರ ಪಿತ್ರಾದಿಗಳು ಜೀವಿಸಿಕೊಂಡಿದ್ದರೂ, ಮರಣ ಹೊಂದಿದರೂ ಅವರನ್ನು ನೋಡಬೇಕೆಂದು ಇಚ್ಛಿಸಿದರೂ ಅಮುಕ್ತರು ಅವರ ದರ್ಶನಾದಿಗಳನ್ನು ಹೊಂದುವುದಿಲ್ಲ. ಬೇರೆ ಗಂಧಮಾಲ್ಯಾದಿಗಳನ್ನು ಇಚ್ಛಿಸಿದರೆ ಲೋಕದಲ್ಲಿ ಸಂಸಾರದಶೆಯಲ್ಲಿ ಹೊಂದುವುದಿಲ್ಲ. ಅವೆಲ್ಲವನ್ನು ಅಜ್ಞಾನ ನಿವೃತ್ತಿಯಾಗಿ ಮುಕ್ತನಾಗಿ ವೈಕುಂಠಮೊದಲಾದ ವಿಷ್ಣುಲೋಕಕ್ಕೆ ಹೋದಮೇಲೆ ಹೊಂದುತ್ತಾನೆ (ಹೇಗೆಂದರೆ) ಮುಕ್ತನಿಗೆ ಮೋಕ್ಷದಲ್ಲಿ ಸತ್ಯ

ಕಾಮಗಳು ಸ್ವರೂಪಭೂತವಾದವುಗಳು (ಪ್ರಕಟಗಳಾಗುತ್ತವೆ.) ಅಮುಕ್ತಿದಶೆಯಲ್ಲಿ ಸಂಸಾರದಲ್ಲಿರುವಾಗ ಸ್ವರೂಪಭೂತಗಳಾದ ಕಾಮಗಳು ಅನಾದ್ಯಜ್ಞಾನದಿಂದ ಮರೆಮಾಡಲ್ಪಟ್ಟಿವೆ. (ಹೃತ್ಪುಂಡರೀಕಾಕಾಶದಲ್ಲಿ ಪರಬ್ರಹ್ಮನು ಇದ್ದರೆ ಪ್ರತಿನಿತ್ಯ ಅಲ್ಲಿಗೆ ಹೋಗತಕ್ಕ ನಮಗೆ ಆತನು ಏಕೆ ಕಾಣುವುದಿಲ್ಲ? ಕಾಣದಿರುವುದರಿಂದ ಹೃತ್ಪದ್ಮಾಕಾಶದಲ್ಲಿ ಪರಬ್ರಹ್ಮನು ಇಲ್ಲ ಎಂಬ ಆಶಂಕೆಯನ್ನು ದೃಷ್ಟಾಂತ ಕೊಟ್ಟು ಪರಿಹರಿಸುತ್ತಾರೆ—) ಹಿರಣ್ಯನಿಧಿಯು (ದ್ರವ್ಯರಾಶಿಯು) ಹುಗಿಯಲ್ಪಟ್ಟರೂ ಹುಗಿದಿಟ್ಟ ಸ್ಥಳವನ್ನರಿಯದವರು ಅದರ ಮೇಲೆಮೇಲೆ ಸಂಚರಿಸುತ್ತಿದ್ದರೂ ಆ ದ್ರವ್ಯರಾಶಿಯನ್ನು ನೋಡುವುದಿಲ್ಲ, ತಿಳಿಯುವುದಿಲ್ಲ. ಹೀಗೆಯೇ ಸಂಸಾರದಲ್ಲಿರುವ ಎಲ್ಲಾ ಪ್ರಜೆಗಳೂ ಪ್ರತಿನಿತ್ಯವೂ ಸರ್ವಾಶ್ರಯನಾದ ಪರಬ್ರಹ್ಮನನ್ನು ಸುಷುಪ್ತಿಕಾಲದಲ್ಲಿ ಹೊಂದಿದರೂ ಅನಾದಿಯಾದ ಅಜ್ಞಾನದಿಂದ ಮುಚ್ಚಲ್ಪಟ್ಟಿರುವುದರಿಂದ (ಕೂಡಿರುವುದರಿಂದ) ತಿಳಿಯುವುದಿಲ್ಲ. || ೨ ||

ಪೀ — ಹೀಗೆ ಹೃದಯಾಕಾಶದಲ್ಲಿದ್ದ ಶ್ರೀಹರಿಯು ತೋರದಿರಲಿಕ್ಕೆ ಅಜ್ಞಾನವು ಕಾರಣವಾಗಿರುವುದರಿಂದ ಅದರ ಸಾಮರ್ಥ್ಯದಿಂದ ಹೃದಯಾಕಾಶದಲ್ಲಿ ಪರಬ್ರಹ್ಮನು ಇಲ್ಲವೆಂದು ಕಲ್ಪಿಸಕೂಡದೆನ್ನುತ್ತಾರೆ—

**ಉ. || ಸ ವಾ ಏಷ ಆತ್ಮಾ ಹೃದಿ ತಸ್ಯೈತದೇವ ನಿರುಕ್ತꣳ ಹೃದ್ಯಯಮಿತಿ ತಸ್ಮಾದ್ಧೃದಯಮಹರಹರ್ವಾ ಏವಂವಿತ್ ಸ್ವರ್ಗಂ ಲೋಕಮೇತಿ || || ೩ ||**

ಅ || ಆ ಈ ಪರಮಾತ್ಮನು ಹೃದಯಾಕಾಶದಲ್ಲಿರತಕ್ಕವನು ತೋರುವುದಿಲ್ಲ. (ಹೃತ್ಪುಂಡರೀಕಾಕಾಶದಲ್ಲಿದ್ದವನಿಗೆ ಆಕಾಶ ಎಂಬ ಒಂದು ನಾಮವು ಹೇಳಿಯದೆ. ಆತನಿಗೇನೇ ಇನ್ನೊಂದು ಹೆಸರನ್ನು ಹೇಳುತ್ತಾರೆ—) ಹೃತ್ಪುಂಡರೀಕಾಕಾಶದೊಳಗಣ ಶ್ರೀಹರಿಗೆ ಹೃದಯದಲ್ಲಿರುವುದರಿಂದ ಹೃದಯ ಎಂಬ ನಾಮಧೇಯವು, ಎಂಬುದೇ ಅವಯವಾರ್ಥವನ್ನು ಹೇಳುವುದು. ಆದುಕಾರಣ ಹೃದಯಂ ಎಂಬ ನಾಮಧೇಯವು. (ಹೃದಯನೆನಿಸಿದ ಶ್ರೀಹರಿಯನ್ನು ತಿಳಿದವನಿಗೆ ಫಲ ಹೇಳುತ್ತಾರೆ—) ನಿತ್ಯದಲ್ಲಿಯೂ ಹಿಂದೆ ಹೇಳಿದ ಪ್ರಕಾರ ಹೃದಯನೆನಿಸಿದ ವಿಷ್ಣುವನ್ನು ತಿಳಿದವನು ವೈಕುಂಠಕ್ಕೆ ಹೋಗುತ್ತಾನೆ. || ೩ ||

ಪೀ — ಜ್ಞಾನಸಾಮರ್ಥ್ಯದಿಂದಲೇ ಮುಕ್ತನಾಗುವುದಿಲ್ಲ. ಪರಂತು ಭಗವತ್ಪ್ರಸಾದದಿಂದಲೇ ಮುಕ್ತನಾಗುತ್ತಾನೆನ್ನುತ್ತಾರೆ—

**ಉ. || ಅಥ ಯ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತಸ್ಯ ಹ ವಾ ಏತಸ್ಯ ಬ್ರಹ್ಮಣೋ ನಾಮ ಸತ್ಯಮಿತಿ || ೪ ||**

ಅ || ಶ್ರೀಹರಿಯ ಪ್ರಸಾದವುಳ್ಳ ಜ್ಞಾನಿಯು ಅಂತಿಮ ಶರೀರದಿಂದ ಹೊರಟು ಜ್ಯೋತೀರೂಪನಾದ ಪರಬ್ರಹ್ಮನನ್ನು ಹೊಂದಿದವನಿಗೆ ಜ್ಞಾನಾನಂದ ಮೊದಲಾದ ಅಪ್ರಾಕೃತ ಶುದ್ಧ ಸ್ವರೂಪವು ಬರುತ್ತದೆ. (ಅಂದರೆ ತನ್ನ ಸ್ವರೂಪವು ಪ್ರಕಟವಾಗುತ್ತದೆ.) ಪರಂಜ್ಯೋತಿಃಶಬ್ದದಿಂದ ಹೇಳಲ್ಪಟ್ಟವನು ಪರಮಾತ್ಮನು. (ಶರೀರದಲ್ಲಿರುವ ಜೀವನಲ್ಲ.) ಎಂದು ಮಂತ್ರವನ್ನು ಕಂಡಿರುವ ರಮಾದೇವಿಯು ಹೇಳಿದಳು.

ಪರಂಜ್ಯೋತಿಃಶಬ್ದದಿಂದ ಹೇಳಲ್ಪಟ್ಟವನು ನಿತ್ಯಮುಕ್ತನು, ಯಾವಾಗಲೂ ಭಯವಿಲ್ಲದವನು, ಗುಣಪೂರ್ಣನು, ಎಂದೂ ಹೇಳಿದಳು. ಅಂತಹ ಬ್ರಹ್ಮನಿಗೆ ಸತ್ಯಂ ಎಂಬ ನಾಮವಾಗುತ್ತದೆ. ॥ ೪ ॥

ಪೀ— ಸತ್ಯಂ ಎಂಬ ನಾಮಧೇಯದ ಅರ್ಥ ಹೇಳುವುದಕ್ಕಾಗಿ ಅದರ ಅಕ್ಷರಗಳನ್ನು ಹೇಳುತ್ತಾರೆ—

**ಉ. ॥ ತಾನಿ ಹ ವಾ ಏತಾನಿ ತ್ರೀಣ್ಯಕ್ಷರಾಣಿ ಸತೀ-ಯಮಿತಿ ತದ್ಯತ್ಸತ್ತದಮೃತಮಥ ಯತ್ತಿ ತನ್ಮರ್ತ್ಯಮಥ ಯದ್ಯಂತೇನೋಭೇ ಯಚ್ಛತಿ ಯದನೇನೋಭೇ ಯಚ್ಛತಿ ತಸ್ಮಾದ್ಯಮಹರಹರ್ವಾ ಏವಂವಿತ್ ಸ್ವರ್ಗಲೋಕಮೇತಿ ॥ ಇತಿ ತೃತೀಯಃ ಖಂಡಃ ॥ ೧೧-೩ ॥ ॥ ೫ ॥**

ಅ ॥ ಸತ್ಯಂ ಎಂಬಲ್ಲಿ ಸತ್ ತಿ ಯಂ ಎಂದು ಮೂರು ಅಕ್ಷರಗಳು. ಮೂರು ಅಕ್ಷರಗಳಲ್ಲಿ ಸತ್ ಎಂಬ ಅಕ್ಷರವು ಮುಕ್ತರ ಸಮೂಹವನ್ನೂ, ತಿ ಎಂಬ ಅಕ್ಷರವು ಸಂಸಾರಿ ಜೀವರನ್ನೂ ಹೇಳುತ್ತದೆ. ಯಂ ಎಂಬ ಅಕ್ಷರದಿಂದ ಮುಕ್ತ ಅಮುಕ್ತ ಇವರ ಸಮೂಹಗಳನ್ನು ಪ್ರೇರಿಸುವವನು ಎಂಬ ಅರ್ಥವು ಸಿಗುತ್ತದೆ. ಮುಕ್ತಾಮುಕ್ತರನ್ನು ಪ್ರೇರಿಸುವುದರಿಂದ ಶ್ರೀಹರಿಗೆ ಯಂ ಯತ್ ಎಂದು ಹೆಸರು. (ಹೀಗೆ ತಿಳಿದವನಿಗೆ ಫಲಹೇಳುತ್ತಾರೆ—) ಸತ್ಯನೆಂದರೆ ಮುಕ್ತಾಮುಕ್ತರಿಗೆ ನಿಯಾಮಕನೆಂದು ಸದಾ ತಿಳಿದವನು ವೈಕುಂಠಕ್ಕೆ ಹೋಗುತ್ತಾನೆ. ॥ ೧೦—೩ ॥ ॥ ೫ ॥

ಪೀ—ಮುಕ್ತರಿಗೆ ಮೋಕ್ಷದಲ್ಲಿ ಸತ್ಯಕಾಮತ್ವವಿದ್ದರೆ ಮುಕ್ತರ ಧರ್ಮಗಳು ಅವರ ಸ್ವಭಾವವು ಆಗಿರುವುದರಿಂದ ಸಂಸಾರದಲ್ಲಿ ಇರುವಾಗಲೂ ಸತ್ಯಕಾಮತ್ವವು ಬರಬೇಕಾಗುವುದು ಎಂದರೆ—

**ಭಾ. ॥ (೧) ತಸ್ಮಾದ್ಯೇ ಮುಕ್ತಿಯೋಗ್ಯಾಃ ಸ್ಯುಸ್ತೇಷಾಂ ಕಾಮಾಃ ಪುರಾಽಪಿ ತು । ಸತ್ಯಾಃ ಸಂತಸ್ತದಜ್ಞಾನಾನ್ನ ದೃಶ್ಯಂತೇ ತಥಾಽಖಿಲಾಃ ॥ (೨) ಅಜ್ಞಾನಮನೃತಂ ಪ್ರೋಕ್ತಮೃಗತಾವಿತಿ ಧಾತುತಃ ॥ (೩) ತಸ್ಮಾದ್ದ್ರಷ್ಟುಂ ಯದಿಷ್ಟಂ ಸ್ಯಾತ್ತದ್ದೃಷ್ಟಿನಿಯಮೋ ನ (ತ್ತದ್ದ್ರಷ್ಟುಂ ನಿಯಮೇನ) ತು । ಅಮುಕ್ತಸ್ಯ ॥ (೪) ಹರೇರ್ಲೋಕಂ ಮುಕ್ತೋ ಗತ್ವಾ ಹಿ ಪಶ್ಯತಿ ॥ (೫) ಅಜ್ಞತ್ವಾದೇವ ಸುಪ್ತೌ ತು ನಿತ್ಯಂ ಯಾಂತೋಽಪಿ ಮಾಧವಂ । ನೈವ ಪಶ್ಯಂತ್ಯಸೌ ವಿಷ್ಣುರ್ಹೃದಯಂ ನಾಮ ಹೃದ್ಗತೇಃ ॥ ೧ ॥**

ಅ ॥ (೧) ಯಾವ ಜೀವರು ಮೋಕ್ಷ ಹೊಂದಲಿಕ್ಕೆ ಯೋಗ್ಯರೋ ಅವರ ಕಾಮಗಳು ಸಂಸಾರದಲ್ಲಿಯೂ ಸತ್ಯಗಳೇ ಆದರೂ ಶ್ರೀಹರಿಯ ಜ್ಞಾನವನ್ನು ಹೊಂದದಿರುವುದರಿಂದ ಮೋಕ್ಷದಲ್ಲಿ ಎಲ್ಲಾ ಕಾಮಗಳನ್ನು ಹೊಂದುವಂತೆ ಸಂಸಾರದಲ್ಲಿ ಎಲ್ಲಾ ಕಾಮಗಳನ್ನು ಹೊಂದುವುದಿಲ್ಲ. (೨) ಋ ಎಂಬ ಧಾತುವು ಗತಿ=ಜ್ಞಾನ ಎಂಬ ಅರ್ಥದಲ್ಲಿದೆ ಋತಂ=ಜ್ಞಾನವು ಜ್ಞಾನಕ್ಕೆ ವಿರುದ್ಧವಾದ ಅಜ್ಞಾನವು ಅನೃತ ಎನಿಸುತ್ತದೆ. (೩) (ಯೋ ಯೋ ಹ್ಯಸ್ಯೇತಃ ಪ್ರೈತಿ ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಮುಕ್ತಿಯೋಗ್ಯರಾದವರ ಸತ್ಯಕಾಮತ್ವವು ಸಂಸಾರದಲ್ಲಿರುವಾಗ ಅಜ್ಞಾನದಿಂದ ಮರೆಮಾಡಲ್ಪಟ್ಟಿರುವುದರಿಂದ ಅಮುಕ್ತರಿಗೆ ಯಾವುದನ್ನಾದರೂ ನೋಡಲಿಕ್ಕೆ ಇಚ್ಛಿಸಿದರೆ ನಿಯಮದಿಂದ ಅವುಗಳ ದರ್ಶನವು ಆಗುವುದಿಲ್ಲ. (೪) (೨ನೇ ಮಂತ್ರದಲ್ಲಿದ್ದ ಸರ್ವಂ ತದತ್ರ ಎಂಬುದಕ್ಕೆ ಅರ್ಥ ಹೇಳುತ್ತಾರೆ—) (ಅಪರೋಕ್ಷಜ್ಞಾನಿಯು) ಮುಕ್ತನಾಗಿ ವೈಕುಂಠಲೋಕಕ್ಕೆ ಹೋಗಿ ನೋಡಲಿಕ್ಕೆ ಯಾವುದು ಇಷ್ಟವಾಗುತ್ತದೋ ತನ್ನ ಇಷ್ಟದಂತೆ ಅವೆಲ್ಲವನ್ನು ನೋಡುತ್ತಾನೆ. (೫) ೨ನೇ ಮಂತ್ರದಲ್ಲಿದ್ದ ಇಮಾಃ ಸರ್ವಾಃ

....ಪ್ರತ್ಯೂಢಾಃ ಎಂಬ ವಾಕ್ಯದ ತಾತ್ಪರ್ಯ ಹೇಳುತ್ತಾರೆ-) ಅನಾದಿಯಾದ ಅಜ್ಞಾನದಿಂದ ಕೂಡಿರುವುದರಿಂದಲೇ ಸುಷುಪ್ತಿಕಾಲದಲ್ಲಿ ಪ್ರತಿನಿತ್ಯವೂ ಶ್ರೀಹರಿಯನ್ನು ಹೊಂದುತ್ತಿರುವವರಾದರೂ ಆ ಶ್ರೀಹರಿಯನ್ನು ನೋಡುವುದಿಲ್ಲ. ಸರ್ವರ ಹೃದಯದಲ್ಲಿದ್ದುದರಿಂದ ವಿಷ್ಣುವು ಹೃದಯನೆನಿಸುತ್ತಾನೆ. ॥ ೧ ॥

ಟೀ—೫ನೇ ಮಂತ್ರದಲ್ಲಿದ್ದ ಅಹರಹರ್ವಾ ಏವಂ ಎಂಬ ವಾಕ್ಯದ ಅರ್ಥ ಹೇಳುತ್ತಾರೆ—

**ಭಾ. ॥ (೧) ಏವಂ ಹೃದಯನಾಮಾನಂ ವಿಷ್ಣುಂ ಜಾನನ್ ನಿತ್ಯಶಃ । ವಿಷ್ಣುಲೋಕಗತೇಃ ಪುಣ್ಯಮಾಪ್ತ್ವಾ ವಿಷ್ಣುಂ ವ್ರಜೇತ್ತಥಾ ॥ (೨) ಯಸ್ಯ ಸಮ್ಯಕ್ಪ್ರಸಾದೋಽಸ್ತಿ ವಿಷ್ಣೋರೇವ ಸ ಉಚ್ಯತೇ । ಸಂಪ್ರಸಾದಃ ಸ ಉತ್ಥಾಯ ಶರೀರಾತ್ಪ್ರಾಪ್ಯ ಕೇಶವಂ ॥ ಯಥಾ ಸ್ವರೂಪಸ್ತು ಭವೇತ್ ॥ (೩) ಯಂ ಪ್ರಾಪ್ಯಾಸೌ ಸ್ವರೂಪತಾಂ । ಆಪ್ನೋತಿ ಸ ಪರೋ ಹ್ಯಾತ್ಮಾ ಭಗವಾನಿಂದಿರಾಪತಿಃ । ಇತ್ಯಾಹ ಸಾ ರಮಾದೇವೀ ಪಶ್ಯಂತೀ ಪರಮಂ ಪದಂ ॥ (೪) ಸದಿತ್ಯಮೃತಧರ್ಮಾಣೋ ಮುಕ್ತಾಃ ಶ್ರೀರಪಿ ಚೇರಿತಾಃ । ತೀತ್ಯುಕ್ತಾ ಮರ್ತ್ಯಧರ್ಮಾಣಸ್ತೇಷಾಂ ನಿಯಮನಾದ್ಧರಿಃ । ಸತ್ಯಮಿತ್ಯುಚ್ಯತೇ ಸದ್ಭಿಃ ॥ ೧,೨,೩,೪,೫ ॥ ಇತಿ ತೃತೀಯಃ ಖಂಡಃ ॥ ೧೦–೩ ॥** ॥ ೨ ॥

ಅ ॥ (೧)ಹೀಗೆ **ಹೃದಯ**ನೆಂದು ಹೆಸರುಳ್ಳ ವಿಷ್ಣುವನ್ನು ನಿತ್ಯದಲ್ಲಿಯೂ ತಿಳಿದವನು ಸ್ವರೂಪಭೂತರಮಣ ಜ್ಞಾನಸ್ವರೂಪನಾದುದರಿಂದ **ಸ್ವರ್ಗ** ಎನಿಸಿದ ವಿಷ್ಣುವಿನ **ಲೋಕಕ್ಕೆ ಹೋಗಿ** ಅಲ್ಲಿದ್ದು ತಮ್ಮ ತಮ್ಮ ಸ್ವರೂಪದ ಆವಿರ್ಭಾವಕ್ಕೆ ಅನುಗುಣವಾದ ಪುಣ್ಯ ಸಂಪಾದನೆಮಾಡಿ **ಚತುರ್ಮುಖಬ್ರಹ್ಮನೊಡನೇ** ಶ್ರೀವಿಷ್ಣುವನ್ನು ಹೊಂದುವನು. (೨) (**ಯ ಏಷ ಸಂಪ್ರಸಾದಃ** ಎಂಬ ೪ನೇ ಮಂತ್ರದ ಅರ್ಥಹೇಳುತ್ತಾರೆ—) ಯಾವ ಜ್ಞಾನಿಗೆ ವಿಷ್ಣುವಿನ ಚೆನ್ನಾಗಿ ಪ್ರಸಾದವಾಗುತ್ತದೋ. ಅಂತಹ ಭಗವದನುಗ್ರಹವುಳ್ಳ ಜ್ಞಾನಿಯು ಈ ಶರೀರದಿಂದ ಹೊರಟು ಶ್ರೀಹರಿಯನ್ನು ಹೊಂದಿ ಜ್ಞಾನ ಆನಂದ ಮೊದಲಾದ ಶುದ್ಧ ಸ್ವರೂಪವುಳ್ಳವನಾಗುತ್ತಾನೆ (೩) (**ಏಷ ಆತ್ಮಾ** ಎಂಬ ವಾಕ್ಯದ ಅರ್ಥಹೇಳುತ್ತಾರೆ—) ಯಾವ ಶ್ರೀಪರಬ್ರಹ್ಮನನ್ನು ಹೊಂದಿ ಜೀವರು ಶುದ್ಧಸ್ವರೂಪವನ್ನು ಹೊಂದುತ್ತಾರೋ, ಅಂತಹ ಆತ್ಮನು ಲಕ್ಷ್ಮೀಪತಿಯಾದ ಶ್ರೀಹರಿಯು, ಎಂದು ಭಗವತ್ಸ್ವರೂಪವನ್ನು ನೋಡುತ್ತಿರುವ ಲಕ್ಷ್ಮೀದೇವಿಯು ಹೇಳಿದಳು (೪) (೪ನೇ ಮಂತ್ರದಲ್ಲಿದ್ದ **ತಸ್ಯ ಹ ವಾ ಏತಸ್ಯ** ಎಂಬುದಕ್ಕೆ ಅರ್ಥಹೇಳುತ್ತಾರೆ.) **ಸತ್ಯಂ** ಎಂಬಲ್ಲಿದ್ದ **ಸತ್** ಎಂಬುದರಿಂದ ನಾಶವಾಗದ ಜ್ಞಾನಾದಿಧರ್ಮಗಳುಳ್ಳ ಮುಕ್ತರೂ ಲಕ್ಷ್ಮೀದೇವಿಯೂ ಹೇಳಲ್ಪಡುತ್ತಾರೆ **ತಿ** ಎಂಬುದರಿಂದ ನಾಶವಾಗುವ ಧರ್ಮಗಳುಳ್ಳ ಸಂಸಾರಿ ಜೀವರು ಹೇಳಲ್ಪಡುತ್ತಾರೆ. ಅವರೆಲ್ಲರನ್ನು ಶ್ರೀಹರಿಯು ಪ್ರೇರಿಸುವುದರಿಂದ **ಸತ್ಯ**ನೆಂದು ಸಜ್ಜನರಿಂದ ಹೇಳಲ್ಪಡುತ್ತಾನೆ. ॥೧೦–೩॥॥೨॥

**ಮೂರನೇ ಖಂಡವು ಮುಗಿಯಿತು.**

## ೪ನೇ ಖಂಡವು

ಟೀ-ಹೃತ್ಪದ್ಮದಲ್ಲಿರತಕ್ಕ ಶ್ರೀಹರಿಯನ್ನು ಧ್ಯಾನಿಸುವುದಕ್ಕಾಗಿ ಇನ್ನೊಂದು ಮಹಿಮೆ ಹೇಳುತ್ತಾರೆ-

**ಉ. ॥ ಅಥ ಯ ಆತ್ಮಾ ಸ ಸೇತುರ್ವಿಧೃತಿರೇಷಾಂ ಲೋಕಾನಾಮಸಂಭೇದಾಯ ನೈತꣳ ಸೇತುಮಹೋರಾತ್ರೇ ತರತೋ ನ ಜರಾ ನ ಮೃತ್ಯುರ್ನ ಶೋಕೋ ನ ಸುಕೃತಂ ನ ದುಷ್ಕೃತ** ॥ ೧ ॥

ಅ || ಹೃತ್ಪದ್ಮದೊಳಗಣ ಶ್ರೀಹರಿಯು ಈ ಲೋಕಗಳೆಲ್ಲವೂ ಒಟ್ಟು ಸೇರಿ ಒಂದಾಗಬಾರದೆಂಬುದಕ್ಕಾಗಿಯೂ, ಒಡೆದು ಹೋಗಬಾರದೆಂಬುದಕ್ಕಾಗಿಯೂ ಆಶ್ರಯನಾಗಿರುತ್ತಾನೆ. ಪ್ರಮಾಣ ಪ್ರಸಿದ್ಧಗಳಾದ ಎಲ್ಲಾ ಲೋಕಗಳನ್ನು ವಿಶೇಷವಾಗಿ ಧರಿಸಲು ಸಮರ್ಥನು. (ಅಂದರೆ ಶ್ರೀಹರಿಯು ಲೋಕಗಳಿಗೆ ಆಶ್ರಯನಾಗದಿದ್ದರೆ ಲೋಕಗಳೆಲ್ಲವೂ ಆಧಾರವಿಲ್ಲದೆ ಒಂದು ಕಡೆ ಒಟ್ಟು ಸೇರಬೇಕಾದೀತು. ಅಥವಾ ಒಡೆದು ಹೋಗುವವು) ಈ ಸರ್ವಾಶ್ರಯನಾದ ಶ್ರೀಹರಿಯನ್ನು ಅಹೋರಾತ್ರಾಭಿಮಾನಿಗಳು ಮೀರಿ ಹೋಗುವುದಿಲ್ಲ. (ಅವುಗಳನ್ನೇ ಮೀರಿ ಇರುತ್ತಾನೆ. ಅಹೋರಾತ್ರಗಳು ಮಾಡುವ ವಿಕಾರಗಳು ಶ್ರೀಹರಿಗೆ ಉಂಟಾಗುವುದಿಲ್ಲ.) (ಅದನ್ನೇ ವಿವರಿಸುತ್ತಾರೆ.) ಮುದಿತನವೂ, ಮರಣವೂ, ಶೋಕವೂ, ಸುಕೃತದುಷ್ಕೃತಗಳೂ ಶ್ರೀಹರಿಯನ್ನು ಹೊಂದುವುದಿಲ್ಲ. || ೧ ||

**ಉ. || ಸರ್ವೇ ಪಾಪ್ಮಾನೋಽತೋ ನಿವರ್ತಂತೇಽಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ ತಸ್ಮಾದ್ವಾ ಏತꣳ ಸೇತುಂ ತೀರ್ತ್ವಾಽಂಧಃ ಸನ್ನನಂಧೋ ಭವತಿ ವಿದ್ಧಃ ಸನ್ನವಿದ್ಧೋ ಭವತ್ಯುಪತಾಪೀ ಸನ್ನನುಪತಾಪೀ ಭವತಿ ತಸ್ಮಾದ್ವಾ ಏತꣳ ಸೇತುಂ ತೀರ್ತ್ವಾಽಪಿ ನಕ್ತಮಹರೇವಾಭಿನಿಷ್ಪದ್ಯತೇಽಸಕೃದ್ವಿಭಾತೋ ಹ್ಯೇವೈಷ ಬ್ರಹ್ಮಲೋಕಃ || ೨ ||**

ಅ || ಎಲ್ಲಾ ಪಾಪಗಳೂ ಪರಮಾತ್ಮನಿಂದ ನಿತ್ಯದಲ್ಲಿಯೂ ನಿವೃತ್ತಗಳೇ ಆಗಿವೆ. (ಅಂದರೆ ಸರ್ವ ಪಾಪರಹಿತನು.) ಬ್ರಹ್ಮರೂಪ ಸರ್ವಾಶ್ರಯನಾದ ಶ್ರೀ ಹರಿಯು ಪಾಪಲೇಶರಹಿತನೆಂದು ಪ್ರಸಿದ್ಧನು. (ಮುಕ್ತನು ಹೀಗೆ ಅಲ್ಲ ಎನ್ನುತ್ತಾರೆ—) ಶ್ರೀಹರಿಯು ಪಾಪಲೇಶರಹಿತನಾದುದರಿಂದಲೇ ಆತನ ಅನುಗ್ರಹದಿಂದಲೇ ಸರ್ವಾಶ್ರಯನಾದ ಶ್ರೀಹರಿಯನ್ನು ಹೊಂದಲಿಕ್ಕೆ ಸಂಸಾರವನ್ನು ದಾಟಿ ಮೊದಲು ಅಜ್ಞಾನದಿಂದೊಡಗೂಡಿದವನಾಗಿದ್ದು ಆಮೇಲೆ ಅಜ್ಞಾನವಿಲ್ಲದವನಾಗುತ್ತಾನೆ. ಮೊದಲು ಸಂಸಾರದಲ್ಲಿ ಬೇರೆಯವರ ಕೆಟ್ಟ ಮಾತುಗಳೆಂಬ ಬಾಣಗಳಿಂದ ಹೊಡೆಯಲ್ಪಟ್ಟವನು ಅಂದರೆ ಕೆಟ್ಟ ಮಾತುಗಳಿಂದ ಸಂತಾಪಗೊಂಡವನು ಮುಕ್ತನಾದಾಗ ಕೆಟ್ಟಮಾತುಗಳಿಂದ ಸಂತಾಪ ಇಲ್ಲದವನಾಗುತ್ತಾನೆ. ಮೊದಲು ರೋಗವುಳ್ಳವನು ಮೇಲೆ ರೋಗವಿಲ್ಲದವನಾಗುತ್ತಾನೆ (ಹೀಗೆಯೇ ಸಮಸ್ತಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ-)ಹೀಗೆಮುಕ್ತನು ಪಾಪರಹಿತನಾಗಿ ಭಗವತ್ಪ್ರಸಾದದಿಂದಲೇ ಶ್ರೀಹರಿಯನ್ನು ಹೊಂದುವುದಕ್ಕಾಗಿ ಸಂಸಾರವನ್ನು ದಾಟುತ್ತಾನೆ. ಅಂತಹವನಿಗೆ ರಾತ್ರಿಯೂಕೂಡ ಹಗಲೇ ಆಗುತ್ತದೆ. (ಹೇಗೆಂದರೆ-) ವಿಷ್ಣುಲೋಕವು ಅಥವಾ ಶ್ರೀಹರಿಯು ಯಾವಾಗಲೂ ಪ್ರಕಾಶಿಸಿಕೊಂಡೇ ಇರುತ್ತಾನೆ. || ೨ ||

ಪೀ—ಹೀಗೆ ಭಗವತ್ಸ್ವರೂಪವನ್ನು ತಿಳಿದವನಿಗೆ ಫಲಹೇಳುತ್ತಾರೆ—

**ಉ. || ತದ್ಯ ಏವೈತಂ ಬ್ರಹ್ಮಲೋಕಂ ಬ್ರಹ್ಮಚರ್ಯೇಣಾನುವಿಂದಂತಿ ತೇಷಾಮೇವೈಷ ಬ್ರಹ್ಮಲೋಕಸ್ತೇಷಾꣳ ಸರ್ವೇಷು ಲೋಕೇಷು ಕಾಮಚಾರೋ ಭವತಿ || ಇತಿ ಚತುರ್ಥಃ ಖಂಡಃ || ೧೦-೪ || || ೩ ||**

ಅ || ಅಧಿಕಾರಿಗಳಲ್ಲಿ ಯಾವ ಅಧಿಕಾರಿಗಳು ಪೂರ್ಣನೂ ಸರ್ವಾಶ್ರಯನೂ ಆದ ಶ್ರೀವಿಷ್ಣುವನ್ನು ಮನಸ್ಸು ವಚನ ಕರ್ಮಗಳಿಂದ ವೇದದಲ್ಲಿ ಹೇಳಿದ ಪ್ರಕಾರ ಅನುಷ್ಠಾನ ಮಾಡಿ ತಿಳಿಯುತ್ತಾರೋ, ಹೊಂದುತ್ತಾರೋ. ಅವರಿಗೇನೇ ವೈಕುಂಠ ಲೋಕವು ಸಿಗುವುದು. ಅಥವಾ ಅವರನ್ನೇ ಬ್ರಹ್ಮನು

ಕೃಪೆಯಿಂದ ನೋಡುತ್ತಾನೆ. ತಂತಮಗೆ ಯೋಗ್ಯಗಳಾದ ಎಲ್ಲಾ ಲೋಕಗಳಲ್ಲಿ ಅವರಿಗೆ ಸ್ವೇಚ್ಛಾನುಸಾರ ಸಂಚಾರವಾಗುತ್ತದೆ || ೧೦—೪ || || ३ ||

ಪೀ—ಸೇತುಃ ವಿಧೃತಿಃ ಎಂಬ ಶಬ್ದಗಳ ಅರ್ಥ ಹೇಳುತ್ತಾರೆ—

**ಭಾ. || (೧) ಸೇತುಶ್ಚಾಪಿ ವಿಧಾರಣಾತ್ | ಸಿತಮಸ್ಮಿನ್ ಜಗತ್ಸರ್ವಮಿತಿ ಸೇತುರಿ-ತೀರಿತಃ || (೨) ಏತಂ ಸೇತುಂ ಪ್ರತಿ ಪುಮಾನಸ್ಯತ್ತೀತ್ವಾರ್ ಹ್ಯದೋಷವಾನ್ || (೩) ಸ ಪ್ರಾಪ್ಯೋ ಬ್ರಹ್ಮಚರ್ಯೇಣ, ಮನೋವಾಕ್ಕರ್ಮಭಿಸ್ತು ಯತ್ | ಚರಣಂ ಬ್ರಹ್ಮಣಿ ಪರೇ ಬ್ರಹ್ಮಚರ್ಯಂ ಹಿ ತತ್ ಸ್ಮೃತಂ || (೪) ತೇನೈವ ಬ್ರಹ್ಮಚರ್ಯೇಣ ಭವೇಯುರ್ಬ್ರಹ್ಮ-ಲೋಕಗಾಃ ||(೫) ಏತೇಷಾಂ ಬ್ರಹ್ಮಲೋಕಃ ಸ್ಯಾತ್ಪರಂ ಬ್ರಹ್ಮೈವ ಲೋಕನಾತ್ | ಬ್ರಹ್ಮ ಲೋಕ ಇತಿ ಪ್ರೋಕ್ತಂ ತಸ್ಯ ಲೋಕೋಽಪಿ ಕಥ್ಯತೇ || ೧, ೨, ೩ || ಇತಿ ಚತು-ರ್ಥಃ ಖಂಡಃ || ೧೦—೪ || || ೧ ||**

ಅ || (೧) (ಸರ್ವಾಶ್ರಯನಾದುದರಿಂದ ಶ್ರೀಹರಿಯು) **ಸೇತು**ವೆಂದೂ, ಸರ್ವಧಾರಕನಾದುದರಿಂದ **ವಿಧೃತಿಃ** ಎಂದೂ ಎನ್ನಿಸುತ್ತಾನೆ. ಅಥವಾ ಶ್ರೀಹರಿಯಲ್ಲಿ ಸರ್ವಜಗತ್ತು ಆಶ್ರಿತವಾಗಿರುವುದರಿಂದ ಶ್ರೀಹರಿಯು **ಸೇತು** ಎನ್ನಿಸುತ್ತಾನೆ. (೨) (೨ನೇ ಮಂತ್ರದಲ್ಲಿದ್ದ **ಏತಂ ಸೇತುಂ ತೀರ್ತ್ವಾ** ಎಂಬುದರ ಅರ್ಥ ಹೇಳುತ್ತಾರೆ—) ಸರ್ವಾಶ್ರಯನಾದ ಶ್ರೀಹರಿಯ ಸಮೀಪಕ್ಕೆ ಹೋಗಲಿಕ್ಕೆ (ಸಂಸಾರಾದಿಗಳನ್ನು) ದಾಟಿದ ಮೇಲೆ ದೋಷವಿಲ್ಲದವನಾಗುತ್ತಾನೆ. (೩) (೩ನೇ ಮಂತ್ರದಲ್ಲಿದ್ದ **ತದ್ಯ ಏವೈತಂ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಆ ಶ್ರೀಹರಿಯನ್ನು ಬ್ರಹ್ಮಚರ್ಯದಿಂದ ಹೊಂದಬೇಕು. ಮನಸ್ಸು ವಚನ **ಕರ್ಮ**ಗಳಿಂದ ಸರ್ವೋತ್ತಮನಾದ ಪರಬ್ರಹ್ಮನನ್ನು ತಿಳಿದುಕೊಳ್ಳುವುದೇ **ಬ್ರಹ್ಮಚರ್ಯ**ವೆನಿಸುತ್ತದೆ. **(೪)** ಅಂತಹ ಪರಬ್ರಹ್ಮಜ್ಞಾನರೂಪವಾದ ಬ್ರಹ್ಮಚರ್ಯದಿಂದಲೇ ಅಪರೋಕ್ಷಜ್ಞಾನಿಗಳು ಪರಬ್ರಹ್ಮನ **ಲೋ**ಕಕ್ಕೆ ಹೋಗುತ್ತಾರೆ. (೫) (೩ನೇ ಮಂತ್ರದಲ್ಲಿದ್ದ **ತೇಷಾಮೇವೈಷಃ** ಎಂಬ ವಾಕ್ಯಕ್ಕೆ ಅರ್ಥ ಹೇಳುತ್ತಾರೆ—) ಜ್ಞಾನಿಗಳಿಗೆ ಬ್ರಹ್ಮಲೋಕವಾಗುವುದು. ಅಂದರೆ ಪರಬ್ರಹ್ಮನೇ ತನ್ನ ಲೋಕದಲ್ಲಿರತಕ್ಕವರನ್ನು ನೋಡುವುದರಿಂದ **ಬ್ರಹ್ಮಲೋಕ**ನೆನಿಸುತ್ತಾನೆ. ಅಥವಾ ಜ್ಞಾನಿಗಳಿಗೆ ಆ ಪರಬ್ರಹ್ಮನ **ದರ್ಶನ**ವಾಗುತ್ತದೆ. ಅಥವಾ ಪರಬ್ರಹ್ಮನ ವೈಕುಂಠಾದಿ ಲೋಕವು ಪ್ರಾಪ್ತವಾಗುತ್ತದೆ. ಈ ಅಭಿಪ್ರಾ**ಯದಿಂ**ದಲೂ ಬ್ರಹ್ಮಲೋಕವೆಂದು ಹೇಳಲ್ಪಡುತ್ತದೆ. || ೧೦—೪ || || ೧ ||

**ನಾಲ್ಕನೇ ಖಂಡವು ಮುಗಿಯಿತು.**

## ೫ನೇ ಖಂಡವು

ಪೀ—ಜ್ಞಾನಕ್ಕೆ ಶ್ರವಣಾದಿರೂಪವಾದ ಬ್ರಹ್ಮಚರ್ಯವು ಸಾಧನವೆಂದಾದರೆ **ವಿವಿದಿಷಂತಿ ಯಜ್ಞೇನ** ಇತ್ಯಾದಿ ಪ್ರಮಾಣಗಳಿಂದ ಯಾಗಾದಿಗಳು ಜ್ಞಾನಸಾಧನಗಳೆಂದು ಹೇಳಿದ್ದು ಹೇಗೆ? ಎಂದರೆ—ಅವೆಲ್ಲವೂ ಬ್ರಹ್ಮಚರ್ಯವೇ ಎನ್ನುತ್ತಾರೆ—

**ಉ. || ಅಥ ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವ ಯೋ ಜ್ಞಾತಾ ತಂ(ಅನು)ವಿಂದತೇಽಥ ಯದಿಷ್ಟಮಿತ್ಯಾ**

**ಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವೇಷ್ಟ್ವಾಽಽತ್ಮಾನಮನುವಿಂದತೇ ॥ ೧ ॥**

ಅ ॥ ಜ್ಞಾನವೇ ಮೋಕ್ಷಕ್ಕೆ ಸಾಧನವೆಂದು ಪ್ರಸಿದ್ಧವಾಗಿರುವುದರಿಂದ ವಿದ್ವಾಂಸರು ಯಾವುದನ್ನು ಯಜ್ಞವೆಂದು ಹೇಳುತ್ತಾರೋ, ಅದು ಬ್ರಹ್ಮಚರ್ಯ (ಜ್ಞಾನ)ವೇ, ಮವಸ್ಸು ವಚನ ಕರ್ಮಗಳಿಂದ ಬ್ರಹ್ಮಜ್ಞಾನಕ್ಕೆ ಸಾಧನವಾದುದೇ. (ಹೇಗೆಂದರೆ **ಯಾತಿ ಜ್ಞ ಮಿತಿ** ಶ್ರೀಹರಿಯನ್ನು ತಿಳಿದುಕೊಳ್ಳುವುದು ಎಂಬ ವ್ಯುತ್ಪತ್ತಿಯಿಂದ **ಯಜ್ಞ**ವೆಂದರೆ ಜ್ಞಾನವು, ಎಂದು ತೋರಿಸುತ್ತಾರೆ-) **ಯಜ್ಞಃ** ಎಂಬಲ್ಲಿದ್ದ **ಯಃ** ಎಂದರೆ ತಿಳಿಯುವವನು. ಏವಂಚ ಯಾವ ಬ್ರಹ್ಮಚರ್ಯದಿಂದಲೇ ಜ್ಞಾನರೂಪನಾದ ಶ್ರೀಹರಿಯನ್ನು ತಿಳಿಯುತ್ತಾನೋ, ಆ ಜ್ಞಾನವು ಬ್ರಹ್ಮಚರ್ಯವು. ಯಾವುದನ್ನು ಇಷ್ಟಿಯೆಂದು ಹೇಳುತ್ತಾರೋ. ಅದೂ ಬ್ರಹ್ಮಚರ್ಯವೇ. (ಹೇಗೆಂದರೆ ಪರಮಾತ್ಮನ ಜ್ಞಾನಕ್ಕಾಗಿ ಬ್ರಹ್ಮಚರ್ಯದಿಂದ ಶ್ರೀಹರಿಯನ್ನು ಇಚ್ಛಿಸುತ್ತಾನೆ. ಆಮೇಲೆ ಶ್ರೀಹರಿಯನ್ನು ಹೊಂದುತ್ತಾನೆ. ಅದುಕಾರಣ ಮೋಕ್ಷಕ್ಕೆ ಕಾರಣವಾದ ಜ್ಞಾನವೂ ಬ್ರಹ್ಮಚರ್ಯವೆನಿಸುತ್ತದೆ.) ॥ ೧ ॥

**ಉ. ॥ ಅಥ ಯತ್ಸತ್ತ್ರಾಯಣಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವ ಸತ ಆತ್ಮನಸ್ತ್ರಾಣಂ ವಿಂದತೇಽಥ ಯನ್ಮೌನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದ್ಬ್ರಹ್ಮಚರ್ಯೇಣ ಹ್ಯೇವಾತ್ಮಾನಮನುವಿದ್ಯ ಮನುತೇ ॥ ೨ ॥**

ಅ ॥ ಯಾವುದನ್ನು **ಸತ್ತ್ರಾಯಣ** ಎನ್ನುತ್ತಾರೋ, ಅದೂ ಬ್ರಹ್ಮಚರ್ಯವೇ. ಯಾವ ಬ್ರಹ್ಮಚರ್ಯದಿಂದ ಸತ್ ಎನಿಸಿದ ಶ್ರೀರಿಯಿಂದ (ತ್ರಾಣಂ=) ರಕ್ಷಣೆಯನ್ನು (ಆಯತೇ=) ಹೊಂದುತ್ತಾನೋ, ಆ ಬ್ರಹ್ಮಚರ್ಯವು ಸತ್ತ್ರಾಯಣವೆನಿಸುತ್ತದೆ. (ಇದರಿಂದ ಸತಃ ತ್ರಾ ಅಯತೇ ಎಂದು ಸತ್ತ್ರಾಯಣಂ ಎಂದ ಕ್ತವಾಯಿತು.) ಯಾವುದನ್ನು ಮೌನವೆನ್ನುತ್ತಾರೋ, ಅದೂ ಬ್ರಹ್ಮಚರ್ಯವೇ. ಬ್ರಹ್ಮಚರ್ಯದಿಂದಲೇ ಶ್ರೀಹರಿಯನ್ನು ಶ್ರವಣ ಮನನಾದಿಗಳಿಂದ ಪರೋಕ್ಷವಾಗಿ ತಿಳಿಯುತ್ತಾನೆ. ಆಮೇಲೆ ಪ್ರತ್ಯಕ್ಷವಾಗಿ ತಿಳಿದು ಮೋಕ್ಷದಲ್ಲಿ ಧ್ಯಾನಿಸುತ್ತಾನೆ (ಇದರಿಂದ ಮನುತೇ ಅನೇನ= ಬ್ರಹ್ಮಚರ್ಯದಿಂದ ತಿಳಿಯುವುದರಿಂದ ಮೌನಂ= ಬ್ರಹ್ಮಚರ್ಯವು ಎಂದು ಸೂಚಿತವಾಯಿತ.) ॥ ೨ ॥

**ಉ. ॥ ಅಥ ಯದನಾಶಕಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದೇಷ ಹ್ಯಾತ್ಮಾ ನ ನಶ್ಯತಿ ಯಂ ಬ್ರಹ್ಮಚರ್ಯೇಣಾನುವಿಂದತೇಽಥ ಯದರಣ್ಯಾಯನಮಿತ್ಯಾಚಕ್ಷತೇ ಬ್ರಹ್ಮಚರ್ಯಮೇವ ತದರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ ತದೈರಂ ಮದೀಯಂ ಸರಸ್ತದಶ್ವತ್ಥಃ ಸೋಮಸವನಸ್ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಂ ಹಿರಣ್ಮಯಂ ॥ ೩ ॥**

ಅ ॥ ಯಾವುದನ್ನು ಅನಾಶಕಾಯನವೆನ್ನುತ್ತಾರೋ, ಅದೂ ಬ್ರಹ್ಮಚರ್ಯವೇ. ಯಾವ ಶ್ರೀಹರಿಯನ್ನು ಬ್ರಹ್ಮಚರ್ಯದಿಂದ ತಿಳಿಯುತ್ತಾನೋ, ಈ ಆತ್ಮನು ಜ್ಞಾನಿಗೆ ನಾಶನಾಗುವುದಿಲ್ಲ. (ಅಂದರೆ ಜ್ಞಾನಿಯನ್ನು ಆತ್ಮನು ಬಿಡುವುದಿಲ್ಲ. ಆತನಿಗೆ ಇಷ್ಟವನ್ನು ಕೊಡುತ್ತಾನೆ. **ತಸ್ಯಾಹಂ ನ ಪ್ರಣಶ್ಯಾಮಿ**

ಎಂದು ಗೀತೆಯಲ್ಲಿ ಹೇಳಿರುವರು.) (ಇದರಿಂದ ಅನಾಶಕಂ=ನಾಶವಿಲ್ಲದ ಪರಬ್ರಹ್ಮನನ್ನು ಅನೇನ=ಬ್ರಹ್ಮಚರ್ಯದಿಂದ ಅಯತೇ=ಹೊಂದುತ್ತಾನೆ. ಹೀಗೆ ಅನಾಶಕಾಯನಂ ಎನಿಸುತ್ತದೆಂದು ಸೂಚಿತವಾಯಿತು.) ಅರಣ್ಯಾಯನವೆಂದು ಯಾವುದನ್ನು ಹೇಳುತ್ತಾರೋ, ಅದೂ ಬ್ರಹ್ಮಚರ್ಯವೇ. (ಇಲ್ಲಿಯೂ ಅರ ಣ್ಯ ಎಂದು ಹೆಸರುಳ್ಳ ಎರಡು ಸಮುದ್ರಗಳನ್ನು ಯಾವ ಬ್ರಹ್ಮಚರ್ಯದಿಂದ ಅಯತೇ=ಹೊಂದುತ್ತಾನೋ, ಅದು ಅರ ಣ್ಯ ಅಯನ ಎಂದು ತಿಳಿಯಬೇಕು.) (ಅರ ಣ್ಯಗಳೆಂದರೆ ಯಾವುವು? ಎಲ್ಲಿರುವವುಗಳು? ಬ್ರಹ್ಮಚರ್ಯದಿಂದ ಯಾರ ಪ್ರಾಪ್ತಿಯಾಗುತ್ತದೆ? ಎಂದರೆ—) ಸುಖಜ್ಞಾನರೂಪಗಳಾಗಿರುವುದರಿಂದ ಅರ ಣ್ಯ ಎಂದು ಹೆಸರುಳ್ಳ ಚಿದಾನಂದರಸರೂಪಗಳಾದ ಅಮೃತಮಯಗಳಾದ ಸಮುದ್ರಗಳು. ಅಥವಾ ಸಮುದ್ರ ಸದೃಶಗಳಾದ ಸರೋವರಗಳೆರಡು ಭೂಲೋಕದಿಂದ ಅಥವಾ ಮೇರುವಿಗಿಂತ ಮೂರನೇದ್ದಾದ ದ್ಯು ಎನಿಸಿದ ಶ್ವೇತದ್ವೀಪದಲ್ಲಿ ಇರುತ್ತವೆ. (ಮರಳಿ ಪರಬ್ರಹ್ಮಲೋಕದ ಮಹಿಮೆ ಹೇಳುತ್ತಾರೆ -) ಆ ಶ್ವೇತದ್ವೀಪದಲ್ಲಿ ಈರಾ ಎಂಬ ವೃಕ್ಷಸಂಬಂಧಿಯಾದ ಮದ್ಯಪೂರ್ಣವಾದ ಲಕ್ಷ್ಮ್ಯಾತ್ಮಕವಾದ ಮದ(ಹರ್ಷ)ವನ್ನು ಹುಟ್ಟಿಸುವ ಸರೋವರವೂ ಇದೆ. ಆ ಲೋಕದಲ್ಲಿ ಅಮೃತವನ್ನು ಸುರಿಸುತ್ತಿರುವ ಅಶ್ವತ್ಥವೃಕ್ಷಸಮೂಹವು ಇದೆ ಪರಬ್ರಹ್ಮನಿಗೆ ಅಪರಾಜಿತ ಎಂದು ಹೆಸರುಳ್ಳ ಪಟ್ಟಣವಿದೆ. ಆ ಚಿದ್ರೂಪ ಪಟ್ಟಣದಲ್ಲಿಯೂ ಪರಬ್ರಹ್ಮನ ಪರಿಮಾಣಕ್ಕೆ ಸಮಾನಪರಿಮಾಣವುಳ್ಳ ಚಿದ್ರೂಪವಾದ ಸುವರ್ಣಮಯವಾದ ಪರ್ಯಂಕ(ಹಾಸಿಗೆ)ಇದೆ ॥೩॥

ಪೀ—ಹೀಗೆ ಅರ ಣ್ಯ ಎಂಬ ಅಮೃತಸಮುದ್ರಗಳನ್ನು ಹೇಳಿ, ಈಗ ಬ್ರಹ್ಮಚರ್ಯವು ಅವುಗಳಿಗೆ ಆಶ್ರಯವಾಗಿದೆ, ಎನ್ನುತ್ತಾ ಫಲಾಂತರವನ್ನು ಹೇಳುತ್ತಾರೆ—

**ಉ. ॥ ತದ್ಯ ಏವೈತಾವರಂ ಚ ಣ್ಯಂ ಚಾರ್ಣವೌ ಬ್ರಹ್ಮಲೋಕೇ ಬ್ರಹ್ಮಚರ್ಯೇಣಾನುವಿಂದಂತಿ ತೇಷಾಮೇವೈಷ ಬ್ರಹ್ಮಲೋಕಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥ ಇತಿ ಪಂಚಮಃ ಖಂಡಃ ॥ ॥ ೧೦-೫ ॥ ॥ ೪ ॥**

ಅ ॥ ಅದುಕಾರಣ ಯಾವ ಅಧಿಕಾರಿಗಳು ಪರಬ್ರಹ್ಮನ ಲೋಕದಲ್ಲಿರತಕ್ಕ ಅರ ಣ್ಯ ಎಂಬ ಸಮುದ್ರಗಳನ್ನು ಬ್ರಹ್ಮಚರ್ಯದಿಂದ ಹೊಂದುತ್ತಾರೋ, ಅವರಿಗೇನೇ ಪರಬ್ರಹ್ಮನ ಲೋಕವು ಸಿಗುತ್ತದೆ. ಅವರಿಗೇನೇ ಎಲ್ಲಾ ಲೋಕಗಳಲ್ಲಿಯೂ ಸ್ವೇಚ್ಛಾನುಸಾರ ಸಂಚಾರವಾಗುತ್ತದೆ. ॥ ೧೦-೫ ॥ ॥ ೪ ॥

ಪೀ—ಅಥ ಯದ್ಯಜ್ಞಃ ಎಂಬ ೧ನೇ ಮಂತ್ರ ಮೊದಲುಗೊಂಡು ೩ನೇ ಮಂತ್ರದಲ್ಲಿದ್ದ ಅರಃ ಎಂಬ ಪರ್ಯಂತ ವಾಕ್ಯಗಳ ಅರ್ಥ ಹೇಳುತ್ತಾರೆ—

**ಭಾ. ॥ (೧) ಯಜ್ಞ ಇಷ್ಟಂ ಚ ಸತ್ತ್ರಂ ಚ ಮೌನಂ ಚಾನಶನಂ ತಥಾ ॥ (೨) ಪರಸ್ಯ ಬ್ರಹ್ಮಣೋ ಜ್ಞಾನಂ ಸರ್ವಮೇತದುದೀರಿತಂ । ಪರಸ್ಯ ಬ್ರಹ್ಮಣೋ ಲೋಕೇ ಶ್ವೇತದ್ವೀಪಾಭಿಧೇ ಪರೇ । ಅರಣ್ಯೌ ಚಾ(ಅರೋ ಣ್ಯಶ್ಚಾ)ರ್ಣವೌ ದಿವ್ಯೌ ಚಿದಾನಂದರಸಾತ್ಮಕೌ ॥ (೩) ಯಾವಾನುಚ್ಚಃ ಸ್ವರ್ಗಲೋಕಸ್ತಾವಾನುಚ್ಚತಯಾ ಸ ಚ । ಶ್ವೇತದ್ವೀಪೋ ದಿವಿಷ್ಟೋಽತಃ ॥ (೪) ತತ್ರ ಮದ್ಯಂ ಸರೋವರಂ । ಸರ್ವಭೋಜ್ಯಾತ್ಮಕಂ ದಿವ್ಯಂ ತತ್ರಾಶ್ವತ್ಥಾಃ ಸುಧಾಸ್ರವಾಃ ॥ (೫) ತತ್ರ ವಿಷ್ಣೋಃ ಪುರಂ ದಿವ್ಯಮಪರಾಜಿತನಾಮಕಂ ॥ (೬) ವಿಮಿತಾಖ್ಯಂ ಚ ಪರ್ಯಂಕಂ ವಿಷ್ಣೋರ್ಮಾನೇನ ಸಮ್ಮಿತಂ । ಚಿತ್ಸುವರ್ಣಮಯಂ**

**ದಿವ್ಯಂ ಲಕ್ಷ್ಮೀಸ್ತತ್ತತ್ಸ್ವರೂಪಿಣೀ । ಸ ಶ್ವೇತದ್ವೀಪಗೋ ವಿಷ್ಣುಃ ಪರ್ಯಂಕಬ್ರಹ್ಮನಾಮಕಃ ॥ ೧, ೨, ೩, ೪ ॥ ಇತಿ ಪಂಚಮಃ ಖಂಡಃ ॥ ೧೦—೫ ॥ ॥ ೧ ॥**

**ಅ** ॥ (೧) (1) **ಯಾತಿ** ಜ್ಞಂ ಅನೇನ=ಬ್ರಹ್ಮಚರ್ಯದಿಂದ ಜ್ಞಾನರೂಪನಾದ ಶ್ರೀಹರಿಯನ್ನು ಪ್ರತ್ಯಕ್ಷವಾಗಿ ತಿಳಿಯುತ್ತಾನೆ, ಎಂಬ ವ್ಯುತ್ಪತ್ತಿಯಿಂದ **ಯಜ್ಞಃ** (2) ಇಚ್ಛತ್ಯನೇನ=ಬ್ರಹ್ಮಚರ್ಯದಿಂದ ಶ್ರೀಹರಿಯ ಸಮೀಪವನ್ನು ಹೊಂದಲಿಚ್ಛಿಸುವುದರಿಂದ **ಇಷ್ಟಂ** (3) ಸತಃ ತ್ರಾಣಂ ಯಸ್ಮಾತ್=ಬ್ರಹ್ಮಚರ್ಯದಿಂದ ಶ್ರೀಹರಿಯಿಂದ ರಕ್ಷಣೆಯನ್ನು ಇಚ್ಛಿಸುವುದರಿಂದ **ಸತ್ರಾಂ** (4) ಮನುತೇ ಅನೇನ=ಬ್ರಹ್ಮಚರ್ಯದಿಂದ ಪ್ರತ್ಯಕ್ಷವಾಗಿ ತಿಳಿಯುವುದರಿಂದ **ಮೌನಂ** (5) ಅನಶಂ ನೀಯತೇ ಅನೇನ=ಇದರಿಂದ ಪರೋಕ್ಷವಾಗಿ ತಿಳಿಯುವುದರಿಂದ **ಅನಶನಂ** (6) ಹಾಗೆಯೇ ಅರಣ್ಯೌ ಅಯತೇ ಅನೇನ=ಬ್ರಹ್ಮಚರ್ಯದಿಂದ ಅರಣ್ಯ ಎಂಬ ಅಮೃತಸಮುದ್ರಗಳನ್ನು ಹೊಂದುವುದರಿಂದ **ಅರಣ್ಯಾಯನಂ** ಇವೆಲ್ಲವೂ ಬ್ರಹ್ಮಚರ್ಯವು. (ಅಂದರೆ ಪರಬ್ರಹ್ಮನ ಜ್ಞಾನವೆಂದು ಹೇಳಲ್ಪಟ್ಟಿದೆ.) (೨) (೩ನೇ ಮಂತ್ರದಲ್ಲಿದ್ದ **ಬ್ರಹ್ಮಲೋಕೇ** ಎಂಬುದಕ್ಕೆ ಅರ್ಥ **ಹೇಳುತ್ತಾರೆ**—) ಪರಬ್ರಹ್ಮನ ಲೋಕವಾದ ಶ್ವೇತದ್ವೀಪ ಎಂಬ ಸರ್ವೋತ್ಕೃಷ್ಟವಾದ ಲೋಕದಲ್ಲಿ **ಅರಣ್ಯ** ಎಂಬ ದಿವ್ಯಗಳಾದ ಚಿದಾನಂದರಸಸ್ವರೂಪಗಳಾದ ಲಕ್ಷ್ಮ್ಯಾತ್ಮಕಗಳಾದ ಸಮುದ್ರಗಳೆರಡು ಇವೆ (೩) (ಬ್ರಹ್ಮಲೋಕಶಬ್ದದಿಂದ ಶ್ವೇತದ್ವೀಪವನ್ನು ಇಟ್ಟುಕೊಳ್ಳಬೇಕೆಂದು ಹೇಳಿದ್ದು ಯುಕ್ತವಲ್ಲ, ಏಕೆಂದರೆ—**ತೃತೀಯಸ್ಯಾಮಿತೋ ದಿವಿ** ಎಂದು ಬ್ರಹ್ಮಲೋಕವು ಇಂದ್ರಸದನವೆಂಬ ಮೂರನೇ ದ್ಯುಲೋಕದಲ್ಲಿದೆ ಎಂದು ಹೇಳಿದೆ. ಶ್ವೇತದ್ವೀಪವಾದರೂ ಕ್ಷೀರಸಮುದ್ರದ ಮಧ್ಯದಲ್ಲಿರುತ್ತದೆಂದು ಹೇಳಿದೆ. ಆದಕಾರಣ ೩ನೇ ದ್ಯುಲೋಕದಲ್ಲಿದೆ ಎಂಬುವುದು ಕೂಡಲಾರದೆಂದರೆ—) ಸ್ವರ್ಗಲೋಕವು ಎಷ್ಟು ಎತ್ತರದಲ್ಲಿದೆಯೋ. ಅಷ್ಟು ಎತ್ತರವಾಗಿ ಕ್ಷೀರಸಮುದ್ರದಲ್ಲಿದ್ದ ಶ್ವೇತದ್ವೀಪವೂ ಇದೆ. ಮೂರನೇ ದ್ಯುಲೋಕ ಸಮವಾಗಿದೆ. (೪) (೩ನೇ ಮಂತ್ರದಲ್ಲಿದ್ದ **ತದೈರಂ ಮದೀಯಂ ಸರಃ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ—) ಆ ಶ್ವೇತದ್ವೀಪದಲ್ಲಿ ಸಮಸ್ತಭೋಜ್ಯಸ್ವರೂಪವೂ ದಿವ್ಯವೂ ಸುರಾಮಯವೂ ಮದಕಾರಿಯೂ ಆಗಿರುವ ಸರೋವರವು ಇದೆ. ಅಲ್ಲಿ ಅಮೃತವನ್ನು ಸುರಿಸುತ್ತಿರುವ ಅಶ್ವತ್ಥವೃಕ್ಷಗಳಿವೆ (೫) (**ತದಪರಾಜಿತಾ ಪೂಃ** ಎಂಬ ವಾಕ್ಯಕ್ಕೆ ಅರ್ಥ **ಹೇಳುತ್ತಾರೆ**—) ಆ ಶ್ವೇತದ್ವೀಪದಲ್ಲಿ ಶ್ರೀವಿಷ್ಣುವಿಗೆ ಅಪರಾಜಿತ ಎಂದು ಹೆಸರುಳ್ಳ ದಿವ್ಯವಾದ ಪಟ್ಟಣವಿದೆ (೬) (**ಪ್ರಭುವಿಮಿತಂ** ಎಂಬ ವಾಕ್ಯದ ಅರ್ಥ **ಹೇಳುತ್ತಾರೆ**—)ವಿಮಿತ ಎಂದು ಹೆಸರುಳ್ಳ ಹಾಸಿಗೆಯು ವಿಷ್ಣುವಿನ ಪರಿಮಾಣಕ್ಕೆ ಸಮವಾದುದು, ಚಿದ್ರೂಪವು, ಸುವರ್ಣಮಯವು, ದಿವ್ಯವಾದುದು. (ಅದು ಹೇಗೆಂದರೆ—) ಆಯಾಯ ವಸ್ತುಗಳ ಸ್ವರೂಪವುಳ್ಳವಳು ಲಕ್ಷ್ಮೀದೇವಿಯು. (ಅಂದರೆ ಅಲ್ಲಿರುವ ಆ ವಸ್ತುಗಳೆಲ್ಲವೂ ಲಕ್ಷ್ಮೀಸ್ವರೂಪಗಳು.) ಶ್ವೇತದ್ವೀಪದಲ್ಲಿರತಕ್ಕ ಹಾಸಿಗೆಯಲ್ಲಿರುವ ಶ್ರೀವಿಷ್ಣುವು **ಪರ್ಯಂಕಬ್ರಹ್ಮ**ನೆಂದು ಹೆಸರುಳ್ಳವನು. ॥ ೧೦-೫ ॥ ೧ ॥

**ಐದನೇ ಖಂಡವು ಮುಗಿಯಿತು.**

## ೬ನೇ ಖಂಡವು

ಪೀ—ಹೃದಯದಲ್ಲಿದ್ದ ಭಗವದ್ರೂಪದ ಉಪಾಸನಾಪ್ರಕಾರವನ್ನು ವಿವರಿಸಿ ಹೇಳುತ್ತಾರೆ—

**ಉ. ॥ ಅಥ ಯಾ ಏತಾ ಹೃದಯಸ್ಯ ನಾಡ್ಯಸ್ತಾಃ ಪಿಂಗಲಸ್ಯಾಣಿಮ್ನ-ಸ್ತಿಷ್ಠಂತಿ ಶುಕ್ಲಸ್ಯ ನೀಲಸ್ಯ ಪೀತಸ್ಯ ಲೋಹಿತಸ್ಯೇತ್ಯಸೌ ವಾ ಆದಿತ್ಯಃ ಪಿಂಗಲ ಏಷ ಶುಕ್ಲ ಏಷ ನೀಲ ಏಷ ಪೀತ ಏಷ ಲೋಹಿತಃ ॥ ೧ ॥**

ಅ॥ ವಿದ್ಯಾಂತರವನ್ನು ಹೇಳುತ್ತಾರೆ. ಹೃದಯದಲ್ಲಿರತಕ್ಕ ಹೃದಯನೆಂದು ಹೆಸರುಳ್ಳ ಐದು ರೂಪಗಳುಳ್ಳ ಶ್ರೀಹರಿಗೆ ಆಧಾರಗಳಾದ ಹೃದಯಕಮಲದ ಸುತ್ತಮುತ್ತಲೂ ಇರುವ **ಸುಷುಮ್ನಾ ನಾಂದಿನೀ ಪಿಂಗಲಾ ವಜ್ರಿಕಾ ಇಡಾ** ಎಂಬ ಐದು ನಾಡಿಗಳು ಪಿಂಗಲ (ಕೆಂಪುಕಪ್ಪು) ವರ್ಣವುಳ್ಳ ಅತಿಸೂಕ್ಷ್ಮನಾದ ಸಂಕರ್ಷನಿಗೆ, ಬಿಳಿಬಣ್ಣವುಳ್ಳ ಅತ್ಯಣುವಾದ ವಾಸುದೇವನಿಗೆ, ನೀಲವರ್ಣನಾದ ಅಣುವಾದ ಅನಿರುದ್ಧನಿಗೆ, ಪೀತವರ್ಣ (ಹಳದಿಬಣ್ಣ)ವುಳ್ಳ ಅಣುವಾದ ಪ್ರದ್ಯುಮ್ನನಿಗೆ, ರಕ್ತವರ್ಣವುಳ್ಳ ಅಣುವಾದ ನಾರಾಯಣನಿಗೆ ಆಧಾರಗಳಾಗಿ ಇರುತ್ತವೆ. (ಅಂದರೆ ವಿಷ್ಣುವಿನ ರೂಪಗಳು ಐದು ನಾಡಿಗಳಲ್ಲಿವೆ) ಎಂದು ಉಪಾಸನಾಮಾಡಬೇಕು. (ಆದಿತ್ಯನಲ್ಲಿಯೂ ಪಿಂಗಲ ಮೊದಲಾದ ಐದು ರೂಪಗಳುಳ್ಳ ಶ್ರೀಹರಿಯನ್ನು ಧ್ಯಾನಿಸಬೇಕು, ಎನ್ನುತ್ತಾರೆ—) ಆದಿತ್ಯನ ಸುತ್ತಲೂ ಆದಿತ್ಯನೆಂದು ಹೆಸರುಳ್ಳ ಪಿಂಗಲವರ್ಣವುಳ್ಳ ಸಂಕರ್ಷಣನೂ, ಶುಕ್ಲವರ್ಣವುಳ್ಳ ವಾಸುದೇವನೂ ನೀಲವರ್ಣವುಳ್ಳ ಅನಿರುದ್ಧನೂ, ಅರಸಿನಬಣ್ಣವುಳ ಪ್ರದ್ಯುಮ್ನನೂ, ಕೆಂಪುಬಣ್ಣವುಳ್ಳ ಶ್ರೀನಾರಾಯಣನೂ ಹೀಗೆ ಐದು ರೂಪಗಳಿವೆ.

ವಿ—ಕೆಂಬಣ್ಣವುಳ್ಳ ಶ್ರೀನಾರಾಯಣನು ಹೃದಯಮಧ್ಯದಲ್ಲಿರುವ **ಸುಷುಮ್ನಾ** ನಾಡಿಯಲ್ಲಿಯೂ, ಬಿಳಿಬಣ್ಣವುಳ್ಳ ವಾಸುದೇವನು ಇದಿರು ಇರುವ **ನಾಂದಿನೀ** ನಾಡಿಯಲ್ಲಿಯೂ, ಪಿಂಗಲಬಣ್ಣವುಳ್ಳ ಸಂಕರ್ಷಣನು ಹಿಂದುಗಡೆ ಇರುವ **ಪಿಂಗಲಾ** ನಾಡಿಯಲ್ಲಿಯೂ, ಹಳದಿಬಣ್ಣವುಳ್ಳ ಪ್ರದ್ಯುಮ್ನನು ಎಡಭಾಗದಲ್ಲಿದ್ದ **ವಜ್ರಿಕಾ** ನಾಡಿಯಲ್ಲಿಯೂ, ನೀಲಬಣ್ಣವುಳ್ಳ ಅನಿರುದ್ಧನು ಬಲಭಾಗದಲ್ಲಿದ್ದ **ಇಡಾ** ಎಂಬ ನಾಡಿಯಲ್ಲಿಯೂ ಇರುತ್ತಾರೆ. ॥ ೧ ॥

ಪೀ—ಹೃದಯದಲ್ಲಿರತಕ್ಕ ಶ್ರೀಹರಿಯು ಆದಿತ್ಯನಲ್ಲಿರುವುದು ಮಾತ್ರವಲ್ಲ. ಪರಂತು ಆದಿತ್ಯನ ರಶ್ಮಿಗಳಲ್ಲಿಯೂ ವ್ಯಾಪಿಸುತ್ತಿದ್ದಾನೆನ್ನುತ್ತಾರೆ—

**ಉ. ॥ ತದ್ಯಥಾ ಮಹಾಪಥ ಆತತ ಉಭೌ ಗ್ರಾಮೌ ಗಚ್ಛತೀಮಂ ಚಾಮುಂ ಚೈವಮೇವೈತಾ ಆದಿತ್ಯಸ್ಯ ರಶ್ಮಯ ಉಭೌ ಲೋಕೌ ಗಚ್ಛಂತೀ-ಮಂ ಚಾಮುಂ ಚಾಮುಷ್ಮಾದಾದಿತ್ಯಾತ್ಪ್ರತಾ(ತೀ)ಯಂತೇ ತ ಆಸು ನಾಡೀಷು ಸೃಪ್ತಾ ಆಭ್ಯೋ ನಾಡೀಭ್ಯಃ ಪ್ರತಾ(ತೀ)ಯಂತೇಽಮುಷ್ಮಿನ್ನಾದಿತ್ಯೇ ಸೃಪ್ತಾಃ ॥ ೨ ॥**

ಅ॥ ಹೇಗೆ ದೊಡ್ಡ ಮಾರ್ಗವು ಸಮೀಪದಲ್ಲಿರುವ ಮತ್ತು ದೂರದಲ್ಲಿರುವ ಎರಡು ಗ್ರಾಮಗಳನ್ನು ವ್ಯಾಪಿಸಿಕೊಂಡು ಇರುತ್ತದೋ, ಹೀಗೆಯೇ ಆದಿತ್ಯನಲ್ಲಿರುವ ಆದಿತ್ಯನೆನಿಸಿದ ಶ್ರೀಹರಿಯ ರಶ್ಮಿಗಳು ಆದಿತ್ಯನ ಕಿರಣಗಳಲ್ಲಿ ವ್ಯಾಪ್ತಗಳಾಗಿ ಜೀವನನ್ನೂ ಆದಿತ್ಯನನ್ನೂ ಹೊಂದುತ್ತವೆ. (ಬರುವ ಪ್ರಕಾರವನ್ನು ವಿವರಿಸಿ ಹೇಳುತ್ತಾರೆ—) ಆದಿತ್ಯಾಂತರ್ಗತ ಭಗವದ್ರೂಪಗಳಿಂದ ಯಾವ ರಶ್ಮಿಗಳು ವ್ಯಾಪ್ತಗಳಾಗಿವೆಯೋ, ಅವುಗಳು ನಾಡಿಗಳಲ್ಲಿ ವ್ಯಾಪ್ತಗಳಾಗಿವೆ. ನಾಡ್ಯಂತರ್ಗತ ಭಗವದ್ರೂಪಗಳಿಂದ ಯಾವ ನಾಡಿಗಳಲ್ಲಿರತಕ್ಕ ರಶ್ಮಿಗಳು ವ್ಯಾಪ್ತಗಳಾಗಿವೆಯೋ, ಅವುಗಳು ಆದಿತ್ಯನಲ್ಲಿ ವ್ಯಾಪ್ತಗಳಾಗಿವೆ. ಅಂದರೆ ಆದಿತ್ಯನಲ್ಲಿ ತೋರುವ ರಶ್ಮಿಗಳು ನಾಡಿಗಳಲ್ಲಿಯೂ, ನಾಡಿಗಳಲ್ಲಿರುವ ರಶ್ಮಿಗಳು ಆದಿತ್ಯನಲ್ಲಿಯೂ ವ್ಯಾಪ್ತಗಳಾಗಿ ಇವೆ. ॥ ೨ ॥

ಪೀ—ಹೃದಯದೊಳಗಣ ನಾಡಿಗಳಲ್ಲಿರತಕ್ಕ ಶ್ರೀಹರಿಯನ್ನು ಹೊಂದಿದವನಿಗೆ ಪಾಪಲೇಪವಿಲ್ಲ, ಎನ್ನುತ್ತಾರೆ—

**ಉ. || ತದ್ಯತ್ರೈತತ್ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾ-
ತ್ಯಾಸು ತದಾ ನಾಡೀಷು ಸೃಪ್ತೋ ಭವತಿ ತಂ ನ ಕಶ್ಚನ ಪಾಪ್ಮಾ ಸ್ಪೃಶತಿ
ತೇಜಸಾ ಹಿ ತದಾ ಸಂಪನ್ನೋ ಭವತಿ || ೩ ||**

ಅ || ಆಗ ಶ್ರೀಹರಿಯಲ್ಲಿ ಸುಷುಪ್ತಿಯನ್ನು ಹೊಂದಿದ ಇಂದ್ರಿಯವ್ಯಾಪಾರಗಳಿಲ್ಲದಿರುವ ಚೆನ್ನಾಗಿ ಸಂತುಷ್ಟನಾಗಿ ಸ್ವರೂಪಸುಖವನ್ನನುಭವಿಸುವ ಜೀವನು ಸ್ವಾಪ್ನವಸ್ತುಗಳ ಸಮೂಹವನ್ನು ಯಾವಾಗ ತಿಳಿಯುವುದಿಲ್ಲವೋ, ಆಗ ಸುಷುಮ್ನಾನಾಡಿಯಲ್ಲಿರುವ ಶ್ರೀಹರಿಯಲ್ಲಿ ಇರುತ್ತಾನೆ. ಆ ಸುಪ್ತನು ಶ್ರೀಹರಿಯಿಂದ ಅಥವಾ ಶ್ರೀಹರಿಯ ತೇಜಸ್ಸಿನಿಂದ ಕೂಡಿರುವುದರಿಂದ ಆತನನ್ನು ಯಾವ ಪಾಪವೂ ಮುಟ್ಟುವುದಿಲ್ಲ. (ಅಂದರೆ ಆತನಿಗೆ ಪಾಪಲೇಪವಿಲ್ಲ.) || ೩ ||

ಪೀ—ನಾಡಿಗಳಲ್ಲಿರುವ ಶ್ರೀಹರಿಯನ್ನುಪಾಸನ ಮಾಡಿದ್ದಕ್ಕೆ ಫಲ ಹೇಳುತ್ತಾರೆ—

**ಉ. || ಅಥ ಯತ್ರೈತದಬಲಿಮಾನಂ ನೀತೋ ಭವತಿ ತಮಭಿತ ಆ-
ಸೀನಾ ಆಹುರ್ಜಾನಾಸಿ ಮಾಂ ಜಾನಾಸಿ ಮಾಮಿತಿ ಸ ಯಾವದಸ್ಮಾಚ್ಛರೀ-
ರಾದನುತ್ಕ್ರಾಂತೋ ಭವತಿ ತಾವಜ್ಜಾನಾತಿ || ೪ ||**

ಅ || ಆಮೇಲೆ ಯಾವಾಗ ಹೃದಯದಲ್ಲಿರತಕ್ಕ ಶ್ರೀಹರಿಯನ್ನುಪಾಸನೆ ಮಾಡತಕ್ಕ ಜ್ಞಾನಿಯು ಜ್ವರಾದಿಗಳಿಂದ ದೇಹದಲ್ಲಿ ದೌರ್ಬಲ್ಯವನ್ನು ಹೊಂದುತ್ತಾನೋ, (ಅಂದರೆ ಸಾಯಲು ಸನ್ನದ್ಧನಾಗುತ್ತಾನೋ,) ಆಗ ಆತನ ಸುತ್ತಮುತ್ತಲೂ ಜ್ಞಾತಿಗಳು ಕುಳಿತುಕೊಂಡು ನನ್ನನ್ನು ತಿಳಿಯುತ್ತೀಯೋ, ನನ್ನನ್ನು ತಿಳಿಯುತ್ತೀಯೋ, ಎನ್ನುತ್ತಾರೆ. ಹೀಗೆ ಜ್ಞಾತಿಗಳಿಂದ ಪ್ರಶ್ನಿಸಿಗೊಂಡ ಆ ಜ್ಞಾನಿಯು ಈ ಶರೀರದಿಂದ ಹೊರಡದಿರುವ ಪರ್ಯಂತ ತಿಳಿಯುತ್ತಾನೆ. || ೪ ||

**ಉ. || ಅಥ ಯತ್ರೈತಸ್ಮಾಚ್ಛರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿ-
ರೂರ್ಧ್ವ ಆಕ್ರಮತೇ ಸ ಓಮಿತಿವಾಹೋದ್ವಾಮೀಯತೇ ಸ ಯಾವತ್
ಕ್ಷಿಪೇನ್ಮನಸ್ತಾವದಾದಿತ್ಯಂ ಗಚ್ಛತ್ಯೇತದ್ವೈ ಖಲು ಲೋಕದ್ವಾರಂ ವಿದುಷಾಂ
ಪ್ರಪದನಂ ನಿರೋಧೋಽವಿದುಷಾಂ || ೫ ||**

ಅ || ಯಾವಾಗ ಜೀವನು ಈ ಶರೀರದಿಂದ ಹೊರಟು ಹೋಗುತ್ತಾನೋ, ಆಗ ನಾಡಿಗಳಲ್ಲಿರತಕ್ಕ ಸೂರ್ಯರಶ್ಮಿಗಳಿಂದ ಪ್ರಕಾಶಿಸಿಕೊಂಡ ನಾಡೀದ್ವಾರವುಳ್ಳವನಾಗಿ ಊರ್ಧ್ವಲೋಕಕ್ಕೆ ಹೋಗಲಿಕ್ಕೆ ಅಭಿಮುಖನಾಗಿ ಹೋಗುತ್ತಾನೆ. ಆ ಜ್ಞಾನಿಯಾದ ಉಪಾಸಕನು ಓಂ ಎಂದು ಹೆಸರುಳ್ಳ ಶ್ರೀಹರಿಯನ್ನು ಹೊರುತ್ತಿರುವ ಮುಖ್ಯಪ್ರಾಣನಿಂದ (ಊರ್ಧ್ವಲೋಕಕ್ಕೆ ಹೋಗುವಕಾಲದಲ್ಲಿ) ವಾಮಭಾವವನ್ನು (ಅಂದರೆ ದಿವ್ಯ ಚಿದ್ರೂಪವನ್ನು) ಹೊಂದುತ್ತಾನೆ. ಮಂಗಲನಾಗಿ ಮಾಡಲ್ಪಡುತ್ತಾನೆ. ಆ ವಾಯುವು ಯಾವಾಗ ಜ್ಞಾನಿಯನ್ನು ಕರೆದುಕೊಂಡು ಹೋಗಲಿಕ್ಕೆ ಮನಸ್ಸು ಮಾಡುತ್ತಾನೋ, ಆಗ ಜೀವನು ಭಗವತ್ಪ್ರಸಾದದಿಂದ ಆದಿತ್ಯನೊಳಗಣ ವಿಷ್ಣುವನ್ನು ಹೊಂದುತ್ತಾನೆ (ಬ್ರಹ್ಮಜ್ಞಾನಿಯು ಬ್ರಹ್ಮಲೋಕವನ್ನೇ ಹೊಂದಬೇಕಾಗಿರುವುದರಿಂದ ಆದಿತ್ಯಾಂತರ್ಗತ ವಿಷ್ಣುಲೋಕವನ್ನು ಹೊಂದುವುದು ಏತಕ್ಕೆಂದರೆ—) ಆದಿತ್ಯಮಂಡಲವೇ, (ಆದಿತ್ಯಾಂತರ್ಗತ ಪರಬ್ರಹ್ಮಸ್ವರೂಪವೇ) ಪರಬ್ರಹ್ಮನ ಲೋಕಕ್ಕೆ ದ್ವಾರಭೂತನು. ವಿದ್ವಾಂಸರು ಹೊಂದತಕ್ಕುದು. ಅಜ್ಞಾನಿಗಳಿಗೆ ತನ್ನ ಪ್ರಾಪ್ತಿಗೆ ಕಾರಣವಾದ ಮಾರ್ಗವನ್ನು ತಡೆಯುತ್ತದೆ || ೫ ||

ಪೀ – ಹೃದಯದಲ್ಲಿರತಕ್ಕ ಶ್ರೀಹರಿಯನ್ನು ಪಾಸನೆ ಮಾಡಿದವನು ಸೂರ್ಯದ್ವಾರಾ ಮುಕ್ತನಾಗುತ್ತಾನೆ, ಎಂಬ ಅರ್ಥದಲ್ಲಿ ಮಂತ್ರ ಹೇಳುತ್ತಾರೆ. ಅಥವಾ ಐದು ನಾಡಿಗಳಿಂದಲೂ ಉತ್ಕ್ರಾಂತಿಯನ್ನು ಹೊಂದಿದವನಿಗೆ ಮೋಕ್ಷವಾಗುವುದಿಲ್ಲ. ಪರಂತು, ಮೋಕ್ಷಕ್ಕೆ ಕಾರಣವಾದ ನಾಡೀವಿಶೇಷವು ಒಂದೇ ಎಂಬುದನ್ನು ಪ್ರಮಾಣಕೊಟ್ಟು ಹೇಳುತ್ತಾರೆ—

**ಉ. ॥ ತದೇಷ ಶ್ಲೋಕಃ । ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಗನ್ಯಾ ಉತ್ಕ್ರಮಣೇ ಭವಂತಿ ಉತ್ಕ್ರಮಣೇ ಭವಂತಿ ॥ ಇತಿ ಷಷ್ಠಃ ಖಂಡಃ ॥ ೧೦-೬ ॥ ॥ ೬ ॥**

ಅ ॥ ಮೋಕ್ಷವನ್ನು ಹೊಂದಿಸತಕ್ಕ ನಾಡೀವಿಶೇಷವದೆ, ಎಂಬಲ್ಲಿ ಮುಂದಿನ ಶ್ಲೋಕವು ಸಮ್ಮತಿಯಾಗುತ್ತದೆ. ಹೃದಯನೆನಿಸಿದ ಶ್ರೀಹರಿಗೆ ಆಧಾರಗಳಾದ ಹೃದಯದಲ್ಲಿ ವ್ಯಾಪಿಸಿಕೊಂಡಿರುವವು ನೂರ ಒಂದು (೧೦೧) ನಾಡಿಗಳಿವೆ. ಅವುಗಳಲ್ಲಿ ಒಂದು ನಾಡಿಯು ಶಿರಸ್ಸಿನಲ್ಲಿ ವ್ಯಾಪಿಸಿಕೊಂಡಿದೆ. ಆ ಸುಷುಮ್ನಾನಾಡಿಯಿಂದ ಮೇಲೆ ಹೋದವನು ಮೋಕ್ಷಕ್ಕೆ ಹೋಗುತ್ತಾನೆ. ಸುಷುಮ್ನಾನಾಡಿಗಿಂತ ಬೇರೆ ನಾಡಿಗಳು ಬೇರೆ ಲೋಕಗಳಿಗೆ ಹೋಗಲಿಕ್ಕೆ ಉಪಯುಕ್ತಗಳಾಗುತ್ತವೆ. ॥ ೧೦—೬ ॥ ॥ ೬ ॥

ಪೀ—ಅಥ ಯಾ ಏತಾ ಹೃದಯಸ್ಯ ನಾಡ್ಯಃ ಎಂಬ ವಾಕ್ಯದ ಅರ್ಥ ಹೇಳುತ್ತಾರೆ—

**ಭಾ. ॥ (೧) ಸ ಏಷ ಹೃದಿ ನಾಡೀಷು ಪಂಚರೂಪಃ ಪ್ರತಿಷ್ಠಿತಃ । ವಿಷ್ಣೋರಣಿಮ್ನೋ ರೂಪಾಣಿ ಪಂಚನಾಡೀಸ್ಥಿತಾನಿ ತು ॥ (೨) ನಾರಾಯಣಾಖ್ಯಂ ಸೌಷುಮ್ನಂ ಮಧ್ಯಸ್ಥಂ ರಕ್ತವರ್ಣಕಂ । ಶುಕ್ಲಂ ತು ವಾಸುದೇವಾಖ್ಯಂ ನಾದಿನ್ಯಾಮಗ್ರತಃ ಸ್ಥಿತಂ ॥ ಪಿಂಗಲಾಯಾಂ ಪಿಂಗಲಂ ತು (ಚ) ರೂಪಂ ಸಂಕರ್ಷಣಾಭಿಧಂ । ಪಶ್ಚಿಮೇ ವಜ್ರಿಕಾಯಾಂ ಚ ಪೀತಂ ಪ್ರದ್ಯುಮ್ನನಾಮಕಂ । ಇಡಾಯಾಮನಿರುದ್ಧಾಖ್ಯಂ ನೀಲರೂಪಂ ವ್ಯವಸ್ಥಿತಂ ॥ (೩) ಸೂರ್ಯೇಽಪ್ಯೇವಂ ಪಂಚರೂಪೋ ಭಗವಾನ್ ಸಂವ್ಯವಸ್ಥಿತಃ । ಆದಿತ್ಯನಾಮಾ ಚಾದಿತ್ವಾತ್ ॥ (೪) ತದ್ವ್ಯಾಪ್ತಂ ಸೂರ್ಯಮಂಡಲಂ । ತದ್ರಶ್ಮಿಭಿಸ್ತಥಾ ವ್ಯಾಪ್ತಾಃ ಸಮಸ್ತಾಃ ಸೂರ್ಯರಶ್ಮಯಃ । ತಸ್ಮಿನ್ನಾಡೀಷು ಚ ಪ್ರೋತಾಸ್ತಥಾ ನಾಡೀಸ್ಥ(ಷು)ರಶ್ಮಯಃ ॥ (೫)ತನ್ನಾಡೀಸಂಸ್ಥಿತಂ ವಿಷ್ಣುಂ ಮಧ್ಯೇ ಜೀವಃ ಪ್ರಪದ್ಯತೇ ॥ (೬) ತತ್ತೇಜಸಾ ಹಿ ಸಂಪನ್ನಃ ಸುಪ್ತ ಇತ್ಯಭಿಧೀಯತೇ ॥ (೭) ಓಮಿತ್ಯೇವ ವಹನ್ನಿತ್ಯಂ ವಾಯುರೋಂ ವಾಡಿ(ವ ಇ)ತೀರಿತಃ । ತೇನ ವಾಮತ್ವಮಾಯಾತಿ ಮುಕ್ತಿಕಾಲೇ ಹ್ಯುಪಾಸಕಃ । ದಿವ್ಯಚಿದ್ರೂಪಭಾವೋ ಹಿ ವಾಮಭಾವ ಉದೀರಿತಃ ॥ (೮) ಯದ್ಯೈನಂ ನೇತುಮನ್ವಿಚ್ಛನ್ಮನಃ ಕ್ಷಿಪತಿ ಮಾರುತಃ । ಆದಿತ್ಯಾಖ್ಯಂ ತದಾ ವಿಷ್ಣುಂ ಯಾತಿ ಜೀವಃ ಸ್ವವಿದ್ಯಯಾ ॥ ಇತಿ ಪರ್ಯಂಕೋಪಾಸನಾಯಾಂ ॥ ೧,೨,೩,೪,೫,೬ ॥ ಇತಿ ಷಷ್ಠಃ ಖಂಡಃ ॥ ೧೦—೬ ॥೧॥**

ಅ ॥ (೧) ಶ್ರೀಪರಮಾತ್ಮನು ಹೃದಯದಲ್ಲಿ ಐದು ನಾಡಿಗಳಲ್ಲಿ ಐದು ರೂಪಗಳುಳ್ಳವನಾಗಿ ಇರುತ್ತಾನೆ ಅಣುವಾಗಿರತಕ್ಕ ಶ್ರೀಹರಿಯ ಐದು ರೂಪಗಳು ಐದು ನಾಡಿಗಳಲ್ಲಿವೆ (೨) (ಯಾವಯಾವ

ನಾಡಿಯಲ್ಲಿ ಯಾವಯಾವ ರೂಪವಿದೆ, ಎಂದರೆ) ರಕ್ತವರ್ಣವುಳ್ಳ ಶ್ರೀನಾರಾಯಣ ರೂಪವು ನಾಲ್ಕು ನಾಡಿಗಳ ಮಧ್ಯದಲ್ಲಿರತಕ್ಕ **ಸುಷುಮ್ನಾ** ನಾಡಿಯಲ್ಲಿಯೂ ಬಿಳಿರೂಪವುಳ್ಳ ವಾಸುದೇವನು ಇದಿರು ಇರುವ **ನಾದಿನೀ** ನಾಡಿಯಲ್ಲಿಯೂ ಪಿಂಗಲ ರೂಪವುಳ್ಳ ಸಂಕರ್ಷಣನು ಹಿಂಬದಿಯಲ್ಲಿರುವ **ಪಿಂಗಲಾ** ನಾಡಿಯಲ್ಲಿಯೂ ಪೀತರೂಪವುಳ್ಳ ಪ್ರದ್ಯುಮ್ನನು ಎಡಭಾಗದಲ್ಲಿದ್ದ **ವಜ್ರಿಕಾ** ನಾಡಿಯಲ್ಲಿಯೂ ನೀಲ ರೂಪವುಳ್ಳ ಅನಿರುದ್ಧನು ಬಲಭಾಗದಲ್ಲಿದ್ದ **ಇಡಾ** ನಾಡಿಯಲ್ಲಿಯೂ ಇದ್ದಾನೆ. (೩) (೧ನೇ ಮಂತ್ರ ದಲ್ಲಿದ್ದ **ಅಸೌ ವಾ ಆದಿತ್ಯಃ** ಎಂಬ ವಾಕ್ಯದ ಅರ್ಥಹೇಳುತ್ತಾರೆ) ಸೂರ್ಯನಲ್ಲಿಯೂ ಹೀಗೆಯೇ ಐದು ರೂಪಗಳುಳ್ಳ ಶ್ರೀಹರಿಯು ಇರುತ್ತಾನೆ. ಶ್ರೀಹರಿಯು ಸರ್ವರಿಗೆ ಆದಿಯಾದುದರಿಂದ ಆದಿತ್ಯನೆನಿಸುತ್ತಾನೆ. (೪) (೨ನೇ ಮಂತ್ರದಲ್ಲಿದ್ದ **ಅಮುಷ್ಮಾದಾದಿತ್ಯಾತ್** ಇತ್ಯಾದಿ ವಾಕ್ಯಗಳಿಗೆ ಅರ್ಥಹೇಳುತ್ತಾರೆ.) ನಾಡಿ ಗಳಲ್ಲಿರತಕ್ಕ ಎಲ್ಲಾ ರಶ್ಮಿಗಳು ಸೂರ್ಯಾಂತರ್ಗತ ಭಗವದ್ರೂಪಗಳಿಂದ ವ್ಯಾಪ್ತಗಳಾಗಿವೆ. ಹಾಗೆಯೇ ಸೂರ್ಯಮಂಡಲವೂ ಸೂರ್ಯನೆನಿಸಿದ ಶ್ರೀಹರಿಯ ರಶ್ಮಿಗಳಿಂದ ವ್ಯಾಪ್ತವಾಗಿದೆ. ಹಾಗೆಯೇ ಎಲ್ಲಾ ಸೂರ್ಯರಶ್ಮಿಗಳೂ ನಾಡಿಯಲ್ಲಿರತಕ್ಕ ಶ್ರೀಹರಿಯ ರಶ್ಮಿಗಳಿಂದ ವ್ಯಾಪ್ತಗಳಾಗಿವೆ ಆ ನಾಡಿಯಲ್ಲಿರತಕ್ಕ ಶ್ರೀಹರಿಯಲ್ಲಿಯೂ ನಾಡಿಗಳಲ್ಲಿಯೂ, ನಾಡಿಗಳಲ್ಲಿರತಕ್ಕ ರಶ್ಮಿಗಳು ವ್ಯಾಪ್ತಗಳಾಗಿವೆ. (೫) (**ತದ್ಯ-ತ್ರೈತತ್ಸುಪ್ತಃ** ಎಂಬ ವಾಕ್ಯಕ್ಕೆ ಅರ್ಥಹೇಳುತ್ತಾರೆ.) ಮಧ್ಯದ **ಸುಷುಮ್ನಾ** ನಾಡಿಯಲ್ಲಿರುವ ವಿಷ್ಣು ವನ್ನು ಜೀವನು ಹೊಂದುತ್ತಾನೆ. (೬) (೩ನೇ ಮಂತ್ರದಲ್ಲಿದ್ದ **ತೇಜಸಾ ಹಿ ತದಾ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ.) ಆ ಶ್ರೀಹರಿಯು ತೇಜಸ್ಸಿನಿಂದ ಕೂಡಿದವನು **ಸುಪ್ತಃ** ಎನಿಸುತ್ತಾನೆ. (೭) (೫ನೇ ಮಂತ್ರದಲ್ಲಿದ್ದ **ಓಮಿತಿ ವಾಹಾ** ಎಂಬ ವಾಕ್ಯಕ್ಕೆ ಅರ್ಥಹೇಳುತ್ತಾರೆ.) ಓಂ ಎಂದು ಹೆಸರುಳ್ಳ ಶ್ರೀಹರಿ ಯನ್ನು ನಿತ್ಯದಲ್ಲಿಯೂ ಹೊರುತ್ತಿರುವ ವಾಯುದೇವರು ಓಂ ವಾಟ್ ಎನಿಸುತ್ತಾರೆ. ಆ ವಾಯುವಿನಿಂದ ಉಪಾಸಕನು ಮೋಕ್ಷಕಾಲದಲ್ಲಿ ವಾಮಭಾವವನ್ನು ಹೊಂದುತ್ತಾನೆ. (ವಾಮಭಾವವನ್ನು ವಿವರಿಸುತ್ತಾರೆ). ದಿವ್ಯವಾದ ಚಿದ್ರೂಪಭಾವವೇ ವಾಮಭಾವವೆನಿಸುತ್ತದೆ. (೮) ಯಾವಾಗ ವಾಯುದೇವರು ಈ ಜ್ಞಾನಿ ಯನ್ನು ಪರಲೋಕಕ್ಕೆ ಕರೆದುಕೊಂಡುಹೋಗಲಿಕ್ಕೆ ಇಚ್ಛಿಸಿ ಮನಸ್ಸು ಮಾಡುತ್ತಾರೋ, ಆಗ ಆ ಜ್ಞಾನಿ ಯು ತನ್ನ ವಿದ್ಯೆಯಿಂದ ಆದಿತ್ಯನೆನಿಸಿದ ವಿಷ್ಣುವನ್ನು ಹೊಂದುತ್ತಾನೆ, ಎಂದು ಪರ್ಯಂಕೋಪಾಸನೆ ಯಲ್ಲಿದೆ. ॥ ೧೦—೬ ॥ ॥ ೧ ॥

ಆರನೇ ಖಂಡವು ಮುಗಿಯಿತು.

## ೭ನೇ ಖಂಡವು

ಪೀ—ಬ್ರಹ್ಮಚರ್ಯಮೊದಲಾದ ಜ್ಞಾನಸಾಧನವನ್ನು ಮಾಡುವ ಸರ್ವರಿಗೂ ಜ್ಞಾನವು ಹುಟ್ಟು ತ್ತದೋ, ಎಂದರೆ ಅಯೋಗ್ಯರಿಗೆ ಹುಟ್ಟುವುದಿಲ್ಲ, ಯೋಗ್ಯರಿಗೇನೇ ಜ್ಞಾನವು ಹುಟ್ಟುತ್ತದೆ, ಎಂದು ಹಿಂದಿನ ಕಥೆ ಹೇಳಿಕೊಂಡು ಹೇಳುತ್ತಾರೆ –

**ಉ. ॥ ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ-ಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಸ್ಸ ವಿಜಿ-ಜ್ಞಾಸಿತವ್ಯಃ ಸ ಸರ್ವಾꣳಶ್ಚ ಲೋಕಾನಾಪ್ನೋತಿ ಸ ಸರ್ವಾꣳಶ್ಚ ಕಾಮಾನ್ ಯಸ್ತಮಾತ್ಮಾನಮನುವಿದ್ಯ(ನ್ವಿಷ್ಯ)ವಿಜಾನಾತೀತಿ ಹ ಪ್ರಜಾಪತಿರುವಾಚ ॥೧॥**

ಅ || *ಪರಬ್ರಹ್ಮನನ್ನು ಅನ್ವೇಷಣ ಮಾಡುವುದೆಂದರೆ ಶ್ರವಣಮನನಾದಿರೂಪವಾದ ವಿಚಾರ ಮಾಡಬೇಕೆಂದು ಅರ್ಥವು ಯಾವ ಅಧಿಕಾರಿಯು ಇಂತಹ ಶ್ರೀಹರಿಯನ್ನು ಶಾಸ್ತ್ರ ಆಚಾರ್ಯಾದಿಗಳನ್ನು ಅನುಸರಿಸಿ ಪರೋಕ್ಷವಾಗಿ ತಿಳಿದು ಅಪರೋಕ್ಷವಾಗಿ ತಿಳಿಯುತ್ತಾನೋ, ಅಂತಹ ಜ್ಞಾನಿಯು ವಿಷ್ಣುಲೋಕ ಮೊದಲಾದ ಎಲ್ಲಾ ಲೋಕಗಳನ್ನೂ, ಇಚ್ಛಿಸಿದ ಎಲ್ಲಾ ಭೋಗಗಳನ್ನೂ ಯೋಗ್ಯತಾನುಸಾರ ಹೊಂದುತ್ತಾನೆಂದು ಚತುರ್ಮುಖಬ್ರಹ್ಮನು (ದೇವತೆಗಳೂ ಅಸುರರೂ ಇವರ ಇದಿರು) ಹೇಳಿದನು. || ೧ ||

ಉ. || ತದ್ಧೋಭಯೇ ದೇವಾಸುರಾ ಅನುಬುಬುಧಿರೇ(ಬುಧ್ಯ ಹೋಚುಃ) ತೇ ಹೋಚುರ್ಹಂತ ತಮಾತ್ಮಾನಮನ್ವಿಚ್ಛಾಮೋ ಯಮಾತ್ಮಾನಮನ್ವಿಷ್ಯ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನಿತೀಂದ್ರೋ ಹ ವೈ ದೇವಾನಾಮಭಿಪ್ರವವ್ರಾಜ ವಿರೋಚನೋಽಸುರಾಣಾಂ ತೌ ಹಾಸಂವಿದಾನಾವೇವ ಸಮಿತ್ಪಾಣೀ ಪ್ರಜಾಪತಿಸಕಾಶಮಾಜಗ್ಮತುಃ || ೨ ||

ಅ || ಆಮೇಲೆ ಆತ್ಮಜ್ಞಾನವು ಸರ್ವಲೋಕಾದಿಗಳಿಗೆ ಸಾಧನವೆಂಬುದನ್ನು ದೇವತೆಗಳೂ ಅಸುರರೂ ಎಂಬೀ ಎರಡು ವರ್ಗದವರು ತಿಳಿದು ಹೇಳಿದರು ಯಾವ ಶ್ರೀಹರಿಯ ಪರೋಕ್ಷಜ್ಞಾನ ಅಪರೋಕ್ಷ ಜ್ಞಾನಗಳನ್ನು ಸಂಪಾದಿಸಿ ಎಲ್ಲಾ ಲೋಕಗಳನ್ನು ಎಲ್ಲಾ ಕಾಮಗಳನ್ನು ಯೋಗ್ಯತಾನುಸಾರ ಹೊಂದುತ್ತಾನೋ, ಅಂತಹ ಆತ್ಮನನ್ನು ನಾವು ಹುಡುಕುತ್ತೇವೆ. (ಅಂದರೆ ಶ್ರವಣಾದಿಗಳಿಂದ ವಿಚಾರಮಾಡಿ ಶ್ರೀಹರಿಯ ಪರೋಕ್ಷಜ್ಞಾನಾದಿಗಳನ್ನು ಸಂಪಾದಿಸುತ್ತೇವೆ.) ಹರ್ಷ. (ಅಂದರೆ ಇಂತಹ ಫಲ ಕೊಡುವ ಆತ್ಮಜ್ಞಾನವನ್ನು ಯಾರೂ ಸಂಪಾದಿಸಲಾರರು.) ಹೀಗೆ (ಇಂದ್ರ ವಿರೋಚನರಿಗೆ) ಹೇಳಿದರು. ಆದುದರಿಂದಲೇ ದೇವೇಂದ್ರನು ದೇವತೆಗಳಿಗೆ ಉಪದೇಶ ಕೊಡುವುದಕ್ಕಾಗಿ ತಾನು ಪರಮಾತ್ಮನನ್ನು ಕೇಳುವುದಕ್ಕಾಗಿ ಚತುರ್ಮುಖನ ಸಮೀಪಕ್ಕೆ ಹೋದನು. ಪ್ರಸಿದ್ಧ. ಹೀಗೆಯೇ ವಿರೋಚನನೂ ಅಸುರರಿಗೆ ಉಪದೇಶಿಸುವುದಕ್ಕಾಗಿ ಬ್ರಹ್ಮನ ಬಳಿಗೆ ಹೋದನು. ಆ ಇಂದ್ರವಿರೋಚನರು ಒಬ್ಬ ಗುರುವಿನಲ್ಲಿ ಆವಾಸ ಮಾಡಲಿಚ್ಛಿಸಿಕೊಂಡು ಹೋಗುವ ಕಾಲದಲ್ಲಿಯೂ ಪರಸ್ಪರ ಪ್ರೀತಿರಹಿತರಾಗಿಯೂ ಪರಸ್ಪರ ಮಾತುಕಥೆಯಿಲ್ಲದವರಾಗಿಯೂ ಕೈಯಲ್ಲಿ ಸಮಿಧೆ ಹಿಡಿದುಕೊಂಡು ಬ್ರಹ್ಮನ ಬಳಿಗೆ ಬಂದರು. ಆ ಸಮಯದಲ್ಲಿಯೂ ಪರಸ್ಪರ ಪ್ರೀತಿಯುಂಟಾಗದೆ ಇದ್ದುದು ಆಶ್ಚರ್ಯ! || ೨ ||

ಉ. || ತೌ (ಯದ್ವಾ)ಹ ದ್ವಾತ್ರಿಂಶತಂ ವರ್ಷಾಣಿ ಬ್ರಹ್ಮಚರ್ಯಮೂಷತುಸ್ತೌ ಹ ಪ್ರಜಾಪತಿರುವಾಚ ಕಿಮಿಚ್ಛಂತಾವವಾಸ್ತಮಿತಿ ತೌ ಹೋಚತುರ್ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಭಗವತೋ ವಾಚೋ ವೇದಯಂತೇ ತಮಿಚ್ಛಂತಾವವಾತ್ಸಮಿತಿ (ಅವಾತ್ಸ್ವೇತಿ) || ೩ ||

* ಯ ಆತ್ಮಾ......ವಿಜಿಜ್ಞಾಸಿತವ್ಯಃ – ಇದರ ಅರ್ಥವು ಪುಟ ೪೨೧ರಲ್ಲಿ ಹೇಳಿಯದೆ.

ಅ || ಬ್ರಹ್ಮನ ಬಳಿಗೆ ಹೋಗಿ, ಅಂತಹ ಆತ್ಮನನ್ನು ಕೇಳುವುದಕ್ಕಾಗಿ ಅವರಿಬ್ಬರು ಯಾವಾಗ ಮೂವತ್ತೆರಡು ವರ್ಷ ಪರ್ಯಂತ ಬ್ರಹ್ಮಜ್ಞಾನ ಹೊಂದುವುದಕ್ಕಾಗಿ ಗುಹ್ಯೇಂದ್ರಿಯನಿಯಮನ ಮೊದಲಾದ ವ್ರತಗಳನ್ನು ಮಾಡುತ್ತಾ ಆವಾಸ ಮಾಡಿರುವರೋ, ಆಗ ಆ ಇಂದ್ರ ವಿರೋಚನರಿಗೆ ಬ್ರಹ್ಮನು ಯಾವುದಕ್ಕಾಗಿ ನನ್ನ ಬಳಿಯಲ್ಲಿ ಆವಾಸಮಾಡಿರುವಿರಿ?—ಎಂದನು. ಆಗ ಆ ಇಂದ್ರವಿರೋಚನರು ಯ ಆತ್ಮಾಽಪಹತಪಾಪ್ಮಾ ಇತ್ಯಾದಿ ಪೂಜ್ಯರಾದ ನಿಮ್ಮ ವಾಕ್ಯದ ಅರ್ಥಭೂತನಾದ ಪರಮಾತ್ಮನನ್ನು ದೇವಾಸುರರು ತಿಳಿಯಲಿಚ್ಛಿಸುತ್ತಾರೆ. ಅದುಕಾರಣ ಆ ಆತ್ಮನನ್ನು ಅವರಿಗೆ ಉಪದೇಶ ಮಾಡುವುದಕ್ಕಾಗಿ ನಿಮ್ಮಿಂದ ತಿಳಿಯಲಿಚ್ಛಿಸುತ್ತಾ ನಾವು ಇಲ್ಲಿ ಆವಾಸಮಾಡುವೆವು, ಹೀಗೆ ಹೇಳಿದರು. || ೩ ||

**ಉ. || ತೌ ಹ ಪ್ರಜಾಪತಿರುವಾಚ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತ್ಯಥ ಯೋಽಯಂ ಭಗವೋಽಪ್ಸು ಪರಿಖ್ಯಾಯತೇ ಯಶ್ಚಾಯಮಾದರ್ಶೇ ಕತಮ ಏಷ ಇತ್ಯೇಷ ಉ ಏವೈಷು ಸರ್ವೇಷ್ವಂತೇಷು ಪರಿಖ್ಯಾಯತ ಇತಿ ಹೋವಾಚ || ಇತಿ ಸಪ್ತಮಃ ಖಂಡಃ || ೧೦-೭ || || ೪ ||**

ಅ || ಆಗ ಪ್ರಜಾಪತಿಯು ಇಂದ್ರ-ವಿರೋಚನರಿಗೆ ಹೇಳಿದನು. (ಅಂದರೆ ತಾನು ಸುಳ್ಳು ಹೇಳಿದ್ದಲ್ಲ, ಎಂದಾಗುವುದಕ್ಕಾಗಿಯೂ, ವಿರೋಚನನಿಗೆ ಯಥಾರ್ಥಜ್ಞಾನವು ಬರಬಾರದೆಂಬುವುದಕ್ಕಾಗಿಯೂ, ಇಂದ್ರನು ಶುದ್ಧಸ್ವಭಾವದಿಂದಲೇ ಬಂದದ್ದೆಂದು ತಿಳಿದು ಆತನಿಗೆ ವಿಶೇಷಜ್ಞಾನ ಬರುವುದಕ್ಕಾಗಿಯೂ ಗೋಪ್ಯರೀತಿಯಿಂದ ಉಪದೇಶಿಸಿದನು.) ಮಹಾನುಭಾವರು ಅಯೋಗ್ಯರಿಗೆ ಚೆನ್ನಾಗಿ ಉಪದೇಶಿಸುವುದಿಲ್ಲವೆಂಬುದು ಆಶ್ಚರ್ಯ! **ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾ**=ಕಣ್ಣಿನೊಳಗೆ ಕಾಣಲ್ಪಡತಕ್ಕ ಪುರುಷನೇ ಆತ್ಮನು, ಮರಣವಿಲ್ಲದವನು ಭಯವಿಲ್ಲದವನು ಎಂದು ಬ್ರಹ್ಮನು ಉಪದೇಶಿಸಿದನು. ಈ ವಾಕ್ಯಕ್ಕೆ ದೇವೇಂದ್ರನು ಹೀಗೆ ಅರ್ಥ ತಿಳಿದುಕೊಂಡನು ಜಾಗ್ರದವಸ್ಥೆಗೆ ಪ್ರೇರಕನಾದ ಕಣ್ಣಿನೊಳಗಿರುವ ಗುಣಪೂರ್ಣನಾದ ವಿಶ್ವ ಎಂದು ಹೆಸರುಳ್ಳ ಯಾವ ಶ್ರೀಹರಿಯು ದಿವ್ಯದೃಷ್ಟಿಗೆ ಕಾಣಿಸಲ್ಪಡುತ್ತಾನೋ, ಅಂತಹವನೇ ಅಪಹತಪಾಪಾದಿ ಗುಣಗಳುಳ್ಳ ಆತ್ಮನು, ಎಂದು ತಿಳಿದನು. (ಚಕ್ಷುರೊಳಗಣನು ಪರಮಾತ್ಮನೆಂಬುದು ಹೇಗೆ? ಎಂದರೆ—) ಚಕ್ಷುರಂತರ್ಗತನು ನಿತ್ಯಮುಕ್ತನು, ಯಾರಿಂದಲೂ ಭಯವಿಲ್ಲದವನು, ಗುಣಪೂರ್ಣನು, ಹೀಗೆ ತಿಳಿದುಕೊಂಡನು. (ಹೀಗೆ ಚತುರ್ಮುಖನು ಹೇಳಿದ ವಾಕ್ಯಕ್ಕೆ ವಿರೋಚನನು ಅಯೋಗ್ಯನಾಗಿರುವುದರಿಂದ ಕಣ್ಣಿನೊಳಗೆ ನವ ಗೆ ತೋರುವ ದೇಹಪ್ರತಿಬಿಂಬವೇ ಅಪಹತಪಾಪಾದಿ ಗುಣಗಳುಳ್ಳ ಆತ್ಮನೆಂದೂ, ಅಮೃತನು ಅಭಯನೆಂದೂ ಚತುರ್ಮುಖನ ಅಭಿಪ್ರಾಯವೆಂದು ತಿಳಿದು ಇದನ್ನು ಮರಳಿ ನಿರ್ಣಯಿಸುವುದಕ್ಕಾಗಿ ಇಂದ್ರನಿಂದ ಕೂಡಿಕೊಂಡೇ ಪುನಃ ಕೇಳುತ್ತಾನೆ—) (ಇಂದ್ರನು ಜ್ಞಾನಿಯಾಗಿದ್ದರೂ ವಿರೋಚನನು ತಮೋಯೋಗ್ಯನಾಗಿರುವುದರಿಂದ ಆತನಿಗೆ ವಿಪರೀತಜ್ಞಾನ ಹುಟ್ಟುವುದಕ್ಕಾಗಿ ಅವನನ್ನು ಅನುಸರಿಸಿಯೇ ಕೇಳಿರುತ್ತಾನೆ.) ಪೂಜ್ಯನಾದ ಬ್ರಹ್ಮನೇ **ಅಪ್ಸು ಪರಿಖ್ಯಾಯತೇ ಯಶ್ಚಾಯಮಾದರ್ಶೇ ಕತಮಃ**=ನೀರಿನಲ್ಲಿಯೂ, ಕನ್ನಡಿಯಲ್ಲಿಯೂ ತೋರುವ ರೂಪವು ಯಾವುದು? ಅಂದರೆ ಯಾವ ದೇಹಪ್ರತಿಬಿಂಬವು ನೀರಿನಲ್ಲಿ ಕಾಣುತ್ತದೋ, ಕನ್ನಡಿಯಲ್ಲಿ ಕಾಣುತ್ತದೋ, ಈ ಜಲಾದಿಗಳಲ್ಲಿ ಕಾಣತಕ್ಕ ಪ್ರತಿಬಿಂಬರೂಪವೇ ಹಿಂದೆ ಹೇಳಿದ ಪ್ರಕಾರ ಅಪಹತಪಾಪ್ಮತ್ವಾದಿ ಗುಣಗಳುಳ್ಳ ಆತ್ಮನೋ, ಅಥವಾ ಬೇರೆಯೋ? ಎಂದು (ವಿರೋಚನನ ಅಭಿಪ್ರಾಯವು.) ಜಲಾದಿಗಳಲ್ಲಿದ್ದ ಪ್ರತಿಬಿಂಬಾದಿಗಳಿಗೆ ಪ್ರವರ್ತಕನಾಗಿ ದಿವ್ಯದೃಷ್ಟಿಗೆ ಗೋಚರನಾಗಿರುವ ಶ್ರೀಹರಿಯು, ಕಣ್ಣಿನೊಳಗಣನಾದ ಶ್ರೀಹರಿಯೋ, ಅಥವಾ ಬೇರೆಯೋ? ಎಂದು (ಇಂದ್ರನ ಅಭಿಪ್ರಾಯವು.) ಹೀಗೆ

ಇಬ್ಬರು ಕೇಳಿದರು. (ಆಗ ಸಮ್ಯಗ್ಜ್ಞಾನಾಕಾರವಾಗಿಯೇ ಚತುರ್ಮುಖನು ಉತ್ತರ ಹೇಳಿದನು.) **ಏಷ ಉ ಏವೈಷು ಸರ್ವೇಷ್ವಂತೇಷು** ಕಣ್ಣಿನೊಳಗಿರುವ ಆತ್ಮಸ್ವರೂಪವೇ ಎಲ್ಲಾ ಸ್ಥಳಗಳಲ್ಲಿಯೂ ತೋರುತ್ತದೆ, ಎಂಬ ಸಾಮಾನ್ಯವಾದ ಬ್ರಹ್ಮೋಪದೇಶಕ್ಕೆ ಜಾಗ್ರದವಸ್ಥೆಗೆ ಪ್ರೇರಕನಾಗಿರುವ ಸರ್ವೋತ್ಕೃಷ್ಟನಾದ ಕಣ್ಣಿನೊಳಗಣ ವಿಶ್ವರೂಪಿಯಾದ ಶ್ರೀಹರಿಯೇ ಜಲಾದಿ ಸ್ಥಾನಗಳಲ್ಲಿ ಪ್ರತಿಬಿಂಬಾದಿಗಳಿಗೂ ಪ್ರೇರಕನಾಗಿ ದಿವ್ಯದೃಷ್ಟಿಗೆ ಗೋಚರನಾಗಿರುತ್ತಾನೆ, ಎಂದು ಇಂದ್ರನು ತಿಳಿದುಕೊಂಡನು. ಹೀಗೆ ಚತುರ್ಮುಖನು ಶ್ರೀಹರಿಯೆಂಬ ಅಭಿಪ್ರಾಯದಿಂದ ಉಪದೇಶಿಸಿದರೂ ವಿರೋಚನನು ಅಯೋಗ್ಯನಾಗಿರುವುದರಿಂದ ದೇಹದ ಪ್ರತಿಬಿಂಬವೇ ಜಲಾದಿಗಳಲ್ಲಿ ಅಪಹತಪಾಪಾದಿಗಳುಳ್ಳ ಆತ್ಮನು, ಹೀಗೆ ತಿಳಿದುಕೊಂಡು ದೇಹಪ್ರತಿಬಿಂಬವೇ ಎಲ್ಲಾ ಕಡೆಗಳಲ್ಲಿಯೂ ಅಪಹತಪಾಪಾದಿ ಗುಣಗಳುಳ್ಳ ಆತ್ಮನೆಂದು ಚತುರ್ಮುಖನ ಅಭಿಪ್ರಾಯವೆಂದು ನಿಶ್ಚಯಮಾಡಿಕೊಂಡನು. ॥ ೧೦-೭ ॥ ॥ ೪ ॥

ಪೀ—ಬ್ರಹ್ಮಚರ್ಯವು ಮೋಕ್ಷಕ್ಕೆ ಸಾಧನವೆಂದು ಹಿಂದಿನ ಅಧಿಕರಣದಲ್ಲಿ ಹೇಳಿದೆ. ಆ ಬ್ರಹ್ಮಚರ್ಯವು ಆವ್ರತವನ್ನು ಮಾಡಿದವರಿಗೆಲ್ಲಾ ಮೋಕ್ಷವನ್ನು ಹೊಂದಿಸಿಕೊಡುತ್ತದೋ, ಕೆಲವರಿಗೆ ಮಾತ್ರವೋ? ಎಂದರೆ ಯೋಗ್ಯರಿಗೆ ಮಾತ್ರ ಬ್ರಹ್ಮಚರ್ಯದಿಂದ ಮೋಕ್ಷವಾಗುತ್ತದೆ, ಎಂಬ ಅರ್ಥವನ್ನು ಹಿಂದಿನ ಕಥೆ ಹೇಳಿಕೊಂಡು ಹೇಳುತ್ತಾರೆ—

**ಭಾ. ॥ (೧) ಇಂದ್ರೋ ವಿರೋಚನಶ್ಚೈವ ಶ್ರುತ್ವಾ ತು ಬ್ರಹ್ಮಣೋಽಕ್ಷಿಗಂ । ವಿಷ್ಣುಮಾನಂದರೂಪಂ ತಂ ಸಮ್ಯಗ್ಜ್ಞಾನವಿಪರ್ಯಯೌ । ಆಪತುಃ ॥ (೨) ತತ್ರ ದೇವೇಂದ್ರೋ ಜಾನನ್ನಪಿ ವಿರೋಚನಂ । ಮೋಹಯನ್ನನುರೂಪಾಣಿ ತಸ್ಯ ವಾಕ್ಯಾನ್ಯುವಾಚ ಹ ॥ (೩) ಯಥಾ ವಿರೋಚನೋ ನೈವ ಜಾನೀಯಾದ್ವಿಷ್ಣುಮಂಜಸಾ । ಸ್ವವಾಕ್ಯಂ ಚಾನೃತಂ ನ ಸ್ಯಾತ್ತಥಾ ಬ್ರಹ್ಮಾಽಪ್ಯುವಾಚ ಹ ॥ (೪) ಅಯೋಗ್ಯಾ ಹ್ಯಸುರಾ ಜ್ಞಾನೇ ವಕ್ತವ್ಯಂ ಚೈ(ನೈ)ವ ನಾ(ಚಾ)ನೃತಂ । ಮುಚ್ಯಾಪಾದಾಸುರೋ ಭಾವಃ ಪ್ರಹ್ಲಾದಾದೇರ್ನ ತು ಸ್ವತಃ । ಅಯಂ ತ್ವಾ(ಚಾ)ಸುರ ಏವಾತೋ ವಕ್ಷ್ಯಾಮ್ಯಸ್ಯೋಭಯಂ ಯಥಾ ॥ (೫) ಇಂದ್ರಸ್ತು ಶುದ್ಧಭಾವತ್ವಾತ್ಪುನರಾಯಾಸ್ಯತಿ ಧ್ರುವಂ । ಇತ್ಯಭಿಪ್ರಾಯತಃ ಪ್ರೋಕ್ತೋ ಬ್ರಹ್ಮಣಾಽಕ್ಷಿಗತೋ ಹರಿಃ ॥ ಅಯೋಗ್ಯತ್ವಾತ್ತು ತಚ್ಛ್ರುತ್ವಾ ಪ್ರತಿರೂಪಂ ವಿರೋಚನಃ । ಮತ್ವಾಽಪ್ಸ್ವಾದರ್ಶಕೇ ಚೈವ ಪಪ್ರಚ್ಛ ಕತಮಸ್ತ್ವಿತಿ ॥ (೬) ತತ್ರಾಪಿ ತು ಹರೇರ್ಭಾವಂ ಹೃದಿ ಕೃತ್ವಾ ಚತುರ್ಮುಖಃ । ದೃಶ್ಯತೇ ಹ್ಯೇಷ ಏವೇತಿ ತತ್ತ್ವವೇದಿವಿವಕ್ಷಯಾ ॥ ೧, ೨, ೩, ೪ ॥ ಇತಿ ಸಪ್ತಮಃ ಖಂಡಃ ॥ ೧೦-೭ ॥ ॥ ೧ ॥**

ಅ ॥ (೧) ಇಂದ್ರ ವಿರೋಚನರಿಬ್ಬರು ಆತ್ಮಜ್ಞಾನಕ್ಕಾಗಿ ಬ್ರಹ್ಮನ ಬಳಿಗೆ ಹೋಗಿ ಆತ್ಮನು ಯಾರೆಂದು ಪ್ರಶ್ನೆ ಮಾಡಲು ಚತುರ್ಮುಖನಿಂದ **ಯ ಏಷೋಽಂತರಕ್ಷಣಿ ಪುರುಷೋ ದೃಶ್ಯತೇ ಏಷ ಆತ್ಮಾ** ಎಂಬ ಉಪದೇಶವನ್ನು ಕೇಳಿ, ಇಂದ್ರನು ಕಣ್ಣಿನೊಳಗಣ ಪ್ರತಿಬಿಂಬಕ್ಕೆ ನಿಯಾಮಕನಾದ ಆನಂದರೂಪನಾದ ವಿಷ್ಣುವು ಆತ್ಮನು, ಎಂದು ಬ್ರಹ್ಮನು ಉಪದೇಶಿರುವನು ಎಂಬ ಯಥಾರ್ಥಜ್ಞಾನವನ್ನೂ, ವಿರೋಚನನು ಕಣ್ಣಿನೊಳಗೆ ಕಾಣುವ ಪುರುಷರೂಪವೇ (ಪ್ರತಿಬಿಂಬವೇ)ಆತ್ಮನೆಂದು ಬ್ರಹ್ಮನು ಉಪದೇಶಿಸಿರುವನು, ಎಂಬ ಭ್ರಮೆಯನ್ನೂ ತಮ್ಮ ಯೋಗ್ಯತಾನುಸಾರ ಹೊಂದಿರುವರು (೨) (ಇಂದ್ರನು ಯಥಾರ್ಥಜ್ಞಾನವನ್ನು ಹೊಂದಿದನೆಂದಾದರೆ—ಆತನಿಗೆ ಪ್ರತಿಬಿಂಬವು ಪರಮಾತ್ಮನಲ್ಲವೆಂದು ನಿರ್ಣಯವಿರುವುದರಿಂದ **ಕತಮ ಏಷಃ** ಎಂದು ಪ್ರಶ್ನೆ ಮಾಡಿದ್ದು ಹೇಗೆ? ಎಂದರೆ) ಇಂದ್ರನು ತತ್ತ್ವವನ್ನು ತಿಳಿ

ದವನಾದರೂ ವಿರೋಚನನಿಗೆ ಅಜ್ಞಾನವನ್ನು ಹೊಂದಿಸಿಕೊಡುವವನಾಗಿ ವಿರೋಚನನಿಗೆ ಅಥವಾ ಮೋಹಕ್ಕೆ ಅನುರೂಪಗಳಾದ ವಾಕ್ಯಗಳನ್ನು ಹೇಳಿದನು. (೩) (ಹಾಗಾದರೆ—ವಿದ್ಯಾರ್ಥಿಗಳಿಗೆ ಸ್ಪಷ್ಟವಾಗಿಯೇ ಹೇಳಬೇಕಾಗಿರುವುದರಿಂದ ಬ್ರಹ್ಮನು ಸಮ್ಯಗ್ಧಾಕಾರವಾಗಿ ಏಕೆ ಉಪದೇಶಿಸಿರುವನು? ಎಂದರೆ) ವಿರೋಚನನು ಹೇಗೆ ವಿಷ್ಣುವನ್ನು ಚೆನ್ನಾಗಿ ತಿಳಿಯಲಾರನೋ, ಮತ್ತು ತನ್ನ (ಬ್ರಹ್ಮನ) ಮಾತೂಕೂಡ ಅನೃತವು ಹೇಗೆ ಆಗಲಾರದೋ, ಹಾಗೆಯೇ ಬ್ರಹ್ಮನೂ ಉಪದೇಶಿಸಿರುವನು. (೪) (ವಿರೋಚನನಿಗೂ ತತ್ತ್ವಜ್ಞಾನವು ಬರಲಿ, ಬ್ರಹ್ಮನ ಮಾತು ಅನೃತವೂ ಆಗಲಿ. ದೋಷವೇನು? ಎಂದರೆ) ಅಸುರರು ಜ್ಞಾನಹೊಂದಲಿಕ್ಕೆ ಸರ್ವಥಾ ಯೋಗ್ಯರಲ್ಲ. ಅನೃತವನ್ನು ಸರ್ವಥಾ ಹೇಳಬಾರದು ಆದುಕಾರಣ ವಿರೋಚನನಿಗೆ ಜ್ಞಾನಪ್ರಾಪ್ತಿಯಾಗದಿರುವುದೂ, ತನ್ನ ಮಾತು ಸುಳ್ಳಾಗದಿರುವುದೂ, ಈ ಎರಡೂ ಹೇಗೆ ಆಗುವುದೋ ಹಾಗೆಯೇ ಹೇಳುವೆನು. (ಹಾಗಾದರೆ ಪ್ರಹ್ಲಾದ ಮೊದಲಾದ ಅಸುರರೂ ಜ್ಞಾನಿಗಳಾಗಿ ದೃಷ್ಟರಾಗಿರುತ್ತಾರೆ. ಆದಕಾರಣ ಅಸುರರು ಜ್ಞಾನಕ್ಕೆ ಅಯೋಗ್ಯರೆಂದು ಹೇಳಿದ್ದು ಹೇಗೆಂದರೆ) ಪ್ರಹ್ಲಾದ ಮೊದಲಾದವರಿಗೆ ನನ್ನ ಶಾಪದಿಂದಲೇ ಅಸುರಭಾವವು ಬಂದಿರುತ್ತದೆ ಅಸುರಭಾವವು ಸ್ವಾಭಾವಿಕವಾದುದು ಅಲ್ಲವೇ ಅಲ್ಲ. ವಿರೋಚನನು ಸ್ವಾಭಾವಿಕವಾಗಿ ಅಸುರನೇ ಆಗಿರುತ್ತಾನೆ, ಆದುದರಿಂದಲೂ ವಿರೋಚನನಿಗೆ ಜ್ಞಾನ ಬಾರದಿರುವುದೂ, ತನ್ನ ಮಾತು ಅನೃತವು ಹೇಗೆ ಆಗಲಾರದೋ, ಹಾಗೆಯೇ ಎರಡನ್ನೂ ಹೇಳುವೆನು. (೫) (ಹಾಗಾದರೆ ಉಪದೇಶವು ಸಮ್ಯಗ್ಧವಾಗಿರುವುದರಿಂದ ಇಂದ್ರನಿಗೂ ವಿಪರೀತ ಜ್ಞಾನವೇ ಪ್ರಾಪ್ತವಾದೀತು ಎಂದರೆ—) ದೇವೇಂದ್ರನಾದರೂ ಪರಿಶುದ್ಧ ಸ್ವಭಾವವುಳ್ಳವನಾದುದರಿಂದ ನಿಶ್ಚಯವಾಗಿಯೂ ತತ್ತ್ವಜ್ಞಾನಕ್ಕಾಗಿ ಮರಳಿ ಬರುವನು. ಈ ಅಭಿಪ್ರಾಯದಿಂದ ಬ್ರಹ್ಮನು ಕಣ್ಣಿಗೆ ನಿಯಾಮಕನಾಗಿರುವ ಶ್ರೀಹರಿಯನ್ನು ಉಪದೇಶಿಸಿರುವನು. ವಿರೋಚನನು ಮೋಕ್ಷಹೊಂದಲಿಕ್ಕೆ ಅಯೋಗ್ಯನಾಗಿರುವುದರಿಂದ ಆ ಉಪದೇಶವನ್ನು ಕೇಳಿ ಪ್ರತಿಬಿಂಬವೇ ಪರಬ್ರಹ್ಮವೆಂದು ತಿಳಿದು ಪುನಃ ನಿರ್ಣಯಿಸಿಕೊಳ್ಳುವುದಕ್ಕಾಗಿ ನೀರಿನಲ್ಲಿಯೂ ಕನ್ನಡಿಯಲ್ಲಿಯೂ ಇರುವ ಪ್ರತಿಬಿಂಬರೂಪವು ಯಾವುದು? ಎಂದು ವಿರೋಚನನು ಕೇಳಿದನು. (೬) (**ಏಷ ಉ ಏವೈಷು ಸರ್ವೇಷು** ಎಂದು ಪರಿಹಾರವಾಕ್ಯದ ಅಭಿಪ್ರಾಯ ಹೇಳುತ್ತಾರೆ—) ಚತುರ್ಮುಖನು ಜಲಾದಿಗಳಲ್ಲಿಯೂ ಪ್ರತಿಬಿಂಬಾದಿಗಳಿಗೆ ಪ್ರೇರಕನಾಗಿ ಶ್ರೀಪರಬ್ರಹ್ಮನೇ ಇರುವುದೆಂದು ಅಭಿಪ್ರಾಯ ಮಾಡಿಕೊಂಡು ತತ್ತ್ವಜ್ಞಾನಿಗಳನ್ನು ವಿವಕ್ಷಾಮಾಡಿಕೊಂಡು ಅವ್ಯಕ್ತನಾದ ಶ್ರೀಹರಿಯು ತೋರುತ್ತಾನೆಂದು ಹೇಳಿರುತ್ತಾರೆ.॥೭॥

ಏಳನೇ ಖಂಡವು ಮುಗಿಯಿತು.

## ೮ನೇ ಖಂಡವು

ಪೀ—ದಿವ್ಯದೃಷ್ಟಿಗೆ ಗೋಚರನಾದ, ಕಣ್ಣಿನೊಳಗಣ ಶ್ರೀಹರಿಯೇ ಜಲಾದಿಗಳಲ್ಲಿ ತೋರುತ್ತಾನೆ, ಎಂಬ ಅಭಿಪ್ರಾಯದಿಂದ ಚತುರ್ಮುಖನು ಹೇಳಿದರೂ ವಿರೋಚನನು ಕಣ್ಣು ಮೊದಲಾದವುಗಳಲ್ಲಿ ತೋರುವ ದೇಹಪ್ರತಿಬಿಂಬವೇ ಆತ್ಮನೆಂದು ತಿಳಿದುಕೊಂಡನು. ಯೋಗ್ಯತೆಯಿದ್ದರೇನೇ ತತ್ತ್ವಜ್ಞಾನವು ಹುಟ್ಟುವುದೆಂಬ ಅಭಿಪ್ರಾಯದಿಂದ ಪ್ರತಿಬಿಂಬದಲ್ಲಿ ಬಿಂಬವಾದ ದೇಹದ ಗುಣದಿಂದ ಗುಣವೂ, ಬಿಂಬದೋಷವೂ ಕಂಡದ್ರಿಂದ ದೇಹಪ್ರತಿಬಿಂಬವೇ ಬ್ರಹ್ಮನು, ಎಂಬುದು ಕೂಡಲಾರದೆಂಬ ಅಭಿಪ್ರಾಯದಿಂದ ಪ್ರತಿಬಿಂಬದಲ್ಲಿ ದೋಷಗಳನ್ನು ಸೂಚಿಸುತ್ತಾರೆ—

**ಉ. ॥ ಉದಶರಾವ ಆತ್ಮಾನಮವೇಕ್ಷ್ಯ ಯದಾತ್ಮನೋ ನ ವಿಜಾನೀಥಸ್ತನ್ಮೇ ಪ್ರಬ್ರೂತಮಿತಿ ತೌ ಹೋದಶರಾವೇವೇಕ್ಷಾಂಚಕ್ರಾತೇ ತೌ ಹ ಪ್ರ-**

**ಜಾಪತಿರುವಾಚ ಕಿಂ ಪಶ್ಯಥ ಇತಿ ತೌ ಹೋಚತುಃ ಸರ್ವಮೇವೇದಮಾವಾಂ ಭಗವ ಆತ್ಮಾನಂ ಪಶ್ಯಾವ ಆ ಲೋಮಭ್ಯ ಆ ನಖೇಭ್ಯಃ ಪ್ರತಿರೂಪಮಿತಿ ॥ ೧ ॥**

ಅ ॥ ನೀರು ತುಂಬಿದ ಮಣ್ಣಿನಬಾವಡೆಯಲ್ಲಿ ತನ್ನ ಶರೀರವನ್ನು ನೋಡಿ, ತನಗಿದ್ದ ಯಾವ ಅಂಗಾದಿಗಳನ್ನು ನೋಡುವುದಿಲ್ಲವೋ, ಅಂತಹ ತಿಳಿಯದ ಅಂಗಾದಿಗಳನ್ನು ನನಗೆ ಹೇಳಿರಿ, ಎಂದು ಚತುರ್ಮುಖನು ಹೇಳಿದನು. ಆಗ ಇಂದ್ರ ವಿರೋಚನರು ನೀರುತುಂಬಿದ ಮಣ್ಣಿನ ಬಾವಡೆಯಲ್ಲಿ ತಮ್ಮ ಶರೀರಗಳನ್ನು ನೋಡಿಕೊಂಡರು. ಬ್ರಹ್ಮನು ಏನು ನೋಡಿದಿರಿ, ಎಂದು ಇಂದ್ರ ವಿರೋಚನರಿಗೆ ಕೇಳಿದನು. ಆಗ ಅವರಿಬ್ಬರು ಎಲೋ ಪೂಜ್ಯರೇ ಎಲ್ಲವನ್ನು ನೋಡಿದೆವೆಂದರು. ಅಂದರೆ ನಾವಿಬ್ಬರೂ ರೋಮ ಉಗುರು ಇತ್ಯಾದಿಗಳಿಂದೊಡಗೂಡಿದ ಪ್ರತಿಬಿಂಬಭೂತ ಶರೀರವನ್ನು ನೋಡಿದೆವೆಂದರು ॥ ೧ ॥

**ಉ. ॥ ತೌ ಹ ಪ್ರಜಾಪತಿರುವಾಚ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಭೂತ್ವೋದಶರಾವೇಽವೇಕ್ಷೇಥಾಮಿತಿ ತೌ ಹ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಭೂತ್ವೋದಶರಾವೇಽವೇಕ್ಷಾಂಚಕ್ರಾತೇ ತೌ ಹ ಪ್ರಜಾಪತಿರುವಾಚ ಕಿಂ ಪಶ್ಯಥ ಇತಿ ॥ ೨ ॥**

ಅ ॥ ಚೆನ್ನಾಗಿ ಅಲಂಕಾರ ಮಾಡಿಕೊಂಡು ಒಳ್ಳೇ ವಸ್ತ್ರವುಟ್ಟುಕೊಂಡು ಚೆನ್ನಾಗಿ ಗಂಧಾದಿಗಳನ್ನು ಲೇಪಿಸಿಕೊಂಡು ನೀವು ನೀರು ತುಂಬಿದ ಮಣ್ಣಿನ ಬಾವಡೆಯಲ್ಲಿ ನೋಡಿರಿ, ಎಂದು ಬ್ರಹ್ಮನು ಮರಳಿ ಅವರಿಗೆ ಹೇಳಿದನು. ಆಗ ಇಂದ್ರ ವಿರೋಚನರು ಚೆನ್ನಾಗಿ ಅಲಂಕರಿಸಿಕೊಂಡು ಒಳ್ಳೇ ಬಟ್ಟೆಯುಟ್ಟುಕೊಂಡು ಗಂಧಾದಿಗಳನ್ನು ಲೇಪಿಸಿಕೊಂಡು ಆ ನೀರಿನ ಬಾವಡೆಯಲ್ಲಿ ನೋಡಿದರು ಆ ಮೇಲೆ ಇಂದ್ರ ವಿರೋಚನರಿಗೆ ಬ್ರಹ್ಮನು ಏನು ನೋಡಿರುವಿರಿ, ಎಂದು ಕೇಳಿದನು ॥ ೨ ॥

**ಉ. ॥ ತೌ ಹೋಚತುರ್ಯಥೈವೇದಮಾವಾಂ ಭಗವಃ ಸಾಧ್ವಲಂಕೃತೌ ಸುವಸನೌ ಪರಿಷ್ಕೃತೌ ಸ್ವ ಏವಮೇವೇಮೌ ಭಗವಃ ಸಾಧ್ವಲಂಕೃತೌ ಸುವಸನೌ ಪರಿಷ್ಕೃತಾವಿತಿ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತೌ ಹ ಶಾಂತಹೃದಯೌ ಪ್ರವವ್ರಜತುಃ ॥ ೩ ॥**

ಅ ॥ ಎಲೋ ಪೂಜ್ಯರೇ ನಾವಿಬ್ಬರು ಚೆನ್ನಾಗಿ ಅಲಂಕರಿಸಿಕೊಂಡು ಒಳ್ಳೇ ಬಟ್ಟೆಯುಟ್ಟುಕೊಂಡು ಗಂಧಾದಿಗಳನ್ನೇ ಲೇಪಿಸಿಕೊಂಡು ಇರುವವರು ಹೇಗೆ ಆಗಿರುವೆವೋ, ಹಾಗೆಯೇ ಈ ಪ್ರತಿಬಿಂಬಗಳೂ ಆಗಿವೆ, ಎಂದು ಇಂದ್ರ ವಿರೋಚನರು ಹೇಳಿದರು. ಆಮೇಲೆ ಹೀಗೆ ದೇಹಗುಣದಿಂದಲೂ ದೋಷದಿಂದಲೂ ಕೂಡಿರುವ ಪ್ರತಿಬಿಂಬವೇ ಆತ್ಮನೋ, ಅಮೃತನೋ, ಅಭಯನೋ? ಎಂದು ಬ್ರಹ್ಮನು ಕೇಳಿದನು. (ಅಂದರೆ ಪ್ರತಿಬಿಂಬವು ಆತ್ಮನೂ ಅಮೃತನೂ ಅಭಯನೂ ಹೇಗೆ ಆದೀತು?) ಹೀಗೆ ಕಾಕುಸ್ವರದಿಂದ ಹೇಳಿದ್ದನ್ನು ತಿಳಿಯದೆ ವಿರೋಚನನು ಪ್ರತಿಬಿಂಬವೇ ಬ್ರಹ್ಮನೆಂದು ತಿಳಿದು ಶಾಂತನಾಗಿ ಪರಬ್ರಹ್ಮನನ್ನು ತಿಳಿದುಕೊಂಡು ಹೋದನು ಮತ್ತು ಶ್ರೀಹರಿಯೇ ಬಿಂಬಕ್ಕೆ ಅನುಗುಣವಾದ ಪ್ರತಿಬಿಂಬವನ್ನು ಸೃಷ್ಟಿಸಿರುವ ಆತ್ಮನು ಅಮೃತನು ಅಭಯನು, ಎಂದು ಇಂದ್ರನು ತಿಳಿದು ಹೋದನು. ಹೀಗೆ ಶ್ರೀಹರಿಯು ಎಂಬ ಅಭಿಪ್ರಾಯದಿಂದ ಬ್ರಹ್ಮನು ಹೇಳಿದರೂ ವಿರೋಚನನ ಅಯೋಗ್ಯನಾಗಿರುವುದರಿಂದ ಪ್ರತಿ

ಬಿಂಬವೇ, ಬ್ರಹ್ಮನು. ಅವನ ಪೂಜೆಗಾಗಿ ತನ್ನ ಪೂಜೆಯನ್ನೇ ಮಾಡಬೇಕು, ಎಂದು ತಿಳಿದು ಬ್ರಹ್ಮನು ಸೂಚಿಸಿದ ದೋಷವನ್ನು ಗಣನೆಮಾಡದೆ ಇಂದ್ರನಿಂದೊಡಗೂಡಿ ವಿರೋಚನನು ಹೋದನು. ಎಂದು ವೇದಪುರುಷನು ಹೇಳಿದನು. ॥ ૩ ॥

**ಉ. ॥ ತೌ ಹಾನ್ವೀಕ್ಷ್ಯ ಪ್ರಜಾಪತಿರುವಾಚಾನುಪಲಭ್ಯಾತ್ಮಾನಮನನುವಿದ್ಯ ವ್ರಜತೋ ಯತರ ಏತದುಪನಿಷದೋ ಭವಿಷ್ಯಂತಿ ದೇವಾ ವಾಽಸುರಾ ವಾ ತೇ ಪರಾಭವಿಷ್ಯಂತೀತಿ ಸಹ ಶಾಂತಹೃದಯ ಏವ ವಿರೋಚನೋಽಸುರಾನ್ ಜಗಾಮ ತೇಭ್ಯೋ ಹೈತಾಮುಪನಿಷದಂ ಪ್ರೋವಾಚಾತ್ಮೈವೇಹ ಮಹಯ್ಯ ಆತ್ಮಾ ಪರಿಚರ್ಯ ಆತ್ಮಾನಮೇವೇಹ ಮಹಯನ್ನಾತ್ಮಾನಂ ಪರಿಚರನ್ನುಭೌ ಲೋಕಾವವಾಪ್ನೋತೀಮಂ ಚಾಮುಂ ಚೇತಿ ॥ ೪ ॥**

ಅ ॥ (ಪರಬ್ರಹ್ಮನ ತತ್ವವನ್ನು ಚೆನ್ನಾಗಿ ಚತುರ್ಮುಖನು ಉಪದೇಶಿಸಿರುವನು, ಎಂಬ ಅಭಿಪ್ರಾಯದಿಂದ) ಹೋಗುತ್ತಿರುವ ಇಂದ್ರ ವಿರೋಚನರನ್ನು ನೋಡಿ ಬ್ರಹ್ಮನು (ತಾನು ಮಧ್ಯಸ್ಥನು ಎಂದು ತಿಳಿಸುತ್ತಾ) ಹೇಳಿದನು. ಅಪಹತ ಪಾಪ್ಮತ್ವಾದಿಗುಣಗಳುಳ್ಳ ಆತ್ಮನನ್ನು ಹೊಂದದೆ (ಅಂದರೆ ಶ್ರವಣಮನನಾದಿಗಳಿಂದ ಚೆನ್ನಾಗಿ ತಿಳಿಯದೆ) ಪ್ರತ್ಯಕ್ಷವಾಗಿ ಹೋಗತಕ್ಕ ಪುರುಷನಿಂದ, ದೇವತೆಗಳಾಗಲೀ ಅಸುರರಾಗಲೀ ಯಾರಾದರೂ ಈ ಉಪನಿಷತ್ತಿನ ರಹಸ್ಯ ಪ್ರಮೇಯವನ್ನು ಉಪದೇಶ ಪಡೆದುಕೊಳ್ಳುತ್ತಾರೋ, ಅಥವಾ (ತನಗೆ ಅಭಿಪ್ರೇತವಾದ ಅರ್ಥವನ್ನು ತಿಳಿಯುವುದು ಅಸಾಧ್ಯವಾಗಿರುವುದರಿಂದ) ಉಪನಿಷತ್ತಿನಲ್ಲಿ ಆಪಾತತಃ ತೋರುವ ಅರ್ಥವನ್ನು ತಿಳಿದವರಾಗುತ್ತಾರೋ, ಅವರು ಪರಾಜಯವುಳ್ಳವರಾಗುತ್ತಾರೆ, ಎಂದು ಚತುರ್ಮುಖನು ಹೇಳಿದನು. ಆಗ ವಿರೋಚನನು ನಾನು ಪರಬ್ರಹ್ಮನನ್ನು ತಿಳಿದಿರುತ್ತೇನೆ, ಗಹನವೇನಿದೆ? ಎಂಬ ಅಭಿಪ್ರಾಯದಿಂದಲೇ ಅಸುರರ ಬಳಿಗೆ ಹೋದನು. ಆಶ್ಚರ್ಯ. ಅಸುರರಿಗೆ ದೇಹಪ್ರತಿಬಿಂಬವೇ ಬ್ರಹ್ಮನು, ಬಿಂಬ ಪ್ರತಿಬಿಂಬಗಳಿಗೆ ಐಕ್ಯವು, ಜೀವಾತ್ಮನೂ ಬ್ರಹ್ಮನೇ, ಎಂಬೀ ರಹಸ್ಯವನ್ನು ಉಪದೇಶಿಸಿದನು. (ಅದನ್ನೇ ವಿವರಿಸುತ್ತಾರೆ) ಜಗತ್ತಿನಲ್ಲಿ ತನ್ನ ದೇಹವೇ, ಅಥವಾ ಜೀವನೇ ವಸ್ತ್ರ ಅಲಂಕಾರಗಳಿಂದ ಪೂಜಿಸಿಕೊಳ್ಳಲ್ಪಡತಕ್ಕವನು. (ಜೀವನೇ ಬ್ರಹ್ಮನಾದುದರಿಂದ ಪರಬ್ರಹ್ಮನಿಗೆ ಪೂಜಾದಿಗಳನ್ನು ಮಾಡಬೇಕೆಂದು ಇಚ್ಛಿಸುವವರಿಂದ) ಜೀವನೇ ಸೇವಿಸಲ್ಪಡಬೇಕು. (ಹೀಗೆ ಜೀವನಿಗೆ ಪೂಜಾದಿಗಳನ್ನು ಮಾಡಿದರೆ ಫಲ ಹೇಳುತ್ತಾರೆ.) ಜಗತ್ತಿನಲ್ಲಿ ದೇಹವನ್ನೇ ಅಥವಾ ಜೀವನನ್ನೇ ಪೂಜಿಸುತ್ತಾ, ಸೇವಿಸುತ್ತಾ ಇರುವವನು ಈ ಲೋಕ, ಪರಲೋಕ, ಹೀಗೆ ಎರಡು ಲೋಕಗಳನ್ನು ಹೊಂದುತ್ತಾನೆ, ಎಂದು ವಿರೋಚನನು ಹೇಳಿದನು. (ಏವಂಚ ಬ್ರಹ್ಮನಿಂದ ಅಭಿನ್ನನಾದ ಜೀವನ ಪೂಜಾದಿಗಳೇ ಉಭಯಲೋಕಗಳಿಗೆ ಸಾಧನಗಳೆಂದು ವೇದಾದಿಗಳಲ್ಲಿ ಹೇಳಿವೆ.) ॥ ೪ ॥

ಪೀ—ವಿರೋಚನನು ತಿಳಿದದ್ದು ಅಸುರರ ಮತವು ಎಂದು ವೇದವು ಹೇಳುತ್ತದೆ

**ಉ. ॥ ತಸ್ಮಾದಪ್ಯದ್ಯೇಹಾದದಾನಮಶ್ರದ್ದಧಾನಮಯಜಮಾನಮಾಹುರಾಸುರೋ ಬತೇತ್ಯಸುರಾಣಾಂ ಹ್ಯೇಷೋಪನಿಷತ್ಪ್ರೇತಸ್ಯ ಶರೀರಂ ಭಿಕ್ಷಯಾ ವಸನೇನಾಲಂಕಾರೇಣೇತಿ ಸꣳಸ್ಕುರ್ವಂತ್ಯೇತೇನ ಹ್ಯಮುಂ ಲೋಕಂ ಜೇಷ್ಯಂತೋ ಮನ್ಯಂತೇ ॥ ಇತ್ಯಷ್ಟಮಃ ಖಂಡಃ ॥ ೧೦-೮ ॥ ॥ ೫ ॥**

ಅ || ದೇಹವನ್ನೇ ಪೂಜಿಸಬೇಕೆಂಬುವುದು ಅಸುರರ ಪಕ್ಷವಾದುದರಿಂದಲೇ ಅಥವಾ ಅಸುರರ ಪಕ್ಷದಲ್ಲಿ ಜೀವನೇ ಬ್ರಹ್ಮನೆಂದು ಪೂಜಿಸಲ್ಪಡುವುದರಿಂದ ಈಗಲೂ ಜೀವನಿಂದ ಬೇರೆಯಾದ ಈಶ್ವರನಿಗೆ ಪ್ರೀತಿಯಾಗಬೇಕೆಂಬ ಉದ್ದೇಶದಿಂದ ದಾನಮಾಡದಿರುವ ಜೀವನಿಂದ ಬೇರೆ ಈಶ್ವರನಿದ್ದಾನೆಂಬುವಲ್ಲಿ ಶ್ರದ್ಧೆಯಿಲ್ಲದಿರುವ, ಜೀವನಿಂದ ಬೇರೆಯಾದ ಈಶ್ವರನಿಗೆ ಪ್ರೀತಿಯಾಗಬೇಕೆಂಬ ಉದ್ದೇಶದಿಂದ ಯಾಗ ಮಾಡದಿರುವ, ಕೇವಲ ತಮ್ಮ ಭೋಗದಲ್ಲಿಯೇ ಆಸಕ್ತರಾದ ಜನರನ್ನು ಪ್ರಾಜ್ಞರು ನೋಡಿ, ಇವರು ಅಸುರಸ್ವಭಾವದವರು, ಆಶ್ಚರ್ಯ! ಶ್ರೀಹರಿಯು ಸರ್ವೋತ್ತಮನೆಂದು ತಿಳಿಯುವುದಿಲ್ಲ, ಎನ್ನುತ್ತಾರೆ. ಯಾಗಾದಿ ಸತ್ಕರ್ಮಗಳನ್ನು ಮಾಡದಿರುವುದು ಇತ್ಯಾದಿಗಳು ಅಸುರರ ರಹಸ್ಯವಾಗಿರುವುದರಿಂದ ವಿರೋಚನನಿಂದ ಉಪದೇಶ ಪಡೆದುಕೊಂಡ ಅಸುರರು ಈಗಲೂ ಪ್ರೇತಶರೀರವನ್ನು (ಜೀವವಿಲ್ಲದ ಹೆಣವನ್ನು) ಭಿಕ್ಷಾದಿಗಳಿಂದ ಪ್ರಾಪ್ತವಾದ ಗಂಧ ಮಾಲ್ಯ ವಸ್ತ್ರ ಅಲಂಕಾರಾದಿಗಳಿಂದ ಅಲಂಕರಿಸುತ್ತಾರೆ. ಪ್ರೇತ ದೇಹವನ್ನು ಅಲಂಕರಿಸುವವರು ಈ ಲೋಕವನ್ನೂ ಪರಲೋಕವನ್ನೂ ಹೊಂದುವರೆಂದು ಅಸರರು ತಿಳಿಯುತ್ತಾರೆ.

ವಿ || ಪ್ರತಿಬಿಂಬಭೂತ ಬ್ರಹ್ಮನಿಂದ ಅಭಿನ್ನನಾದ ಜೀವನ ಶರೀರವನ್ನು ಅಲಂಕರಿಸಿದರೆ ಜೀವಾಭಿನ್ನ ಬ್ರಹ್ಮನಿಗೂ ತೃಪ್ತಿಯಾಗುತ್ತದೆಂಬ ಅಭಿಪ್ರಾಯದಿಂದ ಅಸುರರು ಪೂಜಿಸುತ್ತಾರೆ || ೧೦--೮ || || ೫ ||

ಪೀ—ಈ ಖಂಡದ ತಾತ್ಪರ್ಯ ಹೇಳುತ್ತಾರೆ—

**ಭಾ. || (೧) ತಥಾಽಪಿ ಯೋಗ್ಯತೈವಾತ್ರ ಭೂಯಸೀತಿ ನಿವೇದಿತುಂ | ದರ್ಶಯನ್ ಪ್ರತಿರೂಪಸ್ಯ ದೋಷಾನಾಹ ಪ್ರಜಾಪತಿಃ | ಅಲಂಕಾರಾದಿಭಿರ್ಯುಕ್ತಃ ಪಶ್ಯಸ್ವೇತಿ ವಿವೇಚಯನ್ || (೨) ಯಥಾ ದೇಹಗುಣೇ ಗೌಣ್ಯಂ ದೋಷೇ ದೋಷಾಸ್ತಥೈವ(ಥೇತಿ) ತು || (೩) ತಥಾಽಪ್ಯಶುದ್ಧಭಾವತ್ವಾತ್ಪ್ರತಿರೂಪಸ್ಯ ತದ್ಗುಣಾನ್ | ಪರಸ್ಯ ಬ್ರಹ್ಮಣೋ ಜಾನನ್ ಯಯೌ ತುಷ್ಟಮನಾಃ ಸ್ವಯಂ || (೪) ಅಸುರಾಣಾಮವಿಶ್ವಾಸನಿವೃತ್ತ್ಯರ್ಥಂ ಪಿತಾಮಹಃ| ಮಾಧ್ಯಸ್ಥ್ಯಂ ಜ್ಞಾಪಯಾನಶ್ಚ ಜಾನನ್ವೈರೋಚನಂ ಮನಃ | ಪ್ರಾಹಾಜ್ಞಾನಾಂ ಪರಾಭಾವ ಇತ್ಯುಚ್ಚೈಶ್ಚ ಪುನಃಪುನಃ || (೫) ತಥಾಽಪ್ಯಶುದ್ಧಭಾವತ್ವಾದಜಾನನ್ನೇವ ನಿರ್ಯಯೌ || (೬) ಗತ್ವಾ ಚೈವ ಪರಂಬ್ರಹ್ಮ ಪ್ರತಿರೂಪಾತ್ಮಕಂ ಸದಾ | ದಿದೇಶ ಸರ್ವಾಸುರಾಣಾಂ ಶರೀರಾಲಂಕೃತೇರಪಿ | ಅಲಂಕೃತಿಂ ಬ್ರಹ್ಮಣಶ್ಚ ಪ್ರತ್ಯಕ್ಷೇಣೋಪಲಂಭಿತಾಂ || (೭) ಅತೋಽಸುರಾ ನ ದಾಸ್ಯಂತಿ ನ ಯಜಂತ್ಯಾತ್ಮನಃ ಪರಂ | ಸ್ವಭೋಗೇನೈವ ತೃಪ್ತಿಃ ಸ್ಯಾದಿತಿ ಸರ್ವೇಽಪಿ ಮೇನಿರೇ || ತತ್ಸಂಸ್ಕಾರವಶೇನೈವ ಸ್ವಯಂ ಬ್ರಹ್ಮೇತಿವಾದಿನಃ | ಅಭವನ್ನಪತಂಶ್ಚೈವ ತಮೋಽಂಧೇ ನಿತ್ಯದುಃಖಿತಾಃ || ೧, ೨, ೩, ೪, ೫ || ಇತ್ಯಷ್ಟಮಃ ಖಂಡಃ || ೧೦—೮ || || ೧ ||**

ಅ || (೧) (ಬಿಂಬವಾದ ದೇಹವು ಅಲಂಕೃತವಾಗಿದ್ದರೆ ಪ್ರತಿಬಿಂಬವೂ ಅಲಂಕೃತವಾಗಿ ತೋರುತ್ತದೆ. ದೇಹವು ಅಲಂಕರಿಸಲ್ಪಡದಿದ್ದರೆ ಅದರ ಪ್ರತಿಬಿಂಬವೂ ಅಲಂಕರಿಸಲ್ಪಡದಿದ್ದ ಹಾಗೆ ಕಾಣುತ್ತದೆ. ಈ ಎರಡು ಪ್ರತಿಬಿಂಬವೂ ಪರಬ್ರಹ್ಮನಲ್ಲವೆಂದು ಯದ್ಯಪಿ ಸ್ಪಷ್ಟವಾಗಿ ತಿಳಿಯಲು ಶಕ್ಯವಾಗಿದೆ.) ಆದರೂ (ವಿರೋಚನನು ಹಾಗೆ ತಿಳಿಯಲಿಲ್ಲ. ಅದುಕಾರಣ) ಈ ವಿಷಯದಲ್ಲಿ ಯೋಗ್ಯತೆಯೇ ಶ್ರೇಷ್ಠವು, ಎಂದು ತಿಳಿಸಲಿಕ್ಕೆ, ಚತುರ್ಮುಖ ಬ್ರಹ್ಮನು (ಪ್ರತಿಬಿಂಬದಿಂದ ಪರಬ್ರಹ್ಮನು ಬೇರೆಯೆಂದು) ತೋರ್ಪಡಿಸುವುದಕ್ಕಾಗಿ ಪ್ರತಿಬಿಂಬದಲ್ಲಿದ್ದ ದೋಷಗಳನ್ನು ಸೂಚಿಸುತ್ತಾ ಆಭರಣಾದಿಗಳನ್ನು ಧರಿಸಿ

ಕೊಂಡು ಪ್ರತಿಬಿಂಬವನ್ನು ನೋಡು ಎಂದು ಬ್ರಹ್ಮನು ವಿರೋಚನನಿಗೆ ಹೇಳಿದನು. (೨) (ಅಲಂಕಾರಾದಿಗಳಿಂದೊಡಗೂಡಿ ನೋಡು ಎಂಬುದರಿಂದ ದೋಷವು ಹೇಗೆ ಸೂಚಿತವಾಯಿತೆಂದರೆ.) ದೇಹದಲ್ಲಿ ಗುಣವಿದ್ದರೆ ಪ್ರತಿಬಿಂಬದಲ್ಲಿಯೂ ಗುಣಗಳು ತೋರುತ್ತವೆ. ದೋಷಗಳಿದ್ದರೆ ಪ್ರತಿಬಿಂಬದಲ್ಲಿಯೂ ದೋಷಗಳು ತೋರತ್ತವೆ, ಹೀಗೆ ದೋಷಗಳನ್ನು ತೋರಿಸುವುದಕ್ಕಾಗಿ ಹೇಳಿದರು. (ಅದುಕಾರಣ ಜ್ಞಾನಿಗೆ ದೋಷವೂ ತಿಳಿಯಲು ಶಕ್ಯವಾಗುತ್ತದೆ.) (೩) (ಚತುರ್ಮುಖನು ದೋಷವನ್ನು ಸೂಚಿಸಿದರೂ ವಿರೋಚನನು ಶಾಂತಹೃದಯನಾಗಿಯೇ ಹೇಗೆ ಹೋದನು? ಎಂದರೆ) ಬ್ರಹ್ಮನು ದೋಷವನ್ನು ಸೂಚಿಸಿದರೂ ವಿರೋಚನನು ಶುದ್ಧಸ್ವಭಾವವುಳ್ಳವನಾಗಿರುವುದರಿಂದ ಪ್ರತಿಬಿಂಬದಲ್ಲಿದ್ದ ಎಲ್ಲಾ ಗುಣಗಳನ್ನು ಪರಬ್ರಹ್ಮನ ಗುಣಗಳನ್ನಾಗಿ ತಿಳಿದುಕೊಂಡು ತಾನು ಸಂತುಷ್ಟವಾದ ಮನಸ್ಸುಳ್ಳವನಾಗಿ ಹೊರಟುಹೋದನು. (೪) (೩ನೇ ಮಂತ್ರದಲ್ಲಿದ್ದ **ಅನುಪಲಭ್ಯಾತ್ಮಾನಂ—ಪರಾಭವಿಷ್ಯಂತಿ** ಎಂಬ ಚತುರ್ಮುಖ ವಚನದ ಅಭಿಪ್ರಾಯ ಹೇಳುತ್ತಾರೆ.) ಚತುರ್ಮುಖನು ಅಸುರರಿಗೆ ಅವಿಶ್ವಾಸವು ಬರಬಾರದು, ವಿಶ್ವಾಸವು ಹುಟ್ಟಬೇಕೆಂಬುದಕ್ಕಾಗಿ ಮಧ್ಯಸ್ಥನೆಂದು ತಿಳಿಸುತ್ತಾ ವಿರೋಚನನ ಮನಸ್ಸು ವ್ಯತಾಸವಾಗುವುದಿಲ್ಲ, ಎಂದು ತಾನು ತಿಳಿದುಕೊಂಡು, (ಉಪನಿಷತ್ತಿನ ರಹಸ್ಯ ಪ್ರಮೇಯವನ್ನು) ತಿಳಿಯದವರಿಗೆ ಪರಾಜಯವು ಉಂಟಾಗುತ್ತದೆ, ಎಂದು ಉಚ್ಚಸ್ವರದಿಂದ ಮತ್ತು ಮತ್ತು ಹೇಳಿದನು. (೫) (**ಸಹ ಶಾಂತಹೃದಯ ಏವ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ.) ಬ್ರಹ್ಮನು ಹೀಗೆ ಹೇಳಿದರೂ ವಿರೋಚನನು ಅಶುದ್ಧವಾದ ಸ್ವಭಾವವುಳ್ಳವನಾದುದರಿಂದ (ಈ ವಿಷಯದಲ್ಲಿ ಗಹನವೇನಿದೆ? ಎಂಬ ಅಭಿಪ್ರಾಯದಿಂದ ಗೋಪ್ಯಾರ್ಥವನ್ನು) ತಿಳಿಯದವನಾಗಿಯೇ ಹೊರಟುಹೋದನು. (೬) (**ತೇಭ್ಯೋ ಹ್ಯೇತಾಮುಪನಿಷದಂ ಪ್ರೋವಾಚ** ಇತ್ಯಾದಿ ವಾಕ್ಯಗಳ ಅರ್ಥಹೇಳುತ್ತಾರೆ.) ಅಸುರರ ಬಳಿಗೆ ವಿರೋಚನನು ಹೋಗಿ ಸದಾ ದೇಹ ಪ್ರತಿಬಿಂಬವೇ ಪರಬ್ರಹ್ಮನು, ಎಂದುಪದೇಶಿಸಿದನು. ಶರೀರಕ್ಕೆ ಅಲಂಕಾರಾದಿಗಳು ಆದರೆ ಪ್ರತಿಬಿಂಬನಾದ ಬ್ರಹ್ಮನಿಗೇನೇ ಅಲಂಕಾರಾದಿಗಳು ಆಗುತ್ತವೆಂಬುದು ರಹಸ್ಯ ಪ್ರಮೇಯವೆಂದು ಅದನ್ನೂ ಎಲ್ಲಾ ಅಸುರರಿಗೆ ಉಪದೇಶಿಸಿದನು. (ಮತ್ತು ೭ನೇ ಖಂಡದ ೪ನೇ ಮಂತ್ರದಲ್ಲಿದ್ದ **ಪುರುಷೋ ದೃಶ್ಯತೇ** ಎಂಬುದರ ಅರ್ಥಹೇಳುತ್ತಾರೆ) ಕಣ್ಣಿನೊಳಗಣ ದೇಹ ಪ್ರತಿಬಿಂಬವೇ ಬ್ರಹ್ಮನಾದುದರಿಂದ ಪ್ರತಿಬಿಂಬವು ಪ್ರತ್ಯಕ್ಷವಾಗುವಾಗ ಬ್ರಹ್ಮನೂ ಪ್ರತ್ಯಕ್ಷವಾಗಿ ತೋರುತ್ತಾನೆ, ಎಂದು ರಹಸ್ಯ ಪ್ರಮೇಯವನ್ನುಪದೇಶಿಸಿರುವನು. (೭) (**ತಸ್ಮಾದಪ್ಯದ್ಯ** ಎಂಬ ೫ನೇ ಮಂತ್ರದ ಅರ್ಥಹೇಳುತ್ತಾರೆ.) ಅಸುರರ ಪಕ್ಷದಲ್ಲಿ ಜೀವರನ್ನೇ ಬ್ರಹ್ಮನೆಂದು ಪೂಜಿಸಬೇಕಾಗಿರುವುದರಿಂದ ಅಸುರರು ತಮ್ಮಿಂದ (ಜೀವರಿಂದ) ಬೇರೆಯಾದ ಈಶ್ವರನ ಪ್ರೀತಿಗಾಗಿ ದಾನಮಾಡುವುದಿಲ್ಲ, ಯಾಗಮಾಡುವುದಿಲ್ಲ, (ತಮಗೂ ಬ್ರಹ್ಮನಿಗೂ ಐಕ್ಯವಿದ್ದ ಪ್ರಯುಕ್ತ) ತಮ್ಮ ಭೋಗದಿಂದಲೇ ಬ್ರಹ್ಮನಿಗೂ ತೃಪ್ತಿಯಾಗುವುದೆಂದು ಎಲ್ಲಾ ಅಸುರರೂ ತಿಳಿದುಕೊಂಡರು ಶರೀರಕ್ಕೆ ಅಲಂಕಾರವಾದರೆ ಪ್ರತಿಬಿಂಬಕ್ಕೂ ಅಲಂಕಾರವಾತ್ತದೆಂಬ ಸಂಸ್ಕಾರವಶದಿಂದಲೇ ಅಸುರರು ತಾವೇ ಬ್ರಹ್ಮ ಎಂದು ತಿಳಿದುಕೊಂಡರು. ಆಮೇಲೆ ನಿತ್ಯದಲ್ಲಿಯೂ ದುಃಖಿತರಾಗಿ ಅಂಧಂತಮನಸ್ಸಿನಲ್ಲಿ ಬಿದ್ದರು.

ವಿ || ಜೀವರ ಶರೀರವನ್ನು ಅಲಂಕರಿಸಿದರೆ ಪ್ರತಿಬಿಂಬಕ್ಕೆ ಅಲಂಕಾರವಾಗುತ್ತದೆಂದು ತೋರಿಸಿದ್ದರಿಂದ ಬಿಂಬಪ್ರತಿಬಿಂಬಗಳಿಗೆ ಅಭೇದವನ್ನೇ ಚತುರ್ಮುಖನು ತೋರಿಸಿರುವನು. ಬಿಂಬವಾದ ಜೀವಚ್ಛರೀರದಲ್ಲಿ ತೋರುವ ಪ್ರತಿಬಿಂಬಭೂತ ಬ್ರಹ್ಮಾಭೇದವು ಜೀವಾಭೇದದಲ್ಲಿ ಪರ್ಯವಸಾನವಾಗುತ್ತದೆ. ಏಕೆಂದರೆ – ಶರೀರವು ಮರಣಶೀಲವಾಗಿರುವುದರಿಂದ ಶರೀರದಲ್ಲಿ ಅಮೃತದಿಂದ ಅಭೇದವೂ ಬ್ರಹ್ಮನಿಂದ ಅಭೇದವೂ ಕೂಡಲಾರದು. ಅದುಕಾರಣ ಶರೀರಕ್ಕೆ ಅಭಿಮಾನಿಯಾದ ಜೀವನಿಗೇನೇ ಬ್ರಹ್ಮಾಭೇದವನ್ನು ಉಪದೇಶಿಸಿದ್ದೆಂದು ತಿಳಿದು **ಸ್ವಯಂ ಬ್ರಹ್ಮೇತಿ ವಾದಿನಃ** ತಾವೇ ಬ್ರಹ್ಮರು ಎಂದು ಅಸುರರು ತಿಳಿದುಕೊಂಡರು || ೧೦—೮ || || ೮ ||

ಎಂಟನೇ ಖಂಡವು ಮುಗಿಯಿತು

## ೯ನೇ ಖಂಡವು

ಪೀ—ಹೀಗೆ ಜಾಗ್ರದವಸ್ಥೆಗೆ ಪ್ರೇರಕನಾದ ಕಣ್ಣಿನೊಳಗಣ ವಿಶ್ವನೆಂಬ ಶ್ರೀ ಹರಿಯು ಪ್ರತಿಬಿಂಬ ಮೊದಲಾದ ಬಾಹ್ಯ ಪದಾರ್ಥಗಳನ್ನು ಸೃಷ್ಟಿಸುವ ಅಪಹತಪಾಪ್ಮತ್ವಾದಿ ಗುಣಗಳುಳ್ಳ ಆತ್ಮನೆಂದು ಇಂದ್ರನು ತಿಳಿದುದು ಯುಕ್ತವು. ವಿರೋಚನನು ತಿಳಿದ ಪ್ರತಿಬಿಂಬವಾದರೂ ಅಪಹತಪಾಪ್ಮತ್ವಾದಿ ಗುಣಗಳುಳ್ಳ ಆತ್ಮನಲ್ಲವೆಂದು ಹೇಳುತ್ತಾರೆ—

**ಉ. ॥ ಅಥ ಹೇಂದ್ರೋಽಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ಯಥೈವ ಖಲ್ವಯಮಸ್ಮಿಂಛರೀರೇ ಸಾಧ್ವಲಂಕೃತೇ ಸಾಧ್ವಲಂಕೃತೋ ಭವತಿ ಸುವಸನೇ ಸುವಸನಃ ಪರಿಷ್ಕೃತೇ ಪರಿಷ್ಕೃತ ಏವಮೇವಾಯಮಸ್ಮಿನ್ನಂಧೇಽಂಧೋ ಭವತಿ ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽಸ್ಯೈವ ಶರೀರಸ್ಯ ನಾಶಮನ್ವೇಷ ನಶ್ಯತಿ ನಾಹಮತ್ರ ಭೋಜ್ಯಂ ಪಶ್ಯಾಮೀತಿ ॥ ೧ ॥**

ಅ ॥ ವಿರೋಚನನು ಹೋದ ಮೇಲೆ ಇಂದ್ರನು ದೇವತೆಗಳ ಬಳಿಗೆ ಹೋಗುವುದಕ್ಕಿಂತ ಮೊದಲೇ ಮಧ್ಯಮಾರ್ಗದಲ್ಲಿ ಭಯಂಕರವಾದ ಬ್ರಹ್ಮನಿಗೆ ಅಭಿಪ್ರೇತವಾದ ದೋಷವನ್ನು ಕಂಡನು. ಇಂತಹ ಮಹಾಭಿಪ್ರಾಯವು ಯೋಗ್ಯರಿಗೇನೇ ಹುಟ್ಟುವುದು. ಅಯೋಗ್ಯರಿಗೆ ಹುಟ್ಟಲಾರದು. (ದೋಷವನ್ನು ಕಂಡನೆಂಬುವುದನ್ನು ವಿವರಿಸುತ್ತಾರೆ.) ಹೇಗೆ ಈ ಪ್ರತಿಬಿಂಬವಾದ ದೇಹವು ಶರೀರವು ಅಲಂಕೃತವಾದರೆ ಅಲಂಕೃತವಾಗುತ್ತದೋ, ಒಳ್ಳೇ ಬಟ್ಟೆಯುಟ್ಟುಕೊಂಡರೆ ಒಳ್ಳೇ ಬಟ್ಟೆಯುಟ್ಟುಕೊಂಡದ್ದಾಗುತ್ತದೋ, ಗಂಧಾದಿಗಳಿಂದ ಲೇಪಿಸಲ್ಪಟ್ಟಿದ್ದರೆ ಈ ಪ್ರತಿಬಿಂಬವಾದ ದೇಹವೂ ಲೇಪಿಸಲ್ಪಡುತ್ತದೋ, ಹೀಗೆಯೇ ಈ ಜೀವ ಶರೀರವು ಕಣ್ಣು ಇಲ್ಲದಿದ್ದುದಾದರೆ ಪ್ರತಿಬಿಂಬವೂ ಕಣ್ಣು ಇಲ್ಲದಿದ್ದುದಾಗುತ್ತದೆ. ಕುಷ್ಠಾದಿಗಳಿಂದ ವಿವರ್ಣವಾಗಿದ್ದರೆ ಇದೂ ವಿವರ್ಣವಾಗಿ ಕಾಣುತ್ತದೆ. ಅವಯವಗಳು ತುಂಡಾಗಿದ್ದರೆ ಇದೂ ಹಾಗೆಯೇ ಕಾಣುತ್ತದೆ ಈ ಬಾಹ್ಯ ಶರೀರವು ನಾಶ ಹೊಂದಿದರೆ ಪ್ರತಿಬಿಂಬವೂ ನಾಶ ಹೊಂದುತ್ತದೆ. ಆದಕಾರಣ ಪ್ರತಿಬಿಂಬವೇ ಬ್ರಹ್ಮನು ಎಂಬ ಜ್ಞಾನವಿದ್ದರೆ ಭೋಗ್ಯವಾದ ಮೋಕ್ಷಾದಿಗಳನ್ನು ಹೊಂದಲಾರನು.

ವಿ ॥ (1) ಇಂತಹ ವಸ್ತುವಿನ ಜ್ಞಾನದಿಂದ ಮೋಕ್ಷಾದಿಗಳು ಸರ್ವಥಾ ಆಗಲಾರವು. (2) ಹಿಂದೆ ಹೇಳಿದ ಅಮೃತತ್ವಮೊದಲಾದುದೂ ಪ್ರತಿಬಿಂಬಕ್ಕೆ ಕೂಡಲಾರದು, ಇತ್ಯಾದಿ ದೋಷಗಳು ಇಂದ್ರನಿಗೆ ತೋರಿದವು. ॥ ೧ ॥

ಪೀ—ಅದುಕಾರಣ ವಿರೋಚನನು ತಿಳಿದ ಪ್ರಕಾರ ಪ್ರತಿಬಿಂಬವು ಸರ್ವಥಾ ಬ್ರಹ್ಮವಲ್ಲ. ಪರಂತು ತಾನು (ಇಂದ್ರನು) ತಿಳಿದುದೇ ಯುಕ್ತವೆಂದು ನಿಶ್ಚಯಿಸಿ ಈ ಅರ್ಥವನ್ನು ಚತುರ್ಮುಖನಿಗೆ ತಿಳಿಸಿ ಅವರ ಮುಖದಿಂದಲೂ ಪ್ರತಿಬಿಂಬವು ಬ್ರಹ್ಮನಲ್ಲ, ಎಂದು ದೃಢೀಕರಿಸಿಕೊಳ್ಳುವುದಕ್ಕಾಗಿಯೂ ಸ್ವಪ್ನಾವಸ್ಥಾ ಪ್ರವರ್ತಕತ್ವರೂಪವಾದ ಮಹಿಮೆಯನ್ನು ಕೇಳುವುದಕ್ಕಾಗಿಯೂ, ಮರಳಿ ಇಂದ್ರನು ಬ್ರಹ್ಮನ ಬಳಿಗೆ ಬಂದನೆಂದು ಹೇಳುತ್ತಾರೆ—

**ಉ. ॥ ಸ ಸಮಿತ್ಪಾಣಿಃ ಪುನರೇಯಾಯ ತꣳ ಹ ಪ್ರಜಾಪತಿರುವಾಚ ಮಘವನ್ಯಚ್ಛಾಂತಹೃದಯಃ ಪ್ರಾವ್ರಾಜೀಃ ಸಾರ್ಧಂ ವಿರೋಚನೇನ ಕಿಮಿಚ್ಛನ್ಪುನರಾಗಮ ಇತಿ ಸ ಹೋವಾಚ ಯಥೈವ ಖಲ್ವಯಂ ಭಗವೋಽಸ್ಮಿಂ-**

**ಛರೀರೇ ಸಾಧ್ವಲಂಕೃತೇ ಸಾಧ್ವಲಂಕೃತೋ ಭವತಿ ಸುವಸನೇ ಸುವಸನಃ ಪರಿಷ್ಕೃತೇ ಪರಿಷ್ಕೃತ ಏವಮೇವಾಯಮಸ್ಮಿನ್ನಂಧೇಽಂಧೋ ಭವತಿ ಸ್ರಾಮೇ ಸ್ರಾಮಃ ಪರಿವೃಕ್ಣೇ ಪರಿವೃಕ್ಣೋಽಸ್ಯೈವ ಶರೀರಸ್ಯ ನಾಶಮನ್ವೇಷ ಪಶ್ಯತಿ ನಾಹಮತ್ರ ಭೋಜ್ಯಂ ಪಶ್ಯಾಮೀತಿ ॥ ೨ ॥**

ಅ ॥ ಇಂದ್ರನು ಕೈಯಲ್ಲಿ ಸಮಿಧೆ ಹಿಡಿದುಕೊಂಡು ಬ್ರಹ್ಮನ ಬಳಿಗೆ ಮರಳಿ ಬಂದನು. ಆಗ ಬ್ರಹ್ಮನು ಎಲೋ ಇಂದ್ರನೇ ಶಾಂತಹೃದಯನಾಗಿ ವಿರೋಚನನಿಂದೊಡಗೂಡಿ ಹೋಗಿರುವಿ. ಯಾವ ಉದ್ದೇಶದಿಂದ ಮರಳಿ ಬಂದಿರುತ್ತಿ, ಎಂದು ಇಂದ್ರನಿಗೆ ಕೇಳಿದನು. ಆಗ ಇಂದ್ರನು ಹೇಳಿದನು ಎಲೋ ಪೂಜ್ಯರೇ ಈ ಶರೀರವು ಹೇಗೆ ಇದೆಯೋ, ಹಾಗೆಯೇ *ನೀರಿನಲ್ಲಿಯೂ ಕನ್ನಡಿಯಲ್ಲಿಯೂ ಪ್ರತಿಬಿಂಬವು ತೋರುತ್ತದೆ. ಅದು ಕಾರಣ ಪ್ರತಿಬಿಂಬವೇ ಬ್ರಹ್ಮನು ಎಂಬ ಜ್ಞಾನವಿದ್ದರೆ ಮೋಕ್ಷಾದಿಗಳು ಆಗಲಾರವು, ಅದರ ತತ್ತ್ವ ನಿಶ್ಚಯಕ್ಕಾಗಿ ಬಂದೆನು. ಎಂದು ಇಂದ್ರನು ಹೇಳಿದನು ॥ ೨ ॥

**ಉ. ॥ ಏವಮೇವೈಷ ಮಘವನ್ನಿತಿ ಹೋವಾಚೈತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ ವಸಾಪರಾಣಿ ದ್ವಾತ್ರಿಂಶತಂ ವರ್ಷಾಣೀತಿ ಸಹಾಪರಾಣಿ ದ್ವಾತ್ರಿಂಶತಂ ವರ್ಷಾಣ್ಯುವಾಸ ತಸ್ಮೈ ಸ ಹೋವಾಚ ॥ ಇತಿ ನವಮಃ ಖಂಡಃ ॥ ೧೦-೯ ॥ ॥ ೩ ॥**

ಅ ॥ ಆಗ ಚತುರ್ಮುಖನು ಎಲೋ ಯಶಸ್ವಿಯಾದ ಇಂದ್ರನೇ ಪ್ರತಿಬಿಂಬವೆಂದು ಇಟ್ಟುಕೊಂಡರೆ ನೀನು ಹೇಳಿದ ಪ್ರಕಾರ ದೋಷವು ತೋರುವ ಕಾರಣ ಪ್ರತಿಬಿಂಬವೇ ಬ್ರಹ್ಮನೆಂಬುದು ನನಗೆ ಸಮ್ಮತವಾದ ಅರ್ಥವಲ್ಲ. ಪರಂತು ಜಾಗ್ರದಾದ್ಯವಸ್ಥೆಗಳಿಗೆ ಪ್ರೇರಕನಾದ ಶ್ರೀಹರಿಯು ಆತ್ಮವೆಂದು ನೀನು ತಿಳಿದುಕೊಂಡ ಅರ್ಥವೇ ನನಗೆ ಸಮ್ಮತವಾದುದು, ಎಂದನು. ಮತ್ತು ಎಲೋ ಇಂದ್ರನೇ ಜಾಗ್ರದವಸ್ಥಾ ಪ್ರೇರಕತ್ವಾದಿರೂಪ ಮಹಿಮೆಯುಳ್ಳ ಆತ್ಮನೇ ವಿಶೇಷವಾಗಿ ಸ್ವಪ್ನಾದ್ಯವಸ್ಥಾ ಪ್ರೇರಕತ್ವಾದಿರೂಪ ಮಹಿಮೆಯುಳ್ಳವನೆಂಬುದನ್ನು ಮೂವತ್ತೆರಡು ವರ್ಷಗಳಲ್ಲಿ ನಿನ್ನ ಯೋಗ್ಯತಾನುಸಾರ ನಿನಗೆ ನಾನು ಹೇಳುವೆನು, ಎಂದು ಬ್ರಹ್ಮನು ಹೇಳಿದನು. ಆಗ ಇಂದ್ರನು ಮೂವತ್ತೆರಡು ವರ್ಷಗಳಲ್ಲಿ ಅದಕ್ಕಾಗಿ ಆವಾಸ ಮಾಡಿದನು. ಬ್ರಹ್ಮನು ಇಂದ್ರನಿಗೆ ಆ ತತ್ತ್ವವನ್ನು ಉಪದೇಶಿಸಿದನು. ॥ ೧೦—೯ ॥ ॥ ೩ ॥

ಪೀ—ಈ ಖಂಡದ ತಾತ್ಪರ್ಯ ಹೇಳುತ್ತಾರೆ—

**ಭಾ. ॥ (೧) ಇಂದ್ರಶ್ಚ(ಸ್ತು) ಜಾನನ್ನಪಿ ತು ಮೋಹಯನ್ನಸುರಂ ತದಾ । ಗತ್ವಾ ನಿವವೃತೇ ಪಶ್ಚಾದಿವ ಪಶ್ಯನ್ ಸದೋಷತಾಂ ॥ (೨) ಪುನಃಪುನಶ್ಚ ಮೋಹಾಯ ಗತ್ವಾ ಗತ್ವಾ ನಿವರ್ತತೇ । ಕಥಂಚಿದೇವ ವಿಜ್ಞಾತಂ ಮಯೇತ್ಯಜ್ಞಾನ್ವಿಮೋಹಿತುಂ ॥ ೧,೨,೩ ॥ ಇತಿ ನವಮಃ ಖಂಡಃ ॥ ೧೦—೯ ॥ ॥ ೧ ॥**

ಅ ॥ (೧) ಇಂದ್ರನು ತತ್ತ್ವವನ್ನು ತಿಳಿದವನಾದರೂ ಅಸುರರಿಗೆ ಮೋಹ ಹುಟ್ಟಿಸುವುದಕ್ಕೆ ಮೋಹಕವಾಕ್ಯವೆಂದರಿಯದವನಂತೆ ಮುಂದೆಹೋಗಿ ಹಿಂತೆರಳಿದನು. (೨) (ಮುಂದೆಮುಂದೆ ಹೋಗಿ ಹಿಂತೆರಳಿಕ್ಕೆ ಕಾರಣ ಹೇಳುತ್ತಾರೆ.) ಮತ್ತು ಮತ್ತು ಮೋಹಹುಟ್ಟುವುದಕ್ಕಾಗಿ ಅಂದರೆ—ಇಂದ್ರನು ಬಹು

---

* ಹಿಂದಿನಂತೆ ಪು ೧೧೪ ರಂತೆಅರ್ಥ ಇಟ್ಟುಕೊಳ್ಳಬೇಕು.

ಪ್ರಯಾಸದಿಂದಲೇ ತತ್ತ್ವವನ್ನು ತಿಳಿದದ್ದು, ಎಂದು ಅಜ್ಞರಿಗೆ ಮೋಹಹುಟ್ಟಿಸುವುದಕ್ಕಾಗಿ ಅನೇಕಾವರ್ತಿ ಮುಂದೆ ಮುಂದೆ ಹೋಗಿ ಹಿಂತಿರಳಿ ಬಂದನು. ॥ ೧೦—೯ ॥ ॥ ೯ ॥

ಒಂಭತ್ತನೇ ಖಂಡವು ಮುಗಿಯಿತು

## ೧೦ನೇ ಖಂಡವು

ಪೀ —ಇಂದ್ರನಿಗೆ ಬ್ರಹ್ಮನು ಹೇಳಿದ್ದನ್ನು ವಿವರಿಸುತ್ತಾರೆ—

**ಉ. ॥ ಯ ಏಷ ಸ್ವಪ್ನೇ ಮಹೀಯಮಾನಶ್ಚರತ್ಯೇಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ಸ ಹ ಶಾಂತಹೃದಯಃ ಪ್ರವವ್ರಾಜ ಸ ಹಾಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ತದ್ಯದಪೀದꣳ ಶರೀರಮಂಧಂ ಭವತ್ಯನಂಧಃ ಸ ಭವತಿ ಯದಿ ಸ್ರಾಮಮಸ್ರಾಮೋ ನೈವೈಷೋಽಸ್ಯ ದೋಷೇಣ ದುಷ್ಯತಿ ॥ ೧ ॥**

ಅ ॥ ಯಾವನು ಅಪಹತಪಾಪ್ಮಾದಿ ಲಕ್ಷಣಗಳುಳ್ಳವನೋ, ಯಾವನು ಕಣ್ಣಿನಲ್ಲಿದ್ದಾನೋ, ಯಾವನು ಸ್ವಪ್ನದಲ್ಲಿ (ಸ್ತ್ರೀಮೊದಲಾದವರಿಂದ) ಪೂಜಿಸಿಕೊಳ್ಳಲ್ಪಡುವವನಾಗಿ ಅನೇಕ ವಿಧಗಳಾದ ಸ್ವಪ್ನ ಭೋಗಗಳನ್ನು ಅನುಭವಿಸುತ್ತಾನೋ, ಇವನು ಆತ್ಮನೆಂದು ಆಪಾತತಃ ತೋರುವ ಅರ್ಥವು. (ಬ್ರಹ್ಮನಿಗೆ ಅಭಿಪ್ರೇತವಾದ ಅರ್ಥವು ಈ ರೀತಿಯಾದುದು.) ಕಂಠದೇಶದಲ್ಲಿರತಕ್ಕ ಯಾವ ಶ್ರೀಹರಿಯು ಜೀವನಿಗೆ ಸ್ವಪ್ನಾವಸ್ಥೆಯಲ್ಲಿ (ಇಂದ್ರಿಯಾಭಿಮಾನಿಗಳಾದ ಪ್ರಾಣಾದಿಗಳಿಂದ) ಪೂಜಿಸಿಕೊಳ್ಳಲ್ಪಡುವವನಾಗಿಯೇ ತಾನು ಸೃಷ್ಟಿಮಾಡಿದ ಆನೆ ಕುದುರೆ ಮೊದಲಾದವುಗಳನ್ನು ಜೀವನಿಗೆ ತೋರಿಸುತ್ತಾನೋ, ತಾನೂ ತಿಳಿದುಕೊಳ್ಳುತ್ತಾನೋ, ಇಂತಹ ಮಹಿಮೆಯುಳ್ಳವನು ಆತ್ಮನು, ನಿತ್ಯಮುಕ್ತನು, ಭಯವಿಲ್ಲದವನು, ಗುಣಪೂರ್ಣನು, ಎಂದು ಬ್ರಹ್ಮನ ಅಭಿಪ್ರಾಯವೆಂದು ಇಂದ್ರನು ತಿಳಿದನು. ಇಂದ್ರನು ಶಾಂತಹೃದಯನಾಗಿಯೇ ಹೊರಟುಹೋದನು. ಇಂದ್ರನು ಚತುರ್ಮುಖನ ಉಪದೇಶದಿಂದ ಸ್ವಪ್ನಾವಸ್ಥೆಗೆ ಪ್ರೇರಕನಾದವನು ಆತ್ಮನು, ಶ್ರೀಹರಿಯು, ಎಂದು ಚೆನ್ನಾಗಿ ತಿಳಿದಿದ್ದರೂ ಅಸುರರಿಗೆ ಮೋಹಬರುವುದಕ್ಕಾಗಿ, **ಸ್ವಪ್ನೇ ಮಹೀಯಮಾನಶ್ಚರತ್ಯೇಷ ಆತ್ಮಾ** ಎಂಬ ಶಬ್ದದಿಂದ ಆಪಾತತಃ ತೋರುವ, ಸ್ವಪ್ನದಲ್ಲಿ ಕಾಣಲ್ಪಡುವ ಜೀವನೇ ಅಪಹತ ಪಾಪ್ಮತ್ವಾದಿಗುಣಗಳುಳ್ಳ ಆತ್ಮನು, ಎಂದು ಬ್ರಹ್ಮನು ಹೇಳಿದನೆಂದು ತಿಳಿದವನಂತೆ ದೇವತೆಗಳ ಬಳಿಗೆ ಹೋಗುವುದಕ್ಕಿಂತ ಮೊದಲೇ ಮಧ್ಯದಲ್ಲಿಯೇ ಇಂದ್ರನು ಭಯಹೊಂದಿದನು (ಅಂದರೆ—ಆಪಾತತಃ ತೋರುವ ಅರ್ಥ ಇಟ್ಟುಕೊಂಡರೆ ಮಹಾದೋಷವಿದೆ, ಎಂದು ತಿಳಿದುಕೊಂಡನು) (**ಭಯಂದದರ್ಶ** ಎಂಬುದನ್ನು ವಿವರಿಸುತ್ತಾರೆ.) ಯದ್ಯಪಿ ಸ್ವಾಪ್ನಪದಾರ್ಥಗಳನ್ನು ನೋಡತಕ್ಕ ಜೀವನ ಬಾಹ್ಯಶರೀರದಲ್ಲಿ ಕಣ್ಣು ಇಲ್ಲವಾದರೂ ಶರೀರವು ಕುಷ್ಠಾದಿಗಳಿಂದ ವಿವರ್ಣವಾಗಿದ್ದರೂ, ಸ್ವಪ್ನದಲ್ಲಿ ತೋರುವ ಜೀವನು ಅಂಧನಾಗುವುದಿಲ್ಲ. ಅಥವಾ ಸ್ವಪ್ನದಲ್ಲಿ ತೋರುವ ವಾಸನಾಮಯವಾದ ದೇಹವು ಕಣ್ಣು ಇಲ್ಲದ್ದಾಗುವುದಿಲ್ಲ ಕುಷ್ಠಾದಿಗಳಿಂದ ವಿವರ್ಣವಾಗುವುದಿಲ್ಲ ದೇಹದ ದೋಷವಧಾದಿಗಳಿಂದ ಸ್ವಾಪ್ನ ಜೀವನು ದೋಷವಧಾದಿಗಳನ್ನು ಹೊಂದುವುದಿಲ್ಲ. ॥ ೧ ॥

**ಉ. ॥ ನ ವಧೇನಾಸ್ಯ ಹನ್ಯತೇ ನಾಸ್ಯ ಸ್ರಾಮ್ಯೇಣ ಸ್ರಾಮೋ ಘ್ನಂತಿ ತ್ವೇವೈನಂ ವಿಚ್ಛಾದಯಂತೀವಾಪ್ರಿಯವೇತ್ತೇವ ಭವತ್ಯಪಿ ರೋದಿತೀವ ನಾಹಮತ್ರ ಭೋಜ್ಯಂ ಪಶ್ಯಾಮೀತಿ ॥ ೨ ॥**

ಅ ॥ ನೋಡತಕ್ಕ ಜೀವನ ಶರೀರದ ಹಸ್ತಾದಿ ಭೇದರೂಪವಾದ ದೋಷದಿಂದ ಸ್ವಾಪ್ನ ಜೀವನು ಹಸ್ತಾದಿ ಭೇದವುಳ್ಳವನಾಗುವುದಿಲ್ಲ. ಕುಷ್ಠಾದಿಗಳ ವಿವರ್ಣದಿಂದ ವಿವರ್ಣನಾಗುವುದಿಲ್ಲ. (ಏವಂಚ ಪ್ರತಿಬಿಂಬವೇ ಬ್ರಹ್ಮನು ಎಂಬ ಕಲ್ಪದಲ್ಲಿ ಹೇಳಿದ ದೋಷವು ಇಲ್ಲವಾದರೂ ದೋಷಾಂತರವಿದೆ, ಎನ್ನುತ್ತಾರೆ.) ಆದರೂ ಸ್ವಪ್ನದಲ್ಲಿ ಸ್ವಾಪ್ನ ಪದಾರ್ಥಗಳನ್ನು ಕಾಣುವ ಜೀವನನ್ನು ಸ್ವಪ್ನದಲ್ಲಿ (ಕಳ್ಳರು) ವಿಶೇಷವಾಗಿ ಸಂಹರಿಸುವಂತೆ ಕಾಣುವುದು. ವಿಶೇಷವಾಗಿ ಗರ್ತ (ಹೊಂಡ) ಮೊದಲಾದವುಗಳಲ್ಲಿ ಹುಗಿಯುವಂತೆ ಕಾಣುವುದು. ಅಥವಾ ತಿಂದುಬಿಡುವ ಹಾಗೆ ಕಾಣುವುದು. ಸ್ವಾಪ್ನ ಜೀವನು ಅಪ್ರಿಯವನ್ನು ಹೊಂದಿದವನಂತೆ ಕಾಣುತ್ತಾನೆ. ಅಥವಾ ದುಃಖವನ್ನು ಹುಟ್ಟಿಸುವ ವಿಷಯಗಳನ್ನು ಭೋಗಿಸುವವನಂತೆ ಕಾಣುತ್ತಾನೆ. ಮರುಗುವವನಂತೆ ತೋರುತ್ತಾನೆ ಇಂತಹ ವಸ್ತುವಿನ ಜ್ಞಾನದಿಂದ ಮೋಕ್ಷಾದಿಗಳು ಆಗಲಾರವು. ಹೀಗೆ ಭಯಂಕರವಾದ ದೋಷವನ್ನು ಕಂಡನು ॥ ೨ ॥

**ಉ. ॥ ಸ ಸಮಿತ್ಪಾಣಿಃ ಪುನರೇಯಾಯ ತꣳ ಹ ಪ್ರಜಾಪತಿರುವಾಚ ಮಘವನ್ಯಚ್ಛಾಂತಹೃದಯಃ ಪ್ರಾವ್ರಾಜೀಃ ಕಿಮಿಚ್ಛನ್ಪುನರಾಗಮ ಇತಿ ಸ ಹೋವಾಚ ತದ್ಯದಪೀದಂ ಭಗವಃ ಶರೀರಮಂಧಂ ಭವತ್ಯನಂಧಸ್ಸ ಭವತಿ ಯದಿ ಸ್ರಾಮಮಸ್ರಾಮೋ ನೈವೈಷೋಽಸ್ಯ ದೋಷೇಣ ದುಷ್ಯತಿ ॥ ೩ ॥**

**ಉ. ॥ ನ ವಧೇನಾಸ್ಯ ಹನ್ಯತೇ ನಾಸ್ಯ ಸ್ರಾಮ್ಯೇಣ ಸ್ರಾಮೋ ಘ್ನಂತಿ ತ್ವೇವೈನಂ ವಿಚ್ಛಾದಯಂತೀವಾಪ್ರಿಯವೇತ್ತೇವ ಭವತ್ಯಪಿ ರೋದಿತೀವ ನಾ-ಹಮತ್ರ ಭೋಜ್ಯಂ ಪಶ್ಯಾಮೀತ್ಯೇವಮೇವೈಷ ಮಘವನ್ನಿತಿ ಹೋವಾಚೈತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ ವಸಾಪರಾಣಿ ದ್ವಾತ್ರಿꣳಶತಂ ವ-ರ್ಷಾಣೀತಿ ಸ ಹಾಪರಾಣಿ ದ್ವಾತ್ರಿꣳಶತಂ ವರ್ಷಾಣ್ಯುವಾಸ ತಸ್ಮೈ ಸ ಹೋ-ವಾಚ ॥ ಇತಿ ದಶಮಃ ಖಂಡಃ ॥ ೧೦-೧೦ ॥ ॥ ೪ ॥**

ಅ ॥ ಹಿಂದಿನಂತೆ ಅರ್ಥ ಇಟ್ಟುಕೊಳ್ಳಬೇಕು.

ವಿ ॥ (1) ಇಂತಹ ವಸ್ತುವಿನ ಜ್ಞಾನದಿಂದ ಮೋಕ್ಷಾದಿಗಳು, ಆಗದಿರುವುದರಿಂದ ಸ್ವಪ್ನದಲ್ಲಿ ತೋರುವ ವಾಸನಾಮಯವಾದ ದೇಹವುಳ್ಳ ಜೀವನು ಅಪಹತ ಪಾಪ್ಮತ್ವಾದಿಗುಣಗುಳುಳ್ಳ ಆತ್ಮನೆಂದು ಬ್ರಹ್ಮನಿಗೆ ಅಭಿಪ್ರೇತವಲ್ಲ. ಪರಂತು ಸ್ವಾಪ್ನ ಅನೇಕ ಪದಾರ್ಥಗಳನ್ನು ಸೃಷ್ಟಿಸುವ, ಪ್ರಾಣಾದಿಗಳಿಂದ ಪೂಜಿಸಲ್ಪಡತಕ್ಕ ತೈಜಸ ರೂಪಿ ಪರಮಾತ್ಮನು ಆತ್ಮನೆಂದು ಬ್ರಹ್ಮನಿಗೆ ಅಭಿಪ್ರೇತವು ಎಂದು ನಿಶ್ಚಯಿಸಿ ಈ ಅರ್ಥವನ್ನು ಬ್ರಹ್ಮದೇವರಲ್ಲಿ ವಿಜ್ಞಾಪಿಸಿಕೊಂಡು ಬ್ರಹ್ಮದೇವರ ಮುಖದಿಂದ ಆಪಾತತಃ ತೋರುವ ಅರ್ಥವು ತನಗೆ ಸಮ್ಮತವಲ್ಲ, ಎಂಬುದನ್ನು ದೃಢೀಕರಿಸುವುದಕ್ಕಾಗಿಯೂ ಸುಷುಪ್ತ್ಯವಸ್ಥಾಪ್ರೇರಕತ್ವ ರೂಪವಾದ ಮಹಿಮೆಯನ್ನು ಕೇಳುವುದಕ್ಕಾಗಿಯೂ ದೇವೇಂದ್ರನು ಮರಳಿ ಬ್ರಹ್ಮನ ಬಳಿಗೆ ಬಂದನು. (2) ಯದ್ಯಪಿ ಇಂದ್ರನು ಬ್ರಹ್ಮದೇವರ ಸಮೀಪದಲ್ಲಿಯೇ ಇದ್ದು ಆಪಾತತಃ ತೋರುವ ಅರ್ಥವು ಸರಿಯಲ್ಲವೆಂದೂ, ಮತ್ತು ಬ್ರಹ್ಮನಿಗೆ ಅಭಿಪ್ರೇತವಾದ ಅರ್ಥವು ಇಂತಹುದೇ ಎಂದೂ ತಿಳಿದಿರುತ್ತಾನೆ. ಆದರೂ ಬ್ರಹ್ಮನ ಅಭಿಪ್ರಾಯವನ್ನು ತಿಳಿಯಲಿಲ್ಲ. ಬಹುಪ್ರಯಾಸದಿಂದ ತತ್ತ್ವವನ್ನು ತಿಳಿದುದು, ಎಂದು ಅಸುರ ಜನರನ್ನು ಮೋಹಿಸುವುದಕ್ಕಾಗಿ ಸ್ವಲ್ಪದೂರ ಹೋಗಿ ಮರಳಿ ಬಂದಿರುತ್ತಾನೆಂದು ಹೇಳಿದ್ದು. ॥ ೪ ॥

ಶಿ—ಅಯೋಗ್ಯನಾದ ವಿರೋಚನನು ಹಿಂತಿರಳಿ ಹೋದಮೇಲೆ ತತ್ತ್ವ ತಿಳಿಯಲು ಯೋಗ್ಯನಾದ ಇಂದ್ರನಿಗೆ ಯ ಏಷ ಸ್ವಪ್ನೇ ಮಹೀಯಮಾನಶ್ಚರತಿ ಎಂದು ಸಮ್ಯಗ್ಧಾರವಾಗಿಯೇ ಬ್ರಹ್ಮನು ಏಕೆ ಉಪದೇಶಿಸಿರುವನು? ಎಂದರೆ—

**ಭಾ. ॥ (೧)ತದ್ಯೋಗ್ಯಾನ್ಯೇವ ವಾಕ್ಯಾನಿ ಬ್ರಹ್ಮಾಽಪ್ಯಾಹ ಪುನಃಪುನಃ । ಗರೀಯಸೀ ಯೋಗ್ಯತೇತಿ ಜ್ಞಾಪಯನ್ಪೂರ್ವವತ್ಪುನಃ । ಸಂದಿಗ್ಧಾನ್ಯೇವ ವಾಕ್ಯಾನಿ ಪ್ರೋವಾಚೇಂದ್ರಾಯ ಚಾತ್ಮಭೂಃ ॥ (೨) ಸ್ವಪ್ನಂ ಪ್ರದರ್ಶಯನ್ಯಸ್ತು ಪೂಜ್ಯತೇ ಸರ್ವದೈವತೈಃ । ಸ ಏವ ವಿಷ್ಣುರಿತ್ಯಾಹ ॥ (೩) ತತ್ರಾಪ್ಯಾಹ ಪುರಂದರಃ । ದರ್ಶಯನ್ನಾಸುರೀಂ ಬುದ್ಧಿಂ ಸ್ವಪ್ನದೃಶ್ಯವಿವಕ್ಷಯಾ । ಘ್ನಂತೀವೈನಮುದಂತೀವ ತಥಾ ನ ಸ್ಯಾತ್ಪರೋ ಹರಿಃ ॥೧,೨,೩,೪॥ ಇತಿ ದಶಮಃ ಖಂಡಃ ॥ ೧೦—೧೦ ॥ ॥ ೧ ॥**

ಅ ॥ (೧) ಮೋಹಕ್ಕೆ ಯೋಗ್ಯಗಳೇ ಆದ ವಾಕ್ಯಗಳನ್ನು ಮತ್ತುಮತ್ತು ಬ್ರಹ್ಮನು ಹೇಳಿರುವನು. ಏಕೆಂದರೆ ಯೋಗ್ಯತೆಯು ಶ್ರೇಷ್ಠವಾಗಿರುವುದರಿಂದ (ಯೋಗ್ಯನಾದವನು ತನ್ನ ಯೋಗ್ಯತಾನುಸಾರ ಮೋಹಕ ವಾಕ್ಯದಲ್ಲಿ ತೋರುವ ಆಪಾತಾರ್ಥವನ್ನು ಬಿಟ್ಟು ಯೋಗ್ಯವಾದ ತತ್ತ್ವಾರ್ಥವನ್ನು ತಿಳಿದು ಕೊಳ್ಳಲಿ, ಎಂದು) ಚತುರ್ಮುಖನು ಇಂದ್ರನಿಗೆ ತಿಳಿಸುವುದಕ್ಕಾಗಿ ಸಂದಿಗ್ಧಗಳೇ ಆದ ವಾಕ್ಯಗಳನ್ನು ಹೇಳಿದನು. (೨) (**ಯ ಏಷ ಸ್ವಪ್ನೇ ಮಹೀಯಮಾನಃ** ಎಂಬ ಉಪದೇಶದ ಅಭಿಪ್ರಾಯ ಹೇಳುತ್ತಾರೆ-) ಯಾವನು ಸ್ವಾಪ್ನವಸ್ತುಗಳನ್ನು ತೋರಿಸುತ್ತಾ ಎಲ್ಲಾ ದೇವತೆಗಳಿಂದ ಪೂಜಿಸಿ ಕೊಳ್ಳಲ್ಪಡುತ್ತಾನೋ, ಆತನೇ ವಿಷ್ಣುವೆಂದು ಅಭಿಪ್ರಾಯದಿಂದ ಬ್ರಹ್ಮನು ಉಪದೇಶಿಸಿದನು. (೩) (ಅಲ್ಲದೆ ಸ್ವಪ್ನದಲ್ಲಿ ಪೂಜಿಸಲ್ಪಡುವ ಜೀವನು ಆತ್ಮನೆಂಬುದು ಬ್ರಹ್ಮನಿಗೆ ಅಭಿಪ್ರೇತವಲ್ಲ,) (**ಸ ಹಾಪ್ರಾಪ್ಯೈವ ದೇವಾನ್** ಇತ್ಯಾದಿ ವಾಕ್ಯಗಳ ತಾತ್ಪರ್ಯಹೇಳುತ್ತಾರೆ—) ಆ ವಾಕ್ಯಕ್ಕೂ ಇಂದ್ರನು ಅಸುರರಲ್ಲಿರುವ ಅಜ್ಞಾನವು ತನ್ನಲ್ಲಿದೆ ಎಂದು ತೋರಿಸುತ್ತಾ ಸ್ವಪ್ನದಲ್ಲಿ ತೋರುವವನು ಜೀವನೆಂದು ಇಟ್ಟುಕೊಂಡು ಈ ಜೀವನನ್ನು ಕಳ್ಳರು ಕೊಲ್ಲುತ್ತಾರೆಂಬುವ ಹಾಗೂ ತಿನ್ನುತ್ತಾರೆಂಬುವ ಹಾಗೂ ತೋರುವುದರಿಂದ ಆತನೇ ಪರಮಾತ್ಮನೆಂದು ತಿಳಿಯುವುದು ಹೇಗೆ? ಏಕೆಂದರೆ ಹಾಗೆ ದೋಷಗಳುಳ್ಳವನು ಸರ್ವೋತ್ತಮನಾಗಲಾರನು, ಎಂದು ಇಂದ್ರನು ಕೇಳಿದನು. ॥ ೧೦—೧೦ ॥ ॥ ೧ ॥

**ಹತ್ತನೇ ಖಂಡವು ಮುಗಿಯಿತು.**

## ೧೧ನೇ ಖಂಡವು

ಶಿ—ಚತುರ್ಮುಖನು ಇಂದ್ರನಿಗೆ ಏನು ಹೇಳಿದನೆಂದರೆ—

**ಉ. ॥ ತದ್ಯತ್ರೈತತ್ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯೇಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ಸ ಹ ಶಾಂತಹೃದಯಃ ಪ್ರವವ್ರಾಜ ಸ ಹಾಪ್ರಾಪ್ಯೈವ ದೇವಾನೇತದ್ಭಯಂ ದದರ್ಶ ನಾಹಂ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ**

**ನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ ನಾಹಮತ್ರ ಭೋಗ್ಯಂ ಪಶ್ಯಾಮೀತಿ ॥ ೧ ॥**

ಅ ॥ ಗಾಢನಿದ್ದೆಯಲ್ಲಿದ್ದವನು ಇಂದ್ರಿಯವ್ಯಾಪಾರಗಳು ಯಾವುದೂ ಇಲ್ಲದವನಾಗಿ ಸಂತುಷ್ಟನಾಗಿ ಸ್ವಪ್ನವನ್ನು ತಿಳಿಯುವುದಿಲ್ಲ. ಇವನೇ ಆತ್ಮನು. ಇದರಿಂದ ಸುಷುಪ್ತಿಯಲ್ಲಿರುವ ಜೀವನೇ ಆತ್ಮನೆಂದು ಆಪಾತತಃ ತೋರುವ ಅರ್ಥವು. ಆ ಅವಸ್ಥೆಯಲ್ಲಿ ಯಾವ ಪ್ರಾಜ್ಞರೂಪಿಯಾದ ಶ್ರೀಹರಿಯಲ್ಲಿ ಸ್ವಾಪಹೊಂದಿದ (ನಿದ್ರಿತನಾದ) ಜೀವನು ಇಂದ್ರಿಯವ್ಯಾಪಾರಗಳಿಲ್ಲದವನಾಗಿ ಸ್ವರೂಪ ಸುಖಾನುಭವವುಳ್ಳವನಾಗಿ ಸ್ವಪ್ನವನ್ನು ತಿಳಿಯುವುದಿಲ್ಲವೋ, (ಜಾಗ್ರತ್ಪದಾರ್ಥವನ್ನು ತಿಳಿಯುವುದಿಲ್ಲವೆಂಬುದು ಸುತರಾಂ ಸಿದ್ಧವು.) ಅಂದರೆ ಸುಷುಪ್ತಿಯನ್ನು ಹೊಂದುತ್ತಾನೆ. ಅಂತಹ ಜೀವನಿಗೆ ನಿಯಾಮಕನಾದ ಪ್ರಾಜ್ಞರೂಪಿ ಪರಮಾತ್ಮನೇ ನಿಯಾಮಕನಾದ ಆತ್ಮನೆಂದು ಬ್ರಹ್ಮನು ಹೇಳಿದನು. ಆಗ ಸುಷುಪ್ತ್ಯವಸ್ಥೆಯನ್ನು ಹೊಂದಿಸಿಕೊಡತಕ್ಕ ಸುಪ್ತರಿಗೆ ಆಧಾರನಾದ ಪ್ರಾಜ್ಞರೂಪಿಯಾದ ಶ್ರೀಹರಿಯು ಆತ್ಮನು, ನಿತ್ಯಮುಕ್ತನು, ಭಯವಿಲ್ಲದವನು, ಜೀವರಿಗಿಂತ ಭಿನ್ನನು, ಗುಣಪೂರ್ಣನು ಎಂದು ಬ್ರಹ್ಮನು ಹೇಳಿದುದು, ಇದು ಬ್ರಹ್ಮನ ಅಭಿಪ್ರಾಯವೆಂದು ಇಂದ್ರನು ತಿಳಿದುಕೊಂಡಿದ್ದರೂ ಅಸುರರಿಗೆ ಮೋಹ ಬರುವುದಕ್ಕಾಗಿ ಜೀವರಿಂದ ಭಿನ್ನನಾದವನನ್ನು ನೋಡುವುದಿಲ್ಲ, ಎಂದನು. ಇಂದ್ರನು ಶಾಂತಹೃದಯನಾಗಿ ಹೋದನು. ಇಂದ್ರನು ಹೋಗುತ್ತಿರುವಾಗ ಮಾರ್ಗಮಧ್ಯದಲ್ಲಿ ಸುಪ್ತಿಯಲ್ಲಿ ಜೀವನೇ ಆತ್ಮನು ಎಂದು ಬ್ರಹ್ಮನು ಹೇಗೆ ಹೇಳಿದನು, ಎಂದು ಆಪಾತತಃ ತೋರುವ ಅರ್ಥ ಇಟ್ಟುಕೊಂಡು ಜೀವರಿಂದ ಭಿನ್ನನಾದವನನ್ನು ತಿಳಿಯದವನಂತೆ, ದೇವತೆಗಳನ್ನು ಹೊರಿದದೇನೇ ಇಂದ್ರನು ಭಯಪಟ್ಟವನಂತೆ ತೋರಿಸಿದನು. (ಅದನ್ನು ವಿವರಿಸುತ್ತಾರೆ—) ಸುಪ್ತನಾದ ನಾನು, ಇಂತಹನಾಗಿರುತ್ತೇನೆಂದು ತಿಳಿಯುವುದಿಲ್ಲ. ಹೀಗೆ ಬ್ರಹ್ಮನು ಹೇಳಿದ ಪ್ರಕಾರ ಆಧಾರನಾದ ಆತ್ಮನನ್ನು ನಾನು ತಿಳಿಯುವುದಿಲ್ಲ. ಈ ಪ್ರಾಣಿಗಳೂ ತಿಳಿಯುವುದಿಲ್ಲ. ಆದಕಾರಣ ಆಧಾರನಾದ ಆತ್ಮನು ಇಲ್ಲವೇ ಇಲ್ಲ. ಎಂದು ಆಪಾತತಃ ತೋರುವ ಅರ್ಥದಿಂದ ಭಯಹುಟ್ಟಿದವನಂತೆ ತೋರಿಸಿದನು. (ಹಾಗಾದರೆ. ಜೀವನು ಸುಷುಪ್ತಿಕಾಲದಲ್ಲಿ ಪರಮಾತ್ಮನಲ್ಲಿ ಐಕ್ಯ ಹೊಂದಲಿ, ಎಂದರೆ—ಜೀವನು ಸುಷುಪ್ತಿಕಾಲದಲ್ಲಿ ಶ್ರೀಹರಿಯಲ್ಲಿ ಪ್ರವೇಶ ಮಾಡುವುದಾದರೆ—ಸುಖವಿಲ್ಲದೇನೇ ಇರಬೇಕಾಗುವುದು ಅಂದರೆ—ಸುಖಾನುಭವವಿಲ್ಲದೆ ಇರಬೇಕಾಗುವುದು. (ಏಕೆಂದರೆ ತನ್ನ ಮನೆಬಿಟ್ಟು ಇನ್ನೊಂದು ಮನೆಗೆ ಹೋದವನಿಗೆ ಸುಖವಿಲ್ಲ ಹಾಗಂತ **ಏತಾವಂತಂ ಕಾಲಂ ಸುಖಮಹಮಸ್ವಾಪ್ಸಂ** ಇಷ್ಟುಕಾಲ ಸುಖವಾಗಿ ಮಲಗಿರುವೆನು, ಎಂದು ಗಾಢನಿದ್ರೆಯಿಂದ ಎಚ್ಚತ್ತವನಿಗೆ ಸುಖಾನುಭವವು ಬರುತ್ತದೆ. ಇದು ವಿರುದ್ಧವಾದೀತು. ಈ ಅರ್ಥದಲ್ಲಿ ಮೋಕ್ಷಾದಿ ಪುರುಷಾರ್ಥವು ಆಗಲಾರದೆಂದು ಇಂದ್ರನು ಹೇಳಿದನು ಅಥವಾ— ಹೀಗೆ ಸುಪ್ತಜೀವರಿಗೆ ಆಶ್ರಯನಾದ ಶ್ರೀಹರಿಯ ಮಹಿಮೆ ಹೇಳಿ ಶ್ರೀಹರಿಯು ಜೀವರಿಂದ ವಿಲಕ್ಷಣನೆಂದು ಚೆನ್ನಾಗಿ ತಿಳಿಯುವುದಕ್ಕಾಗಿ, ಅಸುರರ ಮತವನ್ನನುಸರಿಸಿ ಸುಷುಪ್ತ್ಯವಸ್ಥೆಯಲ್ಲಿ ಜೀವರಿಗೆ ಆಶ್ರಯನಾದ ಈಶ್ವರನು ಇಲ್ಲ ಎಂಬುದನ್ನು **ನಾಹಂಖಲು** ಇತ್ಯಾದಿಗಳಿಂದ ಯುಕ್ತಿಯಿಂದ ಸಾಧಿಸುತ್ತಾರೆ.) ಸುಷುಪ್ತ್ಯವಸ್ಥೆಯಲ್ಲಿ ಪರಮಾತ್ಮನು ಸುಪ್ತನಾದ ನನಗೆ ಆಶ್ರಯನು, ನಾನು ಈ ಪರಮಾತ್ಮನನ್ನು ಆಶ್ರಯಿಸುತ್ತೇನೆ, ಹೀಗೆ ಪರಮಾತ್ಮನನ್ನು ನನ್ನಿಂದ ಭಿನ್ನನನ್ನಾಗಿ ನಾನು ತಿಳಿಯುವುದಿಲ್ಲ. (ಹಾಗಾದರೆ ಗಾಢನಿದ್ದೆಯಲ್ಲಿ ಜೀವನಿಗೆ, ತನಗೆ ಆಶ್ರಯನಾದ ಪರಮಾತ್ಮನ ಜ್ಞಾನವಿಲ್ಲವಾದರೂ ಪರಮಾತ್ಮನು ತನ್ನನ್ನು ಜೀವನಿಗೆ ಆಶ್ರಯನನ್ನಾಗಿ ತೋರಿಸುತ್ತಾನೆಂದು ಏಕೆ ಆಗಲಾರದೆಂದರೆ) ಜೀವರಿಗೆ ಆಶ್ರಯನು ನಾನಾಗಿರುತ್ತೇನೆಂದು ಪರಮಾತ್ಮನೂ ಕೂಡ ತನ್ನನ್ನು ಜೀವರಿಗೆ ತಿಳಿಸುವುದಿಲ್ಲ. (ಹಾಗಾದರೆ ಒಬ್ಬ ಜೀವನು ತನಗೆ ಆಶ್ರಯನಾದ ಶ್ರಿಪರಮಾತ್ಮನನ್ನು ಸುಷುಪ್ತಿಕಾಲದಲ್ಲಿ ಕಾಣದಿದ್ದರೂ ನಿದ್ರಿತರಿಗೆ ಆಧಾರನಾದ ಶ್ರೀಹರಿಯು ಇಲ್ಲವೆಂದಾಗುವುದಿಲ್ಲ ಏಕೆಂದರೆ—ಬೇರೆ ಜೀವರಿಗೆ ಸುಷುಪ್ತಿಕಾಲದಲ್ಲಿ ಶ್ರೀಹರಿಯು ಕಾಣಬಹುದೆಂದರೆ—) ಎಲ್ಲಾ ಪ್ರಾಣಿಗಳೂ ಸುಷು

ಪ್ತ್ಯವಸ್ಥೆಯಲ್ಲಿ ತನಗೆ ಆಶ್ರಯನಾದ ಶ್ರೀಹರಿಯನ್ನು ತಿಳಿಯುವುದೇ ಇಲ್ಲ. (ಆದಕಾರಣ ಯಾರಿಗೂ ಕಾಣದಿರುವುದರಿಂದ ಪರಮಾತ್ಮನು ಇಲ್ಲ.) (ಹಾಗಾದರೆ ಸುಷುಪ್ತಿಕಾಲದಲ್ಲಿ ಜೀವನು ಈಶ್ವರನಲ್ಲಿ ಆಗಲೀ, ಈಶ್ವರನು ಜೀವನಲ್ಲಿ ಆಗಲೀ ಪ್ರವೇಶಮಾಡುತ್ತಾನೆ. ಆದಕಾರಣ ಆಶ್ರಯಾಶ್ರಯಿಭಾವವು ತೋರುವುದಿಲ್ಲ ಎಂದರೆ) ಜೀವನು ಈಶ್ವರನಲ್ಲಿ ಪ್ರವೇಶ ಮಾಡುತ್ತಾನೆಂದಾದರೆ ಸುಖವಿಲ್ಲದೇನೇ ಇರಬೇಕಾಗುವುದುದು. (ಅಂದರೆ ಜೀವನು ಸ್ವರೂಪ ಸುಖವನ್ನು ಅನುಭವಿಸುವವನಾಗದೆ ಹೋದಾನು. ಏವಂಚ ಗಾಢನಿದ್ದೆ ಮಾಡಿದ ಜೀವನಿಗೆ **ಸುಖಮಹಮಸ್ವಾಪ್ಸಂ** ಎಂದು ಎಚ್ಚತ್ತವನಿಗೆ ಜ್ಞಾನವು ಬಾರದೆ ಹೋದೀತು. ಅಥವಾ ಈಶ್ವರನು ಜೀವನಲ್ಲಿ ಪ್ರವೇಶಮಾಡುತ್ತಾನೆಂದಾದರೆ ಈಶ್ವರನಿಗೆ ಸುಖವೇ ಇಲ್ಲದೆಹೋಗಬೇಕಾಗುವುದು. (ಏವಂಚ ಶ್ರೀಹರಿಯು ಸದಾ ಸುಖವನ್ನೇ ಭೋಗಿಸುವವನೆಂದು ಹೇಳುವ ವೇದಾದಿಗಳಿಂದ ವಿರೋಧವು ಬರುವುದು. ತಥಾಚ ಜೀವೇಶ್ವರರಿಗೆ ಪರಸ್ಪರವಾಗಿ ಪ್ರವೇಶವಿಲ್ಲ. ಜೀವೇಶ್ವರರು ಭಿನ್ನರಾಗಿಯೂ ತೋರುವುದಿಲ್ಲ. ಮತ್ತು ಸುಖಮಹಮಸ್ವಾಪ್ಸಂ ಎಂದು ಉತ್ತರ ಕಾಲದಲ್ಲಿ ಜ್ಞಾನವು ಬರುವುದರಿಂದ ಜೀವನೇ ತೋರುತ್ತಾನೆ. ಆದಕಾರಣ ಜೀವ ಹೊರತು ಈಶ್ವರನು ತೋರದಿರುವುದರಿಂದ ಶ್ರೀಹರಿಯು ಇಲ್ಲವೆಂದು ಅಂಜಿಕೆಯನ್ನು ಹುಟ್ಟಿಸುವ ಆಕ್ಷೇಪವು ತೋರಿತು ॥ ೧ ॥

ಪೀ—ಈ ಆಕ್ಷೇಪವನ್ನು ಚತುರ್ಮುಖನಿಗೆ ತಿಳಿಸಿ ಜೀವನಿಂದ ಪರಮಾತ್ಮನು ಭಿನ್ನನೆಂಬುದನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕಾಗಿ ದೇವೇಂದ್ರನು ಮರಳಿ ಬಂದನೆಂದು ಹೇಳುತ್ತಾರೆ—

**ಉ. ॥ ಸ ಸಮಿತ್ಪಾಣಿಃ ಪುನರೇಯಾಯ ತꣳ ಹ ಪ್ರಜಾಪತಿರುವಾಚ ಮಘವನ್ಯಚ್ಛಾಂತಹೃದಯಃ ಪ್ರಾವ್ರಾಜೀಃ ಕಿಮಿಚ್ಛನ್ ಪುನರಾಗಮ ಇತಿ ಸ ಹೋವಾಚ ನಾಹಂ ಖಲ್ವಯಂ ಭಗವ ಏವꣳ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ ನೋ ಏವೇಮಾನಿ ಭೂತಾನಿ ವಿನಾಶಮೇವಾ-ಪೀತೋ ಭವತಿ ನಾಹಮತ್ರ ಭೋಗ್ಯಂ ಪಶ್ಯಾಮೀತಿ ॥ ೨ ॥**

ಅ ॥ ಹೀಗೆ ದೇವೇಂದ್ರನು ಆಲೋಚಿಸಿ ಕೈಯಲ್ಲಿ ಸಮಿಧೆ ಹಿಡಿದುಕೊಂಡು ಮರಳಿ ಬಂದನು ಆಗ ಚತುರ್ಮುಖನು ಎಲೋ ಇಂದ್ರನೇ ಶಾಂತಹೃದಯನಾಗಿ ಹೋಗಿರುತ್ತಿ. ಯಾವ ಉದ್ದೇಶದಿಂದ ಮರಳಿ ಬಂದಿರುತ್ತಿ, ಎಂದು ಕೇಳಿದನು. ಆಗ ಇಂದ್ರನು ಹೇಳಿದನು.*.................... ॥ ೨ ॥

**ಉ ॥ ಏವಮೇವೈಷ ಮಘವನ್ನಿತಿ ಸ ಹೋವಾಚೈತಂ ತ್ವೇವ ತೇ ಭೂಯೋಽನುವ್ಯಾಖ್ಯಾಸ್ಯಾಮಿ ನೋ ಏವಾನ್ಯತ್ರೈತಸ್ಮಾದ್ವಸಾಪರಾಣಿ ಪಂಚ ವರ್ಷಾಣೀತಿ ಸಹಾಪರಾಣಿ ಪಂಚವರ್ಷಾಣ್ಯುವಾಸ ತಾನ್ಯೇಕಶತಂ ಸಂಪೇ-ದುರೇತತ್ತದ್ಯದಾಹುರೇಕಶತꣳ ಹ ವೈ ವರ್ಷಾಣಿ ಮಘವಾನ್ ಪ್ರಜಾಪತೌ ಬ್ರಹ್ಮಚರ್ಯಮುವಾಸ ತಸ್ಮೈ ಸ ಹೋವಾಚ ॥ ಇತ್ಯೇಕಾದಶಃ ಖಂಡಃ ॥ ॥ ೧೦ ೧೧ ॥ ॥ ೩ ॥**

ಅ ॥ ಎಲೋ ಇಂದ್ರನೇ, ಶ್ರೀಪರಮಾತ್ಮನು ಸುಷುಪ್ತ್ಯಾದಿ ಕಾಲಗಳಲ್ಲಿ ಜೀವರಿಂದ ಭಿನ್ನನೆಂದು ಪ್ರತ್ಯಕ್ಷವಾಗಿ ತೋರುವುದೇ ಇಲ್ಲ. ಪರಂತು ಶ್ರೀಹರಿಯು ಜೀವರಿಂದ ಭಿನ್ನನೆಂಬುವುದನ್ನು ಜೀವರಲ್ಲಿ

*ಹಿಂದಿನಂತೆ ಅರ್ಥ ೪೫೦ನೇ ಪುಟದಲ್ಲಿ ಹೇಳಿದೆ.

ಇಲ್ಲದ ಧರ್ಮಗಳಿಂದ ಊಹಿಸಬೇಕು. ಅದುಕಾರಣ ಶ್ರೀಹರಿಯು ಜೀವರಲ್ಲಿಲ್ಲದ ಧರ್ಮಗಳುಳ್ಳವನೆಂದು ನನಗೆ ಹೇಳುವೆನು. ಆದರೆ ನೀನು ಸ್ವಲ್ಪ ಕಾಲ ಬ್ರಹ್ಮಚರ್ಯವ್ರತ ಮಾಡದಿದ್ದರೆ ಸರ್ವಥಾ ಉಪದೇಶಿಸ ಲಾರೆ. ಅಥವಾ ಶ್ರೀಪರಮಾತ್ಮನು ಹೊರತು ಉಪದೇಶಿಸಲಿಕ್ಕೆ ಯೋಗ್ಯವಾದುದು ಇಲ್ಲವೇಇಲ್ಲ. ಆ ಪರ ಮಾತ್ಮನನ್ನೇ ನಿನಗೆ ಮರಳಿ ಹೇಳುವೆನ, ಅದಕ್ಕಾಗಿ ಐದುಸಂವತ್ಸರ ನನ್ನ ಸಮಿಾಪದಲ್ಲಿ ಆವಾಸಮಾಡು, ಎಂದು ಬ್ರಹ್ಮನುಹೇಳಿದನು. ಆಗ ಇಂದ್ರನು ಬ್ರಹ್ಮನ ಆಜ್ಞಾನುಸಾರ ಐದು ಸಂವತ್ಸರಗಳಲ್ಲಿ ಆವಾಸ ಮಾಡಿದನು. ಹೀಗೆ ಇಂದ್ರನು ನಾಲ್ಕುಸಲ ಗುರುಕುಲ ವಾಸಮಾಡಿದಾಗ ಒಟ್ಟಿಗೆ ಚತುರ್ಮುಖನ ಬಳಿಯಲ್ಲಿ ಪರಬ್ರಹ್ಮನ ತತ್ತ್ವಜ್ಞಾನಕ್ಕಾಗಿ ಆವಾಸಮಾಡಿದ ವರ್ಷಗಳು ನೂರಒಂದು (೧೦೧) ಆದವು. ನೂರ ಒಂದು ವರ್ಷಗಳಲ್ಲಿ ಇಂದ್ರನು ಬ್ರಹ್ಮನ ಬಳಿಯಲ್ಲಿ ಬ್ರಹ್ಮಚರ್ಯ ವ್ರತವನ್ನು ಮಾಡಿ ದನೆಂದು ಪ್ರಾಜ್ಞರು ಹೇಳುವುದು ದ್ವಾತ್ರಿಂಶತಂ ಇತ್ಯಾದಿ ಪೂರ್ವದಲ್ಲಿ ಹೇಳಿದ ಪ್ರಕಾರ ಪ್ರಸಿದ್ಧವು. ಹೀಗೆ ಬ್ರಹ್ಮಚರ್ಯ ವ್ರತವನ್ನು ಮಾಡಿದ ಇಂದ್ರನಿಗೆ ಆ ಚತುರ್ಮುಖನು (ಶ್ರೀಹರಿಯು ಜೀವರಿಂದ ಭಿನ್ನನೆಂಬುದನ್ನು ಊಹಿಸಿಕೊಡುವ. ಜೀವರಲ್ಲಿಲ್ಲದ ಧರ್ಮಗಳನ್ನು) ಉಪದೇಶಿಸಿದನು ॥೩॥

ಪೀ— ಈ ಖಂಡದ ತಾತ್ಪರ್ಯ ಹೇಳುತ್ತಾರೆ—

**ಭಾ. ॥ (೧) ಇತ್ಯುಕ್ತ ಆಹ ಬ್ರಹ್ಮೈನಂ ಸುಪ್ತಿಸ್ಥೋ ಭಗವಾನಿತಿ । ಯತ್ರ ಸುಪ್ತೋ ಹ್ಯಯಂ ಜೀವಃ ॥ (೨) ಇತ್ಯುಕ್ತಃ ಪ್ರಾಹ ವಾಸವಃ । ನಾಹಂ ಜಾನಾಮಿ ಮತ್ತೋಽನ್ಯಂ ಸುಪ್ತೌ ॥ (೩) ನಾನ್ಯೋಽಪಿ ದರ್ಶಯೇತ್ । ಅಹಮಸ್ಮೀತಿ ಭೂತಾನಿ ನ ಚ ಪಶ್ಯಂತಿ ಕಾನಿಚಿತ್ ॥ (೪) ಯದಿ ಜೀವಃ ಪರಾತ್ಮಾ ವಾಪ್ಯ(ಚಾಥಾ)ನ್ಯೋನ್ಯಸ್ಮಿನ್ನಪೀತತಾಂ । ಗತೌ ತದಾಪ್ಯಪೀತಸ್ತು ಶಂ ವಿನೈವ ಭವೇದಿತಿ ॥ ೧, ೨, ೩ ॥ ಇತ್ಯೇಕಾದಶಃ ಖಂಡಃ ॥ ॥ ೧೦—೧೧ ॥ ॥ ೧ ॥**

ಅ ॥ (೧) ಯಾವ ಶ್ರೀಹರಿಯಲ್ಲಿ ಜೀವನು ನಿದ್ರಿತನಾಗುತ್ತಾನೋ, ಅಂತಹ ಸುಷುಪ್ತ್ಯವಸ್ಥೆಗೆ ಪ್ರೇರಕನಾದ ಶ್ರೀಹರಿಯು ಆತ್ಮನೆಂದು ಚತುರ್ಮುಖನು ಇಂದ್ರನಿಗೆ ಹೇಳಿದನು. (೨) ಆಗ ಇಂದ್ರನು (ನಾನು ಶ್ರೀಹರಿಯಲ್ಲಿ ಆಶ್ರಿತನು, ಹರಿಯು ನನಗೆ ಆಶ್ರಯನು, ಹೀಗೆ) ನನ್ನಿಂದ ಭಿನ್ನನಾದ ಪರಮಾತ್ಮ ನನ್ನು ಸುಷುಪ್ತಿಯಲ್ಲಿ ನಾನು ತಿಳಿಯುವುದಿಲ್ಲ ಎಂಬುವ ಹಾಗೆ ತೋರಿಸಿದನು. (೩) ಪರಮಾತ್ಮನೂ ಕೂಡ ನಾನು ಜೀವರಿಗೆ ಆಶ್ರಯನಾಗಿರುತ್ತೇನೆಂದು ತನ್ನನ್ನು ಜೀವರಿಗೆ ತೋರಿಸುವುದಿಲ್ಲ. ಯಾವ ಪ್ರಾಣಿ ಗಳೂ ಕೂಡ ಸುಷುಪ್ತಿಕಾಲದಲ್ಲಿ ತಮಗೆ ಆಶ್ರಯನಾದ ಪರಮಾತ್ಮನನ್ನು ನೋಡುವುದಿಲ್ಲ. (ಹೀಗೆ ಯಾರಿಗೂ ಕಾಣದಿರುವುದರಿಂದ ಜೀವರಿಗೆ ಆಶ್ರಯನಾದ ಪರಮಾತ್ಮನು ಸುಷುಪ್ತಿ ಕಾಲದಲ್ಲಿ ಇಲ್ಲ.) (೪) (ಕಾಣದಿರುವುದರಿಂದ ಶ್ರೀಹರಿಯು ಸುಷುಪ್ತಿಕಾಲದಲ್ಲಿ ಇಲ್ಲವೆಂಬುದು ಯುಕ್ತವಲ್ಲ, ಸುಷುಪ್ತಿಯಲ್ಲಿ ಜೀವನು ಶ್ರೀಹರಿಯಲ್ಲಿಯೂ ಶ್ರೀಹರಿಯು ಜೀವನಲ್ಲಿಯೂ ಪ್ರವೇಶಿಸುವುದರಿಂದ ಆಶ್ರಯಾಶ್ರಯಿಭಾವವು ಕೂಡಬಹುದೆಂದರೆ) ಜೀವನಾಗಲೀ ಪರಮಾತ್ಮನಾಗಲೀ ಪರಸ್ಪರವಾಗಿ ಪ್ರವೇಶಮಾಡಿದ್ದೆಂದಾದರೆ ಆವಾಗ ಜೀವನಿಗೆ ಶ್ರೀಹರಿಯಲ್ಲಿ ಪ್ರವೇಶವೆಂದಾದರೆ ಜೀವನಿಗೆ ಸುಖಾನುಭವವು ಇಲ್ಲದೆ ಹೋಗುವುದು. ಮತ್ತೊಬ್ಬನ ಮನೆಯಲ್ಲಿದ್ದವನಿಗೆ ಸುಖವು ತೋರಿಬರುವುದಿಲ್ಲವಷ್ಟೆ! ಶ್ರೀಹರಿಗೆ ಜೀವನಲ್ಲಿ ಪ್ರವೇಶ ವೆಂದಾದರೆ—ಆವಾಗಲೂ ಸುಖವಿಲ್ಲವೆಂದಾದೀತು. ಏವಂಚ ವೇದಾದಿಗಳಿಂದ ವಿರೋಧವು. ॥ ೧೧ ॥

ಹನ್ನೊಂದನೇಖಂಡವು ಮುಗಿಯಿತು

## ೧೨ನೇ ಖಂಡವು

**ಪೀ –ಯ ಏಷೋಽಂತರಕ್ಷಣಿ** ಇತ್ಯಾದಿಗಳಿಂದ ಜೀವರಿಗೆ ಶ್ರೀಹರಿಯು ಜಾಗ್ರತ ಸ್ವಪ್ನ ಸುಷು ಪ್ತ್ಯವಸ್ಥೆಗಳನ್ನು ಕೊಡುವವನೆಂದುಪದೇಶಿಸಿ ಈಗ ಜರಾಮರಣವಿರುವ ಶರೀರವಿಲ್ಲದಿರುವ ಶ್ರೀಹರಿಯು ಜರಾಮರಣಗಳಿರುವ ಶರೀರವುಳ್ಳ ಜೀವರಿಗಿಂತ ವಿಲಕ್ಷಣನೆಂಬುವುದನ್ನು ದೃಢೀಕರಿಸುತ್ತಾರೆ—

**ಉ. ॥ ಮಘವನ್ ಮರ್ತ್ಯಂ ವಾವ ಇದಃ ಶರೀರಮಾತ್ತಂ ಮೃತ್ಯುನಾ ತದಸ್ಯಾಮೃತಸ್ಯಾಶರೀರಸ್ಯಾಽತ್ಮನೋಽಧಿಷ್ಠಾನಮಾತ್ತೋ ವೈ ಶರೀರಃ ಪ್ರಿಯಾ ಪ್ರಿಯಾಭ್ಯಾಂ ನ ಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿ- ರಸ್ತ್ಯಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ ॥ ೧ ॥**

**ಅ ॥** ಎಲೋ ಇಂದ್ರನೇ ಜೀವರ ಶರೀರದಲ್ಲಿ ಮರಣವು ವ್ಯಾಪಿಸಿಕೊಂಡಿದ್ದ ಪ್ರಯುಕ್ತ ಅದಕ್ಕೆ ವಿನಾಶವಿದೆ ದೇಹನಾಶವಿದ್ದ ಪ್ರಯುಕ್ತಜೀವನೂ ನಾಶವುಳ್ಳವನೆನ್ನಿಸುತ್ತಾನೆ. ಜೀವರ ಶರೀರವು, ಪ್ರಾಕೃತ ದೇಹವೂ ನಾಶವೂ ಇಲ್ಲದಿರುವ ಶ್ರೀಹರಿಗೆ ಅಧಿಷ್ಠಾನ (ಆಶ್ರಯ)ವು. (ಇಂತಹ ಶ್ರೀಹರಿಯೂ ಕ್ರೀಡಾರ್ಥ ವಾಗಿ ಮನುಷ್ಯರ ಶರೀರದಲ್ಲಿರುತ್ತಾನೆ.) (ಜೀವರಿಗೆ ಪ್ರಿಯ ಅಪ್ರಿಯಗಳಿವೆ. ಈಶ್ವರನಿಗೆ ಪ್ರಿಯ ಅಪ್ರಿಯ ಗಳು ಇಲ್ಲವೆನ್ನುತ್ತಾರೆ.) ಪಾಂಚಭೌತಿಕ ಶರೀರವಿರುವ ಜೀವನಿಗೆ ಸುಖ ದುಃಖಗಳಿವೆ. ಹೇಗೆಂದರೆ ಶರೀ ರದಿಂದ ಕೂಡಿರುವಾಗ ಪ್ರಿಯ ಅಪ್ರಿಯಗಳು ಬಿಟ್ಟಿರುವುದಿಲ್ಲ. ಪ್ರಸಿದ್ಧ . ಸದಾ ಶರೀರಾಭಿಮಾನವಿಲ್ಲದಿರುವ ಶ್ರೀಹರಿಗೆ ಸುಖದುಃಖಗಳು ಇರುವುದೇ ಇಲ್ಲ. (ಅಂದರೆ ಶ್ರೀಹರಿಗೆ ಪ್ರಿಯ (ಪರರಿಂದ ಸಿಗುವ ಸುಖ) ಇಲ್ಲ. ಅಮಂಗಲವೂ ಇಲ್ಲವೇ ಇಲ್ಲ.) ॥ ೧ ॥

**ಪೀ** –ಜೀವನ್ಮುಕ್ತರಾದ ವಾಯ್ವಾದಿಗಳಿಗೂ ಪ್ರಿಯ ಅಪ್ರಿಯಗಳು ಇಲ್ಲ. ಆಗ ಪ್ರಾಕೃತ ಶರೀರ ವಿಲ್ಲದಿರುವ ವಿಷ್ಣುವಿಗೆ ಇಲ್ಲವೆಂಬುದು ಸುತಾರಾಂ ಸಿದ್ಧವೆನ್ನುತ್ತಾರೆ –

**ಉ. ॥ ಅಶರೀರೋ ವಾಯುರಭ್ರಂ ವಿದ್ಯುತ್ಸ್ತನಯಿತ್ನುರಶರೀರಾಣ್ಯೇ- ತಾನಿ ತದ್ಯಥೈತಾನ್ಯಮುಷ್ಮಾದಾಕಾಶಾತ್ಸಮುತ್ಥಾಯ ಪರಂಜ್ಯೋತಿರುಪಸಂ- ಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯಂತೇ ॥ ೨॥**

**ಅ ॥** ಮುಖ್ಯವಾಯುವಿಗೆ ಶರೀರಾಭಿಮಾನವಿಲ್ಲದಿರುವುದರಿಂದ ವಾಯುವು ಅಶರೀರನೆನಿಸುತ್ತಾನೆ. ಜಗತ್ತನ್ನು ವ್ಯಾಪಿಸಿಕೊಂಡಿರುವುದರಿಂದ **ಅಪ್** ಎನಿಸಿದ ಶ್ರೀಹರಿಯು ಧರಿಸುವುದರಿಂದ **ಅಭ್ರ**ನೆನಿಸಿದ ಚತುರ್ಮುಖನೂ, ವಿಶೇಷವಾಗಿ ಪ್ರಕಾಶಿಸಿಕೊಂಡಿರುವುದರಿಂದ **ವಿದ್ಯುತ್** ಎನಿಸಿದ ಭಾರತಿಯೂ, ಎಲ್ಲಾ ಶಬ್ದಗಳಿಗೂ ಅಭಿಮಾನಿಯಾಗಿರುವುದರಿಂದ **ಸ್ತನಯಿತ್ನು** ಎನಿಸಿದ ಸರಸ್ವತಿಯೂ ಈ ಮೂವರಿಗೆ ವಿಶೇಷಜ್ಞಾನವಿರುವುದರಿಂದ ಶರೀರದ ಅತ್ಯಂತ ಸಂಬಂಧವಿಲ್ಲ (ಅಂದರೆ ಈ ಮುಖ್ಯವಾಯು ಮೊದಲಾದ ನಾಲ್ವರಿಗೆ ದೇಹಸಂಬಂಧವಿದ್ದರೂ ದೇಹದಲ್ಲಿ ತಮ್ಮದೆಂದು ಅಭಿಮಾನವಿಲ್ಲದಿರುವುದರಿಂದ ಆ ನಾಲ್ವರು ಶರೀರವಿಲ್ಲದವರು ಎನಿಸುತ್ತಾರೆ. ಆ ನಾಲ್ವರಿಗೇನೇ ಪ್ರಿಯ ಅಪ್ರಿಯಗಳು ಇಲ್ಲದಿರಲು ಶ್ರೀಹರಿಗೆ ಇಲ್ಲ ವೆಂಬುದು ಸುತರಾಂ ಸಿದ್ಧಿಸುತ್ತದೆ.) (ಇಲ್ಲಿ ಯದ್ಯಪಿ ಬ್ರಹ್ಮ ವಾಯುಗಳಿಗೆ ಪ್ರ=ಪರೇಣ, ಇಯಂ= ಪ್ರಿಯಂ) ಶ್ರೀಹರಿಯಿಂದ ಹೊಂದಲ್ಪಡುವ ಪ್ರಿಯವಿದೆ, ಭಾರತೀ ಸರಸ್ವತಿಯರಿಗೆ ಶ್ರೀಹರಿಯ ದರ್ಶನಾದಿ ಗಳಿಂದುಂಟಾಗುವ ಸುಖವೂ, ತಮ್ಮ ತಮ್ಮ ಪತಿಗಳಿಂದ ಸಂಭೋಗಾದಿಗಳಿಂದ ಹೊಂದಲ್ಪಡುವ

ಸುಖವೂ ಇದೆ. ಆದರೂ ಬೇರೆಯವರಿಂದ ಹೊಂದಲ್ಪಡುವ ಸುಖವಿಲ್ಲದಿರುವುದರಿಂದ ಈ ನಾಲ್ವರಿಗೆ ಪ್ರಿಯಸಂಬಂಧವಿಲ್ಲವೆಂದು ಹೇಳಿದೆ.) (ಮೋಕ್ಷವನ್ನು ಹೊಂದಿದವನೂ ಕೂಡ ಶ್ರೀಹರಿಯ ಪ್ರಸಾದ ದಿಂದಲೇ ಇಷ್ಟಭೋಗಗಳನ್ನು ಉಣ್ಣುತ್ತಾನೆ. ಆದುದರಿಂದಲೂ ಜೀವೇಶರಿಗೆ ಭೇದವಿದೆ, ಎನ್ನುತ್ತಾರೆ. ಆ ವಿಷಯದಲ್ಲಿ ದೃಷ್ಟಾಂತ ಹೇಳುತ್ತಾರೆ. ಹೇಗೆ ವಾಯು ಅಭ್ರ ವಿದ್ಯುತ್ ಸ್ತನಯಿತ್ನು ಶಬ್ದಗಳಿಂದ ಹೇಳಲ್ಪಡುವ ಮುಖ್ಯಪ್ರಾಣಮೊದಲಾದವರು ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನೆನಿಸಿದ ಪರ ಮಾತ್ಮನ ಪ್ರಸಾದದಿಂದ ಪ್ರಾಕೃತ ಶರೀರದಿಂದ ಹೊರಟು ಪರಮಾತ್ಮನ ಸಮೀಪಕ್ಕೆ ಹೋಗಿ ತಮ್ಮ ತಮ್ಮ ಸ್ವರೂಪಾನಂದಾದಿಗಳಿಂದ ಯುಕ್ತರಾಗುತ್ತಾರೋ, || ೨ ||

**ಉ. || ಏವಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾಽಜ್ಞಾತಿಭಿರ್ವಾ ನೋಪಜನꣳ ಸ್ಮರನ್ನಿದꣳ ಶರೀರꣳ ಸ ಯಥಾ ಪ್ರಾಯೋಗ್ಯ ಆಚರಣೇ ಯುಕ್ತ ಏವಮೇವಾಯಮಸ್ಮಿನ್ಶರೀರೇ ಪ್ರಾಣೋ ಯುಕ್ತಃ || ೩ ||**

ಅ || ಹೀಗೆಯೇ ಜ್ಞಾನಿಯಾದ ಜೀವನೂ ಚೆನ್ನಾಗಿ ಪರಮಾತ್ಮನ ಪ್ರಸಾದವುಳ್ಳವನಾಗಿ ಈ ಅಂತಿಮ ಶರೀರದಿಂದ ಹೊರಟು ಪರಮಾತ್ಮನ ಬಳಿಗೆ ಹೋಗಿ ಸ್ವಾಭಾವಿಕವಾಗಿ ಆನಂದವನ್ನು ಅನು ಭವಿಸುತ್ತಾನೆ. (ಜ್ಞಾನಿಯು ಯಾವ ಶ್ರೀಹರಿಯನ್ನು ಹೊಂದಿ ಮುಕ್ತನಾಗಿರುವನೋ,) ಅಂತಹ ಪರಂ ಜ್ಯೋತಿಃ ಎನಿಸಿಕೊಂಡ ಶ್ರೀಹರಿಯು ಸರ್ವೋತ್ತಮನಾದ ಪುರುಷನು. ಆ ಮುಕ್ತಜೀವನು ವೈಕುಂಠ ಲೋಕದಲ್ಲಿ ಶ್ರೀಹರಿಯ ಅನುಗ್ರಹದಿಂದಲೇ ಇಷ್ಟವಾದ ಆಹಾರವನ್ನು ತಿನ್ನುತ್ತಾ ನಗುತ್ತಾ ಕ್ರೀಡಿಸುತ್ತಾ ಸ್ತ್ರೀಯರಿಂದ ವಿಹರಿಸುತ್ತಾ ತನ್ನೊಡನೆ ಮುಕ್ತರಾದವರಿಂದಲೂ ಪೂರ್ವದಲ್ಲಿ ಮುಕ್ತರಾದವರಿಂದಲೂ ಸಖಿಯರಿಂದಲೂ ಕೂಡಿಕೊಂಡು ವಾಹನಗಳಿಂದ ಸಂಚರಿಸುತ್ತಾನೆ. (ರಮಣಾಧಿಕ್ಯ ಪ್ರಕಾರವನ್ನು ಹೇಳುತ್ತಾರೆ.) ತನ್ನ ಸಮೀಪದಲ್ಲಿರತಕ್ಕ ಜನವನ್ನೂ, ತನ್ನ ಶರೀರವನ್ನೂ ಸ್ಮರಿಸದೇನೇ ಕ್ರೀಡಿಸುತ್ತಾನೆ, (ಅಂದರೆ ಕೇವಲ ಶ್ರೀಹರಿಯನ್ನನುಸಂಧಾನಮಾಡಿಕೊಂಡೇ ಪರಮ ಸುಖವನ್ನು ಭೋಗಿಸುವ ಮುಕ್ತರಿಗೆ ತಮ್ಮ ಸಮೀಪದಲ್ಲಿದ್ದ ಜನರ ದರ್ಶನಾದಿಗಳೂ ಆಗುವುದಿಲ್ಲ.) (ಮೊದಲು ಜೀವರ ಶರೀರವು ಅಶರೀರನಾದ ಶ್ರೀಹರಿಗೆ ಆಶ್ರಯವೆಂದು ಹೇಳಿದೆ. ಆದರಲ್ಲಿ ಜೀವನಾಗಲೀ ಚಕ್ಷುರಾದಿಗಳಾಗಲೀ ಆಶ್ರಯಗಳಾಗ ಬಹುದೆಂದರೆ—ಜೀವರಿಗೆ ಸಾಮರ್ಥ್ಯವಿಲ್ಲ, ಚಕ್ಷುರಾದಿಗಳು ಕರಣಗಳಾಗಿರುವುದರಿಂದ ಆಶ್ರಯಗಳಾಗು ವುದಿಲ್ಲವೆಂಬುದನ್ನು ದೃಷ್ಟಾಂತಕೊಟ್ಟು ಹೇಳುತ್ತಾರೆ—) ಅದು ಹೇಗೆಂದರೆ—ರಥವನ್ನು ನಡಿಸಲಿಕ್ಕೆ ಸಾರಥಿಯು ರಥದಲ್ಲಿ ಹೇಗೆ ರಥಸ್ವಾಮಿಯಿಂದ ಪ್ರೇರಿಸಲ್ಪಡುತ್ತಾನೋ, ಹೀಗೆಯೇ ಮುಖ್ಯಪ್ರಾಣನೂ ಶರೀರದಲ್ಲಿ ಶರೀರವನ್ನು ಪ್ರವರ್ತಿಸಲಿಕ್ಕೆ ಸಾರಥಿಯಾಗಿ ಶ್ರೀಹರಿಯಿಂದ ಪ್ರೇರಿಸಲ್ಪಟ್ಟಿದ್ದಾನೆ.

ವಿ—ವಾಹನದಲ್ಲಿ ಸಾರಥಿಯಂತೆ ಶರೀರದಲ್ಲಿ ಮುಖ್ಯಪ್ರಾಣನು ಸಾರಥಿಸ್ಥಾನನು. ಉತ್ಕೃಷ್ಟ ಆನಂದರೂಪನಾದುದರಿಂದ ಪ್ರಾಣನೆನಿಸಿದ ವಿಷ್ಣುವು ರಥಿಕನಂತೆ ದೇಹಕ್ಕೆ ನಿಯಾಮಕನು ಮತ್ತೊ ಬ್ಬನು ಸ್ವಾಮಿಯಾಗಿ ಉಳ್ಳ ರಥದಲ್ಲಿರುವ ಪುರುಷನಂತೆ ಶರೀರದಲ್ಲಿ ಜೀವನು ಇರುತ್ತಾನೆ. ಕಣ್ಣುಮೊದ ಲಾದ ಇಂದ್ರಿಯಗಳು ಕುದುರೆಯಂತೆ ಇರುವವುಗಳು. ಏವಂಚ ಜೀವನು ಇನ್ನೊಬ್ಬನು ಸ್ವಾಮಿಯಾಗಿ ಉಳ್ಳ ರಥದಲ್ಲಿ ಕೂತವನಂತೆ ಇರುವವನಾದುದರಿಂದ ಶರೀರಕ್ಕೆ ನಿಯಾಮಕನಾಗಲಾರನು. || ೩ ||

ಟೀ—ಕಣ್ಣು ಮೊದಲಾದ ಇಂದ್ರಿಯಗಳು ಕರಣಗಳು (ಅಂದರೆ ಇತರರಿಂದ ಪ್ರೇರಿಸಲ್ಪಡತಕ್ಕವುಗಳು) ಆಗಿರುವುದರಿಂದ ಇಂದ್ರಿಯಗಳು ದೇಹನಿಯಾಮಕಗಳಾಗಲಾರವೆಂಬ ಅಭಿಪ್ರಾಯದಿಂದ ಅವುಗಳು ಕರಣಗಳೆನ್ನುತ್ತಾರೆ—

**ಉ. ॥ ಅಥ ಯತ್ರೈತದಾಕಾಶಮನುವಿಷಣ್ಣಂ ಚಕ್ಷುಃ ಸ ಚಾಕ್ಷುಷಃ ಪುರುಷೋ ದರ್ಶನಾಯ ಚಕ್ಷುರಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ ಗಂಧಾಯ ಘ್ರಾಣಮಥ ಯೋ ವೇದೇದಮಭಿವ್ಯಾಹರಾಣೀತಿ ಸ ಆತ್ಮಾಽಭಿವ್ಯಾಹಾರಾಯ ವಾಗಥ ಯೋ ವೇದೇದꣳ ಶೃಣವಾನೀತಿ ಸ ಆತ್ಮಾ ಶ್ರವಣಾಯ ಶ್ರೋತ್ರಂ ॥ ೪ ॥**

**ಉ. ॥ ಅಥ ಯೋ ವೇದೇದಂ ಮನ್ವಾನೀತಿ ಸ ಆತ್ಮಾ ಮನೋಽಸ್ಯ ದೈವಂ ಮನಃ ದೈವಂ ಚಕ್ಷುಃ ಸ ವಾ ಏಷ ಏತೇನ ದೈವೇನ ಚಕ್ಷುಷಾ ಮನಸೈತಾನ್ಕಾಮಾನ್ ಪಶ್ಯನ್ರಮತೇ ॥ ೫ ॥**

ಅ ॥ ಚಕ್ಷುರಿಂದ್ರಿಯವು ವಿಷ್ಣುವಿನಲ್ಲಿ ಪ್ರಕಾಶಮಾನ ರೂಪವೆಂಬ ವಿಷಯದಿಂದ ಕೂಡಿದ್ದು. (ಅಂದರೆ ಚಕ್ಷುರಿಂದ್ರಿಯವೂ, ಕಣ್ಣಿಗೆ ಗೋಚರವಾದ ವಸ್ತುವೂ ವಿಷ್ಣುವಿನ ಅಧೀನವು.) ಯಾವ ವಿಷ್ಣುವಿನ ದರ್ಶನಸಾಧ್ಯ ಭೋಗಕ್ಕಾಗಿ ಚಕ್ಷುರಿಂದ್ರಿಯವೋ ಯಾವ ಚಕ್ಷುಸ್ಸಿನಲ್ಲಿದ್ದ ಶ್ರೀಹರಿಯು ಕಣ್ಣಿನಿಂದ ನೋಡುತ್ತೇನೆಂದು ಸ್ವತಂತ್ರವಾಗಿ ತಿಳಿಯುತ್ತಾನೋ, ಯಾವ ಶ್ರೀಹರಿಯು ಚಕ್ಷುರಿಂದ್ರಿಯವನ್ನು ಅದರ ವಿಷಯಾದಿಗಳನ್ನು ಸ್ವತಂತ್ರವಾಗಿ ತಿಳಿಯುತ್ತಾನೋ, ಆತನೇ ಸರ್ವೋತ್ತಮನಾದ ಪುರುಷನು. ಹೀಗೆಯೇ ಗಂಧಮೊದಲಾದ ವಿಷಯಗಳಿಂದೊಡಗೂಡಿದ ಘ್ರಾಣೇಂದ್ರಿಯ ಮೊದಲಾದುದೂ ವಿಷ್ಣುವಿನ ಅಧೀನವು ಯಾವ ಶ್ರೀಹರಿಗೆ ಗಂಧಮೊದಲಾದವುಗಳಿಂದ ಸಾಧ್ಯವಾದ ಭೋಗಕ್ಕಾಗಿ ಘ್ರಾಣೇಂದ್ರಿಯ ಮೊಲಾದುದೋ, ಯಾವ ಶ್ರೀಹರಿಯು ಪುಷ್ಪಮೊದಲಾದುವುಗಳ ಗಂಧ ತೆಗೆದುಕೊಳ್ಳುವೆನೆಂದು ತಿಳಿಯುತ್ತಾನೋ, ಯಾವನು ಘ್ರಾಣಮೊದಲಾದ ಇಂದ್ರಿಯವನ್ನೂ, ಅದರ ವಿಷಯವನ್ನೂ ಚೆನ್ನಾಗಿ ತಿಳಿಯುತ್ತಾನೋ, ಅವನೇ ಸರ್ವೋತ್ತಮ ಪುರುಷನು. ಹೀಗೆಯೇ ವಚನವೆಂಬ ವಿಷಯದಿಂದೊಡಗೂಡಿದ ವಾಗಿಂದ್ರಿಯವು ಶ್ರೀಹರಿಯ ಅಧೀನವು. ವ್ಯವಹಾರಕ್ಕಾಗಿ ವಾಗಿಂದ್ರಿಯವು. ಯಾವ ಶ್ರೀಹರಿಯು ಈ ಮಾತನ್ನು ಆಡುತ್ತೇನೆಂದು ತಿಳಿಯುತ್ತಾನೋ, ಅವನೇ ಉತ್ತಮ ಪುರುಷನು ಶಬ್ದ ಎಂಬ ವಿಷಯದಿಂದ ಕೂಡಿದ ಕಿವಿಯು ಶ್ರೀಹರಿಯ ಅಧೀನವು. ಯಾರಿಗೆ ಕೇಳುವುದಕ್ಕಾಗಿ ಕಿವಿಯೋ, ಯಾವನು ಇದನ್ನು ಕೇಳುತ್ತೇನೆಂದು ಸ್ವತಂತ್ರವಾಗಿ ತಿಳಿಯುತ್ತಾನೋ ಅವನೇ ಉತ್ತಮ ಪುರುಷನು. ಎಲ್ಲಾ ವಿಷಯಗಳಿಂದ ಕೂಡಿದ ಮನಸ್ಸು ಶ್ರೀಹರಿಯ ಅಧೀನವು. ಯಾರಿಗೆ ತಿಳಿಯುವುದಕ್ಕಾಗಿ ಮನಸ್ಸೋ, ಯಾವನು ಇದನ್ನು ತಿಳಿಯುತ್ತೇನೆಂದು ಸ್ವತಂತ್ರನಾಗಿ ತಿಳಿಯುತ್ತಾನೋ, ಅವನೇ ಸರ್ವಸ್ವಾಮಿಯು. ಹೀಗೆಯೇ ಯಾವ ಮುಖ್ಯಪ್ರಾಣ, ಮತ್ತು ಜೀವ ಇವರ ಅಧೀನವಾಗಿ ತಂತಮ್ಮ ವಿಷಯಗಳಿಂದ ಸಂಬಂಧವಾದ ಕಣ್ಣು ಮೊದಲಾದ ಇಂದ್ರಿಯಗಳೋ, ಯಾವ ಮುಖ್ಯಪ್ರಾಣ ಜೀವ ಇವರ ಭೋಗಕ್ಕಾಗಿ ಚಕ್ಷುಸ್ಸು ಮೊದಲಾದ ಇಂದ್ರಿಯವೋ, (ಯಾವ ಮುಖ್ಯಪಾಣ, ಮತ್ತು ಜೀವ ಇವರು ಇದನ್ನು ನೋಡುತ್ತೇನೆಂದು ಅನುಸಂಧಾನವುಳ್ಳವರೋ, ಅಂತಹ ಮುಖ್ಯಪ್ರಾಣ ಮತ್ತು ಜೀವ ಇವರು ಯಾವ ಶ್ರೀಹರಿಯ ಅಧೀನರಾಗಿರುತ್ತಾರೋ, ಅಂತಹ ಶ್ರೀಹರಿಯು ಸರ್ವೋತ್ತಮನಾದ ಪುರುಷನು. ಹೀಗೆ ಈ ವಾಕ್ಯಗಳನ್ನು ಮುಖ್ಯಪ್ರಾಣ ಮತ್ತು ಜೀವಪರವಾಗಿಯೂ ಇಟ್ಟುಕೊಳ್ಳಬೇಕು. ಅವರು ಕ್ರಮವಾಗಿ ಅಮುಖ್ಯವಾಗಿ ವಿಷಯಗಳನ್ನು ಭೋಗಿಸುವವರು. ಇಲ್ಲಿ ಚಕ್ಷುರಾದಿ ಶಬ್ದಗಳು ಅಭಿಮಾನಿಗಳಾದ ದೇವತಾ ಪರಗಳೂ

ಆಗಿವೆ.) (ಜೀವರ ಇಂದ್ರಿಯಗಳಿಂದ ಶ್ರೀಹರಿಯು ವಿಷಯಗಳನ್ನು ಭೋಗಿಸುತ್ತಾನೆಂದಾದರೆ— ಶ್ರೀಹರಿಗೆ ಇಂದ್ರಿಯಗಳಿಲ್ಲವೆಂದಾಯಿತು. **ಸಹಸ್ರಾಕ್ಷಃ ಸಹಸ್ರಪಾತ್** ಇತ್ಯಾದಿ ವೇದಗಳಿಂದ ವಿರೋಧವು ಎಂದರೆ) ಈ ಶ್ರೀಹರಿಯ ಚಕ್ಷುಸ್ಸುಮೊದಲಾದ ಇಂದ್ರಿಯವು ಜೀವರ ಇಂದ್ರಿಯಗಳಿಗಿಂತ ಹೆಚ್ಚು ಪ್ರಕಾಶಿಸಿಕೊಂಡಿರುವುದರಿಂದ ದೈವಂ ಎನಿಸುತ್ತದೆ. ಅದು ಸ್ವರೂಪಾತ್ಮಕವು. ಈ ಪರಮಾತ್ಮನು ಜೀವರ ಚಕ್ಷುಸ್ಸು ಮೊದಲಾದ ಇಂದ್ರಯಗಳಲ್ಲಿ ಪ್ರವೇಶ ಮಾಡಿದ ತನ್ನ ಸ್ವರೂಪವಾದ ಪ್ರಕಾಶಿಸಿಕೊಂಡಿರುವ, ಚಕ್ಷುಸ್ಸು ಮನಸ್ಸುಮೊದಲಾದ ಎಲ್ಲಾ ಇಂದ್ರಿಯಗಳಿಂದ. ಯೋಗ್ಯ ಎಲ್ಲಾ ವಿಷಯಗಳನ್ನು ನೋಡುತ್ತಾ-ಭೋಗಿಸುತ್ತಾ ತನ್ನ ಇಚ್ಛೆಯಿಂದ ರಮಿಸುತ್ತಾನೆ.

**ವಿ ||** (1) ಜೀವರ ಚಕ್ಷುಸ್ಸುಮೊದಲಾದ ಇಂದ್ರಿಯಗಳು ಶ್ರೀಹರಿಯ ಅಧೀನಗಳಾಗಿ ರಶ್ಮಿಗಳಿಂದ ಆಕಾಶದಲ್ಲಿ ವ್ಯಾಪ್ತವಾಗಿವೆ. ಅಂತಹ ಕಣ್ಣಿನೊಳಗಣ ಶ್ರೀಹರಿಯು ರಥಿಕನಂತೆ ದೇಹಕ್ಕೆ ಅಧಿಪತಿಯು. ನೋಡಲಿಕ್ಕೆ ಚಕ್ಷುಸ್ಸು ಕರಣನಾಗಿದೆ. (2) ಶ್ರೀಹರಿಯು ತನ್ನ ಸ್ವರೂಪೇಂದ್ರಿಯಗಳಿಂದ ಸರ್ವ ಭೋಗಗಳನ್ನು ಭೋಗಿಸಲಿಕ್ಕೆ ಶಕ್ತನಾದರೂ ಕ್ರೀಡಾರ್ಥವಾಗಿ ಜೀವರ ದೇಹದಲ್ಲಿದ್ದು ತನ್ನ ಇಂದ್ರಿಯಗಳಿಂದ ನಿಯಮಿತಗಳಾದ ಜೀವರ ದೇಹದಲ್ಲಿರತಕ್ಕ ಚಕ್ಷುರಾದೀಂದ್ರಿಯಗಳಿಂದ ಜೀವಭೋಗ್ಯ ಎಲ್ಲಾ ವಿಷಯಗಳ ಸಾರವನ್ನುಣ್ಣುತ್ತಾನೆ. (3) ಜೀವರ ಇಂದ್ರಿಯಗಳಿಗಿಂತ ಇಂದ್ರಿಯಾಭಿಮಾನಿಗಳು ಪ್ರಕಾಶಿಸಿಕೊಂಡಿರುವುದರಿಂದ ಅವರು ದೈವವೆನಿಸುತ್ತಾರೆ ಅವರಿಗೂ ನಿಯಾಮಕನಾಗಿರುವ ಶ್ರೀಹರಿಯ ಸ್ವರೂಪೇಂದ್ರಿಯಗಳು ಹೆಚ್ಚು ಪ್ರಕಾಶಿಸುವುದರಿಂದ ದೈವವೆನಿಸುತ್ತದೆ. || ೪ || ೫ ||

**ಹೀ**—ಹೀಗಾದರೆ ಅಶುಭಭೋಗಗಳೂ ಶ್ರೀಹರಿಗೆ ಬರಬೇಕಾದೀತು ಎಂದರೆ—ಅಥವಾ ಶ್ರೀ ಹರಿಯೇ ಜೀವರ ಶರೀರದಲ್ಲಿದ್ದು ಸಾರಥ್ಯಾದಿರೂಪರಾದ ಪ್ರಾಣಾದಿಗಳನ್ನು ನಿಯಮಿಸುತ್ತಾನೆಂದು ಉಪಾಸನೆ ಮಾಡುವವನಿಗೆ ಫಲ ಹೇಳುತ್ತಾರೆ—

**ಉ. || ಯ ಏತೇ ಬ್ರಹ್ಮಲೋಕೇ ತಂ ವಾ ಏತಂ ದೇವಾ ಆತ್ಮಾನಮುಪಾಸತೇ ತಸ್ಮಾತ್ತೇಷಾಂ ಸರ್ವೇ ಚ ಲೋಕಾ ಆತ್ತಾಃ ಸರ್ವೇ ಚ ಕಾಮಾಃ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ ಪ್ರಜಾಪತಿರುವಾಚ || ಇತಿ ದ್ವಾದಶಃ ಖಂಡಃ || ೧೦-೧೨ || || ೬ ||**

**ಅ ||** ಬ್ರಹ್ಮಲೋಕದಲ್ಲಿ ಯಾವ ದೇವತೆಗಳು ಶ್ರೀಹರಿಯನ್ನುಪಾಸನೆಮಾಡುತ್ತಾರೋ, ಆ ದೇವತೆಗಳಲ್ಲಿ ಶ್ರೀಹರಿಯು ಕ್ರೀಡಿಸುತ್ತಾನೆ ಅಥವಾ ಬ್ರಹ್ಮಲೋಕದಲ್ಲಿ ಯಾವ ಶುಭಕಾಮಗಳು ಇದ್ದಾವೋ. ಅವುಗಳನ್ನು ಮಾತ್ರ ಭೋಗಿಸುತ್ತಾನೆ. ಅಥವಾ ವೈಕುಂಠಾದಿಗಳಲ್ಲಿರುವ ವಿಷಯಗಳನ್ನು ಸ್ವರೂಪಭೂತಗಳಾದ ಇಂದ್ರಿಯಗಳಿಂದಲೇ ಅನುಭವಿಸುತ್ತಾನೆ. ಅಪಹತಪಾಪ್ಮತ್ವಾದಿ ಗುಣಗಳುಳ್ಳ, ಸರ್ವಭೋಕ್ತನಾದ ಶ್ರೀಹರಿಯನ್ನು ವಾಯುಮೊದಲಾದ ದೇವತೆಗಳು ಉಪಾಸನೆಮಾಡುತ್ತಾರೆ. ಆ ಉಪಾಸನೆಯಿಂದ ಭಗವತ್ಪ್ರಸಾದವು ಸಿಗುವುದರಿಂದ ಆ ವಾಯುಮೊದಲಾದ ದೇವತೆಗಳಿಗೆ ಎಲ್ಲಾ ಜನರೂ. ಎಲ್ಲಾ ಲೋಕಗಳೂ ಲೋಕಗಳಲ್ಲಿ ಎಲ್ಲಾ ಕಾಮಗಳೂ ಅಧೀನಗಳಾಗುತ್ತವೆ. ಆದಕಾರಣ ಈಗಲೂ ಯಾರು ಆ ಶ್ರೀಹರಿಯನ್ನು ಶಾಸ್ತ್ರಶ್ರವಣಾದಿಗಳಿಂದ ವಿಚಾರಮಾಡಿ ಪ್ರತ್ಯಕ್ಷವಾಗಿ ತಿಳಿಯುತ್ತಾನೋ, ಆ ಜ್ಞಾನಿಯು ಎಲ್ಲಾ ಲೋಕಗಳನ್ನೂ ಎಲ್ಲಾ ಕಾಮಗಳನ್ನೂ ಯೋಗ್ಯತಾನುಸಾರ ಹೊಂದುತ್ತಾನೆ, ಹೀಗೆ ಬ್ರಹ್ಮನು ಹೇಳಿದ್ದನ್ನು ವೇದಪುರುಷನು ಮುಗಿಸಿದನು. ಹೀಗೆ ಪ್ರಜಾಪತಿಯು ಹೇಳಿದನು. || ೧೦—೧೨ || || ೬ ||

ಪೀ—ಮಘವನ್ ಮರ್ತ್ಯಂವಾವ ಎಂಬ ಈ ಖಂಡದ ತಾತ್ಪರ್ಯ ಹೇಳುತ್ತಾರೆ—

**ಭಾ. ॥ (೧) ಉಕ್ತೋ ಬ್ರಹ್ಮಾಽಬ್ರವೀಚ್ಛಕ್ರಂ ಜ್ಞಾಪಯಂಸ್ತತ್ತ್ವಮಂಜಸಾ ॥ (೨) ಯೋಽಯಂ ಶರೀರಸಂಬಂಧೀ ಜೀವ ಇತ್ಯವಧಾರ್ಯತಾಂ ॥ (೩) ಭೂತೈಷ್ಯದ್ವರ್ತಮಾನೇಷು ಯಸ್ಯ ನೋ ದೇಹಸಂಗತಿಃ । ಸೋಽಶರೀರಃ ಪರೋ ವಿಷ್ಣುರಮೃತೋ ನಿತ್ಯಮೂ(ಪೂ)ರ್ತಿಮಾನ್ ॥ (೪) ಅಧಿಷ್ಠಾಯ ತಥಾಽಪೀಮಂ ದೇಹಮಾಸ್ತೇ ಸ ಈಶ್ವರಃ । ಜರಾಮೃತ್ಯುಪರೀತೋಽಯಂ ಜೀವಾತ್ಮಾ ದೇಹಸಂಗತೇ ॥ ೧ ॥**

ಅ ॥ (೧) ಆಗ ಬ್ರಹ್ಮನು ದೇವೇಂದ್ರನಿಗೆ ಸಂಮುಗ್ಧಗಳಾದ ಮಾತನ್ನಾಡದೆ ಸ್ಪಷ್ಟವಾದ ಮಾತಿನಿಂದ ತತ್ತ್ವವನ್ನು ತಿಳಿಸುತ್ತಾ ಹೇಳಿದನು. (೨) (೧ನೇ ಮಂತ್ರದಲ್ಲಿದ್ದ **ಇದಂ ಶರೀರಂ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಈ ಜೀವನಿಗೆ ಶರೀರದ ಸಂಬಂಧವಿದೆ, ಎಂದು ನಿಶ್ಚಯಿಸಿಕೊ. (೩) (**ಅಶರೀರಸ್ಯ** ಎಂದು ಹೇಳಿದ ಅಶರೀರತ್ವವು ಮುಕ್ತರಲ್ಲಿಯೂ ಇದ್ದಪ್ರಯುಕ್ತ ಪರಮಾತ್ಮನಿಗೆ ಲಕ್ಷಣವು ಹೇಗೆ ಆಗುವುದು? ಎಂದರೆ –) ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿ ಯಾರಿಗೆ ಸ್ವಾಭಾವಿಕವಾಗಿ ಪ್ರಾಕೃತ ದೇಹ ಸಂಬಂಧವೇ ಇಲ್ಲವೋ, ಅಂತಹ ಸರ್ವೋತ್ತಮನಾದ ವಿಷ್ಣುವು ಅಶರೀರನೆನಿಸುತ್ತಾನೆ. ಅಮೃತಃ= ಮೂರು ಕಾಲಗಳಲ್ಲಿಯೂ ಸ್ವಾಭಾವಿಕವಾಗಿಯೇ ನಿತ್ಯವಾದ ಸ್ವರೂಪದೇಹವುಳ್ಳವನು. (೪) (**ತದಸ್ಯಾತ್ಮನೋಽಧಿಷ್ಠಾನಂ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) ಪಾಂಚಭೌತಿಕ ಶರೀರಾದಿಗಳಿಲ್ಲದಿದ್ದರೂ ಪ್ರಾಕೃತ ದೇಹಕ್ಕೆ ನಿಯಾಮಕನಾಗಿ ಇರುತ್ತಾನೆ. ಅಘಟಿತಘಟಕ ಅಚಿಂತ್ಯ ಐಶ್ವರ್ಯವಿದ್ದುದರಿಂದ (ಜರಾದಿ ದೋಷಗಳಿಲ್ಲದವನು.) ಜೀವಾತ್ಮನು ದೇಹಾಭಿಮಾನವಿದ್ದುದರಿಂದ ಜರಾಮರಣಗಳಿಂದೊಡಗೂಡಿದ ದೇಹವುಳ್ಳವನು ॥ ೧ ॥

ಪೀ—೧ನೇ ಮಂತ್ರದಲ್ಲಿದ್ದ ಪ್ರಿಯ ಅಪ್ರಿಯ ಶಬ್ದಗಳ ಅರ್ಥಗಳನ್ನು ಹೇಳುತ್ತಾರೆ—

**ಭಾ. ॥ (೧) ಪರೇಣೇಯಂ ಸುಖಂ ಪ್ರೋಕ್ತಂ ಪ್ರಿಯಮಿತ್ಯೇವ ಪಂಡಿತೈಃ । ಪರೇಣೇಯಮಭದ್ರಂ ಯದಪ್ರಿಯಂ ತದುದೀರಿತಂ ॥ (೨) ನ ಜೀವಸ್ಯ ತಯೋರ್ಹಾನಿಃ ಕದಾಚಿದ್ವಿದ್ಯತೇ ಕ್ವಚಿತ್ । ಅಶರೀರಂ ಪರಂಬ್ರಹ್ಮ ನೈವ ತೇ ಸ್ಪೃಶತಃ ಕ್ವಚಿತ್ ॥ (೩) ಅಮ್ನಾಮಾ ಭಗವಾನ್ವಿಷ್ಣುರ್ವ್ಯಾಪ್ತತ್ವಾತ್ಪರಮೇಶ್ವರಃ । ತೇನೈವ ಭ್ರಿಯಮಾಣತ್ವಾದ್ಬ್ರಹ್ಮಾಽಭ್ರಮಿತಿ ಕೀರ್ತಿತಃ॥ವಾಯೋಃ ಪತ್ನೀ ವಿದ್ಯುದುಕ್ತಾ ವಿಶೇಷದ್ಯುತಿಹೇತುತಃ।ಬ್ರಹ್ಮಾಣೀ ಸ್ತನಯಿತ್ನುಃ ಸ್ಯಾತ್ಸರ್ವಶಬ್ದಾತ್ಮಿಕಾ ಯತಃ ॥ (೪) ಏತೇಷಾಂ ಜ್ಞಾನವೈಶೇಷ್ಯಾನ್ನಾತಿದೇಹೇನ ಸಂಗತಿಃ ॥ (೫) ಅತಃ ಪ್ರಿಯಾಪ್ರಿಯೇ ತೇಷಾಮಪಿ ನ ಬ್ರಹ್ಮಣಃ ಕಿಮು ॥ ೨ ॥**

ಅ ॥ (೧) ಮತ್ತೊಬ್ಬನಿಂದ ಹೊಂದಲ್ಪಡುವ ಸುಖವು (ಅಂದರೆ ಪರಮಾತ್ಮನ ಅಧೀನವಾದ ಸುಖವು) ಪ್ರಿಯವೆಂದೂ, ಮತ್ತೊಬ್ಬನಿಂದ ಹೊಂದಲ್ಪಡುವ ಅಮಂಗಲವು ಅಪ್ರಿಯವೆಂದೂ ಪಂಡಿತರಿಂದ ಹೇಳಲ್ಪಡುತ್ತದೆ. (೨) (**ನ ಹ ವೈ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ—) ಜೀವನು ಯಾವಾಗಲೂ ಎಲ್ಲಿಯೂ ಪ್ರಿಯ-ಅಪ್ರಿಯಗಳನ್ನು ಬಿಟ್ಟು ಇರುವುದಿಲ್ಲ. ಪ್ರಾಕೃತ ಶರೀರವಿಲ್ಲದಿರುವ ಪರಬ್ರಹ್ಮನಿಗೆ ಅವುಗಳ ಸಂಬಂಧವು ಎಂದಿಗೂ ಇರುವುದಿಲ್ಲ. (೩) (೨ನೇ ಮಂತ್ರದಲ್ಲಿದ್ದ **ಅಭ್ರ** ಮೊದಲಾದ ಶಬ್ದಗಳ ಅರ್ಥ ಹೇಳುತ್ತಾರೆ—) ಸರ್ವೇಶ್ವರನಾದ ಶ್ರೀಹರಿಯು ಸರ್ವಜಗತ್ತನ್ನು ವ್ಯಾಪಿಸಿಕೊಂಡಿದ್ದ ಪ್ರಯುಕ್ತ **ಅಪ್** ಎನಿಸುತ್ತಾನೆ. ಆ ಶ್ರೀಹರಿಯಿಂದ ಪೋಷಿಸಲ್ಪಡುವುದರಿಂದ ಚತುರ್ಮುಖನು **ಅಭ್ರ** ಎನ್ನಿಸು

ತ್ತಾನೆ. ಮುಖ್ಯವಾಯುವಿನ ಹೆಂಡತಿಯಾದ ಭಾರತಿಯು ವಿಶೇಷವಾಗಿ ಪ್ರಕಾಶಿಸಿಕೊಂಡಿರುವುದರಿಂದ **ವಿದ್ಯುತ್** ಎನಿಸುತ್ತಾಳೆ. ಸರಸ್ವತಿಯು ಎಲ್ಲಾ ಶಬ್ದಗಳಿಗೆ ಅಭಿಮಾನಿನಿಯಾದುದರಿಂದ **ಸ್ತನಯಿತ್ನು** ಎನಿಸುತ್ತಾಳೆ. (೪) (ಹೀಗೆ ಪದಾರ್ಥಗಳನ್ನು ಹೇಳಿದರು. ಈಗ ಸಪತ್ನೀಕರಾದ ವಾಯುಬ್ರಹ್ಮರಿಗೆ ಶರೀರವಿದ್ದುದರಿಂದ ಅಶರೀರತ್ವವು ಹೇಗೆ? ಎಂಬೀ ಆಶಂಕೆಯನ್ನು ಪರಿಹರಿಸಿಕೊಂಡು ವಾಕ್ಯದ ಅರ್ಥ ಹೇಳುತ್ತಾರೆ—) ಈ ನಾಲ್ವರಿಗೆ ವಿಶೇಷಜ್ಞಾನವಿದ್ದುದರಿಂದ ಅತಿಶಯವಾಗಿ ಪ್ರಾಕೃತದೇಹಸಂಬಂಧವಿಲ್ಲ. (ಆದಕಾರಣ ಸ್ವಲ್ಪ ಹಣವುಳ್ಳವರನ್ನು ನಿರ್ಧನರು(ದರಿದ್ರರು) ಎಂದು ಹೇಳುವಂತೆ ನಾಲ್ವರನ್ನು ಅಶರೀರ ರೆಂದು ಹೇಳಿದ್ದು.) (೫) (**ಅಶರೀರೋ ವಾಯುಃ** ಇದುಮೊದಲಾದ ವಾಕ್ಯಕ್ಕೆ ಸಂಗತಿ ಹೇಳುತ್ತಾರೆ -) ಅಶರೀರರಾದುದರಿಂದ ನಾಲ್ವರಿಗೆ ಪ್ರಿಯ-ಅಪ್ರಿಯಗಳು ಇಲ್ಲ. ಪರಬ್ರಹ್ಮನಿಗೆ ಪ್ರಿಯ-ಅಪ್ರಿಯಗಳ ಸಂಪರ್ಕವಿಲ್ಲವೆಂಬುದು ಸುತರಾಂ ಸಿದ್ಧವಾಗುತ್ತದೆ. || ೨ ||

**ಪೀ**—ದೇಹಾಭಿಮಾನವಿಲ್ಲದಿರುವ ಆ ನಾಲ್ವರಿಗೆ ಅಪ್ರಿಯವಿಲ್ಲವಾದರೂ ಪ್ರಿಯವು ಇದೆ. ಹೇಗೆಂದರೆ—ವಾಯುಬ್ರಹ್ಮರಿಗೆ ವಿಷ್ಣ್ವಧೀನ ಸುಖವೂ, ಅವರ ಹೆಂಡಂದಿರಿಗೆ ತಂತಮ್ಮ ಪತಿಗಳ ಅಧೀನವಾದ ಸುಖವೂ ಇದೆ, ಎಂದರೆ —

**ಭಾ. || (೧) ವಿಷ್ಣ್ವೀಯಂ ಹಿ ಸುಖಂ ತೇಷಾಂ ಸ್ವಭರ್ತ್ರೀಯಮಥಾಪಿ ಚ । ನ ಹ್ಯನ್ಯೇಯಂ ಸುಖಂ ತೇಷಾಮತಸ್ತೇ ಪ್ರಿಯವರ್ಜಿತಾಃ ।। (೨) ಯಥಾ ತೇ ಪರಮಾಕಾಶಾದ್ವಿಷ್ಣೋರೇವ ಸಮುತ್ಥಿತಾಃ । ತಮೇವ ಪ್ರಾಪ್ಯ ಸಂಯಾಂತಿ ನೈಜಮಾನಂದಮೂರ್ಜಿತಂ । ಏವಂ ಸಮ್ಯಕ್ಪ್ರಸಾದೇನ ವಿಷ್ಣೋರ್ಮುಕ್ತೋಽಪಿ ಯೋ ಪರಃ || (೩) ಯಂ ಪ್ರಾಪ್ಯ ತೇ ನಿಜಾನಂದಮಾಪ್ನುವಂತಿ ಸ ಕೇಶವಃ । ತಂ ಪ್ರಾಪ್ಯ ರಮತೇ ಮುಕ್ತಃ ಸ್ತ್ರೀಭಿರ್ಯಾನೈಶ್ಚ ಬಂಧುಭಿಃ || (೪) ಯಥೈವ ಸಾರಥಿರ್ಯಾನೇ ಏವಂ ದೇಹೇ ಚ ಮಾರುತಃ । ಯಥಾ ರಥೀ ತಥಾ ವಿಷ್ಣುರ್ಜೀವೋಽನ್ಯರಥಗೋ ಯಥಾ || (೫) ಯದಾಶ್ರಿತಾನೀಂದ್ರಿಯಾಣಿ ಪ್ರಾಣಶ್ಚಾಪಿ ಯದಾಶ್ರಯಃ । ಯದಾಶ್ರಯೋಽಸ್ಯಯಂ ಜೀವೋ ಯೋ ವೇದೈಷಾಂ ಪ್ರವರ್ತನಂ || ದರ್ಶನಂ ಶ್ರವಣಂ ಘ್ರಾಣಂ ಜಿಹ್ವಾಂ ಸ್ಪರ್ಶಂ ಮನಸ್ತಥಾ । ತದೀಯಾನ್ವಿಷಯಾಂಶ್ಚೈವ ಯೋ ವೇದಾಖಿಲಮಂಜಸಾ || ಸ ವಿಷ್ಣುಃ ಪರಮೋ ಜ್ಞೇಯೋ ದೇವತಾಃ ಕರಣಾನಿ ಚ । ಸ ಏತೈರಿಂದ್ರಿಯೈರ್ವಿಷ್ಣುರ್ಭೋಗಾನನುಭವತ್ಯಜಃ || ೩ ||**

ಅ || (೧)ಆ ನಾಲ್ವರಿಗೆ ವಿಷ್ಣುವಿನ ಅಧೀನವಾದ ಸುಖವು ಇದೆ. (ಭಾರತೀಸರಸ್ವತಿಯರಿಗೆ) ತಂತಮ್ಮ ಪತಿಗಳ ಆಧೀನವಾದ ಸುಖವೂ ಇದೆ. ವಿಷ್ಣು, ಸ್ವಭರ್ತೃಗಳಿಂದ ಬೇರೆಯವರ ಅಧಿನವಾದ ಸುಖವು ಆ ನಾಲ್ವರಿಗೆ ಇಲ್ಲ. ಅಂತಹ ಸುಖವಿಲ್ಲದಿರುವುದರಿಂದ **ಪ್ರಿಯವಿಲ್ಲದವರು** ಎಂದು ಹೇಳಿದ್ದು. (೨) (೨ನೇ ಮಂತ್ರದಲ್ಲಿದ್ದ **ತದ್ಯಥಾ........ನಿಷ್ಪದ್ಯಂತೇ** ಎಂಬ ವಾಕ್ಯದ ಅರ್ಥ ಹೇಳ ತ್ತಾರೆ—) ಆ ವಾಯ್ವಾದಿಗಳು ಹೇಗೆ ಚೆನ್ನಾಗಿ ಪ್ರಕಾಶಿಸುವ ವಿಷ್ಣುವಿನ ಪ್ರಸಾದದಿಂದಲೇ ಶರೀರದಿಂದ ಹೊರಟವರಾಗಿ ಪರಮಾತ್ಮನ ಬಳಿಗೆ ಹೋಗಿ ಸ್ವಾಭಾವಿಕವಾದ ಉತ್ಕೃಷ್ಟವಾದ ಆನಂದವನ್ನು ಹೊಂದುತ್ತಾರೋ, (೩ನೇ ಮಂತ್ರದಲ್ಲಿದ್ದ **ಏವಮೇವೈಷ ಸಂಪ್ರಸಾದಃ** ಎಂಬ ವಾಕ್ಯದ ಅರ್ಥ ಹೇಳುತ್ತಾರೆ—) ಹೀಗೆಯೇ ವಿಷ್ಣುವಿನ ಪೂರ್ಣಾನುಗ್ರಹದಿಂದ ಬೇರೆ ಮುಕ್ತರೂ ಕೂಡ ಶರೀರದಿಂದ ಹೊರಟು ಶ್ರೀಹರಿಯ ಬಳಿಗೆ ಹೋಗಿ ತಮ್ಮ ಸ್ವರೂಪಾನಂದವನ್ನು ಹೊಂದುತ್ತಾರೆ ) (೩) (೩ನೇ ಮಂತ್ರದಲ್ಲಿದ್ದ **ಸ ಉತ್ತಮಃ ಪುರುಷಃ** ಎಂಬುದಕ್ಕೆ ಅರ್ಥ ಹೇಳುತ್ತಾರೆ-) ಮುಕ್ತರು ಯಾವ ಶ್ರೀಹರಿಯ ಸಮೀಪಕ್ಕೆ ಹೋಗಿ ಸ್ವರೂಪಭೂತ ಆನಂದ

ವನ್ನು ಹೊಂದುತ್ತಾರೋ, ಆ ಶ್ರೀಹರಿಯು ಬ್ರಹ್ಮರುದ್ರರಿಗೆ ಪ್ರವರ್ತಕನು, ನಿಯಾಮಕನು, ನಿತ್ಯಮುಕ್ತನು. ಶ್ರೀಹರಿಯ ಸಮೀಪಕ್ಕೆ ಹೋಗಿ ಸ್ತ್ರೀಯರಿಂದಲೂ ವಾಹನಗಳಿಂದಲೂ ಬಂಧುಗಳಿಂದಲೂ ಸಂತೋಷ ಗೊಳ್ಳುತ್ತಾನೆ. (೪) (**ಸ ಯಥಾ ಪ್ರಾಯೋಗ್ಯಃ** ಎಂಬ ವಾಕ್ಯಕ್ಕೆ ಅರ್ಥಹೇಳುತ್ತಾರೆ–) ವಾಹನದಲ್ಲಿ ಸಾರಥಿಯು ಹೇಗೋ, ಹಾಗೆಯೇ ಶರೀರದಲ್ಲಿ ಮುಖ್ಯಪ್ರಾಣನು ರಥಿಕನಂತೆ ವಿಷ್ಣುವು ಹೇಗೆ ಒಬ್ಬ ಪುರುಷನು ಇತರರು ನಿಯಾಮಕರಾಗಿರುವ ರಥದಲ್ಲಿರುತ್ತಾನೋ, ಹಾಗೆಯೇ ಜೀವನು ಶ್ರೀಪರಮಾತ್ಮ ನಿಂದ ಅಧಿಷ್ಠಿತವಾದ ಶರೀರದಲ್ಲಿರುತ್ತಾನೆ. (ಇಂದ್ರಿಯಗಳು ಕುದುರೆಗಳಂತೆ ಇರುವವುಗಳು.) (೫) (೪ನೇ ಮಂತ್ರದಲ್ಲಿದ್ದ **ಅಥ ಯತ್ರೈತದಾಕಾಶಂ....**೫ನೇ ಮಂತ್ರದಲ್ಲಿದ್ದ **ದೈವಂ ಚಕ್ಷುಃ** ಎಂಬ ಪರ್ಯಂತ ವಾಕ್ಯದ ಅರ್ಥ ಹೇಳುತ್ತಾರೆ–) ಇಂದ್ರಿಯಗಳೂ ಇಂದ್ರಿಯಾಭಿಮಾನಿ ದೇವತೆಗಳೂ ಯಾರ ಅಧೀನಗ ಳಾಗಿರುತ್ತಾರೋ, ಮುಖ್ಯಪ್ರಾಣನೂ ಯಾರನ್ನಾಶ್ರಯಿಸಿರುತ್ತಾನೋ, ಜೀವನೂ ಯಾರನ್ನಾಶ್ರಯಿಸಿರು ತ್ತಾನೋ, ಯಾವ ಶ್ರೀಹರಿಯು ಮುಖ್ಯಪ್ರಾಣ ಜೀವ ಇವರಿಗೆ ಯಥಾಯೋಗ್ಯವಾಗಿ ಭೋಕ್ತೃತ್ವಾದಿಗ ಳಿವೆ ಎಂದೂ, ಇಂದ್ರಿಯಗಳು ಆಯಾಯ ವಿಷಯಗಳ ಜ್ಞಾನವನ್ನು ಹುಟ್ಟಿಸುತ್ತವೆ ಎಂದೂ, ಚೆನ್ನಾಗಿ ತಿಳಿಯುತ್ತಾನೋ, ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಕ್, ಮನಸ್ಸು ಈ ಆರು ಇಂದ್ರಿಯಗಳನ್ನೂ ಆ ಯಾಯ ಇಂದ್ರಿಯಗಳ ವಿಷಯಗಳನ್ನೂ ಚೆನ್ನಾಗಿ ತಿಳಿಯುತ್ತಾನೋ, ಆ ವಿಷ್ಣುವೇ ಸರ್ವೋತ್ತಮನೆಂದು ತಿಳಿಯಬೇಕು. ಚಕ್ಷುರಾದಿ ಶಬ್ದಗಳಿಂದ ಇಂದ್ರಿಯಾಭಿಮಾನಿ ದೇವತೆಗಳನ್ನೂ ಇಂದ್ರಿಯಗಳನ್ನೂ ಇಟ್ಟು ಕೊಳ್ಳಬೇಕೆಂದು ಯಾವನು ತಿಳಿಯುತ್ತಾನೋ, ಆ ವಿಷ್ಣುವು ಈ ಇಂದ್ರಿಯಗಳಿಂದ ಎಲ್ಲಾ ಭೋಗಗ ಳನ್ನು ಅನುಭವಿಸುತ್ತಾನೆ. ॥ ೩ ॥

ಪೀ—ಜೀವರ ಇಂದ್ರಿಯಗಳನ್ನು ಬಿಟ್ಟು ವಿಷ್ಣುವಿಗೆ ಭೋಗಗಳನ್ನು ಅನುಭವಿಸಲಿಕ್ಕೆ ಶಕ್ತಿಯಿ ಲ್ಲವೋ? ಎಂದರೆ—

**ಭಾ. ॥ (೧) ಸ್ವರೂಪೇಣೈವ ಶಕ್ತೋಽಪಿ ಜೀವದೇಹಸ್ಥಿತೋ ಹರಿಃ । ಭುಂಕ್ತೇ ತದಿಂದ್ರಿಯೈರ್ಭೋಗಾಂಛುರಿತೈರಿಂದ್ರಿಯೈಃ ಸ್ವಕೈಃ ॥ (೨) ಜೀವಂ ತದಿಂದ್ರಿಯಾಣ್ಯೇವಂ ಪ್ರಾಣಂ ಚ ವ್ಯಾಪ್ಯ ಕೃತ್ಸ್ನಶಃ । ಭುಂಕ್ತೇ ತತ್ತದ್ಗುಣಾನ್ವಿಷ್ಣುರ್ನೈವ ದೋಷಾನ್ಕದಾಚನ ॥ (೩) ತಮೇವಂ ದೇವತಾಃ ಸರ್ವಾ ವಾಯ್ವಾದ್ಯಾಃ ಸಮುಪಾಸತೇ । ತಸ್ಮಾದ್ದೇವವಶಾ ಲ್ಲೋಕಾಃ ಸರ್ವಕಾಮಾಃ ಸಜೀವಕಾಃ ॥ (೪) ತಮೇತಂ ಯೋ ಯಥಾ ಜ್ಞಾತ್ವಾ ಪಶ್ಯೇ- ದ್ವಿಷ್ಣುಂ ಸನಾತನಂ । ಆಪ್ನೋತಿ ಸರ್ವಕಾಮಾಂಶ್ಚ ಸರ್ವಲೋಕಾಂಶ್ಚ ಕಾಮತಃ ॥ ಇತಿ ಸಾಮಸಂಹಿತಾಯಾಂ ॥ ೪ ॥**

ಅ ॥ (೧) ಶ್ರೀಹರಿಯು ಸ್ವರೂಪಭೂತಗಳಾದ ಇಂದ್ರಿಯಗಳಿಂದಲೇ ಸಮಸ್ತ ಭೋಗಗಳನ್ನು ಅನುಭವಿಸಲಿಕ್ಕೆ ಶಕ್ತನಾದರೂ ಜೀವರ ದೇಹದಲ್ಲಿದ್ದವನಾಗಿ ವ್ಯಾಪ್ತಗಳಾದ ತನ್ನ ಇಂದ್ರಿಯಗಳಿಂದ ಕೂಡಿದ ಜೀವರ ದೇಹಗಳಲ್ಲಿರತಕ್ಕ ಇಂದ್ರಿಯಗಳಿಂದ ಭೋಗ್ಯ ವಿಷಯಗಳನ್ನುಣ್ಣುತ್ತಾನೆ. (೨) (ಹೀಗೆ ಶ್ರೀಹರಿಗೆ ದುಷ್ಟವಿಷಯಗಳ ಭೋಗವೂ ಬರಬೇಕಾದೀತು ಎಂದರೆ–) ಶ್ರೀಹರಿಯು ಜೀವನನ್ನು ಮುಖ್ಯ ಪ್ರಾಣನನ್ನೂ ಸ್ವರೂಪದಿಂದಲೂ ಆಯಾಯ ಇಂದ್ರಿಯಗಳನ್ನು ತನ್ನ ಇಂದ್ರಿಯಗಳಿಂದಲೂ ವ್ಯಾಪಿಸಿ ಕೊಂಡು ಶುಭವಿಷಯಗಳನ್ನೇ ಉಣ್ಣುತ್ತಾನೆ. ಅಶುಭವಿಷಯಗಳನ್ನು ಯಾವಾಗಲೂ ಉಣ್ಣುವುದೇ ಇಲ್ಲ. (೩) (೬ನೇ ಮಂತ್ರದಲ್ಲಿದ್ದ **ತಂ ವಾ ಏತಂ ದೇವಾಃ** ಎಂಬುದಕ್ಕೆ ಅರ್ಥಹೇಳುತ್ತಾರೆ–) ಆ ಶ್ರೀಹರಿ ಯನ್ನು ವಾಯು ಮೊದಲಾದ ಎಲ್ಲಾ ದೇವತೆಗಳೂ ಉಪಾಸನೆ ಮಾಡುತ್ತಾರೆ. ಆದಕಾರಣ ವಾಯ್ವಾದಿ ಗಳಿಗೆ ಎಲ್ಲಾ ಲೋಕಗಳೂ ಎಲ್ಲಾ ಕಾಮಗಳೂ ಎಲ್ಲಾ ಜೀವರೂ ಅಧೀನರಾಗಿರುತ್ತಾರೆ (೪) ಅಂತಹ

ಶ್ರೀಹರಿಯನ್ನು ಶಾಸ್ತ್ರದಿಂದ ವಿಚಾರಮಾಡಿ ಪ್ರತ್ಯಕ್ಷವಾಗಿ ತಿಳಿಯುತ್ತಾನೋ, ಆತನು ಇಚ್ಛಾನುಸಾರ ಯಥಾಯೋಗ್ಯವಾಗಿ ಎಲ್ಲಾ ಕಾಮುಗಳನ್ನೂ ಎಲ್ಲಾ ಲೋಕಗಳನ್ನೂ ಹೊಂದುತ್ತಾನೆ, ಎಂದು ಸಾಮ ಸಂಹಿತೆಯಲ್ಲಿದೆ. ॥ ೪ ॥

ಟೀ—(1) ವಿರೋಚನನು ಚತುರ್ಮುಖನ ಉಪದೇಶದಿಂದ ದೇಹಪ್ರತಿಬಿಂಬವೇ ಪರಬ್ರಹ್ಮನು, ಬಿಂಬಪ್ರತಿಬಿಂಬಗಳಿಗೆ ಐಕ್ಯವು, ಅದು ದೇಹಾಭಿಮಾನಿಜೀವೈಕ್ಯದಲ್ಲಿ ಪರ್ಯವಸಿತವಾಗುತ್ತದೆ, ಆದ ಕಾರಣ ಜೀವಾತ್ಮನು ಬ್ರಹ್ಮನೇ. ಅವನಿಗೇನೇ ಪೂಜಿಸಬೇಕು. ಹೀಗೆ ಚತುರ್ಮುಖನ ಅಭಿಪ್ರಾಯವು ಎಂದು ಅದ್ವೈತವನ್ನೇ ವಿರೋಚನನು ತಿಳಿದನು. ಏಕೆಂದರೆ ಅದ್ವೈತ ಸಿದ್ಧಾಂತದಲ್ಲಿ ಜೀವಾತ್ಮನಿಗೆ ಬ್ರಹ್ಮನಿಂದ ಅಭೇದವು ಹೇಳಲ್ಪಟ್ಟಿದೆ. ವಿರೋಚನನು ಅದನ್ನೇ ಅಸುರರಿಗೆ ಉಪದೇಶಿಸಿರುವನು. (2) ಶ್ರೀಹರಿಯು ಜೀವರಿಗೆ ಜಾಗ್ರದಾದ್ಯವಸ್ಥೆಗಳನ್ನು ಹೊಂದಿಸಿಕೊಡುವವನು, ಶರೀರಾಭಿಮಾನ ವಿಲ್ಲದವನು, ಪ್ರಿಯ ಅಪ್ರಿಯಗಳ ಸಂಬಂಧವಿಲ್ಲದವನು, ಮುಕ್ತರಿಂದ ಹೊಂದಲ್ಪಡುವವನು, ದೇಹವು ರಥವಾಗಿ ಉಳ್ಳವನು, ಜೀವರಿಗೂ ಮುಖ್ಯಪ್ರಾಣನಿಗೂ ಇಂದ್ರಿಯಾದಿಗಳಿಗೂ ಆಶ್ರಯನು, ಎಲ್ಲಾ ಶುಭ ಗಳನ್ನು ಉಣ್ಣುವವನು, ವಾಯು ಮೊದಲಾದವರಿಂದ ಉಪಾಸನೆಮಾಡಲ್ಪಡತಕ್ಕವನು, ಇಂವಹವನು ಆತ್ಮನು. ಜೀವನು ಈ ರೀತಿಯಾಗಿ ಸರ್ವದಾ ಇಲ್ಲದವನು, ಹೀಗೆ ಭೇದವಾದವನ್ನೇ ಇಂದ್ರನು ತಿಳಿದಿರು ವನು. ಇಂತಹ ಭೇದವಾದವನ್ನೇ ಇಂದ್ರನು ದೇವತೆಗಳಿಗೆ ಉಪದೇಶಮಾಡಿರುವನೆಂದು ಸಪ್ರಮಾಣ ವಾಗಿ ವ್ಯಾಖ್ಯಾನಮಾಡಿ ಅದನ್ನು ದೃಢೀಕರಿಸುವುದಕ್ಕಾಗಿ ಆತ್ಮಾ=ದೇಹವೇ ಪೂಜಿಸಲ್ಪಡತಕ್ಕದು, ದೇಹಾ ತಿರಿಕ್ತ ಆತ್ಮನು ಇಲ್ಲ' ಎಂಬ ಚಾರ್ವಾಕಮತವನ್ನು ವಿರೋಚನನು ತಿಳಿದಿರುವನು. ಹಾಗೆಯೇ ದೈತ್ಯ ರಿಗೆ ಉಪದೇಶಮಾಡಿದನೆಂದು ಕೆಲವರು ಹೇಳುವರು. ಅದು ಅಯುಕ್ತವೆಂದು ಹೇಳುತ್ತಾ ಹಿಂದೆ ಹೇಳಿದ ಪ್ರಕಾರ ವಿರೋಚನನು ಅದ್ವೈತವನ್ನೇ ತಿಳಿದನು, ಮತ್ತು ಉಪದೇಶಿಸಿರುವನೆಂದು ಉಪಪಾದಿಸುತ್ತಾರೆ—

**ಭಾ. ॥ (೧) ಉಭೌ ಲೋಕಾವವಾಪ್ನೋತೀತಿ ವಚನಾನ್ನ ಲೋಕಾಯತಿಕಮತಂ ವಿರೋಚನೋಕ್ತಂ ॥ (೨) ಕಿಂ ತು ಬಿಂಬಪ್ರತಿಬಿಂಬಯೋರಭಿಮಾನ್ಯೈಕ್ಯಾಭಿಪ್ರಾ- ಯೇಣ ಜೀವಾತ್ಮೈವ ಮಹಯ್ಯ ಇತಿ ಮಾಯಾವಾದ ಏವ ॥ (೩) ನ ಚಾ(ನ್ಯ)ತ್ರ ಜೀವ ಆತ್ಮಶಬ್ದೋಕ್ತಃ । ತದಸ್ಯಾಮೃತಸ್ಯಾಶರೀರಸ್ಯಾತ್ಮನೋಽಧಿಷ್ಠಾನಮಾತ್ತೋ ವೈ ಸಶರೀರಃ ಪ್ರಿಯಾಪ್ರಿಯಾಭ್ಯಾಂ ನ ಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತ್ಯಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತ ಇತೀಶಜೀವಯೋಃ ಸತಾತ್ಪರ್ಯಂ ಭೇದಾ- ಭಿಧಾನಾತ್ । ನ ಹಿ ಜೀವಾದನ್ಯಸ್ಯ ಪ್ರಿಯಾಪ್ರಿಯಾನುಭವೋಽಸ್ತಿ ॥ (೪) ನ ಚ ಮುಕ್ತ- ಸ್ಯಾಪಿ ಪ್ರಿಯಾಪಹತಿರಸ್ತಿ ॥ (೫) ನ ಚ ವಿಷ್ಣೋರತ್ರ ವಿವಕ್ಷಿತಂ ಪ್ರಿಯಂ । ಪರಾಧೀನ- ರತಿಪ್ರಾಪ್ತಿರ್ಹಿ ಪ್ರಿಯಮತ್ರ ವಿವಕ್ಷಿತಂ ನ ಹಿ ತದ್ಭಗವತಃ । ಮುಕ್ತಾನಾಂ ತು ಭಗವದ- ಧೀನರತಿತ್ವಾತ್ಪ್ರಿಯಮಸ್ತ್ಯೇವ ॥ ೫ ॥**

ಅ ॥ **ಉಭೌ ಲೋಕಾವವಾಪ್ನೋತಿ** ಎಂಬ ವಚನದಿಂದ ಚಾರ್ವಾಕಮತವನ್ನು ವಿರೋಚನನು ಹೇಳಿದುದು ಅಲ್ಲ. ಅಂದರೆ ಇಲ್ಲಿ ವಿರೋಚನನು ಚಾರ್ವಾಕಮತವನ್ನು ತಿಳಿದನು, ಅಸುರರಿಗೆ ಉಪ ದೇಶಿಸಿದನು, ಎಂದು ಹೇಳಲಾಗುವುದಿಲ್ಲ, ಏಕೆಂದರೆ ೮ನೇ ಖಂಡದ ೫ನೇ ಮಂತ್ರದಲ್ಲಿ **ಉಭೌ ಲೋ- ಕಾವವಾಪ್ನೋತೀಮಂ ಚಾಮುಂ ಚ** ಎಂದು ಫಲವಾಕ್ಯದಿಂದ ವಿರೋಧವು ಬರುವುದು. ಚಾರ್ವಾ ಕನು ಪರಲೋಕವನ್ನೇ ಒಡಂಬಡಲಿಲ್ಲ. ) (೨) (ಹಾಗಾದರೆ ಏನು ತಿಳಿದಿರುವನು, ಏನು ಉಪದೇಶಿಸಿರು ವನು, ಎಂದರೆ—) ಪರಂತು ಬಿಂಬಪ್ರತಿಬಿಂಬಗಳಿಗೆ ಯಾವುದು ಐಕ್ಯವಿದೆಯೋ, ಅದು ಹಿಂದೆ ಹೇಳಿದ

ಪ್ರಕಾರ ಬಿಂಬಭೂತ ದೇಹಾಭಿಮಾನಿ ಜೀವೈಕ್ಯದಲ್ಲಿ ಪರ್ಯವಸಿತವಾಗುತ್ತದೆಂಬ ಅಭಿಪ್ರಾಯದಿಂದ ಜೀವಾತ್ಮನೇ ಪೂಜಿಸಲ್ಪಡಬೇಕೆಂದು ಅದ್ವೈತವನ್ನೇ ವಿರೋಚನನು ತಿಳಿದಿರುವನು, ಮತ್ತು ಉಪದೇಶಿಸಿರುವನು. (೩) (ಇಲ್ಲಿ ವಿರೋಚನನು ತಿಳಿದ ಆತ್ಮನೆಂದರೆ ಚಾರ್ವಾಕರ ರೀತಿಯಾಗಿ ದೇಹವೆಂದು ಹೇಳುವುದಾದರೆ ಇಂದ್ರನು ತಿಳಿದದ್ದು ದೇಹಾತಿರಿಕ್ತ ಜೀವನೇ ಎಂದು ಹೇಳಬೇಕು. ಅದು ಯುಕ್ತವಲ್ಲ. ಏಕೆಂದರೆ—) ಬ್ರಹ್ಮನು ಇಂದ್ರನಿಗೆ ಉಪದೇಶಿಸಿದುದರಲ್ಲಿ ಜೀವನು ಆತ್ಮಶಬ್ದದಿಂದ ಹೇಳಲ್ಪಡುತ್ತಾನೆಂದು ಹೇಳಲಾಗುವುದಿಲ್ಲ. (ಏಕೆಂದರೆ—) *ತದಸ್ಯಾಮೃತಸ್ಯ ಇತ್ಯಾದಿಗಳಲ್ಲಿ ಬ್ರಹ್ಮನು ಇಂದ್ರನಿಗೆ ಉಪದೇಶಿಸಿದ' ಆತ್ಮನು ಅಮೃತನು, ಶರೀರವಿಲ್ಲದವನು, ಜೀವರ ದೇಹಕ್ಕೆ ಅಧಿಷ್ಠಾತನು, ಪ್ರಿಯ-ಅಪ್ರಿಯಗಳ ಸಂಬಂಧವಿಲ್ಲದವನು, ಇದುಮೊದಲಾದ ಜೀವರಲ್ಲಿ ಸರ್ವಥಾ ಇಲ್ಲದಿರುವ ಧರ್ಮಗಳುಳ್ಳವನು. ಶ್ರೀಹರಿಯು ಜೀವರಿಂದ ವಿಲಕ್ಷಣನು. ಹೀಗೆ ಈಶಜೀವರಿಗೆ ತಾತ್ಪರ್ಯಪೂರ್ವಕವಾಗಿ ಸ್ಪಷ್ಟವಾಗಿ ಭೇದವನ್ನು ಹೇಳಿದ್ದಾರೆ. ಜೀವರು ಹೊರತು ಇತರರಿಗೆ ಸರ್ವಥಾ ಪ್ರಿಯ-ಅಪ್ರಿಯಗಳ ಅನುಭವವು ಇರುವುದಿಲ್ಲ. (ಏವಂಚ ಪ್ರಿಯ-ಅಪ್ರಿಯಾಸ್ಪೃಷ್ಟತ್ವವು ಜೀವರಲ್ಲಿಲ್ಲ. ಅದು ವಿಷ್ಣುಲಕ್ಷಣವೆಂದುಕ್ತವಾಯಿತು.) (೪) (ಹಾಗಾದರೆ ಜೀವರಿಗೆ ಸಂಸಾರದಶೆಯಲ್ಲಿಯೇ ಪ್ರಿಯಾಪ್ರಿಯಗಳ ಅನುಭವವು. ಮುಕ್ತಿಯಲ್ಲಿ ಇಲ್ಲ. ಆದುಕಾರಣ ಜೀವರಲ್ಲಿಲ್ಲ ಎಂಬುದು ಹೇಗೆ? ಎಂದರೆ—) ಮುಕ್ತನಿಗೂ ಪ್ರಿಯವಿದ್ದ ಪ್ರಯುಕ್ತ ಪ್ರಿಯಾಸ್ಪೃಷ್ಟತ್ವವು ಇಲ್ಲ. (ಆದುಕಾರಣ ಇದು ವಿಷ್ಣುವಿನ ಲಕ್ಷಣವೇ.) (೫) (ಹಾಗಾದರೆ ವಿಷ್ಣುವಿಗೂ ಪ್ರಿಯವಿದ್ದ ಪ್ರಯುಕ್ತ ಪ್ರಿಯಾಸ್ಪೃಷ್ಟತ್ವವು ವಿಷ್ಣುವಿನಲ್ಲಿ ಹೇಗೆ ಇರುವುದೆಂದರೆ—) ಇಲ್ಲಿ ಇಷ್ಟವಾದ ಪ್ರಿಯವು ವಿಷ್ಣುವಿನಲ್ಲಿರತಕ್ಕುದಲ್ಲ. ಏಕೆಂದರೆ ಇಲ್ಲಿ ಇಷ್ಟವಾದ ಪ್ರಿಯವೆಂದರೆ ಪರಾಧೀನ ಸುಖಪ್ರಾಪ್ತಿಯು. ಇಂತಹ ಪ್ರಿಯವು ಶ್ರೀಹರಿಗೆ ಇಲ್ಲ. ಮುಕ್ತರಿಗಾದರೂ ಶ್ರೀಹರಿಯ ಅಧೀನವಾದ ಸುಖವಿದ್ದಪ್ರಯುಕ್ತ ಪ್ರಿಯವು ಇದ್ದೇ ಇದೆ. ॥ ೫ ॥

ಪೀ—ಪ್ರಿಯಾದ್ಯಸ್ಪೃಷ್ಟತ್ವವು ಜೀವರಲ್ಲಿಲ್ಲ. ಶ್ರೀಹರಿಯಲ್ಲಿ ಮಾತ್ರ ಇರತಕ್ಕದೆಂಬುವಲ್ಲಿ ಪ್ರಮಾಣ ಹೇಳುತ್ತಾರೆ—

**ಭಾ. ॥ (೧) ಜೀವಾ ಮುಕ್ತಾ ಅಮುಕ್ತಾಶ್ಚ ಪರಾಧೀನರತಿತ್ವತಃ । ನ ಪ್ರಿಯಾಪಹತಿಃ ಕ್ವಾಪಿ ಸ್ವಾತಂತ್ರ್ಯಾನ್ನ ಹರೇಃ ಪ್ರಿಯಂ । ಪರಾಧೀನರತಿರ್ಯಸ್ಮಾತ್ಪ್ರಿಯಮಿತ್ಯುಚ್ಯತೇ ಬುಧೈಃ ॥ (೨) ಹರೇರಧೀನತಾ ತು ಸ್ಯಾದ್ಯದ್ಯಪಿ ಬ್ರಹ್ಮವಾಯುವೋಃ । ತದನ್ಯವಶತಾಭಾವಾದಪ್ರಿಯಾವಿತಿ ತೌ ಶ್ರುತೌ ॥ (೩) ಯಥಾ ರಾಜ್ಞಃ ಸ್ವರಾಟ್ತ್ವಂ ಚೋದ್ಯೋ ರುದ್ರಸ್ಯೇಶ್ವರತಾ ತಥಾ । ಯಥಾ ಶಕ್ರಸ್ಯ ಚೇಂದ್ರತ್ವಂ ತದ್ವದಪ್ರಿಯತಾ ತಯೋಃ ॥ (೪) ಯಥಾ ರಾಜ್ಞ್ಯಾಶ್ಚ ರಾಜ್ಞೀತ್ವಂ ಯಥಾ ಚೋ(ಥೈವೋ)ಮೇಶ್ವರೀ ಸ್ಮೃತಾ । ವಿದ್ಯುತಃ ಸ್ತನಯಿತ್ನೋಶ್ಚ ತಥೈವಾಪ್ರಿಯತಾ ಶ್ರುತಾ ॥ ಇತಿ ಚ ಪರಮಶ್ರುತೌ ॥ ೬ ॥**

ಅ ॥ (೧) ಮುಕ್ತರಾದ ಜೀವರಿಗೂ ಅಮುಕ್ತರಿಗೂ ಪರಾಧೀನವಾದ ಸುಖವಿದ್ದುದರಿಂದ ಅವರಿಗೆ ಪ್ರಿಯವದೆ. ಮತ್ತು ಅಮುಕ್ತರಿಗೆ ಎಲ್ಲಿಯೂ ಪ್ರಿಯಾಸ್ಪೃಷ್ಟತ್ವವು ಇಲ್ಲ. ಪರಾಧೀನವಾದ ಸುಖವೇ ಪ್ರಿಯವೆಂದು ಜ್ಞಾನಿಗಳಿಂದ ಇಲ್ಲಿ ಹೇಳಲ್ಪಡುತ್ತದೆ. ಶ್ರೀಹರಿಯು ಸರ್ವಸ್ವತಂತ್ರನಾದುದರಿಂದ (ಪರಾಧೀನ ಸುಖವು ಇಲ್ಲದಿರುವವನಾದುದರಿಂದ) ಆತನಿಗೆ ಇಂತಹ ಪ್ರಿಯವಿಲ್ಲ. (೨) (ಹಾಗಾದರೆ ಪ್ರಿಯಾದ್ಯಸ್ಪೃಷ್ಟತ್ವವು ವಿಷ್ಣುವಿನಲ್ಲಿ ಮಾತ್ರ ಇರತಕ್ಕುದ್ದಲ್ಲ ಏಕೆಂದರೆ ವಾಯು ಮೊದಲಾದವರಿಗೆ ಶರೀರವಿಲ್ಲವೆಂದು ಹೇಳಿದ ಕಾರಣ ಅವರಿಗೆ ಪ್ರಿಯಾದ್ಯಸ್ಪೃಷ್ಟತ್ವವೂ ಇದೆ ಎಂದರೆ—) ಯದ್ಯಪಿ ಬ್ರಹ್ಮವಾಯುಗಳ

* ಪುಟ೪೬೧ರಲ್ಲಿ ಇದು ವ್ಯಾಖ್ಯಾತವಾಗಿದೆ.

ಸುಖವು ಶ್ರೀಹರಿಯ ಅಧೀನವೇ ಆಗಿದೆ. ಆದರೂ ಇತರರ ಅಧೀನದಲ್ಲಿಲ್ಲದಿರುವುದರಿಂದ ಬ್ರಹ್ಮವಾಯುಗಳು ಅಪ್ರಿಯರೆಂದು ಹೇಳಿದೆ. (ಏವಂಚ ಅಮುಖ್ಯವಾದ ಪ್ರಿಯಾಸ್ಪೃಷ್ಟತ್ವವು ಬ್ರಹ್ಮವಾಯುಗಳಲ್ಲಿರುವುದು.) (೩) ಹೇಗೆ ರಾಜನಿಗೆ ಸ್ವರಾಟ್ ಎಂಬ ಶಬ್ದವು, ರುದ್ರನಿಗೆ ಈಶ್ವರ ಎಂಬ ಶಬ್ದವು, ಇಂದ್ರನಿಗೆ ಇಂದ್ರ ಎಂಬ ಶಬ್ದವಿದೆಯೋ, ಹೀಗೆಯೇ ಬ್ರಹ್ಮವಾಯುಗಳಿಗೆ ಅಪ್ರಿಯತ್ವವು (ಪ್ರಿಯಾಸ್ಪೃಷ್ಟತ್ವವು) ಇರುವುದು. (೪) ಹೇಗೆ ರಾಜನ ಹೆಂಡತಿಗೆ ರಾಜನ ಅಧೀನವಾಗಿ ರಾಜ್ಞೀ ಎಂಬ ಶಬ್ದವೋ, ಪಾರ್ವತಿಗೆ ರುದ್ರನ ಅಧೀನವಾಗಿ ಈಶ್ವರೀ ಎಂಬ ಶಬ್ದವಿದೆಯೋ, ಹಾಗೆಯೇ ಭಾರತೀ ಸರಸ್ವತಿಯರಿಗೆ, ತಮ್ಮ ತಮ್ಮ ಪತಿಗಳ ಅಧೀನವಾದ ಸುಖಮಾತ್ರವಿದ್ದುದರಿಂದ ಅವರಿಬ್ಬರೂ ಅಪ್ರಿಯರೆಂದು ಹೇಳಲ್ಪಡುತ್ತಾರೆ. (ಆದಕಾರಣ ಅವರಲ್ಲಿಯೂ ಅಮುಖ್ಯವಾದ ಪ್ರಿಯಾಸ್ಪೃಷ್ಟತ್ವವು) ಎಂದು ಪರಮಶ್ರುತಿಯಲ್ಲಿ ಹೇಳಿದೆ. ॥ ೬ ॥

ಹೀ ಪ್ರಿಯಾಸ್ಪೃಷ್ಟತ್ವವು ಶ್ರೀಹರಿಯಲ್ಲಿ ಮಾತ್ರ ಇರುವುದರಿಂದ ಬ್ರಹ್ಮನು ಇಂದ್ರನಿಗೆ ಶ್ರೀಹರಿಯನ್ನೇ ಉಪದೇಶಿಸಿರುವನು, ಎಂದು ಹೇಳಿದೆ. ಕಾರಣಾಂತರದಿಂದಲೂ ಶ್ರೀಹರಿಯೇ ಎನ್ನುತ್ತಾರೆ—

**ಭಾ. ॥ (೧) ಸ ಏವ(ಷ) ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತ ಇತಿ ಮುಕ್ತಸ್ಯ ತತ್ಪ್ರಸಾದಾತ್ತತ್ಪ್ರಾಪ್ತ್ಯಾ ನಿಜಾನಂದಾನುಭವಶ್ರುತೇಶ್ಚ ॥ (೨) ಸ ಉತ್ತಮಃ ಪುರುಷ ಇತಿ ತಸ್ಯ ಜೀವಾದುತ್ತಮತ್ವಶ್ರುತೇಶ್ಚ ॥ (೩) ಅಪರಪುರುಷಾಪೇಕ್ಷಯಾ ಹ್ಯುತ್ತಮಪುರುಷಶಬ್ದೋ ಭವತಿ । ಅನ್ಯಥೋತ್ತಮಶಬ್ದ ಏವ ಸ್ಯಾತ್ ॥ (೪) ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಇತಿ ಚ ॥ (೫) ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ । ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ಕೇವಲೋ ಹರೇ ॥ (೬) ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ ॥ ೭ ॥**

ಅ ॥ (೧) ಈ ಜೀವನು ಶರೀರದಿಂದ ಹೊರಟು ಪರಬ್ರಹ್ಮನ ಬಳಿಗೆ ಹೋಗಿ ಸ್ವರೂಪಭೂತ ಆನಂದದಿಂದ ಸಂಪನ್ನನಾಗುತ್ತಾನೆ. ಹೀಗೆ ಮುಕ್ತನು ಪರಮಾತ್ಮನ ಪ್ರಸಾದದಿಂದ ಶ್ರೀಹರಿಯ ಸಮೀಪಕ್ಕೆ ಹೋಗಿ ಸ್ವರೂಪ ಆನಂದವನ್ನನುಭವಿಸುತ್ತಾನೆಂದು ವೇದವಿದೆ (೨) ಚತುರ್ಮುಖನು ಇಂದ್ರನಿಗೆ ಹೇಳಿದ ಆತ್ಮನನ್ನು ಸರ್ವೋತ್ತಮ ಪುರುಷನೆಂದು ಹೇಳಿರುತ್ತಾನೆ ಆದಕಾರಣ ಆತ್ಮನು ಜೀವರಿಗಿಂತ ಉತ್ತಮನೆಂದು ವೇದದಲ್ಲಿ ಹೇಳಿದ ಕಾರಣ ಆತ್ಮನೆಂದರೆ ಜೀವನಲ್ಲ. (೩) (ಜಡಗಳಿಗಿಂತ ಉತ್ತಮತ್ವವು ಜೀವರಿಗೂ ಕೂಡುವುದರಿಂದ **ಉತ್ತಮಃ ಪುರುಷಃ** ಎಂದು ಹೇಳಿದ ಉತ್ತಮತ್ವವು ಜೀವರಿಗೂ ಕೂಡಬಹುದು, ಎಂದರೆ–) **ಉತ್ತಮಃ ಪುರುಷಃ** ಎಂಬುವಲ್ಲಿ **ಪುರುಷಃ** ಎಂಬ ಶಬ್ದವಿದ್ದ ಕಾರಣ ಬೇರೆ ಪುರುಷರಿಗಿಂತ ಉತ್ತಮನೆಂದೇ ಹೇಳಬೇಕು. (ಜಡಗಳಿಂದ ಉತ್ತಮನೆಂದು ಹೇಳಲಾಗುವುದಿಲ್ಲ.) ಜಡಗಳಿಗಿಂತ ಉತ್ತಮನೆಂದು ಹೇಳುವುದಾದರೆ ಪುರುಷಶಬ್ದವು ವ್ಯರ್ಥವಾದೀತು. ಉತ್ತಮ ಎಂಬ ಶಬ್ದವೇ ಸಾಕಾಗುವುದು. (೪) ಉತ್ತಮ ಪುರುಷನು ಕ್ಷರ ಅಕ್ಷರ ಪುರುಷರಿಗಿಂತ ಭಿನ್ನನು ಪರಮಾತ್ಮನೆನಿಸುತ್ತಾನೆಂದು ಗೀತೆಯಲ್ಲಿ ಹೇಳಿರುವರು. (೫) (ಉತ್ತಮ ಪುರುಷತ್ವವು ತಮ್ಮಲ್ಲಿ ಕೂಡದಿದ್ದರೂ ಬ್ರಹ್ಮರುದ್ರಾದಿಗಳಲ್ಲಿ ಕೂಡಬಹುದೆಂದರೆ—) ಬ್ರಹ್ಮರುದ್ರಾದಿ ದೇವತೆಗಳಿಗೂ ಯಾವ ಸರ್ವೋತ್ತಮತ್ವವು ಹೊಂದಲು ಸಾಧ್ಯವಿಲ್ಲವೋ, ಅಂತಹ ಸರ್ವೋತ್ತಮತ್ವವು ಶ್ರೀಹರಿಯ ಸ್ವಭಾವವು. ಆದುಕಾರಣ ಶ್ರೀಹರಿಯು ಸರ್ವೋತ್ತಮನೇ. (೬) ಪರಿಮಿತಿಯಿಲ್ಲದವನು, ಸ್ವರೂಪದಿಂದಲೇ ಅಭಿವೃದ್ಧನಾದವನೇ ನಿನ್ನ ಸರ್ವೋತ್ತಮತ್ವಾದಿಗಳನ್ನು ಯಾರೂ ಹೊಂದುವುದಿಲ್ಲ. ॥ ೭ ॥

**ಪೀ–ಉತ್ತಮಃ ಪುರುಷಃ** ಎಂಬಲ್ಲಿ ಬೇರೆ ಪುರುಷರಿಗಿಂತ ಉತ್ತಮನೆಂದು ಹೇಳಬೇಕೆಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ ಇದು ಮೋಕ್ಷಾವಸ್ಥೆಯಲ್ಲಿ ಹೇಳುವಂಥಾದ್ದು. ಮೋಕ್ಷದಲ್ಲಿ **ಪರೇಽವ್ಯಯೇ ಸರ್ವ ಏಕೀಭವಂತಿ** ಎಂದು ಐಕ್ಯವನ್ನು ಹೇಳಿರುವುದರಿಂದ ಬೇರೆ ಪುರುಷರೇ ಇಲ್ಲ, ಎಂದರೆ ಮೋಕ್ಷದಲ್ಲಿಯೂ ಬೇರೆ ಪುರುಷರು ಇದ್ದಾರೆಂಬುವಲ್ಲಿ ಪ್ರಮಾಣಗಳನ್ನು ಹೇಳುತ್ತಾರೆ —

**ಭಾ. ॥ (೧) ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ॥(೨) ಸೋಽಶ್ನುತೇ ಸರ್ವಾನ್ಕಾಮಾನ್ಸಹ ಬ್ರಹ್ಮಣಾ ವಿಪಶ್ಚಿತೇತಿ ॥ (೩) ಏತಮಾನಂದಮಯಮಾತ್ಮಾನಮುಪಸಂಕ್ರಾಮ್ಯೇಮಾಂಲ್ಲೋಕಾನ್ಕಾಮಾನ್ನೀ ಕಾಮರೂಪ್ಯನುಸಂಚರನ್॥(೪)(1)ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ।(2)ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ । ಇತ್ಯಾದೇಶ್ಚ ॥ (೫)(1)ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ(2)ನೋಪಜನಂ ಸ್ಮರನ್ನಿದಂ ಶರೀರಮಿತ್ಯತ್ರಾಪಿ ಭೇದೇನಾವಸ್ಥಾನಶ್ರುತೇಃ ॥ (೬) ಉಪಶಬ್ದಾದಂತರಶಬ್ದಾಚ್ಚ ಮುಕ್ತಸ್ಯ ಪರಂಜ್ಯೋತಿಸ್ಸಮೀಪಾವಸ್ಥಾನಶ್ರುತೇಶ್ಚ ॥ (೭) ನ ಚ ಜೀವಮಾತ್ರಂ ದೇವಾ ಉಪಾಸತೇ । ಊರ್ಜಂ ಪೃಥಿವ್ಯಾ ಭಕ್ತ್ವಾಯೋರುಗಾಯಮುಪಾಸತೇ । ಇತಿ ಹಿ ಶ್ರುತಿಃ ॥ (೮) ಭೇದದೃಷ್ಟ್ಯಾಽಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ । ಇತ್ಯಾದೇಶ್ಚ ॥ ೮ ॥**

ಅ ॥ (೧) ಮುಕ್ತರು ಹರಿಸರ್ವೋತ್ತಮತ್ವಾದಿ ಜ್ಞಾನವನ್ನು ಹೊಂದಿ ಜ್ಞಾನಾನಂದಾದಿಗಳಿಂದ ತಮ್ಮ ಯೋಗ್ಯತಾನುಸಾರ ನನ್ನ ಸಾದೃಶ್ಯವನ್ನು ಹೊಂದಿರುತ್ತಾರೆ. (೨) ಮುಕ್ತನು ಜ್ಞಾನಿಯಾದ ಚತುರ್ಮುಖನಿಂದ ಅಥವಾ ಪರಬ್ರಹ್ಮನಿಂದ ಕೂಡಿ ತನಗೆ ಯೋಗ್ಯಗಳಾದ ಎಲ್ಲಾ ಅಭೀಷ್ಟಗಳನ್ನು ಹೊಂದುತ್ತಾನೆ. (೩) ಆನಂದರೂಪಿಯಾದ ಶ್ರೀಹರಿಯ ಬಳಿಗೆ ಹೋಗಿ ಇಚ್ಛಾನುಸಾರ ಅನ್ನವುಳ್ಳವನೂ ಇಚ್ಛಾನುಸಾರವಾದ ರೂಪವುಳ್ಳವನೂ ಆಗಿ ಭೂರಾದಿ ಲೋಕಗಳಲ್ಲಿ ಸಂಚರಿಸುತ್ತಾನೆ. (೪)(1) ಮೋಕ್ಷದಲ್ಲಿ ಅಜ್ಞಾನವಿಲ್ಲ, ಯಾವ ದೋಷಗಳೂ ಇಲ್ಲ, ದೇವತೆಗಳೂ ತತ್ತ್ವಾಭಿಮಾನಿ ದೇವತೆಗಳೂ ಇವರಿಂದ ಮುಕ್ತರು ಪೂಜಿಸಿಕೊಳ್ಳಲ್ಪಟ್ಟವರಾಗಿ ಶ್ರೀಹರಿಗೆ ಅನುವ್ರತರಾಗಿರುತ್ತಾರೆ (2)ಮೂಲರೂಪಿಯು ಅಜ್ಞಾನವಿಲ್ಲದ ಮುಕ್ತರಿಂದ ಪೂಜಿಸಲ್ಪಡುತ್ತಾನೆ, ಇದುಮೊದಲಾದ ಪ್ರಮಾಣಗಳಿಂದ(ಕ್ಷರ ಅಕ್ಷರ ಪುರುಷರು ಇದ್ದಾರೆಂದು ಮೋಕ್ಷದಲ್ಲಿ ತಿಳಿಯುತ್ತದೆ.) (೫) (ಈ ವಿಷಯದಲ್ಲಿ ಈ ಉಪನಿಷತ್ತಿನ ವಾಕ್ಯಗಳನ್ನು ಹೇಳುತ್ತಾರೆ.) (1) ***ಸ ತತ್ರ ಪರ್ಯೇತಿ**(2) **ನೋಪಜನಂ ಸ್ಮರನ್** ಎಂಬ ವಾಕ್ಯದಲ್ಲಿಯೂ ಮೋಕ್ಷದಲ್ಲಿ ಜೀವರು ಭಿನ್ನರಾಗಿರುತ್ತಾರೆಂದು ಹೇಳಿದೆ. (೬) (ಮತ್ತು **ಸ ಉತ್ತಮಃ ಪುರುಷಃ** ಎಂಬ ವಾಕ್ಯದ ಸಮೀಪದಲ್ಲಿಯೇ ಮೋಕ್ಷದಲ್ಲಿ ಶ್ರೀಹರಿಯಿಂದ ಬೇರೆ ಪುರುಷರು ಇದ್ದಾರೆಂದು ತಿಳಿಯತಕ್ಕದಿದೆ ಎನ್ನುತ್ತಾರೆ—) **ಪರಂಜ್ಯೋತಿರುಪಸಂಪದ್ಯ** ಎಂದು **ಉಪ**ಶಬ್ದವಿದ್ದುದರಿಂದಲೂ (ಬೇರೆ ಶಾಖೆಯಲ್ಲಿ) **ಅಂತರ** ಶಬ್ದವಿದ್ದುದರಿಂದಲೂ ಮುಕ್ತನು ಪರಮಾತ್ಮನ ಸಮೀಪದಲ್ಲಿದ್ದಾನೆಂದು ತಿಳಿಯುತ್ತದೆ. (ಏವಂಚ ಬಹುಪ್ರಮಾಣ ವಿರೋಧವಿದ್ದ ಪ್ರಯುಕ್ತ ಐಕ್ಯಪ್ರತಿಪಾದಕದಂತೆ ತೋರುವ ವಾಕ್ಯಗಳು ಸ್ಥಾನೈಕ್ಯ ಮತ್ಯೈಕ್ಯರೂಪವಾದ ಅರ್ಥವನ್ನು ಹೇಳುತ್ತವೆಂದು ಇಟ್ಟುಕೊಳ್ಳಬೇಕು.)☞(೭) ಮತ್ತು ಮೋಕ್ಷದಲ್ಲಿ **ತಂ ವಾ ಏತಂ ದೇವಾ ಆತ್ಮಾನಮುಪಾಸತೇ** ಎಂದು ೭ನೇ ಮಂತ್ರದಲ್ಲಿ ಆತ್ಮನನ್ನು ದೇವತೆಗಳು ಉಪಾಸನೆ ಮಾಡುತ್ತಾರೆಂದು ತೋರುತ್ತದೆ. ಶ್ರೀಹರಿಯು ಹೊರತು ಜೀವನು ಮಾತ್ರ ದೇವತೆಗಳಿಂದ ಉಪಾಸನೆಮಾಡಲ್ಪಡುತ್ತಾನೆಂಬುದು ಕೂಡಲಾರದು. (ಆದುದರಿಂದಲೂ ಬ್ರಹ್ಮನು ಜೀವನನ್ನು ಇಂದ್ರನಿಗೆ ಉಪದೇಶಿಸಿದ್ದೆಂದು ಕೂಡಲಾರದು.)

---

* ಇವೆರಡೂ ೪೬೨ರಲ್ಲು ವ್ಯಾಖ್ಯಾತವಾಗಿದೆ.

**(ಏಕೆ ಕೂಡಲಾರದೆಂದರೆ)** ದೇವತೆಗಳು ಪೃಥಿವಿಯಿಂದ ಅನ್ನವನ್ನು ಉಣ್ಣುವುದಕ್ಕಾಗಿ ಎಲ್ಲರಿಂದಲೂ ಚೆನ್ನಾಗಿ **ಗಾನ ಮಾಡಲ್ಪಡುವುದರಿಂದ** ಉರುಗಾಯನೆಂದು ಪ್ರಸಿದ್ಧನಾದ ಶ್ರೀ ವಿಷ್ಣುವನ್ನು ಪಾಸನೆಮಾಡುತ್ತಾರೆ, ಎಂಬ ವೇದವು ವಿಷ್ಣುವನ್ನೇ ದೇವತೆಗಳು ಉಪಾಸನೆಮಾಡುತ್ತಾರೆಂದು ಹೇಳುತ್ತದೆ. (೮) (ಚತುರ್ಮು ಖನು ಶ್ರೀಹರಿಯನ್ನು ಉಪಾಸನೆಮಾಡುತ್ತಾನೆನ್ನುವಾಗ ಬೇರೆ ಎಲ್ಲಾ ದೇವತೆಗಳೂ ಉಪಾಸನೆಮಾಡು ತ್ತಾರೆಂಬುದು ಸುತರಾಂ ಸಿದ್ಧವೆಂಬ ಅಭಿಪ್ರಾಯದಿಂದ ದೇವೋತ್ತಮನಾದ ಚತುರ್ಮುಖನು ಉಪಾಸನೆ ಮಾಡುತ್ತಾನೆಂದು ಭಾಗವತದಲ್ಲಿ ಹೇಳಿದೆ ಎನ್ನುತ್ತಾರೆ. ಅಥವಾ **ಸ ಉತ್ತಮಃ ಪುರುಷಃ** ಎಂದು ಹೇಳಿದ, ಮುಕ್ತರಿಂದ ಹೊಂದಲ್ಪಡುವವನು ಎಲ್ಲಾ ಪುರುಷರಿಂದಲೂ ಉತ್ತಮನೆಂದು ಭಾಗವತ ವಾಕ್ಯ ದಿಂದಲೂ ದೃಢೀಕರಿಸುತ್ತಾರೆ—) ಚತುರ್ಮುಖನು ಜೀವಾದಿಗಳಿಂದ ಭಿನ್ನನೆಂದು ಶ್ರೀಹರಿಯನ್ನು ಪಾಸನೆ ಮಾಡಿದುದರಿಂದಲೂ ಗುಣಪರಿಪೂರ್ಣನೆಂಬ ಜ್ಞಾನದಿಂದಲೂ ಅಕಾಮ್ಯ ಕರ್ಮದಿಂದಲೂ ಸರ್ವೋತ್ತ ಮನಾದ ಶ್ರೀಹರಿಯನ್ನು ಹೊಂದಿರುತ್ತಾನೆ, ಇತ್ಯಾದಿ ವಾಕ್ಯದಿಂದಲೂ ಮುಕ್ತಗಮ್ಯನು ಪುರುಷೋತ್ತ ಮನೆಂದು ಸ್ಪಷ್ಟವಾಗಿ ತಿಳಿಯುತ್ತದೆ. ॥ ೮ ॥

**ಟೀ**—ಇಲ್ಲಿ **ದರ್ಶನಾಯ ಚಕ್ಷುಃ ಗಂಧಾಯ ಘ್ರಾಣಂ** ಇದುಮೊದಲಾದ ವಾಕ್ಯಗಳಿಂದ ಇಂದ್ರಿ ಯಗಳಿಂದ ವಿಷಯಗಳನ್ನು ಭೋಗಿಸುವ ಆತ್ಮನನ್ನು ಇಂದ್ರನಿಗೆ ಉಪದೇಶಿಸಿದ್ದೆಂದು ಹೇಳಿದೆ. ಆ ವಿಷಯ ಭೋಗವು ಜೀವನಿಗೇನೇ ಹೇಳಬೇಕು ಶ್ರೀಹರಿಯು ಪೂರ್ಣನಾದುದರಿಂದ ಆತನಿಗೆ ವಿಷಯಭೋಗವು ಕೂಡಲಾರದು. ಅದುಕಾರಣ ಇಂದ್ರನಿಗೆ ಉಪದೇಶಿಸಿದ ಆತ್ಮನೆಂದರೆ–ಜೀವನೇ ಆಗಬೇಕು, ಎಂದು ಶಂಕಾ ಬಂದರೆ ಶ್ರೀಹರಿಯು ಸರ್ವಗುಣಪೂರ್ಣನಾದರೂ ಕ್ರೀಡೆಯಿಂದ ಮುಖ್ಯವಾದ ವಿಷಯಭೋಕ್ತೃ ತ್ವವೂ ಶ್ರೀಹರಿಗೇನೇ ಇರುವುದೆಂಬ ಅಭಿಪ್ರಾಯದಿಂದ ಭಾಗವತವಾಕ್ಯವನ್ನು ಹೇಳುತ್ತಾರೆ—

**ಭಾ. ॥ (೧) ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭುರ್ನಿರ್ಮಾಯ ಶೇತೇ ಯದಮೂಷು ಪೂರುಷಃ । ಭುಂಕ್ತೇ ಗುಣಾನ್ ಷೋಡಶ ಷೋಡಶಾತ್ಮಕಃ ಸೋಽಲಂಕ । ಷೀಷ್ಟ ಭಗವಾನ್ ವಚಾಂಸಿ ಮೇ । ಇತ್ಯಾದೌ ಭಗವತ ಏವೇಂದ್ರಿಯೈರ್ಭೋಗೋಕ್ತೇಶ್ಚ- (೨) ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ॥ ಇತಿ ಚ ॥ (೩) ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾದಿತಿ ಭಗವದ್ವಚನಂ ಚ ॥ (೪) ಇದಂ ಪಶ್ಯಾಮಿ ಜಿಘ್ರಾಣೀತ್ಯಪಿ ಜೀವಾ ನ ವೈ ವಿದುಃ । ದ್ರಷ್ಟ್ರ್ಯಾಣಾಮುಪರಿ- ಜ್ಞಾನಾದ್ಭೇದಾಸೌ ಪುರುಷೋತ್ತಮಃ ॥ ಇತಿ ಚ ॥ (೫) ಸ ಉತ್ತಮಃ ಪುರುಷ ಇತಿ ಭಗ- ವತ ಏವಾಯಂ ಪರಾಮರ್ಶಃ ॥ (೬) ಓಂ ಅನ್ಯಾರ್ಥಶ್ಚ ಪರಾಮರ್ಶ ಇತಿ ಭಗವದ್ವ- ಚನಾತ್ ॥ (೭) ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತ ಇತಿ ಚ ॥ ೯ ॥**

**ಅ** ॥ (೧) ಯಾವ ವಿಷ್ಣುವು ವ್ಯಾಪ್ತಗಳಾದ ಪೃಥಿವ್ಯಾದಿ ಭೂತಗಳಿಂದ ಶರೀರವನ್ನು ನಿರ್ಮಾಣ ಮಾಡಿ ಈ ಶರೀರಗಳಲ್ಲಿ **ಆತ್ಮಾದಿರೂಪಗಳಿಂದ** ಯಾವ ಕಾರಣದಿಂದ ಇರುತ್ತಾನೋ, ಆದಕಾರಣ ಆತನು **ಪುರುಷಃ** ಎನಿಸುತ್ತಾನೆ ಆ ಶ್ರೀಹರಿಯು (೧೧) ಹನ್ನೊಂದು ಇಂದ್ರಿಯ, ಮತ್ತು (೫) ಪಂಚ ಭೂತ ಇವುಗಳಲ್ಲಿ ವ್ಯಾಪಿಸಿಕೊಂಡಿದ್ದವನಾಗಿ ಶಬ್ದಮೊದಲಾದ ವಿಷಯಗಳ ಸಾರಗಳನ್ನು ಅಥವಾ ಚಕ್ಷುಸ್ಸುಮೊದಲಾದ ಹತ್ತು ಇಂದ್ರಿಯ, ಮನಸ್ಸುಮೊದಲಾದುದು *ಐದು, ಸಾಕ್ಷಿ, ಈ ೧೬ರ ಗುಣ ಗಳನ್ನು ಅನುಭವಿಸುತ್ತಾನೆ. (ದುಃಖಾದಿಗಳನ್ನು ಉಣ್ಣುವುದಿಲ್ಲ.) ಅಂತಹ ಶ್ರೀಹರಿಯು ಪುರಾಣವನ್ನು

* ಮನಃ ಬುದ್ಧಿಃ ಅಹಂಕಾರಃ ಚಿತ್ತಂ ಚೇತನಾ ಎಂದು ಐದು

ಹೇಳತಕ್ಕ ನನ್ನ (ಶುಕಾಚಾರ್ಯರ) ಮಾತನ್ನು ಪ್ರೀತಿಯನ್ನು ಹುಟ್ಟಿಸುವುದಕ್ಕಾಗಿ ಮಾಡಲಿ. (ಭಾ. ಸ್ಕ. ೨. ಅ ೪ ಶ್ಲೋ. ೨೩) ಇತ್ಯಾದಿಗಳಲ್ಲಿ ಶ್ರೀಹರಿಗೇನೇ ಸ್ವರೂಪಭೂತ ಇಂದ್ರಿಯಗಳಿಂದ ಸಾರ ಭೋಕ್ತೃತ್ವನ್ನು ಹೇಳಿರುತ್ತಾರೆ. (೨) (ಈ ವಿಷಯದಲ್ಲಿ ವೇದವನ್ನು ಹೇಳಿರುತ್ತಾರೆ-) ಯಾವ ಆತ್ಮ ಅಂತರಾತ್ಮ ಎಂಬ ಭಗವದ್ರೂಪಗಳು ಪುಣ್ಯನಿರ್ಮಿತ ಶರೀರದ ಹೃದಯದ ಗುಹೆಯಲ್ಲಿ ಪ್ರವೇಶಮಾಡಿರುವವೋ, ಅದರಲ್ಲಿಯೂ ಸರ್ವಜೀವೋತ್ತಮರಾದ ರುದ್ರಾದಿಗಳಿಗಿಂತ ಜ್ಞಾನಾದಿಗುಣಗಳಿಂದ ಅತಿಪೂರ್ಣರಾದ ವಾಯುದೇವರಲ್ಲಿ ಪ್ರವಿಷ್ಟರಾಗಿ ಸುಕೃತಫಲವನ್ನುಣ್ಣುತ್ತಿರುವರೋ, ಆ ಆತ್ಮಾ ಅಂತರಾತ್ಮ ಎಂಬ ಭಗವದ್ರೂಪಗಳು ಸಜ್ಜನರಿಗೆ ಸುಖ, ದುರ್ಜನರಿಗೆ ದುಃಖ ಇವುಗಳನ್ನು ಕೊಡುತ್ತಾರೆಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ.)(ಕಾಠ. ಅ. ೧. ವ. ೩. ಮ. ೧.) (೩) (ಈ ವೇದಕ್ಕೆ ಹೀಗೆಯೇ ಅರ್ಥಮಾಡಬೇಕೆಂದು ನಿರ್ಣಯಿಸತಕ್ಕ ಸೂತ್ರ ಹೇಳುತ್ತಾರೆ—) ಹೃದಯಗುಹೆಯನ್ನು ಪ್ರವೇಶಮಾಡಿಕೊಂಡಿರುವವುಗಳು ಆತ್ಮಾ ಅಂತರಾತ್ಮ ಎಂಬ ಭಗವದ್ರೂಪಗಳೇ, ಶ್ರೀಹರಿಯು ಎರಡು ರೂಪಗಳಿಂದ ಶರೀರದಲ್ಲಿದ್ದಾನೆಂದು **ಘರ್ಮಾ ಸಮಂತಾ** ಎಂಬ ವೇದದಲ್ಲಿ ಹೇಳಿದೆ. (ಬ್ರ. ಸೂ. ಅ. ೧. ಪಾ. ೨ ಸೂ. ೧೧) ಎಂದು ಬ್ರಹ್ಮಸೂತ್ರವು. (೪) (**ಯೋ ವೇದೇದಂ ಜಿಘ್ರಾಣಿ** ಇತ್ಯಾದಿಗಳಿಂದ ವಿಷಯಭೋಗಾನುಸಂಧಾನವು ಜೀವರ ಲಿಂಗವೆಂದು ತೋರುತ್ತದೆ. ಅದುಕಾರಣ ವಿಷಯಭೋಗವೂ ಜೀವನಿಗೇನೇ ಹೇಳಬೇಕು, ಎಂದರೆ—) ಇದನ್ನು ಕಣ್ಣಿನಿಂದ ನೋಡುತ್ತೇನೆ, ಮೂಗಿನಿಂದ ಮೂಸುತ್ತೇನೆ, ಇತ್ಯಾದಿಗಳನ್ನು ದ್ರವ್ಯಗಳ ಜ್ಞಾನವಿಲ್ಲದಿರುವುದರಿಂದ ಜೀವರು ಮುಖ್ಯವಾಗಿ ತಿಳಿಯುವುದೇ ಇಲ್ಲ. ಕ್ಷರ-ಅಕ್ಷರ ಪುರುಷರಿಂದುತ್ತಮನಾದ ಶ್ರೀಹರಿಯು ಮುಖ್ಯವಾಗಿ ತಿಳಿಯುತ್ತಾನೆ. (ಏವಂಚ ವಿಷಯಭೋಗಾನುಸಂಧಾನವು ಮುಖ್ಯವಾಗಿ ಜೀವರಿಗೆ ಇಲ್ಲ. ಶ್ರೀಹರಿಗೇನೇ ಇರುವುದು.) (೫) (ಇನೇ ಮಂತ್ರದಲ್ಲಿ **ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ** ಎಂದು ಪ್ರಕೃತ ಮುಕ್ತಜೀವರಿಗೇನೇ ಪರಾಮರ್ಶವು ತೋರುವುದರಿಂದ **ಸ ಉತ್ತಮಃ ಪುರುಷಃ** ಎಂಬುದು ಜೀವನನ್ನು ಹೇಳುವುದಿಲ್ಲವೆಂದು ಹೇಳಕೂಡದು. ಜೀವನನ್ನೇ ಹೇಳುತ್ತದೆ, ಎಂದರೆ—) **ಸ ಉತ್ತಮಃ ಪುರುಷಃ** ಎಂಬಲ್ಲಿ ತತ್‌ಶಬ್ದದಿಂದ ಪರಮಾತ್ಮನನ್ನೇ ಇಟ್ಟುಕೊಳ್ಳಬೇಕು. (೬) (ಏಕೆಂದರೆ—) **ಯಂ ಪ್ರಾಪ್ಯ ಜೀವಃ ಸ್ವರೂಪೇಣಾಭಿನಿಷ್ಪದ್ಯತೇ, ಸ ಏಷ ಆತ್ಮಾ** ಎಂಬಲ್ಲಿ ಪರಮಾತ್ಮನನ್ನು ಇಟ್ಟುಕೊಳ್ಳಬೇಕೆಂಬುವುದಕ್ಕಾಗಿ **ಸ ಏಷಃ** ಎಂದು ಹೇಳಿದ್ದು. (ಬ್ರ. ಸೂ ಅ. ೧, ಪಾ. ೩, ಸೂ ೨೦.) ಎಂದು ನಿರ್ಣಾಯಕ ಬ್ರಹ್ಮಸೂತ್ರದ ಅರ್ಥವು. (ಜೀವನನ್ನು ಇಟ್ಟುಕೊಳ್ಳುವುದಾದರೆ—**ಸ ಏಷಃ** ಎಂಬುದು ವ್ಯರ್ಥವಾಗುವುದು.) (೭) ಕ್ಷರ-ಅಕ್ಷರ ಪುರುಷರಿಂದ ಭಿನ್ನನಾದ ಉತ್ತಮಪುರುಷನು ಪರಮಾತ್ಮನೆನಿಸುತ್ತಾನೆ, (ಎಂಬ ಗೀತೆಯಿಂದಲೂ ಉತ್ತಮ ಪುರುಷನು ಭಗವಂತನೇ, ಎಂದು ಸಿದ್ಧವಾಗುತ್ತದೆ.) ॥ ೯ ॥

**ಪೀ**—ಹೀಗಾದರೂ ಶ್ರೀ ಹರಿಯೇ ಉತ್ತಮ ಪುರುಷನೆಂದು ಇಲ್ಲಿ ಇಟ್ಟುಕೊಳ್ಳಬೇಕೆಂದು ಹೇಗೆ ನಿರ್ಣಯವಾಗುತ್ತದೆ? ಜೀವನೆಂದೇ ಏಕೆ ಇಟ್ಟುಕೊಳ್ಳಕೂಡದೆಂದರೆ—

**ಭಾ. ॥ (೧) ಓಂ ಜಗದ್ವ್ಯಾಪಾರವರ್ಜಮಿತ್ಯಲ್ಪೈಶ್ವರ್ಯತ್ವಂ ಮುಕ್ತಸ್ಯ ಭಗವತಾಽಭಿಹಿತಂ ॥ (೨) ಅತೋ ಯಂ ಪ್ರಾಪ್ಯ ಜೀವಃ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಭಗವಾನುತ್ತಮಃ ಪುರುಷ ಇತಿ ಪರಾಮರ್ಶಃ ॥ (೩) ಸ್ವಪ್ನೇ ಮಹೀಯಮಾನಶ್ಚರತಿ ಯತ್ರೈತತ್ಸುಪ್ತ ಇತಿ ಪುರಸ್ತಾದಪಿ ಭೇದೋಕ್ತೇಃ ॥ (೪) ನ ಹಿ ಮಹೀಯಮಾನ ಏವ ಜೀವಶ್ಚರತಿ । (೫) ಪ್ರಾಯೋಗ್ಯಃ ಸಾರಥಿಃ ಪ್ರಯೋಗೇನ ಯಾನಸ್ಯ । ಯಂತಾ ಸಾರಥಿರಾನೇತಾ ಪ್ರಾಯೋಗ್ಯ ಇತಿ ಕೀರ್ತಿತಃ(ರ್ತ್ಯತೇ) ॥ ಇತ್ಯಭಿಧಾನಾತ್ ॥ (೬) ಅನ್ಯೈರ್ಭ್ಯೋ ದೀಪ್ಯಮಾನತ್ವಾದ್ದೈವಂ ಚಕ್ಷುರ್ಮನಃ ಸ್ಮೃತಂ । ಇತಿ ಚ ॥ (೭) ಯ ಏತೇ ಬ್ರಹ್ಮ-**

**ಲೋಕೇ ತೇಷು ರಮತೇ ಅನುವಿದ್ಯ । ಶಾಸ್ತ್ರಾಚಾರ್ಯಾನುಸಾರೇಣ ವಿದಿತ್ವಾ ವಿಜಾನಾಂ ತ್ವಾಪರೋಕ್ಷ್ಯೇಣ । ವೇದನಂ ಶಾಸ್ತ್ರತೋ ಜ್ಞಾನಂ ವಿಜ್ಞಾನಂ ಬ್ರಹ್ಮದರ್ಶನಂ ॥ ಇತಿ ಚ ॥ ॥ ೧, ೨, ೩, ೪, ೫, ೬ ॥ ಇತಿ ದ್ವಾದಶಃ ಖಂಡಃ ॥ ೧೦-೧೨ ॥ ॥ ೧೦ ॥**

**ಅ** ॥ (೧) ಮುಕ್ತನು ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳನ್ನು ಬಿಟ್ಟು ಎಲ್ಲಾ ಕಾಮಗಳನ್ನು ಹೊಂದುತ್ತಾನೆಂದು (ಬ್ರ. ಸೂ. ಅ. ೪, ಪಾ. ೪, ಸೂ. ೧೭) ಮುಕ್ತನಿಗೆ ಅಷ್ಟೈಶ್ವರ್ಯಗಳನ್ನು ವೇದ ವ್ಯಾಸರು ಸೂತ್ರದಲ್ಲಿ ಹೇಳಿರುವರು. (ಅಲ್ಪ ಐಶ್ವರ್ಯವುಳ್ಳವನಿಗೆ ಉತ್ತಮಪುರುಷತ್ವವು ಯುಕ್ತವಲ್ಲ.) (೨) (ಹೀಗೆ **ಸ ಏಷಃ** ಎಂಬ ಪರಾಮರ್ಶವು ಜೀವರಿಗಿಂತ ಭಿನ್ನನಾದ ಶ್ರೀಹರಿಯನ್ನು ಹೇಳುತ್ತದೆಂದು ಹೇಳಿ ಈಗ ವಾಕ್ಯಾರ್ಥವನ್ನು ಹೇಳುತ್ತಾರೆ—) ಆದಕಾರಣ ಜೀವನು ಯಾವ ಶ್ರೀಹರಿಯನ್ನು ಹೊಂದಿ ತನ್ನ ಸ್ವರೂಪಭೂತವಾದ ಆನಂದದಿಂದ ಯುಕ್ತನಾಗುತ್ತಾನೋ, ಆ ಶ್ರೀಹರಿಯು ಸರ್ವೋತ್ತಮನಾದ ಪುರುಷನು, ಎಂದು ಪರಾಮರ್ಶವಾಕ್ಯದ ಅರ್ಥವು. (೩) (**ಸ್ವಪ್ನೇ ಮಹೀಯಮಾನಃ** ಎಂದು ಆತ್ಮನು ಸ್ವಪ್ನಾವಸ್ಥೆಯಲ್ಲಿ ಪೂಜಿಸಲ್ಪಡುತ್ತಾನೆಂದು ಹೇಳಿದುದರಿಂದಲೂ **ಯತ್ರೈತತ್ಸುಪ್ತಃ** ಎಂದು ಸುಪ್ತರಾದ ಜೀವರಿಗೆ ಆಶ್ರಯನೆಂದು ಹೇಳಿದುದರಿಂದಲೂ ಬ್ರಹ್ಮನು ಇಂದ್ರನಿಗೆ ಉಪದೇಶಿಸಿದ ಆತ್ಮನೆಂದರೆ ಜೀವನಲ್ಲ, ಎನ್ನುತ್ತಾರೆ—) ೧೦ನೇ ಖಂಡದ ೧ನೇ ಮಂತ್ರದಲ್ಲಿ **ಸ್ವಪ್ನೇ ಮಹೀಯಮಾನಶ್ಚರತಿ** ಎಂದೂ, ೧೧ನೇ ಖಂಡದ ೧ನೇ ಮಂತ್ರದಲ್ಲಿ **ಯತ್ರೈತತ್ಸುಪ್ತಃ** ಎಂದೂ ಪೂರ್ವದಲ್ಲಿ ಭೇದಕ ಧರ್ಮಗಳನ್ನು ಹೇಳಿದ ಕಾರಣ ಆತ್ಮನೆಂದರೆ ಜೀವನಲ್ಲ. (೪) (ಜೀವನಿಗೆ ದುಃಖಾನುಭವವೂ ಇದ್ದುದರಿಂದ) ಜೀವನು ಪೂಜಿಸಿ ಕೊಳ್ಳಲ್ಪಡುವವನಾಗಿಯೇ ಸಂಚರಿಸುವವನಲ್ಲ. (೫) (೩ನೇ ಮಂತ್ರದಲ್ಲಿದ್ದ ಪ್ರಾಯೋಗ್ಯಶಬ್ದಾರ್ಥ ವನ್ನು ಪ್ರಮಾಣದಿಂದ ವ್ಯಾಖ್ಯಾನಮಾಡಿ ಈಗ ಅದನ್ನು ವಿವರಿಸುತ್ತಾರೆ—) ವಾಹನವನ್ನು ನಡಿಸುವುದ ರಿಂದ ಪ್ರಾಯೋಗ್ಯಃ=ಸಾರಥಿಯು. ಯಂತಾ, ಸಾರಥಿಃ, ಆನೇತಾ, ಪ್ರಾಯೋಗ್ಯಃ ಇಷ್ಟು ಏಕಾರ್ಥಕವು ಎಂದು ಕೋಶವು (೬) (೫ನೇ ಮಂತ್ರದಲ್ಲಿದ್ದ **ದೈವಂ ಚಕ್ಷುಃ** ಎಂಬುದರ ಅರ್ಥ ಹೇಳುತ್ತಾರೆ—) ಜೀವರ ಇಂದ್ರಿಯಗಳಿಗಿಂತ ಶ್ರೀಹರಿಯ ಚಕ್ಷುರಾದಿ ಇಂದ್ರಿಯಗಳೂ, ಮನಸ್ಸೂ ಹೆಚ್ಚು ಪ್ರಕಾಶಿಸುವು ದರಿಂದ ಅಂದರೆ ಪರಮಾತ್ಮನೂ ಇಂದ್ರಿಯಾಭಿಮಾನಿಗಳೂ ಹೆಚ್ಚು ಪ್ರಕಾಶಿಸುವುದರಿಂದ ಚಕ್ಷುಸ್ಸೂ ಮನಸ್ಸೂ ದೈವವು ಸ್ವರೂಪಾತ್ಮಕವೆನಿಸುತ್ತದೆ (೭) (೬ನೇ ಮಂತ್ರದಲ್ಲಿದ್ದ **ಯ ಏತೇ ಬ್ರಹ್ಮಲೋಕೇ** ಎಂಬುದಕ್ಕೆ ಅನ್ವಯ ತೋರಿಸುತ್ತಾರೆ—) ವೈಕುಂಠಲೋಕದಲ್ಲಿ ಯಾವ ದೇವತೆಗಳು ಇದ್ದಾರೋ, ಆ ದೇವತೆಗಳಲ್ಲಿ ಶ್ರೀಹರಿಯು ಕ್ರೀಡಿಸುತ್ತಾನೆ. (**ಅನುವಿದ್ಯ** ಇತ್ಯಾದಿ ಶಬ್ದಗಳ ಅರ್ಥಗಳನ್ನು ಪ್ರಮಾಣದಿಂದ ಹೇಳಿದುದನ್ನು ವಿವರಿಸುತ್ತಾರೆ—) ಅನುವಿದ್ಯ=ಶಾಸ್ತ್ರಗಳನ್ನು ಅನುಸರಿಸಿ ಸೇವಾದಿಗ ಳನ್ನು ಮಾಡಿ, ಗುರುಗಳಿಂದ ತತ್ತ್ವವನ್ನು ತಿಳಿದು, ಪ್ರತ್ಯಕ್ಷವಾಗಿ ತಿಳಿಯುತ್ತಾನೆ ಶಾಸ್ತ್ರಾನುಸಾರ ತಿಳಿದುಕೊಳ್ಳುವುದು **ವೇದನ**ವೆನ್ನಿಸುತ್ತದೆ. ಪರಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಳ್ಳುವುದು **ವಿಜ್ಞಾನ**ವೆನಿ ಸುತ್ತದೆ, ಎಂದು ಕೋಶವು. ॥ ೧೦-೧೨ ॥ ॥ ೧೦ ॥

**ಹದಿನೆರಡನೇ ಖಂಡವು ಮುಗಿಯಿತು**

## ೧೩ನೇ ಖಂಡವು

**ಪೀ**—ಹೀಗೆ ಶರೀರದಲ್ಲಿರತಕ್ಕ ಶ್ರೀಹರಿಯ ಉಪಾಸನೆಯನ್ನು ಹೇಳಿ ವಿಶ್ವರೂಪೋಪಾಸನೆಗೆ ಯೋ ಗ್ಯರಾದವರಿಗೆ ವಿಶ್ವರೂಪೋಪಾಸನೆಯನ್ನು ಹೇಳುತ್ತಾರೆ—

**ಉ. ॥ ಶ್ಯಾಮಾಚ್ಛಬಲಂ ಪ್ರಪದ್ಯೇ ಶಬಲಾಚ್ಛ್ಯಾಮಂ ಪ್ರಪದ್ಯೆ ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚಂದ್ರ ಇವ ರಾಹೋರ್ಮುಖಾತ್ ಪ್ರಮುಚ್ಯ ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾ-ಮೀತ್ಯಭಿಸಂಭವಾಮೀತಿ ॥ ಇತಿ ತ್ರಯೋದಶಃ ಖಂಡಃ ॥ ೧೦-೧೩ ॥ ೧ ॥**

**ಅ** ॥ ನೀಲವರ್ಣವುಳ್ಳ ಹೃದಯದೊಳಗಣ ಶ್ರೀಹರಿಯ ಉಪಾಸನೆಯಿಂದ ಶಬಲ (ಮಿಶ್ರ) ಬಣ್ಣ ವುಳ್ಳ ಚಕ್ಷುರೊಳಗಣ ವಿಶ್ವರೂಪೋಪಾಸನೆಮಾಡಿ ತಿಳಿದವನಾಗಿರುತ್ತೇನೆ. ಆ ವಿಶ್ವರೂಪಾನುಗ್ರಹದಿಂದ ಶ್ಯಾಮವರ್ಣವುಳ್ಳ ಹೃದ್ಗತ ರೂಪವನ್ನು ಉಪಾಸನೆಮಾಡಿ ಹೊಂದಿರುತ್ತೇನೆ. (ಹೀಗೆ ಹೃದಯ ಕಣ್ಣು ಇವುಗಳಲ್ಲಿರತಕ್ಕ ಭಗವದ್ರೂಪಗಳ ಉಪಾಸನೆ ಹೇಳಿ, ಆ ಭಗವದ್ರೂಪಗಳನ್ನು ಪ್ರಾರ್ಥಿಸುವ ಪ್ರಕಾರ ಹೇಳುತ್ತಾರೆ—) ಕುದುರೆಯು ತನ್ನ ರೋಮಗಳನ್ನು ಹೇಗೆ ಉದುರಿಸಿ ಶ್ರಮವನ್ನು ಕಳೆದು ನಿರ್ಮಲವಾಗುತ್ತದೋ, ಹಾಗೆಯೇ ನಾನು ಬ್ರಹ್ಮಜ್ಞಾನದಿಂದ ಅಪ್ರಾರಬ್ಧವಾದ ಪಾಪವನ್ನು ಅನಾಯಾಸದಿಂದಲೇ ಹೋಗಲಾಡಿಸಿ, ರಾಹುವಿನ ಮುಖದಿಂದ ಚಂದ್ರನು ಬಿಡುಗಡೆ ಹೊಂದಿ ಪ್ರಕಾಶಿಸುವಂತೆ, ಕ್ರಮವಾಗಿ ಭೋಗದಿಂದ ಕ್ಷೀಣವಾಗುವ ಪ್ರಾರಬ್ಧಪಾಪದಿಂದ ಸ್ಥೂಲ ಮತ್ತು ಸೂಕ್ಷ್ಮ ಶರೀರವನ್ನು ನಡುಗಿಸಿಬಿಟ್ಟು ಕೃತಾರ್ಥನಾದ (ಸ್ವರೂಪಾನಂದಾವಿರ್ಭಾವವನ್ನು ಹೊಂದಿದ) ನಾನು ನಿತ್ಯವಾದ ವೈಕುಂಠವನ್ನು ಹೊಂದುತ್ತೇನೆ, (ಎಂದು ವೇದಪುರುಷನ ಪ್ರಾರ್ಥನಾಪ್ರಕಾರವನ್ನು ಹೇಳಿರುತ್ತಾನೆ.　　　　॥ ೧ ॥

**ಭಾ. ॥ (೧) ಶ್ಯಾಮೋ ಹೃದಿ ಸ್ಥಿತೋ ವಿಷ್ಣುಃ ಶಬಲೋ ವಿಶ್ವರೂಪವಾನ್ ॥ (೨) ಜೀವವರ್ಣೋ ಜೀವಗತೋ ಲೋಹಿತಶ್ಚಕ್ಷುಷಿ ಸ್ಥಿತಃ । ಇತಿ ಮಾನಸೇ ॥ (೩) ಹಯಗ್ರೀವಮುಖೋತ್ಥಾನಿ ಯಾನಿ ವಾಕ್ಯಾನಿ ತಾನಿ ತು । ರಮಾ ದದರ್ಶ ತಾನ್ಯೇವ ಬ್ರಹ್ಮಾ ತಾನ್ಯೇವ ನಾರದಃ ॥ ಯಾನಿ ವಿಷ್ಣೋರಯೋಗ್ಯಾನಿ ಪ್ರಾರ್ಥನಾದ್ಯಾತ್ಮಕಾನಿ ತು । ತಾನ್ಯುತ್ತರೇಷಾಂ ವಾಕ್ಯಾನಿ ಭವಿಷ್ಯಾಣ್ಯವದದ್ಧರಿಃ ॥ ಏವಂ ರಮಾ ತಥಾ ಬ್ರಹ್ಮಾ ಛಾಂದೋಗ್ಯೋಪನಿಷದ್ಧಿ ಸಾ । ಇತಿ ಸಾಮಸಂಹಿತಾಯಾಂ ॥ ೧ ॥ ಇತಿ ತ್ರಯೋದಶಃ ಖಂಡಃ ॥ ॥ ೧೦-೧೩ ॥　　　　॥ ೧ ॥**

**ಅ** ॥ (೧) ಹೃದಯದಲ್ಲಿರತಕ್ಕ ಶ್ರೀವಿಷ್ಣುವು ಶ್ಯಾಮರೂಪವುಳ್ಳವನು. ಶಬಲಃ=ವಿಶ್ವರೂಪವುಳ್ಳವನು ಅಂದರೆ ಹಲವು ಬಣ್ಣಗಳ ಬೆರಕೆಯುಳ್ಳವನು. (ಏವಂಚ ಶ್ಯಾಮ ಶಬಲರೂಪಗಳುಳ್ಳ ಭಗವನ್ಮೂರ್ತಿ ವಿಶೇಷಗಳು ಹೃದಯದಲ್ಲಿರತಕ್ಕವುಗಳು. ಅವುಗಳ ಉಪಾಸನಾದಲ್ಲಿ ಕ್ರಮವಿಲ್ಲ ಶ್ಯಾಮೋಪಾಸನಾನಂತರದಲ್ಲಿ ಶಬಲಪ್ರಾಪ್ತಿಯು, ಅಥವಾ ಶಬಲೋಪಸನಾನಂತರದಲ್ಲಿ ಶ್ಯಾಮಪ್ರಾಪ್ತಿಯು ಎಂಬೀ ನಿಯಮವೇ ಇಲ್ಲ, ಎಂದು ವೇದಪುರುಷನ ಮಾತು.) (೨) ಹೀಗೆಯೇ ಜೀವನಲ್ಲಿರತಕ್ಕ ಶ್ರೀಹರಿಯು ಜೀವರ ರೂಪದಂತೆ ರೂಪವುಳ್ಳವನು (ಇದರಿಂದ ಗಾಯತ್ರೀವಿದ್ಯೆಯಲ್ಲಿ ಹೇಳಿದ, ಜೀವರಲ್ಲಿ ವ್ಯಾಪಿಸಿಕೊಂಡು ಇರುವ ಭಗವತ್ಸ್ವರೂಪಕ್ಕೆ ಜೀವರ ರೂಪದಂತೆ ರೂಪವು. ಅದನ್ನುಪಾಸನೆ ಮಾಡಬೇಕೆಂದು ಉಕ್ತವಾಯಿತು) **ಯ ಏಷೋಽಂತರಕ್ಷಣಿ** ಎಂದು ಹೇಳಲ್ಪಟ್ಟ ಕಣ್ಣಿನೊಳಗಣ ಶ್ರೀಹರಿಯು ಕೆಂಬಣ್ಣವುಳ್ಳವನು ಎಂದು ಉಪಾಸನೆ ಮಾಡಲ್ಪಡಬೇಕು, ಎಂದು ಮಾನಸಗ್ರಂಥದಲ್ಲಿದೆ (೩) **ಬ್ರಹ್ಮಲೋಕಮಭಿಸಂಭವಾಮಿ** ಎಂದು ವೇದಪುರುಷನ ಮಾತು ಎಂದು ಹೇಳಿದ್ದು ಅಯುಕ್ತವು ಏಕೆಂದರೆ—ಹಯಗ್ರೀವದೇವರು ಮತ್ತು ರಮಾದೇವಿ ಇವರು ಉಪನಿಷದ್ದ್ರಷ್ಟೃಗಳಾಗಿರುತ್ತಾರೆ. ಇಬ್ಬರೂ ನಿತ್ಯಮುಕ್ತರು. ಅದುಕಾರಣ ಇವರಿಗೆ ಇಂತಹ ಅಭಿಪ್ರಾಯವೇ ಕೂಡಲಾರದು. ಆದಪ್ರಯುಕ್ತ **ಅಭಿಸಂಭ-**

**ವಾಮಿ** ಎಂಬುದು ವೇದಪುರುಷನ ವಚನವಾಗುವುದು ಹೇಗೆ? ಎಂದರೆ—) ಹಯಗ್ರೀವದೇವರ ಮುಖ ದಿಂದ ಹೊರಟಿರುವ ವೇದವಾಕ್ಯಗಳನ್ನು ಲಕ್ಷ್ಮೀದೇವಿಯು ಕಂಡಳು. ಅವುಗಳನ್ನೇ ಚತುರ್ಮುಖನು ಕಂಡನು. ಅವುಗಳನ್ನೇ ನಾರದರೂ (ಸೋಮನೂ) ಕಂಡರು. ಪ್ರಾರ್ಥನಾದಿರೂಪಗಳಾದ ಯಾವ ವಾಕ್ಯಗಳು ವಿಷ್ಣುವಿಗೆ ಅಯೋಗ್ಯಗಳಾಗಿ ಕಾಣುತ್ತವೋ, ಅವುಗಳನ್ನು ಮುಂದಿನ ನಾರದಾದಿಗಳ ವಾಕ್ಯ ಗಳಿಂದು ಶ್ರೀಹರಿಯು ಹೇಳಿದನು. ಹೀಗೆಯೇ ಲಕ್ಷ್ಮೀದೇವಿಯೂ, ಬ್ರಹ್ಮನೂ ಕೂಡ ಹೇಳಿದರು. ಯಾವ ವಾಕ್ಯಸಮುದಾಯವು ಹಯಗ್ರೀವಾದಿಗಳಿಂದ ಕಾಣಲ್ಪಟ್ಟದೋ, ಅದು ಛಾಂದೋಗ್ಯೋಪನಿಷ ತ್ತು, ಎಂದು ಸಾಮಸಂಹಿತೆಯಲ್ಲಿ ಹೇಳಿದೆ. ॥ ೧೦—೧೩ ॥ ॥ ೧ ॥

**ಹದಿಮೂರನೇ ಖಂಡವು ಮುಗಿಯಿತು.**

---

## ೧೪ನೇ ಖಂಡವು

**ಪೀ—ಯೂವಾನ್ವಾ ಆಯುಮೂಕಾಶಃ** ಇತ್ಯಾದಿಗಳಿಂದ ಮೊದಲು ಹೇಳಿದ ವ್ಯಾಪ್ತನಾದ ಶ್ರೀ ಹರಿಯ ಉಪಾಸನೆಯನ್ನು ಹೇಳುತ್ತಾರೆ—

**ಉ. ॥ ಆಕಾಶೋ ನಾಮ ವೈ ನಾಮರೂಪಯೋರ್ನಿರ್ವಹಿತಾ ತೇ ಯದಂ-ತರಾ ತದ್ಬ್ರಹ್ಮ ತದಮೃತꣳ ಸ ಆತ್ಮಾ ಪ್ರಜಾಪತೇಃ ಸಭಾಂ ವೇಶ್ಮ ಪ್ರಪದ್ಯೇ ಯಶೋಽಹಂ ಭವಾನಿ ಬ್ರಾಹ್ಮಣಾನಾಂ ಯಶೋ ರಾಜ್ಞಾಂ ಯಶೋ ವಿಶಾಂ ಯಶೋಽಹಮನುಪ್ರಾಪತ್ಸಿ ಸಹಾಹಂ ಯಶಸಾಂ ಯಶಃ ಶ್ವೇತಮದತ್ಕಮ-ದತ್ಕಂ ಶ್ವೇತಂ ಲಿಂದುಮಾಭಿಗಾಂ ಲಿಂದುಮಾಭಿಗಾಂ ॥ ಇತಿ ಚತು-ರ್ದಶಃ ಖಂಡಃ ॥ ೧೦-೧೪ ॥** **॥ ೧ ॥**

ಅ ॥ ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶನೆನಿಸಿದ ಹೃದಯಕಮಲದಲ್ಲಿದ್ದ ಶ್ರೀವಿಷ್ಣುವು ಶಬ್ದಪ್ರ ಪಂಚ ಅರ್ಥಪ್ರಪಂಚಗಳನ್ನು ಸೃಷ್ಟಿಸಿದವನು. ಅತಿಪ್ರಸಿದ್ಧವು. (**ಅನಾಮಾ ಸೋಽಪ್ರಸಿದ್ಧತ್ವಾದ-ರೂಪೋ ಭೂತವರ್ಜನಾತ್** ಎಂದು ಹೇಳಿದ ಪ್ರಕಾರ) ನಾಮರೂಪಗಳನ್ನು ಬಿಟ್ಟು ಇದ್ದವನು ಪರಬ್ರ ಹ್ಮನು, ನಿತ್ಯಮುಕ್ತನು ಅಂತಹವನು ಆತ್ಮನೆಂದು ಉಪಾಸನೆ ಮಾಡಬೇಕು. (ಆ ಆತ್ಮನನ್ನು ಉಪಾ ಸನೆಮಾಡುವ ಕಾಲದಲ್ಲಿ ಕರ್ತವ್ಯವನ್ನು ಹೇಳುತ್ತಾರೆ—) ಶ್ರೀ ವಿಷ್ಣುವಿನ ಸಭೆಯನ್ನೂ, ಮನೆಯನ್ನೂ ಹೊಂದಿರುವೆನು. ಬ್ರಾಹ್ಮಣರೂ ಕ್ಷತ್ರಿಯರೂ ಇವರ ಮಧ್ಯದಲ್ಲಿ ಯಶಸ್ಸುಳ್ಳವನಾಗಿರುತ್ತೇನೆ. ವೈಶ್ಯ ರಲ್ಲಿಯೂ ಯಶಸ್ಸನ್ನು ಹೊಂದಿರುವೆನು. ಅಂತಹ ನಾನು ಕೀರ್ತಿಯುಳ್ಳವರಿಗೆ ಕೀರ್ತಿಯನ್ನು ಕೊಡು ವವನಾಗುವೆನು. ಅಥವಾ ಯಶಸ್ಸುಳ್ಳವರಿಗೆ ಯಶಸ್ಸನ್ನು ಕೊಡುವ ಮುಖ್ಯಪ್ರಾಣನಲ್ಲಿರತಕ್ಕ, ಸ್ವರೂಪ ಭೂತ ಆನಂದವನ್ನು ಅನುಭವಿಸುತ್ತಿರುವ ಪರಬ್ರಹ್ಮನ ಅನುಗ್ರಹದಿಂದ ಯಶಸ್ಸನ್ನು ಹೊಂದಿರುವೆನು. ಅಂತಹ ನಾನು ನನಗೆ ಯಶಸ್ಸನ್ನು ಕೊಟ್ಟಿರುವ, ಸ್ವರೂಪಾನಂದವನ್ನು ಉಣ್ಣುತ್ತಿರುವ ಮುಖ್ಯವಾಯುವಿನ ಲ್ಲಿರುವ, ಆನಂದವನ್ನು ಕೊಡುವ ಶ್ರೀ ಪರಬ್ರಹ್ಮನನ್ನು ಹೊಂದಿದವನಾಗಿರುತ್ತೇನೆ, ಎಂದು (ವೇದಪುರುಷ ನಾದ ಚತುರ್ಮುಖನ ವಾಕ್ಯವು.) ॥ ೧ ॥

**ಪೀ**—ಈ ಖಂಡಕ್ಕೆ ಪ್ರಮಾಣ ಹೇಳಿ ಅರ್ಥ ಹೇಳುತ್ತಾರೆ—

ಭಾ. ॥ (೧) ಆಕಾಶೋಽತಿಪ್ರಕಾಶತ್ವಾನ್ನಾಮರೂಪೇ ಯುತೇ ಸ್ಥಿತಃ । ಬ್ರಹ್ಮಾಖ್ಯೋ ಭಗವಾನ್ವಿಷ್ಣುಸ್ತದ್ವೇಶ್ಮ ಪ್ರಾಪ್ನುಯಾಮಹಂ ॥ (೨) ಯಶೋಽಹಂ ಸರ್ವವರ್ಣಾನಾಂ ಮತ್ತೋಽನ್ಯೇ(ಹ್ಯೇ)ಷಾಂ ಯಶೋ ಭವೇತ್॥(೩)ಸೋಽಹಂ ಮಮ ಯಶೋದಾತ್ರ ಯಶಸಾಂ ಯಶ ಉತ್ತಮಂ । ವಿಷ್ಣ್ವಾಖ್ಯಂ ಪರಮಂ ಬ್ರಹ್ಮ ॥(೪) ಶ್ವೇತಂ ಶ್ವಸನಗಂ ಯತಃ । ಅದತ್ಕಮದ್ಯಮಾನಂ ಕಂ ಸ್ವಾನಂದಾನುಭವಾತ್ಮಕಂ । ಲಿಂದು ತದ್ರತಿದಂ ಯಸ್ಮಾತ್ತದಹಂ ಪ್ರಾಪ್ನುಯಾಂ ಸದಾ ॥ ೧ ॥ ಇತಿ ಚತುರ್ದಶಃ ಖಂಡಃ ॥ ೧೦–೧೪ ॥ ॥ ೧ ॥

ಅ ॥ (೧) ಪರಬ್ರಹ್ಮನೆನಿಸಿದ ಶ್ರೀವಿಷ್ಣುವು ಅತ್ಯಂತ ಪ್ರಕಾಶಸ್ವರೂಪನಾದುದರಿಂದ ಆಕಾಶನೆನಿಸುತ್ತಾನೆ. ಆತನು ನಾಮರೂಪಗಳನ್ನು ಬಿಟ್ಟು ಇರುತ್ತಾನೆ. ಆ ಶ್ರೀಹರಿಯ ಮಂದಿರವನ್ನು ನಾನು ಹೊಂದಿರುವೆನು. (೨) ಬ್ರಾಹ್ಮಣಾದಿ ವರ್ಣಗಳಲ್ಲಿ ಯಶಸ್ಸುಳ್ಳವನಾಗುವೆನು. ಇತರರಿಗೆ ನನ್ನಿಂದ ಕೀರ್ತಿಯು ಬರುವುದು. (೩) ಅಂತಹ ನಾನು ನನಗೆ ಯಶಸ್ಸನ್ನು ಕೊಡತಕ್ಕ, ಉತ್ತಮ ಯಶೋರೂಪನಾದ ಪರಬ್ರಹ್ಮನ ಅನುಗ್ರಹದಿಂದ ನಾನು ಯಶಸ್ಸನ್ನು ಹೊಂದಿರುವೆನು. (೪) ಆ ಪರಬ್ರಹ್ಮನು ಮುಖ್ಯಪ್ರಾಣನಲ್ಲಿದ್ದ ಪ್ರಯುಕ್ತ **ಶ್ವೇತನು.** ಸ್ವರೂಪಭೂತ ಆನಂದವನ್ನು ಅನುಭವಿಸುವವನಾದುದರಿಂದ **ಅದತ್ಕನು.** ಆನಂದವನ್ನು ಕೊಡುವವನಾದುದರಿಂದ **ಲಿಂದು** ಎನಿಸುತ್ತಾನೆ ಅಂತಹ ಪರಬ್ರಹ್ಮನನ್ನು ಸದಾ ಹೊಂದಿರುವೆನು, ಎಂದು ಚತುರ್ಮುಖನ ಮಾತು ॥ ೧೦–೧೪ ॥ ॥ ೧ ॥

ಹದಿನಾಲ್ಕನೇ ಖಂಡವು ಮುಗಿಯಿತು.

---

## ೧೫ನೇ ಖಂಡವು.

ಪೀ—ಆದರ ಹುಟ್ಟುವುದಕ್ಕಾಗಿ ಉಪನಿಷತ್ಪ್ರವರ್ತಕರನ್ನು ವೇದಪುರುಷನು ಹೇಳುತ್ತಾನೆ—

ಉ. ॥ ತದ್ಧೈತದ್ಬ್ರಹ್ಮಾ ಪ್ರಜಾಪತಯ ಉವಾಚ ಪ್ರಜಾಪತಿರ್ಮನವೇ ಮನುಃ ಪ್ರಜಾಭ್ಯ ಆಚಾರ್ಯಕುಲಾದ್ವೇದಮಧೀತ್ಯ ಯಥಾವಿಧಾನಂ ಗುರೋಃ ಕರ್ಮಾತಿಶೇಷೇಣಾಭಿಸಮಾವೃತ್ಯ ಕುಟುಂಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ವಿದಧದಾತ್ಮನಿ ಸರ್ವೇಂದ್ರಿಯಾಣಿ ಸಂಪ್ರತಿಷ್ಠಾಪ್ಯಾಹಿಂಸನ್ ಸರ್ವಾಣಿ ಭೂತಾನ್ಯನ್ಯತ್ರ ತೀರ್ಥೇಭ್ಯಃ ಸ ಖಲ್ವೇವಂ ವರ್ತಯನ್ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾವರ್ತತೇ ॥ ಇತಿ ಪಂಚದಶಃ ಖಂಡಃ ॥ ೧೦-೧೫ ॥

ಇತಿ ಶ್ರೀಮಚ್ಛಾಂದೋಗ್ಯೋಪನಿಷದಿ ದಶಮೋಽಧ್ಯಾಯಃ ॥ ೧೦ ॥

ಅ ॥ ಹಿಂದೆ ಹೇಳಿದ ಉಪನಿಷದ್ರೂಪವಾದ ವಾಕ್ಯಸಮುದಾಯವನ್ನು ಪರಬ್ರಹ್ಮನು ಚತುರ್ಮುಖನಿಗೂ, ಚತುರ್ಮುಖನು ಸ್ವಾಯಂಭುವಮನುವಿಗೂ, ಸ್ವಾಯಂಭುವಮನುವು ಪ್ರಜೆಗಳಿಗೂ ಉಪದೇಶಿಸಿರುವರು. (ಹೀಗೆ ಈ ಉಪನಿಷತ್ತು ಪರಂಪರಾಪ್ರಾಪ್ತವಾಗಿರುವುದರಿಂದ ಈಗಲೂ ಮೋಕ್ಷವನ್ನು ಹೊಂದ

ಲಿಚ್ಛಿಸಿ ಈ ಉಪನಿಷತ್ತನ್ನು ಅಭ್ಯಾಸಮಾಡಿದರೆ ಆತನಿಗೆ ಮೋಕ್ಷಫಲವನ್ನು ಹೇಳುತ್ತಾರೆ –) (ಉಪನಿಷತ್ತಿನಲ್ಲಿ ಹೇಳಿದ ಅರ್ಥವನ್ನು ಅವಶ್ಯವಾಗಿ ಆದರದಿಂದ ಕೇಳಬೇಕಾಗಿರುವುದರಿಂದ ಮೋಕ್ಷಾಪೇಕ್ಷಿಯು) ಆಚಾರ್ಯರಿಂದ ವೇದವನ್ನು ವಿಧಿಪ್ರಕಾರ ಅರ್ಥಸಹಿತ ಅಧ್ಯಯನಮಾಡಿ ಗುರುಗಳ ಸೇವಾ ಮಾಡಿ ಗುರುದಕ್ಷಿಣೆಯಿತ್ತು ಗುರುಕುಲವಾಸವನ್ನು ಸಮಾಪಿಸಿ ಗೃಹಸ್ಥಾಶ್ರಮದಲ್ಲಿರುವವನಾಗಿ ಶುಚಿಯಾದ ಪ್ರದೇಶದಲ್ಲಿ ವೇದಾಧ್ಯಯನವನ್ನು ಮಾಡುತ್ತಾ ಧಾರ್ಮಿಕ ವ್ಯಾಪಾರಗಳನ್ನೆಲ್ಲಾ ಮಾಡಿಕೊಂಡು ಪರಮಾತ್ಮನಲ್ಲಿ ಎಲ್ಲಾ ಇಂದ್ರಿಯಗಳನ್ನು ಸ್ಥಿರಗೊಳಿಸಿ ವಿಷಯಗಳಲ್ಲಿ ಹೋಗದಿದ್ದಂತೆ ಮಾಡಿ (ಅಂದರೆ ಬಾಹ್ಯ ವ್ಯಾಪಾರದಲ್ಲಿ ಆಸಕ್ತವಾದ ಮನಸ್ಸನ್ನು ಪರಮಾತ್ಮನಲ್ಲಿಯೇ ಚೆನ್ನಾಗಿ ಇಟ್ಟು) ಯಾಗಗಳ ಹೊರತು (ಅಂದರೆ ಯಾವ ಯಾಗಾದಿಗಳಲ್ಲಿ ಹಿಂಸೆ ಮಾಡಬಹುದೆಂದು ಶಾಸ್ತ್ರದಲ್ಲಿ ಹೇಳಿಯದೋ, ಅದು ವಿನಹ) ಎಲ್ಲಿಯೂ ಯಾವ ಪ್ರಾಣಿಗಳನ್ನೂ ಹಿಂಸೆಮಾಡದಿರುವವನಾಗಿ ಆಯುಷ್ಯವು ಇರುವಪರ್ಯಂತ ಹೀಗೆಯೇ ಇರುವವನಾಗಿ ಪರಮಾತ್ಮನನ್ನು ಪ್ರತ್ಯಕ್ಷೀಕರಿಸಿ ವೈಕುಂಠಕ್ಕೆ ಹೋಗುತ್ತಾನೆ ಯಾವಾಗಲೂ ಎಲ್ಲಿಯೂ ಯಾವ ನಿಮಿತ್ತದಿಂದಲೂ ಅಲ್ಲಿಂದ ಹಿಂತಿರುಗಿ ಬರುವುದಿಲ್ಲ. (ಮೋಕ್ಷದಲ್ಲಿಯೇ ಯಾವಾಗಲೂ ಸ್ವರೂಪಭೂತ ಆನಂದವನ್ನು ಅನುಭವಿಸುತ್ತಿರುತ್ತಾನೆ ) ಹಿಂದೆ ಹೇಳಿದ ಎಲ್ಲಾ ಪ್ರಮೇಯವೂ ಯಥಾರ್ಥವೆಂದು ತಿಳಿಸುವುದಕ್ಕಾಗಿ ಎರಡು ಸಲ ಹೇಳಿರುವರು. || ೧ ||

**ಛಾಂದೋಗ್ಯೋಪನಿಷತ್ತಿನಲ್ಲಿ ಹತ್ತನೇ ಅಧ್ಯಾಯವು ಮುಗಿಯಿತು.**

**ಪೀ**—ಮೋಕ್ಷಾಭಿಲಾಷಿಗಳು ಈ ಉಪನಿಷತ್ತನ್ನು ಅವಶ್ಯವಾಗಿ ಆದರದಿಂದ ಕೇಳಬೇಕೆಂಬ ಉದ್ದೇಶದಿಂದ ವೇದಪುರುಷನು ಈ ಉಪನಿಷತ್ಪ್ರವರ್ತಕರನ್ನು ಹೇಳುತ್ತಾ ಈ ಉಪನಿಷತ್ತಿನಲ್ಲಿ ಹೇಳಿದ ಭಗವದ್ಗುಣಗಳನ್ನು ಉಪಾಸನೆಮಾಡಿದವರಿಗೆ ಅವಶ್ಯವಾಗಿ ಅಪೇಕ್ಷಿತಗಳಾದ *ಯಮ ನಿಯಮಗಳನ್ನು ತೋರಿಸುತ್ತಾ ಪುನರಾವೃತ್ತಿರಹಿತವಾದ ಮೋಕ್ಷರೂಪ ಫಲ ಹೇಳುತ್ತಾರೆ—

**ಭಾ. || ಉಪದಿಷ್ಟಃ ಪರೇಣೈವ ಶ್ವೇವಮಾಹ ಚತುರ್ಮುಖಃ | ಉವಾಚ ಚ ಮನೋರ್ವಿದ್ಯಾಂ ಪ್ರಜಾಭ್ಯೋ ಮನುರೇವ ಚ || ತಸ್ಮಾತ್ಸರ್ವೇಂದ್ರಿಯಾಣೀಶೇ ನಿಧಾಯ ಪುರುಷೋತ್ತಮೇ | ದೃಷ್ಟ್ವಾ ತಂ ಪರಮಂ ವಿಷ್ಣುಂ ತಲ್ಲೋಕಂ ಪ್ರತಿಪದ್ಯತೇ || ನಾವರ್ತೇತ(ರ್ತತೇ) ಪುನಸ್ತಸ್ಮಾತ್ಕದಾಚಿತ್ಕೇನಚಿತ್ ಕ್ವಚಿತ್ (ಹರೇಃ) ಇತಿ ಚ || ೧ || ಇತಿ ಪಂಚದಶಃ ಖಂಡಃ || ೧೦–೧೫ ||** **|| ೧ ||**

**ಅ ||** ಹಿಂದೆ ಹೇಳಿದಪ್ರಕಾರ ಸರ್ವೋತ್ತಮನಾದ ಶ್ರೀವಿಷ್ಣುವಿನಿಂದಲೇ ಉಪದೇಶ ಪಡೆದುಕೊಂಡ ಚತುರ್ಮುಖನು ತನ್ನ ಪುತ್ರನಾದ ಸ್ವಾಯಂಭುವ ಮನುವಿಗೂ, ಸ್ವಾಯಂಭುವ ಮನುವು ಪ್ರಜೆಗಳಿಗೂ ಈ ಉಪನಿಷತ್ತನ್ನು ಉಪದೇಶಿಸಿರುವರು. ಹೀಗೆ ಈ ಉಪನಿಷತ್ತು ಪರಂಪರೆಯಿಂದ ಬಂದಿರುವಪ್ರಯುಕ್ತ ಅದರಲ್ಲಿ ಹೇಳಿದ ಅರ್ಥದಲ್ಲಿ ಅತ್ಯಂತ ವಿಶ್ವಾಸವಿಡಬೇಕಾಗಿರುವುದರಿಂದ ಪುರುಷೋತ್ತಮನೂ, ಸರ್ವನಿಯಾಮಕನೂ, ಈ ಉಪನಿಷತ್ತಿನಲ್ಲಿ ಹೇಳಿದ ಗುಣವಿಶಿಷ್ಟನೂ ಆದ ಶ್ರೀಹರಿಯಲ್ಲಿ ಎಲ್ಲಾ ಇಂದ್ರಿಯಗಳನ್ನು ಇಟ್ಟು ಸರ್ವೋತ್ತಮನಾದ ಶ್ರೀವಿಷ್ಣುವನ್ನು ಪ್ರತ್ಯಕ್ಷೀಕರಿಸಿ ವೈಕುಂಠಕ್ಕೆ ಹೋಗುತ್ತಾನೆ. ಆ ವೈಕುಂಠಲೋಕದಿಂದ ಯಾವಾಗಲೂ ಎಲ್ಲಿಯೂ ಯಾವ ಕಾರಣದಿಂದಲೂ ಹಿಂತೆರಳಿ ಬರುವುದಿಲ್ಲ. (ಸಂಸಾರಕ್ಕೆ ತಿರುಗಿ ಬರುವುದಿಲ್ಲ.) || ೧೦–೧೫ || || ೧ ||

**ಹದಿನೈದನೇ ಖಂಡವು ಮುಗಿಯಿತು.**

---

*ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಗಹೌ । ಯಮಾಃ || ಶೌಚಂ ತಪಸ್ತುಷ್ಟಿಃ ಸ್ವಾಧ್ಯಾಯೋ ಪರಿಪೂಜನಂ । ನಿಯಮಾಃ

**ಉ. ॥ ಆಪ್ಯಾಯಂತು ಮಮಾಂಗಾನಿ ವಾಕ್ಪ್ರಾಣಶ್ಚಕ್ಷುಃ ಶ್ರೋತ್ರಮ-ಥೋ ಬಲಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೋಪನಿಷದಂ ಮಾ-ಹಂ ಬ್ರಹ್ಮ ನಿರಾಕುರ್ಯಾಂ ಮಾಮಾ ಬ್ರಹ್ಮ ನಿರಾಕರೋದನಿರಾಕರಣಮ-ಸ್ತ್ವನಿರಾಕರಣಂ ಮೇಽಸ್ತು ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು ತೇ ಮಯಿ ಸಂತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ ಓಂ ॥**

**ಇತಿ ಶ್ರೀಮಚ್ಛಾಂದೋಗ್ಯೋಪನಿಷತ್ ಸಂಪೂರ್ಣಾ ॥**

**ಪೀ** —ಹೀಗೆ ಶ್ರೀಮದಾಚಾರ್ಯರು ಭಾಷ್ಯವನ್ನು ಸಮಾಪಿಸಿ ಅಂತ್ಯದಲ್ಲಿಯೂ ಈ ಉಪನಿಷತ್ತಿನಲ್ಲಿ ಹೇಳಿದ ಗುಣವಿಶಿಷ್ಟನಾದ ಶ್ರೀ ಪರಮಾತ್ಮನ ಸ್ತೋತ್ರಮಾಡಿ ಪ್ರೀತನಾಗಬೇಕೆಂದು ಪ್ರಾರ್ಥಿಸುತ್ತಾರೆ—

**ಭಾ. ॥ ಪೂರ್ಣಾನಂದಮಹೋದಧಿಃ ಪರತಮೋ ನಿತ್ಯಃ ಪರಸ್ಮಾತ್ಸದಾ ಸರ್ವಜ್ಞಃ ಸಕಲೇಶಿತಾ ಗುಣನಿಧಿರ್ನಿತ್ಯೋತ್ಸವಸ್ತದ್ವಿದಾಂ । ಸರ್ವಸ್ಮಾದಧಿಕಂ ಮಮ ಪ್ರಿಯತಮ-ಸ್ತ್ವಿಷ್ಟಾದಪೀಷ್ಟೋತ್ತಮಃ ಸರ್ವಸ್ಮಾಚ್ಚ ಹಿತಾತ್ಸದಾ ಹಿತತಮಃ ಪ್ರೀತೋ ಭವೇನ್ಮೇ ಹರಿಃ　　॥ ೧ ॥**

**ಅ** ॥ ಅಪರಿಮಿತವಾದ ಆನಂದದಿಂದ ಮಹಾಸಮುದ್ರದಂತಿರುವ ಉತ್ತಮೋತ್ತಮನೂ, ನಿತ್ಯನೂ, ಸರ್ವಜ್ಞನೂ, ಸರ್ವದಾ ಸಕಲರಿಗೆ ನಿಯಾಮಕನೂ, ಸರ್ವಗುಣಗಳಿಗೆ ನಿಧಿಭೂತನೂ, ಜ್ಞಾನಿಗಳಿಗೆ ನಿತ್ಯದಲ್ಲಿ ಹರ್ಷಕಾರಿಯೂ, ರುದ್ರಾದಿಗಳಿಗಿಂತ ಹೆಚ್ಚು ನನಗೆ ಪರಮಪುರುಷಾರ್ಥರೂಪನೂ, ಇಷ್ಟವಾದ ವಸ್ತುವಿಗಿಂತಲೂ ಅತಿಶಯ ಇಷ್ಟನೂ, ಹಿತಕರರಾದ ಎಲ್ಲಾ ಆಪ್ತರಿಗಿಂತಲೂ ಅತಿಶಯ ಆಪ್ತನೂ ಆಗಿರುವ ಶ್ರೀಹರಿಯು ನನಗೆ ಸರ್ವದಾ ಪ್ರೀತನಾಗಲಿ.　　॥ ೧ ॥

**ಪೀ** —ಶ್ರೀಮದಾಚಾರ್ಯರು ತಾನು ಮಾಡಿದ ಭಾಷ್ಯವು ಆಪ್ತಿಮೂಲಕವೆಂದು ತೋರಿಸುವುದಕ್ಕಾಗಿ ತಾನು ಪರಮಾಪ್ತನೆಂದು ವೇದದಲ್ಲಿ ಹೇಳಿದುದನ್ನು ತೋರಿಸುತ್ತಾರೆ—

**ಭಾ. ॥ ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್ ತದ್ದ-ರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋಃ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹರೌ ತೇನ ಹಿ　　॥ ೨ ॥**

**ಅ** ॥ ವಾಯುದೇವರ ಕ್ರೀಡಾದಿ ಗುಣವಿಶಿಷ್ಟಗಳೂ ಅತ್ಯಾಶ್ಚರ್ಯಕರಗಳೂ ಆದ ಹನುಮತ್ ಭೀಮ ಮಧ್ವ ಎಂಬ ಮೂರು ಅವತಾರಗಳು **ಬಳಿತ್ಥಾ ತದ್ವಪುಷೇ** ಇದುಮೊದಲಾದ ವೇದಗಳಲ್ಲಿ ಸ್ತುತಿಸಲ್ಪಟ್ಟಿವೆ. ಮೂಲರೂಪವು ಅವತಾರ ಮಾಡುವುದಕ್ಕಾಗಿಯೇ ಶ್ರೀಹರಿಯಿಂದ ಪ್ರೇರಿತವಾಗಿ ಅವತಾರ ಮಾಡಿದೆ. ವಾಯುದೇವರ ಮೂಲರೂಪದಂತೆ ಅವತಾರರೂಪವೂ ಬಲರೂಪವು. ಅಥವಾ ಶ್ರೀಹರಿಯನ್ನು ಸರ್ವದಾ ಪ್ರತ್ಯಕ್ಷೀಕರಿಸಿಕೊಂಡಿರತಕ್ಕುದು. ಜಗತ್ತನ್ನು ಪೋಷಿಸಿಕೊಂಡು ಸಜ್ಜನರಿಗೆ ಜ್ಞಾನೋಪದೇಶ ಮಾಡತಕ್ಕುದು. ಅಥವಾ ದುರ್ಜನರನ್ನು ಸಂಹರಿಸುವುದು. ಪರಮಪೂಜ್ಯವು. ಮೂಲರೂಪಕ್ಕೆ ಸರ್ವಗುಣಗಳು ಇದ್ದಂತೆಯೇ ಅವತಾರರೂಪಕ್ಕೂ ಎಲ್ಲಾ ಗುಣಗಳಿವೆ ವ್ಯತ್ಯಾಸವೇನೂ ಇಲ್ಲ.

ವಾಯುದೇವರ ಅವತಾರಗಳಲ್ಲಿ ಒಂದನೇದ್ದಾದ ಹನುಮದವತಾರವು ರಾಮದೇವರ ಮಾತುಗಳನ್ನು ಸೀತಾದೇವಿಗೂ, ಸೀತಾದೇವಿಯ ಪ್ರಾರ್ಥನೆಗಳನ್ನು ರಾಮದೇವರಿಗೂ ಹೊಂದಿಸಿಕೊಡುತ್ತದೆ. ರಾಮದೇವರ ಚರಿತ್ರೆಗಳನ್ನು ಹೇಳುವ ಮೂಲರಾಮಾಯಣ ಮೊದಲಾದುವುಗಳನ್ನು ಶಿಷ್ಯರಿಗೆ ಉಪದೇಶಿಸುತ್ತದೆ. ರಾಮದೇವರ ಆಜ್ಞೆಯನ್ನು ಪರಿಪಾಲಿಸುತ್ತದೆ. ಎರಡನೇ ಭೀಮರೂಪವು ಕುರುಗಳ ಸೈನ್ಯವನ್ನು ನಾಶಪಡಿಸಿರುತ್ತದೆ. ಮಧ್ವ ಎಂಬ ಮೂರನೇ ಅವತಾರವು ಶ್ರೀಪರಮಾತ್ಮನನ್ನುದ್ದೇಶಿಸಿ ಭಾಷ್ಯವನ್ನು ಮಾಡಿರುತ್ತದೆ. (ಆದಕಾರಣ ಪರಮಾಪ್ತರಾದ ಶ್ರೀಮದಾಚಾರ್ಯರು ಭಾಷ್ಯವನ್ನು ಮಾಡಿರುವುದರಿಂದ ಎಲ್ಲಾ ಸಜ್ಜನರೂ ಅತ್ಯಾದರದಿಂದ ಅಂಗೀಕರಿಸಬೇಕು ) ॥ ೨ ॥

ಪೀ—ಬಳಿತ್ಥಾ ಇದುಮೊದಲಾದ ವೇದಗಳಲ್ಲಿ ವಾಯುದೇವರ ಮೂರು ರೂಪಗಳು ಹೇಳಲ್ಪಡುತ್ತವೆಂದು ಹೇಳುವುದು ಅಯುಕ್ತವು. ಏಕೆಂದರೆ ಆ ಸೂಕ್ತವು ದಕ್ಷಿಣಾಗ್ನಿ ಗಾರ್ಹಪತ್ಯ ಆಹವನೀಯ ಎಂಬ ಮೂರು ಅಗ್ನಿಗಳನ್ನು ಹೇಳುತ್ತದೆ, ಎಂದರೆ—ಆ ಸೂಕ್ತವು ವಾಯುದೇವರ ಮೂರು ಅವತಾರಗಳನ್ನು ಹೇಳುತ್ತದೆಂಬಲ್ಲಿ ಪ್ರಮಾಣ ಹೇಳುತ್ತಾ **ಯದೀಮುಪಹ್ವರತೇ ಸಾಧತೇ ಮತಿಃ** ಎಂದು ಹೇಳಿದ ಮತಿ ಶಬ್ದಕ್ಕೆ ಅರ್ಥ ಹೇಳುತ್ತಾರೆ—

**ಭಾ ॥ (೧) *ಹನಶಬ್ದೋ ಜ್ಞಾನವಾಚೀ ಹನೂ(ನು)ಮಾನ್ಮತಿಶಬ್ದತಃ ॥ (೨) ರಾಮಸ್ಯ ಸ್ವೃತರೂಪಸ್ಯ ವಾ(ವ)ಚೋನೇತಾ ಗುಣೋದಧಿಃ ॥ (೩) ಭೃತನೋ ಭೀಮ ಇತ್ಯುಕ್ತೋ ವಾಚೋಮಾ ಮಾತರಃ ಸ್ಮೃತಾಃ । ಋಗಾದ್ಯಾ ಇತಿಹಾಸಶ್ಚ ಪುರಾಣಂ ಪಂಚರಾತ್ರಕಂ । ಪ್ರೋಕ್ತಾಃ ಸಪ್ತಶಿವಾಸ್ತತ್ರ ಶಯೋ ಭೀಮಸ್ತತಃ ಸ್ಮೃತಃ॥(೪) ಮಧ್ವಿತ್ಯಾನಂದ ಉದ್ದಿಷ್ಟೋ ವೇತಿ ತೀರ್ಥಮುದಾಹೃತಂ । ಮಧ್ವ ಆನಂದತೀರ್ಥಃ ಸ್ಯಾತ್ತೃತೀಯಾ ಮಾರುತೀ ತನುಃ ॥ ಇತಿ ಸೂಕ್ತಗತಂ ರೂಪತ್ರಯಮೇತನ್ಮಹಾತ್ಮನಃ । ಯೋ ವೇದ ವೇದವಿತ್ಸ ಸ್ಯಾತ್ತತ್ತ್ವವಿತ್ತತ್ಪ್ರಸಾದತಃ ॥ ಇತಿ ಸದ್ಭಾವೇ ॥ ೩ ॥**

ಅ ॥ (೧) ಹನು ಎಂಬ ಶಬ್ದವು ಜ್ಞಾನವೆಂಬ ಅರ್ಥವನ್ನು ಹೇಳುತ್ತದೆ. ಹನುಮಂತನಿಗೆ ಮತಿ ಎಂದು ಹೆಸರು. (೨) (**ಋತಸ್ಯ ಧೇನಾ ಅನಯಂತ ಸಸ್ರುತಃ** ಎಂಬುದಕ್ಕೆ ಅರ್ಥ ಹೇಳುತ್ತಾರೆ -) ಹನುಮಂತನು ಚೆನ್ನಾಗಿ ಸರ್ವದಾ ಎಲ್ಲಾ ಕಡೆಗಳಲ್ಲಿ ಸತ್ಯರೂಪನಾದ ಅಥವಾ ಸರ್ವದಾ ಏಕಪ್ರಕಾರನಾಗಿರುವ ಶ್ರೀರಾಮದೇವರ ಆಜ್ಞೆಗಳನ್ನು ಸೀತಾದೇವಿಗೆ ತಿಳಿಸಿರುತ್ತಾನೆ. ಮೂಲರಾಮಾಯಣಾದಿಗಳನ್ನು ಶಿಷ್ಯರಿಗೆ ಉಪದೇಶಿಸಿರುವನು. ಗುಣಗಳಿಂದ ಸಮುದ್ರದಂತಿರುವವನು (೩) (**ಸಪ್ತಶಿವಾಸು ಮಾತೃಷು** ಎಂಬುದಕ್ಕೆ ಅರ್ಥ ಹೇಳುತ್ತಾರೆ-) ಎಲ್ಲಾ ಪ್ರಮಾಣಗಳನ್ನು ಚೆನ್ನಾಗಿ ತಿಳಿದಿರುವುದರಿಂದ **ಭೀಮಃ** ಎನಿಸುತ್ತಾನೆ. ಪ್ರಮಾಣಭೂತಗಳಾದ ವಚನಗಳು ಭಗವಂತನ ತತ್ತ್ವವನ್ನು ತಿಳಿಸಿಕೊಡುವುದರಿಂದ ಮಾತರಃ ಎನಿಸುತ್ತವೆ. ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣವೇದ ಇತಿಹಾಸ ಪುರಾಣ ಪಂಚರಾತ್ರ ಇವುಗಳು ಅತಿಮಂಗಲಕರಗಳು. ಆ ಪ್ರಮಾಣಗಳ ವಿಚಾರದಲ್ಲಿ ಭೀಮನು ಮುಖ್ಯವಾಗಿ ಆಸಕ್ತನಾಗಿರುವುದರಿಂದ **ಭೀಮನೆನಿಸುತ್ತಾನೆ.** (೪) (**ಪ್ರದಿವೋ ಮಧ್ವ ಆದವೇ** ಎಂಬುದಕ್ಕೆ ಅರ್ಥ ಹೇಳುತ್ತಾರೆ—) **ಮಧು** ಎಂದರೆ ಆನಂದವು ವ ಎಂದರೆ ಶಾಸ್ತ್ರವು ಆನಂದವನ್ನುಂಟುಮಾಡುವ ಶಾಸ್ತ್ರಗಳನ್ನು ನಿರ್ಮಾಣ ಮಾಡಿರುವುದರಿಂದ ವಾಯುದೇವರ ಮೂರನೇ ಅವತಾರಕ್ಕೆ **ಮಧ್ವಃ** ಎಂದೂ **ಆನಂದತೀರ್ಥಃ** ಎಂದೂ ಹೆಸರು. ಹೀಗೆ ಈ ಬಳಿತ್ಥಾಸೂಕ್ತದಲ್ಲಿ ಹೇಳಿದ ವಾಯುದೇವರ ಮೂರು ಅವತಾರಗ

---

* ಬಳಿತ್ಥಾ ಸೂಕ್ತವೂ, ಅದರ ಅರ್ಥವೂ ಬೃಹದಾರಣ್ಯಕೋಪನಿಷತ್ತು ಪುಟ ೫೧೧—೫೧೨ರಲ್ಲಿ ಹೇಳಿದೆ.

ಗಳನ್ನು ತಿಳಿದವನು ವೇದಾರ್ಥವನ್ನು ತಿಳಿದವನಾಗಿ ವಾಯುದೇವರ ಅನುಗ್ರಹದಿಂದ ಯಥಾರ್ಥಜ್ಞಾನವುಳ್ಳವನಾಗುತ್ತಾನೆಂದು ಸದ್ಭಾವ ಎಂಬ ಗ್ರಂಥದಲ್ಲಿದೆ. ॥ ೩ ॥

ಪೀ—ಆಚಾರ್ಯರು ತಾನು ಮಾಡಿದ ಭಾಷ್ಯವನ್ನು ಶ್ರೀಹರಿಯಲ್ಲಿ ಅರ್ಪಿಸುತ್ತಾರೆ—

**ಭಾ. ॥ ಆನಂದತೀರ್ಥ ಇತಿ ತು ಯಸ್ಯ ನಾಮ ತೃತೀಯಕಂ । ಪೂರ್ಣಪ್ರಜ್ಞೇನ ತೇನೇದಂ ಕೃತಂ ಭಾಷ್ಯಂ ಹರೇಃ ಪ್ರಿಯಂ ॥ ೪ ॥**

ಅ ॥ ಯಾವ ವಾಯುದೇವರ ಆನಂದತೀರ್ಥ ಎಂಬ ಮೂರನೇ ಅವತಾರವೋ, ಅಂತಹ ಪೂರ್ಣಪ್ರಜ್ಞಾಚಾರ್ಯರು ಮಾಡಿದ ಭಾಷ್ಯವು ಶ್ರೀಹರಿಗೆ ಪ್ರೀತಿಯನ್ನುಂಟುಮಾಡಲಿ.

**ವಿ—ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ । ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ಮಧ್ವಿತ್ಯಾನಂದ ಉದ್ದಿಷ್ಟಃ** ಎಂಬೀ ಪ್ರಮಾಣಗಳಿಂದವಾಯುದೇವರ ಮೂರನೇ ಅವತಾರಕ್ಕೆ ಮಧ್ವ=ಆನಂದತೀರ್ಥ, ದಶಪ್ರಮತಿ=ಪೂರ್ಣಪ್ರಜ್ಞ ಎಂಬ ಎರಡು ನಾಮಧೇಯಗಳೂ ಇವೆ. ॥ ೪ ॥

ಪೀ—ಶ್ರೀಹರಿಯ ಸ್ತೋತ್ರ ನಮಸ್ಕಾರಗಳಿಂದಲೇ ಗ್ರಂಥವನ್ನು ಸಮಾಪಿಸಬೇಕು. ತನ್ನ ಸ್ವರೂಪವನ್ನು ನಿರೂಪಿಸಿ ತನ್ನ ಸ್ತುತಿಯಿಂದಲೇ ಗ್ರಂಥವನ್ನು ಸರ್ವಥಾ ಸಮಾಪಿಸಬಾರದೆಂಬ ಅಭಿಪ್ರಾಯದಿಂದ ಭಕ್ತ್ಯಾಧಿಕ್ಯದಿಂದ ಅಂತ್ಯದಲ್ಲಿಯೂ ಶ್ರೀಹರಿಯ ಪ್ರೀತಿಪ್ರಾರ್ಥನ ನಮಸ್ಕಾರರೂಪ ಮಂಗಲವನ್ನು ಮಾಡಿರುತ್ತಾರೆ—

**ಭಾ. ॥ ನಿತ್ಯಾನಂದೋ ಹರಿಃ ಪೂರ್ಣೋ ನಿತ್ಯದಾ ಪ್ರೀಯತಾಂ ಮಮ । ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಚ ವಿಷ್ಣವೇ ॥ ೫ ॥**

ಅ ॥ ನಿತ್ಯಾನಂದವುಳ್ಳವನೂ, ಸರ್ವಗುಣಪರಿಪೂರ್ಣನೂ, ಪಾಪಪರಿಹಾರಕನೂ ಆದ ಶ್ರೀ ಪರಮಾತ್ಮನು ನನಗೆ ನಿತ್ಯದಲ್ಲಿಯೂ ಪ್ರೀತನಾಗಲಿ. ಉಪನಿಷತ್ತಿನಲ್ಲಿ ಹೇಳಿದ ಗುಣವಿಶಿಷ್ಟನಾದ ವಿಷ್ಣುವಿಗೆ ನಮಸ್ಕಾರವು ಆಗಲಿ.

ವಿ—ಭಕ್ತಿಪೂರ್ವಕವಾಗಿ ಈ ಉಪನಿಷತ್ತನ್ನು ಅಧ್ಯಯನಮಾಡುವವರಿಗೆ ಶ್ರೀಪರಮಾತ್ಮನು ಪಾಪಪರಿಹಾರಮಾಡಿ ನಿತ್ಯದಲ್ಲಿಯೂ ಪ್ರೀತನಾಗಿ ನಿತ್ಯಾನಂದವುಳ್ಳ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುತ್ತಾನೆಂದುಕ್ತವಾಯಿತು. ॥ ೫ ॥

**ಓಂ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮಚ್ಛಾಂದೋಗ್ಯ-ಉಪನಿಷದ್ಭಾಷ್ಯೇ ದಶಮೋಽಧ್ಯಾಯಃ ॥ ೧೦ ॥**

**ಶ್ರೀಮಚ್ಛಾಂದೋಗ್ಯೋಪನಿಷದ್ಭಾಷ್ಯಂ ಸಂಪೂರ್ಣಂ ॥**

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಮಾಡಿದ ಶ್ರೀಮತ್ ಛಾಂದೋಗ್ಯ ಉಪನಿಷದ್ಭಾಷ್ಯದಲ್ಲಿ ಹತ್ತನೇ ಅಧ್ಯಾಯವು ಮುಗಿಯಿತು.

ಶ್ರೀಮತ್ ಛಾಂದೋಗ್ಯ ಉಪನಿಷದ್ಭಾಷ್ಯವು ಸಂಪೂರ್ಣವಾಯಿತು.

**॥ ಶ್ರೀಕೃಷ್ಣಾರ್ಪಣಮಸ್ತು ॥**

ವ್ಯಾಸಂ ಪೂರ್ಣಮತೇರ್ವಿದೋಷಹೃದಯಾಂಭೋಜೇ ಸದಾ ವಾಸಿನಂ
ಶ್ರೀಶಂ ಕಂಜಭವಾದಿಸರ್ವವಿಬುಧೈರ್ನೀಚೋಚ್ಚಭಾವಸ್ಥಿತೈಃ
ಉಚ್ಚೈರ್ಗೇಯಮನಂತಸಾಮವಿಭವೈರೋಂಕಾರವಾಚ್ಯಂ ಪರಂ
ವಂದೇ ಸುಂದರವಿಗ್ರಹಂ ಕರುಣಯಾ ಜ್ಞಾನಾಭಯೇತಂ ಮುಹುಃ ॥ ೧ ॥

ಅಗಾಧೇಽಸ್ಮಿನ್ಭಾಷ್ಯೇ ಸುರವರಹರೇಂದ್ರಾದಿವಿಬುಧೈಃ
ಅಲಂ ವ್ಯಾಖ್ಯೇಯೇ ಮೇ ಕೃತಿರಹಹ ಹಾಸಾಸ್ಪದತಮಾ ।
ತಥಾಽಪಿ ಶ್ರೀವ್ಯಾಸಾಲವಮತಿಪದಾಸಕ್ತಿವಶತೋ
ಗುರೂಣಾಂ ಕಾರುಣ್ಯಾದಪಿ ಭವತಿ ಭೂಷಾಕೃತಿರಿಯಂ ॥ ೨ ॥

ಸಮಸ್ತಗುಣಪೂರ್ಣೇನ ಶ್ರೀಪ್ರಾಣಪತಿನೇರಿತಃ ।
ಯದವೋಚಮಹಂ ತೇನ ಪ್ರೀಣಾತು ಪುರುಷೋತ್ತಮಃ ॥ ೩ ॥

ವಿದ್ವದಾದ್ಯಃ ಸ ಮಧ್ವೋಽದ್ಯ ಪ್ರೋದ್ಯತ್ಪ್ರದ್ಯೋತನದ್ಯುತಿಃ ।
ಹೃದ್ಯೋಽನವದ್ಯೋ ಬುದ್ಧಿಂ ಮೇ ದದ್ಯಾಚ್ಛುದ್ಧಿಪ್ರಸಿದ್ಧಿಮಾನ್ ॥ ೪ ॥

---

ಶ್ರೀಕೃಷ್ಣೋ ವಿಟ್ಠಲಃ ಕೋಲಃ ಶ್ರೀವ್ಯಾಸೋ ಹಯಕಂಧರಃ ।
ಪುಷ್ಣಾತ್ವಭೀಷ್ಟಮಸ್ಮಾಕಂ ಪ್ರಸೀದೇದ್ದಶಧೀರಪಿ ॥ ೧ ॥

ಶ್ರೀಮಧ್ವಭಾಷ್ಯರುಚಿರಾಂ ಟಿಪ್ಪಣೀಸಾರಭಾಸುರಾಂ ।
ಛಾಂದೋಗ್ಯಾಖ್ಯೋಪನಿಷದಂ ಕರ್ನಾಟಕಸುಭಾಷಯಾ ॥ ೨ ॥

ಶ್ರೀಮದ್ಭಾರ್ಗವಗೋತ್ರೋತ್ಥತೌಲವಾನ್ವಯಜೋ ದ್ವಿಜಃ ।
ಗುರುರಾಯಸುತಂತ್ರ್ಯಾಖ್ಯತನುಜಾತಃ ಶಿರೋಮಣಿಃ ॥ ೩ ॥

ತಂತ್ರಿನಾರಾಯಣಃ ಶ್ರೀಮದ್ವೈತವಿದ್ವಾನ್ ಸತಾಂ ಮುದೇ ।
ವ್ಯಾಖ್ಯಾತವಾನ್ ಮಧ್ವಮುನಿಸೇವಾಸಂಘನಿದೇಶತಃ ॥ ೪ ॥

ದಶೋಪನಿಷದಾಮೇವಂ ಭಾಷಾಟೀಕಾ ಸಮಾಪಿತಾ ।
ಹರೇರ್ದಶಮತೇಶ್ಚಾಪಿ ಪ್ರಸಾದಂ ಸಾಧಯೇಚ್ಚಿರಂ ॥ ೫ ॥

ಕೃತ್ಯಾಽನಯಾ ಯಥಾಬೋಧಂ ಕೃತಯಾ ಪ್ರೀಯತಾಂ ಹರಿಃ ।
ಶ್ರೀಮಧ್ವವಾದಿರಾಜಾದ್ಯಾಃ ಪ್ರೀಯಂತಾಂ ಗುರವಶ್ಚ ನಃ ॥ ೬ ॥

ಆಚಾರ್ಯಃ ಪವನೋಽಸ್ಮಾಕಮಾಚಾರ್ಯಾಣೀ ಚ ಭಾರತೀ ।
ದೇವೋ ನಾರಾಯಣಃ ಶ್ರೀಶೋ ದೇವೀ ಮಂಗಲದೇವತಾ ॥ ೭ ॥

ಈ ಗ್ರಂಥವು ಸಮಾಪ್ತವಾಯಿತು.

॥ ಓಂ ಹರಿಃ ಓಂ ॥

ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಂ ॥

॥ ಶ್ರೀಕೃಷ್ಣಾರ್ಪಣಮಸ್ತು ॥